

ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಲಿಂಗಮಹಾಪುರಾಣ

ಮತ್ತು

# ಗಣೇಶ ಪುರಾಣ


ಅನುವಾದ- ಲೇಖಕರು

ಮಹಾಮಹೋಪಾಧ್ಯಾಯ

## ಪಂ. ಪಂಢರೀನಾಥಾಚಾರ್ಯ ಗಲಗಲಿ

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ



-: ಪ್ರಕಾಶಕರು :-

## ಖೋಡೇ ಫೌಂಡೇಶನ್

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 26320014 ಫ್ಯಾಕ್ಸ್ : 0091-80-26321416

LINGAMAHAPURANA of Bhagavan Sri Vedavyasa Maharshi, edited and translated in to Kannada by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveswara Nagar, Shanti Colony, Hubli-580032 Ph : (0836) 2250250

First Edition : 2005

No. of Pages : xxxviii + 558

No. of Copies : 1,000



Price : Rs. 190 = 00

Printed at : SRI VENKATESHWARA PRINTERS
No. 3, Yellappa Road, Susheela Road Cross
Chick Mavalli, Lalbagh Crumbigal Road Cross
BANGALORE-560 004
Phone : 26573001

# ಲಿಂಗಮಹಾಪುರಾಣ ಪ್ರಸ್ತಾವನೆ

**''ಪುರಾ ನವಂ ಭವತಿ ಇತಿ ಪುರಾಣಂ''** ಎಂದು ಯಾಸ್ಕರು ಪುರಾಣ ಶಬ್ದದ ನಿರ್ವಚನವನ್ನು ಮಾಡಿದ್ದಾರೆ. ಪುರಾ ಎಂದರೆ ಪೂರ್ವಕಾಲದಲ್ಲಿ ನಡೆದದ್ದನ್ನೆಲ್ಲ ಹೊಸದಾಗಿ ಹೇಳುವದಕ್ಕೆ ಪುರಾಣ ಎನ್ನಬೇಕು. ವೇದವಾಙ್ಮಯದ ಪ್ರಪ್ರಥಮ ವ್ಯಾಖ್ಯಾಕಾರರಾದ ಯಾಸ್ಕರ ಈ ಪುರಾಣ ಶಬ್ದದ ನಿರ್ವಚನ ವ್ಯಾಸೋಕ್ತ ಎಲ್ಲ ಹದಿನೆಂಟು ಪುರಾಣಗಳಿಗೂ ಅಕ್ಷರಶಃ ಅನ್ವಯಿಸುತ್ತದೆ. ಪುರಾ ಎಂದರೆ ಪ್ರಾಚೀನತಮವಾದ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದಾದಿ ನಾಲ್ಕೂ ವೇದಗಳಲ್ಲಿಯೂ ಪುರಾಣದ ಉಲ್ಲೇಖವು ಬರುತ್ತದೆ.

**''ಋಚಃ ಸಾಮಾನಿ ಛಂದಾಂಸಿ ಪುರಾಣಂ'' (ಯಜುರ್ವೇದ)**
**''ಉಚ್ಛಿಷ್ಟಾಜ್ಜಜ್ಞಿರೇ ಸರ್ವೇ ದಿವಿ ದೇವಾ ದಿವಿ ಶ್ರಿತಾಃ''**

*ಎಂದು ಅಥರ್ವಣವೇದದಲ್ಲಿ (೧೧/೭/೨೪) ರಲ್ಲಿ ಹೇಳಲಾಗಿದೆ.*

ಗೋಪಥಬ್ರಾಹ್ಮಣ, ಶತಪಥಬ್ರಾಹ್ಮಣಗಳಲ್ಲಿ ಬ್ರಹ್ಮಯಜ್ಞ, ಅಶ್ವಮೇಧ ಯಾಗಗಳಲ್ಲಿ ಯಜಮಾನನಿಗೆ ವೇದಪುರಾಣಗಳ ಶ್ರವಣವನ್ನು ಅವಶ್ಯವಾಗಿ ಮಾಡಿಸಬೇಕೆಂದು ವಿಧಾನ ಮಾಡಿದ್ದಾರೆ. ಛಾಂದೋಗ್ಯೋಪನಿಷತ್ತಿನಲ್ಲಿ ನಾರದರು ಸನತ್‌ಕುಮಾರರಿಗೆ ತಾವು ಪುರಾಣವಿದ್ಯೆಯನ್ನು ಕಲಿತಿದ್ದೇನೆಂದು ಹೇಳಿಕೊಂಡಿದ್ದಾರೆ

**''ಪುರಾಣ ಇತಿಹಾಸಗಳು ಪಂಚಮವೇದ''** *(೭/೧/೨) ಮುಂದೆ. (೭/೧ ೪)*
ಎಂದು ಉಲ್ಲೇಖಿಸಿದ್ದು ಕಂಡುಬರುತ್ತದೆ.

**ಆಶ್ವಲಾಯನ ಗೃಹ್ಯಸೂತ್ರದಲ್ಲಿ(೩-೪)**

**''ಯದ್ ಬ್ರಾಹ್ಮಣಾನಿ ಕಲ್ಪಾನ್ ಗಾಥಾ ನಾರಾಶಂಸೀಃ ಇತಿಹಾಸ ಪುರಾಣಾನಿ ತ್ಯಮೃತಸ್ಯ ಕುಲ್ಯಾಃ''** ಬ್ರಾಹ್ಮಣ, ಕಲ್ಪ, ಗಾಥಾ, ನಾರಾಶಂಸೀ, ಇತಿಹಾಸ, ಪುರಾಣ ಮುಂತಾದವುಗಳು ಅಮೃತದ ಧಾರೆಗಳೇ ಎಂದು ಬಣ್ಣಿಸಲಾಗಿದೆ. ಆಪಸ್ತಂಬ ಧರ್ಮಸೂತ್ರದಲ್ಲಿಯೂ ಪುರಾಣದ ಉಲ್ಲೇಖವು ಕಂಡುಬರುತ್ತದೆ. ಮಹಾಭಾರತದ ಆದಿ ಪರ್ವದಲ್ಲಿ (೫/೨) **''ಪುರಾಣೇ ಹಿ ಕಥಾದಿವ್ಯಾಃ ಆದಿವಂಶಾಶ್ಚ ಧೀಮತಾಂ''** ಪುರಾಣಗಳಲ್ಲಿ ಬರುವ ಕಥೆಗಳೆಲ್ಲವೂ ದಿವ್ಯವೂ ರೋಚಕವೂ ಬೋಧಕವೂ ಆಗಿವೆ ಎಂದು ಬಣ್ಣಿಸಲಾಗಿದೆ.

**ಇದರಂತೆ ಮತ್ಸ್ಯಪುರಾಣದಲ್ಲಿ**

**''ಪುರಾಣಂ ಸರ್ವಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಮ್''**

ಸರ್ವಶಾಸ್ತ್ರಗಳ ಧರ್ಮಮರ್ಮ ರಸ್ಯರಹಸ್ಯಗಳನ್ನು ತಿಳಿಸುವ ಪುರಾಣಗಳನ್ನು ಬ್ರಹ್ಮದೇವರು ಮೊಟ್ಟ ಮೊದಲು ನಿರ್ಮಾಣ ಮಾಡಿದರು ಎಂದು ಮತ್ಸ್ಯ ಪುರಾಣದಲ್ಲಿ (೫೩/೩) ನಿರ್ದೇಶಿಸಲಾಗಿದೆ. ಪ್ರಪ್ರಥಮವಾಗಿ ಬ್ರಹ್ಮ ನಿರ್ಮಿತವಾದ ಈ ಪುರಾಣ ವಾಙ್ಮಯವನ್ನು ಅನಂತರ ಪರಬ್ರಹ್ಮ ಸ್ವರೂಪರಾದ ಭಗವಾನ್ ಶ್ರೀ ವೇದವ್ಯಾಸರು ಕ್ರೋಡೀಕರಿಸಿ ಪುರಾಣ ಸಂಹಿತಾರೂಪದಿಂದ ಅಷ್ಟಾದಶ ಪುರಾಣದ ಚೌಕಟ್ಟಿನಲ್ಲಿ ವ್ಯವಸ್ಥಿತವಾಗಿ ನಿರೂಪಿಸಿ ಇಟ್ಟಿದ್ದಾರೆ.

ಭಾರತೀಯ ಸಾಹಿತ್ಯದಲ್ಲಿ ಹಾಗೂ ಧರ್ಮಕಾರ್ಯಗಳಲ್ಲಿ ಶ್ರುತಿಸ್ಮೃತಿಗಳ ಜೊತೆಗೆ ಪುರಾಣಗಳ ಉಲ್ಲೇಖವು ತಪ್ಪದೆ ಬರುತ್ತದೆ. "**ಶ್ರುತಿ ಸ್ಮೃತಿ ಪುರಾಣೋಕ್ತ ಫಲ ಪ್ರಾಪ್ತ್ಯರ್ಥಂ**" ಎಂದೇ ದೇವತಾ ಕಾರ್ಯ ಮತ್ತು ನಿತ್ಯ ನೈಮಿತ್ತಿಕ ಧಾರ್ಮಿಕ ಕಾರ್ಯಗಳಲ್ಲಿ ಸಂಕಲ್ಪ ಮಾಡಲಾಗುತ್ತದೆ. ಸ್ಮೃತಿಕಾರರೂ ಸೂತ್ರಕಾರರೂ ಶ್ರೌತಸ್ಮಾರ್ತಕರ್ಮಾನುಷ್ಠಾನದ ಅಧಿಕಾರವನ್ನು ತ್ರೈವರ್ಣಿಕರಿಗೆ ಮೀಸಲಿಟ್ಟು ಧರ್ಮಕಾರ್ಯಗಳಿಂದ ಉಳಿದವರೆಲ್ಲರನ್ನೂ ದೂರೇ ಇಟ್ಟಿದ್ದರು. ಹೀಗೆ ಶ್ರುತಿ ಸ್ಮೃತಿಗಳಿಂದ ವಂಚಿತರಾದ ಇತರೇ ಸರ್ವಸಾಮಾನ್ಯ ಜನರಿಗೆ ಧರ್ಮ, ನೀತಿ, ಕರ್ತವ್ಯ, ಕರ್ಮ, ರೀತಿ, ಆಚಾರ, ವ್ರತ, ಉಪವಾಸ, ಭಕ್ತಿ ಪೂಜನ, ಭಜನಾದಿಗಳನ್ನು ತಿಳಿಸಿ ಹೇಳಿ ಸರ್ವಜನರ ಉದ್ಧಾರಕ್ಕಾಗಿ ಆವತರಿಸಿದ ಭಾರತೀಯ ಸಾಹಿತ್ಯ ಎಂದರೆ ಪುರಾಣಗಳೇ ಆಗಿವೆ. ಈ ಮಾತನ್ನು ಪದ್ಮ ಪುರಾಣದಲ್ಲಿ "**ಏಷ ಸಾಧಾರಣಃ ಪಂಥಾಃ ಸಾಕ್ಷಾತ್ ಕೈವಲ್ಯ ಸಿದ್ಧಿದಃ**" ಸರ್ವಸಾಧಾರಣವಾಗಿ ಎಲ್ಲ ಸಚ್ಚೇತನರಿಗೂ ಮೋಕ್ಷರೂಪ ಸಿದ್ಧಿಯನ್ನು ದೊರಕಿಸಿಕೊಡುವದೇ ಪುರಾಣಗಳ ಉದ್ದೇಶ. ಇದೇ ಮುಕ್ತಿ ಮಂದಿರದ ಹೆದ್ದಾರಿ. ರಾಜಮಾರ್ಗ ಎಂದು ತಿಳಿಸಲಾಗಿದೆ.

ವೇದಶಾಸ್ತ್ರ ಓದಿದ ಪಂಡಿತನಾದರೂ ಇಂಥ ಪುರಾಣಗಳನ್ನು ಓದದೆ ಇದ್ದರೆ ಅವನು ಪಂಡಿತನೇ ಅಲ್ಲ ಎಂದು ಸಾರಿಹೇಳಿದ್ದಾರೆ.

**"ಯೋ ವಿದ್ಯಾತ್ ಚತುರೋ ವೇದಾನ್ ಸಾಂಗೋಪನಿಷದೋ ದ್ವಿಜಃ ।**
**ನಚೇತ್ ಪುರಾಣಂ ಸಂವಿದ್ಯಾ ನ್ನೈವ ಸಸ್ಯಾದ್ ವಿಚಕ್ಷಣಃ"॥**

ಹೀಗೆ ವಾಯುಪುರಾಣದಲ್ಲಿ ಹೇಳಿದೆ. ಸ್ಕಂದಪುರಾಣದ ರೇವಾಖಂಡದಲ್ಲಿ '**ವೇದಗಳ ಆತ್ಮವೇ ಪುರಾಣ**' ಎಂದು ಒತ್ತಿ ಹೇಳಲಾಗಿದೆ.

**"ಆತ್ಮಾ ಪುರಾಣಂ ವೇದಾನಾಂ ಪೃಥಗ್ ನಾಮಾನಿ ತಾನಿ ಷಟ್ ।**
**ಯಚ್ಚ ದೃಷ್ಟಂ ಹಿ ವೇದೇಷು ತದ್ ದೃಷ್ಟಂ ಸ್ಮತಿಭಿಃ ಕಿಲ ।**
**ಉಭಾಭ್ಯಾಂ ಯಚ್ಚ ದೃಷ್ಟಂ ಹಿತತ್ ಪುರಾಣೇಷು ಗೀಯತೆ"॥**

ಪುರಾಣಗಳು ವೇದಗಳ ಆತ್ಮವೇಆಗಿವೆ. ವೇದದ ಆರು ಅಂಗಗಳೇ ಪುರಾಣದ ಅವಯವಗಳಾಗಿವೆ. ಈ ಷಡಂಗಸಹಿತವಾದ ವೇದವೇ ಸಾಂಗವೇದ ಎನಿಸುತ್ತದೆ. ಈ ವೇದಗಳು ಮುಖ್ಯವಾಗಿ ಜೀವ, ಜಗತ್ತು, ಪರಮಾತ್ಮ ತತ್ವಗಳನ್ನು ತಿಳಿಸುತ್ತವೆ ಮತ್ತು ಮಾನವರ ಐಹಿಕ ಹಾಗೂ ಪಾರಮಾರ್ಥಿಕ ಉನ್ನತಿ ಹಾಗೂ ಮನುಕುಲದ ಸರ್ವತೋಮುಖವಾದ ಅಭ್ಯುದಯ ನಿಶ್ರೇಯಸ ಎರಡನ್ನೂ ಸಾಧಿಸುವ ಮಹಾ ಉಪಾಯವು ವೇದಗಳಿಂದ ಸಂದೃಷ್ಟವಾಗಿದೆ. ಈ ವೇದ ದೃಷ್ಟವಾದ ರಹಸ್ಯ ಉಪಾಯವೇ ಎಲ್ಲ ಸರ್ವಸ್ಮೃತಿಗಳಿಂದಲೂ ದೃಷ್ಟವಾಗಿದೆ. ಈ ಸ್ಮೃತಿ ದೃಷ್ಟವಾದ ಅರ್ಥವೇ ಸರ್ವಪುರಾಣಗಳಿಂದಲೂ ಸಪರಿಷ್ಕಾರವಾಗಿ ದೃಷ್ಟಾಪೂರ್ವಕವಾಗಿ ಸಮ್ಯಕ್ ನಿರೂಪಿತವಾಗಿದೆ. ಈ ಮಾತನ್ನು ಸ್ಕಂದಪುರಾಣದ ರೇವಾಖಂಡದಲ್ಲಿ ನಿರೂಪಿಸಿದ್ದಾರೆ.

**"ಆತ್ಮಾ ಪುರಾಣಂ ವೇದಾನಾಂ ಪೃಥಗಂಗಾನಿ ತಾನಿ ಷಟ್ ।**
**ಯಚ್ಚ ದೃಷ್ಟಂ ಹಿ ತತ್ ಪುರಾಣೇಷು ಗೀಯತೇ ॥**

ಎಂಬ ಪ್ರಮಾಣ ವಚನಗಳಿಂದ ಅದನ್ನೇ ದೃಷ್ಟಾಂತ ಮುಖಾಂತರ ಪುರಾಣಗಳು ಹೇಳುತ್ತವೆ ಎಂದು ಸ್ಪಷ್ಟವಾಗುತ್ತದೆ.

ಪುರಾಣಗಳು ಭಾರತೀಯ ಧರ್ಮ ಸಂಸ್ಕೃತಿಯ ಮರ್ಮವನ್ನೇ ಉಸಿರಾಡಿಸುವ ಜೀವನಾಡಿಗಳು. ಸೃಷ್ಟಿಯ ಪ್ರಾರಂಭ ಕಾಲದಿಂದ ಮಾನವನ ಮಿದುಳಿನಿಂದ ಹೊರಟ ವಿಚಾರ ಧಾರೆಗಳೆಲ್ಲವೂ ಇಲ್ಲಿ ಮಡುಗಟ್ಟಿ ನಿಂತಿವೆ. ಪ್ರಾಗೈತಿಹಾಸಿಕ ಕಾಲದಿಂದ ವಿಚಾರವಂತ ಜೀವಿಯ ನಡೆ, ನುಡಿ, ಶ್ರದ್ಧೆ, ಸಂಪ್ರದಾಯಗಳಿಗೂ ವೈಚಾರಿಕ ವಿಕಾಸಕ್ಕೂ ಆ ಪೌರಾಣಿಕ ವಾಙ್ಮಯವು ನುಡಿಗನ್ನಡಿ ಹಿಡಿಯುತ್ತದೆ.

''**ಆತ್ಮಾ ಪುರಾಣಾಂ ವೇದಾನಾಂ**'' ಎಂಬಂತೆ ವೇದವಾಙ್ಮಯದ ಆತ್ಮವೇ ಪುರಾಣಂ. ಆದರೆ ಆ ವೇದ ಎಲ್ಲರಿಗೂ ನಮ್ಯವಾದರೂ ಎಲ್ಲರಿಗೂ ಗಮ್ಯವಲ್ಲ. ಯೋಗ್ಯತೆ ಇಲ್ಲದವರು ಅದನ್ನು ಓದಿದರೆ ಅದು ಕ್ಷಮ್ಯವೂ ಅಲ್ಲ. ಆದರೆ ಆ ಊದಿನಕಡ್ಡಿಯ ವಾಸನೆ ಎಲ್ಲರಿಗೂ ದೊರಕಬೇಕು. ಆ ಬಲ್ಬಿನ ಬೆಳಕು ಎಲ್ಲಡೆಗೂ ಚೆಲ್ವರಿಯಬೇಕೆಂಬ ಉದ್ದೇಶದಿಂದಲೇ ಪುರಾಣಗಳ ಪ್ರವೃತ್ತಿ. ವೇದ ಪಾರಿಜಾತವನ್ನು ಎಲ್ಲಿಯೇ ನೆಟ್ಟಿದ್ದರೂ ಹೇಗೆ ಇಟ್ಟಿದ್ದರೂ ಆ ಜ್ಞಾನಪುಷ್ಪದ ಪರಿಮಳವನ್ನು ಪ್ರತಿಯೊಬ್ಬನ ನಾಸಿಕ ಕ್ಷೇತ್ರಕ್ಕೆ ತಲುಪಿಸುವ ಕೆಲಸವನ್ನು ಪುರಾಣಗಳು ಮಾಡುತ್ತವೆ.

ಪಶುತ್ವದ ಮಟ್ಟದಿಂದ ಮೇಲೆದ್ದು ಮಾನವತೆಯ ಹಂತಕ್ಕೆ ಏರಿನಿಂತ ಮನುಷ್ಯನ ಒಲವು-ನಿಲವುಗಳೂ, ಪ್ರವೃತ್ತಿ ಪ್ರಕಾರಗಳೂ, ಹ್ರಾಸದ ಹಾದಿ ಹಿಡಿಯದೇ ವಿಕಾಸೋನ್ಮುಖವಾಗಿ ಅರಳಬೇಕಾದರೆ ಅವನಿಗೆ ಧಾರ್ಮಿಕ ಪ್ರಜ್ಞೆ ಅತ್ಯಗತ್ಯ. ಈ ಮಾನವೀಯ ಜೀವನದ ಕರ್ತವ್ಯತೆಯ ಅರಿವು ಐಂದ್ರಿಯಿಕ ಸೆಳೆತ ಎಳೆತಗಳ ಸೆಳವು ಸುಳಿವುಗಳಲ್ಲಿ ಸಿಲುಕದೇ ನಿಚ್ಚ ಎಚ್ಚರದ ಸ್ಥಿರ ನಿಲುವಿನಲ್ಲಿ ನೆಲೆ ನಿಲ್ಲಬೇಕಾದರೆ ಪುರಾಣಶಾಸ್ತ್ರಗಳ ಪ್ರೇರಣೆ ಕಾರಣವಾಗುತ್ತದೆ. ಮನುಷ್ಯನ ಬಾಳಿನ ಪಯಣದಲ್ಲಿಯ ಪ್ರತಿಯೊಂದು ಸ್ಥಿತಿಗತಿ. ಇರುವು ತಿರುವುಗಳಲ್ಲಿಯೂ ದಾರಿ ತೋರುವ ಬೆಳಕಿನ ಬಳ್ಳಿಗಳೇ ಈ ಸಂಸ್ಕೃತ ಪುರಾಣಗಳು. ಇಂಥ ವ್ಯಾಪಕವಾದ ಉದ್ದೇಶ ಅವುಗಳ ಹುಟ್ಟು ಕಟ್ಟುಗಳಲ್ಲಿ ಅಂತಗರ್ಭಿತವಾದುದರಿಂದಲೇ ಅವುಗಳ ಹರವು ವಿಸ್ತಾರಗೊಂಡಿದೆ. ಹದಿನೆಂಟು ಪುರಾಣ. ಅಷ್ಟೇ ಉಪಪುರಾಣ, ಮಹಾಭಾರತ, ರಾಮಾಯಣಾದಿ ಪೌರಾಣಿಕ ವಾಙ್ಮಯವು ಮಾನವೀಯ ಜೀವಿತದ ಮೌಲ್ಯ ಮಹತಿಗಳನ್ನು ತಿಳಿಸಿ ಹೇಳಿ ಬಾಳಿನ ಗತಿಗೆ ಚೋದನೆಯನ್ನು ಮಾತ್ರವಲ್ಲದೇ ಚಾಲನೆಯನ್ನೂ ಕೊಡುತ್ತದೆ. ಅವುಗಳ ಉದ್ದೇಶದ ವ್ಯಾಪ್ತಿಗನುಗುಣವಾಗಿ ಕಾರ್ಯಕ್ಷೇತ್ರವೂ ಬಿತ್ತರಗೊಂಡಿದ್ದರಿಂದ ಅರ್ಥಶಾಸ್ತ್ರ, ಉದ್ಯೋಗ, ಅಧ್ಯಾತ್ಮ, ಆಚಾರ, ಭೂಗೋಲ, ಖಗೋಲ, ವನವಾಸ, ಸುಖವಿಲಾಸ. ಕ್ರಾಂತಿ, ಶಾಂತಿ, ಸೋಲು ಗೆಲವು, ಹರ್ಷ ಕ್ಲೇಶ, ಕೋಪ ಅನುತಾಪ, ನಿಗ್ರಹ ವಿಗ್ರಹ, ಪ್ರತೀಕಾರ ಉಪಕಾರ. ರಾಗ ವಿರಾಗ, ಕಲಾಕೌಶಲ್ಯ ಎಲ್ಲವನ್ನೂ ಈ ಪುರಾಣ ಸಾಹಿತ್ಯ ಒಳಗೊಂಡು ವಿರಾಟ್ ರೂಪವನ್ನು ತಾಳಿನಿಂತಿದೆ. ಅಂದರೆ ಜೀವನದ ಯಾವದೇ ಅವಸ್ಥೆಯಲ್ಲಿದ್ದರೂ ಎಂಥದ್ದೇ ಸ್ಥಿತಿಗತಿಯಲ್ಲಿ ನಿಂತಿದ್ದರೂ ಮನುಷ್ಯನಿಗೆ ಮಾರ್ಗದರ್ಶನ ಮಾಡಿ ಸ್ಫೂರ್ತಿ ಪ್ರೇರಣೆಗಳನ್ನು ಒದಗಿಸುವಂಥ ಸತ್ವ ತತ್ವಗಳಿಂದ ಸನಾಥವಾಗಿದೆ ಈ ಪೌರಾಣಿಕ ಸಾಹಿತ್ಯ. ಅಂತೆಯೇ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ವಿಧ ಪುರುಷಾರ್ಥಗಳಲ್ಲಿ ಯಾವುದಾದನ್ನಾದರೂ ಪಡೆಯಬೇಕಾದರೆ ಪುರಾಣಗಳ ಮಾರ್ಗದರ್ಶಿತ್ವದಲ್ಲಿ ಮುಂದುವರೆಯಬೇಕು. ಇವುಗಳಲ್ಲಿ ಯಾವದಾದರೊಂದನ್ನು ಆರಿಸಿಕೊಂಡರೂ ಅವನಿಗೆ ಆ ನಾಲ್ಕು ಪುರುಷಾರ್ಥಗಳನ್ನು ದೊರಕಿಸಿಕೊಡುವದೇ ಪುರಾಣ

ಸಾಹಿತ್ಯದ ವೈಶಿಷ್ಟ್ಯವಾಗಿದೆ. ಪುರಾಣಗಳು ಮಾನವನಿಗೆ ಮನೆ ಮಾರು ತೊರೆದು, ಮಡದಿ ಮಕ್ಕಳನ್ನು ಜರಿದು, ಕಾಡು ಸೇರಲು ಕಲಿಸುವದಿಲ್ಲ. ಧರ್ಮದ ಹೊಂಬೆಳಗಿನಲ್ಲಿಯೇ ಅರ್ಥಕಾಮಗಳ ತಂಬೆಲರನ್ನು ಕಾಣುವ ಕೌಶಲವನ್ನು ಅವು ತಿಳಿಸುತ್ತವೆ.

ಸಂತಾನ ಸಂಪತ್ತು, ಅಧಿಕಾರ, ಭೋಗ, ಭಾಗ್ಯಗಳನ್ನು ಸಂಪಾದಿಸುವ ದಾರಿಯನ್ನು ತಿಳಿಸಿ ಆ ಭೋಗೋಪಭೋಗದಲ್ಲಿಯೂ ಧರ್ಮದೃಷ್ಟಿ, ತ್ಯಾಗದ ತೂಕ, ಸಂಯಮದ ವಿವೇಕ, ಆದರ್ಶದ ಅರಿವುಗಳನ್ನು ಇಟ್ಟುಕೊಂಡರೆ ಆ ಭೋಗವು ಒಂದು ಯೋಗವಾಗುವದು. ಆ ರಾಗವು ವಿರಾಗೋಪಯೋಗಿಯಾಗುವದು.

ಇಂಥ ಧರ್ಮಾವಿರುದ್ಧವಾದ ಕಾಮ, ಸ್ವಾರ್ಥರಹಿತ, ಅರ್ಥೋಪಾರ್ಜನ, ತ್ಯಾಗೋನ್ಮುಖ ಭೋಗಾನುಭೋಗಗಳ ಬಗೆಯನ್ನು ಕಲಿಸಿ, ಧರ್ಮದ ಮರ್ಮ ಹಾಗೂ ಕರ್ಮಯೋಗದ ಕೌಶಲ್ಯವನ್ನು ತಿಳಿಸಿ ಹೇಳುವ ಕಾರ್ಯವನ್ನು ಪುರಾಣಗಳು ಮಾಡುತ್ತ ಬಂದಿವೆ.

ಆದುದರಿಂದಲೇ ಈ ಪುರಾಣ ವಾಙ್ಮಯವು ಸೂರ್ಯನ ಬೆಳಕಿನಂತೆ ನವೋನವ. ಚಂದ್ರಜ್ಯೋತ್ಸ್ನೆಯಂತೆ ನಿತ್ಯನೂತನ. ಮಂದಾನಿಲದಂತೆ ಬಂದಾಗೆಲ್ಲ ಹೊಸ ಗಂಧಿಯೇ. ಸಹಸ್ರ ಸಹಸ್ರ ವರ್ಷಗಳಿಂದ ಈ ಪುರಾಣಗಳು ಜೀವನದ ಒಂದೊಂದು ಪ್ರಕಾರದ ಪರಿಗಳನ್ನು ಬಿಚ್ಚಿ ಬಿಡಿಸಿ ಮತ್ತೆ ಹೊಸ ಹರೆ, ಹೊಸ ಸಿರಿಗಳಿಂದ ಮೆರೆಯುತ್ತವೆ. ಇತಿಹಾಸದ ಈ ಬಗೆ ಬಗೆಯ ಮೆರವಣಿಗೆಗಳು ನರರಿಗೆ ಬಾಳಿನ ಗುರಿಯನ್ನು ಗುರುತಿಸಿ ಸರಿಯಾದ ಹೆಜ್ಜೆ ಹಾಕಲಿಕ್ಕೆ ಕಲಿಸುತ್ತವೆ. ಪರಿಸ್ಥಿತಿಯೊಂದಿಗೆ ಹೋರಾಡಿ ಏರಾಡಿ ತಮ್ಮ ಪೌರುಷ ಪ್ರಯತ್ನಗಳಿಂದ ದೈವವನ್ನೂ ಕೂಡ ಆತ್ಮಾಭಿಮುಖವಾಗಿ ಮಾಡಿಕೊಂಡ ಆದರ್ಶ ಪುರುಷರ, ಗೈಮೆ, ದುಡಿಮೆ, ನಲ್ಮೆ, ಬಲ್ಮೆ, ಮೈಮೆ, ಹಿರಿಮೆಗಳು ಜೀವನದ ಜಂಜಾಟದಲ್ಲಿ ಉದಾಸೀನ ರಾದವರಿಗೆ ಉತ್ಸಾಹವನ್ನೂ ಉಚ್ಛೃಂಖಲರಾದವರಿಗೆ ಸಂಯಮದ ಕಟ್ಟನ್ನು ಕಟ್ಟುನಿಟ್ಟಾಗಿ ಗಟ್ಟಿಗೊಳಿಸಿ ಪ್ರೇರಕವೂ ಕಾರಕವೂ ಆಗುತ್ತವೆ. ಧರ್ಮಮೋಕ್ಷಗಳ ಸಂಧ್ಯಂತರದಲ್ಲಿ ಅರ್ಥಕಾಮಗಳ ವಿಕಾಸ ವಿಲಾಸಗಳನ್ನು ಸಾಧಿಸಿ ಭಗವಂತನನ್ನು ಒಲಿಸಿಕೊಂಡು ಮೋಕ್ಷವನ್ನು ಪಡೆಯಲು ಮುಖ್ಯವಾಗಿ ಭಕ್ತಿಯೆ ಕಾರಣ. ಭಗವಂತನು ಜಾತಿ, ಧರ್ಮ, ಕುಲ, ಐಶ್ವರ್ಯ, ವಿದ್ಯೆ ಯಾವುದನ್ನೂ ಗಣನೆಗೆ ತೆಗೆದುಕೊಳ್ಳುವದಿಲ್ಲ. ಭಾಗವತದಲ್ಲಿ

''ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ।
ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ ।
ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ ವಿಡಂಬನಮ್ ॥

ಭಗವದ್ ಪ್ರಾಪ್ತಿಗೆ ಮುಖ್ಯವಾಗಿ ಬೇಕಾದದ್ದು ಭಕ್ತಿ. ಈ ಭಕ್ತಿಯು ಕೇವಲ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ತ್ರೈವರ್ಣಿಕರನ್ನು ಮಾತ್ರ ಉದ್ಧಾರ ಮಾಡುವದಿಲ್ಲ. ಆದರೆ ಅಖಿಲ ಮಾನವ ಜಾತಿಯವರನ್ನೇ ಪಾವನ ಮಾಡಿ ಪರಮಾತ್ಮನ ಸನ್ನಿಧಾನಕ್ಕೆ ಕರೆದುಕೊಂಡು ಹೋಗುತ್ತದೆ. ಅದಕ್ಕೆ ಜಾತಿ ಮತ ಮೊದಲಾದ ಯಾವ ಭೇದವೂ ಇಲ್ಲ.

ಮತ್ಸ್ಯಪುರಾಣದಲ್ಲಿ

''ಪುಲ್ಕಸಃ ಶ್ವಪಚೋ ವಾಽಪಿ ಯೇ ಚಾನ್ಯೇ ಮ್ಲೇಚ್ಛಜಾತಯಃ ।
ತೇಽಪಿ ವಂದ್ಯಾ ಮಹಾಭಾಗಾ ಹರಿಪಾದೈಕಸೇವಕಾಃ

ಪುಲ್ಕಸ ಎಂದರೆ ಬೇಡರ ಜಾತಿಯವ. ಚಾಂಡಾಲ, ಇವರಲ್ಲದೆ ಯಾವದೇ ಯವನ, ಮ್ಲೇಚ್ಛ ಮೊದಲಾದ ಯಾವುದೇ ನೀಚ ಜಾತಿಯವನಾಗಿದ್ದರೂ ಕೂಡ ಅವರು ಹರಿಭಕ್ತರಾಗಿದ್ದರೆ ಅವರೆಲ್ಲರೂ ಮಹಾನುಭಾವರೆ. ಎಂಥ ಕೀಳು ಕುಲದವರಾಗಿದ್ದರೂ ಅವರು ವಂದನೀಯರೇ ಸರಿ.

ಪುರಾಣಗಳು ಮುಖ್ಯವಾಗಿ ಧರ್ಮನಿರ್ಣಯವನ್ನು ಮಾಡುವ ಧರ್ಮ ನಿರ್ದೇಶನವನ್ನು ಮಾಡುವ ಪ್ರಧಾನ ಸಾಧನವಾಗಿವೆ. ಪದ್ಮಪುರಾಣದಲ್ಲಿ "**ಪುರಾಣೇ ಧರ್ಮ ನಿರ್ಣಯಃ**" ಎಂದು ಹೇಳಲಾಗಿದೆ. ಎಲ್ಲ ಧರ್ಮಶಾಸ್ತ್ರಕಾರರು ತಮ್ಮ ಸ್ಮೃತಿ ಗ್ರಂಥಗಳಲ್ಲಿ ಅದನ್ನು ಮುಂದೆ ಒಂದು ಸಂದರ್ಭದಲ್ಲಿ ತೋರಿಸಲಾಗುವದು.

ಈ ಪುರಾಣಗಳಲ್ಲಿ ಎಲ್ಲ ಜಾತಿ ಜನಾಂಗದ ಧರ್ಮ, ಕರ್ಮ, ಕರ್ತವ್ಯ, ಪೂಜೆ ವ್ರತ, ಉದ್ಯಾಪನೆ, ಶ್ರಾದ್ಧಾದಿ ನೈಮಿತ್ತಿಕ ಕಾರ್ಯ, ದಾನ, ತೀರ್ಥಮಹಾತ್ಮೆ, ಉಪವಾಸ, ನಿಷಿದ್ಧ, ಪುರಸ್ಕಾರ, ಶಿಕ್ಷಣ, ರಾಜಕಾರಣ, ಮೊದಲಾದ ಎಲ್ಲ ವಿಷಯಗಳ ವಿವೇಚನೆ ನಿರೂಪಣೆಗಳು ಇಲ್ಲಿ ಧಾರಾಳವಾಗಿ ಕಂಡುಬರುತ್ತವೆ. ಇವುಗಳು ಬ್ರಾಹ್ಮಣಾದಿಗಳಿಗೆ ಮಾತ್ರವಲ್ಲ. ಬಡಿಗ, ಕಮ್ಮಾರ, ಕುಂಬಾರ, ಚಂಡಾಲ, ಬೇಡ ಮುಂತಾದ ಎಲ್ಲ ಜಾತಿ ಜನಾಂಗದ ಸರ್ವರಿಗೂ ಉಪಯುಕ್ತವಾದ ಆಯುರ್ವೇದ, ಧನುರ್ವೇದ, ಮೊದಲಾದ ಜೀವನಕ್ಕೆ ಉಪಯುಕ್ತ ವಿದ್ಯೆಗಳನ್ನು ಕಲಿಯಬಹುದು ಎಂದು ಪುರಾಣಗಳಲ್ಲಿ ಹೇಳಿಕೊಡಲಾಗಿದೆ.

ಪುರಾಣಗಳೆಂದರೆ ಬದುಕಿನ ಒಂದು ಭಾಷ್ಯ ಇದ್ದಂತೆ. ಮನುಷ್ಯರು ಬದುಕಿ ಬಾಳಲು ಬೇಕಾಗುವ ಸರ್ವ ವಿಷಯಗಳನ್ನು ವಿಸ್ತಾರವಾಗಿ, ದೃಷ್ಟಾಂತಪೂರ್ವಕವಾಗಿ ತೋರಿಸುವ ಒಂದು ವಿಶ್ವ ಕೋಶ. ಇದರಲ್ಲಿ ಹೇಳದೇ ಇರುವ ವಿಷಯಗಳಿಲ್ಲ ಎನ್ನುವಷ್ಟು ಇದು ಸರ್ವತೋಮುಖವಾಗಿದೆ. ಎಲ್ಲ ಜಾತಿಯವರಿಗೂ ಭೂಲೋಕದಲ್ಲಿ ಬಾಳಿ ಬದುಕಲು ಬೇಕಾಗುವ ಎಲ್ಲ ವಿದ್ಯೆಗಳನ್ನೂ ಬೇರೆ ಬೇರೆ ಪುರಾಣಗಳಲ್ಲಿ ಸವಿಸ್ತಾರವಾಗಿ ಹೇಳಿದ್ದಾರೆ.

ಪುರಾಣಗಳಲ್ಲಿ ಮೋಕ್ಷಕ್ಕೆ ಉಪಯುಕ್ತವಾದ ಅಧ್ಯಾತ್ಮವಿದ್ಯೆಯನ್ನು ವಿಸ್ತಾರವಾಗಿ ನಿರೂಪಿಸಿದಂತೆ ಆರೋಗ್ಯವಂತರಾಗಿ ಬದುಕಲು ಬೇಕಾಗುವ ಆಯುರ್ವೇದ, ವಾಸ್ತುವಿದ್ಯೆ ಮೊದಲಾದವುಗಳನ್ನು ಅಲ್ಲಲ್ಲಿ ಹೇಳಿದ್ದು ಕಂಡುಬರುತ್ತದೆ.

## ಆಯುರ್ವೇದ

ಆಯುರ್ವೇದವು ಅತ್ಯಂತ ಲೋಕೋಪಯೋಗಿಯಾದ ವಿದ್ಯೆ. ಗರುಡ ಪುರಾಣದಲ್ಲಿ ಈ ವೈದ್ಯವಿದ್ಯೆಯ ಸಾಂಗೋಪಾಂಗ ವಿವೇಚನೆಯು ಇರುತ್ತದೆ. ಅದರಲ್ಲಿ ರೋಗಗಳ ವಿಧಾನ ಮತ್ತು ಚಿಕಿತ್ಸೆ ಎರಡೂ ವಿಷಯಗಳಲ್ಲಿ ಮಾರ್ಗದರ್ಶನ ಮಾಡಲಾಗಿದೆ. ಅದರಂತೆ ವಿವಿಧ ಔಷಧಗಳ ಸ್ವರೂಪ ಹಾಗೂ ಅವುಗಳ ಗುಣಧರ್ಮ ಇವುಗಳ ಪರಿಚಯವನ್ನು ಚೆನ್ನಾಗಿ ಮಾಡಿಕೊಡಲಾಗಿದೆ. ಗರುಡ ಪುರಾಣದಲ್ಲಿ ವಿವಿಧ ವನಸ್ಪತಿಗಳ ಹೆಸರು ಹಾಗೂ ಅವುಗಳ ಉಪಯೋಗಗಳ ಒಂದು ವಿಸ್ತಾರವಾದ ಸೂಚನಾಪಟ್ಟಿಯೇ ದೊರಕುತ್ತದೆ ಮತ್ತು ಆ ಎಲ್ಲ ವನಸ್ಪತಿಗಳ ದ್ರವ್ಯಗುಣಗಳ ಉಪಯುಕ್ತತೆಯನ್ನು ವಿವರಿಸಲಾಗಿದೆ. ಈ ಬದುಕುವ ಮತ್ತು ಜನರನ್ನು ಬದುಕಿಸುವ ಈ ವಿದ್ಯೆಯನ್ನು ಬ್ರಾಹ್ಮಣೇತರರು ಕಲಿಯಬಾರದೆಂದು ಎಲ್ಲಿಯೂ ಹೇಳಿಲ್ಲ. ಇಲ್ಲಿ ಮುಂದೆ ಹೇಳುವ ಸರ್ವೋಪಯುಕ್ತ ವಿದ್ಯೆಗಳ ಅಧ್ಯಯನ ಅಧ್ಯಾಪನೆಗಳು ಎಲ್ಲರಿಗೂ ಮುಕ್ತದ್ವಾರವಾಗಿದೆ.

## ಗಾರುಡೀ ವಿದ್ಯೆ

ಅಗ್ನಿ ಪುರಾಣದಲ್ಲಿ ಭಯಂಕರವಾದ ಘಟ ಸರ್ಪಗಳ ಪ್ರಾಣಾಂತಿಕ ವಿಷಗಳನ್ನು ದೂರ ಮಾಡುವ ಗಾರುಡೀ ವಿದ್ಯೆಯು ೧೯೩ನೇ ಅಧ್ಯಾಯದಲ್ಲಿ ಕೆಲವು ಸೂಚ್ಯವಾಗಿಯೂ ಹಲವು ವಾಚ್ಯವಾಗಿಯೂ ನಿರೂಪಿಸಲ್ಪಟ್ಟಿವೆ. ಅವುಗಳ ಜೊತೆಗೆ ಸಿದ್ಧಯೋಗ ಕಲ್ಪಯೋಗಗಳ ವಿವರಣೆಯೂ ವಿಧಾನವೂ ಅಲ್ಲಿ ಸಿಗುತ್ತವೆ. ಗರುಡ ಪುರಾಣದ ೨೮೨ನೇ ಅಧ್ಯಾಯದಲ್ಲಿ ವೃಕ್ಷಆಯುರ್ವೇದ ಎಂಬ ಪ್ರಕರಣದಲ್ಲಿ ಮರ, ಬಳ್ಳಿ, ಮೊದಲಾದವುಗಳ ರೋಗ ಪರಿಹಾರಕ ಗುಣಗಳನ್ನು ನಿರೂಪಿಸಲಾಗಿದೆ. ಭೂಲೋಕದ ಮಾನವರಿಗೆ ಬರುವ ಬಗೆ ಬಗೆಯ ರೋಗಗಳ ಅವುಗಳ ಉಪಚಾರ ಹಾಗೂ ಉಪಯೋಗಗಳ ಬಗ್ಗೆ ಅತ್ಯಂತ ಉಪಯುಕ್ತವಾದ ವಿಷಯಗಳನ್ನು ವಿವರಿಸಿದ್ದು ಕಂಡುಬರುತ್ತದೆ.

## ವಾಸ್ತು ವಿದ್ಯೆ

ಮನೆ, ಮಠ, ಅರಮನೆ, ಸಿರಿಮನೆ, ರಾಜಭವನ, ದೇವಸ್ಥಾನ, ಛತ್ರ, ಭೋಜನ ಶಾಲೆಗಳನ್ನು ಕಟ್ಟುವ ವಿದ್ಯೆಗೆ ವಾಸ್ತುವಿದ್ಯೆ ಎನ್ನುತ್ತಾರೆ. ಜನರ ವಸತಿ ಸ್ಥಾನಗಳಿಗೆ ಅತ್ಯಾವಶ್ಯಕವಾದ ಮನೆ ಮಂದಿರಗಳ ನಿರ್ಮಾಣದ ವಿವಿಧ ರೀತಿ ಹಾಗೂ ವಾಸ್ತು ವಿದ್ಯೆಯ ಬೇರೆ ಬೇರೆ ಪ್ರಕಾರಗಳನ್ನು ಮತ್ಸ್ಯಪುರಾಣ, ಅಗ್ನಿಪುರಾಣ, ವಿಷ್ಣು ಧರ್ಮೋತ್ತರಪುರಾಣ, ಗರುಡಪುರಾಣಗಳಲ್ಲಿ ಸಾಂಗೋಪಾಂಗವಾಗಿ ನಿರೂಪಣೆ ಗೈದಿದ್ದಾರೆ. ಅದರಲ್ಲಿಯೂ ವಿಶೇಷವಾಗಿ ಮತ್ಸ್ಯಪುರಾಣದಲ್ಲಿ ವಾಸ್ತುವಿದ್ಯೆಯ ವಿಶಿಷ್ಟ ವಿವೇಚನೆಯು ಕಂಡು ಬರುತ್ತದೆ. ಇದರಲ್ಲಿ ವಾಸ್ತುವಿದ್ಯೆಯ ಮೂಲ ಸಿದ್ಧಾಂತ, ಸ್ಥಾನಗಳ ಆಯ್ಕೆ, ನಿರ್ಮಿತಿಯ ನಕಾಶ, ದೇವ ಮೂರ್ತಿಗಳ ನಿರ್ಮಾಣ, ಮಂದಿರ ಪ್ರಾಕಾರಗಳ ರಚನೆ ಈ ನಾಲ್ಕು ವಿಷಯಗಳನ್ನು ಪ್ರಾಮುಖ್ಯವಾಗಿ ಚರ್ಚಿಸಲಾಗಿದೆ. ಮತ್ಸ್ಯ ಪುರಾಣದ ೨೫೨, ೨೫೩ನೇ ಅಧ್ಯಾಯಗಳಲ್ಲಿ ಈ ವಾಸ್ತುಶಾಸ್ತ್ರದ ಹದಿನೆಂಟು ಆಚಾರ್ಯರ ಹೆಸರುಗಳನ್ನೂ ಕೂಡ ಕೊಡಲಾಗಿದೆ.

## ಪುರಾಣಗಳಲ್ಲಿ ಧರ್ನುವಿದ್ಯೆ

ಕ್ಷತ್ರಿಯರಿಗೆ ಅದರಲ್ಲೂ ರಾಜ ಮಹಾರಾಜರಿಗೆ ಉಳಿದೆಲ್ಲರಿಗೂ ದರ್ನುವಿದ್ಯೆ ಅರ್ಥಾತ್ ಶಸ್ತ್ರವಿದ್ಯೆಯು ಅತ್ಯಂತ ಆವಶ್ಯಕ. ಬ್ರಹ್ಮ, ಪ್ರಜಾಪತಿ, ಇಂದ್ರ, ಮನು, ಅಗಸ್ತ್ಯ, ಜಮದಗ್ನಿ, ಭರದ್ವಾಜ ಈ ಏಳು ಆಚಾರ್ಯರು ಧರ್ನುವಿದ್ಯೆಯ ಸಪ್ತರ್ಷಿಗಳೆಂದು ಪ್ರಸಿದ್ಧರಾಗಿದ್ದಾರೆ. ಆ ಕಾಲದಲ್ಲಿ ಸಮೀಪದ ಅಥವಾ ದೂರದ ವೈರಿಗಳನ್ನು ಸಂಹರಿಸಲು ಮುಖ್ಯ ಸಾಧನ ಶಸ್ತ್ರವೇ ಆಗಿದ್ದರಿಂದ ಆ ಶಸ್ತ್ರದ್ದೇ ಒಂದು ಶಾಸ್ತ್ರವು ರೂಪಗೊಂಡಿತ್ತು. ಅದಕ್ಕೆ ಧರ್ನುವಿದ್ಯೆ ಎಂದು ಹೆಸರಿದ್ದಿತು.

## ಪುರಾಣಗಳಲ್ಲಿ ರತ್ನ ಪರೀಕ್ಷೆ

ಭಾರತದಲ್ಲಿ ಹಾಗೂ ಪರದೇಶಗಳಲ್ಲಿ ಮುತ್ತು ರತ್ನಗಳಿಗೆ ವಿಶಿಷ್ಟ ಸ್ಥಾನವಿದ್ದಿತು. ಆಭರಣ, ಅಲಂಕಾರಗಳಿಗಾಗಿ ಮುತ್ತು, ಮಣಿ, ಮಾಣಿಕ್ಯಗಳನ್ನು ಉಪಯೋಗಿಸುವಂತೆ ವೈದ್ಯಶಾಸ್ತ್ರದಲ್ಲಿಯೂ ರತ್ನಗಳ ಉಪಯೋಗವಿದ್ದು ಅವುಗಳು ಧಾರಾಳವಾಗಿ ಉಪಯೋಗಿಸಲ್ಪಡುತ್ತಿದ್ದವು. ಮಣಿ, ಮಂತ್ರ ಮತ್ತು ಔಷಧ ಈ ಮೂರು ರೋಗಹಾರಕ

ಹಾಗು ಸಿದ್ಧಿದಾಯಕ ಎಂದು ಪರಿಗಣಿತವಾಗಿದ್ದವು. ಆ ಕಾಲದಲ್ಲಿ ಮಣಿ ಶಬ್ದದಿಂದ ರತ್ನ ಮುತ್ತು, ಮಾಣಿಕ್ಯ ಮುಂತಾಗಿ ನವರತ್ನಗಳು ಅದರಲ್ಲಿ ಅಂತರ್ಭೂತವಾಗಿದ್ದವು. ಬೇರೆ ಬೇರೆ ಗ್ರಹಗಳಿಗೆ ಬೇರೆ ಬೇರೆ ರತ್ನಗಳ ಧಾರಣವನ್ನು ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಲಾಗಿದೆ. ಆಕಾಶದಲ್ಲಿ ಗ್ರಹ ನಕ್ಷತ್ರ ತಾರೆಗಳು ವಿಶಿಷ್ಟ ರತ್ನಧಾರಣೆಯಿಂದ ಅತ್ಯಧಿಕವಾದ ಫಲವನ್ನು ನೀಡುತ್ತವೆ. ಅದಕ್ಕಾಗಿ ಪೂರ್ವಕಾಲದಲ್ಲಿ ರತ್ನಗಳ ಬಗೆಬಗೆಯ ಉಪಯೋಗದ ಪ್ರಕಾರಗಳನ್ನು ನಿರ್ದೇಶಿಸಲಾಗಿದೆ. ಗರುಡ ಪುರಾಣದಲ್ಲಿ ಈ ತರಹದ ರತ್ನಗಳ ವರ್ಗೀಕರಣ ಮತ್ತು ಅವುಗಳ ಗುಣದೋಷ ವಿಚಾರಗಳನ್ನು ಪ್ರಮಾಣ ಪುರಸ್ಸರವಾಗಿ ಮಾಡಲಾಗಿದೆ. ಮುಕ್ತಾಫಲ, ಪದ್ಮರಾಗ, ಮರಕತ, ಇಂದ್ರನೀಲ, ವೈಡೂರ್ಯ, ಪುಷ್ಯರಾಗ, ಕರ್ಕೇತನ, ಪುಲಕ, ಸ್ಫಟಿಕ, ಪ್ರವಾಳ ಇತ್ಯಾದಿ ರತ್ನಗಳ ಹೆಸರುಗಳನ್ನೂ ಮತ್ತು ಅವುಗಳ ಪರೀಕ್ಷಾ ಕ್ರಮವನ್ನೂ ಗರುಡ ಪುರಾಣದಲ್ಲಿ ನಿಚ್ಚಳವಾಗಿ ಹೇಳಿಕೊಡಲಾಗಿದೆ. ಈ ತರಹದ ರತ್ನ ಪರೀಕ್ಷೆಯ ವಿದ್ಯೆಯನ್ನು ಹೇಳುವಾಗ ಈ ಮಣಿಗಳು ದೊರಕುವ ಭೂಗರ್ಭದಲ್ಲಿ ಅಡಗಿದ ಖಣಿಗಳನ್ನು ಗುರುತಿಸುವ ರೀತಿಯನ್ನೂ ಪುರಾಣದಲ್ಲಿ ಹೇಳಲಾಗಿದೆ. ಇದು ಸಾಹಸಿಗಳಾದ ಎಲ್ಲರಿಗೂ ಅತ್ಯುಪಯುಕ್ತವಾಗಿದೆ.

ಪ್ರಾಚೀನ ಭಾರತದ ವಾಙ್ಮಯದಲ್ಲಿ ಚತುರ್ದಶ ವಿದ್ಯೆಗಳ ಉಲ್ಲೇಖ ಅಲ್ಲಲ್ಲಿ ಬರುತ್ತದೆ ಇವು ಜಾತ್ಯತೀತವಾದ ವಿದ್ಯೆಗಳು. ಯಾರಾದರೂ ಇವುಗಳನ್ನು ಕಲಿತು ಉಪಯೋಗಿಸಬಹುದು. ಅವುಗಳ ಚತುರ್ದಶವಿದ್ಯೆಗಳ ಸಂಕ್ಷಿಪ್ತ ದಿಗ್ ದರ್ಶನವನ್ನು ಮಾತ್ರ ಇಲ್ಲಿ ಮಾಡಿಕೊಡಲಾಗಿದೆ.

ಈ ವಿದ್ಯೆಗಳ ಹೆಸರುಗಳಲ್ಲಿ ಹೆಚ್ಚು ಕಡಿಮೆ ಇರಬಹುದು. ಆದರೆ ಸಂಖ್ಯೆಗಳಲ್ಲಿ ಮಾತ್ರ. ಹೆಚ್ಚು ಕಡಿಮೆ ಇಲ್ಲ. ಪುರಾಣಗಳಲ್ಲಿ ಬೇರೆ ಬೇರೆ ಆಖ್ಯಾನ ಉಪಾಖ್ಯಾನಗಳ ಸಂದರ್ಭಗಳಲ್ಲಿ ಮತ್ತು ಪ್ರಸಂಗಾನುಪ್ರಸಂಗಗಳಲ್ಲಿ ಚತುರ್ದಶ ವಿದ್ಯೆಯೆಂದು. ಈ ಹದಿನಾಲ್ಕು ವಿದ್ಯೆಗಳು ನಿರ್ದಿಷ್ಟವಾಗಿರುತ್ತವೆ. ಅವುಗಳ ನಾಮ ಮತ್ತು ವಿಷಯಗಳನ್ನು ಮುಂದೆ ಇಲ್ಲಿಯೇ ಸಂಕ್ಷೇಪವಾಗಿ ತಿಳಿಸಲಾಗುವದು.

೧) **ಅನುಲೇಪನ ವಿದ್ಯೆ:-** ಈ ವಿದ್ಯೆಯಲ್ಲಿ ವಿಶಿಷ್ಟ ಲೇಪನದ ಉಪಯೋಗವನ್ನು ಹೇಳಲಾಗಿದೆ. ಈ ವಿಚಿತ್ರವಾದ ಲೇಪನವನ್ನು ಕಾಲಿಗೆ ಹಚ್ಚಿಕೊಂಡರೆ ಹತ್ತೆಂಟು ಗಂಟೆಗಳಲ್ಲಿ ಸಾವಿರಾರು ಯೋಜನಗಳವರೆಗೆ ಚಲಿಸುವ ಶಕ್ತಿಯು ಕಾಲುಗಳಿಗೆ ಬರುತ್ತದೆ. ಇಂಥ ಪಾದ ಲೇಪನವು ಒಬ್ಬ ಬ್ರಾಹ್ಮಣನಿಗೆ ದೊರಕಿತು. ಅದರ ಪ್ರಭಾವದಿಂದ ಆ ವಿಪ್ರನು ಹಿಮಾಲಯವನ್ನು ಸುಲಭವಾಗಿ ಏರಿದ. ಅಲ್ಲಿ ಎಲ್ಲ ಕಡೆಗೂ ಗಿರಿ ಶಿಖರಗಳಲ್ಲಿ ಓಡಾಡಿದ. ಮುಂದೆ ಒಂದು ಸ್ಥಳದಲ್ಲಿ ಸೂರ್ಯನ ಕಿರಣಗಳಿಂದ ಕರಗಿ ಹೋದ ಹಿಮಪ್ರದೇಶದಲ್ಲಿ ಕಾಲಿಟ್ಟ. ಕೂಡಲೇ ಆ ಲೇಪವು ತೊಳೆದು ಹೋಯಿತು. ಆಗ ಲೇಪನಶಕ್ತಿಯು ನಷ್ಟವಾಗಿ ಹೋಯಿತು. ಅದರಿಂದ ಆ ಬ್ರಾಹ್ಮಣನು ದಾರುಣ ದುಃಖವನ್ನು ಅನುಭವಿಸ ಬೇಕಾಯಿತು ಎಂದು ಮಾರ್ಕಂಡೇಯ ಪುರಾಣದಲ೧-೮-೨೦ರಲ್ಲಿ ಹೇಳಲಾಗಿದೆ.

೨) **ಸ್ವೇಚ್ಛಾರೂಪಧಾರಣೇ ವಿದ್ಯೆ:-** ಈ ವಿದ್ಯೆಯಿಂದ ಮನುಷ್ಯನಿಗೆ ತನ್ನ ಇಚ್ಛೆಗೆ ಅನುಗುಣವಾಗಿ ತನಗೆ ಬೇಕಾದ ರೂಪ ಹಾಗೂ ಆಕಾರಗಳನ್ನು ಪಡೆಯಲು ಶಕ್ತಿ

ಬರುತ್ತದೆ. **ಮದನಿಕಾ** ಎಂಬ ಹೆಸರಿನ ಓರ್ವ ರಾಕ್ಷಸ ಪತ್ನಿಯೂ ಮತ್ತು **ಮಹಿಷಾಸುರ** ಎಂಬ ದಾನವರ ಅಧಿಪತಿಯೂ **ಧರ್ಮಮೂರ್ತಿ** ಎಂಬ ಮಹಾರಾಜನೂ ಈ ವಿದ್ಯೆಯನ್ನು ಕಲಿತು ಉಪಯೋಗ ಮಾಡಿಕೊಂಡಿದ್ದರು ಎಂದು ಮಾರ್ಕಂಡೇಯ ಪುರಾಣದ ಎರಡನೇಯ ಅಧ್ಯಾಯದಿಂದ ತಿಳಿದು ಬರುತ್ತದೆ.

(೩) **ಅಸ್ತ್ರಗ್ರಾಮ ಹೃದಯ ವಿದ್ಯೆ:-** ಕ್ಷತ್ರಿಯರಿಗೆ ವಿಶೇಷತಃ ರಾಜರಿಗೆ, ಸೇನಾಪತಿಗಳಿಗೆ ಈ ವಿದ್ಯೆಯಜ್ಞಾನವು ಅತ್ಯಂತ ಆವಶ್ಯಕ. ಕಷ್ಟಪಟ್ಟು ಈ ವಿದ್ಯೆಯನ್ನು ಸಂಪಾದನೆ ಮಾಡಿದವರಿಗೆ ಶಸ್ತ್ರಾಸ್ತ್ರಗಳ ಸೂಕ್ಷ್ಮಾತಿ ಸೂಕ್ಷ್ಮವಾದ ರಹಸ್ಯವೆಲ್ಲವೂ ತಿಳಿದು ಹೋಗುತ್ತವೆ. ಆದರಿಂದ ಎಂತಹ ಪ್ರಬಲ ಪ್ರಚಂಡರಾದ ಶತ್ರು ರಾಜರನ್ನುಸಹ ಸುಲಭವಾಗಿ ಸೋಲಿಸಬಹುದು. ಮಾರ್ಕಂಡೇಯಪುರಾಣದ ೬೩ನೇ ಅಧ್ಯಾಯದಲ್ಲಿ ಈ ವಿದ್ಯೆಯ ಉಪಯೋಗ, ಉಪದೇಶ, ಉಪಯುಕ್ತತೆಯ ಬಗ್ಗೆ ಚಿತ್ತವೇಧಕವಾದ ಒಂದು ಸಂದರ್ಭವು ಬರುತ್ತದೆ.

**ಮನೋರಮಾ** ಎಂಬ ವಿದ್ಯಾಧರಿಯ ಮೇಲೆ ಒಬ್ಬ ದುಷ್ಟಭ್ರಷ್ಟನಾದ ಬಲಿಷ್ಠರಾಕ್ಷಸನು ಆಕ್ರಮಣ ಮಾಡಿ ಬಲಾತ್ಕರಿಸಲು ಪ್ರಯತ್ನಿಸುತ್ತಾನೆ. ಆಗ ಆ **ಮನೋರಮಾ** ಎಂಬ ವಿದ್ಯಾಧರೀ ವನಿತಾಮಣಿಯು ಈ ಅಸ್ತ್ರಗ್ರಾಮ ಹೃದಯ ವಿದ್ಯೆ ಎಂಬ ಅಪರೂಪವಾದ ರಹಸ್ಯ ವಿದ್ಯೆಯಿಂದ ತಾನು ಪಾರಾಗಿ ಜನರಿಗೆ ಕಲಿಸಲು ಈ ವಿದ್ಯೆಯನ್ನು ಮನುವಿಗೆ ಹೇಳಿಕೊಡುತ್ತಾಳೆ. ಅದರ ಬಲದಿಂದ ವಿದ್ಯಾಧರಿ ಹೆಸರಿನ **ಮನೋರಮೆ**ಯಂತೆ ದುಷ್ಟರಾಕ್ಷಸರ ಕೈಯಿಂದ ಎಲ್ಲ ಅಬಲೆಯರೂ ಸಬಲೆಯರಾಗಿ ಪಾರಾಗುತ್ತಿದ್ದರು. ಈಗಿನ ಕಾಲದ ಕರಾಟೆಯಂತೆ ಇರುವ ಈ ವಿದ್ಯೆಯು ಮಾರ್ಕಂಡೇಯ ಪುರಾಣದ (೬೩,೭೪/೭೭) ಅಧ್ಯಾಯಗಳಲ್ಲಿ ವರ್ಣಿತವಾಗಿದೆ.

(೪) **ಸರ್ವಭೂತರುತ ವಿದ್ಯೆ:-** ಈ ವಿದ್ಯೆಯಿಂದ ಮನುಷ್ಯರಿಗೆ ಸರ್ವಪ್ರಾಣಿಗಳ ಭಾಷೆಯು ಅರ್ಥವಾಗುತ್ತವೆ. ನಾನಾ ವಿಧವಾದ ಜೀವ ಜಂತುಗಳ ಧ್ವನಿಗಳ ಯಥಾರ್ಥವಾದ ಅರ್ಥವನ್ನು ತಿಳಿಯಲು ಈ ವಿದ್ಯೆಯಿಂದ ಸಾಧ್ಯವಾಗುತ್ತದೆ. ವಿಭಾವರಿ ಎಂಬ ಹೆಸರಿನ ವಿದ್ಯಾಧರ ವಂಶದ ವನಿತಾಮಣಿಯು ಈ ಅಪರೂಪದ ವಿದ್ಯೆಯನ್ನು ಸ್ವಾರೋಚಿಷ ಮುನಿಗೆ ಹೇಳಿಕೊಟ್ಟಿದ್ದಳು ಎಂದು ಮಾರ್ಕಂಡೇಯ ಪುರಾಣದ ೬೪ನೇ ಅಧ್ಯಾಯದಲ್ಲಿ ನಿರೂಪಿಸಲಾಗಿದೆ ಬ್ರಹ್ಮದತ್ತ ಎಂಬ ಮಹಾರಾಜನಿಗೆ ಈ ವಿದ್ಯೆಯು ಚೆನ್ನಾಗಿ ಅವಗತ ವಾಗಿದ್ದಿತು ಎಂದು ಮತ್ಸ್ಯಪುರಾಣದಿಂದ ಹಾಗೂ ಹರಿವಂಶದಿಂದ ತಿಳಿದು ಬರುತ್ತದೆ.

(೫) **ಪದ್ಮಿನೀ ವಿದ್ಯೆ:-** ಇದೊಂದು ಅತ್ಯಂತ ದುರ್ಮಿಳವಾದ ಅಷ್ಟೇ ಉಪಯುಕ್ತವಾದ ಒಂದು ರಹಸ್ಯವಿದ್ಯೆ.ಇದರ ಪ್ರಭಾವದಿಂದ ಭೂಗರ್ಭದಲ್ಲಿ ನಿಕ್ಷಿಪ್ತವಾದ ಅಥವಾ ಭೂಗತವಾದ ವಸ್ತು, ನಿಧಿಗಳ ಶೋಧವು ಸುಲಭ ಸಾಧ್ಯವಾಗುತ್ತದೆ. 'ಬಹುರತ್ನಾವಸುಂಧರಾ ಎಂಬ ಉಕ್ತಿಯಂತೆ ಭೂದೇವಿಯ ಹೊಟ್ಟೆಯಲ್ಲಿ ಹುದುಗಿಕೊಂಡಿರುವ ರತ್ನದ ಗಣಿ, ಚಿನ್ನದ ಖಣಿ, ತೈಲಮೂಲಗಳ ಅನ್ವೇಷಣೆಯು ಇದರಿಂದ ಸುಲಭ ವೇದ್ಯ ಸಾಧ್ಯವಾಗುವುದು. ಈ ವಿದ್ಯೆಯನ್ನು ಕಲಾವತಿ ಎಂಬ ಹೆಸರಿನ ಕುಶಲಾತಿ ಕುಶಲಳಾದ ಕಾಮಿನೀ ಮಣಿಯು ಈ ವಿದ್ಯೆಯನ್ನು ಸ್ವಾರೋಚಿತ ಮನುವಿಗೆ ಹೇಳಿಕೊಟ್ಟಿದ್ದಳು ಎಂದು ಮಾರ್ಕಂಡೇಯ ಪುರಾಣದ ೬೪ನೇ ಅಧ್ಯಾಯದಲ್ಲಿ ಹೇಳಲಾಗಿದೆ.

(೬) **ರಕ್ಷೋಘ್ನ ವಿದ್ಯೆ:-** ಯಜ್ಞ, ಯಾಗ, ಹೋಮ, ಹವನ, ಜ್ಞಾನಸತ್ರ ಮುಂತಾದ ಲೋಕ ಕ್ಷೇಮಕರವಾದ ಪುಣ್ಯಕಾರ್ಯಗಳಿಗೆ ದುಷ್ಟರಾದ ರಾಕ್ಷಸರು ವಿಘ್ನ ಮಾಡುತ್ತಿದ್ದರು. ಅವರನ್ನು ಸದೆ ಬಡೆಯಲಿಕ್ಕಾಗಿ ಈ ವಿದ್ಯೆಯ ಉಪಯೋಗವಾಗುತ್ತಿತ್ತು.

(೭) **ಜಾಲಂಧರೀ ವಿದ್ಯೆ:-** ವಾಲ್ಮೀಕಿಯು ಶ್ರೀರಾಮಚಂದ್ರನ ಮಕ್ಕಳಾದ ಲವಕುಶರಿಗೆ ಈ ವಿದ್ಯೆಯನ್ನು ಕಲಿಸಿದ್ದರು. ಆದರೆ ಈ ವಿದ್ಯೆಯ ರಹಸ್ಯ ಸ್ವರೂಪವು ಮಾತ್ರ ಯಾವ ಪುರಾಣದಲ್ಲಿಯೂ ನಮಗೆ ಈ ವರೆಗೆ ಕಂಡುಬಂದಿಲ್ಲ.

(೮) **ಪರಾಬಾಲಾ ವಿದ್ಯೆ:-** ಈ ವಿದ್ಯೆಯು ಸರ್ವಸಿದ್ಧಿಪ್ರದಾಯನಿ ಆಗಿರುತ್ತದೆ. ತ್ರಿಪುರಸುಂದರಿಯು ಅರ್ಜುನನಿಗೆ ಈ ವಿದ್ಯೆಯ ಉಪದೇಶವನ್ನು ಮಾಡಿದಳು. ಅದರ ಪ್ರಭಾವದಿಂದ ಅರ್ಜುನನು ಕೃಷ್ಣಲೀಲೆಯ ರಹಸ್ಯವನ್ನು ತಿಳಿದುಕೊಂಡನು. ಎಂದು ಸ್ಕಂದಪುರಾಣದ ಪಾತಾಳಖಂಡದ ೪೩ನೇ ಅಧ್ಯಾಯದಲ್ಲಿ ಹೇಳಲಾಗಿದೆ.

(೯) **ಪುರುಷ ಪ್ರಮೋದಿನೀ ವಿದ್ಯೆ:-** ಈ ವಿದ್ಯೆಯ ಪ್ರಭಾವದಿಂದ ಸ್ತ್ರೀಯರು ತಮ್ಮ ಪುರುಷರಲ್ಲಿ ಸ್ನೇಹ-ಮೋಹಗಳನ್ನು ತೋರಿಸಿ ತಮ್ಮ ಪ್ರೇಮದ ಬಲದಿಂದ ಅವರನ್ನು ವಶಪಡಿಸಿಕೊಳ್ಳಬಹುದು. ಯಮ ದೇವರ ಕನ್ಯೆಯಾದ **ಸುನೀಥಾ** ಎಂಬ ಹೆಸರಿನಯುವತಿಗೆ ದೇವಾಂಗನೆಯಾದ **ರಂಭೆಯು** ಈ ವಿದ್ಯೆಯನ್ನು ಕಲಿಸಿಕೊಟ್ಟಳು. ಸುನೀಥೆಯು ಈ ವಿದ್ಯೆಯ ಪ್ರಭಾವದಿಂದ ಅತ್ರಿಮಹರ್ಷಿಯ ಪುತ್ರನಾದ 'ಅಂಶ' ಎಂಬ ಹೆಸರಿನತಪಸ್ವಿ ತರುಣನನ್ನು ಒಲಿಸಿಕೊಂಡು ಅವನನ್ನು ತನ್ನಸ್ವಾಧೀನಪಡಿಸಿಕೊಂಡಳು. ಅದರಿಂದ ಮುಂದೆ ಯಮಪುತ್ರಿಯಾದ ಅದೇ **ಸುನೀಥೆಯು** ಬ್ರಹ್ಮರ್ಷಿ ಅತ್ರಿ ಅನುಸೂಯೆಯರ ಸಮ್ಮತಿಯಿಂದ ಅದೇ ಅತ್ರಿ ಪುತ್ರ ಅಂಶನನ್ನು ಮದುವೆ ಯಾದಳು. ಇದು ಒಂದು ಪ್ರಕಾರದ ವಶೀಕರಣ ವಿದ್ಯೆ ಎನಿಸುತ್ತದೆ. ಈ ವಿದ್ಯೆಯ ವರ್ಣನೆ ವಿವರಣೆಯನ್ನು ಅಗ್ನಿ ಪುರಾಣದ ೧೨೩ನೇ ಅಧ್ಯಾಯದಲ್ಲಿ ವಿಶದವಾಗಿ ನಿರೂಪಿಸಲಾಗಿದೆ.

೧೦. **ಉಲ್ಲಾಪನವಿಧಾನ ವಿದ್ಯೆ:-** ಈ ವಿದ್ಯೆಯನ್ನು ಚೆನ್ನಾಗಿ ಕಲಿತರೆ ಅಂಕು ಡೊಂಕಾದ ವಸ್ತುವನ್ನು ಸರಳವಾಗಿ-ಸುಂದರವಾಗಿ-ನೇರವಾಗಿ ಮಾಡಬಹುದು. ಈ ವಿದ್ಯೆಯ ಬಲದಿಂದ ಸರ್ವ ಸಮರ್ಥನೇ ಆದ ಶ್ರೀಕೃಷ್ಣನು ಸೊಟ್ಟಾಪಟ್ಟಾಗಿ ಬೆಳೆದು ಎಂಟು ಕಡೆ ಮಣಿದ ಕುಬ್ಜೆ ಎಂಬ ಹೆಣ್ಣು ಮಗಳ ಕಾಲನ್ನು ತನ್ನ ಕಾಲಿನಿಂದ ಮೆಟ್ಟಿ, ಮೈಯನ್ನು ಮುಟ್ಟಿ ಗಲ್ಲವನ್ನು ತಟ್ಟಿ, ಸರಳ ದೇಹದ ಸರ್ವಾಂಗಸುಂದರಿಯನ್ನಾಗಿ ಮಾಡಿದನು. ತಾನು ಸ್ವಯಂ ಮಹಿಮೆಯಿಂದ ಬೇಕಾದನ್ನು ಮಾಡಬಲ್ಲದವನಾದರೂ ಈ ವಿದ್ಯೆಯನ್ನು ಜಗತ್ತಿನಲ್ಲಿ ಪ್ರಚುರಪಡಿಸಲು ಅವಳನ್ನು ಸುಂದರಾಕಾರಳನ್ನಾಗಿ ಈ ವಿದ್ಯೆಯಿಂದ ಮಾಡಿದನು ಎಂದು ಭಾಗವತ ವಿಷ್ಣುಪುರಾಣಾದಿ ಗ್ರಂಥಗಳಲ್ಲಿ ಹೇಳಲಾಗಿದೆ.

೧೧. **ದೇಹಹೂತಿ ವಿದ್ಯೆ:-** ಇದು ದೇವತೆಗಳ ಆವಾಹನೆ ಮಾಡುವ ವಿದ್ಯೆ ಎಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಈ ವಿದ್ಯೆಯನ್ನು ಶ್ರಮಪಟ್ಟು ಅಧ್ಯಯನ ಮಾಡಿದರೆ ಕ್ರಮ ಪ್ರಕಾರ ತಮಗೆ ಬೇಕಾದ ದೇವತೆಗಳನ್ನು ಆವಾಹನೆ ಮಾಡಿ ಕರೆಯಬಹುದು. ಈ ದೇವಹೂತಿ ವಿದ್ಯೆಯಿಂದ ಆವಾಹನೆ ಮಾಡಿದರೆ ತಮಗೆ ಬೇಕಾದ ದೇವತೆಗಳು ತಕ್ಷಣದಲ್ಲಿ ಬಂದುಬಿಡುತ್ತಾರೆ. ದೂರ್ವಾಸರು ಹಿಂದೆ ಈ ಮಹಾವಿದ್ಯೆಯನ್ನು ಕುಂತಿಯು ಕನ್ಯಾವಸ್ಥೆಯಲ್ಲಿದ್ದಾಗಲೇ ಉಪದೇಶಮಾಡಿದ್ದರು. ಅವಳು

ಈ ವಿದ್ಯೆಯನ್ನು ಮದುವೆಗಿಂತ ಮೊದಲೇ ಉಪಯೋಗಮಾಡಿ, ಸೂರ್ಯದೇವನನ್ನು ಆವಾಹನೆ ಮಾಡಿದಳು. ಸೂರ್ಯದೇವನು ತಕ್ಷಣದಲ್ಲಿಯೇ ಪ್ರತ್ಯಕ್ಷನಾಗಿ ಅವಳಿಗೆ ಕರ್ಣ ಎಂಬ ಪುತ್ರನನ್ನು ದಯಪಾಲಿಸಿದನು. ಅನಂತರ ಕುಂತೀದೇವಿಯು ಪಾಂಡುರಾಜನನ್ನು ವಿವಾಹವಾದ ಬಳಿಕ ಅವನ ಅಪ್ಪಣೆ ಪಡೆದು ಯಮಧರ್ಮನನ್ನು ಆಹ್ವಾನಿಸಿದಳು. ಅದರಿಂದ ಧರ್ಮರಾಜ ಎಂಬ ಮಗನನ್ನೂ, ವಾಯುದೇವರನ್ನು ಆಹ್ವಾನಿಸಿ ಅದರ ಪ್ರಭಾವದಿಂದ ಭೀಮಸೇನನ್ನೂ, ಇಂದ್ರನನ್ನು ಆಹ್ವಾನಿಸಿ ಅದರ ಮಹಿಮೆಯಿಂದ ಅರ್ಜುನನನ್ನೂ ಪುತ್ರರನ್ನಾಗಿ ಪಡೆದಳು. ಅನಂತರ ಅವಳ ಸವತಿಯಾದ ಮಾದ್ರಿಯು ಇದೇ ವಿದ್ಯೆಯ ಪ್ರಭಾವದಿಂದ ಅಶ್ವಿನೀ ದೇವತೆಗಳ ಆವಾಹನೆ ಮಾಡಿ ನಕುಲ ಮತ್ತು ಸಹದೇವ ಎಂಬ ಪುತ್ರರನ್ನು ಪಡೆದಳೆಂದು ತಿಳಿದುಬರುತ್ತದೆ.

೧೨. **ಯುವಕರಣ ವಿದ್ಯೆ:-** ಯಾವದಾದರೊಂದು ವಸ್ತುವು ಹಳತಾಗಿ ಜೀರ್ಣವಾಗಿ ಹೋಗಿದ್ದರೆ ಅದನ್ನು ಈ ವಿದ್ಯೆಯಿಂದ ಸ್ಪರ್ಶ ಮಾಡಿ ತಟ್ಟಿ ಮುಟ್ಟಿದರೆ ಅದು ಹೊಚ್ಚ ಹೊಸದಾಗಿ ಹೊಳಪಿನಿಂದ ಹೊಳೆಯುತ್ತದೆ. ಮುಪ್ಪಿನ ಮುದುಕರಾದವರು ಇದರ ಪ್ರಭಾವದಿಂದ ನವತರುಣರಾಗುತ್ತಾರೆ. ಅಶ್ವಿನೀದೇವತೆಗಳು ಈ ವಿದ್ಯೆಯ ಪ್ರಭಾವದಿಂದ ಮುಪ್ಪಿನ ಮುದುಕರಾದ ಚ್ಯವನಋಷಿಯನ್ನು ನವತರುಣರನ್ನಾಗಿ ಮಾರ್ಪಡಿಸಿದರು. ಅದರಂತೆ ಯಯಾತಿಯು ಮುಪ್ಪಿನ ಮುದುಕನಾದರೂ ಶುಕ್ರಾಚಾರ್ಯರು ಮಾಡಿದ ಈ ವಿದ್ಯೆಯ ಉಪಯೋಗದ ಬಲದಿಂದ ಮತ್ತೆ ನವತಾರುಣ್ಯವನ್ನು ಪಡೆದನು. ಇಂಥ ಅನೇಕ ಸಂದರ್ಭಗಳು ಭಾಗವತ, ಅಗ್ನಿಪುರಾಣ ಮಾರ್ಕಂಡೇಯಪುರಾಣ ಮುಂತಾದ ಪುರಾಣಗಳಲ್ಲಿ ಸಿಗುತ್ತವೆ.

೧೩. **ವಜ್ರವಾಹನಿಕಾ ವಿದ್ಯೆ:-** ಕಷ್ಟಪಟ್ಟು ಒಮ್ಮೆ ಈ ವಿದ್ಯೆಯನ್ನು ಕಲಿತುಕೊಂಡರೆ ಅವನಿಗೆ "**ತ್ರಿಲೋಕ ವಿಜಯೀ ಭವ**" ಎಂದು ವರಕೊಟ್ಟಂತಾಗುತ್ತದೆ. ಈ ವಿದ್ಯೆಯ ಪ್ರಭಾವದಿಂದ ಅನೇಕ ಜನರು ವಜ್ರದಂತೆ ಕಠಿಣದೇಹಶಕ್ತಿಗಳನ್ನು ಪಡೆದು ಅಚ್ಛೇದ್ಯರೂ, ಅಭೇದ್ಯರೂ, ಅವಧ್ಯರೂ ಆಗುತ್ತಿದ್ದರು. ಭೀಮಸೇನನು ಇಂಥ ವಜ್ರದೇಹಿಯಾಗಿದ್ದನು ಎಂದು ಪುರಾಣಗಳಲ್ಲಿ ಕಾಣುತ್ತೇವೆ.

೧೪. **ಗೋಪಾಲಮಂತ್ರ ವಿದ್ಯೆ:-** ಇದೊಂದು ವಿಚಿತ್ರವಾದ ವಿಲಕ್ಷಣ ಶಕ್ತಿಸಾಮರ್ಥ್ಯವನ್ನು ತಂದುಕೊಡುವ ಮಂತ್ರ ವಿಧಾನ. ಸಾಕ್ಷಾತ್ ಪರಶಿವನು ಪುಣ್ಯಶ್ರವ ಎಂಬ ಮುನಿಯ ಸತ್ಪುತ್ರನಿಗೆ ಈ ಮಂತ್ರವನ್ನು ಉಪದೇಶಿಸಿದ್ದನು. ಈ ಮಂತ್ರವನ್ನು ಚೆನ್ನಾಗಿಪಠಿಸಿ ಅಧ್ಯಯನಮಾಡಿ ಸಾಧಿಸಿದರೆ ಅವರಿಗೆ ವಾಕ್‌ಸಿದ್ಧಿಯು ಪ್ರಾಪ್ತವಾಗುವುದು. ಅವರು ನುಡಿದದ್ದೇ ಸತ್ಯ, ಆಡಿದ್ದೆಲ್ಲಾ ಯಥಾರ್ಥವಾಗಿ ಆಗುತ್ತದೆ.

ಹೀಗೆ ಈ ಚತುರ್ದಶ ವಿದ್ಯೆಗಳು ಬೇರೆ ಬೇರೆ ಪುರಾಣಗಳಲ್ಲಿ ಅಲ್ಲಲ್ಲಿ ಹೇಳಲ್ಪಟ್ಟಿದ್ದು ಈ ವಿದ್ಯೆಯನ್ನು ಕಲಿತು ಶ್ರಮಪಟ್ಟು ಸಾಧನೆ ಮಾಡುವವರಿಗೆ ಅವು ಸಾಧಕವೂ, ಸಿದ್ಧಿದಾಯಕವೂ ಆಗಿರುತ್ತದೆ. ದೇವ, ಮುನಿ, ಮಹರ್ಷಿಗಳಿಂದ ಆರಂಭಿಸಿ ಶ್ರೀಸಾಮಾನ್ಯರವರೆಗೂ ಎಲ್ಲರ ಜೀವನವನ್ನು ಸುಸಂಪನ್ನವೂ, ಸರ್ವಾಂಗ ಸುಂದರವೂ ಆಗುವಂತೆ ಮಾಡಲು ಈ ಹದಿನೆಂಟು ಪುರಾಣಗಳು ಪ್ರವರ್ತಿತವಾಗಿರುತ್ತವೆ. ಭಗವಾನ್ ಶ್ರೀಬಾದರಾಯಣರು ಸಾಕ್ಷಾತ್‌ಪರಬ್ರಹ್ಮನ ಅವತಾರವೇ ಆಗಿದ್ದು ಲೋಕೋಪಕಾರಕ್ಕಾಗಿ

ಹಾಗೂ ಜಗದೋದ್ಧಾರಕ್ಕಾಗಿ ಅವರು ಜ್ಞಾನಭಂಡಾರದ ಒಳಕಿಂಡಿಯಂತಿರುವ ಈ ಅಷ್ಟಾದಶ ಪುರಾಣಗಳನ್ನೂ, ಲಕ್ಷ ಶ್ಲೋಕಾತ್ಮವಾದ ಮಹಾಭಾರತ ಎಂಬ ಐತಿಹಾಸಿಕ ಪೌರಾಣಿಕ ಆಧ್ಯಾತ್ಮಿಕ ಮಹದ್ಗ್ರಂಥವನ್ನೂ ರಚಿಸಿ ಕೊಟ್ಟಿದ್ದಾರೆ. ಸಮಸ್ತ ನಿಗಮಾಗಮಳ ಸಾರೋದ್ಧಾರ ಮಾಡಿ ೫೬೪ ಬ್ರಹ್ಮಸೂತ್ರಗಳನ್ನು ರಚನೆ ಮಾಡಿ ಮನುಕುಲಕ್ಕೆ ಪರಮೋಪಕಾರ ಮಾಡಿದ್ದಾರೆ.

ಸರ್ವೋಪಕಾರಕರೂ, ಪರಮೋಪಕಾರಕರೂ, ಸ್ವಯಂವಿಷ್ಣುಸ್ವರೂಪಕರೂ ಆದ ಭಗವಾನ್ ಶ್ರೀ ವೇದವ್ಯಾಸರು ಶುದ್ಧ ಶೈವಪುರಾಣವಾದ ಲಿಂಗಮಹಾಪುರಾಣವನ್ನು ಬರೆದ್ದಿದಾರೆ. ಇದು ಒಂದು ಉಪಪುರಾಣ. ಇದರಲ್ಲಿ 'ಸ್ವರ್ಗಶ್ಚ ಪ್ರತಿಸರ್ಗಶ್ಚ' ಎಂದು ಹೇಳಿದ ಪುರಾಣದ ಪಂಚಲಕ್ಷಣಗಳು ಕಾಣುವುದಿಲ್ಲ. ಈ ಪುರಾಣವನ್ನು ಬ್ರಹ್ಮನು ವ್ಯಾಸರಿಗೂ, ವ್ಯಾಸರು ಭೃಗುಮುನಿಗೂ, ಭೃಗುಮುನಿಗಳು ಸೋಮಕಾಂತನಿಗೂ ಹೇಳಿದರು ಎಂದು ಇದರ ಪರಂಪರೆ ಬರುತ್ತದೆ. ಹೀಗೆ ಬ್ರಹ್ಮಾದಿ ಪರಂಪರಾ ಪ್ರಾಪ್ತವಾದ ಮಹಾಪುರಾಣವನ್ನು ನೈಮಿಷಾರಣ್ಯದ ಶೌನಕಾದಿ ಋಷಿಗಳ ಅಪೇಕ್ಷೆಯಂತೆ ಸೂತರು ನಿರೂಪಿಸಿದ್ದಾರೆ. ಅಕಾರ, ಉಕಾರ, ಮಕಾರ ಮೂರು ವರ್ಣಗಳಿಂದ ಘಟಿತವಾದ ಓಂಕಾರ ಸ್ವರೂಪವೇ ಆಗಿದ್ದಾನೆ ಆ ಶಿವ. ಇಂಥ ಸರ್ವಜನರಿಗೂ ಉಪಯೋಗವಾಗುವಂಥ ಲೌಕಿಕ ವಿದ್ಯೆಗಳನ್ನು ಪ್ರಚುರ ಪಡಿಸಿ ಆಧ್ಯಾತ್ಮಿಕ ರಹಸ್ಯವನ್ನೂ ನಿರೂಪಿಸಿ ಮಾನವರು ಉದ್ಧಾರವಾಗುವಂತೆ ಮಾಡುವುದೇ ಈ ಪವಿತ್ರ ಪುರಾಣದ ಮುಖ್ಯ ಉದ್ದೇಶವಾಗಿದೆ.

## ಪುರಾಣಗಳ ಪ್ರಾಚೀನತೆ

ಈ ಪುರಾಣಗಳೆಲ್ಲವು ತೀರ ಇತ್ತೀಚಿನವು ಎಂದು ಕೆಲವು ಆಧುನಿಕ ಸಂಶೋಧಕರು ಸಾಧಿಸಿ ವಾದಿಸುತ್ತಾರೆ. ಆದರೆ ವೇದಗಳು ಸೃಷ್ಟಿಯ ಪ್ರಾರಂಭ ಕಾಲದಲ್ಲಿಯೇ ವ್ಯಕ್ತವಾಗಿ ವ್ಯಾಸರಿಂದ ಪ್ರಚುರಪಡಿಸಲ್ಪಟ್ಟವು. ಅವುಗಳ ಪ್ರಾಚೀನತೆಯನ್ನು ಅಲ್ಲಿನ ಪ್ರಮಾಣ ವಚನಗಳಿಂದಲೇ ತೋರಿಸಲಾಗುವದು.

ಸಾಕ್ಷಾತ್ ಶ್ರೀಹರಿಯ ಅವತಾರರಾದ ಭಗವಾನ್ ವ್ಯಾಸರು ರಚಿಸಿದ ಪುರಾಣಗಳು ಪ್ರಾಚೀನವಾದರೂ ಉಪಯೋಗದ ದೃಷ್ಟಿಯಿಂದ ಅರ್ವಾಚೀನ. ಜನರಿಗೆಲ್ಲ ನಿತ್ಯೋಪಯೋಗಕ್ಕೆ ಬರುವಷ್ಟು ಸಮೀಚೀನವೂ ಆಗಿರುತ್ತವೆ. ವೇದಗಳಿಗಿಂತ ಮೊದಲು ಪುರಾಣಗಳೇ ವ್ಯಕ್ತವಾದವು ಎಂದು

**''ಪುರಾಣಂ ಸರ್ವಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಂ**
**ಅನಂತರಂ ಚ ವಕ್ತ್ರೇಭ್ಯಃ ವೇದಾಸ್ತಸ್ಯ ವಿನಿರ್ಗತಾಃ'' ॥**

ಎಲ್ಲ ಶಾಸ್ತ್ರಗಳಿಗಿಂತ ಮೊಟ್ಟ ಮೊದಲು ಬ್ರಹ್ಮದೇವರ ಸ್ಮೃತಿ ಪಥದಲ್ಲಿ ಮೂಡಿ ನಂತರ ಬ್ರಹ್ಮನ ಮುಖಗಳಿಂದ ವೇದಗಳು ಪ್ರವೃತ್ತವಾದವು. ಆ ಬ್ರಹ್ಮನಿಗೆ ಪ್ರತಿಭಾತವಾದ ಆ ಪುರಾಣಗಳು ಮೊದಲು ಏಕಾಕಾರವಾಗಿ ರಾಶಿರೂಪವಾಗಿದ್ದಿತು. ಅದು ಶತಕೋಟಿ ಸುವಿಸ್ತೃತಂ. ನೂರು ಕೋಟಿ ಶ್ಲೋಕಾತ್ಮಕವಾಗಿದ್ದಿತು. ಮತ್ಸ್ಯಪುರಾಣದಲ್ಲಿ ಐವತ್ಮೂರನೇಯ ಅಧ್ಯಾಯದಲ್ಲಿ

**''ಪುರಾಣಮೇಕಮೇವಾಸೀತ್ ತದಾ ಕಲ್ಪಾಂತರೇಷು ವೈ**
**ತ್ರಿವರ್ಗಸಾಧನಂ ಪುಣ್ಯಂ ಶತಕೋಟಿ ಪ್ರವಿಸ್ತರಮ್ ॥**

**ಶತಕೋಟಿ** ವಿಸ್ತಾರವಾದ ಈ ಪುರಾಣ ರಾಶಿಯನ್ನೂ ಅದರ ರಹಸ್ಯಾರ್ಥವನ್ನೂ **ತಿಳಿದು ಕೊಳ್ಳುವದು** ಕಾಲಕ್ರಮೇಣ ದುಸ್ತರವೆಂದು ತಿಳಿದು ಸಾಕ್ಷಾತ್ ಪರಮಾತ್ಮನು **ವೇದವ್ಯಾಸ** ರೂಪದಿಂದ ಅವತಾರ ಮಾಡಿದನು. ನೂರು ಕೋಟಿ ವಿಸ್ತಾರವಾದ **ಆ ಪುರಾಣಗಳ** ವಾಙ್ಮಯ ರಾಶಿಯನ್ನು ಹದಿನೆಂಟು ಪುರಾಣಗಳ ಚೌಕಟ್ಟಿಗೆ ಕೂಡಿಸಿದನು. ಇದನ್ನು ಪದ್ಮ ಪುರಾಣದ ಸೃಷ್ಟಿಖಂಡದಲ್ಲಿ

**''ಕಾಲೇನ ಅಗ್ರಹಣಂ ದೃಷ್ಟ್ವಾ ಪುರಾಣಸ್ಯ ತತೋ ವಿಭುಃ**
**ವ್ಯಾಸರೂಪೀ ತದಾ ಬ್ರಹ್ಮಾ ಸಂಗ್ರಹಾರ್ಥಂ ಯುಗೇ ಯುಗೇ ॥**

ಇದೇ ಅಭಿಪ್ರಾಯವನ್ನು ಮತ್ಸ್ಯಪುರಾಣದಲ್ಲಿಯೂ ರೇವಾಖಂಡದಲ್ಲಿಯೂ ಹೇಳಿದ್ದಾರೆ. ಈ ಪುರಾಣಗಳ ಮತ್ತು ಅದರಲ್ಲಿಯ ಗ್ರಂಥಗಳ ಅರ್ಥಾತ್ ಶ್ಲೋಕಗಳ ಸಂಖ್ಯೆಯನ್ನು ಅನೇಕ ಪುರಾಣಗಳಲ್ಲಿ ಹೇಳಿದ್ದಾರೆ. ಮೊದಲು ವೇದಗಳೂ ಕೂಡ ಒಂದೇ ಶಬ್ದರಾಶಿ ರೂಪವಾಗಿ ಇದ್ದವು. ಅವುಗಳನ್ನು ವೇದವ್ಯಾಸ ರೂಪದಿಂದ ಬಂದು ವಿಭಾಗ ಮಾಡಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದವೆಂದು ನಾಮ ನಿರ್ದೇಶನ **ಮಾಡಿ** ಶಿಷ್ಯರಿಗೆ ಉಪದೇಶಿಸಿದರು. ಅದರಿಂದಲೇ ಆ ಬಾದರಾಯಣರಿಗೆ ವೇದವ್ಯಾಸ ಎಂದರೆ ವೇದಗಳನ್ನು ವಿಂಗಡಿಸಿ ವಿಭಾಗ ಮಾಡಿ ಇಟ್ಟವರು ಎಂಬ ಹೆಸರು ಬಂದಿದೆ.

**''ಚತುರ್ಲಕ್ಷ ಪ್ರಮಾಣೇನ ಪುರಾಣಂ ದ್ವಾಪರೇ ಸ್ಥಿತಂ ।**
**ತದಷ್ಟಾದಶಧಾ ಕೃತ್ವಾ ಭೂಲೋಕೇಽಸ್ಮಿನ್ ಪ್ರಭಾಸತೇ''॥**

ನಾಲ್ಕು ಲಕ್ಷ ಶ್ಲೋಕಗಳನ್ನು ಹದಿನೆಂಟು ಪುರಾಣಗಳಲ್ಲಿ ಅಳವಡಿಸಿ ವ್ಯಾಸರು ಭೂಲೋಕದಲ್ಲಿ ಪ್ರತಿಯೊಂದು ದ್ವಾಪರಯುಗದಲ್ಲಿಯೂ ತಾವು ಹುಟ್ಟಿ ಪ್ರಚಾರ ಮಾಡಿದರು. ಈ ಹದಿನೆಂಟು ಮಹಾಪುರಾಣಗಳು ಯಾವವು ? ಅವುಗಳ ಹೆಸರೇನು ? ಎನ್ನುವದನ್ನು ದೇವೀ ಭಾಗವತದಲ್ಲಿ ಒಂದು ಸುಂದರವಾದ ಶ್ಲೋಕದಿಂದ ಹೇಳಲಾಗಿದೆ.

**''ಮ' ದ್ವಯಂ 'ಭ' ದ್ವಯಂ ಚೈವ 'ಬ್ರ' ತ್ರಯಂ 'ವ' ಚತುಷ್ಟಯಂ**
**ಅ,ನಾ,ಪ,ಲಿಂ,ಗ,ಕೂ,ಸ್ಕಾನಿ ಪುರಣಾನಿ ವಿದೋ ವಿದುಃ'' ॥**

ಈ ಪದ್ಯದಲ್ಲಿ ಈ ಹದಿನೆಂಟು ಪುರಾಣಗಳ ಆದ್ಯಾಕ್ಷರ ಅರ್ಥಾತ್ ಮೊದಲಿನ ಅಕ್ಷರವನ್ನು ಹಿಡಿದು ಹದಿನೆಂಟು ಪುರಾಣಗಳ ಹೆಸರು ಸ್ಮರಣಕ್ಕೆ ಬರುವಂತೆ ಹೇಳಲಾಗಿದೆ.

**'ಮದ್ವಯಂ** ಎಂದರೆ **'ಮ'** ಎಂಬ ಅಕ್ಷರದಿಂದ ಪ್ರಾರಂಭವಾಗುವ ಮತ್ಸ್ಯ ಪುರಾಣ ಮತ್ತು ಮಾರ್ಕಂಡೇಯ ಪುರಾಣಗಳು. **ಭದ್ವಯಂ** ಎಂದರೆ ಭ ಎಂಬ ಅಕ್ಷರದಿಂದ ಪ್ರಾರಂಭವಾಗುವ ಭವಿಷ್ಯ ಭಾಗವತ ಎಂಬ ಎರಡು ಪುರಾಣಗಳು. **'ಬ್ರ' ತ್ರಯಂ** ಎಂದರೆ **'ಬ್ರ'** ಎನ್ನುವ ಪ್ರಥಮಾಕ್ಷರದಿಂದ ಪ್ರಾರಂಭವಾಗುವ ಬ್ರಹ್ಮ, ಬ್ರಹ್ಮಾಂಡ ಮತ್ತು ಬ್ರಹ್ಮವೈವರ್ತ ಎಂಬ ಮೂರು ಪುರಾಣಗಳು **'ವ' ಚತುಷ್ಟಯಂ** ಎಂದರೆ **'ವ'** ಕಾರದಿಂದ ಪ್ರಾರಂಭವಾಗುವ ವಿಷ್ಣು, ವರಾಹ, ವಾಮನ, ವಾಯು ಎಂಬ ನಾಲ್ಕು ಮಹಾಪುರಾಣಗಳು.

**ಅ,ನಾ,ಪ,ಲಿಂ.ಗ.ಕೂ.ಸ್ಕ,** ಎಂದರೆ ಅಗ್ನಿ ಪುರಾಣ, ನಾರದ ಪುರಾಣ, ಪದ್ಮ ಪುರಾಣ, ಲಿಂಗಮಹಾಪುರಾಣ, ಗರುಡಪುರಾಣ, ಕೂರ್ಮಪುರಾಣ, ಸ್ಕಂದಪುರಾಣ. ಹೀಗೆ ಒಟ್ಟು ಹದಿನೆಂಟು ಪುರಾಣಗಳನ್ನು ತಿಳಿಸಲಾಗಿದೆ. ಇವೇ ಈ ಪದ್ಯದಲ್ಲಿ ಹೇಳಿದ ಹದಿನೆಂಟು ಪುರಾಣಗಳು

(೧) ಮತ್ಸ್ಯ (೨) ಮಾರ್ಕಂಡೇಯ (೩) ಭವಿಷ್ಯ (೪) ಭಾಗವತ (೫) ಬ್ರಹ್ಮ (೬) ಬ್ರಹ್ಮಾಂಡ (೭) ಬ್ರಹ್ಮ ವೈವರ್ತ (೮) ವಿಷ್ಣು (೯) ವರಾಹ (೧೦) ವಾಮನ (೧೧) ವಾಯು (೧೨) ಅಗ್ನಿ (೧೩) ನಾರದ (೧೪) ಪದ್ಮ (೧೫) ಲಿಂಗ (೧೬) ಗರುಡ (೧೭) ಕೂರ್ಮ (೧೮) ಸ್ಕಂದ ಹೀಗೆ ಹದಿನೆಂಟು ಪುರಾಣಗಳನ್ನು ಈ ಪದ್ಯದಲ್ಲಿ ಸುಂದರವಾಗಿ ಸಂಕ್ಷಿಪ್ತವಾಗಿ ಮಾರ್ಮಿಕವಾಗಿ ಎಲ್ಲರಿಗೂ ನೆನಪುಳಿಯುವಂತೆ ಹೇಳಿದ್ದಾರೆ.

## ಒಟ್ಟು ಪುರಾಣಗಳ ಶ್ಲೋಕ ಸಂಖ್ಯೆ ಹಾಗೂ ಅಷ್ಟೇ ಉಪಪುರಾಣಗಳ ಹೆಸರುಗಳು

ನರಸಿಂಹ ಪುರಾಣ, ಸನತ್‌ಕುಮಾರ ಪುರಾಣ, ನಂದಿ ಪುರಾಣ, ಶಿವಧರ್ಮ ಪುರಾಣ, ದುರ್ವಾಸ ಪುರಾಣ, ನಾರದೀಯ ಪುರಾಣ, ಕಪಿಲ ಪುರಾಣ, ಮಾನವ ಪುರಾಣ, ಉಶನಸ್ ಪುರಾಣ, ಕಾಳೀ ಪುರಾಣ, ಬ್ರಹ್ಮಾಂಡ ಪುರಾಣ, ವಾರುಣ ಪುರಾಣ, ವಾಪಿಷ್ಠ ಲೈಂಗಿಕ ಪುರಾಣ, ಸಾಂಬ ಪುರಾಣ, ಸೌರ ಪುರಾಣ, ಪರಾಶರ ಪುರಾಣ, ಮರೀಚಿ ಪುರಾಣ, ಭಾರ್ಗವ ಪುರಾಣ. ಇವೇ ಅಷ್ಟಾದಶ ಉಪಪುರಾಣಗಳು. ದೇವೀ ಭಾಗವತವೂ ಈ ಉಪಪುರಾಣಗಳ ಸಾಲಿಗೆ ಸೇರತಕ್ಕ ಗ್ರಂಥವೆಂದು ಹಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇನ್ನೂ ಹಲವಾರು ಪಂಡಿತರು ಮತ್ತು ಸಂಶೋಧಕರು ವ್ಯಾಸ ರಚಿತ ಭಾಗವತ ಮಹಾಪುರಾಣದಂತೆ ದೇವೀ ಭಾಗವತವೂ ಕೂಡ ಮಹಾಪುರಾಣವೇ ಆಗಿದೆ ಎಂದು ಹೇಳುತ್ತಾರೆ.

## ಪ್ರಕೃತ ಲಿಂಗಮಹಾಪುರಾಣವು ೧೧ನೇ ಪುರಾಣವಾಗಿದೆ

ವ್ಯಾಸರಚಿತ ಹದಿನೆಂಟು ಪುರಾಣಗಳಲ್ಲಿ ಪ್ರಕೃತ ಲಿಂಗ ಪುರಾಣವು ಹನ್ನೊಂದನೆಯ ಪುರಾಣವಾಗಿದೆ. ದುಷ್ಟಜನರ ಸಂಹಾರ, ಶಿಷ್ಟಜನರ ಸಂರಕ್ಷಣೆ ಮಾಡಿ ಧರ್ಮ ಪ್ರವರ್ತಕನಾಗಿ ಕೊನೆಗೆ ಪ್ರಳಯಂಕರನಾಗುವ ಮಹಾದೇವನು ಅಹಂಕಾರ ತತ್ವಕ್ಕೆ ಅಭಿಮಾನಿಯಾಗಿದ್ದು ಜಗತ್ತಿಗೆಲ್ಲ ಶಂಕರನೂ ಸುಖಂಕರನೂ ಆಗಿದ್ದಾನೆ. ಇಂಥ ಪರಮೇಶ್ವರನು ಈ ಲಿಂಗಪುರಾಣದಲ್ಲಿ ಮುಖ್ಯ ಪ್ರತಿಪಾದ್ಯನಾಗಿದ್ದಾನೆ. ವ್ಯಾಸರಚಿತ ಹದಿನೆಂಟು ಪುರಾಣಗಳಲ್ಲಿ ಹತ್ತು ಪುರಾಣಗಳು ಶಿವ ಪಾರಮ್ಯ ಪ್ರತಿಪಾದಕಗಳಾಗಿವೆ. ನಾಲ್ಕು ಪುರಾಣಗಳಿಂದ ವಿಷ್ಣು ಪ್ರತಿಪಾದ್ಯನಾಗಿದ್ದಾನೆ. ಎರಡು ಪುರಾಣಗಳಲ್ಲಿ ಬ್ರಹ್ಮದೇವರ ಮಹಿಮೆಯು ಪ್ರತಿಪಾದಿತವಾಗಿದೆ. ಅಗ್ನಿ, ಸೂರ್ಯರ ವರ್ಣನಾಪರವಾದ ಎರಡು ಪುರಾಣಗಳು ಇರುತ್ತವೆ.

## ಪುರಾಣಗಳ ತ್ರೈವಿಧ್ಯ

ಈ ಹದಿನೆಂಟು ಮಹಾಪುರಾಣಗಳನ್ನು ಸಾತ್ವಿಕ,ರಾಜಸ ಮತ್ತು ತಾಮಸ ಎಂದು ಮೂರು ವಿಧವಾಗಿ ವಿಂಗಡಿಸಿದ್ದಾರೆ. ವಿಷ್ಣು, ನಾರದ, ಭಾಗವತ, ಗರುಡ, ಪದ್ಮ ಹಾಗೂ ವರಾಹ ಇವು ಆರು ಸಾತ್ವಿಕ ಪುರಾಣಗಳು. ಬ್ರಹ್ಮಾಂಡ, ಬ್ರಹ್ಮವೈವರ್ತ, ಮಾರ್ಕಂಡೇಯ, ಭವಿಷ್ಯ, ವಾಮನ ಮತ್ತು ಬ್ರಹ್ಮ ಇವು ಆರು ರಾಜಸ ಪುರಾಣಗಳು. ಹಾಗೂ ಮತ್ಸ್ಯ, ಕೂರ್ಮ, ಲಿಂಗ, ಶಿವ, ಸ್ಕಂದ ಮತ್ತು ಅಗ್ನಿ ಇವು ತಾಮಸ ಪುರಾಣಗಳು.

**''ಸಾತ್ವಿಕೇಷು ಪುರಾಣೇಷು ಮಾಹಾತ್ಮ್ಯಂ ಅಧಿಕಂ ಹರೇಃ ।**
**ರಾಜಸೇಷು ಚ ಮಾಹಾತ್ಮ್ಯಂ ಅಧಿಕಂ ಬ್ರಹ್ಮಣೋ ವಿದುಃ ॥**
**ತದ್ವದಗ್ನೇಶ್ಚ ಮಾಹಾತ್ಮ್ಯಂ ತಾಮಸೇಷು ಶಿವಸ್ಯಚ ।**
**ಸಂಕೀರ್ಣೇಷು ಸರಸ್ವತ್ಯಾಃ ಪಿತೃಣಾಂ ಚ ನಿಗದ್ಯತೇ ॥**

*(ಮತ್ಸ್ಯಪುರಾಣ ೫೩ : ೬೮/೭೯)*

ಆರು ಸಾತ್ವಿಕ ಪುರಾಣಗಳಲ್ಲಿ ವಿಷ್ಣುವಿನ ಮಹಿಮೆಯು ಆರು ರಾಜಸ ಪುರಾಣಗಳಲ್ಲಿ ಬ್ರಹ್ಮದೇವರ ಮಹಿಮೆಯೂ, ಆರು ತಾಮಸ ಪುರಾಣಗಳಲ್ಲಿ ಅಗ್ನಿ, ಶಿವ ಮುಂತಾದ ದೇವತೆಗಳ ಮಹಿಮೆಗಳೂ ಪ್ರತಿಪಾದಿತವಾಗಿವೆ. ಈ ಎಲ್ಲ ಅಷ್ಟಾದಶಪುರಾಣಗಳಲ್ಲಿಯೂ ಹರಿಹರಬ್ರಹ್ಮಾದಿ ತ್ರಿಮೂರ್ತಿದೇವತೆಗಳ ಮತ್ತು ಸರಸ್ವತೀ ಹಾಗೂ ಪಿತೃದೇವತೆಗಳ ಪಾವನ ಚರಿತ್ರಗಳು ನಿರೂಪಿಸಲ್ಪಟ್ಟಿದೆ ಎಂದು ಹೇಳಲಾಗಿದೆ.

ಈ ಎಲ್ಲಪುರಾಣಗಳು ಭಗವಾನ್ ಬಾದರಾಯಣರಿಂದ ರಚಿತವಾಗಿದ್ದು ಅತ್ಯಂತ ಪ್ರಾಚೀನ ಪವಿತ್ರ ಗ್ರಂಥರೂಪವಾಗಿರುತ್ತವೆ. ವೇದಗಳು ಹಾಗು ಸ್ಮೃತಿ, ಬ್ರಾಹ್ಮಣ, ಇತಿಹಾಸಾದಿ ಗ್ರಂಥಗಳಲ್ಲೆಲ್ಲ ಇವುಗಳ ಉಲ್ಲೇಖವಿರುವದರಿಂದ ಈ ಪುರಾಣ ಪ್ರಪಂಚವೆಲ್ಲವೂ ವೇದಗಳಷ್ಟೇ ಹಾಗು ಸ್ಮೃತಿಗಳಷ್ಟೇ ಅತ್ಯಂತ ಪ್ರಾಚೀನವೂ ಅತ್ಯಂತ ಸಮೀಚೀನವೂ ಆಗಿರುತ್ತವೆ. ಆದರೆ ಅನೇಕ ಪಾಶ್ಚಿಮಾತ್ಯ ವಿಮರ್ಶಕರೂ ವೈದೇಶಿಕ ಸಂಶೋಧಕರೂ, ಇವರು ಮಾತ್ರ ಅಲ್ಲದೇ ಅಕ್ಷರಶಃ ಅವರ ಅನುಕರಣೆಯನ್ನು ಮಾಡುವ ಭಾರತೀಯ ಇತಿಹಾಸಕಾರರೂ ಕೂಡ ಎಲ್ಲ ಪುರಾಣಗ್ರಂಥಗಳೂ ಕ್ರಿಸ್ತ ಶಕದ ೩,೬,೭,೧೦ ನೇ ಶತಮಾನದಲ್ಲಿ ನಿರ್ಮಾಣಗೊಂಡಿವೆ ಎಂದು ಸಾಧಿಸುತ್ತಾರೆ.

ಆದರೆ ನಾವು ಈ ಲಿಂಗಪುರಾಣದ ಪ್ರಾರಂಭದಲ್ಲಿಯೇ ಉದಾಹರಿಸಿದ ಅಥರ್ವಣವೇದ, ಛಾಂದೋಗ್ಯೋಪನಿಷತ್ತು. ಗೋಪಥ ಬ್ರಾಹ್ಮಣ, ಆಶ್ವಲಾಯನ ಗ್ರಹ್ಯ ಸೂತ್ರ, ಆಪಸ್ತಂಭ ಧರ್ಮಸೂತ್ರ, ಮಹಾಭಾರತ ಮೊದಲಾದ ಗ್ರಂಥಗಳಲ್ಲಿ ಪುರಾಣದ ಉಲ್ಲೇಖವು ಬರುವದರಿಂದ ಈ ಎಲ್ಲ ಪುರಾಣಗಳು ಅತ್ಯಂತ ಪ್ರಾಚೀನತರ, ಪುರಾತನತಮ ಎಂದು ಸಿದ್ಧವಾಗುತ್ತದೆ.

ಪ್ರಕೃತ ಲಿಂಗ ಪುರಾಣವು ಹನ್ನೊಂದು ಸಾವಿರ ಶ್ಲೋಕಗಳನ್ನು ಒಳಗೊಂಡ ಹನ್ನೊಂದನೇಯ ಪುರಾಣವಾಗಿದೆ. ಅಹಂಕಾರ ತತ್ವಕ್ಕೆ ಅಭಿಮಾನಿಯಾದ ಮಹಾದೇವನೇ ಈ ಲಿಂಗ ಪುರಾಣದಲ್ಲಿ ಮುಖ್ಯ ಪ್ರತಿಪಾದ್ಯನಾಗಿದ್ದಾನೆ. ವ್ಯಾಸ ರಚಿತ ಹದಿನೆಂಟು ಪುರಾಣಗಳಲ್ಲಿ ಹತ್ತು ಪುರಾಣಗಳು ಶಿವ ಸರ್ವೋತ್ತಮತ್ವವನ್ನೋ ಸಾವಧಾರಣವಾಗಿ ಸಾಧಿಸುತ್ತವೆ. ದೃಷ್ಟಾಂತ ಪೂರ್ವಕವಾಗಿ ಬೋಧಿಸುತ್ತವೆ. ಎರಡು ಪುರಾಣಗಳಲ್ಲಿ ಬ್ರಹ್ಮದೇವರ ಮಹಿಮೆಯು ಪ್ರತಿಪಾದಿತವಾಗಿವೆ. ಅಗ್ನಿ, ಸೂರ್ಯ ದೇವತೆಗಳ ವರ್ಣನಾಪರವಾದ ಎರಡು ಪುರಾಣಗಳು ಇರುತ್ತವೆ. ಆ ಪುರಾಣಗಳು ಈ ಇಬ್ಬರು ದೇವತೆಗಳ ಮೈಮೆ ಗೈಮೆಗಳನ್ನು ಕೊಂಡಾಡುತ್ತವೆ. ಈ ದೃಷ್ಟಿಯಿಂದ ವಿಚಾರ ಮಾಡಿದರೆ, ಶಿವ ಸರ್ವೋತ್ತಮತ್ವ ಮತ್ತು ಶಿವನ ಲೀಲಾ ಮಹಿಮೆಗಳನ್ನು ಪ್ರತಿಪಾದಿಸುವ ಪುರಾಣಗಳೇ ಅತ್ಯಧಿಕವಾಗಿರುತ್ತವೆ. ಎನ್ನುವದನ್ನು ಕೆಳಗಿನ ಪದ್ಯಗಳಿಂದ ತಿಳಿಯಬಹುದು.

**''ಪುರಾಣೇ ದಶಭಿರ್ವಿಪ್ರಾಃ ಪ್ರೋಕ್ತಃ ಶಂಭುಸ್ತಥೈವ ಚ ।**
**ಚತುರ್ಭಿಃ ಭಗವಾನ್ ವಿಷ್ಣುಃ ದ್ವಾಭ್ಯಾಂ ಬ್ರಹ್ಮಾ ಪ್ರಕೀರ್ತಿತಃ ॥**
**ಅಗ್ನಿರೇಕೇನ ವಿಪ್ರೇಂದ್ರಾಃ ತಥೈಕೇನ ದಿವಾಕರಃ ।**

ಎಂದು ಹೇಳಲಾಗಿದೆ. ಈ ಲಿಂಗಪುರಾಣದಲ್ಲಿ ಮಹಾದೇವರ ಈಶಾನ, ಅಘೋರ, ವಾಮದೇವ, ತತ್‌ಪುರುಷ, ಜಾತವೇದ ಎಂಬ ಪಂಚ ರೂಪಗಳ ಪ್ರಾಧಾನ್ಯ ಹಾಗು ಪ್ರಕರ್ಷ ಉತ್ಕರ್ಷಗಳನ್ನು ಬಗೆ ಬಗೆಯಿಂದ ಪ್ರಮಾಣ, ದೃಷ್ಟಾಂತ ಉಪದೇಶಗಳ ಮುಖಾಂತರ ಹೇಳಲಾಗಿದೆ. ಈ ಲಿಂಗ ಪುರಾಣವು ತಾಮಸ ಪುರಾಣಗಳಲ್ಲಿ ಪರಿಗಣಿತವಾಗಿದ್ದರೂ

ಇದರಷ್ಟು ಶಿವಸರ್ವೋತ್ತಮತ್ವವನ್ನೂ ಜಗಜ್ಜನ್ಮಾದಿಕಾರಣತ್ವವನ್ನೂ ಯಾವ ಪುರಾಣವೂ ಇಷ್ಟು ಉತ್ಕಷ್ಟವಾಗಿ ವರ್ಣಿಸುವದಿಲ್ಲ. ಮತ್ತು ಇದರಲ್ಲಿ ವಿಷ್ಣು ಮೊದಲಾದ ಇತರ ದೇವತೆಗಳ ನಿಂದೆಯು ಎಲ್ಲಿಯೂ ಕಂಡು ಬರುವದಿಲ್ಲ.

ಲಿಂಗಾಕಾರವಾದ ಪರಶಿವನ ಪ್ರತೀಕವನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡು ಅದಕ್ಕೆ ಪರಬ್ರಹ್ಮತ್ವವನ್ನೂ ಪ್ರಪಂಚದ ಸೃಷ್ಟಿ ಪಾಲನ, ಸಂಹಾರಕರ್ತೃತ್ವವನ್ನೂ ಸರ್ವದೇವೋತ್ತಮತ್ವವನ್ನೂ ಪ್ರತಿಪಾದಿಸಲಾಗುತ್ತದೆ. ಈ ಲಿಂಗ ಪುರಾಣವು ಶಿವ ಭಕ್ತರಿಗೆ ಅತ್ಯಂತ ಉಪಾದೇಯವೂ ಪ್ರಮಾಣತಮವೂ ಪಠನೀಯವೂ, ಮಾನನೀಯವೂ, ಮನನೀಯವೂ ಆಗಿರುತ್ತವೆ. ಶಿವೋಪಾಸಕರು ವಿಷ್ಣು ಉಪಾಸಕರಾದ ಭಕ್ತರಿಗಿಂತ ಅತಿ ಶ್ರೇಷ್ಠರು ಎಂದು ಬಗೆಬಗೆಯಿಂದ ಈ ಪುರಾಣದಲ್ಲಿ ಸಾರಿ ಸಾರಿ ಹೇಳಲಾಗಿದೆ. ಈ ಲಿಂಗ ಪುರಾಣದ ಪೂರ್ವಾರ್ಧದಲ್ಲಿ ಹದಿನೇಳು ಹಾಗು ಹದಿನೆಂಟನೇಯ ಅಧ್ಯಾಯಗಳಲ್ಲಿ ವಿಷ್ಣು ಮಾಡಿದ ಶಿವ ಸ್ತೋತ್ರವು ಶಿವ ಭಕ್ತರಾದ ಶೈವರೆಲ್ಲರೂ ಪ್ರತಿದಿನ ಪಾರಾಯಣ ಮಾಡಲು ಯೋಗ್ಯವಾಗಿದೆ. ಅಕ್ಷರಸ್ವರೂಪನೂ, ಅರ್ಧನಾರೀಶ್ವರನೂ ಆದ ಶಿವನಿಗೆ ಹರಿಯು ನಮಸ್ಕರಿಸಿದನು. ಓಂಕಾರದಿಂದ ಕೂಡಿದ ಪಂಚಮಹಾಮಂತ್ರಗಳನ್ನು ಜಪ ಮಾಡಿದನು ಎಂದು ಹೇಳಲಾಗಿದೆ.

**ವಿಷ್ಣುವಿನಿಂದ ಉಕ್ತವಾದ ಓಂಕಾರಾರ್ಥಕ ಶಿವಸ್ತೋತ್ರ**

**''ಏಕಾಕ್ಷರಾಯ ರುದ್ರಾಯ ಅಕಾರಾಯ ಆತ್ಮರೂಪಿಣೇ ।**
**ಉಕಾರಾಯ ಆದಿದೇವಾಯ ವಿದ್ಯಾದೇವಾಯ ವೈ ನಮಃ ॥**
**ತೃತೀಯಾಯ ಮಕಾರಾಯ ಶಿವಾಯ ಪರಮಾತ್ಮನೇ**
**ಸೂರ್ಯಾಗ್ನಿ ಸೋಮವರ್ಣಾಯ ಯಜಮಾನಾಯ ವೈ ನಮಃ''**

ಎಂದು ಮುಂತಾಗಿ ಮಹಾದೇವನ ಮಹಾ ಮಹಿಮೆಯನ್ನು ಮಹಾವಿಷ್ಣುವು ಅಷ್ಟೇ ಮಾರ್ಮಿಕವಾಗಿ ಹಾಗೂ ಧಾರ್ಮಿಕವಾಗಿ ನಮಿಸಿ ಸ್ತುತಿಸಿದ್ದಾನೆ ಇದರಲ್ಲಿ ಓಂಕಾರದ ಅಕಾರ, ಉಕಾರ, ಮಕಾರಗಳಿಂದ ಶಿವನೇ ಹೇಗೆ ಮುಖ್ಯ ಪ್ರತಿಪಾದ್ಯ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ಈ ಲಿಂಗ ಪುರಾಣದಲ್ಲಿ ಇರುವ ಹನ್ನೊಂದು ಸಾವಿರ ಪದ್ಯಗಳಿಂದ ಪರಮೇಶ್ವರನ ಪಾರಮ್ಯವನ್ನು ಮನಂಬುಗುವ ರೀತಿಯಲ್ಲಿ ಸದೃಷ್ಟಾಂತವಾಗಿ ಸಂಯುಕ್ತಿಕವಾಗಿ ನಿರೂಪಿಸಲಾಗಿದೆ. ಈ ಲಿಂಗಪುರಾಣವನ್ನು ಅಗ್ನಿ ಲಿಂಗದ ಮಧ್ಯದಲ್ಲಿ ನಿಂತು ಸಾಕ್ಷಾತ್ ಮಹೇಶ್ವರನೇ ಆಗ್ನೇಯ ಕಲ್ಪಾನುಸಾರವಾಗಿ ನಿರೂಪಿಸಿದ್ದಾನೆ. ಎಂದು ಮತ್ಸ್ಯಪುರಾಣದಲ್ಲಿ

**''ಯತ್ರಾಗ್ನಿ ಲಿಂಗ ಮಧ್ಯಸ್ಥಃ ಪ್ರಾಹ ದೇವೋ ಮಹೇಶ್ವರಃ**
**ಧರ್ಮಾರ್ಥ ಕಾಮ ಮೋಕ್ಷಾರ್ಥಂ ಆಗ್ನೇಯಮಧಿಕೃತ್ಯ ಚ ।**
**ಲಿಂಗಾಭಿದೇ ತಿಷ್ಠನ್ ವಹ್ನಿಲಿಂಗೇ ಹರೋಽಭ್ಯಧಾತ್**
**ಶ್ರಣು ಕೃತ್ಸ್ನಂ ಪ್ರವಕ್ಷ್ಯಾಮಿ ಪುರಾಣಂ ಲಿಂಗ ಸಂಜ್ಞಿತಂ'' ॥**

ಅಗ್ನಿಮಯವಾದ ಲಿಂಗದ ನಟ್ಟ ನಡುವೆ ನಿಂತು ಆ ಮಹಾದೇವನೇ ಧರ್ಮ. ಅರ್ಥ. ಕಾಮ ಹಾಗೂ ಮೋಕ್ಷ ಈ ನಾಲ್ಕು ಪುರುಷಾರ್ಥಗಳನ್ನು ಕೊಡುವ ಈ ಲಿಂಗ ಪುರಾಣವನ್ನು ಆಗ್ನೇಯ ಕಲ್ಪಕ್ಕೆ ಅನುಸಾರವಾಗಿ ಹೇಳಿದ್ದಾನೆ ಎಂದು ಮತ್ಸ್ಯ ಪುರಾಣ ಹಾಗೂ ನಾರದ

ಪುರಾಣಗಳಲ್ಲಿ ಹೇಳಲಾಗಿದೆ. ಆದರೆ ಪ್ರಕೃತ ಲಿಂಗಪುರಾಣದಲ್ಲಿ ಮಾತ್ರ

**''ಈಶಾನ ಕಲ್ಪವೃತ್ತಾಂತಮಧಿಕೃತ್ಯ ಮಹಾತ್ಮನಾ**
**ಬ್ರಹ್ಮಣಾ ಕಲ್ಪಿತಂ ಪೂರ್ವಂ ಪುರಾಣಂ ಲೈಂಗ ಮುತ್ತಮಮ್**

ಎಂದು ಬ್ರಹ್ಮನು ಈಶಾನ ಕಲ್ಪದ ವೃತ್ತಾಂತವನ್ನು ಆಧರಿಸಿ ಈ ಲಿಂಗ ಪುರಾಣವನ್ನು ರಚಿಸಿದ್ದಾನೆ ಎಂದು ಕಾಣಿಸಲಾಗಿದೆ. ಅಗ್ನಿ ಕಲ್ಪದಲ್ಲಿ ಅಗ್ನಿ ಮಧ್ಯಸ್ಥನಾದ ಲಿಂಗಾತ್ಮಕನಾದ ಪರಮೇಶ್ವರನಿಂದ ಹೇಳಲ್ಪಟ್ಟ ಲಿಂಗ ಪುರಾಣಕ್ಕೂ ಈಗ ಪ್ರಚಲಿತವಿದ್ದ ಬ್ರಹ್ಮ ಪ್ರೋಕ್ತವಾದ ಈಶಾನ ಕಲ್ಪದ ಪುರಾಣಕ್ಕೂ ಕಲ್ಪಭೇದದ ಹೊರತು ಬೇರೆ ಯಾವ ವ್ಯತ್ಯಾಸವೂ ಕಂಡುಬರುವದಿಲ್ಲ. ಪ್ರಕೃತ ಲಿಂಗಮಹಾಪುರಾಣವು ಪರಮೇಶ್ವರನ ಸರ್ವಶ್ರೇಷ್ಠತ್ವವನ್ನೂ ಬ್ರಹ್ಮ, ವಿಷ್ಣು ಮೊದಲಾದ ಶ್ರೇಷ್ಠಾತಿಶ್ರೇಷ್ಠ ದೇವತೆಗಳಿಗಿಂತ ಹೆಚ್ಚಿನ ಕರ್ತೃತ್ವಾದಿಗಳನ್ನೂ ಖಚಿತೋಚಿತವಾಗಿ ಪ್ರತಿಪಾದಿಸುತ್ತದೆ. ಲೋಕೋದ್ಧಾರಕ್ಕಾಗಿ ವಿಷ್ಣುವು ಹತ್ತು ಅವತಾರಗಳನ್ನು ಅವು ಸಾಲದೆ ಬೇರೆ ಬೇರೆ ಪುರಾಣಗಳಲ್ಲಿ ಇಪ್ಪತ್ನಾಲ್ಕು ಅವತಾರಗಳನ್ನು ಎತ್ತಿದ್ದಾನೆಂದು ವರ್ಣಿಸಿದರೆ ಲಿಂಗಪುರಾಣದಲ್ಲಿ ಶಿವನಿಗೆ ಇಪ್ಪತ್ತೆಂಟು ಅವತಾರ ಎತ್ತಿದ್ದನ್ನು ಬಣ್ಣಿಸಲಾಗಿದೆ.

ಈ ಲಿಂಗಮಹಾಪುರಾಣವು ಎಲ್ಲ ದೈವ ಉಪಸಾಕರಿಗೂ, ಆಸ್ತಿಕರಿಗೂ, ಅತ್ಯಂತ ಉಪದೇಯವಾದ ಗ್ರಂಥವಾಗಿದೆ. ಕಲ್ಪಭೇದದ ಹೊರತಾಗಿ ಮತ್ಸ್ಯ, ಸ್ಕಂದ, ನಾರದಾದಿ ಪುರಾಣಗಳಲ್ಲಿ ಹೇಳಿದ ಆಗ್ನೇಯ ಕಲ್ಪದ ಶಿವಪ್ರೋಕ್ತವಾದ ಲಿಂಗಪುರಾಣಕ್ಕೂ ಈಗ ಉಪಲಬ್ಧವಿದ್ದ ಈಶಾನ ಕಲ್ಪದ ಬ್ರಹ್ಮಪ್ರೋಕ್ತವಾದ ಲಿಂಗಪುರಾಣಕ್ಕೂ ಹೆಚ್ಚಿನ ವೈಲಕ್ಷಣ್ಯವು ಇಲ್ಲ ಎಂದು ವಿಲ್‌ಸನ್ ಮೊದಲಾದ ಪಾಶ್ಚಾತ್ಯ ವಿಮರ್ಶಕರೂ ಪ್ರೊ॥ ಹಜರಾ, ರಾಜೇಂದ್ರ, ವಿಷ್ಣುಮೂರ್ತಿ, ಮೊದಲಾದ ಭಾರತೀಯ ಸಂಶೋಧಕರೂ ಅಭಿಪ್ರಾಯ ಪಟ್ಟಿದ್ದಾರೆ.

ಈ ಲಿಂಗಪುರಾಣವು ಪೂರ್ವಾರ್ಧ ಹಾಗೂ ಉತ್ತರಾರ್ಧ ಎಂದು ಎರಡು ಭಾಗವುಳ್ಳದಾಗಿದೆ. ಇದರಲ್ಲಿ ಮುಖ್ಯವಾಗಿ ಯೋಗಮಾರ್ಗ, ಮೂರ್ತಿಪೂಜೆ, ಶೈವದೀಕ್ಷೆ, ಶೈವ ಮಂತ್ರ, ಶಿವಮಹಾತ್ಮೆ ಮುಂತಾದ ಶಿವಭಕ್ತರಿಗೆ ಅತ್ಯಂತ ಉಪಯುಕ್ತವಾದ ಅನೇಕ ವಿಷಯಗಳನ್ನು ನಿರೂಪಣೆ ಮಾಡಲಾಗಿದೆ. ಇದರಲ್ಲಿ ಬ್ರಹ್ಮಾಂಡ ರೂಪವಾದ ಲಿಂಗದಿಂದಲೇ ಜಗತ್ತಿನ ಉತ್ಪತ್ತಿಯಾಗಿರುತ್ತದೆ ಎಂದು ಹೇಳಲಾಗಿದೆ.

**''ತದೇವಂ ವ್ಯಾಸದೇವೇನ ಭಾಗದ್ವಯ ಸಮಾಚಿತಂ ।**
**ಪುರಾಣಂ ಲಿಂಗಮುದಿತಂ ಬಹ್ವಾಖ್ಯಾನ ವಿಚಿಂತಿತಂ ॥**
**ತದೇಕಾದಶ ಸಾಹಸ್ರಂ ಹರಮಹಾತ್ಮ್ಯ ಸೂಚಕಂ ।**
**ಪರಂ ಸರ್ವಪುರಾಣಾನಾಂ ಸಾರಭೂತಂ ಜಗತ್ರ್ಯಯೇ ॥**

ಹೀಗೆ ಮತ್ಸ್ಯಪುರಾಣದಲ್ಲಿ ೧೦೨ನೇ ಅಧ್ಯಾಯದಲ್ಲಿ ಈ ಲಿಂಗಪುರಾಣವು ಎಲ್ಲ ಪುರಾಣಗಳಿಗಿಂತಲೂ ಶ್ರೇಷ್ಠವಾಗಿದೆ ಮತ್ತು ಇದು ಸರ್ವಪುರಾಣಗಳ ಸಾರವಾಗಿದೆ. ಇದರಲ್ಲಿ ಬಹುವಿಧವಾದ ಆಖ್ಯಾನ ಮತ್ತು ಉಪಾಖ್ಯಾನಗಳು ರಚಿಸಲ್ಪಟ್ಟಿವೆ. **''ಲಿಂಗಸ್ಯ ಚರಿತೋಕ್ತತ್ವಾತ್ ಪುರಾಣಂ ಲಿಂಗ ಮುಚ್ಯತೇ''** ಲಿಂಗ ರೂಪವಾದ ಪರಮೇಶ್ವರನ ಚರಿತ್ರವನ್ನು ಇಲ್ಲಿ ಹೇಳಿದ್ದರಿಂದ ಲಿಂಗಮಹಾಪುರಾಣ ಎಂದು ಇದಕ್ಕೆ ಹೆಸರುಬಂದಿದೆ ಎಂದು ಈ ಪುರಾಣದ 'ಲಿಂಗ ಪುರಾಣ' ಎಂಬ ಹೆಸರಿನ ಕಾರಣವನ್ನು ತಿಳಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಬ್ರಹ್ಮಾಂಡ ರೂಪವಾದ ಲಿಂಗದ ಉತ್ಪತ್ತಿ

ಆದದ್ದರಿಂದ ಈ ಬ್ರಹ್ಮಾಂಡಕ್ಕೇ ಲಿಂಗ ಎಂದು ಕರೆದಿದ್ದಾರೆ. ಅಲಿಂಗ ಎಂದರೆ ನಿರ್ಗುಣನಾದ ಶಿವ. ಅವನೇ ಈ ಲಿಂಗಕ್ಕೆ ಮೂಲ. ಅವ್ಯಕ್ತವಾದ ಪ್ರಕೃತಿಯೇ ಲಿಂಗ. ನಿರ್ಗುಣ, ಸತ್ಯ, ಶಾಶ್ವತ, ಅಕ್ಷಯತ್ವ, ನಿತ್ಯತ್ವಗಳು ಅಲಿಂಗನಾದ ಶಿವನ ಲಕ್ಷಣವಾಗಿವೆ. ಆ ಅಲಿಂಗದಿಂದ ಲಿಂಗದ ಉತ್ಪತ್ತಿಯಾಯಿತು. ಮಾಯೆಯ ಯೋಗದಿಂದ ಆ ಲಿಂಗದ ಇಪ್ಪತ್ತು ಪ್ರಕಾರಗಳು ಉಂಟಾದವು. ಅವುಗಳಲ್ಲಿ ಶಿವಾತ್ಮಕವಾದ ಮೂರು ಪ್ರಕಾರಗಳು ಪ್ರಧಾನ ದೇವತೆಗಳಾದವು. ಆ ಮೂರು ಹರಿ, ಹರ, ಬ್ರಹ್ಮ ಎಂಬ ತ್ರಿಮೂರ್ತಿ ದೇವತೆಗಳೇ ಜಗತ್ತಿನ ಉತ್ಪತ್ತಿ, ಸ್ಥಿತಿ ಮತ್ತು ಲಯ ಮೂರು ಕಾರ್ಯಗಳ ಕರ್ತೃಗಳಾಗಿದ್ದಾರೆ. ಶಿವನು ಸ್ವಭಾವತಃ ನಿತ್ಯ, ಬುದ್ಧ, ಶುದ್ಧವಾದ ಪರಬ್ರಹ್ಮ ಸ್ವರೂಪನಾಗಿದ್ದಾನೆ. ಅವನೇ ಈ ಜಗತ್ತಿಗೆಲ್ಲ ಮುಖ್ಯ ಕಾರಣ. ಆ ಶಿವನು ಪ್ರಕೃತಿಯ ಕಡೆಗೆ ನೋಡಿದನು. ತಕ್ಷಣದಲ್ಲಿಯೇ ಅದು ಶೈವೀ ಆಯಿತು. ಅದು ಮೊದಲು ಅವ್ಯಕ್ತವಾಗಿದ್ದಿತು. ಸೃಷ್ಟಿಯ ಪ್ರಾರಂಭದಲ್ಲಿ ಅದು ಗುಣಯುಕ್ತವಾಯಿತು.

ಮುಂದೆ ಬ್ರಹ್ಮಾಂಡ ಹಾಗೂ ಬ್ರಹ್ಮಾಂಡ ರೂಪಿ ಲಿಂಗದ ಉತ್ಪತ್ತಿಯನ್ನು ಹೇಳಿ ಬ್ರಹ್ಮ ದೇವನ ಕಾಲಗಣನೆಯನ್ನು ಹೇಳಲಾಗಿದೆ. ಬಳಿಕ ಅಷ್ಟಾಂಗಯೋಗದ ವರ್ಣನೆಯನ್ನು ಮಾಡುತ್ತ ಆ ಯೋಗಮಾರ್ಗದಿಂದಲೇ ಶಿವನಕೃಪೆ ಲಭ್ಯವಾಗುತ್ತದೆ. ಆ ಶಿವನ ಕೃಪೆಯಿಂದಲೇ ದುರ್ಲಭವಾದ ಮೋಕ್ಷವು ಲಭ್ಯವಾಗುತ್ತದೆ. ಈ ಮೋಕ್ಷವೆಂದರೆ ಶಿವಸ್ಥಾನ ಎಂದೇ ಅಭಿಪ್ರಾಯ. ಆ ಸ್ಥಾನದ ಪ್ರಾಪ್ತಿಯು ದಿವ್ಯಜ್ಞಾನದಿಂದಲೇ ಆಗುತ್ತದೆ. ಅಂಥ ಜ್ಞಾನಕ್ಕಾಗಿ ಇಂದ್ರಿಯನಿಗ್ರಹ ಮತ್ತು ಶಿವನ ಆರಾಧನೆ ಶಿವನ ಆರಾಧನೆ ಹಾಗೂ ಶಿವನ ಉಪಾಸನೆಯು ಅತ್ಯಂತ ಆವಶ್ಯಕ ಮತ್ತು ಅನಿವಾರ್ಯ. ಅದರಿಂದಲೇ ಸರ್ವಪಾಪ ಕ್ಷಯವಾಗಿ ಶಿವನಿರ್ವಾಣವು ಪ್ರಾಪ್ತವಾಗುತ್ತವೆ. ಪೂರ್ವಾರ್ಧದಲ್ಲಿ ಲಿಂಗಾರ್ಚನೆಯ ವಿಧಿಯನ್ನು ಸೂಕ್ಷ್ಮವಾಗಿ ಹಾಗು ವಿಸ್ತಾರವಾಗಿ ನಿರೂಪಿಸಲಾಗಿದೆ.

ಈ ಶಿವಪುರಾಣದಲ್ಲಿ ನಾನಾವಿಧವಾದ ವ್ರತಗಳು, ದಾನ, ಧರ್ಮಗಳು, ಶ್ರಾದ್ಧಾದಿ ವಿಧಿ ವಿಧಾನಗಳು, ಶೌಚ, ಅಶೌಚ, ನಿಯಮ, ನಿಷ್ಠೆ ಮೊದಲಾದ ಧರ್ಮಶಾಸ್ತ್ರಗಳಲ್ಲಿ ಉಕ್ತವಾದ ವಿಷಯಗಳ ಪರ್ಯಾಪ್ತವಾದ ವರ್ಣನೆಯು ಇರುತ್ತದೆ. ಈ ಪುರಾಣವನ್ನು ಭಕ್ತಿಯಿಂದ ಪಾರಾಯಣ ಮಾಡಬೇಕು. ಇದು ಸರ್ವಪಾಪ ಪರಿಹಾರಕವಾಗಿದೆ.

**ಯಃಪಠೇಚ್ಛೃಣುಯಾದ್ವಾಪಿ ಲೈಙ್ಗಂ ಪಾಪಾಪಹಂ ನರಃ ।**
**ಸ ಭುಕ್ತಭೋಗೋ ಲೋಕೇಽಸ್ಮಿನ್ನಂತೇ ಶಿವಪುರಂ ವ್ರಜೇತ್ ॥**

**ಲಿಂಗಾನುಕ್ರಮಣೀಮೇತಾಂ ಪಠೇದ್ಯಃ ಶ್ರೃಣುಯಾತ್ತಥಾ ।**
**ತಾವುಭೌ ಶಿವಭಕ್ತೌ ತು ಲೋಕದ್ವಿತಯಭೋಗಿನೌ ।**
**ಜಾಯೇತಾಂ ಗಿರಿಜಾಭರ್ತುಃ ಪ್ರಸಾದಾನ್ನಾತ್ರ ಸಂಶಯಃ ॥**

ಪಾಪಪರಿಹಾರಕವಾದ ಈ ಲಿಂಗಮಹಾಪುರಾಣವನ್ನು ಪಠಿಸಿ-ಶ್ರವಣಮಾಡಿದ ಭಕ್ತನು ಈ ಲೋಕದಲ್ಲಿ ಸರ್ವಸಂತೃಪ್ತಿಯನ್ನು ಅನುಭವಿಸಿ ಶಿವಸಾಯುಜ್ಯ ಹೊಂದುತ್ತಾನೆ. ಈ ಪುರಾಣವನ್ನು ಫಾಲ್ಗುಣ ಮಾಸ ಹುಣ್ಣಿಮೆಯ ದಿನದಂದು ಶಿವಭಕ್ತನಿಗೆ ತಿಲಧೇನು ಸಹಿತವಾಗಿ ದಾನ ಮಾಡಿದವರು ಪಾರ್ವತೀ ಪರಮೇಶ್ವರರ ಅನುಗ್ರಹಕ್ಕೆ ಪಾತ್ರರಾಗುತ್ತಾರೆ.

## ಗಣೇಶಪುರಾಣದ ಪ್ರಸ್ತಾವನೆ

ಮಂಗಳಮೂರ್ತಿಯಾದ ಗಜಾನನನು ವೇದ ಪುರಾಣ ಪ್ರತಿಪಾದ್ಯನೆಂದು ವಿದ್ವಾಂಸರ ಅಭಿಪ್ರಾಯ, ಋಗ್ವೇದದ ಹತ್ತನೆಯ ಮಂಡಲದಲ್ಲಿ

**''ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಮ್ ಕವೀನಾಂ ನ ಋತೇ ತ್ವತ್ ಕ್ರಿಯತೇ ಕಿಂಚನಾರೇ''**

**'ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮ್'**
**'ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ'**

**'ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ**
**ತ್ವಂ ನ್ನೋ ದಂತೀ ಪ್ರಚೋದಯಾತ್'**
**'ತತ್ ಕರಟಾಯ ವಿದ್ಮಹೇ, ಹಸ್ತಿ ಮುಖಾಯ ಧೀಮಹಿ,**
**ತ್ವಂ ನೋ ದಂತಿಃ ಪ್ರಚೋದಯಾತ್'**

**''ಗಣಾನಾಂ ತ್ವಾ ಗಣಪತಿಂ ಹವಾಮಹೇ**
**ಪ್ರಿಯಾನಾಂ ತ್ವಾ ಪ್ರಿಯಪತಿಂ ಹವಾಮಹೇ**
**ನಿಧೀನಾಂ ತ್ವಾ ನಿಧಿಪತಿಂ ಹವಾಮಹೇ**

ಹೀಗೆ ಪ್ರಾಯಃ ನಾಲ್ಕೂ ವೇದಗಳಲ್ಲಿಯೂ ಗಣೇಶನ ಉಲ್ಲೇಖವೂ ವರ್ಣನೆಯೂ ಕಂಡು ಬರುತ್ತದೆ. ಇದರಂತೆ ಬೇರೆ ಬೇರೆ ಪುರಾಣಗಳಲ್ಲಿ ಗಣೇಶನ ಲೀಲಾ ವೈಭವಗಳ ವರ್ಣನೆಯು ಕಂಡು ಬರುತ್ತದೆ.

### ಪದ್ಮಪುರಾಣದಲ್ಲಿ ಗಣೇಶ

ಪಾರ್ವತಿಯು ಸುಗಂಧಿ ತೈಲ ಮತ್ತು ಸ್ನಾನ ಚೂರ್ಣಗಳಿಂದ ಅಭ್ಯಂಗ ಸ್ನಾನ ಮಾಡುವಾಗ ತನ್ನ ಮೈಯನ್ನು ಉಜ್ಜಿ ತೆಗೆದ ಮಣ್ಣಿನಿಂದ ಒಂದು ಪುರುಷಾಕೃತಿಯನ್ನು ತಯಾರು ಮಾಡಿದಳು. ಆನೆಯಂತೆ ಮುಖವಿರುವ ಆ ಪುರುಷಾಕೃತಿಯನ್ನು ಗಂಗೆಯಲ್ಲಿ ತೇಲಿ ಬಿಟ್ಟಳು. ನೀರಿನಲ್ಲಿ ಬಿದ್ದಕೂಡಲೆ ಅದು ವಿಶಾಲ ದೇಹವುಳ್ಳದ್ದಾಯಿತು. ಪಾರ್ವತಿಯು ಅದನ್ನು ತನ್ನ ಪುತ್ರ ಎಂದು ಕರೆದಳು. ಗಂಗೆಯೂ ಕೂಡ ಅದನ್ನು 'ಪುತ್ರನೇ ಎಂದು ಸಂಬೋಧಿಸಿದಳು. ದೇವತೆಗಳು ಅವನಿಗೆ 'ಗಾಂಗೇಯ' ಎಂದು ನಾಮಕರಣ ಮಾಡಿ ಸನ್ಮಾನ ಮಾಡಿದರು. ಬ್ರಹ್ಮದೇವರು ಅವನಿಗೆ ಗಣಗಳ ಅಧಿಪತ್ಯವನ್ನು ಪ್ರದಾನ ಮಾಡಿದರು. ಪದ್ಮಪುರಾಣದ ಸೃಷ್ಟಿಖಂಡದಲ್ಲಿ ಗಣೇಶನ ಪ್ರಾದುರ್ಭಾವದ ಮಂಗಳಮಯ ಈ ಕಥೆ ಬಂದಿದೆ.

### ಲಿಂಗ ಪುರಾಣದಲ್ಲಿ ಗಣಪತಿ

ದೇವತೆಗಳೆಲ್ಲರೂ ಹೋಗಿ ಮಹಾದೇವನ ಬಳಿಗೆ ಬಂದು ಬಿನ್ನಹ ಮಾಡಿಕೊಂಡರು. ''ಕರುಣಾ ಸಮುದ್ರನಾದ ಮಹಾಪ್ರಭು, ದೇವತೆಗಳ ಶತ್ರುಗಳಾದ ದೈತ್ಯರು ನಿನ್ನನ್ನು ಕುರಿತು ತಪಸ್ಸು ಮಾಡುತ್ತಾರೆ. ನೀನು ಅವರಿಗೆ ಬೇಡಿದ ವರವನ್ನು ಕೊಡುತ್ತಿ. ಅವರು ಅದರಿಂದ ಅವರು ಉನ್ನತ್ತರಾಗಿ ನಮ್ಮನ್ನು ಕಾಡಿಸಿ ಪೀಡಿಸುತ್ತಾರೆ. ಆದುದರಿಂದ ನಮಗೆ ದಯಮಾಡಿ ದೈತ್ಯರು ಮಾಡುವ ಪುಣ್ಯ ಕರ್ಮಗಳಿಗೆಲ್ಲ ವಿಘ್ನವನ್ನು ತಂದು ಅವರ ಕರ್ಮಗಳನ್ನು ನಿಷ್ಫಲವಾಗುವಂತೆ ಮಾಡು.''

ಮಹಾದೇವರು 'ತಥಾಸ್ತು' ಎಂದು ಹೇಳಿದ. ಕೂಡಲೇ ಪಾರ್ವತಿಯ ಎದುರಿಗೆ ಅತ್ಯಂತ ತೇಜಸ್ವಿಯಾದ ಮತ್ತು ಆನೆಯಂತೆ ಮುಖವಿರುವ ಒಬ್ಬ ಬಾಲಕನು ಪ್ರಕಟನಾದನು. ಅವನ ಒಂದು ಕೈಯಲ್ಲಿ ತ್ರಿಶೂಲ ಹಾಗೂ ಮತ್ತೊಂದು ಕೈಯಲ್ಲಿ ಪಾಶ ಇದ್ದವು. ಆಗ ಮಹಾದೇವನು ತನ್ನ ಪತ್ನಿ ಪಾರ್ವತಿಗೆ ಹೇಳಿ ಆ ಮಗುವನ್ನು ಕರೆದುಕೊಂಡು ಅದನ್ನು ಅಲಂಕಾರ ಮಾಡಿಸಿ ತನ್ನ ತೊಡೆಯ ಮೇಲೆ ಕೂಡಿಸಿಕೊಂಡನು. ಆಗ ಪರಮೇಶ್ವರನು ''ಪುತ್ರ ಗಣೇಶ, ನಿನ್ನ ಅವತಾರವು ದೈತ್ಯರ ನಾಶ ಮತ್ತು ದೇವ ಬ್ರಾಹ್ಮಣರಿಗೆ ಉಪಕಾರ ಮಾಡಲಿಕ್ಕೆ ಆಗಿರುತ್ತದೆ. ಈ ಪೃಥ್ವೀ ಮಂಡಳದಲ್ಲಿ ದಕ್ಷಿಣೆ ಇಲ್ಲದೆ ದಾನ ಮತ್ತು ಯಜ್ಞ, ಧರ್ಮ ಕರ್ಮಗಳನ್ನು ಮಾಡುವವರ ಕಾರ್ಯಕಲಾಪಗಳಲ್ಲಿ ನೀನು ವಿಘ್ನಗಳನ್ನು ತಂದು ಒಡ್ಡು. ಅವರು ಸ್ವರ್ಗಕ್ಕೆ ಹೋಗದಂತೆ ಮಾಡು. ವಿಧಿ ಪೂರ್ವಕವಾಗಿ ನಿನ್ನ ಪೂಜೆಯನ್ನು ಮಾಡುವ ಹಾಗೂ ಲೋಕೋಪಕಾರ ಮಾಡುವ ಜನರಿಗೆ ಬರುವ ವಿಘ್ನಗಳನ್ನು ದೂರ ಮಾಡು. ಯಾರು ಬ್ರಹ್ಮ, ವಿಷ್ಣು ಮತ್ತು ಶಿವ ಮುಂತಾದ ದೇವತೆಗಳ ಉಪಾಸನೆಯನ್ನು ಮಾಡುವರೋ ಅವರೆಲ್ಲರೂ ಮೊದಲು ಬ್ರಹ್ಮಾದಿ ದೇವತೆಗಳಿಗಿಂತ ಮೊದಲು ನಿನ್ನ ಪೂಜೆಯನ್ನೇ ಮಾಡಲಿ. ಮೊದಲು ನಿನ್ನ ಪ್ರಥಮ ಪೂಜೆ ಮಾಡದೆ ಮಾಡಿದ ಶ್ರೌತ, ಸ್ಮಾರ್ತ ಅಥವಾ ಯಾವದೇ ತರಹದ ಕಾರ್ಯಗಳೆಲ್ಲವೂ ಅಮಂಗಲ ಅಧರ್ಮಗಳಲ್ಲಿ ಪರಿಣತವಾಗಲಿ'' ಎಂದು ಹೇಳಿದರು. ಅಂದಿನಿಂದ ಗಣೇಶನು ದೈತ್ಯರ ಕಾರ್ಯದಲ್ಲಿ ವಿಘ್ನಗಳನ್ನು ತಂದು ಒಡ್ಡಿದನು. ಅದಕ್ಕಾಗಿ ಅವನಿಗೆ 'ವಿಘ್ನೇಶ್ವರ' ಎಂದು ಹೆಸರು ಬಂದಿತು.

## ಬ್ರಹ್ಮವೈವರ್ತ ಪುರಾಣದಲ್ಲಿ ಗಣಪತಿ

ಒಂದು ದಿನ ಶ್ರೀಕೃಷ್ಣನು ವೃದ್ಧ ಬ್ರಾಹ್ಮಣ ರೂಪದಿಂದ ಪಾರ್ವತಿಯ ಬಳಿಗೆ ಬಂದು ''ದೇವಿ, ಗಣೇಶ ರೂಪಿಯಾದ ಶ್ರೀಕೃಷ್ಣನು ಕಲ್ಪ ಕಲ್ಪಗಳಲ್ಲಿ ನಿನ್ನ ಮಗನಾಗಿ ಹುಟ್ಟಿಬರುತ್ತಾನೆ. ನಿನ್ನ ತೊಡೆಯಲ್ಲಿ ಆಡುತ್ತಾನೆ'' ಎಂದು ಹೇಳಿದನು. ಅದರಂತೆ ಪಾರ್ವತಿಯ ಶಯ್ಯಾ ಮಂಚದ ಮೇಲೆ ಸಾಕ್ಷಾತ್ ಶ್ರೀಕೃಷ್ಣನೇ ಶಿಶುರೂಪದಿಂದ ಪ್ರಾದುರ್ಭೂತನಾದನು. ಆ ಸುಂದರನಾದ ಕೃಷ್ಣಸ್ವರೂಪಿಯಾದ ಗಜಾನನನ್ನು ನೋಡಲು ಎಲ್ಲ ದೇವತೆಗಳು ಬಂದು ನಮಿಸಿ ಸುತ್ತಿಸಿ ಹೋದರು.

ಒಂದು ದಿನ ಶನಿದೇವನು ಅಲ್ಲಿಗೆ ಬಂದು ಕೆಳಗೆ ಮುಖ ಮಾಡಿಕೊಂಡು ಒಂದು ಮೂಲೆಯಲ್ಲಿ ಕುಳಿತಿದ್ದನು. ಆಗ ಆ ಪಾರ್ವತಿಯು ''ಶನಿಯೇ, ನೀನು ನನ್ನ ಮಗನ ಕಡೆ ಏಕೆ ನೋಡಲಿಲ್ಲ ? ಮುಖ ಕೆಳಗೆ ಹಾಕಿಕೊಂಡು ಏಕೆ ಕುಳಿತಿರುವೆ ?'' ಎಂದು ಕೇಳಿದಳು. ''ತಾಯಿಯೇ, ನನ್ನ ಹೆಂಡತಿಯ ಋತುಕಾಲದಲ್ಲಿ ನಾನು ಬರಲಿಲ್ಲವೆಂದು ಅವಳಿಗೆ ಸಿಟ್ಟು ಬಂದು ನನಗೆ ಶಾಪಕೊಟ್ಟಳು. ''ನಿನ್ನ ದೃಷ್ಟಿ ಯಾರ ಮೇಲೆ ಬೀಳುವದೋ ಅವರಿಗೆ ಅರಿಷ್ಟವಾಗಲಿ'' ಎಂದು. ಆದುದರಿಂದ ನಾನು ಇಲ್ಲಿಗೆ ಬಂದರೂ ನಿನ್ನ ಮಗನ ಕಡೆ ನೋಡುವದಿಲ್ಲ'' ಎಂದು ಹೇಳಿದನು. ಸತೀ ದೇವಿಯು ಮತ್ತೊಮ್ಮೆ ಕರೆದ ಕೂಡಲೇ ಶನಿಯು ಗಣಪತಿಯ ಮೇಲೆ ತನ್ನ ದೃಷ್ಟಿ ಕ್ಷೇಪವನ್ನು ಮಾಡಿದನು. ತತ್ ಕ್ಷಣದಲ್ಲಿಯೇ ಅವನ ತಲೆಯು ಕಡಿದು ಕತ್ತರಿಸಲ್ಪಟ್ಟು ಹಾರಿಹೋಗಿ ಎಲ್ಲಿಯೋ ಬಿದ್ದಿತು. ಆಗ ವಿಷ್ಣುವು ಕೂಡಲೇ ಪುಷ್ಪಭದ್ರಾನದಿಯ ದಂಡೆಯ ಮೇಲೆ ಮಲಗಿರುವ ಒಂದು ಆನೆಯ ಮರಿಯ ಮಸ್ತಕವನ್ನು ಕಡಿದು ತೆಗೆದುಕೊಂಡು ಬಂದು ಆ ಮಗುವಿನ ತಲೆಗೆ ಜೋಡಿಸಿದನು. ಅಂದಿನಿಂದ ಆ ಗಣೇಶನು ಗಜಾನನ ಆದನು.

## ಸ್ಕಂದ ಪುರಾಣದಲ್ಲಿ ಗಣಪತಿ

ಒಂದು ದಿನ ಪಾರ್ವತೀ ದೇವಿಯು ತನ್ನ ಮೈಮೇಲಿನ ಬೆವರು-ಮಣ್ಣಿನಿಂದ ಒಂದು ಮಗುವನ್ನು ಮಾಡಿ ಅದರಲ್ಲಿ ಜೀವತುಂಬಿದಳು. ತನ್ನ ಸ್ನಾನದ ಕೋಣೆಯ ಬಾಗಿಲಲ್ಲಿ ಕೂರಿಸಿದಳು ಮತ್ತು ಅದಕ್ಕೆ ''ನಾನು ಸ್ನಾನ ಮಾಡುತ್ತಿದ್ದೇನೆ, ಯಾರನ್ನೂ ಒಳಗೆ ಬಿಡಬೇಡ'' ಎಂದು ಹೇಳಿದಳು. ಆಗ ಮಹಾದೇವನೇ ಸ್ವತಃ ಪಾರ್ವತಿಯನ್ನು ಕಾಣಲು ಬಂದನು. ಗಣಪತಿಯು ಅವನನ್ನು ತಡೆದನು. ಅವರಿಬ್ಬರ ನಡುವೆ ಘನಘೋರ ಯುದ್ಧವಾಯಿತು. ಶಂಕರನು ಆ ಶಿಶುವಿನ ತಲೆಯನ್ನು ಕಡಿದು ಹಾಕಿದನು. ಆಗ ಪಾರ್ವತಿಯು ಬಹಳ ದುಃಖದಿಂದ ಅಳತೊಡಗಿದಳು. ಅದೇ ವೇಳೆಯಲ್ಲಿ ಗಜಾಸುರ ಎಂಬ ಹೆಸರಿನ ದೈತ್ಯನು ಶಂಕರನ ಜೊತೆಗೆ ಯುದ್ಧ ಮಾಡಲು ಬಂದನು. ಆಗ ತ್ರ್ಯಂಬಕನು ಆ ಗಜಾಸುರನ ತಲೆಯನ್ನು ಕಡಿದು ಈ ಶಿಶುವಿನ ರುಂಡರಹಿತ ದೇಹದ ಮೇಲೆ ಕೂಡಿಸಿದನು. ಅದರಿಂದ ಅವನು ಗಜಾನನನು ಆದನು.

## ಶಿವಪುರಾಣದಲ್ಲಿ ಗಣೇಶನ ಕಥೆ

ಶ್ವೇತ ಕಲ್ಪದಲ್ಲಿ ಶಂಕರನು ತಾನಾಗಿಯೇ ಗಣೇಶನ ಮಸ್ತಕವನ್ನು ಕಡೆದು ಹಾಕಿದನು. ಆ ಕಥೆಯು ಶಿವಪುರಾಣದಲ್ಲಿ ಹೀಗೆ ಉಲ್ಲಿಖಿತವಾಗಿದೆ. ಪಾರ್ವತೀ ದೇವಿಯು ಜಯಾ ಮತ್ತು ವಿಜಯಾ ಎಂಬ ಹೆಸರಿನ ತನ್ನ ಗೆಳತಿಯರ ಸೂಚನೆಯಂತೆ ತನ್ನ ಮೈಮೇಲಿನ ಮಣ್ಣಿನಿಂದ ಒಂದು ಮೂರ್ತಿಯನ್ನು ತಯಾರಿಸಿದಳು. ಅದರಲ್ಲಿ ಜೀವಕಳೆಯನ್ನು ತುಂಬಿ 'ಪುತ್ರಾ' ಎಂದು ಅವನನ್ನು ಕರೆದು ತನ್ನ ಸ್ನಾನಮಂದಿರದ ಬಾಗಿಲಲ್ಲಿ ಕೂರಿಸಿದಳು. ''ನೀನು ನನ್ನ ದ್ವಾರಪಾಲಕನಾಗಿದ್ದು ಯಾರನ್ನೂ ಒಳಗೆ ಬಿಡಬೇಡ'' ಎಂದು ಕಟ್ಟಪ್ಪಣೆ ಮಾಡಿದಳು. ಆಗ ಮಹಾದೇವನೇ ಸ್ವತಃ ಪಾರ್ವತಿಯನ್ನು ಕಾಣಲು ಬಂದನು. ಆದರೆ ಆ ಬಾಲ, ಶಿವನನ್ನು ಒಳಗೆ ಬಿಡದೆ ಬಾಗಿಲಲ್ಲಿಯೇ ತಡೆದು ನಿಲ್ಲಿಸಿದನು. ಆಗ ಶಂಕರನು ಆ ಬಾಲಕನ ಜೊತೆಗೆ ಯುದ್ಧ ಮಾಡಿ ಅವನನ್ನು ಅಲ್ಲಿಂದ ಓಡಿಸಲು ತನ್ನ ಶಿವಗಣಕ್ಕೆ ಆಜ್ಞೆಯಿಟ್ಟನು. ಆ ಯುದ್ಧದಲ್ಲಿ ಗಣೇಶನು ತನ್ನ ಶೌರ್ಯದಿಂದ ಎಲ್ಲರನ್ನೂ ಹೊಡೆದು ಓಡಿಸಿದನು. ಅದರಿಂದ ಕುಪಿತನಾದ ಗೌರೀ ಪತಿಯು ಗಣೇಶನ ತಲೆಯನ್ನು ಕಡಿದು ಹಾಕಿದನು. ಪುತ್ರನ ಶಿರಚ್ಛೇದನದಿಂದ ಕ್ರುದ್ಧಳಾದ ಪಾರ್ವತಿಯು ಸಾವಿರಾರು ಶಕ್ತಿದೇವತೆಯರನ್ನು ಉತ್ಪಾದನೆ ಮಾಡಿ ಅವರಿಗೆ ವಿಶ್ವ ಸಂಹಾರ ಮಾಡಲು ಆಜ್ಞೆ ಮಾಡಿದಳು. ಅದರಂತೆ ಎಲ್ಲ ಕಡೆಗೆ ಹಿಂಸಾ ತಾಂಡವ ನಡೆಯಲು ಋಷಿಗಳು ಭಕ್ತಿಯಿಂದ ವಿಶ್ವದ ರಕ್ಷಣೆಗಾಗಿ ಪ್ರಾರ್ಥಿಸಿದರು. ಆಗ ಅವಳು ''ಶಿವನು ತಲೆ ಕಡೆದು ಹಾಕಿದ ನನ್ನ ಮಗನು ಬದುಕಿ ಬಂದರೆ ಮತ್ತು ಅವನನ್ನು ಸರ್ವಾಧ್ಯಕ್ಷ ಸ್ಥಾನದಲ್ಲಿ ಪಟ್ಟಾಭಿಷೇಕ ಮಾಡಿದರೆ ಮಾತ್ರ ಈ ಸಂಹಾರ ಕಾರ್ಯವನ್ನು ನಿಲ್ಲಿಸಲು ಹೇಳುತ್ತೇನೆ'' ಎಂದಳು. ಆಗ ದೇವತೆಗಳು ಹಾಗೇ ಆಗಲಿ ಎಂದು ಹೋಗಿ ದಾರಿಯಲ್ಲಿ ಒಂದೇ ಕೋರಿ ದಾಡೆಯುಳ್ಳ ಮಲಗಿದ ಆನೆಯ ಮಸ್ತಕವನ್ನು ಕತ್ತರಿಸಿ ತಂದರು. ಅಭಮಂತ್ರಿತ ನೀರಿನಿಂದ ಆ ಆನೆಯ ಮಸ್ತಕವನ್ನು ಸಿಂಚನ ಮಾಡಿ ಆ ಮಗುವಿನ ತಲೆಯ ಸ್ಥಾನದಲ್ಲಿ ಕೂಡಿಸಿ ಜೋಡಿಸಿದರು. ಶಂಕರನ ದಯೆಯಿಂದ ಆ ಹುಡುಗನು ಪುನಃ ಉಜ್ಜೀವಿತನಾಗಿ ಚೈತನ್ಯ ಶಕ್ತಿಯಿಂದ ಪೂರ್ಣನಾಗಿ ಅತ್ಯಂತ ಸುಂದರನಾಗಿ ಶೋಭಿಸಿದನು. ಆಗ ಎಲ್ಲ ದೇವತೆಗಳು ಬ್ರಹ್ಮದೇವರು ಎಲ್ಲರೂ ಕೂಡಿ ಆ ಗಜಮುಖನನ್ನು ಗಣಾಧ್ಯಕ್ಷ

ಸ್ಥಾನದಲ್ಲಿ ಅಭಿಷೇಕ ಮಾಡಿದರು. ಪಾರ್ವತಿಯು ಆನಂದದಿಂದ ಅವನ ತಲೆಯ ಮೇಲೆ ಕೈಯಿಟ್ಟು ''ಪುತ್ರೋಽಯಮಿತಿಮೇ ಪರಃ'' ಇವನು ಸ್ಕಂದನನಂತರ ನನ್ನ ಎರಡನೇಯ ಮಗನು ಎಂದು ಪ್ರೀತಿಯಿಂದ ನುಡಿದಳು. ದೇವತೆಗಳೆಲ್ಲರೂ ಅವನಿಗೆ ಅಗ್ರಪೂಜೆಯ ಮಾನವನ್ನು ಮಾಡಿದರು. ಶಂಕರನು ಅವನಿಗೆ ವಿಘ್ನನಾಶಕನಾಗು ಎಂದು ವರವನ್ನು ಕೊಟ್ಟನು.

## ಗಣಪತಿಯ ವಿವಾಹಲೀಲೆ

ಪಾರ್ವತೀ ಪರಮೇಶ್ವರರು ತಮ್ಮ ಪ್ರೀತಿಯ ಪುತ್ರರಾದ ಸ್ಕಂದ ಹಾಗೂ ಗಣಪತಿಯ ವಿವಾಹ ಮಾಡಬೇಕೆಂದು ಬಯಸಿದರು ಬಡೆದಾಡತೊಡಗಿದರು. ''ನನಗೆ ಮೊದಲು, ನನಗೆ ಮೊದಲು ವಿವಾಹ''ವೆಂದು ಅವರಿಬ್ಬರೂ ಆಗ ಆ ದಂಪತಿಗಳು ನಗುತ್ತ ''ಸಂಪೂರ್ಣ ಪೃಥ್ವಿಯ ಪ್ರದಕ್ಷಿಣೆಯನ್ನು ಮಾಡಿ ಮೊದಲು ಬಂದವರಿಗೆ ಮೊದಲು ಮದುವೆ'' ಎಂದು ಹೇಳಿದರು. ಆಗ ಸ್ಕಂದನು ತನ್ನ ವಾಹನವಾದ ನವಿಲಿನ ಮೇಲೆ ಕುಳಿತು ಮಂದಾರ ಪರ್ವತದಿಂದ ಪೃಥ್ವಿಯ ಪ್ರದಕ್ಷಿಣೆಗೆಂದು ಧಾವಿಸಿ ಹೋದನು.

ಆದರೆ ಗಣಪತಿಯು ಮಾತ್ರ ಎಲ್ಲಿಯೂ ಹೋಗದೆ ತನ್ನ ತಾಯಿ ತಂದೆಗಳಿಗೆ ದಂಡ ಪ್ರಣಾಮವನ್ನು ಹಾಕಿ ಏಳು ಪ್ರದಕ್ಷಣೆ ಹಾಕಿದನು ಮತ್ತು ''ನನ್ನ ಮದುವೆಯನ್ನು ಮೊದಲು ಮಾಡಿರಿ'' ಎಂದು ಹೇಳಿದನು. ಹಾಗೂ ತನ್ನ ಕಾರ್ಯವನ್ನು ಸಮರ್ಥಿಸುತ್ತ ''ತಾಯಿ ತಂದೆಗಳಿಗೆ ಪ್ರದಕ್ಷಿಣೆಯನ್ನು ಮಾಡಿ ನಮಸ್ಕಾರವನ್ನು ಮಾಡಿದರೆ ಅಖಂಡ ಭೂಮಂಡಲ ಪ್ರದಕ್ಷಿಣೆಯನ್ನು ಮಾಡಿದಂತಾಗುತ್ತದೆ'' ಎಂಬ ಪ್ರಮಾಣವಚನವನ್ನು ಉದಾಹರಿಸಿ ತನ್ನ ಮದುವೆ ಮಾಡಬೇಕೆಂದು ತಿಳಿಸಿದನು. ಆಗ ಅವನ ಮಾತನ್ನು ಒಪ್ಪಿ ಸಿದ್ಧಿ ಬುದ್ಧಿ ಎಂಬ ಎರಡು ಕನ್ಯಾಮಣಿಗಳೊಂದಿಗೆ ಪಾರ್ವತೀ ಪರಮೇಶ್ವರರು ಅವನ ಮದುವೆಯನ್ನು ಮಾಡಿದರು.

ಷಣ್ಮುಖನು ಸಂಪೂರ್ಣ ಪೃಥ್ವೀ ಪ್ರದಕ್ಷಿಣೆಯನ್ನು ಮಾಡಿ ತಿರುಗಿ ಬಂದ ಬಳಿಕ ನಾರದರಿಂದ ಅವನಿಗೆ ಎಲ್ಲ ಸಮಾಚಾರ ತಿಳಿಯಿತು. ಅದರಿಂದ ಖಿನ್ನನಾದ ಸ್ಕಂದನು ಕೈಲಾಸ ಪರ್ವತವನ್ನು ಬಿಟ್ಟು ಕ್ರೌಂಚ ಪರ್ವತಕ್ಕೆ ಹೊರಟು ಹೋದನು. ಪುತ್ರ ಸ್ನೇಹದಿಂದ ಮತ್ತು ಅವನ ವಿಯೋಗದಿಂದ ದುಃಖಿತರಾದ ಶಿವಾಶಿವರು ತಾವೂ ಅಲ್ಲಿಗೆ ಹೋಗಿ ಮಲ್ಲಿಕಾರ್ಜುನ ಜ್ಯೋತಿರ್ಲಿಂಗರೂಪದಿಂದ ಅಲ್ಲಿ ಕುಳಿತುಕೊಂಡರು.

## ಗಣೇಶನಿಂದ ಮಹಾಭಾರತ ಲೇಖನ

ಮಹಾಭಾರತ ಎಂಬ ಲಕ್ಷ ಶ್ಲೋಕಾತ್ಮಕವಾದ ಗ್ರಂಥವನ್ನು ಬರೆಯಬೇಕೆಂದು ಸಂಕಲ್ಪ ಮಾಡಿದ ವೇದವ್ಯಾಸಮಹರ್ಷಿಗಳು ಗಣಪತಿಯನ್ನು ಸ್ಮರಣೆಮಾಡಿದರು. ಅಲ್ಲಿಗೆ ಬಂದ ಗಜಾನನನಿಗೆ ಈ ಮಹಾಗ್ರಂಥವನ್ನು ಲಿಪಿಬದ್ಧಗೊಳಿಸಿ ಬರೆಯಲು ವಿಜ್ಞಾಪಿಸಿದರು. ಅದಕ್ಕನುಗುಣವಾಗಿ ಗಣಪತಿಯು ''ನಾನು ಬರೆಯುವಾಗ ನನ್ನ ಲೆಕ್ಕಣಿಕೆಯು ಎಲ್ಲಿಯೂ ನಿಲ್ಲದಂತೆ ನಿರರ್ಗಳವಾಗಿ ನೀವು ಹೇಳುತ್ತ ಹೋಗಬೇಕು, ಆಗ ಮಾತ್ರ ನಾನು ಬರೆಯುತ್ತೇನೆ'' ಎಂದು ಹೇಳಿದನು. ಅದಕ್ಕೆ ಒಪ್ಪಿ ವೇದವ್ಯಾಸರು ಹದಿನೆಂಟು ಪರ್ವದ ಮಹಾಭಾರತವನ್ನು ಗಣಪತಿಯ ಹಸ್ತದಿಂದ ಬರೆಸಿದರು. ಲಕ್ಷಶ್ಲೋಕಗಳು ಪೂರ್ತಿಯಾಗುವವರೆಗೂ ವ್ಯಾಸರ ವಾಣಿಗೆ ಎಲ್ಲಿಯೂ ತಡೆಉಂಟಾಗಲಿಲ್ಲ. ಗಣಪತಿಯ

ಹಸ್ತವು ಎಲ್ಲಿಯೂ ಪ್ರತಿಬದ್ಧವಾಗಲಿಲ್ಲ. ಗಣಪತಿಯ ಪ್ರಯತ್ನದಿಂದ ಹಾಗೂ ವ್ಯಾಸರ ಕೃಪೆಯಿಂದ ಜಗತ್ತಿಗೆ ಮಹಾಭಾರತದಂಥ ಐತಿಹಾಸಿಕ ಗ್ರಂಥವು ಪ್ರಾಪ್ತವಾಯಿತು.

ಗಣಪತಿಯ ಚರಿತ್ರವನ್ನು ಹೇಳುವ ಪುರಾಣಗಳು ಎರಡು. ಗಣೇಶ ಪುರಾಣ ಮತ್ತು ಮುದ್ಗಲಪುರಾಣ. ವೇದವ್ಯಾಸ ವಿರಚಿತ ಸಂಸ್ಕೃತ ಗಣೇಶಪುರಾಣವನ್ನು ಕನ್ನಡಕ್ಕೆ ಭಾಷಾಂತರಿಸಿ ಇಲ್ಲಿ ಮುದ್ರಿಸಿದ್ದೇವೆ. ಮುದ್ಗಲಪುರಾಣದ ಸಾರಸಂಕ್ಷೇಪವನ್ನು ಇಲ್ಲಿ ಕೊಡಲಾಗಿದೆ

## ಮುದ್ಗಲ ಪುರಾಣ

ವೇದವ್ಯಾಸ ಮುನಿಗಳಿಂದ ಪ್ರಣೀತವಾದ ಮುದ್ಗಲಪುರಾಣವು ಉಪಪುರಾಣಗಳಲ್ಲಿ ಪರಿಗಣಿತವಾಗಿದ್ದರೂ ಪೌರಾಣಿಕ ವಾಙ್ಮಯದಲ್ಲಿ ಅದಕ್ಕೆ ಒಂದು ವಿಶಿಷ್ಟವಾದ ಸ್ಥಾನವಿದೆ. ಮಹರ್ಷಿ ಮುದ್ಗಲ ಹಾಗೂ ಪ್ರಜಾಪತಿ ದಕ್ಷರ ಸಂವಾದ ರೂಪವಾದ ಈ ಮುದ್ಗಲ ಪುರಾಣದಲ್ಲಿ ಗಣೇಶನ ಅದ್ಭುತ ರಮ್ಯವಾದ ಚಾರು ಚರಿತ್ರದ ಚೇತೋಹಾರಿ ಚಿತ್ರಣ ಇರುತ್ತದೆ.

ಕನಖಲದಲ್ಲಿ ದಕ್ಷಪ್ರಜಾಪತಿಯು ಯಜ್ಞಮಾಡಿದಾಗ ಮಹಾದೇವನಿಗೆ ಯಜ್ಞ ಭಾಗವನ್ನು ನೀಡಲಿಲ್ಲ. ಅದರಿಂದ ಕ್ರುದ್ಧನಾದ ವೀರಭದ್ರನೂ ರುದ್ರಗಣದವರೂ ದಕ್ಷ ಪ್ರಜಾಪತಿಯ ಆ ಯಜ್ಞವನ್ನು ಧ್ವಂಸಮಾಡಿದರು. ಅದರಿಂದ ಖಿನ್ನ ವಿಷಣ್ಣನಾಗಿ ಶಿವನು ತ್ರಿಪುರನನ್ನು ಸಂಹರಿಸಿದನು. ಶಿವನ ಭಕ್ತಿಯಿಂದ ಪ್ರಸನ್ನನಾಗಿ ಅವನಿಗೆ ಈ ವಿನಾಯಕನು ವಜ್ರ ಪಂಜರ ಸ್ತೋತ್ರವನ್ನು ಪ್ರದಾನಮಾಡಿದನು.

ಮುದ್ಗಲ ಪುರಾಣದ ಒಂಬತ್ತನೆಯ ಖಂಡದಲ್ಲಿ ವಿನಾಯಕನ ಯೋಗ ಸ್ವರೂಪದ ಮೇಲೆ ಪರ್ಯಾಪ್ತವಾದ ಪರಿಪೂರ್ಣ ವಿವೇಚನೆ ಇರುತ್ತದೆ. ಗಣೇಶನು ದೇವತೆಗಳಿಗೂ ದೇವನಾಗಿದ್ದಾನೆ. ಅವನ ಕೃಪಾದೃಷ್ಟಿಯು ಬಿದ್ದರೆ ಯಾವದೂ ಅಸಂಭವವಲ್ಲ. ಭಕ್ತಿಪೂರ್ವಕವಾಗಿ ಗಣೇಶನ ಆರಾಧನೆ ಮತ್ತು ಮುದ್ಗಲ ಪುರಾಣದ ಶ್ರದ್ಧಾಪೂರ್ವಕ ಶ್ರವಣದಿಂದ ಹಾಗೂ ಪಾಠ ಪ್ರವಚನಗಳಿಂದ ಪರಮಧಾಮ ಪ್ರಾಪ್ತವಾಗಿ ಮಾನವನಿಗೆ ಸದ್ಗತಿ ಪ್ರಾಪ್ತವಾಗುತ್ತದೆ. ಈ ಮುದ್ಗಲ ಪುರಾಣದಲ್ಲಿ ಮುಖ್ಯವಾಗಿ ಗಣೇಶನ ೧೨ ನಾಮಗಳ ಸಂಕೀರ್ತನೆಯನ್ನು ಮಾಡಲಾಗಿದೆ.

''ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನನಾಶೋ ವಿನಾಯಕಃ ॥
ಧೂಮ್ರಕೇತುರ್ಗಣಾಧ್ಯಕ್ಷೋ ಭಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇತ್ ಶೃಣುಯಾದಪಿ ॥
ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸಂಕಟೇ ಚೈವ ವಿಘ್ನಸ್ತಸ್ಯ ನ ಜಾಯತೇ ॥

ಈ ಶ್ಲೋಕಗಳಲ್ಲಿ ಹೇಳಿದ ಹನ್ನೆರಡು ನಾಮಗಳು ಹೀಗಿವೆ

೧) ಸುಮುಖ ೨) ಏಕದಂತ ೩) ಕಪಿಲ ೪) ಗಜಕರ್ಣ ೫) ಲಂಬೋದರ ೬) ವಿಕಟ ೭) ವಿಘ್ನನಾಶನ ೮) ವಿನಾಯಕ ೯) ಧೂಮ್ರಕೇತು ೧೦) ಗಣಾಧ್ಯಕ್ಷ ೧೧) ಭಾಲಚಂದ್ರ ೧೨) ಗಜಾನನ

ಗಣೇಶನ ಭುವನ ಮನೋಹರವಾದ ಚರಿತ್ರೆಯನ್ನು ಹೇಳುವ ಎರಡು ಪುರಾಣಗಳು ಪ್ರಸಿದ್ಧವಾಗಿವೆ. ಒಂದು ಗಣೇಶಪುರಾಣ ಮತ್ತೊಂದು ಮುದ್ಗಲಪುರಾಣ. ಮುದ್ಗಲ ಪುರಾಣದಲ್ಲಿ ಗಣಪತಿ ಅವತಾರಗಳು ಅನಂತ. ಅವೆಲ್ಲವುಗಳ ವರ್ಣನೆಯು ನೂರು ವರುಷಗಳವರೆಗೆ ಮಾಡಿದರೂ ಮುಗಿಯುವದಿಲ್ಲ. ಆದುದರಿಂದ ಅವುಗಳಲ್ಲಿ ಮುಖ್ಯವಾದ ಆ ಎಂಟು ಅವತಾರ ಚರಿತ್ರೆಗಳನ್ನು ಮಾತ್ರ ಈ ಪುರಾಣದಲ್ಲಿ ಹೇಳಲಾಗಿದೆ. ಎಂಟು ಅವತಾರಗಳ ಚರಿತ್ರೆ ಹಾಗೂ ಮಹಿಮೆ ಹಾಗೂ ಹೆಸರುಗಳು ಇಂತಿವೆ.

ಅವತಾರ ಒಂದು:- ಇದಕ್ಕೆ ವಕ್ರತುಂಡಾವತಾರ ಎಂದು ಹೇಳುತ್ತಾರೆ. ಈ ಅವತಾರದಲ್ಲಿ ಗಣಪತಿಯು ಮುದ್ಗರಾಸುರನನ್ನು ಸಂಹಾರ ಮಾಡಿ ಸಿಂಹವಾಹನವಾಗಿ ವಿರಾಜಮಾನನಾಗಿದ್ದಾನೆ.

ಅವತಾರ ಎರಡು:- ಇದು ಏಕದಂತಾವತಾರ ಎನಿಸಿಕೊಳ್ಳುತ್ತದೆ. ಮದಾಸುರನನ್ನು ವಧೆಮಾಡಿದ ಗಣೇಶನು ಮೂಷಕವಾಹನನಾಗಿ ಮೆರೆದಿದ್ದಾನೆ.

ಅವತಾರ ಮೂರು:- ಮಹೋದರ ಎನ್ನುವದು. ಬ್ರಹ್ಮಜ್ಞಾನವನ್ನು ಪ್ರಕಾಶಪಡಿಸುವ ಅವತಾರವಾಗಿ ಮೋಹಾಸುರನನ್ನು ವಿನಾಶಮಾಡುವ ಈ ಅವತಾರವೂ ಕೂಡ ಮೂಷಕವಾಹನವಾಗಿದೆ.

ಅವತಾರ ನಾಲ್ಕು:- ಗಜಾನನ ಎಂಬ ಹೆಸರಿನ ಈ ನಾಲ್ಕನೆಯ ಅವತಾರವು ಸಾಂಖ್ಯಯೋಗಗಳಿಗೆ ಸಿದ್ಧಿದಾಯಕವಾಗಿದೆ. ಇಲಿಯನ್ನೇ ಆರೋಹಣ ಮಾಡಿಕೊಂಡು ಮೂಷಕ ವಾಹನನಾದ ಈ ಗಜಾನನನು ಲೋಭಾಸುರನನ್ನು ಸಂಹಾರ ಮಾಡುತ್ತಾನೆ.

ಅವತಾರ ಐದು:- ಲಂಬೋದರ ಈ ಆರನೆಯ ಅವತಾರದಲ್ಲಿ ಗಜಾನನನು ಕ್ರೋಧಾಸುರನನ್ನು ಸಂಹಾರ ಮಾಡಿದ್ದಾನೆ. ಶಕ್ತಿ ಬ್ರಹ್ಮಸ್ವರೂಪನಾದ ಈ ಗಣಪತಿಯೂ ಕೂಡ ಮೂಷಕ ವಾಹನನಾಗಿದ್ದಾನೆ.

ಅವತಾರ ಆರು:- ವಿಕಟ ಎಂಬ ಹೆಸರಿನಿಂದ ಪ್ರಸಿದ್ಧವಾದ ಈ ಅವತಾರದಲ್ಲಿ ವಿನಾಯಕನು ಕಾಮಾಸುರನನ್ನು ಸಂಹಾರ ಮಾಡಿ ಮಯೂರ ವಾಹನನಾಗಿ ಸೌರಬ್ರಹ್ಮದ ಧಾರಕನಾಗಿದ್ದಾನೆ.

ಅವತಾರ ಏಳು:- ವಿಘ್ನರಾಜ:- ಶೇಷನಾಗನನ್ನು ತನ್ನ ವಾಹನನ್ನಾಗಿ ಮಾಡಿಕೊಂಡ ಈ ವಿಘ್ನರಾಜ ಎಂಬ ಹೆಸರಿನ ಈ ಗಣೇಶನು ಮಮತಾಸುರ ಎಂಬ ದೈತ್ಯನನ್ನು ಸಂಹಾರ ಮಾಡುತ್ತಾನೆ. ಈ ವಿಘ್ನರಾಜನು ವಿಷ್ಣು ಬ್ರಹ್ಮ ಧಾರಕನಾಗಿದ್ದಾನೆ.

ಅವತಾರ ಎಂಟು:- ಎಂಟನೇ ಈ ಅವತಾರದಲ್ಲಿ ವಿಘ್ನೇಶ್ವರನು ಅಭಿಮಾನಾಸುರನನ್ನು ನಾಶಮಾಡುತ್ತಾನೆ. ಮೂಷಕ ವಾಹನವಾದ ಈ ಗಣೇಶನು ಶಿವಬ್ರಹ್ಮ ಸ್ವರೂಪನು ಆಗಿದ್ದಾನೆ.

## ಗಣಪತಿಯ ನಾಮಗಳ ಹಿಂದಿನ ಕಿಂಚಿತ್ ಇತಿಹಾಸ

ಅವನ ದ್ವಾದಶ ನಾಮಗಳ ಒಂದು ಸ್ತೋತ್ರ ಹೀಗಿದೆ.

ಪ್ರಥಮಂ ವಕ್ರತುಂಡಶ್ಚ ಏಕದಂತಂ ದ್ವಿತೀಯಕಂ
ತೃತೀಯಂ ಕೃಷ್ಣಪಿಂಗಾಕ್ಷಂ ಗಜವಕ್ತ್ರಂ ಚತುರ್ಥಕಂ ॥

ಲಂಬೋದರಂ ಪಂಚಮಂ ಚ ಷಷ್ಠಂ ವಿಕಟಮೇವ ಚ
ಸಪ್ತಮಂ ವಿಘ್ನರಾಜೇಂದ್ರಂ ಧೂಮ್ರವರ್ಣಂ ತಥಾಷ್ಟಮಂ ॥

ನವಮಂ ಭಾಲಚಂದ್ರಂ ಚ ದಶಮಂ ತು ವಿನಾಯಕಂ
ಏಕಾದಶಂ ಗಣಪತಿಂ ದ್ವಾದಶಂ ತು ಗಜಾನನಂ

ಹೀಗೆ ಗಣಪತಿಯ ಹನ್ನೆರಡು ನಾಮಗಳನ್ನು ಅವುಗಳ ಲಕ್ಷಣಗಳನ್ನು ಹೇಳಲಾಗಿದೆ. ಏಕದಂತ ಎನ್ನುವದು ಗಣಪತಿಯ ಅನೇಕ ಲೋಕಪ್ರಿಯ ನಾಮಗಳಲ್ಲಿ ಒಂದಾಗಿದೆ. ಗಣಪತಿಯ ಒಂದು ಹಲ್ಲು ಮುರಿದಿದೆ. ಇಷ್ಟೇ ಅಲ್ಲದೇ ಮುರಿದ ಒಂದು ಹಲ್ಲನ್ನು ಅವನು ತನ್ನ ಕೈಯಲ್ಲಿ ಧರಿಸಿರುತ್ತಾನೆ. ಇದಕ್ಕೆ ಹಲವಾರು ಕಾರಣಗಳನ್ನು ಪುರಾಣಗಳಲ್ಲಿ ಕಾಣುತ್ತೇವೆ. ಒಂದನೆಯದು ಶಂಕರನೇ ಸಿಟ್ಟಾಗಿ ಗಣಪತಿಯ ಒಂದು ಹಲ್ಲನ್ನು ಮುರಿದನು. ಎರಡನೇಯದು ಗಣಪತಿಯ ಜೊತೆಗೆ ಯುದ್ಧಪ್ರಸಂಗವು ಬಂದಾಗ ಪರಶುರಾಮನು ಕೊಡಲಿಯನ್ನು ಬೀಸಿ ಗಣಪತಿಯ ಒಂದು ಹಲ್ಲನ್ನು ಮುರಿದನು. ಮೂರನೇಯದು ಗಣಪತಿಯು ತನ್ನ ಮೇಲೆ ತಾನೇ ಸಿಟ್ಟಾಗಿ ತಾನೇ ದಂತಭಗ್ನನಾದ. ಒಮ್ಮೆ ಗಣಪತಿಯನ್ನು ನೋಡಿ ಚಂದ್ರನು ನಕ್ಕಿದ್ದರಿಂದ ಅವನ ಮೇಲೆ ಸಿಟ್ಟಾಗಿ ತನ್ನ ಕೋರೆ ದಾಡೆಯನ್ನು ಕಿತ್ತಿ ಬೀಸಿ ಚಂದ್ರನಿಗೆ ಒಗೆದು ತಾನೇ ತನ್ನ ಹಲ್ಲನ್ನು ಮುರಿದುಕೊಂಡನು. ಆದರಿಂದ ಏಕದಂತ, ವಕ್ರತುಂಡ ಎಂದು ಹೆಸರಾದನು.

ಈ ದ್ವಾದಶನಾಮಗಳನ್ನು ಈ ಸ್ತೋತ್ರಮಂತ್ರಪಠನ ಪೂರ್ವಕವಾಗಿ ಪಾರಾಯಣ ಮಾಡುವವರಿಗೆ ಸಕಲ ಕಷ್ಟಾನಿಷ್ಟನಿವಾರಣೆಯಾಗಿ ಎಲ್ಲ ಇಷ್ಟಾರ್ಥಗಳು ಪ್ರಾಪ್ತವಾಗುತ್ತದೆ.

## ಗಣಪತಿ ಶಬ್ದಾರ್ಥದ ವಿವೇಚನೆ

ಗಣಪತಿ ಶಬ್ದದಲ್ಲಿಯ ಗಣ ಶಬ್ದಕ್ಕೆ ವರ್ಗ, ಸಮೂಹ, ಸಮುದಾಯ ಎಂದರ್ಥ. ಈಶ ಎಂದರೆ ಒಡೆಯ. ಶಿವನ ಸೇವಕರಾದ ಪ್ರಮಥ ಗಣಕ್ಕೆ ಅವನು ಒಡೆಯನಾದುದರಿಂದ ಅವನಿಗೆ ಗಣೇಶ ಎನ್ನುವರು. ಎಂಟು ವಸುಗಳು, ಹನ್ನೊಂದು ರುದ್ರರು, ಹನ್ನೆರಡು ಆದಿತ್ಯರು, ನಲವತ್ತೊಂಬತ್ತು ಮರುದ್ದೇವತೆಗಳು ಇವರೆಲ್ಲರ ಅಧಿಪತಿಯಾಗಿದ್ದರಿಂದ ಅವನಿಗೆ ಗಣೇಶ ಎಂಬ ಹೆಸರಾಗಿದೆ.

## ವ್ಯಾಕರಣ ಪ್ರಕ್ರಿಯೆಯಲ್ಲಿ ಗಣಪತಿ ಶಬ್ದದ ವಿಚಾರ

ಸಂಸ್ಕೃತದಲ್ಲಿ ಹತ್ತು ಗಣದ ಕ್ರಿಯಾಪದಗಳು ಇರುತ್ತವೆ. ಅದಕ್ಕೆ ಗಣಪಾತ ಎಂದು ಕರೆಯುತ್ತಾರೆ. ಒಂದೊಂದು ಗಣಕ್ಕೆ ಬೇರೆ ಬೇರೆ ವಿಕರಣಗಳು ಇರುತ್ತವೆ. ಒಂದನೇ ಗಣಕ್ಕೆ ಅ, ನಾಲ್ಕನೇ ಗಣಕ್ಕೆ ಯ, ಹತ್ತನೇ ಗಣಕ್ಕೆ ಅಯ ಹೀಗೆ ಗಣಾನುಸಾರಿಯಾದ ಧಾತು ಸಮೂಹವೂ ಇರುತ್ತದೆ. ಗಣ ಶಬ್ದವು ಮಹಾದೇವರ ಅನುಚರರಿಗೂ ಇರುತ್ತದೆ. ರಾಮಾಯಣದಲ್ಲಿ ''ಉಮಾ ಸಹಾಯೋ ದೇವೇಶಃ ಗಣೈಶ್ಚ ಬಹು ಭಿರ್ವೃತಃ''

ಮಹಾದೇವನು ಪಾರ್ವತಿಯಿಂದ ಕೂಡಿಕೊಂಡು ತನ್ನ ಗಣಸಹಿತನಾಗಿ ಬಂದನು'' ಎಂದು ಇದೆ.

## ಗಣೇಶನು ಮೂಷಕವಾಹನ ಆದದ್ದರ ಕಾರಣ

ಕ್ರೌಂಚ ಎಂಬ ಗಂಧರ್ವನು ಇಂದ್ರಸಭೆಯಲ್ಲಿ ಪ್ರಮಾದದಿಂದ ವಾಮದೇವನಿಗೆ ಕಾಲುತಾಗಿಸಿದನು. ಆಗ ವಾಮದೇವನು ನೀನು ಇಲಿಯಾಗು ಎಂದು ಶಾಪಕೊಟ್ಟನು. ಆ ಇಲಿಯು ಪರಾಶರ ಮುನಿಯ ಆಶ್ರಮದಲ್ಲಿ ಹೋಮದ್ರವ್ಯಗಳನ್ನು ತಿಂದು ಬಟ್ಟೆ ಪುಸ್ತಕಗಳನ್ನು ಹರಿದು ಬಹಳ ತೊಂದರೆ ಕೊಟ್ಟಿತು. ಆಗ ಪರಾಶರರು ಗಣೇಶನನ್ನು ಪ್ರಾರ್ಥಿಸಿದರು. ಆಗ ಗಣೇಶನು ಆ ಇಲಿಯನ್ನು ತನ್ನ ವಾಹನವನ್ನಾಗಿ ಮಾಡಿಕೊಂಡನು.

## ಗಣೇಶವಾಹನದ ಮತ್ತೊಂದು ಅರ್ಥ

ಹಗಲು ಹೊತ್ತಿನಲ್ಲಿ ಪೃಥ್ವಿಯಕೆಳಗೆ ಅಡಗಿರುವ ಕತ್ತಲೆಯೇ ಮೂಷಕ. ಸೂರ್ಯಾಸ್ತವಾದ ಕೂಡಲೇ ಆ ಕತ್ತಲೆ ಎಂಬ ಮೂಷಕವು ಪೃಥ್ವಿಯ ಮೇಲೆ ಬರುತ್ತದೆ. ಆಗ ಪೃಥ್ವಿಯ ತುಂಬ ಆ ಕತ್ತಲೆಯದೇ ಸಾಮ್ರಾಜ್ಯ, ಗಣೇಶ ಎಂಬ ಸೂರ್ಯನು ಬಂದ ಕೂಡಲೇ ಆ ಕತ್ತಲೆಯೆಂಬ ಇಲಿಯು ಆ ಗಣೇಶನ ಕೆಳಗೆ ವಾಹನವಾಗಿ ಅಡಗಿಕೊಳ್ಳುತ್ತದೆ.

## ತುಳಸಿಯು ಗಣೇಶನಿಗೆ ಅಪ್ರಿಯವೇಕೆ ?

ಲಾವಣ್ಯವತಿಯೂ ತರುಣಿಯೂಆದ ತುಳಸೀದೇವಿಯು ಗಣಪತಿಯ ಸೌಂದರ್ಯವನ್ನು ಕಂಡು ಆಕರ್ಷಿತಳಾದಳು. ಅವನಲ್ಲಿ ಪ್ರಣಯ ಭಿಕ್ಷೆಯನ್ನು ಬೇಡಿದಳು. ಆದರೆ ಬಾಲ ಬ್ರಹ್ಮಚಾರಿಯಾದ ಗಣಪತಿಯು ''ವಿವಾಹವು ಜ್ಞಾನ ಸಾಧನೆಗೆ ಪ್ರತಿಬಂಧಕ ಮತ್ತು ನಾನು ಎಂದೂ ವಿವಾಹವನ್ನೇ ಮಾಡಿಕೊಳ್ಳುವುದಿಲ್ಲ'' ಎಂದು ಹೇಳಿದನು. ಪ್ರಣಯಭಂಗದಿಂದ ಅವಮಾನಿತಳಾದ ತುಳಸಿಯು ಗಣಪತಿಗೆ ''ನಿನ್ನ ಮದುವೆಯು ತಪ್ಪದೇ ಆಗಲಿ'' ಎಂದು ಶಾಪಕೊಟ್ಟಳು. ಆಗ ಗಜಾನನನು ಅವಳಿಗೆ ''ನೀನು ರಾಕ್ಷಸನ ಪತ್ನಿಯಾಗುವೆ ಮತ್ತು ಶಾಪದಿಂದ ಒಂದು ಗಿಡವಾಗಿ ಬೆಳೆಯುವೆ'' ಎಂದು ಮರುಶಾಪವನ್ನು ಕೊಟ್ಟನು. ಅದರಿಂದ ಭೀತಳಾದ ತುಳಸಿಯು ಗಣೇಶನ ಸ್ತುತಿಯನ್ನು ಮಾಡಿದಳು. ಅದರಿಂದ ಪ್ರಸನ್ನನಾದ ಗಣಾಧೀಶನು ಅವಳಿಗೆ

''ನೀನು ಶ್ರೀಹರಿಗೆ ಅತ್ಯಂತ ಪ್ರೀತ್ಯಾಸ್ಪದಳಾಗುವೆ. ನಿನ್ನ ದ್ವಾರಾ ಭಕ್ತರೆಲ್ಲರೂ ಮಹಾವಿಷ್ಣುವನ್ನು ಪೂಜಿಸಿ ಮೋಕ್ಷವನ್ನು ಪಡೆಯುವರು. ಆದರೆ ನನಗೆ ಮಾತ್ರ ನೀನು ತ್ಯಾಜ್ಯಳೇ ಆಗಿ ಉಳಿಯುವೆ'' ಎಂದು ಹೇಳಿದನು. ಆದುದರಿಂದ ಗಣಪತಿಗೆ ತುಳಸಿಯಿಂದ ಪೂಜಿಸುವುದಿಲ್ಲ.

## ಗಣಪತಿಯ ಶಬ್ದದ ವಿಮರ್ಶೆ

**''ಗಣ್ಯತೆ ಗಣಯತಿ ವಾ ಇತಿ ಗಣಃ''**

ಗಣ ಎಂದರೆ ಎಣಿಸುವದು ಅಥವಾ ಎಣಿಸಲ್ಪಡುವುದು ಎಂದು ಕೋಶದಲ್ಲಿ ಹೇಳಲಾಗಿದೆ. ಋಗ್ವೇದದಲ್ಲಿ ಬ್ರಹ್ಮಣಸ್ಪತಿಯ ಗಣಗಳ ಹಾಗೂ ಉಲ್ಲೇಖ ಬಂದಿದೆ.

ಪಾಣಿನಿಯು ಗಣ ಶಬ್ದಕ್ಕೆ ಪ್ರತಿಶಬ್ದವಾಗಿ ಸಂಘ ಶಬ್ದವನ್ನು ಕೊಟ್ಟಿದ್ದಾನೆ. **''ಸಂಘೋದ್ಧೌ ಗಣ ಪ್ರಶಂಸಯೋಃ''** ಸಂಘ ಮತ್ತು ಉದ್ಧ ಶಬ್ದಗಳನ್ನು ಗಣ ಮತ್ತು ಪ್ರಶಂಸೆ ಈ ಅರ್ಥದಲ್ಲಿ ಬಳಸಬೇಕು ಎಂದು ಅಷ್ಟಾಧ್ಯಾಯಿಯಲ್ಲಿ ಹೇಳಿದ್ದಾನೆ. ಬೌದ್ಧಸಾಹಿತ್ಯದಲ್ಲಿ ಗಣ ಶಬ್ದಕ್ಕೆ ನರರಿಂದಲೇ ನಡೆಸಲ್ಪಡುವ ಸಂಸ್ಥೆ ಎಂಬ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಮಹಾಭಾರತದಲ್ಲಿ ಅಂಧಕ, ವೃಷ್ಣಿ, ಯಾದವ, ಕುಕುರ, ಭೋಜ

ಎಂದು ಐದು ಗಣಗಳ ಉಲ್ಲೇಖ ಬರುತ್ತದೆ. ಗಣ ಶಬ್ದದ ಅರ್ಥವನ್ನು ಅನೇಕ ಪಾಶ್ಚಾತ್ಯ ವಿದ್ವಾಂಸರು ಸಮೂಹ ಎಂದು ಕೊಟ್ಟಿದ್ದಾರೆ. ಛಂದಶ್ಶಾಸ್ತ್ರದಲ್ಲಿ ಮೂರು ಅಕ್ಷರಗಳ ಗುಂಪಿಗೆ ಗಣ ಎಂಬ ಸಂಜ್ಞೆ ಇರುತ್ತದೆ. ಯಗಣ, ರಗಣ, ತಗಣ, ನಗಣ, ಭಗಣ, ಜಗಣ, ಸಗಣ, ಮಗಣ ಎಂದು ಎಂಟು ಗಣಗಳ ಹೆಸರುಗಳನ್ನು ಪಿಂಗಲನ ಛಂದಸ್ಸೂತ್ರದಲ್ಲಿ ಹೇಳಲಾಗಿದೆ. ಲಘು ಗುರುಗಳ ವ್ಯತ್ಯಾಸದಿಂದ ಈ ಗಣಗಳು ನಿರ್ಮಿತವಾಗುತ್ತವೆ. ಜ್ಯೋತಿಶಾಸ್ತ್ರದಲ್ಲಿ ಜನ್ಮನಕ್ಷತ್ರಕ್ಕೆ ಅನುಸಾರವಾಗಿ ದೇವಗಣ ಮನುಷ್ಯಗಣ ರಾಕ್ಷಸಗಣ ಎಂದು ವಿಭಾಗಮಾಡಿದ್ದಾರೆ. ಮದುವೆ ಮಾಡುವಾಗ ಗಣಮೈತ್ರಿಯನ್ನು ನೋಡಲಾಗುವುದು.

ಜ್ಯೋತಿಷಿಗಳಿಗೆ ಗಣಕ ಎಂದು ಹೆಸರಿದೆ. ಶಿವ ಮತ್ತು ವಿಷ್ಣು ದೇವತೆಗಳ ಅನುಚರರಿಗೆ ಶಿವಗಣ ವಿಷ್ಣುಗಣ ಎಂಬ ಹೆಸರು ಇದೆ. ಎಲ್ಲ ಬ್ರಹ್ಮಾದಿ ದೇವತೆಗಳು ಕೂಡಿ ಎಲ್ಲ ದೇವಗಣಗಳ ಮೇಲೆ ಗಜಾನನನ್ನು ಗಣಾಧ್ಯಕ್ಷನನ್ನಾಗಿ ಮಾಡಿದ್ದು ಗಣೇಶ ಪುರಾಣದಲ್ಲಿಯೂ ಮುದ್ಗಲ ಪುರಾಣದಲ್ಲಿಯೂ ಹೇಳಲಾಗಿದೆ.

## ಗಣೇಶ ಸ್ತೋತ್ರಗಳು

ಬೇರೆ ಬೇರೆ ಪುರಾಣಗಳಲ್ಲಿ ಬೇರೆ ಬೇರೆ ದೇವತೆಗಳು ಬೇರೆ ಬೇರೆ ಪ್ರಸಂಗದಲ್ಲಿ ಮಾಡಿದ ಗಣೇಶ ಸ್ತುತಿ ಮಂತ್ರಗಳು ಅಸಂಖ್ಯ ಇರುತ್ತವೆ. ಅವುಗಳಲ್ಲಿ ಅತಿ ಅವಶ್ಯಕವಾದ ಕೆಲವು ಸ್ತೋತ್ರಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

### ಪಾರ್ವತೀ ಪರಮೇಶ್ವರರು ಮಾಡಿದ ಗಣಪತಿಯ ಗುಣಗಾನ

''ನಮಸ್ತೇ ಗಣನಾಥಾಯ ಗಣಾನಾಂ ಪತಯೇ ನಮಃ ।
ಭಕ್ತಿಪ್ರಿಯಾಯ ದೇವೇಶ ಭಕ್ತೇಭ್ಯಃ ಸುಖದಾಯಕ ॥
ಸ್ವಾನಂದವಾಸಿನೇ ತುಭ್ಯಂ ಸಿದ್ಧಿಬುದ್ಧಿವರಾಯ ಚ ।
ಸರ್ವವಂದ್ಯಾಯ ದೇವಾಯ ಧುಂಡಿರಾಜಾಯ ತೇ ನಮಃ'' ॥

### ತ್ರಿಮೂರ್ತಿ ಸ್ವರೂಪಿ ಗಣಪತಿ

''ಅಕಾರೋ ವಾಸುದೇವಃ ಸ್ಯಾತ್ ಉಕಾರೋ ವಿಧಿರುಚ್ಯತೆ ।
ಮಕಾರಸ್ತು ಮಹಾದೇವಃ ಪ್ರಣವಾಯ ನಮೋಽಸ್ತುತೇ'' ॥

### ಗಣೇಶ ಶಬ್ದದ ಅರ್ಥ

''ಜ್ಞಾನಾರ್ಥ ವಾಚಕೋ ಗಶ್ಚ ಣಶ್ಚ ನಿರ್ವಾಣ ವಾಚಕಃ
ತಯೋರೀಶಂ ಪರಬ್ರಹ್ಮ ಗಣೇಶಂ ಪ್ರಣಮಾಮ್ಯಹಂ''

### ದೇವತೆಗಳು ಕೂಡಿ ಮಾಡಿದ ಗಣೇಶ ಸ್ತೋತ್ರ

ಗಜಾನನಾಯ ಪೂರ್ಣಾಯ ಸಾಂಖ್ಯರೂಪಮಯಾಯ ತೇ ।
ವಿದೇಹೇನ ಚ ಸರ್ವತ್ರ ಸಂಸ್ಥಿತಾಯ ನಮೋ ನಮಃ ।
ಅಮೇಯಾಯ ಚ ಹೇರಂಬ ಪರಶೋಧಾರಕಾಯ ತೇ ।
ಮೂಷಕವಾಹನಾಯ್ಯೆವ ವಿಶ್ವೇಶಾಯ ನಮೋ ನಮಃ ।

೫

ಅಗಜಾನನ ಪದ್ಮಾರ್ಕಂ ಗಜಾನನ ಮಹರ್ನಿಶಂ
ಅನೇಕದಂತಂ ಭಕ್ತಾನಾಮೇಕದಂತಮುಪಾಸ್ಮಹೇ ॥

## ವಾಲ್ಮೀಕಿಕೃತ ಗಣಪತಿ ಸ್ತುತಿ

ತ್ರಯೀಶೀರ್ಷಸಾರಂ ರುಜಾನೇಕಮಾರಂ ।
ಸಿದ್ಧಿಲಕ್ಷ್ಮೀಬುದ್ಧಿ ಲಕ್ಷ್ಮೀದಾರಂ ॥
ಪರಂಬ್ರಹ್ಮಪಾರಂ ಸುರಸ್ತೋಮ ಕಾಯಂ ।
ಗಣೌಘಾಧಿನಾಥಂ ಕವಿಂ ಬುದ್ಧಿನಾಥಂ ಕವೀನಾಂ ನಮಾಮಿ ॥

## ಗಣೇಶ ಗಾಯತ್ರಿಯಲ್ಲಿ ಗಣೇಶ ಸ್ತುತಿ

ಲಂಬೋದರಾಯ ವಿದ್ಮಹೇ ವಕ್ರತುಂಡಾಯ ಧೀಮಹೀ
ತನ್ನೋದಂತೀ ಪ್ರಚೋದಯಾತ್ ॥

## ಬ್ರಹ್ಮಸ್ಪತಿ ಕೃತ ಗಣೇಶ ವಂದನಾ

ಯತೋ ಬ್ರಹ್ಮಾದಯೋದೇವಾಃ ಮುನಯಶ್ಚ ಮಹರ್ಷಯಃ
ಯತೋ ಗುಣಾಸ್ತ್ರಯೋ ಜಾತಾಸ್ತಂ ನಮಾಮಿ ವಿನಾಯಕಮ್

## ಗೌರೀಕೃತ ಗಣೇಶನಮನ

ಸರ್ವಾಂತರ್ಯಾಮಿಣಂ ನಿತ್ಯಂ ಸರ್ವಾಧಾರಂ ಪರಾತ್ಪರಮ್ ।
ಸರ್ವೇಷಾಮಪಿ ವೇದಾನಾಂ ಮಾನಸಸ್ಯಾಪ್ಯಗೋಚರಮ್ ॥
ಭಕ್ತಪ್ರಿಯಂ ನಿರಾಕಾರಂ ಸಾಕಾರಂ ಗುಣಭೇದತಃ
ನಮಾಮ್ಯಹಮತಿಸ್ಥೂಲಮಣುಭ್ಯೋಽಣುತರಂ ವಿಭುಮ್ ॥

ಜಗದ್ರೂಪೋ ಗಕಾರಶ್ಚ ಣಕಾರೋ ಬ್ರಹ್ಮವಾಚಕಃ ।
ತಯೋರ್ಯೋಗೇ ಗಣೇಶಾಯ ಪ್ರಭೋ ತುಭ್ಯಂ ನಮೋ ನಮಃ ॥

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಸ್ಸುರಾಸುರೈಃ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥

ಶೂರ್ಪಾಕಾರೌ ಚ ಯತ್ಕರ್ಣೌ ವಿಘ್ನವಾರಣಕಾರಣೌ
ಶಂಪ್ರದೌ ಜ್ಞಾನರೂಪೌಚ ಶೂರ್ಪಕರ್ಣಂ ನತೋಽಸ್ಮ್ಯಹಮ್ ॥

ವಿಷ್ಣುಪ್ರಸಾದ ಪುಷ್ಪಂಚ ಯನ್ಮೂರ್ಧ್ನಿ ವರ್ತತೇಸದಾ ।
ತಂ ಗಜೇಂದ್ರವಕ್ತ್ರಯುಕ್ತಂ ಗಜವಕ್ತ್ರಂ ನಮಾಮ್ಯಹಮ್ ॥

ಹುಬ್ಬಳ್ಳಿ
ದಿನಾಂಕ 7 – 9 – 2005
ಪಾರ್ಥಿವ ಸಂವತ್ಸರ ಗಣೇಶ ಚತುರ್ಥೀ

ಮಹಾಮಹೋಪಾಧ್ಯಾಯ
**ಪಂ. ಪಂಢರೀನಾಥಾಚಾರ್ಯಗಲಗಲಿ**
ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ– 580 032

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತು ಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಶ್ರೀಹರಿಖೋಡೆಯವರು. ಮುಖ್ಯವಾಗಿ ವಿಷ್ಣು, ವರಾಹ, ಕೂರ್ಮ ಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದಾರಪರ್ವತವನ್ನು ಹೊತ್ತಂತೆ, ಶ್ರೀಹರಿಖೋಡೆಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನೆ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಒದಗಿಸಿಕೊಡುತ್ತಿದ್ದಾರೆ.

ಈ ಲಿಂಗಮಹಾಪುರಾಣ ಮತ್ತು ಗಣೇಶಪುರಾಣವನ್ನೊಳಗೊಂಡ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, ನಂ.3, ಯಲ್ಲಪ್ಪರಸ್ತೆ, ಚಿಕ್ಕಮಾವಳ್ಳಿ (ಸುಶೀಲರಸ್ತೆ ಕ್ರಾಸ್) ಬೆಂಗಳೂರು-560 004 ಮಾಲೀಕರಾದ ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತೇಳು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಬೆಂಗಳೂರು ಇವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಹುಬ್ಬಳ್ಳಿ — ಮಹಾಮಹೋಪಾಧ್ಯಾಯ
ದಿನಾಂಕ 7 – 9 – 2005 — **ಪಂ. ಪಂಢರೀನಾಥಾಚಾರ್ಯಗಲಗಲಿ**
ಪಾರ್ಥಿವ ಸಂವತ್ಸರ ಗಣೇಶ ಚತುರ್ಥೀ — ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ– 580 032

# ಲಿಂಗ ಮಹಾಪುರಾಣ ಮತ್ತು ಗಣೇಶ ಪುರಾಣ

## ವಿಷಯಾನುಕ್ರಮಣಿಕೆ-ಲಿಂಗ ಮಹಾಪುರಾಣ

ಅಧ್ಯಾಯ ಪೂರ್ವಾರ್ಧ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ

# ಗಣೇಶ ಪುರಾಣ

ಅಧ್ಯಾಯ ಪುಟಸಂಖ್ಯೆ

## ಉತ್ತರ ಖಂಡ



—o—

# ಲಿಂಗ ಮಹಾಪುರಾಣ

## ಪೂರ್ವಾರ್ಧ

### ಪ್ರತಿಪಾದ್ಯವಾದ ವಿಷಯ ನಿರೂಪಣೆ | ಅಧ್ಯಾಯ - ೧

**ನಮೋ ರುದ್ರಾಯ ಹರಯೇ ಬ್ರಹ್ಮಣೇ ಪರಮಾತ್ಮನೇ ।**
**ಪ್ರಧಾನಪುರುಷೇಶಾಯ ಸರ್ಗಸ್ಥಿತ್ಯಂತ ಕಾರಿಣೇ ॥**

ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣನಾದ ರುದ್ರ, ಹರಿ, ಬ್ರಹ್ಮ ತ್ರಿಮೂರ್ತಿ ಸ್ವರೂಪಿಯಾದ ಪರಮಾತ್ಮನಿಗೆ ನಮಸ್ಕಾರ. ಅವನೇ ಪ್ರಧಾನ, ಅವ್ಯಕ್ತ, ಪ್ರಕೃತಿ ಎಂದು ಕರೆಯಲ್ಪಡುವನು. ಮಹಾಶಕ್ತಿಗೆ ನಿಯಾಮಕನಾಗಿ ಸರ್ವಜೀವರ ದೇಹದಲ್ಲಿ ವಾಸವಾಗಿರುವದರಿಂದ ಪುರುಷ ಎಂದು ಆ ಪರಮಾತ್ಮನೇ ಕರೆಯಲ್ಪಡುತ್ತಾನೆ. ಇಂಥ ಹರಿಹರಬ್ರಹ್ಮಾದಿ ರೂಪಿಯಾದ ಪ್ರಕೃತಿಪುರುಷ ನಿಯಾಮಕನಾದ ಆ ಭಗವಂತನಿಗೆ ವಂದನೆ. ಜನರ ಅಜ್ಞಾನವನ್ನು ಪರಿಹರಿಸಿ ಜ್ಞಾನಾಮೃತವನ್ನು ಎಲ್ಲ ಕಡೆಗೆ ಹಂಚುವ ನಾರದರು ಲೋಕಕ್ಕೆಲ್ಲ ಕ್ಷೇಮವನ್ನುಂಟುಮಾಡುವ ಆ ಮಹಾದೇವನನ್ನು ಶೈಲೇಶ, ಸಂಗಮೇಶ್ವರ ಮುಂತಾದ ಕ್ಷೇತ್ರಗಳಲ್ಲಿ ಪೂಜಿಸಿ ಸೇವೆಮಾಡಿ ನೈಮಿಷಾರಣ್ಯಕ್ಕೆ ದಯಮಾಡಿಸಿದರು. ಪರಮ ಶಿವಭಕ್ತನಾದ ಆ ದೇವಮುನಿಯು ಹಿರಣ್ಯಗರ್ಭ, ಸ್ವರ್ಲೀನ, ಅವಿಮುಕ್ತ, ಮಹಾಲಯ, ರೌದ್ರ, ಗೋಪ್ರಕ್ಷಕ, ಪಾಶುಪತ, ವಿಘ್ನೇಶ್ವರ, ಕೇದಾರ, ಗೋಮಾಯುಕೇಶ್ವರ, ಚಂದ್ರೇಶ, ತ್ರೈವಿಷ್ಟಪ, ಶುಕ್ಲೇಶ್ವರ, ಮೊದಲಾದ ಪರಮ ಪವಿತ್ರವಾದ ಶಿವನ ಕ್ಷೇತ್ರಗಳಲ್ಲಿ ಆ ಪರಮೇಶ್ವರನನ್ನು ಪೂಜಿಸಿ ಅನಂತರ ನೈಮಿಷ ಕ್ಷೇತ್ರಕ್ಕೆ ಆಗಮಿಸಿದನು. ಆ ತ್ರೈಮಿಷಕ್ಷೇತ್ರದಲ್ಲಿ ವಾಸಮಾಡಿದ ಋಷಿಮುನಿಗಳು ನಾರದರನ್ನು ನೋಡಿ ಸಂತೋಷಭರಿತರಾದರು. ಆ ದೇವಮುನಿಗೆ ನಮಸ್ಕರಿಸಿದರು. ಆಸನನೀಡಿದರು. ಅರ್ಘ್ಯಪಾದ್ಯ ಮೊದಲಾದ ಉಪಚಾರಗಳನ್ನು ಸಮರ್ಪಿಸಿದರು.

ನೈಮಿಷದ ಋಷಿಗಳು ನೀಡಿದ ಆಸನದಮೇಲೆ ಆಸೀನನಾದನು ನಾರದ ಮಹಾಮುನಿ. ತಾನು ನೋಡಿ ಬಂದ ಕ್ಷೇತ್ರಗಳಲ್ಲಿರುವ ಶಿವಲಿಂಗಗಳ ಮಹಿಮೆಯನ್ನು ನೈಮಿಷದ ವಿಪ್ರರಿಗೆ ನಿವೇದಿಸಿದನು. ಶೈವಕ್ಷೇತ್ರಗಳ ಬಗೆಬಗೆಯ ಆಶ್ಚರ್ಯಕರ ವಿಷಯಗಳನ್ನು ಒಳಗೊಂಡಿರುವ ಪುರಾಣಕತೆಗಳನ್ನು ಹೇಳತೊಡಗಿದ. ಅದೇ ಸಮಯದಲ್ಲಿ ರೋಮಹರ್ಷಣ ಸೂತನು ಅಲ್ಲಿಗೆ ಆಗಮಿಸಿದನು. ಪುರಾಣ ಪ್ರವಚನದಲ್ಲಿ ಮಹಾಪಂಡಿತ ಆ ಸೂತ. ಅವನನ್ನು ಕಂಡು ನೈಮಿಷ ಋಷಿಗಳೆಲ್ಲರೂ ಸ್ವಾಗತಮಾಡಿದರು. ಸಮಯೋಚಿತವಾದ ಸತ್ಕಾರ ಉಪಚಾರಗಳನ್ನು ನೀಡಿದರು.

ಕೃಷ್ಣದ್ವೈಪಾಯನರಾದ ವೇದವ್ಯಾಸರ ಸಾಕ್ಷಾತ್ ಶಿಷ್ಯನೇ ಆಗಿದ್ದ ಅಲ್ಲಿಗೆ ಆಗಮಿಸಿದ ಸೂತ ಮಹರ್ಷಿ. ಪುರಾಣ ಕತೆಗಳನ್ನು ಪ್ರವಚನಮಾಡುವಲ್ಲಿ ಒಳ್ಳೆಯ ಪರಿಣತಿ ಹಾಗೂ

ಅಧ್ಯಾಯ ಪುಟಸಂಖ್ಯೆ

# ಉತ್ತರ ಖಂಡ



—o—

# ಲಿಂಗ ಮಹಾಪುರಾಣ

## ಪೂರ್ವಾರ್ಧ

ಪ್ರತಿಪಾದ್ಯವಾದ ವಿಷಯ ನಿರೂಪಣೆ

ಅಧ್ಯಾಯ - ೧

**ನಮೋ ರುದ್ರಾಯ ಹರಯೇ ಬ್ರಹ್ಮಣೇ ಪರಮಾತ್ಮನೇ ।**
**ಪ್ರಧಾನಪುರುಷೇಶಾಯ ಸರ್ಗಸ್ಥಿತ್ಯಂತ ಕಾರಿಣೇ ॥**

ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣನಾದ ರುದ್ರ, ಹರಿ, ಬ್ರಹ್ಮ ತ್ರಿಮೂರ್ತಿ ಸ್ವರೂಪಿಯಾದ ಪರಮಾತ್ಮನಿಗೆ ನಮಸ್ಕಾರ. ಅವನೇ ಪ್ರಧಾನ, ಅವ್ಯಕ್ತ, ಪ್ರಕೃತಿ ಎಂದು ಕರೆಯಲ್ಪಡುವನು. ಮಹಾಶಕ್ತಿಗೆ ನಿಯಾಮಕನಾಗಿ ಸರ್ವಜೀವರ ದೇಹದಲ್ಲಿ ವಾಸವಾಗಿರುವದರಿಂದ ಪುರುಷ ಎಂದು ಆ ಪರಮಾತ್ಮನೇ ಕರೆಯಲ್ಪಡುತ್ತಾನೆ. ಇಂಥ ಹರಿಹರಬ್ರಹ್ಮಾದಿ ರೂಪಿಯಾದ ಪ್ರಕೃತಿಪುರುಷ ನಿಯಾಮಕನಾದ ಆ ಭಗವಂತನಿಗೆ ವಂದನೆ. ಜನರ ಅಜ್ಞಾನವನ್ನು ಪರಿಹರಿಸಿ ಜ್ಞಾನಾಮೃತವನ್ನು ಎಲ್ಲ ಕಡೆಗೆ ಹಂಚುವ ನಾರದರು ಲೋಕಕ್ಕೆಲ್ಲ ಕ್ಷೇಮವನ್ನುಂಟುಮಾಡುವ ಆ ಮಹಾದೇವನನ್ನು ಶೈಲೇಶ, ಸಂಗಮೇಶ್ವರ ಮುಂತಾದ ಕ್ಷೇತ್ರಗಳಲ್ಲಿ ಪೂಜಿಸಿ ಸೇವೆಮಾಡಿ ನೈಮಿಷಾರಣ್ಯಕ್ಕೆ ದಯಮಾಡಿಸಿದರು. ಪರಮ ಶಿವಭಕ್ತನಾದ ಆ ದೇವಮುನಿಯು ಹಿರಣ್ಯಗರ್ಭ, ಸ್ವರ್ಲೀನ, ಅವಿಮುಕ್ತ, ಮಹಾಲಯ, ರೌದ್ರ, ಗೋಪ್ರಕ್ಷಕ, ಪಾಶುಪತ, ವಿಘ್ನೇಶ್ವರ, ಕೇದಾರ, ಗೋಮಾಯುಕೇಶ್ವರ, ಚಂದ್ರೇಶ, ತ್ರೈವಿಷ್ಟಪ, ಶುಕ್ಲೇಶ್ವರ, ಮೊದಲಾದ ಪರಮ ಪವಿತ್ರವಾದ ಶಿವನ ಕ್ಷೇತ್ರಗಳಲ್ಲಿ ಆ ಪರಮೇಶ್ವರನನ್ನು ಪೂಜಿಸಿ ಅನಂತರ ನೈಮಿಷ ಕ್ಷೇತ್ರಕ್ಕೆ ಆಗಮಿಸಿದನು. ಆ ನೈಮಿಷಕ್ಷೇತ್ರದಲ್ಲಿ ವಾಸಮಾಡಿದ ಋಷಿಮುನಿಗಳು ನಾರದರನ್ನು ನೋಡಿ ಸಂತೋಷಭರಿತರಾದರು. ಆ ದೇವಮುನಿಗೆ ನಮಸ್ಕರಿಸಿದರು. ಆಸನನೀಡಿದರು. ಅರ್ಘ್ಯಪಾದ್ಯ ಮೊದಲಾದ ಉಪಚಾರಗಳನ್ನು ಸಮರ್ಪಿಸಿದರು.

ನೈಮಿಷದ ಋಷಿಗಳು ನೀಡಿದ ಆಸನದಮೇಲೆ ಆಸೀನನಾದನು ನಾರದ ಮಹಾಮುನಿ. ತಾನು ನೋಡಿ ಬಂದ ಕ್ಷೇತ್ರಗಳಲ್ಲಿರುವ ಶಿವಲಿಂಗಗಳ ಮಹಿಮೆಯನ್ನು ನೈಮಿಷದ ವಿಪ್ರರಿಗೆ ನಿವೇದಿಸಿದನು. ಶೈವಕ್ಷೇತ್ರಗಳ ಬಗೆಬಗೆಯ ಆಶ್ಚರ್ಯಕರ ವಿಷಯಗಳನ್ನು ಒಳಗೊಂಡಿರುವ ಪುರಾಣಕತೆಗಳನ್ನು ಹೇಳತೊಡಗಿದ. ಅದೇ ಸಮಯದಲ್ಲಿ ರೋಮಹರ್ಷಣ ಸೂತನು ಅಲ್ಲಿಗೆ ಆಗಮಿಸಿದನು. ಪುರಾಣ ಪ್ರವಚನದಲ್ಲಿ ಮಹಾಪಂಡಿತ ಆ ಸೂತ. ಅವನನ್ನು ಕಂಡು ನೈಮಿಷ ಋಷಿಗಳೆಲ್ಲರೂ ಸ್ವಾಗತಮಾಡಿದರು. ಸಮಯೋಚಿತವಾದ ಸತ್ಕಾರ ಉಪಚಾರಗಳನ್ನು ನೀಡಿದರು.

ಕೃಷ್ಣದ್ವೈಪಾಯನರಾದ ವೇದವ್ಯಾಸರ ಸಾಕ್ಷಾತ್ ಶಿಷ್ಯನೇ ಆಗಿದ್ದ ಅಲ್ಲಿಗೆ ಆಗಮಿಸಿದ ಸೂತ ಮಹರ್ಷಿ. ಪುರಾಣ ಕತೆಗಳನ್ನು ಪ್ರವಚನಮಾಡುವಲ್ಲಿ ಒಳ್ಳೆಯ ಪರಿಣತಿ ಹಾಗೂ

ಪ್ರಾವೀಣ್ಯವನ್ನು ಪಡೆದಿದ್ದ ಆ ಸೂತಮಹರ್ಷಿ. ಅವನು ಹೇಳುವ ಪುರಾಣ ಹಾಗೂ ಕತೆಗಳನ್ನು ಕೇಳಿದ ಜನರು ಆನಂದದಿಂದ ರೋಮಾಂಚಿತರಾಗುತ್ತಿದ್ದರು. ಆದರಿಂದಲೇ ಅವನಿಗೆ ರೋಮಹರ್ಷಣ ಎಂದು ಹೆಸರು ಬಂದಿತ್ತು. ತಾವು ನೀಡಿದ ಸ್ವಾಗತ, ಸತ್ಕಾರ, ಉಪಚಾರಗಳಿಂದ ಪ್ರೀತನಾದ ಆ ಸೂತನು ಕೃಷ್ಣದ್ವೈಪಾಯನವ್ಯಾಸರಿಂದ ಪುರಾಣ ಸಂಹಿತೆಯನ್ನೆಲ್ಲ ಕೇಳಿ ತಿಳಿದುಕೊಂಡು ಅಧ್ಯಯನಮಾಡಿ ಪಂಡಿತನಾಗಿದ್ದಾನೆ.'' ಎಂದು ಅರಿತು ಅವನಿಂದ ಶಿವಲಿಂಗದ ಮಹಾತ್ಮೆಯಿಂದ ಕೂಡಿದ ಪುರಾಣ ಸಂಹಿತೆಯನ್ನು ಕೇಳಬೇಕೆಂಬ ಅಪೇಕ್ಷೆಯು ಅವರಲ್ಲಿ ಉಂಟಾಯಿತು. ಆದರಿಂದ ತಪೋಧನರಾದ ಆ ನೈಮಿಷಾರಣ್ಯದ ಋಷಿಮುನಿಗಳು ನಾರದರಿಗೆ ಪ್ರಶ್ನೆಮಾಡಿದರು.

## ನೈಮಿಷದ ಋಷಿಗಳು

ಸೂತಮುನಿಯೇ, ನೀನು ಬಹಳ ಬುದ್ಧಿವಂತ. ಪುರಾಣಗಳನ್ನು ತಿಳಿದುಕೊಳ್ಳಲು ಕೃಷ್ಣದ್ವೈಪಾಯನ ಹೆಸರಿನಿಂದ ಪ್ರಸಿದ್ಧರಾದ ವೇದವ್ಯಾಸರನ್ನು ನೀನು ಸೇವಿಸಿದೆ. ನಿನ್ನ ಸೇವೆಯಿಂದ ಪ್ರಸನ್ನರಾದ ಆ ಭಗವಾನ್‌ವ್ಯಾಸರಿಂದ ಆ ಪುರಾಣ ಸಂಹಿತೆಯನ್ನು ನೀನು ಪಡೆದಿರುವೆ. ಹಾಗೂ ನಿನ್ನ ಪ್ರವಚನದ ಕೌಶಲ್ಯದಿಂದ ನೀನು ನಿಜವಾಗಿಯೂ ''ಪೌರಾಣಿಕೋತ್ತಮ'' ಪುರಾಣಪ್ರವಚನಮಾಡುವವರಲ್ಲಿ ಸರ್ವಶ್ರೇಷ್ಠ ಎನಿಸಿರುವೆ. ಆದುದರಿಂದ ಪರಶಿವನ ಲಿಂಗಗಳ ಮಾಹಾತ್ಮ್ಯದಿಂದ ಕೂಡಿದ ದಿವ್ಯವಾದ ಪುರಾಣಸಂಹಿತೆಯನ್ನು ಹೇಳಬೇಕು ಎಂದು ನಾವು ಕೇಳಿಕೊಳ್ಳುತ್ತೇವೆ.

ಬ್ರಹ್ಮದೇವನ ಮಾನಸ ಪುತ್ರನಾದ ನಾರದ ಮಹರ್ಷಿಯು ಕೂಡ ಪ್ರಪಂಚದ ಎಲ್ಲ ಶಿವಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿ ಇರುವ ಶಿವಲಿಂಗಗಳನ್ನು ಪೂಜಿಸಿ ಇಲ್ಲಿಗೆ ದಯಮಾಡಿಸಿದ್ದಾನೆ. ಆ ನಾರದನು, ಸೂತಮಹರ್ಷಿಯಾದ ನೀನು ನಾವು ಎಲ್ಲರು ಶಿವಭಕ್ತರಾಗಿರುವೆವು. ಆದುದರಿಂದ ಈ ನಾರದಮುನಿಯ ಎದುರಿನಲ್ಲಿಯೇ ನೀವು ಪುಣ್ಯಕರವಾದ ಲಿಂಗಮಹಾಪುರಾಣವನ್ನು ನಮಗೆ ಹೇಳಿರಿ.''

ನೈಮಿಷ ಕ್ಷೇತ್ರವಾಸಿಗಳ ಶಿವಲಿಂಗಪುರಾಣದ ವಿಷಯದಲ್ಲಿ ಇರುವ ಆಸ್ಥೆ ಆದರಗಳನ್ನು ಕೇಳಿ, ಜಿಜ್ಞಾಸೆ ಶುಶ್ರೂಷೆಗಳನ್ನು ತಿಳಿದು ಸೂತಾಚಾರ್ಯರು ಸಂತುಷ್ಟರಾದರು. ಮತ್ತು ಬ್ರಹ್ಮದೇವರ ಮಾನಸಪುತ್ರನಾದ, ಅಲ್ಲಿಗೆ ಬಂದು ಆಸನದ ಮೇಲೆ ಆಸೀನನಾದ ನಾರದ ಮಹರ್ಷಿಯನ್ನು ನಮಸ್ಕರಿಸಿದನು. ಲಿಂಗಪುರಾಣವನ್ನು ಹೇಳಲು ಅವರಿಂದ ಅನುಗ್ರಹ ಪಡೆದನು. ನೈಮಿಷಾರಣ್ಯದ ಋಷಿಮುನಿಗಳನ್ನು ಕುರಿತು ಲಿಂಗಪುರಾಣವನ್ನು ಹೇಳಲು ಉಪಕ್ರಮಿಸಿದನು.

**ಸೂತರು :** ಮಹಾದೇವರನ್ನು ನಮಸ್ಕರಿಸುವೆನು. ಬ್ರಹ್ಮದೇವರನ್ನು ವಂದಿಸುವೆನು. ವಿಷ್ಣುವನ್ನು ನಮಿಸುವೆನು, ಲಿಂಗಪುರಾಣ ಪ್ರವಚನದ ಮೊದಲು ಈ ತ್ರಿಮೂರ್ತಿದೇವತೆಗಳನ್ನು ಪ್ರಣಮಿಸಿ ಮುನೀಶ್ವರರಾದ ವೇದವ್ಯಾಸ ದೇವರನ್ನು ಸ್ಮರಿಸಿ ನಾನು ನಿಮಗೆ ಲಿಂಗಪುರಾಣವನ್ನು ಹೇಳುತ್ತೇನೆ.

ಶಬ್ದಬ್ರಹ್ಮ ಸ್ವರೂಪಿಯೂ ಶಬ್ದಬ್ರಹ್ಮ ಪ್ರಕಾಶಕನೂ ಆದ ಪರಮಾತ್ಮತತ್ವವನ್ನು ನಾನು ವಂದಿಸುತ್ತೇನೆ. ಅಕಾರಾದಿ ವರ್ಣಗಳೇ ಆ ಶಬ್ದಬ್ರಹ್ಮದ ಅವಯವಗಳಾಗಿವೆ.

ಅಕಾರ, ಉಕಾರ, ಮಕಾರ ಮೂರು ವರ್ಣಗಳಿಂದ ಘಟಿತವಾದ **ಓಂ ಕಾರ** ಸ್ವರೂಪನೇ ಆಗಿದ್ದಾನೆ ಆ ಪರಬ್ರಹ್ಮ. ಅದಕ್ಕೆ ಶಬ್ದಬ್ರಹ್ಮ ಎನ್ನುತ್ತಾರೆ. ಋಗ್ವೇದವೇ ಆ ಬ್ರಹ್ಮದ ಮುಖ, ಯಜುರ್ವೇದವೇ ಅದರ ಕೊರಳು, ಸಾಮವೇದವು ಅದರ ನಾಲಿಗೆ, ಅಥರ್ವಣ ವೇದವು ಅದರ ಹೃದಯ. ಈ ಬ್ರಹ್ಮವು ಪ್ರಕೃತಿ ಪುರುಷರಿಗಿಂತ ಶ್ರೇಷ್ಠವಾದದ್ದು. ಈ ಬ್ರಹ್ಮತತ್ವಕ್ಕೆ ಎಂದೂ ಹುಟ್ಟು ಸಾವು ಇರುವದಿಲ್ಲ. ತಮೋಗುಣದ ಕಾರ್ಯಮಾಡಿ ರುದ್ರ ಎನಿಸುವುದು ಆ ಬ್ರಹ್ಮತತ್ವ. ರಜೋಗುಣದಿಂದ ಬ್ರಹ್ಮಾಂಡವನ್ನು ನಿರ್ಮಿಸಿ ಅದು ಬ್ರಹ್ಮ ಎಂದು ಕರೆಯಲ್ಪಡುತ್ತದೆ. ಮುಂದೆ ಸತ್ವಗುಣದಿಂದ ಎಲ್ಲರನ್ನು ರಕ್ಷಣೆಮಾಡಿ ವಿಷ್ಣು ಎಂಬ ಹೆಸರಿನಿಂದ ಪ್ರಸಿದ್ಧಿ ಹೊಂದಿದೆ.

ಪ್ರಧಾನ ಅಥವಾ ಅವ್ಯಕ್ತ ತತ್ವದಿಂದ ಮಹತ್ತತ್ವ, ಅಹಂಕಾರ, ಪಂಚಮಹಾಭೂತ, ಪಂಚತನ್ಮಾತ್ರೆಗಳು, ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ ಮತ್ತು ಮನಸ್ಸು ಹೀಗೆ ಒಟ್ಟು ಇಪ್ಪತ್ತಾಲ್ಕು ತತ್ವರೂಪವಾದ ಮೂಲಪ್ರಕೃತಿಯೂ, ಪುರುಷನೆಂಬ ಜೀವವೂ ಸೇರಿ ಇಪ್ಪತ್ತೈದು ತತ್ವಗಳು ಆಗುವುವು. ಇಪ್ಪತ್ತಾರನೆಯ ತತ್ವವೇ ಪರಮಾತ್ಮ ತತ್ವ. ಈ ಎಲ್ಲ ತತ್ವಗಳಿಂದ ಪ್ರಪಂಚದ ಸರ್ವವ್ಯಾಪಾರಗಳನ್ನು ಮಾಡಿಸುವ ಪರತತ್ವವನ್ನು ಧ್ಯಾನಿಸುತ್ತೇವೆ. ವಿಶ್ವದ ಸೃಷ್ಟಿ, ಸ್ಥಿತಿ, ಸಂಹಾರಗಳು ಆ ಪರಶಿವನಿಗೆ ಒಂದು ಲೀಲೆ. ಲಿಂಗರೂಪದಿಂದ ಚಿತ್ರವಿಚಿತ್ರವಾದ ಲೀಲೆಯನ್ನು ಮಾಡುವ ಆ ಪರಬ್ರಹ್ಮಲಿಂಗವನ್ನು ನಮಸ್ಕರಿಸಿ ಆ ಲಿಂಗರೂಪವು ಉಂಟಾಗಿ ಲೋಕ ಕ್ಷೇಮಕ್ಕಾಗಿ ಬೆಳೆದ ಬಗೆಯನ್ನು ಬಿತ್ತರಿಸುವೆನು.

*ಇತಿ ಲಿಂಗಮಹಾಪುರಾಣ ಪೂರ್ವಾರ್ಧದ ಪ್ರತಿಪಾದ್ಯವಾದ ವಿಷಯ ನಿರೂಪಣೆ*
*ಎಂಬ ಮೊದನೆಯ ಅಧ್ಯಾಯವು ಮುಗಿದುದು*



## ಒಂದು ನೂರು ಕೋಟಿ ಶ್ಲೋಕಗಳು — ಅಧ್ಯಾಯ - ೨

ಪೂರ್ವದಲ್ಲಿ ಮಹಾತ್ಮನಾದ ಬ್ರಹ್ಮದೇವನು ಈಶಾನಕಲ್ಪದ ವೃತ್ತಾಂತವನ್ನು ಹಿನ್ನೆಲೆಯ ಆಧಾರವಾಗಿಟ್ಟುಕೊಂಡು ಉತ್ತಮವಾದ ಲಿಂಗಮಹಾಪುರಾಣವನ್ನು ರಚಿಸಿದನು. ಆಗ ಆ ಎಲ್ಲ ಪುರಾಣಗಳ ವಿಸ್ತಾರ ಒಂದು ನೂರು ಕೋಟಿ ಶ್ಲೋಕ ರೂಪವಾಗಿದ್ದಿತು. ಅದರಲ್ಲಿ ಲಿಂಗಮಹಾಪುರಾಣವು ಒಂದು ಕೋಟಿ ಶ್ಲೋಕಗಳಿಂದ ಮೊದಲು ಕೂಡಿದ್ದಿತು. ಮುಂದೆ ವ್ಯಾಸರು ನೂರುಕೋಟಿ ಶ್ಲೋಕಾತ್ಮಕಗಳಾದ ಹದಿನೆಂಟು ಮಹಾಪುರಾಣಗಳನ್ನು ಸಂಕ್ಷೇಪಿಸಿ ನಾಲ್ಕು ಲಕ್ಷ ಶ್ಲೋಕಗಳಲ್ಲಿ ಸಂಗ್ರಹಿಸಿ ಹೇಳಿದರು. ದ್ವಾಪರದ ಆದಿ ಭಾಗದಲ್ಲಿ ಕೃಷ್ಣದ್ವೈಪಾಯನವ್ಯಾಸರು ಬ್ರಾಹ್ಮ ಪುರಾಣವೇ ಮೊದಲಾಗಿ ಹದಿನೆಂಟು ಪುರಾಣಗಳನ್ನು ವಿಭಾಗಮಾಡಿರುವರು. ಆ ಅಷ್ಟಾದಶ ಮಹಾಪುರಾಣಗಳಲ್ಲಿ ಈ ಲಿಂಗಮಹಾಪುರಾಣವು ಹನ್ನೊಂದನೆಯ ಮಹಾಪುರಾಣವಾಗಿದೆ. ಈ ಲಿಂಗಪುರಾಣವು ಈಗ ಹದಿನೆಂಟು ಸಾವಿರ ಶ್ಲೋಕಗಳಿಂದ ಕೂಡಿದ್ದು ಉಪಲಬ್ಧವಾಗಿರುತ್ತದೆ. ಇದರಲ್ಲಿ ಲಿಂಗೋತ್ಪತ್ತಿಯ ಕತೆಯನ್ನು ಒಳಗೊಂಡಿರುವ ಅನೇಕ ಮಹತ್ವದ ಮುಖ್ಯವಾದ

ವಿಷಯಗಳು ನಿರೂಪಿಸಲ್ಪಟ್ಟಿವೆ. ಮೊಟ್ಟಮೊದಲು ಬ್ರಹ್ಮನ ಮುಖ್ಯ ಸೃಷ್ಟಿ, ಪ್ರಾಕೃತಿಕ ಸೃಷ್ಟಿ, ವೈಕೃತಿಕ ಸೃಷ್ಟಿ, ಬ್ರಹ್ಮಾಂಡದ ಅಷ್ಟಾವರಣಗಳು, ರಜೋಗುಣದ ಸಂಬಂಧದಿಂದ ಬ್ರಹ್ಮಾಂಡದಲ್ಲಿ ಶಿವನ ಉತ್ಪತ್ತಿ, ವಿಷ್ಣುವಿನ ಸ್ವರೂಪ, ಕಾಲರುದ್ರಸ್ವರೂಪ, ಅವನ ನೀರಿನಲ್ಲಿಯ ಶಯನ ಮುಂತಾದ ಅನೇಕ ವಿಷಯಗಳು ಬಂದಿರುತ್ತವೆ. ಇದರಲ್ಲಿ ಶಿವಲಿಂಗ ಪೂಜೆಯ ಕ್ರಮ, ಸ್ನಾನದ ವಿಧಿ, ಕಾಶಿಯ ಮಹಿಮೆ, ಭೂಮಿಯಲ್ಲಿರುವ ಶಿವಾಲಯಗಳ ಸಂಖ್ಯೆ, ವಿಷ್ಣುದೇವಾಲಯಗಳ ಸಂಖ್ಯೆ, ಅಂತರಿಕ್ಷದಲ್ಲಿಯೂ, ಬ್ರಹ್ಮಾಂಡದಲ್ಲಿಯೂ ಇರುವ ದೇವಸ್ಥಾನಗಳ ವರ್ಣನೆ, ಮುಂತಾದ ಅನೇಕ ವಿಷಯಗಳು ಕ್ರಮವಾಗಿ ನಿರೂಪಿಸಲ್ಪಟ್ಟಿವೆ.

*ಇತಿ ಲಿಂಗಮಹಾಪುರಾಣದ ಪೂರ್ವಾರ್ಧದ ವಿಷಯಾನುಕ್ರಮಣಿಯ ವರ್ಣನೆ ಎಂಬ ಎರಡನೆಯ ಅಧ್ಯಾಯ ಮುಗಿದುದು.*



## ಸೃಷ್ಟಿಯ ವಿವರಣೆ

**ಅಧ್ಯಾಯ - ೩**

**ಸೂತರು:-**

**ಅಲಿಂಗೋ ಲಿಂಗ ಮೂಲಂ ತು ಅವ್ಯಕ್ತಂ ಲಿಂಗಮುಚ್ಯತೇ ।**
**ಅಲಿಂಗಃ ಶಿವ ಇತ್ಯುಕ್ತೋ ಲಿಂಗಂ ಶೈವಮಿತಿ ಸ್ಮೃತಮ್ ॥**

ಈ ಚರಾಚರ ಪ್ರಪಂಚವೆಲ್ಲವೂ ಅವ್ಯಕ್ತದಿಂದ ವ್ಯಕ್ತವಾಗಿದೆ. ಅವ್ಯಕ್ತ ಎಂದರೆ ಪ್ರಕೃತಿ. ಆ ಪ್ರಕೃತಿಯು ಲಿಂಗದಿಂದಲೇ ವ್ಯಕ್ತವಾಗುವದರಿಂದ ಲಿಂಗಮೂಲ ಎನಿಸುತ್ತದೆ. ಮೂಲ ಪ್ರಕೃತಿಯಿಂದ ಉತ್ಪನ್ನವಾದ ಈ ಪ್ರಪಂಚವೆಲ್ಲವೂ ಮೊದಲು ವ್ಯಕ್ತವಾಗಿ ಬೆಳೆದು ಮತ್ತೆ ಆ ಲಿಂಗದಲ್ಲಿಯೇ ಲೀನವಾಗುತ್ತದೆ. ಪ್ರಳಯಕಾಲದಲ್ಲಿ ಅವನಲ್ಲಿ ಲೀನವಾಗಿ ಸೃಷ್ಟಿಕಾಲದಲ್ಲಿ ಅವನಿಂದಲೇ ವ್ಯಕ್ತವಾಗಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುತ್ತದೆ. ಆದುದರಿಂದ ಆ ಅವ್ಯಕ್ತ, ಪ್ರಧಾನ, ಪ್ರಕೃತಿ ಎಂದು ಕರೆಯಲ್ಪಡುವ ಪ್ರಕೃತಿ ತತ್ವವು ಲಿಂಗಮೂಲ ಎನಿಸಿದೆ. ಈ ಲಿಂಗ ಮೂಲನಾದ ಶಿವನು ಮಾತ್ರ ಅಲಿಂಗ. ಅವನಿಗೆ ಯಾವುದೇ ಚಿನ್ಹೆ, ಗುರುತು, ವಿಶೇಷ ಧರ್ಮ ಅಥವಾ ಲಕ್ಷಣ ಯಾವುದೂ ಇರುವದಿಲ್ಲ. ಆದುದರಿಂದ ಅವನು ಅಲಿಂಗ ಎನಿಸುವನು. ಈ ಪ್ರಪಂಚವನ್ನೆಲ್ಲ ಕೊನೆಗೆ ತನ್ನಲ್ಲಿ ಲೀನವನ್ನಾಗಿ ಮಾಡಿಕೊಂಡು ಸೃಷ್ಟಿ ಕಾಲದಲ್ಲಿ ಅದನ್ನೆಲ್ಲ ಗಮಯತಿ ಜನನಾದಿಗಳನ್ನು ಹೊಂದಿಸುತ್ತಾನೆ ಎಂದು ಶಿವನೇ ಲಿಂಗ ಎನಿಸಲ್ಪಟ್ಟಿರುತ್ತಾನೆ. ಅವನಿಂದ ಉತ್ಪನ್ನವಾಗಿ ಅವನಲ್ಲಿಯೇ ಲೀನವಾಗುವ ಈ ಪ್ರಪಂಚವೆಲ್ಲವೂ 'ಶೈವಂ ಲಿಂಗಂ' ಎನಿಸಲ್ಪಡುತ್ತದೆ. ಶಿವನು ಲಿಂಗ ಎನಿಸಲ್ಪಡುವ ಪ್ರಕೃತಿಗೆ ಕಾರಣನಾಗಿದ್ದಾನೆ. ಅವನಿಂದಲೆ ವಾಸನೆ, ಬಣ್ಣ, ರುಚಿ ಇವುಗಳಿಂದ ಕೂಡಿದ ಶಬ್ದ ಸ್ಪರ್ಶ ಮುಂತಾದ ಲಕ್ಷಣಗಳುಳ್ಳ ಪ್ರಪಂಚಕ್ಕೆ ಕಾರಣವಾದ ಪಂಚಮಹಾಭೂತಗಳ ಉತ್ಪತ್ತಿ ವಿನಾಶ ಬೆಳವಣಿಗೆ ಎಲ್ಲವೂ ಆಗಿರುತ್ತದೆ. ನಿರ್ಗುಣನಾದ ಶಿವನ ಮಾಯಾಶಕ್ತಿಯಿಂದ ಇಪ್ಪತ್ತಾರು ಇಪ್ಪತ್ತೇಳರಿಂದ ಕೂಡಿದ ಪ್ರಪಂಚವು ವಿಸ್ತಾರವಾಗಿರುತ್ತದೆ. ಆ ತತ್ವಗಳಿಂದ ಶಿವಸ್ವರೂಪರಾದ ಮೂರುದೇವತೆಗಳು ಹುಟ್ಟಿದರು. ಅವರಲ್ಲಿ ಒಬ್ಬನಿಂದ ಪ್ರಪಂಚದ ಉತ್ಪತ್ತಿಯಾಯಿತು.

ಅವನೇ ಬ್ರಹ್ಮ, ಒಬ್ಬನು ಉತ್ಪನ್ನವಾದ ಈ ಪ್ರಪಂಚವನ್ನು ರಕ್ಷಿಸಿದನು. ಅವನೇ ವಿಷ್ಣು. ಮತ್ತೊಬ್ಬನು ಸಂಹರಿಸಿದನು. ಅವನೇ ರುದ್ರ, ಈ ಮೂವರಿಗೂ ಕಾರ್ಯಭೇದದಿಂದ ಬೇರೆ ಬೇರೆ ಹೆಸರುಗಳು ಬಂದಿವೆ. ಆದರೆ ಮೂಲತಃ ಈ ಮೂವರು ಒಂದೇ. ಈ ಮೂವರೂ ಶಿವ ಸ್ವರೂಪರೇ. ಇವರಲ್ಲಿ ಬೀಜಂ ಬ್ರಹ್ಮ, ಯೋನಿಃ-ವಿಷ್ಣುಃ, ನಿರ್ಬೀಜಃ-ರುದ್ರಃ ಅಥವಾ ನಿರ್ಬೀಜ ಎಂದರೆ ಕಾರಣವಿಲ್ಲದವನು ಎಂದರ್ಥ ವಿಶ್ವ, ತೈಜಸ, ಪ್ರಾಜ್ಞ ಎಂದು ಆತ್ಮನ ಹೆಸರೇ ಬಂದಿರುತ್ತದೆ.

ನಿರ್ಗುಣನಾದ ಶಿವನು ಸೃಷ್ಟಿಗೆ ಪೂರ್ವದಲ್ಲಿ ತನ್ನದೇ ಆದ ಪ್ರಕೃತಿಯನ್ನು ನೋಡಿದನು. ಆ ಶಿವನ ದರ್ಶನ ಶಕ್ತಿಯಿಂದ ಪ್ರಕೃತಿಯು ಸತ್ವ ರಜಸ್ತಮೋಗುಣಗಳಿಂದ ಕೂಡಿ ವ್ಯಕ್ತವಾಗುವದು. ಶಿವ ಸಂಬಂಧವಾದ ಪ್ರಕೃತಿಯು ಪ್ರಪಂಚಕ್ಕೆಲ್ಲ ತಾಯಿಯಾಗಿ ಅಜಾ ಎಂಬ ಹೆಸರನ್ನು ಪಡೆದಿರುವಳು.

ಪುರುಷನಾದ ಪರಮೇಶ್ವರನ ಈಕ್ಷಣ ಶಕ್ತಿಯಿಂದ ಕೂಡಿ ಸೃಷ್ಟಿ ಸಮಯದಲ್ಲಿ ಸತ್ವರಜಸ್ತಮೋಗುಣಗಳಿಂದ ಕೂಡಿದ ಪ್ರಕೃತಿಯಿಂದ ಈಶ್ವರೇಚ್ಛೆಯಿಂದ ಮಹತ್ತತ್ವವು ಹುಟ್ಟಿತು. ಆ ಮಹತ್ತತ್ವದಿಂದ ವೈಕಾರಿಕ, ತೈಜಸ, ತಾಮಸ ಎಂಬ ಮೂರು ಅಹಂಕಾರ ತತ್ವಗಳು ಹುಟ್ಟಿದವು. ವೈಕಾರಿಕ ಅಹಂಕಾರದಿಂದ ಇಂದ್ರಿಯಾಭಿಮಾನಿ ದೇವತೆಗಳು ಮತ್ತು ಮನಸ್ಸು ಹುಟ್ಟಿದವು. ತೈಜಸ ಅಹಂಕಾರದಿಂದ ಪಂಚಕರ್ಮೇಂದ್ರಿಯ, ಪಂಚ ಜ್ಞಾನೇಂದ್ರಿಯಗಳು ಉತ್ಪನ್ನವಾದವು. ತಾಮಸ ಅಹಂಕಾರದಿಂದ ಪಂಚತನ್ಮಾತ್ರೆಗಳು ಹುಟ್ಟಿದವು. ಶಬ್ದ ತನ್ಮಾತ್ರದಿಂದ ಆಕಾಶದ ಉತ್ಪತ್ತಿ, ಆಕಾಶದಿಂದ ಸ್ಪರ್ಶ ತನ್ಮಾತ್ರ, ಅದರಿಂದ ವಾಯು, ಅನಂತರ ರೂಪ ತನ್ಮಾತ್ರ, ಅದರಿಂದ ಅಗ್ನಿ, ಬಳಿಕ ರಸತನ್ಮಾತ್ರ, ಅದರಿಂದ ನೀರು. ಆಮೇಲೆ ಗಂಧ ತನ್ಮಾತ್ರ, ಅದರಿಂದ ಭೂಮಿ ಉತ್ಪನ್ನವಾದವು. ಹೀಗೆ ಪಂಚತನ್ಮಾತ್ರಗಳಿಂದ ಪಂಚಮಹಾಭೂತಗಳ ಸೃಷ್ಟಿಯಾಯಿತು. ಈ ತತ್ವಗಳೆಲ್ಲವೂ ಕೂಡಿ ಅಂಡವನ್ನು ನಿರ್ಮಿಸುವವು. ಆ ಅಂಡದಿಂದ ಹಿರಣ್ಯಗರ್ಭ ಬ್ರಹ್ಮನು ಹುಟ್ಟುವನು. ಇವನೇ ಕಾರ್ಯಾರ್ಥವಾಗಿ ಸೃಷ್ಟಿ, ಸ್ಥಿತಿ, ಸಂಹಾರ ಕಾರ್ಯಾರ್ಥವಾಗಿ ಬ್ರಹ್ಮ ವಿಷ್ಣು ರುದ್ರ ಎಂಬ ರೂಪಾಂತರವನ್ನು ಹೊಂದುವನು. ಆ ಅಂಡದೊಳಗೆ ಸಮಸ್ತ ಲೋಕಗಳಿಂದ ಕೂಡಿದ ಪ್ರಪಂಚವು ಇರುವದು. ಇದೇ ಬ್ರಹ್ಮಾಂಡ ಎನ್ನುವರು.

ಈ ಅಂಡದ ಹೊರಗೆ ಅದರ ಹತ್ತರಷ್ಟು ನೀರು ಅದನ್ನು ಸುತ್ತಿಕೊಂಡಿರುವದು. ನೀರಿನ ಹತ್ತರಷ್ಟು ತೇಜಸ್ಸು, ತೇಜಸ್ಸಿನ ಹತ್ತರಷ್ಟು ವಾಯು, ವಾಯುವು ಆ ತೇಜಸ್ಸನ್ನು, ತೇಜಸ್ಸು ನೀರನ್ನು ಆವರಿಸಿಕೊಂಡಿರುವುದು. ವಾಯುವಿನ ಹತ್ತರಷ್ಟು ಆಕಾಶವು ಆ ವಾಯುವನ್ನೂ, ಆ ಆಕಾಶವನ್ನು ಅಹಂಕಾರಿಕ ತತ್ವವೂ, ಅಹಂಕಾರವನ್ನು ಮಹತ್ತತ್ವವೂ, ಮಹತ್ತತ್ವವನ್ನು ಪ್ರಕೃತಿಯೂ ಆವರಿಸಿಕೊಂಡಿರುವದು. ಹೀಗೆ ಉತ್ಪತ್ತಿಯಾದ ಅಂಡ ಬ್ರಹ್ಮಾಂಡಕ್ಕೆ ನೀರು, ತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹತ್ತತ್ವ, ಪ್ರಕೃತಿ ಎಂಬ ಏಳು ಆವರಣಗಳಿರುವವು. ಆ ಅಂಡಕ್ಕೆ ಹಿರಣ್ಯಗರ್ಭ ಬ್ರಹ್ಮನೇ ಜೀವನು. ಆ ಸಮಷ್ಟಿ ಬ್ರಹ್ಮಾಂಡದಲ್ಲಿ ಅಂಡಗಳು ಎಂದರೆ ವ್ಯಷ್ಟಿ ಬ್ರಹ್ಮಾಂಡಗಳು ಲೆಕ್ಕವಿಲ್ಲದಷ್ಟಿರುವವು. ಪ್ರತಿಯೊಂದು ವ್ಯಷ್ಟಿ ಬ್ರಹ್ಮಾಂಡದಲ್ಲಿ ಹರಿಹರ ಬ್ರಹ್ಮ ಎಂಬ ತ್ರಿಮೂರ್ತಿಗಳನ್ನು ಪ್ರಕೃತಿ ಎಂಬ ಶಕ್ತಿದೇವಿಯು ಶಿವನ ಸಾನ್ನಿಧ್ಯದಿಂದ ಬಲವನ್ನು ಪಡೆದು ಸೃಷ್ಟಿಸುವಳು.

ಕೊನೆಗೆ ಲಯವಾಗಬೇಕಾದರೂ, ಅಂಡ, ನೀರು, ತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹತ್ತತ್ವ ಇವೆಲ್ಲವೂ ಒಂದರಲ್ಲಿ ಒಂದು ಲಯವಾಗುವವು. ಸೃಷ್ಟಿ ಸ್ಥಿತಿ ನಾಶಗಳನ್ನು ಮಹಾದೇವನೇ ಮಾಡುವನು. ಸೃಷ್ಟಿಮಾಡುವಾಗ ರಜೋಗುಣದಿಂದಲೂ, ರಕ್ಷಣ ಮಾಡುವಾಗ ಸತ್ವಗುಣದಿಂದಲೂ, ಲಯಮಾಡುವಾಗ ತಮೋಗುಣದಿಂದಲೂ ಕೂಡಿರುವನು. ಬ್ರಹ್ಮ ರುದ್ರ ವಿಷ್ಣು ಇವರು ಮೂವರೂ ಸರ್ವಾತ್ಮಕನಾದ ಸದಾಶಿವನ ಅಂಶರೇ.

*ಇತಿ ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಪ್ರಕೃತಿ ಸಂಬಂಧವಾದ ಸೃಷ್ಟಿಯ ವಿವರಣೆ ಎಂಬ ಮೂರನೆಯ ಅಧ್ಯಾಯ ಮುಗಿದುದು.*



## ಸೃಷ್ಟಿಯ ಪ್ರಾರಂಭ

## ಅಧ್ಯಾಯ - ೪

**ಸೂತರು** :- ಚತುರ್ಮುಖ ಬ್ರಹ್ಮನು ಸೃಷ್ಟಿಮಾಡುತ್ತಿರುವ ಕಾಲವನ್ನು ಹಗಲು ಎಂದೂ ಆ ಸೃಷ್ಟಿಕಾಲದಷ್ಟೆ ಅಳತೆಯಿಂದ ಕೂಡಿದ ಕಾಲವನ್ನು ರಾತ್ರಿಯೆಂದೂ ಸಂಗ್ರಹವಾಗಿ ಹೇಳಿರುವರು. ಬ್ರಹ್ಮನು ಹಗಲು ಹೊತ್ತು ಸೃಷ್ಟಿಕಾರ್ಯವನ್ನೂ ರಾತ್ರಿ ಕಾಲದಲ್ಲಿ ಪ್ರಳಯಕಾರ್ಯವನ್ನೂ ಮಾಡುವನು. ಬ್ರಹ್ಮನಿಗೆ ಹಗಲು ರಾತ್ರಿಗಳು ಕಲ್ಪಿತವಾಗಿವೆ. ಅವನಿಗೆ ನಮ್ಮಂತೆ ಸೂರ್ಯೋದಯ ಸೂರ್ಯಾಸ್ತ, ವಿಶ್ರಾಂತಿ, ಜ್ಞಾನ, ಅಜ್ಞಾನ ಮೊದಲಾದ ವಿಕಾರಗಳು ಇಲ್ಲ.

ಆ ಬ್ರಹ್ಮನ ಹಗಲಿನಲ್ಲಿ ಎಂದರೆ ಸೃಷ್ಟಿ ಕಾರ್ಯದಲ್ಲಿ ಸಮಸ್ತ ಪ್ರಕೃತಿ ವಿಕಾರಗಳು, ವಿಶ್ವೇದೇವತೆಗಳು, ಪ್ರಜಾಪತಿಗಳು, ಇತರ ಮಹರ್ಷಿಗಳು ಇರುವರು. ರಾತ್ರಿಯಲ್ಲಿ ಎಂದರೆ ಸೃಷ್ಟಿಮಾಡದಿರುವಾಗ ಎಲ್ಲವೂ ಪ್ರಕೃತಿಯಲ್ಲಿ ಲಯವಾಗುವದು. ರಾತ್ರಿಯು ಕಳೆದ ಬಳಿಕ ಮತ್ತೆ ಉತ್ಪತ್ತಿಯಾಗುವದು. ಆ ಬ್ರಹ್ಮನ ರಾತ್ರಿ ಹಗಲು ಕಾಲದ ಒಂದು ದಿನವನ್ನು ಕಲ್ಪ ಎಂದು ಕರೆಯುವರು. ನಾಲ್ಕು ಯುಗಗಳು ಒಂದು ಸಾವಿರ ಬಾರಿ ಸುತ್ತಿದರೆ ಬ್ರಹ್ಮನ ಒಂದು ಹಗಲು, ಬ್ರಹ್ಮನ ಒಂದು ಹಗಲಿನಲ್ಲಿ ಹದಿನಾಲ್ಕು ಜನ ಮನುಗಳ ಮನ್ವಂತರಗಳು ಆಗಿಹೋಗುವವು.

ಆರೋಗ್ಯವಾಗಿರುವ ಮನುಷ್ಯನು ತನ್ನ ಕಣ್ಣು ರೆಪ್ಪೆಗಳನ್ನು ಹದಿನೈದು ಸಲ ಬಡೆದು ತೆಗೆವ ಕಾಲಕ್ಕೆ ಕಾಷ್ಠಾ ಎನ್ನುವರು. ಮುವ್ವತ್ತು ಕಾಷ್ಠಾ = ಒಂದು ಕಲಾ, ಮುವತ್ತು ಕಲಾ = ಒಂದು ಮುಹೂರ್ತ = ಒಂದು ಹಗಲು. ಅಷ್ಟೇ ಮೂವತ್ತು ಮುಹೂರ್ತ ರಾತ್ರಿ ಮನುಷ್ಯನ ಒಂದು ತಿಂಗಳು ಪಿತೃಗಳಿಗೆ ಒಂದು ದಿನ, ಮನುಷ್ಯರ ಕೃಷ್ಣ ಪಕ್ಷ ಪಿತೃಗಳಿಗೆ ಹಗಲು, ಶುಕ್ಲ ಪಕ್ಷವೇ ರಾತ್ರಿ, ಮಾನವರ ಮುವ್ವತ್ತು ತಿಂಗಳುಗಳಿಗೆ ಪಿತೃಗಳ ಒಂದು ತಿಂಗಳಾಗಿರುವುದು. ಮಾನವರ ಮುನ್ನೂರ ಅರವತ್ತು ತಿಂಗಳುಗಳಿಗೆ ಪಿತೃಗಳ ಒಂದು ವರ್ಷವಾಗುವದು.

ಮಾನವರ ಕಾಲಮಾನದಿಂದ ಹನ್ನೆರಡು ತಿಂಗಳಾದರೆ ದೇವತೆಗಳಿಗೆ ಒಂದು ದಿನ. ಮಾನವ ಮಾನದ ಉತ್ತರಾಯಣವು ದೇವತೆಗಳಿಗೆ ಹಗಲು, ದಕ್ಷಿಣಾಯನವು ರಾತ್ರಿ. ಮನುಷ್ಯರ ಮುವತ್ತು ವರ್ಷಗಳಾದರೆ ದೇವತೆಗಳಿಗೆ ಒಂದು ತಿಂಗಳು. ಮಾನವರ ಮುನ್ನೂರಅರವತ್ತು ವರ್ಷಗಳಾದರೆ ದೇವತೆಗಳಿಗೆ ಒಂದು ವರ್ಷವಾಗುವದು. ಮಾನವರ ಕಾಲಮಾನದ ಮೂರು ಸಾವಿರದ ಮುವತ್ತು ವರ್ಷಗಳಿಗೆ ಒಂದು ಸಪ್ತರ್ಷಿ

ವರ್ಷವಾಗುವದು. ಹೀಗೆಯೇ ಒಂಬತ್ತು ಸಾವಿರದ ತೊಂಬತ್ತು ವರ್ಷಗಳಿಗೆ ಒಂದು ಧ್ರುವ ಸಂವತ್ಸರವಾಗುವದು. ಮುವತ್ತಾರು ಸಾವಿರ ಮನುಷ್ಯವರ್ಷಗಳಿಗೆ ಒಂದು ನೂರುದೇವವರ್ಷಗಳು. ಮೂರು ಲಕ್ಷ ಆರವತ್ತು ಸಾವಿರ ಮನುಷ್ಯವರ್ಷಗಳಿಗೆ ಒಂದು ಸಾವಿರ ದಿವ್ಯವರ್ಷಗಳು ಆಗುವವು ಎಂದು ಗಣಿತ ಪಂಡಿತರು ಹೇಳುವರು. ಕೃತ, ತ್ರೇತಾ, ದ್ವಾಪರ, ಕಲಿ ಎಂಬ ಮಾನವ ಮಾನದ ಯುಗಗಳು ದೇವತಾ ಮಾನದಲ್ಲಿ ನಾಲ್ಕು ಸಾವಿರ, ಮೂರು ಸಾವಿರ, ಎರಡು ಸಾವಿರ, ಒಂದು ಸಾವಿರ ವರ್ಷಗಳಾಗುವವು.

ಮೊದಲನೆಯದಾದ ಕೃತಯುಗಕ್ಕೆ ಮಾನವಮಾನದಲ್ಲಿ ಹದಿನಾಲ್ಕುಲಕ್ಷ ನಲವತ್ತು ಸಾವಿರ (೧೪, ೪೦,೦೦೦) ಮಾನವವರ್ಷಗಳು. ತ್ರೇತಾಯುಗಕ್ಕೆ ಹತ್ತು ಲಕ್ಷದ ಎಂಬತ್ತು ಸಾವಿರ (೧೦, ೮೦,೦೦೦) ಮಾನವವರ್ಷಗಳು, ದ್ವಾಪರ ಯುಗಕ್ಕೆ ಏಳುಲಕ್ಷಇಪ್ಪತ್ತು ಸಾವಿರ (೭,೨೦,೦೦೦) ಮಾನವವರ್ಷಗಳು. ಕಲಿಯುಗಕ್ಕೆ ಮೂರು ಲಕ್ಷ ಆರವತ್ತು ಸಾವಿರ (೩,೬೦,೦೦೦) ವರ್ಷಗಳು. ಈ ರೀತಿಯಲ್ಲಿ ಸಂಧಿಕಾಲವನ್ನು ಬಿಟ್ಟು ಚತುರ್ಯುಗ ಪ್ರಮಾಣವು ಮುವತ್ತಾರು ಲಕ್ಷ (೩೬,೦೦,೦೦೦) ವರ್ಷಗಳು. ಸಂಧಿಕಾಲವು ಸೇರಿದರೆ ನಾಲ್ಕು ಯುಗಗಳಿಗೂ ಕೂಡಿ ಮಾನವಮಾನದ ನಲವತ್ಮೂರು ಲಕ್ಷದ ಇಪ್ಪತ್ತು ಸಾವಿರ (೪೩,೨೦,೦೦೦) ವರ್ಷಗಳು ಆಗುವವು. ಈ ರೀತಿಯಲ್ಲಿ ಕೃತ ತ್ರೇತಾದಿ ಚತುರ್ಯುಗಗಳಾದರೆ ಒಂದು ಮನ್ವಂತರ ಕಾಲವಾಗುವದು.

ಮಾನುಷ್ಯವರ್ಷ ಪ್ರಮಾಣದಲ್ಲಿ ಮುವ್ವತ್ತು ಕೋಟಿ ಅರವತ್ತೇಳು ಲಕ್ಷದ ಇಪ್ಪತ್ತು ಸಾವಿರ ವರ್ಷಗಳು ಒಂದು ಮನ್ವಂತರಕ್ಕೆ ಆಗುವವು. ಇದರಲ್ಲಿ ಒಂದು ಮನ್ವಂತರಕ್ಕೆ ಬರುವ ಹೆಚ್ಚು ಭಾಗವು ಸೇರಿಲ್ಲ. ಈ ಲಿಂಗಪುರಾಣದಲ್ಲಿ ಈ ರೀತಿಯಲ್ಲಿ ಹೇಳಿರುವುದು. ಜ್ಯೋತಿಶಾಸ್ತ್ರದಲ್ಲಿ ಮೊದಲಿನಲ್ಲಿಯೂ ಕಡೆಯಲ್ಲಿಯೂ ಯುಗಸಂಧಿಕಾಲಗಳನ್ನು ಸೇರಿಸಿದರೆ ಚತುರ್ಯುಗಗಳ ಪ್ರಮಾಣವು ನಲವತ್ತು ಮೂರು ಲಕ್ಷದ ಇಪ್ಪತ್ತು ಸಾವಿರ ವರ್ಷಗಳಾಗುವವು ಎಂದು ಎಣಿಕೆಯನ್ನು ಮಾಡಿ ಗೊತ್ತುಪಡಿಸಿದೆ.

ಬ್ರಹ್ಮನು ಒಂದುಸಾವಿರ ಚತುರ್ಯುಗಗಳ ರಾತ್ರಿಯು ಕಳೆಯುತ್ತಲು ಸೃಷ್ಟಿಯನ್ನು ಮಾಡುವನು. ರಾತ್ರಿಯಲ್ಲಿ ಪ್ರಾಣಿಗಳೆಲ್ಲವೂ ಲಯವಾಗುವವು. ದೇವತೆಗಳ ಇಪ್ಪತ್ತೆಂಟು ಕೋಟಿ ವರ್ಷಗಳಿಗೆ ಒಂದು ಮನ್ವಂತರವಾಗುವದು. ಒಂದು ಕಲ್ಪಕ್ಕೆ ಅಂದರೆ ಹದಿನಾಲ್ಕು ಮನ್ವಂತರಗಳಿಗೆ ಮುನ್ನೂರತೊಂಬತ್ತೆರಡು ಕೋಟಿ ದೇವಮಾನದ ವರ್ಷಗಳಾಗುವವು. ಒಂದು ಕಲ್ಪವು ಕಳೆಯುತ್ತಿರಲಾಗಿ ಆ ಕಲ್ಪದ ಕೊನೆಯಲ್ಲಿ ಪ್ರಳಯವು ಉಂಟಾಗುತ್ತಿರಲು, ಸಮಸ್ತ ಜೀವಿಗಳೂ ಭೂಮಿಯೇ ಮೊದಲಾದ ಮೂರು ಲೋಕಗಳನ್ನೂ ಮಹರ್ಲೋಕವನ್ನೂ ಬಿಟ್ಟು ಜನಲೋಕಕ್ಕೆ ಹೋಗುವರು. ಸಾವಿರ ಕಲ್ಪಗಳಾದರೆ ಬ್ರಹ್ಮನಿಗೆ ಒಂದು ವರ್ಷವಾಗುವದು. ಎಂಟು ಸಾವಿರ ವರ್ಷಗಳಿಗೆ ಒಂದು ಬ್ರಹ್ಮಯುಗವು. ಬ್ರಹ್ಮನ ಸಾವಿರ ಯುಗಗಳಿಗೆ ವಿಷ್ಣುವಿಗೆ ಸವನವೆಂಬ ಒಂದು ದಿನವಾಗುವದು. ವಿಷ್ಣುವಿನ ಸವನವೆಂಬ ಸಾವಿರ ದಿನಗಳ ಮೂರರ ಮೂರರಷ್ಟು ಎಂದರೆ ಒಂಬತ್ತು ಸಾವಿರ ದಿನಗಳಿಗೆ ರುದ್ರನಿಗೆ ಒಂದು ದಿನವಾಗುವದು. ಅಥವಾ **'ಕಾಲಃ'** ಎಂದರೆ ನಿಮೇಷರೂಪವಾದ ಕಾಲವೆಂದು ಹೇಳಬಹುದು.

ಭವೋದ್ಭವ, ತಪ, ಭವ್ಯ, ರಂಭ, ಕೃತು, ಋತುವಹ್ನಿ, ಹವ್ಯವಾಹ, ಸಾವಿತ್ರ, ಶುದ್ಧ, ಉಶಿಕ, ಕುಶಿಕ, ಗಾಂಧಾರ, ಋಷಭ, ಷಡ್ಜ, ಮಜ್ಜಲೀಯ, ಮಧ್ಯಮ, ವೈರಾಜ, ನಿಷಾದ,

ಮುಖ್ಯ, ಮೇಘವಾಹನ, ಪಂಚಮ, ಚಿತ್ರಕ, ಆಕೂತಿ, ಜ್ಞಾನ, ಮನ, ಸುದರ್ಶ, ಬೃಂಹ, ಶ್ವೇತ ಲೋಹಿತ, ರಕ್ತ, ಪೀತವಾಸ, ಅಸಿತ, ಸರ್ವರೂಪಕ, ಎಂಬ ಕಲ್ಪಗಳು ಪ್ರಕೃತಿಯಿಂದ ಉತ್ಪನ್ನನಾದ ಬ್ರಹ್ಮನ ಎಂದರೆ ರುದ್ರನ ಒಂದು ದಿನದಲ್ಲಿ ಕಳೆದು ಹೋಗುವವು.

ಮುನಿಗಳೇ, ಕೇಳಿರಿ. ಅನೇಕ ಕೋಟಿ ಕಲ್ಪಗಳು ಕಳೆದುಹೋದವು, ಇನ್ನೂ ಹಗಲು ರಾತ್ರಿಗಳು ಮುಂದೆ ಎಷ್ಟೋ ಬರುವವು. ಆದರೆ ಪರಾಂತವೆಂದರೆ ಮಹಾಪ್ರಳಯದಲ್ಲಿ ಸೃಷ್ಟಿಸಿದ ಈ ಪ್ರಪಂಚವೆಲ್ಲವೂ ನಾಶವನ್ನು ಹೊಂದುವ ಕಾಲವು.

ಬ್ರಹ್ಮನ ರಾತ್ರಿಯಲ್ಲಿ, ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಎಂಬ ನಾಲ್ಕು ಲೋಕಗಳು ನಾಶಹೊಂದುವವು. ಇವುಗಳಿಗಿಂತ ಮೇಲಿನ ಲೋಕಗಳು ನಾಶ ಹೊಂದುವದಿಲ್ಲ. ಅವನ ರಾತ್ರಿಯಲ್ಲಿ ಚರಾಚರ ಪ್ರಾಣಿಗಳೆಲ್ಲ ನಾಶವಾಗಿ ನೀರಿನಲ್ಲಿ ಮುಳುಗಿರಲು ಆ ದೊಡ್ಡ ಸಮುದ್ರದಲ್ಲಿರುವ ನೀರಿನಲ್ಲಿ ಬ್ರಹ್ಮನು ಮಲಗಿ ನಿದ್ರಿಸುವನು. ಆದುದರಿಂದಲೇ ಅವನಿಗೆ ನಾರಾಯಣನೆಂದು ಹೆಸರು ಬಂದಿರುವದು.

ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಬ್ರಹ್ಮನು ತನ್ನ ರಾತ್ರಿ ಪ್ರಮಾಣವು ಕಳೆದ ಮೇಲೆ ಯೋಗನಿದ್ರೆಯಿಂದ ಎಚ್ಚರಗೊಂಡು ಚರಾಚರ ಪ್ರಪಂಚವು ಇಲ್ಲದಿರುವದನ್ನು ಕಂಡು ಪುನಃ ಸೃಷ್ಟಿಮಾಡುವ ಆಲೋಚನೆಯನ್ನುಮಾಡಿ ಹಿಂದಿನಂತೆ ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಎಂಬ ನಾಲ್ಕು ಲೋಕಗಳನ್ನು ಸೃಷ್ಟಿಸಿದನು.

*ಇತಿ ಲಿಂಗಮಹಾಪುರಾಣದ ಪೂರ್ವಾರ್ಧದ ಸೃಷ್ಟಿಯು ಪ್ರಾರಂಭವಾದ ರೀತಿಯನ್ನು ವರ್ಣಿಸಿದ ನಾಲ್ಕನೆಯ ಅಧ್ಯಾಯ ಮುಗಿದುದು.*



## ಪ್ರಜಾಸೃಷ್ಟಿ ವರ್ಣನೆ

**ಅಧ್ಯಾಯ - ೫**

**ಸೂತರು :-** ಸೃಷ್ಟಿಮಾಡಲು ಪ್ರಾರಂಭಿಸಿದ ಆ ಬ್ರಹ್ಮನು ಮೊದಲು ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ ಎಂದು ಐದು ಬಗೆಯಾದ ಅವಿದ್ಯೆಯನ್ನು ನಿರ್ಮಿಸಿದನು. ತಮಸ್ಸು ಎಂದರೆ ಆತ್ಮವಲ್ಲದ ದೇಹಾದಿಗಳಲ್ಲಿ ಆತ್ಮಾಭಿಮಾನ, ಮೋಹ ಎಂದರೆ ದೇಹ ಸಂಬಂಧಿಗಳಾದ ಮಕ್ಕಳು, ಮಡದಿಯರಲ್ಲಿ ನನ್ನವರು ಎಂಬ ಅತಿಶಯ ಪ್ರೀತಿ ವಿಶೇಷ. ಮಹಾಮೋಹ ಎಂದರೆ ವಿಷಯಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿಗಳಲ್ಲಿ ನಿರಂತರ ಅಪೇಕ್ಷೆ. ತಾಮಿಸ್ರ ಎಂದರೆ ವಿಷಯ ಸುಖಕ್ಕೆ ಅಡ್ಡಿಯುಂಟಾದಾಗ ಹುಟ್ಟುವ ಕೋಪ. ಅಂಧತಾಮಿಸ್ರ ಎಂದರೆ ಈ ಎಲ್ಲ ವಿಷಯಗಳನ್ನು ತನ್ನದು ಎಂದು ತಿಳಿದುಕೊಂಡು ತಾನೇ ಅದನ್ನು ಭೋಗಿಸಬೇಕು ಎಂಬ ಬಲವತ್ತರವಾದ ಆಕಾಂಕ್ಷೆ. ಇದು ಬ್ರಹ್ಮದೇವರ ಮೊದಲನೆಯ ಸೃಷ್ಟಿ.

ಪ್ರಜಾಪತಿಯ ಈ ಪ್ರಥಮಸೃಷ್ಟಿಯು ಅವಿದ್ಯೆಯಿಂದ ಗ್ರಸ್ತವಾಗಿದೆ. ಮತ್ತು ಇದರಿಂದ ಯಾವುದೇ ಪ್ರಯೋಜನವಿಲ್ಲ ಎಂದು ತಿಳಿದು ಬೇರೆ ವಿಧ ಪದಾರ್ಥಗಳನ್ನು ಸೃಷ್ಟಿಸಬೇಕೆಂದು ವೃಕ್ಷಗಳನ್ನು ಸೃಷ್ಟಿಮಾಡಿದನು. ಮುಂದಿನ ಸೃಷ್ಟಿಯನ್ನು ಚಿಂತಿಸುತ್ತಿರುವ ಬ್ರಹ್ಮನ ಕಂಠಧ್ವನಿಯು ತ್ರಿಗುಣಾತ್ಮಕವಾಗಿ ತಮೋಗುಣದಿಂದ

ತಿರಿಯಗ್ಗತಿ, ಮಧ್ಯಗತಿ ರೂಪವಾಗಿ ಪಶುಪಕ್ಷಿಗಳ ಸೃಷ್ಟಿಯಾಯಿತು. ಊರ್ಧ್ವ ತಾರಗತಿಯಿಂದ ಅಂತರಿಕ್ಷದಲ್ಲಿರುವ ದೇವಾದಿಗಳ ಉತ್ಪತ್ತಿಯಾಯಿತು. ಅಧೋಗತಿಯಿಂದ ರಾಜಸಧ್ವನಿ ಮುಖಾಂತರ ಮನುಷ್ಯರ ಸೃಷ್ಟಿಯಾಯಿತು.

ಬ್ರಹ್ಮದೇವರು ಮತ್ತೊಂದು ರೀತಿಯ ಸೃಷ್ಟಿಕ್ರಮವನ್ನು ನಿರೂಪಿಸಿದರು. ಮೊದಲು ಮಹಾತತ್ವದ ಸೃಷ್ಟಿ, ಅನಂತರ ಪಂಚಮಹಾಭೂತಗಳು ಮತ್ತು ತನ್ಮಾತ್ರೆಗಳ ಸೃಷ್ಟಿಯು ಎರಡನೆಯದು. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಸೃಷ್ಟಿ ಮೂರನೆಯದು. ನಾಲ್ಕನೆಯದು ವೃಕ್ಷಾದಿಗಳ ಮುಖ್ಯ ಸೃಷ್ಟಿ, ಐದನೆಯದು ಪಶುಆದಿಗಳು. ಆರನೆಯದು ದೇವಾದಿಗಳ ಸೃಷ್ಟಿ, ಏಳನೆಯದು ಮನುಷ್ಯ ಸೃಷ್ಟಿ. ಎಂಟನೆಯದು ಅನುಗ್ರಹ ಸೃಷ್ಟಿ, ಒಂಬತ್ತನೆಯದು ಕೌಮಾರ ಸೃಷ್ಟಿ. ಇವೆಲ್ಲವೂ ಪ್ರಕೃತಿ ಸಂಬಂಧವಾದ ಸೃಷ್ಟಿಗಳು. ಬ್ರಹ್ಮನು ಮನುಷ್ಯ ಸೃಷ್ಟಿಯ ಪ್ರಾರಂಭದಲ್ಲಿ ತನ್ನ ಮನಸ್ಸಿನಿಂದಲೇ ಸನಕ, ಸನಂದನ, ಸನಾತನರೆಂಬವರನ್ನು ಸೃಷ್ಟಿಸಿದನು. ಅವರೆಲ್ಲರೂ ಮಹಾಜ್ಞಾನಿಗಳಾದುದರಿಂದ ವಿರಕ್ತರಾಗಿ ಸನ್ಯಾಸಿಗಳಾಗಿ ಮೋಕ್ಷವನ್ನು ಹೊಂದಿದರು.

ಅನಂತರ ಅದೇ ಚತುರ್ಮುಖನು ತನ್ನ ಯೋಗ ವಿದ್ಯೆಯಿಂದ ಮರೀಚಿ, ಭೃಗು, ಅಂಗಿರಸ, ಪುಲಸ್ತ್ಯ, ಪುಲಹ, ಕೃತು, ದಕ್ಷ, ಅತ್ರಿ, ವಸಿಷ್ಠ ಎಂಬ ಒಂಬತ್ತು ಜನ ಪ್ರಜಾಪತಿಗಳನ್ನು ಸೃಷ್ಟಿಸಿದನು. ಇವರೆಲ್ಲರೂ ಬ್ರಹ್ಮದೇವರ ಮಾನಸಪುತ್ರರು, ಬ್ರಹ್ಮಜ್ಞಾನಿಗಳು, ಬ್ರಹ್ಮೋಪದೇಶಕರೂ ಆಗಿದ್ದರು. ಇವರಿಗಿಂತಲೂ ಮೊದಲು ಬ್ರಹ್ಮನು ಋಭು, ಸನತ್ಕುಮಾರ ಎಂಬ ಇಬ್ಬರನ್ನು ಸೃಷ್ಟಿಸಿದರು. ಬ್ರಹ್ಮ ಪುತ್ರರಲ್ಲಿ ಇವರೇ ಹಿರಿಯರು.

ಪ್ರಪಂಚವು ಇನ್ನೂ ಅಭಿವೃದ್ಧಿಯನ್ನು ಹೊಂದಬೇಕು ಎಂದು ಶತರೂಪಾ, ಸ್ವಾಯಂಭುವ ಮನು ಎಂಬುವವರು ಸ್ತ್ರೀ ಪುರುಷ ಸೃಷ್ಟಿಯನ್ನು ಪ್ರಾರಂಭಿಸಿದರು. ಅವರಿಬ್ಬರು ವಿವಾಹವಾಗಿ ಸತಿಪತಿಗಳ ರೂಪದಿಂದ ಸಂಗಮಿಸಿ ಮೈಥುನ ಸೃಷ್ಟಿಯನ್ನು ಪ್ರಾರಂಭಿಸಿದರು. ಪ್ರಪಂಚದ ಮೊಟ್ಟಮೊದಲನೆಯ ದಂಪತಿಗಳಾದ ಸ್ವಾಯಂಭುವ ಮತ್ತು ಶತರೂಪಾರಿಂದ ಇಬ್ಬರು ಗಂಡು ಮಕ್ಕಳು ಮತ್ತು ಮೂರು ಮಂದಿ ಹೆಣ್ಣು ಮಕ್ಕಳು ಹುಟ್ಟಿದರು. ಪ್ರಿಯವ್ರತ ಜ್ಯೇಷ್ಠಪುತ್ರ. ಉತ್ಥಾನಪಾದ ಎರಡನೆಯವನು, ಆಕೂತಿ ಎಂಬ ಕನ್ಯೆಯನ್ನು ಸ್ವಾಯಂಭುವ ಮನು ರುಚಿ ಎಂಬ ಪ್ರಜಾಪತಿಗೂ, ಪ್ರಸೂತಿಯನ್ನು ದಕ್ಷ ಪ್ರಜಾಪತಿಗೂ ಮದುವೆ ಮಾಡಿಕೊಟ್ಟನು. ಆಕೂತಿಯು ರುಚಿ ಎಂಬ ತನ್ನ ಪತಿಯಿಂದ ಯಜ್ಞ ಎಂಬ ಗಂಡು ಮಗುವನ್ನೂ ದಕ್ಷಿಣಾದೇವಿ ಎಂಬ ಹೆಣ್ಣು ಮಗಳನ್ನೂ ಹೆತ್ತಳು. ಆ ದಕ್ಷಿಣಾದೇವಿಗೆ ಯಜ್ಞನಿಂದ ಹನ್ನೆರಡು ಜನ ಶ್ರೇಷ್ಠ ಕನ್ಯಾಮಣಿಗಳು ಉತ್ಪನ್ನರಾದರು.

ಪ್ರಸೂತಿ ದೇವಿಯು ದಕ್ಷ ಪ್ರಜಾಪತಿಯಿಂದ ಶ್ರದ್ಧಾ, ಲಕ್ಷ್ಮೀ, ಧೃತಿ, ಪುಷ್ಟಿ, ತುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪು, ಶಾಂತಿ, ಸಿದ್ಧಿ, ಕೀರ್ತಿ, ಖ್ಯಾತಿ, ಶಾಂತಿ, ಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮಾ, ಸನ್ನತಿ, ಅನಸೂಯಾ, ಊರ್ಜಾ, ಸ್ವಾಹಾ, ಸ್ವಧಾ ಎಂಬ ಇಪ್ಪತ್ನಾಲ್ಕು ಜನ ಕನ್ಯೆಯರನ್ನು ಹೆತ್ತಳು. ಶ್ರದ್ಧಾ ಎಂಬ ಮೊದಲನೆಯ ಕನ್ಯೆಯಿಂದ ಕೀರ್ತಿ ಎಂಬ ಕನ್ಯೆಯವರೆಗಿನ ಹದಿಮೂರು ಜನ ಪುತ್ರಿಯರನ್ನು ಧರ್ಮಎಂಬ ಪ್ರಜಾಪತಿಗೆ ಕೊಟ್ಟು ದಕ್ಷನು ಮದುವೆಮಾಡಿದನು. ಮತ್ತು ತನ್ನ ಇತರ ಕನ್ಯಾಮಣಿಗಳಾದ ಖ್ಯಾತಿಯನ್ನು ಭೃಗು ಮುನಿಗೂ, ಶಾಂತಿ ಎಂಬ ಪುತ್ರಿಯನ್ನು ಶುಕ್ರಾಚಾರ್ಯರಿಗೂ,

ಸಂಭೂತಿಯನ್ನು ಮರೀಚಿ ಮುನಿಗೂ, ಸ್ಮೃತಿಯನ್ನು ಅಂಗೀರಸ ಮುನಿಗೂ, ಪ್ರೀತಿಯನ್ನು ಪುಲಸ್ತ್ಯನಿಗೂ, ಕ್ಷಮೆಯನ್ನು ಪುಲಹ ಮಹರ್ಷಿಗೂ, ಸನ್ನತಿಯನ್ನು ಕ್ರತು ಮುನಿಗೂ, ಅನುಸೂಯೆಯನ್ನು ಅತ್ರಿಋಷಿಗೂ, ಊರ್ಜೆಯನ್ನು ವಸಿಷ್ಠರಿಗೂ, ಸ್ವಾಹಾ ದೇವಿಯನ್ನು ಅಗ್ನಿದೇವನಿಗೂ, ಸ್ವಧಾದೇವಿಯನ್ನು ಪಿತೃದೇವತೆಗಳಿಗೂ ದಕ್ಷ ಪ್ರಜಾಪತಿಯು ಮದುವೆ ಮಾಡಿಕೊಟ್ಟನು. ಶಿವನ ಅಂಶದಿಂದ ದಕ್ಷನ ಮಗಳಾಗಿ ಹುಟ್ಟಿದ ಸತೀದೇವಿಯು ಮಹಾದೇವರನ್ನು ವರಿಸಿ ಮದುವೆಯಾದಳು.

ಸೃಷ್ಟಿಯ ಪ್ರಾರಂಭದಲ್ಲಿ ಹಿರಣ್ಯಗರ್ಭ ಬ್ರಹ್ಮನು ಅರ್ಧನಾರೀಶ್ವರನಾದ ಮಹಾದೇವನನ್ನು ನೋಡಿ ''ನಿನ್ನ ಸ್ತ್ರೀ ಪುರುಷ ದೇಹಗಳನ್ನು ವಿಭಾಗಮಾಡು'' ಎಂದು ಹೇಳಿದನು. ಆ ಸಮಯದಲ್ಲಿಯೇ ಸತೀದೇವಿಯು ಹುಟ್ಟಿದಳು. ಮೂರು ಲೋಕದಲ್ಲಿರುವ ಎಲ್ಲ ಸ್ತ್ರೀಯರೂ ಸತೀದೇವಿಯ ಅಂಶದಿಂದಲೇ ಹುಟ್ಟಿದರು. ಏಕಾದಶರುದ್ರರು ಅರ್ಧನಾರಿಶ್ವರನ ಅಂಶದಿಂದಲೇ ಜನಿಸಿದರು. ಹಿರಣ್ಯಗರ್ಭ ಬ್ರಹ್ಮನು ಅರ್ಧನಾರೀಶ್ವರನಿಂದ ಬೇರೆಯಾದ ಸತೀದೇವಿಯನ್ನು ನೋಡಿ ದಕ್ಷಪ್ರಜಾಪತಿಗೆ ''ದಕ್ಷ ನನಗೂ ನಿನಗೂ ಲೋಕಕ್ಕೂ ತಾಯಿಯಾದ ಈ ಸತೀದೇವಿಯನ್ನು ನೀನು ಸೇವಿಸು.'' ಎಂದು ಆಜ್ಞೆಮಾಡಿದನು. ಬ್ರಹ್ಮನ ಆಜ್ಞೆಯಿಂದ ಸತೀದೇವಿಯನ್ನು ಮಗಳನ್ನಾಗಿ ಪಡೆದು ಮಹಾದೇವನಿಗೆ ಮದುವೆ ಮಾಡಿಕೊಟ್ಟನು.

ಧರ್ಮನಿಗೆ ಹದಿಮೂರು ಜನ ದಾಕ್ಷಾಯಣಿಯರಾದ ಪತ್ನಿಯರಲ್ಲಿ ಕಾಮ, ದರ್ಪ, ನಿಯಮ, ಸಂತೋಷ, ಲೋಭ, ಶ್ರುತ, ದಂಡ, ಸಮಯ, ಬೋಧ, ಅಪ್ರಮಾದ, ವಿನಯ, ವ್ಯವಸಾಯ, ಕ್ಷೇಮ, ಸುಖ, ಯಶ ಎಂಬ ಮಕ್ಕಳು ಜನಿಸಿದರು. ಅದೇ ಧರ್ಮಪ್ರಜಾಪತಿಗೆ ಕ್ರಿಯಾ ಎಂಬ ಮಡದಿಯಲ್ಲಿ ದಂಡ, ಸಮಯ ಎಂಬ ಇಬ್ಬರು ಮಕ್ಕಳೂ, ಬುದ್ಧಿ ಎಂಬ ಪತ್ನಿಯಲ್ಲಿ ಅಪ್ರಮಾದ, ಬೋಧ, ಎಂಬ ಇಬ್ಬರು ಮಕ್ಕಳು ಜನಿಸಿದರು. ಭೃಗು ಪತ್ನಿಯಾದ ಖ್ಯಾತಿಯು ವಿಷ್ಣುವಿಗೆ ಅಚ್ಚುಮೆಚ್ಚಿನವಳಾದ ಲಕ್ಷ್ಮಿಯನ್ನು ಹೆತ್ತಳು. ಮತ್ತು ಧಾತೃ, ವಿಧಾತೃ ಎಂಬ ಗಂಡುಮಕ್ಕಳನ್ನು ಖ್ಯಾತಿಯು ಭೃಗು ಮುನಿಯಿಂದ ಪಡೆದಳು. ಅವರಿಬ್ಬರು ಮೇರುಪರ್ವತದ ಅಳಿಯಂದಿರಾದರು. ಮರೀಚಿಋಷಿಯ ಪತ್ನಿಯಾದ ಪ್ರಭೂತಿಯು ಪೂರ್ಣಿಮಾಸ, ಮಾರೀಚ ಎಂಬ ಇಬ್ಬರು ಗಂಡು ಮಕ್ಕಳನ್ನೂ, ತುಷ್ಟಿ, ದೃಷ್ಟಿ, ತೃಶಿ, ಅಪಚಿತಿ ಎಂಬ ನಾಲ್ವರು ಕನ್ಯೆಯರನ್ನೂ ಹೆತ್ತಳು. ಪುಲಹನ ಪತ್ನಿಯಾದ ಕ್ಷಮೆಯು ಕರ್ದಮ, ಸಹಿಷ್ಣು, ಕನಕ, ಪೀತಾಂಸ ಎಂಬ ನಾಲ್ಕು ಜನ ಗಂಡುಮಕ್ಕಳನ್ನೂ ಪೀವರಿ ಎಂಬ ಕನ್ಯಾಮಣಿಯನ್ನೂ ಹೆತ್ತಳು. ಪ್ರೀತಿ ಎಂಬ ದಕ್ಷನ ಮಗಳಲ್ಲಿ ಪುಲಸ್ತ್ಯ ಮಹರ್ಷಿಯು ದತ್ತೇರಣ, ವೇದ ಬಾಹು, ದೃಷದ್ವತಿ ಎಂಬ ಮಕ್ಕಳನ್ನು ಪಡೆದಳು. ಸ್ಮೃತಿ ಎಂಬ ದಾಕ್ಷಾಯಣಿಯಲ್ಲಿ ಅಂಗೀರಸ ಎಂಬ ಮುನಿಯು. ಸಿನೀವಾಲಿ, ಕುಹೂ, ರಾಕಾ, ಅನುಮತಿ ಎಂಬ ನಾಲ್ಕು ಜನ ಕನ್ಯಾಮಣಿಗಳನ್ನೂ, ಮಹಾಮಹಿಮನಾದ ಅಗ್ನಿದೇವನನ್ನೂ, ಕೀರ್ತಿಮಂತನೆಂಬ ಮತ್ತೊಬ್ಬ ಸತ್ಪುತ್ರನನ್ನೂ ಹೆತ್ತಳು. ಅನಸೂಯಾದೇವಿಗೆ ಅತ್ರಿ ಮಹರ್ಷಿಯಿಂದ ಆರು ಜನ ಮಕ್ಕಳು ಆದರು. ಸತ್ಯನೇತ್ರ, ಭವ್ಯ, ಆಪ, ಶನ್ಯೆಸ್ವರ, ಸೋಮ ಎಂಬ ಪಂಚಪುತ್ರರನ್ನೂ, ಶ್ರುತಿ ಎಂಬ ಹೆಣ್ಣು ಮಗಳನ್ನು ಹೆತ್ತಳು. ವಸಿಷ್ಠ ಮಹರ್ಷಿಯ

ಮಡದಿಯಾದ ಊರ್ಜಾದೇವಿಯು ರಜ, ಸುಹೋತ್ರ, ಬಾಹು, ಸವನ, ಅನಘ, ಸುತಪ, ಶುಕ್ರ ಎಂಬ ಏಳು ಜನ ಮಕ್ಕಳನ್ನು ಹೆತ್ತಳು. ಅಗ್ನಿದೇವನು ಸ್ವಾಹಾ ದೇವಿಯಲ್ಲಿ ಮೂವರು ಮಕ್ಕಳನ್ನು ಪಡೆದನು. ಬ್ರಹ್ಮದೇವರ ಪುತ್ರನೂ, ರುದ್ರಸ್ವರೂಪನೂ, ಪ್ರಾಣಸ್ವರೂಪನೂ ಆದ ಆ ಅಗ್ನಿದೇವನು ಮಹಾ ಮಹಿಮನಾಗಿದ್ದನು.

*ಇತಿ ಲಿಂಗಮಹಾಪುರಾಣದ ಪೂರ್ವಾರ್ಧದ ಪ್ರಜಾಸೃಷ್ಟಿವರ್ಣನೆ*
*ಎಂಬ ಐದನೆಯ ಅಧ್ಯಾಯ ಮುಕ್ತಾಯವಾದುದು*

—o—

## ಪಿತೃಗಣದ ಉತ್ಪತ್ತಿ

**ಅಧ್ಯಾಯ - ೬**

**ಸೂತ :-** ಅಗ್ನಿದೇವನಿಗೆ ದಕ್ಷಕುಮಾರಿಯಾದ ಸ್ವಾಹಾದೇವಿಯಲ್ಲಿ ಪವಮಾನ, ಪಾವಕ, ಶುಚಿ ಎಂಬ ಮೂವರು ಮಕ್ಕಳು ಹುಟ್ಟಿದರು. ಅರಣಿ (ಯಜ್ಞದ ಅಗ್ನಿಗಾಗಿ ತಿಕ್ಕಿ ಕಡೆಯುವ ಕಟ್ಟಿಗೆಯ ತುಂಡು) ಸಂಘರ್ಷದಿಂದ ಹುಟ್ಟುವ ಅಗ್ನಿಗೆ ಪವಮಾನ, ವಿದ್ಯುತ್ತಿನಿಂದ ಹುಟ್ಟುವ ಅಗ್ನಿಗೆ ಪಾವಕ, ಸೂರ್ಯ ಸಂಬಂಧದಿಂದ ಹುಟ್ಟುವ ಅಗ್ನಿಗೆ ಶುಚಿ ಎಂಬ ಹೆಸರು ಬಂದಿರುವುವು. ಮಕ್ಕಳು ಮೊಮ್ಮಕ್ಕಳಿಂದ ಕೂಡಿ ಏಳುನೂರಾ ನಲ್ವತ್ತೊಂಬತ್ತು ಅಗ್ನಿ ಪರಿವಾರದವರಿರುತ್ತಾರೆ. ಅವರ ಏಳುನೂರಾ ನಲವತ್ತೊಂಬತ್ತು ಸಂಖ್ಯೆಯಲ್ಲಿಯ ಏಳುನೂರಾ ಏಳನ್ನು ಬಿಟ್ಟು ''ನಲವತ್ತೊಂಬತ್ತು ಅಗ್ನಿಗಳು ಎಂದು ಯಜ್ಞಗಳಲ್ಲಿ ಅವರ ಹೆಸರುಗಳನ್ನು ಗ್ರಹಣಮಾಡಿರುವರು. ಈ ಅಗ್ನಿವಂಶದವರೆಲ್ಲರೂ ರುದ್ರನ ಅಂಶಸಂಭೂತರು. ಮಹಾತಪಸ್ವಿಗಳು. ಎಲ್ಲರೂ ಪ್ರಜಾಪತಿಗಳಾಗಿರುವರು. ಪ್ರೀತಿಯಿಂದ ಕೂಡಿದ ಮನಸ್ಸುಳ್ಳ ಇವರೆಲ್ಲರು ಪಿತೃಗಳು ಎಂದು ಪರಿಗಣಿತರಾಗಿದ್ದಾರೆ. ಇವರಲ್ಲಿ ಯಾಗಮಾಡುವವರು, ಯಾಗಮಾಡದಿರುವವರು ಎಂದು ಎರಡು ಗುಂಪುಗಳುಂಟು. ಯಾಗಮಾಡುವವರಿಗೆ ಅಗ್ನಿಷ್ವಾತ್ತರೆಂದೂ, ಮಾಡದೇ ಇರುವ ಪಿತೃಗಳಿಗೆ ಬರ್ಹಿಷದರೆಂದೂ ಹೆಸರು ಬಂದಿರುವದು.

ಅಗ್ನಿಷ್ವಾತ್ತ ಎಂಬ ಪಿತೃದೇವತೆಗಳ ಮನಸ್ಸಿನ ಸಂಕಲ್ಪದಿಂದ ಸ್ವಧಾದೇವಿಯು ಮೇನಾ ಎಂಬ ಕನ್ಯಾಮಣಿಯನ್ನು ಪ್ರಸವಿಸಿದಳು. ಈ ಮೇನೆಯು ಹಿಮವಂತನನ್ನು ಪತಿಯನ್ನಾಗಿ ಪಡೆದು ಪ್ರಸಿದ್ಧಳಾದಳು. ಆ ಮೇನೆಗೆ ಹಿಮಾಲಯದಿಂದ ಮೈನಾಕ, ಕ್ರೌಂಚ ಎಂಬ ಇಬ್ಬರು ಗಂಡು ಮಕ್ಕಳು, ಉಮಾ ಮತ್ತು ಗಂಗಾ ಎಂಬ ಇಬ್ಬರು ಹೆಣ್ಣು ಮಕ್ಕಳು ಜನಿಸಿದರು. ಮೇರುರಾಜನ ಮಡದಿಯಾದ ಸ್ವಧಾದೇವಿಯು ಧರಣೀ ಎಂಬ ಮಾನಸಪುತ್ರಿಯನ್ನು ಪಡೆದಳು. ಪಿತೃದೇವತೆಗಳಲ್ಲಿ 'ಅಮೃತಪರು' ಎಂಬ ಒಂದು ಗುಂಪು ಇರುವದು. ಅವರ ವಿಷಯಗಳನ್ನು ಮತ್ತು ಎಲ್ಲ ಋಷಿಗಳ ವಂಶ ವಿಸ್ತಾರವನ್ನು ಬೇರೆ ಅಧ್ಯಾಯದಲ್ಲಿ ಬಿತ್ತರಿಸುವೆನು.

ದಕ್ಷಕುಮಾರಿಯಾದ ಸತೀದೇವಿಯು ದಕ್ಷನ ಯಜ್ಞದಲ್ಲಿ ತಂದೆಯಿಂದ ಶಿವನ ನಿಂದೆಯನ್ನು ಕೇಳಿ ನೊಂದು ಶರೀರತ್ಯಾಗಮಾಡಿದಳು. ಅನಂತರ ಹಿಮಾಲಯ ಪರ್ವತದ ಮಗಳಾಗಿ ಹುಟ್ಟಿ ಪಾರ್ವತಿ ಎಂಬ ಹೆಸರಿನಿಂದ ಶಿವನನ್ನೇ ಪತಿಯನ್ನಾಗಿ ಪಡೆದಳು. ಆ ಶಂಕರನು ಆ ತನ್ನ ಮಡದಿಯನ್ನೇ ಧ್ಯಾನಿಸುತ್ತಿರಲು ಬ್ರಹ್ಮನ ಪ್ರಾರ್ಥನೆಯಂತೆ ಅನೇಕ

ಜನ ರುದ್ರರನ್ನು ಸೃಷ್ಟಿಸಿದನು. ಶಿವನ ಅಂಶದಿಂದ ಜನಿಸಿದ ಆ ಪರಮೇಶ್ವರ ಕುಮಾರರು ಎಲ್ಲರೂ ಮೂರು ಕಣ್ಣುಗಳಿಂದ ತ್ರಿಲೋಚನರು, ಬಗೆಬಗೆಯ ಆಕಾರ ಉಳ್ಳವರೂ, ಚಿನ್ನದ ಕೂದಲವುಳ್ಳವರೂ, ಪರಮಜ್ಞಾನಿಗಳು, ಅತ್ಯಂತವಿರಕ್ತರೂ ಆಗಿದ್ದರು. ಆಗ ಬ್ರಹ್ಮನು ಅವರೆಲ್ಲರಿಗೂ ಪ್ರದಕ್ಷಿಣೆಮಾಡಿ ಮಹಾದೇವರಿಗೆ ''ಮಹಾದೇವ ನಿನ್ನಂತೆ ಮೃತ್ಯುಂಜಯರಾದ ಮಕ್ಕಳನ್ನು ಹಡೆಯಬೇಡ. ಮರಣವನ್ನು ಹೊಂದುವ ಪ್ರಜೆಗಳನ್ನು ಸೃಷ್ಟಿಸು.'' ಎಂದು ಹೇಳಿದನು. ಆಗ ಮಹಾದೇವನು ''ಮರಣವು ಮೂಸುತ್ತಲಿರುವ ಮಕ್ಕಳನ್ನು ನಾನು ಹಡೆಯಲಾರೆ. ನೀನೆ ನಿನ್ನ ಮನಸ್ಸಿಗೆ ಬಂದಂತೆ ಅಂಥ ಮಕ್ಕಳನ್ನು ಸೃಷ್ಟಿಮಾಡು'' ಎಂದು ಹೇಳಿದನು. ಆಗ ಬ್ರಹ್ಮದೇವನು ಆ ಭವಾನೀಪತಿಯಿಂದ ಆಜ್ಞೆಪಡೆದು ಮುಪ್ಪುಮರಣಗಳಿಂದ ಕೂಡಿದ ಚರಾಚರ ಪ್ರಪಂಚವನ್ನು ಸೃಷ್ಟಿ ಮಾಡಿದನು.

ಶಂಕರನು ತಾನು ಸೃಷ್ಟಿಮಾಡಿದ ರುದ್ರರೊಡನೆ ತೃಪ್ತಿಯಿಂದ ವೈರಾಗ್ಯದಿಂದ ಇದ್ದು ಬಿಟ್ಟನು. ಅದಕ್ಕಾಗಿ ಅವನಿಗೆ **'ಸ್ಥಾಣು'** ಎಂಬ ಹೆಸರು. ಎಲ್ಲರಿಗೂ ಸುಖವನ್ನುಂಟು ಮಾಡುವದರಿಂದ **'ಶಂಕರ'** ಎಂಬ ಹೆಸರು ಬಂದಿರುವವು. ಪಿನಾಕ ಎಂಬ ಧನಸ್ಸನ್ನು ಹಿಡಿದದ್ದರಿಂದ **'ಪಿನಾಕಪಾಣಿ'**. ಎಂದು ಪ್ರಸಿದ್ಧನಾಗಿರುವನು.

*ಲಿಂಗ ಮಹಾಪುರಾಣದ ಪೂರ್ವಾರ್ಧದ ಪಿತೃಗಣದ ಉತ್ಪತ್ತಿ ಎಂಬ*
*ಆರನೇ ಅಧ್ಯಾಯ ಮುಗಿದುದು*



## ಶಿವನ ವ್ಯಾಸಾವತಾರ ಮತ್ತು ಯೋಗಾಚಾರ್ಯಾವತಾರ ನಿರೂಪಣೆ

ಅಧ್ಯಾಯ - ೭

**ಸೂತರು** :- ಪೂರ್ವಕಾಲದಲ್ಲಿ ದೇವತೆಗಳು, ಪಿತೃಗಳು, ಋಷಿಗಳು ಇವರ ಎದುರು ಬ್ರಹ್ಮಪುತ್ರನಾದ ಸನತ್ಕುಮಾರನಿಗೆ ಶಿಲಾದಮುನಿಯ ಮಗನಾದ ನಂದೀಶ್ವರನು ಹೇಳಿದ್ದನ್ನೇ ನಾನು ನಿನಗೆ ಹೇಳುತ್ತೇನೆ.

ವಿಶ್ವವ್ಯಾಪಿಯಾದ ಶಿವನು ಪ್ರತಿಯೊಂದು ದ್ವಾಪರಯುಗದ ಕೊನೆಯಲ್ಲಿ ವ್ಯಾಸಾವತಾರವನ್ನು, ಕಲಿಯುಗದಲ್ಲಿ ಯೋಗಾಚಾರ್ಯರ ಅವತಾರಗಳನ್ನು ಮಾಡುವನು. ಆ ಎಲ್ಲ ಸಂದರ್ಭಗಳಲ್ಲಿಯೂ ವ್ಯಾಸ ರೂಪಿ ಶಿವನಿಗೆ ನಾಲ್ಕು ಜನ ಶಿಷ್ಯರು ಇರುವರು. ಅವರ ಶಿಷ್ಯರು ಅನೇಕಾನೇಕ ಜನರಿರುವರು.

**ಶೌನಕಾದಿ ಋಷಿಗಳು ಅಂದದ್ದು** :- ಪ್ರತಿಯೊಂದು ದ್ವಾಪರಯುಗದಲ್ಲಿ ಶಿವನ ಅಂಶದಿಂದ ಆವಿರ್ಭವಿಸುವ ವ್ಯಾಸರು ಯಾರು? ಯಾವ ಮನ್ವಂತರದಲ್ಲಿ, ಯಾವಕಲ್ಪದಲ್ಲಿ ಅವರು ಅವತಾರ ಮಾಡುವರು ಹೇಳಿರಿ.

**ಸೂತ ಅಂದದ್ದು** :- ಶ್ವೇತ ವರಾಹ ಕಲ್ಪದಲ್ಲಿ ವೈವಸ್ವತ ಮನ್ವಂತರದ ಪ್ರತಿಯೊಂದು ದ್ವಾಪರಯುಗದಲ್ಲಿಯೂ ರುದ್ರನು ವ್ಯಾಸಾವತಾರವನ್ನು ಮಾಡಿದ್ದಾನೆ. ಜ್ಞಾನವನ್ನು ಪ್ರಚಾರ ಮಾಡಿದ್ದಾನೆ. ವೇದಗಳ ವಿಭಾಗ ಮಾಡಿದ್ದಾನೆ. ಪುರಾಣಗಳನ್ನು ರಚಿಸಿದ್ದಾನೆ. ಆ ಮಹಾದೇವನ ವ್ಯಾಸಾವತಾರದ ಹೆಸರುಗಳನ್ನು ಕ್ರಮವಾಗಿ ಹೇಳುತ್ತೇನೆ. (೧) ಕ್ರತು (೨) ಸತ್ಯ (೩) ಭಾರ್ಗವ (೪) ಅಂಗೀರಸ (೫) ಸವಿತೃ (೬) ಮೃತ್ಯು (೭) ಶತಕ್ರತು

(೮) ವಸಿಷ್ಠ (೯) ಸಾರಸ್ವತ (೧೦) ತ್ರಿಧಾಮಾ (೧೧) ತ್ರಿವೃತ (೧೨) ಶತತೇಜ (೧೩) ನಾರಾಯಣ (೧೪) ತರಕ್ಷು (೧೫) ಆರುಣಿ (೧೬) ದೇವ (೧೭) ಋತಂಜಯ (೧೮) ಭರದ್ವಾಜ (೧೯) ಗೌತಮ (೨೦) ವಾಜಶ್ರವಸ್ (೨೧) ಶುಷ್ಮಾಯಣಿ (೨೨) ತೃಗಬಿಂದು (೨೩) ರುಕ್ಷ (೨೪) ಶಕ್ತಿ (೨೫) ಪರಾಶರ (೨೬) ಜಾತೂಕರ್ಣ್ಯ, (೨೭) ಕೃಷ್ಣದ್ವೈಪಾಯನ. ಇವರೆ ಈ ವೈವಸ್ವತ ಮನ್ವಂತರದಲ್ಲಿ ಕಳೆದು ಹೋದ ಇಪ್ಪತ್ತೆಂಟು ದ್ವಾಪರ ಯುಗಗಳಲ್ಲಿ ವೇದ ವಿಭಾಗ ಕರ್ತರಾಗಿದ್ದರು.

**ಋಷಿಗಳು :-** ವರಾಹ ಕಲ್ಪದಲ್ಲಿ ನಡೆಯುವ ಮನ್ವಂತರಗಳನ್ನೂ ಹಾಗೂ ಮುಂದಿನ ಕಲ್ಪಗಳ ಮನ್ವಂತರಗಳನ್ನು ವೈವಸ್ವತ ಮನ್ವಂತರದ ಯೋಗ ಸಿದ್ಧರಾದವರ ಹೆಸರುಗಳನ್ನೂ ಹೇಳಿರಿ.

**ಸೂತರು :-** ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ, ಧರ್ಮಸಾವರ್ಣಿ ಮುಂತಾಗಿ ಹದಿನಾಲ್ಕು ಜನ ಮನುಗಳು ಪ್ರಸಿದ್ಧರಾಗಿದ್ದಾರೆ. ವೈವಸ್ವತ ಎಂಬ ಮನುವು ಏಳನೆಯವನು. ಈ ವರಾಹಕಲ್ಪದಲ್ಲಿ ಈಗ ನಡೆಯುವ ಏಳನೆಯ ಮನ್ವಂತರದಲ್ಲಿ ಆದಿಯಿಂದ ಶಿವನು ಮಾಡಿದ ಯೋಗಾವತಾರಗಳನ್ನು ಹೇಳುತ್ತೇನೆ. (೧) ಶ್ವೇತ (೨) ಸುತಾರ (೩) ಮದನ (೪) ಸುಹೋತ್ರ (೫) ಕಂಕಣ (ಕಂಕ) (೬) ಲೋಕಾಕ್ಷಿ (೭)ಜೈಗೀಷವ್ಯ (೮) ದಧಿವಾಹನ (೯) ಋಷಭ (೧೦) ಮುನಿ (೧೧) ಉಗ್ರ (೧೨)ಅತ್ರಿ (೧೩) ಸುಬಾಲಕ (ವಾಲಿ) (೧೪) ಗೌತಮ (೧೫) ವೇದಶೀರ್ಷ (೧೬) ಗೋಕರ್ಣ (೧೭) ಗುಹಾವಾಸಿ (೧೮) ಶಿಖಂಡ ಭೃತ್ (೧೯) ಜಟಾಮಾಲಿ (೨೦) ಅಟ್ಟಹಾಸ (೨೧) ದಾರುಕ (೨೨) ಲಾಂಗಲಿ (೨೩) ಮಹಾಕಾಯಮುನಿ (೨೪) ಶೂಲಿ (೨೫) ಮುಂಡೀಶ್ವರ (೨೬) ಸಹಿಷ್ಣು (೨೭) ಸೋಮಶರ್ಮ (೨೮) ಲಕುಲೀಶ.

ಪ್ರತಿ ದ್ವಾಪರಯುಗದಲ್ಲಿಯೂ ಶಿವನು ಒಂದೊಂದು ವ್ಯಾಸ ರೂಪದಿಂದ ಅವತಾರ ಮಾಡುವನು. ಪ್ರತಿಯೊಂದು ಕಲಿಯುಗದಲ್ಲಿ ಶಿವನು ಯೋಗೇಶ್ವರ ರೂಪದಿಂದ ಅವತಾರಮಾಡುವನು. ವ್ಯಾಸಾವತಾರದಲ್ಲಿ ದ್ವಾಪರದಲ್ಲಿಯೂ, ಯೋಗಿಶ್ವರ ಅವತಾರದಲ್ಲಿ ಕಲಿಯುಗದಲ್ಲಿಯೂ ಶಿವನಿಗೆ ನಾಲ್ಕು ಜನ ಶಿಷ್ಯರಿರುವರು. ದ್ವಾಪರ ಯುಗದ ಕೃಷ್ಣದ್ವೈಪಾಯನ ವ್ಯಾಸರಿಗೆ ಶ್ವೇತ, ಶ್ವೇತ ಶಿಖಂಡಿ, ಶ್ವೇತಾಶ್ವ, ಶ್ವೇತ ರೋಹಿತ ಎಂಬ ನಾಲ್ಕು ಜನ ಶಿಷ್ಯರಿರುವರು. ಸುತಾರ ಎಂಬ ಶಿವನ ವ್ಯಾಸಾವತಾರದ ಮಹಾಮುನಿಗೆ ದುಂದುಭಿ, ಶತರೂಪ, ಋಚೀಕ, ಕೇತುಮಂತ ಇವರು ನಾಲ್ಕು ಜನ ಶಿಷ್ಯರು. ಮದನ ಎಂಬ ಶಿವನ ಮೂರನೆಯ ವ್ಯಾಸಾವತಾರಿಗೆ ವಿಶೋಕ, ವಿಕೇಶ, ಉಪಾಶ, ಪಾಪನಾಶನ ಎಂಬ ನಾಲ್ವರು ಶಿಷ್ಯರು. ನಾಲ್ಕನೆಯ ಸುಹೋತ್ರ ಎಂಬ ವ್ಯಾಸಾವತಾರಿ ಶಿವನಿಗೆ ಸುಮುಖ, ದುರ್ಮುಖ, ದುರ್ದಮ, ದುರತಿಕ್ರಮ ಎಂಬ ಶಿಷ್ಯರು. ಐದನೆಯ ಕಂಕಣ ವ್ಯಾಸನಿಗೆ ಸನಕ, ಸನಂದ, ಸನಾತನ, ಸನತ್ಕುಮಾರ ಎಂದು ನಾಲ್ಕು ಜನ ಶಿಷ್ಯರು. ಆರನೆಯ ಲೋಕಾಕ್ಷಿ ವ್ಯಾಸರಿಗೆ ಸುಧಾಮ, ವಿರಜ, ಶಂಖಪಾತ್, ವೈರಜ ಇವರು ಶಿಷ್ಯರು. ಏಳನೆಯ ಜೈಗೀಷವ್ಯವ್ಯಾಸರಿಗೆ ಮೇಘ, ಸಾರಸ್ವತ, ಸುವಾಹನ, ಮೇಘವಾಹ ಶಿಷ್ಯರು. ದಧಿವಾಹನ ಎಂಬ ಎಂಟನೆಯ ಶಿವಾವತಾರಿ ವ್ಯಾಸನಿಗೆ ಕಪಿಲ, ಆಸುರಿ, ಪಂಚಶಿಖ, ವಾಲ್ಕಲ ಈ ನಾಲ್ಕು ಜನ ಶಿಷ್ಯರು.

ಒಂಬತ್ತನೆಯ ಋಷಭ ನಾಮಕ ವ್ಯಾಸನಿಗೆ ಪರಾಶರ, ಗರ್ಗ, ಭಾರ್ಗವ, ಅಂಗೀರಸ ಎಂದು ನಾಲ್ಕು ಜನ ಶಿಷ್ಯರು. ಹತ್ತನೆಯ ಮುನಿ ಎಂಬ ವ್ಯಾಸರಿಗೆ ಬಲ, ಬಂಧು, ನಿರಮಿತ್ರ, ಕೇತುಶೃಂಗ ಎಂಬವರು ಶಿಷ್ಯರು. ಹನ್ನೊಂದನೆಯ ಉಗ್ರನಾಮಕ ವ್ಯಾಸರಿಗೆ ಲಂಬೋದರ, ಲಂಬ, ಲಂಬಾಕ್ಷ, ಲಂಬಕೇಶ ಇವರು ಶಿಷ್ಯರು. ಹನ್ನೆರಡನೆಯ ಅತ್ರಿವ್ಯಾಸರಿಗೆ ಸರ್ವಜ್ಞ, ಸಮಬುದ್ಧಿ, ಸಾಧ್ಯ, ಸರ್ವ ಎಂಬ ಶಿಷ್ಯರು ಇರುವರು. ಹದಿಮೂರನೆಯ ಸುಬಾಲಕ ಎಂಬ ವ್ಯಾಸರಿಗೆ ಸುಧಾಮ ಕಾಶ್ಯಪ, ವಾಸಿಷ್ಠ, ವಿರಜ ಎಂಬವರು ಶಿಷ್ಯರು. ಹದಿನಾಲ್ಕನೆಯ ಗೌತಮರಿಗೆ ಅತ್ರಿ, ದೇವಸದ, ಶ್ರವಣ, ಶ್ರವಿಷ್ಟರು. ಹದಿನೈದಯ ವೇದಶೀರ್ಷರಿಗೆ ಕುಣಿ, ಕುಣಿಬಾಹು, ಕುಶರೀರ, ಕುನೇತ್ರರು. ಹದಿನಾರನೆಯ ಗೋಕರ್ಣರಿಗೆ ಕಶ್ಯಪ, ಉಶನ, ಚ್ಯವನ, ಬೃಹಸ್ಪತಿಗಳು. ಹದಿನೇಳನೆಯ ಗುಹಾವಾಸಿಗಳಿಗೆ ಉತಥ್ಯ, ವಾಮದೇವ, ವಾಜಶ್ರವ, ಸುಧೀಕರು. ಹದಿನೆಂಟನೆಯ ಶಿಖಂಡಭೃತ್ ಎಂಬ ವ್ಯಾಸರಿಗೆ ಶ್ಯಾವಾಶ್ವ, ಹಿರಣ್ಯನಾಭ, ಯೋಗಾಕ್ಷಿ, ಕುಥುಮಿ. ಹತ್ತೊಂಬತ್ತನೆಯ ಜಟಾಮಾಲಿ ವ್ಯಾಸರಿಗೆ ಸುಮಂತು, ಬರ್ಬರಿ, ಕಬಂಧ, ಶಶಿಕಂಧರ ಎಂಬವರು ಶಿಷ್ಯರು. ಇಪ್ಪತ್ತನೆಯ ಅಟ್ಟಹಾಸ ಎಂಬ ವ್ಯಾಸರಿಗೆ ಪ್ಲಕ್ಷ, ದಾಲ್ಭ್ಯಾಯಣಿ, ಕೇತುಮಂತ, ಗೋಪನದಾರುಕ ಎಂಬ ಶಿಷ್ಯರು. ಇಪ್ಪತ್ತೊಂದನೆಯ ವ್ಯಾಸನಿಗೆ ಭಲ್ಲಾವಿ, ಮಧುಪಿಂಗ, ಶ್ವೇತಕೇತು, ತಪೋನಿಧಿಗಳು ಶಿಷ್ಯರು. ಲಾಂಗಲಿ ಎಂಬ ಇಪ್ಪತ್ತೆರಡನೆಯ ವ್ಯಾಸರಿಗೆ ಕುಶಿಕ, ಬೃಹದಶ್ವ, ದೇವಲ, ಕವಿ. ಇಪ್ಪತ್ಮೂರನೆಯ ಮಹಾಕಾಯ ಮುನಿ ಎಂಬ ವ್ಯಾಸರಿಗೆ ಶಾಲಿಹೋತ್ರ, ಅಗ್ನಿವೇಶ, ಯುವನಾಶ್ವ, ಶರದ್ವಸು. ಇಪ್ಪತ್ತಾಲ್ಕನೆಯ ಶೂಲಿ ಎಂಬ ವ್ಯಾಸರಿಗೆ ಛಗಲ, ಕುಂಡಕರ್ಣ, ಕುಂಭ ಪ್ರವಾಹಕ, ಇಪ್ಪತ್ತೈದನೆಯ ಮುಂಡೀಶ್ವರ ಎಂಬ ವ್ಯಾಸರಿಗೆ ಉಲೂಕ, ವಿದ್ಯುತ, ಮಂಡೂಕ, ಆಶ್ವಲಾಯನ, ಇಪ್ಪತ್ತಾರನೆಯ ಸಹಿಷ್ಣು ಎಂಬ ವ್ಯಾಸರಿಗೆ ಅಕ್ಷಪಾದ, ಕುಮಾರ, ಉಲೂಕ, ವತ್ಸ ಎಂಬ ನಾಲ್ವರು ಶಿಷ್ಯರು. ಇಪ್ಪತ್ತೇಳನೆಯ ಕಲಿಯುಗದ ವ್ಯಾಸಾವತಾರಿಗಳಾದ ಸೋಮಶರ್ಮ ಎಂಬವರಿಗೆ ಕುಶಿಕ, ಗರ್ಭ, ಮಿತ್ರ, ಕೌರುಷ್ಯ ಎಂಬುವ ನಾಲ್ಕು ಜನ ಶಿಷ್ಯರಿದ್ದರು. ಇಪ್ಪತ್ತೆಂಟನೆಯ ಲಕುಲೀಶ ಎಂಬ ವ್ಯಾಸರಿಗೆ ಕುಶಿಕ. ಇವರೆಲ್ಲರು ಎಲ್ಲ ಯುಗಗಳಲ್ಲಿಯೂ ಯೋಗಿಶ್ವರಾವತಾರ ಮಾಡಿದ ರುದ್ರದೇವರ ಶಿಷ್ಯರು. ಇವರೆಲ್ಲರೂ ಅತ್ಯಂತ ಪರಿಶುದ್ಧರು, ಬ್ರಹ್ಮಜ್ಞಾನಿಗಳು, ಜ್ಞಾನಯೋಗಾಸಕ್ತರು. ಇವರಲ್ಲಿ ಪ್ರತಿಯೊಬ್ಬರೂ ಪಾಶುಪತ ವ್ರತವನ್ನು ಮಾಡುತ್ತ ಭಸ್ಮವನ್ನು ದೇಹಕ್ಕೆ ಬಳಿದುಕೊಂಡು ಸಿದ್ಧಪುರುಷರಾಗಿರುವರು. ಇವರ ಶಿಷ್ಯರು ಪ್ರತಿಶಿಷ್ಯರು ಅನೇಕ ಜನರು ಇರುವರು. ಅವರೆಲ್ಲರೂ ಪಾಶುಪತವ್ರತವನ್ನು ಆಶ್ರಯಿಸಿ ಶಿವಲೋಕಕ್ಕೆ ಹೊರಡಲು ಸಿದ್ಧರಾಗಿರುವರು. ದೇವತೆಗಳು ಮೊದಲು ಮಾಡಿಕೊಂಡು ಪಿಶಾಚಗಳವರೆಗೆ ಇರುವ ಸಕಲ ಜೀವರು ಪಶುಗಳು ಎನಿಸಿಕೊಳ್ಳುವರು. ಇವರೆಲ್ಲರಿಗೂ ಶಿವನು ಪತಿಯಾದುದರಿಂದ ಪಶುಪತಿ ಎನಿಸುವನು. ಪಶುಪತಿಯಾದ ಮಹಾದೇವನು ನಿರ್ಮಿಸಿದ ಯೋಗಕ್ಕೆ ಪಾಶುಪತಯೋಗ ಎನ್ನುವರು. ಇದನ್ನು ಅನುಸರಿಸಿದ ಜೀವರುಗಳಿಗೆಲ್ಲ ಸೌಭಾಗ್ಯ, ಸಂಪತ್ತು, ಸುಲೋಕ ಪ್ರಾಪ್ತಿ ನಿಶ್ಚಿತ.

*ಲಿಂಗಮಹಾಪುರಾಣದ ಪೂರ್ವಾರ್ಧದ ಶಿವನ ವ್ಯಾಸಾವತಾರ*
*ಹಾಗೂ ಯೋಗಾಚಾರ್ಯಾವತಾರಗಳ ನಿರೂಪಣೆ ಎಂಬ ಏಳನೆಯ ಅಧ್ಯಾಯ ಮುಗಿದುದು*

## ಅಧ್ಯಾಯ - ೮

**ಸೂತರು :-** ಈಗ ಅಷ್ಟಾಂಗಯೋಗ ಸಾಧನಕ್ರಮವನ್ನು ಹೇಳುತ್ತೇನೆ. ಚಿತ್ತವೃತ್ತಿಯನ್ನು ತಡೆದಿರುವದೇ ಯೋಗ. ಕುತ್ತಿಗೆಯಿಂದ ಕೆಳಗೆ ಒಂದು ಗೇಣು ದೂರದಲ್ಲಿ ಹೊಕ್ಕಳದಿಂದ ಮೇಲಕ್ಕಿರುವ ಹೃದಯವು ಚಿತ್ತವನ್ನು ನೆಲೆಗೊಳಿಸುವದಕ್ಕೆ ಉತ್ತಮಪ್ರದೇಶ. ಹೊಕ್ಕಳದಿಂದ ಕೆಳಭಾಗಕ್ಕಿರುವ ಮೂಲಾಧಾರವು ಹುಬ್ಬುಗಳ ನಡುವೆ ಇರುವ ಆವರ್ತ ಎಂಬ ತ್ರಿಕೂಟಸ್ಥಾನವೂ, ಚಿತ್ತವನ್ನು ನೆಲೆಗೊಳಿಸಲು ತಕ್ಕಸ್ಥಾನಗಳೆಂದು ತಿಳಿಯಬೇಕು. ಜೀವನಿಗೆ ಸರ್ವವಿಷಯಕವಾದ ಜ್ಞಾನವು ಉತ್ಪತ್ತಿಯಾಗುವದನ್ನೇ 'ಯೋಗ' ಎಂದು ಕರೆಯುವರು. ಆತ್ಮನ ಪ್ರಸನ್ನತೆಯಿಂದ, ಜೀವನ ಪರಿಶುದ್ಧತೆಯಿಂದ ಚಿತ್ತೈಕಾಗ್ರತೆಯು ಉಂಟಾಗುವದು.

'ಯೋಗ' ಶಬ್ದದಿಂದ ನಿರ್ವಾಣ ಎಂಬ ಮಹೇಶ್ವರನ ತುರೀಯಸ್ಥಾನವನ್ನು ಹೇಳಿರುವರು. ಆ ಮಹೇಶ್ವರಸ್ಥಾನದ ಜ್ಞಾನಕ್ಕೆ ರುದ್ರಜ್ಞಾನವೇ ಕಾರಣ. ಋಷಿ ಎಂದರೆ ರುದ್ರ ಎಂದು ವೇದದಲ್ಲಿ ಹೇಳಲ್ಪಟ್ಟಿದೆ. ಆ ರುದ್ರನ ಅನುಗ್ರಹದಿಂದಲೇ ಆತ್ಮಜ್ಞಾನ ಉಂಟಾಗುವದು. ಇಂದ್ರಿಯವೃತ್ತಿಗಳ ಕಡೆಗೆ ಹರಿದುಹೋಗುವ ಚಿತ್ತವನ್ನು ತಡೆದು ಯಾವನು ನಿಲ್ಲಿಸುವನೋ ಅವನಿಗೆ ಯೋಗ ಸಿದ್ಧಿಯಾಗುವದು. ಚಿತ್ತವೃತ್ತಿಗಳ ನಿರೋಧವೇ ಯೋಗ. ಈ ಯೋಗದ ಸಿದ್ಧಿಯುಂಟಾಗಬೇಕಾದರೆ ಎಂಟು ವಿಧವಾದ ಸಾಧನಗಳನ್ನು ಹೇಳಿದ್ದಾರೆ. (೧) ಯಮ (೨) ನಿಯಮ (೩) ಆಸನ (೪) ಪ್ರಾಣಾಯಾಮ (೫) ಪ್ರತ್ಯಾಹಾರ (೬) ಧಾರಣಾ (೭) ಧ್ಯಾನ (೮) ಸಮಾಧಿ. ಇವೆ ಆ ಎಂಟು ಸಾಧನಗಳು. ಶ್ರೇಷ್ಠವಾದ ತಪಸ್ಸೇ 'ಯಮ' ಎನಿಸುವದು. ಈ ಯಮಕ್ಕೆ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಇವುಗಳೇ ಕಾರಣಗಳಾಗಿವೆ. 'ನಿಯಮ' ಎನ್ನುವ ಎರಡನೆಯ ಯೋಗಾಂಗಕ್ಕೂ ಈ ಯಮವೇ ಕಾರಣವಾಗಿರುವದು. ತನ್ನಂತೆ ಎಲ್ಲ ಪ್ರಾಣಿಗಳಿಗೂ ಹಿತವನ್ನುಂಟುಮಾಡುವದಕ್ಕೆ ಪ್ರಯತ್ನಪಡುವದೇ ಅಹಿಂಸೆ ಎನಿಸುವದು. ತಾನು ನೋಡಿ, ಕೇಳಿ, ಅನುಭವಿಸಿದ್ದನ್ನು ಇದ್ದುದು ಇದ್ದಂತೆ ಹೇಳುವದು ಸತ್ಯ. ಎಷ್ಟೇ ಕಷ್ಟ ಬಂದರೂ ಹೆರವರ ವಸ್ತುವನ್ನು ತೆಗೆದುಕೊಳ್ಳದೇ ಇರುವದು ಅಸ್ತೇಯ. ಮನಸ್ಸಿನಿಂದಲೂ, ಮತಿಯಿಂದಲೂ, ಕಾರ್ಯದಿಂದಲೂ, ಸ್ತ್ರೀಸಂಗದ ಸಂಬಂಧ ಇಲ್ಲದೇ ಇರುವದು ಸನ್ಯಾಸಿಗಳಿಗೂ, ಬ್ರಹ್ಮಚಾರಿಗಳಿಗೂ, ಪತ್ನಿಯರಿಲ್ಲದ ವೈಖಾನಸರಿಗೂ, ಬ್ರಹ್ಮಚರ್ಯ ಎನಿಸುವದು. ಮದುವೆ ಮಾಡಿಕೊಂಡ ಗ್ರಹಸ್ಥರು ತಮ್ಮ ಪತ್ನಿಯಲ್ಲಿ ವಿಧಿಯನ್ನು ಅನುಸರಿಸಿ ಋತುಕಾಲದಲ್ಲಿ ಸಂಭೋಗವನ್ನುಮಾಡಿ ಸ್ನಾನವನ್ನುಮಾಡಬೇಕು. ಮನಸ್ಸಿನಿಂದಲೂ ಮಾತಿನಿಂದಲೂ, ಕಾರ್ಯದಿಂದಲೂ ಪರಸ್ತ್ರೀಯರ ಸಂಬಂಧವನ್ನು ಸರ್ವಥಾಮಾಡಬಾರದು. ಹೀಗೆ ಗೃಹಸ್ಥನು ನಿಯಮವನ್ನು ಅನುಸರಿಸಿದ್ದರೆ ಅವನು ಯೋಗಿ ಅಥವಾ ಬ್ರಹ್ಮಚಾರಿ ಎನಿಸಿಕೊಳ್ಳುವನು. ಬುದ್ಧಿವಂತರಾದವರು ಶವದಿಂದ ದೂರವಿರುವಂತೆ, ಪರಸ್ತ್ರೀಯರಿಂದ ದೂರವೇ

ಇರಬೇಕು. ಅವರ ವಿಷಯದಲ್ಲಿ ಮನಸ್ಸಿನಲ್ಲಿ ಅಸಹ್ಯಪಡಬೇಕು. ಸ್ತ್ರೀಯು ಬೆಂಕಿ ಇದ್ದಂತೆ ಪುರುಷ ತುಪ್ಪದ ಪಾತ್ರೆ, ಬೆಂಕಿಯ ಸಮೀಪದಲ್ಲಿಟ್ಟರೆ ತುಪ್ಪ ಕರಗದೇ ಇದ್ದೀತೆ? ಆದುದರಿಂದ ಪರಸ್ತ್ರೀಯರಿಂದ ದೂರವೇ ಇರಬೇಕು. ಯೋಗಿಯಾದವನು ಯಾವಾಗಲೂ ವೈರಾಗ್ಯವನ್ನೇ ಹೊಂದಿರಬೇಕು. ಇದೆಲ್ಲವೂ ಅಷ್ಟಾಂಗಗಳಲ್ಲಿ ಮೊದಲನೆಯದಾದ ಯಮದ ಬಗ್ಗೆ ನಿರೂಪಣೆಯಾಯಿತು. ಎರಡನೆಯದಾದ ನಿಯಮವು ಶೌಚ, ಇಜ್ಯಾ, ತಪಸ್ಸು, ದಾನ, ಸ್ವಾಧ್ಯಾಯ, ಉಪಸ್ಥ, ನಿಗ್ರಹ, ವ್ರತ, ಉಪವಾಸ, ಮೌನ, ಸ್ನಾನ ಎಂದು ಹತ್ತು ಬಗೆಯಾಗಿವೆ. ಪದ್ಮಾಸನವೇ ಮುಂತಾದ ಆಸನಗಳು ಯೋಗಾಭ್ಯಾಸಕ್ಕೆ ಪ್ರಶಸ್ತವಾಗಿವೆ. ಶೌಚವು ಬಾಹ್ಯ, ಅಭ್ಯಂತರ ಎಂದು ಎರಡು ಬಗೆಯಾಗಿದೆ. ಆಭ್ಯಂತರ ಶೌಚವು ಉತ್ತಮವಾದದ್ದು. ಬಾಹ್ಯ ಶೌಚದಿಂದ ಕೂಡಿಯೇ ಆಭ್ಯಂತರ ಶೌಚವನ್ನು ಆಚರಿಸಬೇಕು.

ಶಿವನನ್ನು ಪೂಜಿಸುವವರು ಆಗ್ನೇಯ, ವಾರುಣ ಬ್ರಾಹ್ಮ ಎಂಬ ಸ್ನಾನಗಳನ್ನು ವಿಧಿಪೂರ್ವಕವಾಗಿಮಾಡಿ ಅನಂತರ ಅಭ್ಯಂತರ ಸ್ನಾನವನ್ನುಮಾಡಬೇಕು. ಭಸ್ಮ ಸ್ನಾನಕ್ಕೆ ಆಗ್ನೇಯ ಎನ್ನುವರು. ನೀರಿನಿಂದ ಮಾಡುವ ಸ್ನಾನವು ವಾರುಣಸ್ನಾನ. ಮಂತ್ರೋಚ್ಚಾರಣೆ ಪೂರ್ವಕವಾಗಿ ಮಾಡುವ ಸ್ನಾನವು ಬ್ರಾಹ್ಮಸ್ನಾನ ಎನಿಸುವದು. ಮೈಗೆಲ್ಲ ಮಣ್ಣು ಬಳಿದುಕೊಂಡು ಪುಣ್ಯತೀರ್ಥಗಳಲ್ಲಿ ಯಾವಾಗಲೂ ಸ್ನಾನಮಾಡಿದರೂ ಅಂತಃ ಶುದ್ಧಿ ಆಗುವದಿಲ್ಲ. ಸಣ್ಣ ದೊಡ್ಡ ಮೀನುಗಳು ಯಾವಾಗಲೂ ನೀರಿನಲ್ಲಿ ಮುಳುಗಿರುವವು. ಅಷ್ಟುಮಾತ್ರದಿಂದ ಅವು ಪರಿಶುದ್ಧ ಎನಿಸುವವೇ? ಆದುದರಿಂದ ವೈರಾಗ್ಯ ಎಂಬ ಮಣ್ಣನ್ನು ಒಂದಾವೃತ್ತಿ ಬಳಿದುಕೊಂಡು ಆತ್ಮಜ್ಞಾನವೆಂಬ ನೀರಿನಲ್ಲಿ ಮನಸ್ಸಿನ ಭಾವವನ್ನು ಮನೋವೃತ್ತಿಗಳನ್ನು ಶುದ್ಧಮಾಡಿಕೊಳ್ಳಬೇಕು.

**"ಅವಗಾಹ್ಯಾಪಿ ಮಲಿನೋ ಹ್ಯಂತ ಶೌಚಃ ವಿವರ್ಜಿತಃ ।**
**ಶೈವಲಾ ಝುಷಕಾ ಮತ್ಸ್ಯಾಃ ಸತ್ವಾ ಮತ್ಸ್ಯೋಪಜೀವಿನಃ ॥**

**ಸದಾವಗಾಹ್ಯ ಸಲಿಲೇ ವಿಶುದ್ಧಾಃ ಕಿಂ ದ್ವಿಜೋತ್ತಮಾಃ ।**
**ತಸ್ಮಾದಾಭ್ಯಂತರಂ ಶೌಚಂ ಸದಾ ಕಾರ್ಯಂ ವಿಧಾನತಃ ॥**

**ಆತ್ಮಜ್ಞಾನಾಂಭಸಿ ಸ್ನಾತ್ವಾ ಸಕೃದಾಲಿಪ್ಯ ಭಾವತಃ ।**
**ಸುವೈರಾಗ್ಯಮೃದಾ ಶುದ್ಧಃ ಶೌಚಮೇವಂ ಪ್ರಕೀರ್ತಿತಂ ॥**

ಪ್ರಾಣಾಯಾಮದ ವಿಷಯವನ್ನು ಹಿಂದೆಯೇ ಹೇಳಲಾಗಿದೆ. ವಿಷಯಗಳಲ್ಲಿ ತೊಡಗಿಕೊಂಡಿರುವ ಇಂದ್ರಿಯವೃತ್ತಿಯನ್ನು ತಡೆದು ನಿಲ್ಲಿಸುವದು ಪ್ರತ್ಯಾಹಾರ ಎನಿಸುವದು. ಮನಸ್ಸನ್ನು ಹಿಂದೆ ಹೇಳಿದಂತೆ ಹೃದಯಾದಿ ಪ್ರದೇಶಗಳಲ್ಲಿ ನೆಲೆಗೊಳಿಸುವದೇ ಧಾರಣೆ ಎನಿಸುವದು. ಧಾರಣೆಯಲ್ಲಿ ನೆಲೆಗೊಳಿಸಿದ ಮನಸ್ಸು ಹೆಚ್ಚುಕಾಲ ಭಗವಂತನಲ್ಲಿಯೇ ಇರುವಂತೆ ಮಾಡುವದು, ಜಪಿಸುವದು ಧ್ಯಾನ ಎನಿಸುವದು. ನಿರ್ದಿಷ್ಟವಾದ ಭಗವದ್ರೂಪ ವಿಷಯವನ್ನು ಧ್ಯಾನಮಾಡುತ್ತ ಚಿತ್ತವೃತ್ತಿಯು ಮತ್ತೊಂದುಕಡೆ ಎಲ್ಲಿಯೂ ಹೋಗದಿದ್ದರೆ ಆ ಮನಸ್ಸಿನ ಏಕಾಗ್ರತೆಗೆ 'ಸಮಾಧಿ' ಎನ್ನುವರು.

ಸಮಸ್ತ ಪದಾರ್ಥಗಳು ಜ್ಞಾನದಿಂದಲೇ ಅಂದರೆ ಚೈತನ್ಯದಿಂದಲೇ ಪ್ರಕಾಶಕ್ಕೆ ಬಂದಿರುವವು. ಆ ಚೈತನ್ಯವು ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳ ವಿಲೀನಾವಸ್ಥೆಯಲ್ಲಿ ಅಂದರೆ ತುರೀಯಾವಸ್ಥೆಯಲ್ಲಿ ಇದ್ದರೆ ಅದನ್ನೆ 'ಸಮಾಧಿ' ಎಂದು ಕರೆಯುವರು. ನೀರಿನಲ್ಲಿ ಉಪ್ಪು ಕರಗಿದಂತೆ ಆತ್ಮನಲ್ಲಿ ಮನಸ್ಸು ಕರಗುವದು ಅಥವಾ ಐಕ್ಯವಾಗುವದು ಉತ್ತಮವಾದ ಸಮಾಧಿ ಎನಿಸುವದು. ಈ ಎಲ್ಲ ಸಮಸ್ತ ಧ್ಯಾನ ಸಮಾಧಿಗಳಿಗೆ ಪ್ರಾಣಾಯಾಮವೇ ಕಾರಣವಾಗಿದೆ. ದೇಹದಲ್ಲಿರುವ ವಾಯುವಿಗೆ ಪ್ರಾಣ ಎಂದು ಹೆಸರು. ಅದನ್ನು ಒಂದೆಡೆಯಲ್ಲಿ ನಿಲ್ಲಿಸುವದಕ್ಕೆ ಯಮ ಎನ್ನುವರು. ಪ್ರಾಣವಾಯುವನ್ನು, ಅಪಾನ ವಾಯುವನ್ನು ಹನ್ನೆರಡು ಮಾತ್ರಾಗಳಷ್ಟು ಕಾಲ ತಡೆದು ನಿಲ್ಲಿಸುವದು ಪ್ರಾಣಾಯಾಮ.

ಶರೀರದಲ್ಲಿರುವ ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಎಂಬ ವಾಯುಗಳಿಗೆ ಅಥವಾ ಪಂಚಪ್ರಾಣಗಳಿಗೆ ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ ಎಂದು ಹೆಸರಿರುವದು. ಈ ಐದು ವಾಯುಗಳು ಶರೀರದಲ್ಲಿ ತಮ್ಮ ತಮ್ಮ ಕೆಲಸವನ್ನು ಮಾಡುತ್ತ ಸಮಾನಸ್ಥಿತಿಯಲ್ಲಿರುವದು ಪ್ರಸಾದ ಎನಿಸುವದು. ಮರಣಕಾಲದಲ್ಲಿ ಶರೀರವನ್ನು ಬಿಟ್ಟು ಹೋಗುವ ವಾಯುವಿಗೆ ಪ್ರಾಣ ಎಂದೂ, ಆಹಾರಾದಿಗಳನ್ನು ಕ್ರಮವಾಗಿ ಶರೀರದ ಆಯಾ ಅವಯವಗಳಿಗೆ ತಲುಪಿಸುವ ವಾಯುವಿಗೆ ಅಪಾನವೆಂದೂ, ಅಂಗಾಂಗಗಳಲ್ಲಿ ಸೇರಿಕೊಂಡು ರೋಗಾದಿಗಳನ್ನುಂಟುಮಾಡುವ ವಾಯುವಿಗೆ ವ್ಯಾನವೆಂದೂ, ಶರೀರದ ಮರ್ಮಸ್ಥಾನಗಳನ್ನು ಉದ್ವೇಗಗೊಳಿಸುವ ವಾಯುವಿಗೆ ಉದಾನವೆಂದೂ, ಶರೀರವನ್ನು ಸಮಸ್ಥಿತಿಯಲ್ಲಿಟ್ಟುಕೊಂಡಿರುವ ವಾಯುವಿಗೆ ಸಮಾನವೆಂದೂ ಐದು ಹೆಸರುಗಳಿರುವವು.

ನಾಗ ಎಂಬ ಪ್ರಾಣವಾಯುವು ವಮನ ಕಾರ್ಯವನ್ನು ಮಾಡಿಸುವದು. ಕೂರ್ಮ ಎಂಬ ವಾಯುವು ಕಣ್ಣುರೆಪ್ಪೆಗಳನ್ನು ತೆರೆಯುವದಕ್ಕೆ ಉಪಯೋಗವಾಗುವದು. ಕೃಕಲ ಎಂಬ ಸಮಾನ ವಾಯುವು ಶೀನುವ ಕಾರ್ಯವನ್ನು ಮಾಡುವದು. ದೇವದತ್ತ ಎಂಬ ಉದಾನ ವಾಯುವು ಆಕಳಿಸುವ ಕಾರ್ಯವನ್ನು ಮಾಡುವದು. ಧನಂಜಯ ಎಂಬ ವ್ಯಾನ ವಾಯುವು ದೊಡ್ಡ ಧ್ವನಿಯಿಂದ ಕೂಡಿ ಶರೀರವು ಪ್ರಾಣ ರಹಿತವಾಗುವವರೆಗೆ ಆ ಶರೀರವನ್ನೆಲ್ಲ ವ್ಯಾಪಿಸಿಕೊಂಡಿರುತ್ತದೆ.

ಯೋಗಾಭ್ಯಾಸವನ್ನುಮಾಡುವ ಮನುಷ್ಯನು ಮಾಡುವ ಮೊದಲು ಪ್ರಾಣಾಯಾಮದಿಂದ ಅವನ ದೋಷಗಳೆಲ್ಲವೂ ನಾಶವಾಗುವವು. ಧ್ಯಾನಮಾಡುವವನು ಹೃದಯಸ್ಥಾನದಲ್ಲಿ ಮಹೇಶ್ವರನನ್ನು, ನಾಭಿಕಮಲದಲ್ಲಿ ಸದಾಶಿವನನ್ನು, ಹಣೆಯಲ್ಲಿ ಚಂದ್ರಶೇಖರನನ್ನೂ, ಹುಬ್ಬುಗಳ ನಡುವೆ ಶಂಕರನನ್ನೂ ನೆತ್ತಿಯಲ್ಲಿರುವ ಸಹಸ್ರದಳ ಪದ್ಮದಲ್ಲಿ ಪರಬ್ರಹ್ಮ ಸ್ವರೂಪನಾದ ಶಿವನನ್ನೂ ಧ್ಯಾನಮಾಡಬೇಕು. ಹನ್ನೆರಡು ಪ್ರಾಣಾಯಾಮಗಳಿಗೆ ಒಂದು ಧಾರಣ ಎನ್ನುವರು. ಹನ್ನೆರಡು ಧಾರಣಕಾಲಕ್ಕೆ ಒಂದು ಧ್ಯಾನವು ಹನ್ನೆರಡು ಧ್ಯಾನಗಳಿಗೆ ಒಂದು ಸಮಾಧಿಯೂ ಆಗುವದು. ಹೀಗೆ ಪ್ರಾಣಾಯಾಮ ಪ್ರಯತ್ನದಿಂದ ಸಮಾಧಿಯು ಉಂಟಾಗುವದಲ್ಲದೇ ಜ್ಞಾನಿಗಳ ಸಹವಾಸದಿಂದಲೂ ಈ ಸಮಾಧಿಸ್ಥಿತಿಯು ಸುಲಭ ಪ್ರಾಪ್ಯವಾಗುವುದು.

*ಲಿಂಗ ಮಹಾಪುರಾಣದ ಪೂರ್ವಾರ್ಧದ ಅಷ್ಟಾಂಗಯೋಗ ಸಾಧನ ಎಂಬ ಎಂಟನೆಯ ಅಧ್ಯಾಯ ಮುಗಿದುದು.*

# ಯೋಗ ವಿಘ್ನಗಳು

ಅಧ್ಯಾಯ - ೯

**ಸೂತ ಅಂದದ್ದು**:- ಆಲಸ್ಯ, ವ್ಯಾಧಿಪೀಡೆ, ಪ್ರಮಾದ, ಸ್ಥಾನಸಂಶಯ, ಅನವಸ್ಥಿತ ಚಿತ್ತ, ಶ್ರದ್ಧೆ, ಭ್ರಾಂತಿದರ್ಶನ, ತ್ರಿವಿಧದುಃಖ, ದೌರ್ಮನಸ್ಯ, ವಿಷಯಾಸಕ್ತಿ ಇವು ಹತ್ತು ಯೋಗಕ್ಕೆ ವಿಘ್ನಗಳು ಎನಿಸಿರುವವು.

ವಿಹಿತಕಾರ್ಯಮಾಡುವಲ್ಲಿ ಪ್ರವೃತ್ತಿ ಇಲ್ಲದಿರುವದೇ ಆಲಸ್ಯ, ಆಹಾರ ದೋಷದಿಂದ ದೇಹದಲ್ಲಿ ಉಂಟಾಗುವ ಸಪ್ತಧಾತುಗಳ ವಿಷಮಾವಸ್ಥೆಯು ವ್ಯಾಧಿ, ಮನಸ್ಸಿನ ಏಕಾಗ್ರತೆ ಇಲ್ಲದೆ ಇರುವದು ಪ್ರಮಾದ. 'ಇದು ಅಹುದೊ? ಅಲ್ಲವೊ?'' ಎಂಬ ಡೋಲಾಯಮಾನವಾದ ಜ್ಞಾನವು ಸಂಶಯ. ಮನಸ್ಸಿನ ಸ್ಥೈರ್ಯ ಇಲ್ಲದಿದ್ದರೆ ಅನವಸ್ಥಿತ ಚಿತ್ತ. ಹರ, ಗುರು, ಆಚಾರ ಧರ್ಮಗಳಲ್ಲಿ ಅಪನಂಬಿಕೆ ಅಶ್ರದ್ಧೆ. ಅನಾತ್ಮ ವಸ್ತುವನ್ನು ಆತ್ಮ ವಸ್ತು ಎಂದು ತಿಳಿಯುವದು ಭ್ರಾಂತಿ. ಇಷ್ಟಾರ್ಥ ಕೈಗೂಡದೆ ಇದ್ದಾಗ ಉಂಟಾಗುವ ಮನಸ್ಸಿನ ಉದ್ವಿಗ್ನತೆಗೆ ದುಃಖ ಎನ್ನುವರು. ಶರೀರ, ಮನಸ್ಸಿಗೆ ಉಂಟಾಗುವ ದುಃಖವು ಆಧ್ಯಾತ್ಮಿಕ ದುಃಖ. ಹುಲಿ, ಹಾವು, ಅಥವಾ ಬೇರೆ ಪ್ರಾಣಿಯಿಂದ ಉಂಟಾಗುವ ದುಃಖವು ಆಧಿಭೌತಿಕ. ಮಳೆ, ಗಾಳಿ, ವಾತಾವರಣಗಳ ವೈಪರೀತ್ಯಗಳಿಂದಾದ ದುಃಖ ಆಧಿದೈವಿಕವೆಂದಾಗುತ್ತದೆ. ಹೀಗೆ ದುಃಖವು ಮೂರು ವಿಧವಾಗಿದೆ.

ತಮೋಗುಣ ರಜೋಗುಣಗಳ ಆಧಿಕ್ಯದಿಂದುಂಟಾಗುವ ದುರ್ಬುದ್ಧಿಗೆ ದೌರ್ಮನಸ್ಯ ಎನ್ನುವರು. ವೈರಾಗ್ಯದಿಂದ ಅದನ್ನು ತಡೆಯಬೇಕು. ವಿಷಯಗಳಲ್ಲಿ ಯೋಗ್ಯವಾದುದನ್ನು ಬಿಟ್ಟು ಅವಿವೇಕದಿಂದ ಅಯೋಗ್ಯವಾದವುಗಳನ್ನು ಮಾತ್ರ ಸ್ವೀಕರಿಸುವದು ವಿಷಯಾಸಕ್ತಿ ಎನಿಸುವದು. ಈ ಹತ್ತು ಅವಸ್ಥೆಗಳು ಯೋಗ ಸಾಧನೆಗೆ ದಶವಿಧವಾದ ವಿಘ್ನಗಳು ಎನಿಸುವವು.

ಯೋಗಸಿದ್ಧಿಗೆ ಮೇಲೆ ಹೇಳಿದ ಹತ್ತು ವಿಘ್ನಗಳು ಇರುವಂತೆ ಯೋಗೋಪ ದ್ರವಗಳಾಗಿ ಆರು ಸಿದ್ಧಿಗಳು ಉಂಟು. (೧) ಪ್ರತಿಭಾ (೨) ಶ್ರವಣಾ (೩) ವಾರ್ತಾ (೪) ದರ್ಶನಾ (೫) ಆಸ್ವಾದಾ (೬) ವೇದನಾ. ಈ ಆರು ಯೋಗೋಪದ್ರವಗಳನ್ನು ಬಿಟ್ಟ ಯೋಗಿಗೆ ಅಣಿಮಾದಿ ಅಷ್ಟಸಿದ್ಧಿಗಳು ಯೋಗ ಸಿದ್ಧಿಯನ್ನು ಉಂಟು ಮಾಡುವವು.

ಬುದ್ಧಿಯಿಂದ ತಿಳಿಯ ಬೇಕಾದುದನ್ನು ವಿಮರ್ಶೆಮಾಡಿ ತಿಳಿದುಕೊಳ್ಳುವ ಮನಸ್ಸಿನ ಶಕ್ತಿಯು ಪ್ರತಿಭಾ. ಎಲ್ಲ ಶಬ್ದಗಳನ್ನೂ ಅನಾಯಾಸವಾಗಿ ಕೇಳುವ ಶಕ್ತಿಯು ಶ್ರವಣಸಿದ್ಧಿ. ವಸ್ತುಗಳನ್ನು ಕೈ ಮುಟ್ಟಿ ನೋಡದೆ ಅವುಗಳ ಸ್ವಭಾವಗಳನ್ನು ತಿಳಿಯುವದಕ್ಕೆ ವೇದನ. ಪ್ರಯತ್ನವಿಲ್ಲದೆ ದಿವ್ಯರೂಪಾದಿಗಳನ್ನು ತಿಳಿಯುವ ಶಕ್ತಿಯು ದರ್ಶನ ಸಿದ್ಧಿ. ದಿವ್ಯ ರಸಗಳ ರುಚಿಯನ್ನು ತಿಳಿಯುವ ಶಕ್ತಿಯು ಆಸ್ವಾದ ಎನಿಸುವದು. ಬ್ರಹ್ಮಲೋಕದವರೆಗೂ ಇರುವ ದಿವ್ಯ ಶಬ್ದಗಳನ್ನು ತಿಳಿದು ಅನುಭವಿಸುವ ಶಕ್ತಿಯು ವಾರ್ತಾ ಎನಿಸುವದು. ಈ ಆರು ಸಿದ್ಧಿಗಳು ಸಚ್ಚಿದಾನಂದ ಸ್ವರೂಪನಾದ ಆತ್ಮನ ಸ್ವಸ್ಥಿತಿಗೆ ಅಡ್ಡಿಯಾಗಿ ದುಃಖದಾಯಕವಾಗುವವು. ಆದುದರಿಂದ ಇವುಗಳನ್ನೆಲ್ಲ ತ್ಯಾಗಮಾಡಬೇಕು.

ಈ ಆರು ಸಿದ್ಧಿಗಳು ಪೃಥಿವ್ಯಾದಿತತ್ವಗಳ ಅರವತ್ನಾಲ್ಕುಗುಣಗಳಿಂದ ಕೂಡಿದವುಗಳಾಗಿ ಮಾಯಿಕಸಿದ್ಧಿ ಎನಿಸುವವು. ಪಿಶಾಚಲೋಕ ಎಲ್ಲವು ಪೃಥಿವಿ ತತ್ವಾತ್ಮಕ, ರಾಕ್ಷಸಲೋಕ-ಅಪತತ್ವಾತ್ಮಕ, ಯಕ್ಷಲೋಕ - ತೈಜಸಾತ್ಮಕ, ಗಾಂಧರ್ವ ಲೋಕ - ವಾಯುತತ್ವಾತ್ಮಕ, ಇಂದ್ರಲೋಕ - ಆಕಾಶತತ್ವಾತ್ಮಕ. ಚಂದ್ರಲೋಕ - ಮನಸ್ ತತ್ವಾತ್ಮಕ. ಪ್ರಜಾಪತಿ ಲೋಕವು - ಅಹಂಕಾರತತ್ವಾತ್ಮಕ ಬ್ರಹ್ಮಲೋಕವು - ಶ್ರೇಷ್ಠವಾದ ಬುದ್ಧಿತತ್ವಾತ್ಮಕವಾಗಿರುತ್ತದೆ.

ಇವುಗಳಲ್ಲಿ ಪೃಥಿವೀತತ್ವಕ್ಕೆ ಸ್ಥೂಲತ್ವ, ಕೃಶತ್ವ, ಬಾಲ್ಯ, ಯೌವ್ವನ, ಮುಪ್ಪು, ನಾನಾ ಜಾತಿ ಸ್ವರೂಪ ಶಕ್ತಿಯು ಪೃಥಿವಿಯ ಅಂಶವಿಲ್ಲದೇ ಮಿಕ್ಕನಾಲ್ಕುಭೂತಗಳಿಂದಲೇ ದೇಹವನ್ನು ಧರಿಸುವ ಶಕ್ತಿಯು, ಮತ್ತು ವಿಲಕ್ಷಣವಾದ ಘ್ರಾಣೇಂದ್ರಿಯ ಶಕ್ತಿಯಿಂದ ಕೂಡಿಕೊಂಡು ಯಾವಾಗಲು ಹಿತವಾದ ಸುವಾಸನೆಯಿಂದಲೇ ಸುಗಂಧಿಯಾಗಿರುವದು ಇವು ಎಂಟುಗುಣಗಳು ಭೂಮಿಯ ಸಂಬಂಧವಾದ ಅಷ್ಟೈಶ್ವರ್ಯಗಳು ಎನಿಸುತ್ತವೆ.

ನೆಲದಲ್ಲಿ ವಾಸಿಸುವಂತೆ ಜಲದಲ್ಲಿ ನಿರಾತಂಕವಾಗಿ ವಾಸಿಸುವದು, ಸಂಚರಿಸುವದು, ಬಾಯಾರಿಕೆ ಇಲ್ಲದಿದ್ದರೂ ಬೇಕೆಂದರೆ ಸಮುದ್ರವನ್ನಾದರೂ ಕುಡಿಯುವ ಶಕ್ತಿ, ಬಯಸಿದಲ್ಲೆಲ್ಲ ಜಲವನ್ನು ಪಡೆಯುವ ಶಕ್ತಿ, ಪೃಥಿವಿಯಿಂದಲೇ ದೇಹವನ್ನು ಧರಿಸುವ ಶಕ್ತಿ, ಪಾತ್ರೆ ಇಲ್ಲದೇ ಕೈಯಿಂದಲೇ ನೀರನ್ನು ತುಂಬಿ ತರುವ ಶಕ್ತಿ, ದೇಹಕ್ಕೆ ಯಾವುದೇ ಆಘಾತ, ಪೆಟ್ಟು ಆದರೂ ಗಾಯ ಇಲ್ಲದೇ ಇರುವದು ಇವು ಎಂಟು. ಹಾಗೂ ಮೇಲೆ ಹೇಳಿದ ಪೃಥಿವೀ ತತ್ವದ ಎಂಟು ಗುಣಗಳು ಕೂಡಿ ಹದಿನಾರು ಗುಣಗಳು ಅಪ್‌ತತ್ವದ ಸಂಬಂಧಿಯಾದ ಷೋಡಶ ಐಶ್ವರ್ಯಗಳು.

ಇದರಂತೆ ತೇಜಸ್‌ತತ್ವದಲ್ಲಿಯೂ ಇಪ್ಪತ್ನಾಲ್ಕು ಗುಣಗಳು ಉಂಟು. ತನ್ನ ದೇಹದಿಂದಲೇ ಬೆಂಕಿಯನ್ನು ಹುಟ್ಟಿಸುವದು, ಅಗ್ನಿಯ ದಾಹದ ಭಯ ಇಲ್ಲದೇ ಇರುವದು. ಯೋಗಶಕ್ತಿಯಿಂದ ಪ್ರಜ್ವಲಿತವಾದ ಅಗ್ನಿಯು ಸುಡುವಂತೆ ಮಾಡುವದು, ನೀರಿನಲ್ಲಿಯೂ ಬೆಂಕಿಯು ಆರದಂತೆ ಕಾಪಾಡುವದು. ಕೈಯ್ಯಲ್ಲಿ ಬೆಂಕಿಯನ್ನು ಹಿಡಿದರು ಅದು ಸುಡದಂತೆ ಅದರ ದಾಹ ಶಕ್ತಿಯನ್ನು ತಡೆಯುವದು, ಬೇಕೆಂದಲ್ಲಿ ಬಯಸಿದಲ್ಲಿ ಅಗ್ನಿಯು ಬರುವಂತೆ ಮಾಡುವದು, ಬೆಂಕಿಯಲ್ಲಿ ಬಿದ್ದು ಬೂದಿಯಾಗಿ ಹೋದದ್ದನ್ನು ಮತ್ತೆ ಮೊದಲಿನಂತೆ ಮಾಡುವದು, ಪೃಥಿವಿ, ಜಲ, ತೇಜಸ್ಸು ಈ ಮೂರು ತತ್ವಗಳನ್ನು ಬಿಟ್ಟು ವಾಯು ಆಕಾಶ ಈ ಎರಡೇ ತತ್ವಗಳಿಂದ ತನ್ನ ಶರೀರವನ್ನು ಧರಿಸುವದು, ಹೀಗೆ ತೇಜಸ್‌ತತ್ವದಲ್ಲಿ ಎಂಟು ಗುಣಗಳು ಇರುತ್ತವೆ. ತನ್ನ ಈ ಅಷ್ಟೈಶ್ವರ್ಯ ರೂಪವಾದ ಗುಣಗಳಲ್ಲದೇ ಪೃಥಿವಿಯ ಎಂಟು ಗುಣಗಳು ಜಲತತ್ವದ ಎಂಟು ಗುಣಗಳು ಸೇರಿ ತೇಜಸ್‌ತತ್ವದಲ್ಲಿ ಒಟ್ಟು ಇಪ್ಪತ್ನಾಲ್ಕುತತ್ವಗಳು ಒಟ್ಟೈಸಿರುತ್ತವೆ.

ಪೃಥಿವಿ, ಜಲ, ತೇಜಸ್ ತತ್ವಗಳಿಗೆ ಎಂಟೆಂಟುಗುಣಗಳ ಅಷ್ಟೈಶ್ವರ್ಯ ಇರುವಂತೆ ವಾಯು ತತ್ವಕ್ಕೂ ಎಂಟು ಗುಣಗಳಿರುತ್ತವೆ. ಮನಸ್ಸು ಬಂದಲ್ಲಿ ಅದೇ ಮನೋವೇಗದಿಂದ ಹೋಗುವ ಶಕ್ತಿ, ಬೇರೆ ಪ್ರಾಣಿಗಳ ಶರೀರದಲ್ಲಿ ಪ್ರವೇಶಿಸುವ ಪರಕಾಯಪ್ರವೇಶಸಿದ್ಧಿ, ಬೆಟ್ಟದಂತಹ ಭಾರ ಭೂತ ವಸ್ತುಗಳನ್ನು ಹಗುರ ಹಗುರಾಗಿ ಹೆಗಲ ಮೇಲೆ ಹೊರುವ ಸಾಮರ್ಥ್ಯ, ತನ್ನ ದೇಹವನ್ನು ಬಹಳ ಭಾರ ಭೂತವನ್ನಾಗಿ ಅಥವಾ ಏನೂ ಭಾರವಿಲ್ಲದ ಅತ್ಯಂತ ಹಗುರಾಗಿ ಮಾಡುವ ಶಕ್ತಿ, ಕೈಗಳಿಂದ ಗಾಳಿ

ಹಿಡಿಯುವ ಸಾಮರ್ಥ್ಯ, ಬೆರಳಿನಿಂದ ಪೊಡೆದು ಭೂಮಿಯ ನೆಲ ನಡುಗಿಸುವ ಶಕ್ತಿ, ಪಂಚಮಹಾಭೂತಗಳಲ್ಲಿ ಮೊದಲಿನ ಪೃಥಿವಿ, ಜಲ, ತೇಜಸ್ ತತ್ವಗಳನ್ನು ಬಿಟ್ಟು ಆಕಾಶ ತತ್ವ ಒಂದರಿಂದಲೇ ಶರೀರ ಧಾರಣ ಸಾಮರ್ಥ್ಯ ಇವು ಎಂಟು ವಾಯು ತತ್ವದ ಅಷ್ಟೈಶ್ವರ್ಯಗಳು. ಇವಲ್ಲದೇ ಹಿಂದೆ ಹೇಳಿದ ಪೃಥಿವಿ, ಜಲ, ತೇಜಸ್ ತತ್ವಗಳ ಇಪ್ಪತ್ನಾಲ್ಕು ತತ್ವಗಳೂ ವಾಯುತತ್ವದಲ್ಲಿದ್ದು. ಒಟ್ಟು ಮುವ್ವತ್ತೆರಡು ಗುಣಗಳು ವಾಯು ಸಂಬಂಧಿಯಾದ ದ್ವಾತ್ರಿಂಶದ್ ಐಶ್ವರ್ಯಗಳು ಎಂದು ಕರೆಯಲ್ಪಡುತ್ತವೆ.

ಇದರಂತೆ ಎಂಟು ವಿಧವಾದ ಇಂದ್ರಶಕ್ತಿಯ ಗುಣಗಳು ಇಂತಿರುತ್ತವೆ. ನೆರಳು ಕೂಡ ಕಾಣದಂತೆ ದೇಹವನ್ನು ಧರಿಸುವದು. ಆ ಇಂದ್ರಿಯಗಳನ್ನು ಉಪಯೋಗಿಸದೆ ಆ ಇಂದ್ರಿಯಾರ್ಥಗಳನ್ನು ವಿಷಯೀಕರಿಸುವದು, ಆಕಾಶದಲ್ಲಿ ಬೇಕಾದಾಗ ಬೇಕಾದ ಕಡೆಯಲ್ಲಿ ಸಂಚರಿಸುವದು. ಮನಸ್ಸು ಬಂದಾಗ ಇಂದ್ರಿಯಾರ್ಥಗಳಾದ ವಿಷಯಗಳಿಂದ ಕೂಡಿ ಕೊಳ್ಳುವದು, ದೂರದ ಶಬ್ದಗಳನ್ನು ಕುಳಿತಲ್ಲಿಯೇ ಕೇಳುವದು, ಎಲ್ಲ ವಿಧವಾದ ಶಬ್ದಗಳನ್ನು ತಿಳಿದುಕೊಳ್ಳುವದು, ಪಂಚ ತನ್ಮಾತ್ರೆಗಳ ಸೂಕ್ಷ್ಮ ರೂಪವನ್ನು ಅರಿತುಕೊಳ್ಳುವದು, ಸರ್ವಪ್ರಾಣಗಳಿಗೂ ತನ್ನ ಶಕ್ತಿ ಸಿದ್ಧಿಗಳನ್ನು ತೋರ್ಪಡಿಸುವದು, ಎಂಬ ಎಂಟು ಗುಣಗಳು ಇರುತ್ತವೆ. ಮೊದಲಿನ ತತ್ವಗಳ ಮುವ್ವತ್ತೆರಡು ಗುಣಗಳು ಸೇರಿ ಒಟ್ಟು ನಲವತ್ತು ಗುಣಗಳು ಇಂದ್ರನ ಐಶ್ವರ್ಯ ಎನಿಸುವದು. ಈ ಐದು ವಿಧವಾದ ಐಶ್ವರ್ಯಗಳಿಂದ ಕೂಡಿದ ಕಾಯವ್ಯೂಹಗಳನ್ನು ಉತ್ಪತ್ತಿ ಮಾಡುವ ಶಕ್ತಿಯು ದೇವೇಂದ್ರನಿಗಿರುವದು.

ಇದರಂತೆ ಎಂಟು ಗುಣಗಳು ಚಂದ್ರನ ಅಷ್ಟೈಶ್ವರ್ಯ ಎಂದು ಪ್ರಸಿದ್ಧವಾಗಿದೆ. ಮನಸ್ಸು ಬಂದಲ್ಲಿ ಇಷ್ಟ ಬಂದ ಕಡೆ ಕಾಣಿಸಿಕೊಳ್ಳುವದು, ಮನಬಂದಂತೆ ಬೇಕಾದ ಕಡೆ ಹೊರಟುಹೋಗುವದು, ಎಲ್ಲ ಕಡೆಯಲ್ಲಿಯೂ ಇರುವದು, ಗುಟ್ಟಾಗಿರುವದನ್ನೆಲ್ಲ ತಿಳಿದುಕೊಳ್ಳುವದು, ಮನಸ್ಸಿಗೆ ಬಂದ ಇಷ್ಟರೂಪವನ್ನು ಧರಿಸುವದು, ಎಲ್ಲರನ್ನು ತನ್ನ ಅಧೀನರನ್ನಾಗಿ ಮಾಡಿಕೊಳ್ಳುವದು, ತನ್ನನ್ನು ಕಂಡವರಿಗೆಲ್ಲ ಸಂತೋಷವನ್ನುಂಟು ಮಾಡುವದು, ಜನನಮರಣ ಸ್ವರೂಪವಾದ ಸಂಸಾರದ ತತ್ವವನ್ನು ತಿಳಿದಿರುವದು ಇವು ಎಂಟು. ಹಿಂದಿನ ಎಲ್ಲ ತತ್ವಗಳ ನಲವತ್ತು ಗುಣಗಳು ಸೇರಿ ಒಟ್ಟು ನಲವತ್ತೆಂಟು ಗುಣಗಳು ಮತ್ತು ಮನಸ್ ತತ್ವದ ಲಕ್ಷಣಗಳು ಚಂದ್ರನ ಐಶ್ವರ್ಯಗಳು. ಕತ್ತರಿಸುವದು, ಹೊಡೆಯುವದು, ಕೀಳುವದು, ಒಡೆಯುವದು, ಕಟ್ಟುವದು, ಸಂಚಾರವನ್ನು ಬದಲಾಯಿಸಿ ನಡೆಯುವದು, ಎಲ್ಲ ಪ್ರಾಣಿಗಳಲ್ಲಿ ಅನುಗ್ರಹ ಬುದ್ಧಿ, ಮೃತ್ಯುವನ್ನು ಮೀರಿ ನಿಲ್ಲುವದು ಇವು ಎಂಟು ದಕ್ಷನೇ ಮೊದಲಾದ ಪ್ರಜಾಪತಿಗಳಲ್ಲಿ ಹಿಂದಿನವುಗಳನ್ನು ಸೇರಿಸಿ ಒಟ್ಟು ಐವತ್ತಾರು ಗುಣಗಳು ಇರುತ್ತವೆ. ಇದೇ ರೀತಿಯಾಗಿ ಬುದ್ಧಿತತ್ವವಾದ ಬ್ರಹ್ಮದೇವರ ಅಷ್ಟೈಶ್ವರ್ಯಗಳು ಬೇರೆಯಾಗಿರುತ್ತವೆ. ಯಾವ ಕಾರಣವಿಲ್ಲದೇ ಪ್ರಪಂಚವನ್ನು ಸೃಷ್ಟಿಸುವದು, ಕಾಪಾಡುವದು, ನಾಶಮಾಡುವದು, ಪ್ರಜೆಗಳು ಸನ್ಮಾರ್ಗದಲ್ಲಿರುವಂತೆ ಮಾಡುವದು, ಅಸದೃಶವಾದ ಬೇರೆ ಬೇರೆ ಸೃಷ್ಟಿಗಳನ್ನು ಮಾಡುವದು, ಜನನಮರಣ ರೂಪ ಸಂಸಾರಕ್ಕೆ ತಾನು ಕರ್ತೃವಾಗಿ ಇರುವದು ಇವು ಎಂಟು ಸೇರಿ ಒಟ್ಟು ಅರವತ್ನಾಲ್ಕುಗುಣಗಳು ಬುದ್ಧಿ ತತ್ವವಾದ ಬ್ರಹ್ಮನ ಐಶ್ವರ್ಯವಾಗಿರುತ್ತವೆ.

ಇವೆಲ್ಲದಕ್ಕೂ ಕಾರಣವಾದ ಪ್ರಧಾನ ಎಂದರೆ ಇದೇ ಪ್ರಕೃತಿ ಸಂಬಂಧವಾದ ವೈಷ್ಣವ ಪದವು. ಇದೇ ವಿಷ್ಣುವಿನ ಮಹದೈಶ್ವರ್ಯ. ಸರ್ವೋತ್ಕೃಷ್ಟವಾದ ಶಿವಸಂಬಂಧಿಯಾದ ಐಶ್ವರ್ಯವು ಅತ್ಯಧಿಕವಾಗಿದೆ. ಅದನ್ನು ಸಾಕ್ಷಾತ್ ವಿಷ್ಣುವು ಕೂಡ ತಿಳಿಯಲಾರ.

ಈ ಅರವತ್ನಾಲ್ಕು ಭಿನ್ನಭಿನ್ನತತ್ವನಿಷ್ಠವಾದ ಗುಣಗಳು ವ್ಯವಹಾರ ದೆಶೆಯಲ್ಲಿ ಸಿದ್ಧಿಗಳೆನಿಸಿ ಫಲದಾಯಕಗಳಾಗಿರುವವು. ಸಮಾಧಿಕಾಲದಲ್ಲಿ ಮಾತ್ರ ಉಪಸರ್ಗಗಳು ಎನಿಸಿಕೊಂಡು ಬಾಧಕಗಳಾಗಿರುವವು. ಆದುದರಿಂದ ನಿಜವಾದ ಸಾಧಕನು ವೈರಾಗ್ಯದಿಂದ ಪ್ರಯತ್ನಪೂರ್ವಕವಾಗಿ ಈ ಐಶ್ವರ್ಯಗಳು ತನ್ನ ಯೋಗಬಲದಿಂದ ಸಿದ್ಧಿಸಿದ್ದರೂ ಇವುಗಳನ್ನು ಉಪಯೋಗಿಸಬಾರದು. ವಿರಕ್ತನಾದವನು ಈ ಸಿದ್ಧಿಗಳಿಂದ ಬರುವ ವಿಷಯ ಭೋಗಗಳನ್ನೆಲ್ಲ ತ್ಯಾಗಮಾಡಬೇಕು. ಹಿಂದೆ ಹೇಳಿದ ಆರವತ್ನಾಲ್ಕು ಗುಣಗಳಲ್ಲಿ ಆಶೆ ಇಲ್ಲದಿರುವದೇ ಮಾನವನಿಗೆ ವಿತೃಷ್ಣೆ ಎನಿಸುವದು. ಉಪಸರ್ಗ ರೂಪವಾದ ಈ ಸಿದ್ಧಿಗಳು ಬ್ರಹ್ಮಲೋಕ ಪರ್ಯಂತರವಾಗಿ ಇದ್ದು ಬೇರೆ ಬೇರೆ ಅಷ್ಟೈಶ್ವರ್ಯಗಳೆಂದು ಪ್ರಸಿದ್ಧವಾಗಿದ್ದರೂ ವೈರಾಗ್ಯದಿಂದ ಅವುಗಳನ್ನೆಲ್ಲ ತ್ಯಾಗಮಾಡಬೇಕು. ಅದರಿಂದ ಮಹೇಶ್ವರನು ಸುಪ್ರಸನ್ನನಾಗುವನು. ಆ ಪರಮೇಶ್ವರನ ಪ್ರಸಾದದಿಂದಲೇ ಶ್ರೇಷ್ಠವಾದ ಮುಕ್ತಿಯು ವೈರಾಗ್ಯ ಭಾಗ್ಯವನ್ನು ಹೊಂದಿದ ಆ ಭಗವದ್ಭಕ್ತನಿಗೆ ಲಭ್ಯವಾಗುವದು.

ಋಷಿಗಳೇ ಹತ್ತುಸಾವಿರ ವರುಷಗಳವರೆಗೆ ಹೇಳಿದರೂ ಆ ಪರಮೇಶ್ವರನ ಮಹಿಮೆಯ ವಿಸ್ತಾರವನ್ನು ಬಣ್ಣಿಸುವದು ಸಾಧ್ಯವಿಲ್ಲ. ಆದುದರಿಂದ ನಿಜವಾದ ಸಾಧಕನು ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಎಲ್ಲ ಯೋಗಗಳಿಗಿಂತ ಪಾಶುಪತ ಎಂಬ ಶೈವಯೋಗದಲ್ಲಿಯೇ ನಿರಂತರವಾಗಿ ನಿಷ್ಠೆಯಿಂದ ಇದ್ದು ಶಿವಯೋಗಿ ಆಗಬೇಕು.

*ಲಿಂಗಮಹಾಪುರಾಣದ ಪೂರ್ವಾರ್ಧದ ಯೋಗ ವಿಘ್ನಗಳು ಎಂಬ ಒಂಭತ್ತನೆಯ ಅಧ್ಯಾಯ ಮುಗಿದುದು*



## ಲಿಂಗಪೂಜೆಯ ಶ್ರೇಷ್ಠತೆ

**ಅಧ್ಯಾಯ - ೧೦**

ಈ ಅಧ್ಯಾಯದಲ್ಲಿ ಪರಮೇಶ್ವರನ ಪರಮಾನುಗ್ರಹಕ್ಕೆ ಪಾತ್ರರಾದವರ ಸ್ವರೂಪ, ಆ ದೇವದೇವೋತ್ತಮನ ದರ್ಶನದ ಉಪಾಯ, ಲಿಂಗಪೂಜೆಯ ಶ್ರೇಷ್ಠತೆಗಳ ಬಗ್ಗೆ ವಿವರಣೆಯನ್ನು ನಿರೂಪಿಸಲಾಗುವದು.

**ಸೂತ :-** ಭಗವಾನ್ ಭವಾನೀಪತಿಯು ಇಂದ್ರಿಯಗಳನ್ನು ಗೆದ್ದು ಧರ್ಮಶಾಸ್ತ್ರಗಳನ್ನು ವೇದವೇದಾಂತಗಳನ್ನು ಅಭ್ಯಸಿಸಿ ಶ್ರೌತ ಸ್ಮಾರ್ತ ಕರ್ಮಾನುಷ್ಠಾನಗಳಲ್ಲಿ ನಿರತರಾದ ಸದಾಚಾರಿಗಳಿಗೆ ಪ್ರಸನ್ನನಾಗುವನು. ದೀನದಯಾಳುವಾದ ಆ ಭಗವಂತನು ತಪಸ್ವಿ, ಸನ್ಯಾಸಿ, ವಿರಕ್ತ, ದಾನಿ, ಜ್ಞಾನಿ, ಸತ್ಯವಾದಿಗಳಾದ ಆಚಾರ್ಯರಿಗೂ, ಸಾಧುಸಜ್ಜನರಿಗೂ, ಸುಪ್ರಸನ್ನನಾಗಿ ಪರಮಾನುಗ್ರಹ ಮಾಡುವನು. ಆ ಪರಮೇಶ್ವರನ ಪ್ರಸಾದಕ್ಕೆ ವೈರಾಗ್ಯ, ಜ್ಞಾನ, ಭಕ್ತಿಗಳೇ ಮುಖ್ಯ ಸಾಧನಗಳಾಗಿವೆ. ಕಷ್ಟ ಬಂದಾಗ ಕುಗ್ಗದೆ, ಸುಖ ಬಂದಾಗ ಹಿಗ್ಗದೆ, ಪ್ರೀತಿ, ಸಂತಾಪ, ವಿಷಾದ, ಏನು ಬಂದರೂ ಅದರಿಂದ ಉದ್ವೇಗಗೊಳ್ಳದೇ ಇರುವ

ಸ್ಥಿತಿಗೆ ವೈರಾಗ್ಯ ಎನ್ನುವರು. ಜೀವ ಜಡ ಇವುಗಳಿಂದ ಭಿನ್ನವಾದ ಆತ್ಮ ಮತ್ತು ಆತ್ಮೇತರ ವಸ್ತುಗಳನ್ನು ತಿಳಿಯುವದು, ಹಾಗೂ ಈ ಪ್ರಪಂಚವೆಲ್ಲವೂ ಶಿವನ ಅಧೀನವಾಗಿರುವದು ಮತ್ತು ಆ ಶಂಕರನೇ ಸಂಸಾರದಿಂದ ಮಾನವರನ್ನು ಮೋಚನೆಗೊಳಿಸುವ ಪರಾತ್ಪರ ಪರದೇವತೆ. ಅವನೇ ಮೋಕ್ಷಪ್ರದನಾದ ಪರಬ್ರಹ್ಮ ಎಂದು ತಿಳಿಯುವದೇ ಜ್ಞಾನ. ಸರ್ವೇಶ್ವರನಾದ ಆ ಪರಮೇಶ್ವರನಲ್ಲಿ ಸಂಪೂರ್ಣ ಶರಣಾಗತಿಯನ್ನು ಹೊಂದಿ ಅವನನ್ನು ನಿರಂತರ ಆರಾಧನೆಯನ್ನು ಮಾಡುವದೇ ಭಕ್ತಿ ಎನಿಸುವದು. ಆ ಪರಮೇಶ್ವರ ಭಕ್ತಿಯೇ ಮುಕ್ತಿಗೆ ಮುಖ್ಯ ಸಾಧನೆ. ಆ ಭಕ್ತಿಯು ಒಂದಿದ್ದರೆ ಆ ಪರಮೇಶ್ವರನು ಮುಕ್ತಿಗೆ ಅರ್ಹನಲ್ಲದಿದ್ದರೂ ಅವನಿಗೆ ತನ್ನ ಮಹಿಮೆಯಿಂದ ಅನುಗ್ರಹವನ್ನುಮಾಡಿ ಅವನ ಅಜ್ಞಾನಗಳನ್ನೆಲ್ಲ ನಾಶಪಡಿಸಿ ಅವನ ಉದ್ಧಾರವನ್ನು ಮಾಡುವನು.

''ಅಯೋಗ್ಯಸ್ಯಾಪಿ ಭಗವಾನ್ ಭಕ್ತಸ್ಯ ಪರಮೇಶ್ವರಃ ।
ಪ್ರಸೀದತಿ ನ ಸಂದೇಹೋ ನಿಗೃಹ್ಯ ವಿವಿಧಂ ತಮಃ ॥''

ಈ ಪರಮೇಶ್ವರ ಭಕ್ತಿಯು ಜ್ಞಾನ, ದಾನ, ವೇದಾಭ್ಯಾಸ, ಜ್ಯೋತಿಷ್ಟೋಮಾದಿ ಯಜ್ಞಯಾಗ, ತಪಸ್ಸು ದಾನ, ಧರ್ಮ ಮುಂತಾದವುಗಳಿಂದ ಉತ್ಪನ್ನವಾಗುವದು. ಇಂತಹ ಭಕ್ತರ ದರ್ಶನದಿಂದಲೇ ಮಾನವರಿಗೆ ಸ್ವರ್ಗಾದಿಫಲಗಳು ದೊರಕುತ್ತವೆ. ಎಂದು ಕೆಳಗಿನ ಪ್ರಮಾಣವಚನದಲ್ಲಿ ಹೇಳಲಾಗಿದೆ.

''ಭಕ್ತಾನಾಂ ದರ್ಶನಾದೇವ ನೃಣಾಂ ಸ್ವರ್ಗಾದಯೋ ದ್ವಿಜಾಃ
ನ ದುರ್ಲಭಾ ನ ಸಂದೇಹೋ ಭಕ್ತಾನಾಂ ಕಿಂ ಪುನಸ್ತಥಾ ॥

ಮಾನವರಿಗೆ ಸರ್ವ ವಿಧವಾದ ಸಾಮರ್ಥವೂ ಸಂಪತ್ತು, ಸೌಭಾಗ್ಯವು ಭಕ್ತಿಯಿಂದಲೇ ಲಭ್ಯವಾಗಿರುವವು. ಪೂರ್ವಕಾಲದಲ್ಲಿ ಕಾಶೀಪಟ್ಟಣದಲ್ಲಿ ಮಹಾದೇವನು ಮಹಾದೇವಿಗೆ ಭಕ್ತಿಯ ಸ್ವರೂಪವನ್ನು ಸ್ವಯಂ ತಾನೇ ಆ ಪಾರ್ವತಿಯ ಪ್ರಶ್ನೆಗೆ ಉತ್ತರ ರೂಪವಾಗಿ ಹೇಳಿದ್ದಾನೆ. ಲೋಕಾನುಗ್ರಹಕ್ಕಾಗಿ ಆ ಗೌರೀದೇವಿಯು ತನ್ನ ಲಿಪಿಮುಕ್ತ ಕ್ಷೇತ್ರದಲ್ಲಿ ಆಸೀನನಾದ ಪರಮೇಶ್ವನಿಗೆ ಪ್ರಶ್ನೆ ಮಾಡಿದಳು.

**ಪಾರ್ವತಿ** :- ಪ್ರಭು ಪರಮೇಶ್ವರ, ಪರಮಪೂಜ್ಯನಾದ ನೀನು ನಿನ್ನನ್ನು ಕಾಣುವ ಉಪಾಯವು ಯಾವುದು? ತಪಸ್ಸಿನಿಂದಲೋ? ವಿದ್ಯೆಯಿಂದಲೋ? ಅಥವಾ ಯೋಗ ದಿಂದಲೋ? ಯಾವುದರಿಂದ ನೀನು ಪ್ರಸನ್ನನಾಗುವಿ? ಎಂಬುದನ್ನುಹೇಳು.'' ಪಾರ್ವತಿಯ ಪ್ರಶ್ನೆಗಳನ್ನು ಕೇಳಿ ಪರಮೇಶ್ವರನು ಪ್ರಸನ್ನ ಮುಖದಿಂದ ನಸುನಗುತ್ತ ಹೇಳಿದನು.

**ಪರಮೇಶ್ವರ** :- ಪ್ರಿಯೆ ನಾನು ನಿನ್ನನ್ನು ಮದುವೆಯಾದ ಬಳಿಕ ಬಹಳ ದಿನಗಳವರೆಗೆ ಮಾವನಮನೆಯಲ್ಲಿಯೇ ಇದ್ದೆ. ಆಗ ನನ್ನ ಅತ್ತೆ ಅರ್ಥಾತ್ ನಿನ್ನ ತಾಯಿಯಾದ ಮೇನಾದೇವಿಯು ''ನೀವು ನಿಮ್ಮದೇ ಆದ ಒಂದು ವಾಸಸ್ಥಾನವನ್ನು ನಿರ್ಮಿಸಿಕೊಂಡು ನಿಮ್ಮ ಸ್ವಂತ ಮನೆಗೆ ಹೋಗಿರಿ'' ಎಂದು ಹೇಳಿದಳು. ಅದರಂತೆ ಶ್ವಶುರ ಗೃಹವಾದ ಕೈಲಾಸವನ್ನು ಬಿಟ್ಟು ಈ ಕಾಶೀಪಟ್ಟಣಕ್ಕೆ ಬಂದಿದ್ದೇವೆ. ಇದು ನಿನ್ನ ಮನೆ. ಈಗ ನೀನು ನನ್ನನ್ನು ಕುರಿತು ಬೇಕಾದ ಪ್ರಶ್ನೆಗಳನ್ನು ಮಾಡಬಹುದು. ನಿಸ್ಸಂಶಯವಾಗಿ ನನ್ನೊಂದಿಗೆ ಸಂಭಾಷಿಸಬಹುದು. ಪೂರ್ವಕಾಲದಲ್ಲಿ ಚತುರ್ಮುಖ ಬ್ರಹ್ಮನು ನನ್ನನ್ನು

ಕುರಿತು ಹೀಗೆಯೇ ಪ್ರಶ್ನೆಮಾಡಿದ್ದನು. ಆ ಕಮಲಾಸನನು ಪರಬ್ರಹ್ಮ ಸ್ವರೂಪಿಯಾದ ನನ್ನನ್ನು ನೋಡಬೇಕು ಎಂದು ಬಯಸಿ ಶ್ವೇತಕಲ್ಪದಲ್ಲಿ ಬಿಳಿಯ ಬಣ್ಣದಿಂದ ಇದ್ದ ಸದ್ಯೋಜಾತನನ್ನೂ, ರಕ್ತಕಲ್ಪದಲ್ಲಿ ಕೆಂಪು ಬಣ್ಣದಿಂದ ಇದ್ದ ವಾಮದೇವನನ್ನೂ, ಪ್ರೇತಕಲ್ಪದಲ್ಲಿ ಹಳದಿ ಬಣ್ಣದಿಂದ ಇದ್ದ ತತ್ಪುರುಷನನ್ನೂ, ಕಪ್ಪುಬಣ್ಣದ ಅಘೋರನನ್ನೂ, ಚಿತ್ರವರ್ಣದ ಈಶಾನನನ್ನೂ ನೋಡಿ ನನ್ನನ್ನು ಕುರಿತು ಹೀಗೆ ಪ್ರಶ್ನೆಯನ್ನು ಮಾಡಿದನು.

**ಚತುರ್ಮುಖ :-** ಮಹೇಶ್ವರನೆ, ಗಾಯತ್ರೀ ದೇವಿಯೊಡನೆ ನಿನ್ನ ಸದ್ಯೋಜಾತಾದಿ ಪಂಚಬ್ರಹ್ಮ ಸ್ವರೂಪವನ್ನು ನಾನು ನೋಡಿದೆನು. ನೀನು ದೇವೀಸಹಿತನಾಗಿ ಯಾವ ಉಪಾಸನೆಯಿಂದ ನನಗೆ ದರ್ಶನವನ್ನು ಕೊಡುವೆ? ಮತ್ತು ನನ್ನ ಪೂಜೆಯನ್ನು ಸ್ವೀಕರಿಸಿ ನನಗೆ ಹೇಗೆ ವಶನಾಗುವೆ? ನೀನು ನನಗೆ ಹೇಗೆ ಸುಪ್ರಸನ್ನನಾಗುವೆ? ಅದನ್ನು ಹೇಳು.

**ಮಹಾದೇವ :-** ಕಮಲಸಂಭೂತನಾದ ಬ್ರಹ್ಮನೆ

**''ಅವೋಚಂ ಶ್ರದ್ಧಯೈವೇತಿ ವಶ್ಯೋ ವಾರಿಜಸಂಭವ**
**ಧ್ಯೇಯೋ ಲಿಂಗೇ ತ್ವಯಾ ದೃಷ್ಟೇ ವಿಷ್ಣುನಾ ಪಯಸಾಂ ನಿಧೌ ।**
**ಪೂಜ್ಯಃ ಪಂಚಾಸ್ಯರೂಪೇಣ ಪವಿತ್ರೈಃ ಪಂಚಭಿರ್ದ್ವಿಜೈಃ ॥''**

ಭಕ್ತಿಯಿಂದಲೇ ನಾನು ವಶನಾಗುವೆನು. ನನ್ನನ್ನು ಧ್ಯಾನಮಾಡಬೇಕಾದರೆ ನೀನು ವಿಷ್ಣುವು ಸಮುದ್ರ ಮಧ್ಯದಲ್ಲಿ ನೋಡಿದ ಲಿಂಗಾಕೃತಿಯಲ್ಲಿ ನನ್ನನ್ನು ಧ್ಯಾನಮಾಡಬೇಕು. ಪರಿಶುದ್ಧರಾದ ಐದು ಜನ ಬ್ರಾಹ್ಮಣರಿಂದ ಸದ್ಯೋಜಾತಾದಿ ಪಂಚಮುಖಗಳಿಂದ ಕೂಡಿದ ನನ್ನನ್ನು ಪೂಜೆ ಮಾಡಿಸಬೇಕು. ಈ ಜಗತ್ತಿನಲ್ಲಿ ಶ್ರೇಷ್ಠನಾದ ಚತುರ್ಮುಖನೆ, ನಾನು ಈಗ ನಿನಗೆ ದರ್ಶನವನ್ನು ಕೊಟ್ಟದ್ದು ನಿನ್ನ ಆತ್ಯಂತಿಕ ಭಕ್ತಿಗೆ ವಶನಾಗಿಯೇ. ಪಾರ್ವತಿಯೇ, ನಾನು ಭಕ್ತಿಗೆ ಮಾತ್ರ ವಶನಾಗಿ ಭಕ್ತರಿಗೆ ದರ್ಶನಕೊಡುವೆನು. ನನ್ನ ನಿಜವಾದ ಭಕ್ತರು ಅತ್ಯಂತ ಭಕ್ತಿಯಿಂದ ಲಿಂಗದಲ್ಲಿ ನನ್ನನ್ನು ಪೂಜಿಸಬೇಕು.

*ಲಿಂಗಮಹಾಪುರಾಣದ ಪೂರ್ವಾರ್ಧದ ಭಕ್ತಿಭಾವ ಕಥನ*
*ಎಂಬ ಹತ್ತನೆಯ ಅಧ್ಯಾಯ ಮುಗಿದುದು.*

—o—

## ಸದ್ಯೋಜಾತ ಮಹಾತ್ಮೆ

ಅಧ್ಯಾಯ - ೧೧

**ಸೂತ:-** ಶ್ವೇತಲೋಹಿತ ಎಂಬ ಹೆಸರಿನ ಹತ್ತೊಂಬತ್ತನೆಯ ಕಲ್ಪದಲ್ಲಿ ಚತುರ್ಮುಖ ಬ್ರಹ್ಮನು ಪರಬ್ರಹ್ಮನಾದ ಶಿವನನ್ನು ಧ್ಯಾನಿಸುತ್ತಿದ್ದನು. ಆಗ ಅವನ ಭಕ್ತಿಗೆ ಪ್ರಸನ್ನನಾದ ಪರಮೇಶ್ವರನು ಕೆಂಪು ಹಾಗೂ ಬಿಳಿ ಬಣ್ಣದಿಂದ ಯುಕ್ತನಾಗಿ ಕುಮಾರ ರೂಪದಿಂದ ಕಾಣಿಸಿಕೊಂಡನು. ಆ ಸದ್ಯೋಜಾತಮೂರ್ತಿಯನ್ನೇ ಪರಬ್ರಹ್ಮ ಎಂದು ಧ್ಯಾನಮಾಡಿದನು. ಆ ಸದ್ಯೋಜಾತಮೂರ್ತಿಯ ಅಕ್ಕಪಕ್ಕಗಳಿಂದ ಶುಭ್ರ ವರ್ಣದ ಸುನಂದ, ನಂದನ, ವಿಶ್ವನಂದ, ಉಪನಂದನ ಎಂಬ ಮಹಾಮಹಿಮರಾದ ನಾಲ್ಕುಜನ ಶಿಷ್ಯರು ಪ್ರಾದುರ್ಭೂತರಾದರು. ಆ ಸದ್ಯೋಜಾತನ ಮುಂಭಾಗದಲ್ಲಿ ತೇಜಶ್ಯಾಲಿಯಾದ ಶ್ವೇತ ಎಂಬ ಹೆಸರಿನ ಶಿವ ಸ್ವರೂಪನಾದ ಮಹಾಮುನಿಯು ಉತ್ಪನ್ನನಾದನು. ಅಲ್ಲಿದ್ದ ಮುನಿಗಳೆಲ್ಲರು ಸದ್ಯೋಜಾತನಾದ ಪರಮೇಶ್ವರನನ್ನು ಸಾಕ್ಷಾತ್ ಪರಬ್ರಹ್ಮನೇ ಎಂದು ತಿಳಿದು ಅತ್ಯಂತಭಕ್ತಿಯಿಂದ ಅವನನ್ನೇ ಶರಣು ಹೊಂದಿ ಸದ್ಗತಿಯನ್ನು ಹೊಂದಿದರು.

*ಇತಿ ಲಿಂಗಮಹಾಪುರಾಣದ ಪೂರ್ವಾರ್ಧದ ಸದ್ಯೋಜಾತ ಮಹಾತ್ಮೆ ಎಂಬ ಹನ್ನೊಂದನೆಯ ಅಧ್ಯಾಯ ಮುಗಿದುದು.*



## ವಾಮದೇವ ಮತ್ತು ಶಿಷ್ಯರ ಉತ್ಪತ್ತಿ

ಅಧ್ಯಾಯ - ೧೨

**ಸೂತ :-** ಇಪ್ಪತ್ತನೆಯದಾದ ರಕ್ತಕಲ್ಪದಲ್ಲಿ ಪೀತಾಮಹನು ಪುತ್ರ ಕಾಮನೆಯಿಂದ ಶಿವನ ಧ್ಯಾನವನ್ನುಮಾಡಿದನು. ಆಗ ಮಹಾತೇಜಸ್ವಿಯಾದ, ಹೊಂಬಣ್ಣದ ಆಭರಣಗಳನ್ನೂ, ವಸ್ತ್ರಗಳನ್ನೂ ಹೂಗಳನ್ನೂ ಧರಿಸಿದ ಒಬ್ಬ ಕುಮಾರನು ಪ್ರಾದುರ್ಭೂತನಾದನು ಬ್ರಹ್ಮದೇವನು ಮಹಾಮಹಿಮನಾದ ಆ ಕುಮಾರನೇ ಪರಬ್ರಹ್ಮಸ್ವರೂಪನಾದ ವಾಮದೇವ ಎಂದು ತಿಳಿದು ಅವನನ್ನು ಸ್ತೋತ್ರ ಮಾಡಿದನು. ವೇದಮಂತ್ರವಾದ **'ವಾಮದೇವಾಯ ನಮಃ'** ಇತ್ಯಾದಿ ಮಂತ್ರಗಳಿಂದ ಅವನನ್ನು ಸ್ತೋತ್ರಮಾಡಿದನು. ಆ ವಾಮದೇವಮೂರ್ತಿಗೆ ವಿರಜ, ವಿಬಾಹು, ವಿಶೋಕ, ವಿಶ್ವಭಾವನ ಎಂಬ ನಾಲ್ವರು ಮಕ್ಕಳು ಹುಟ್ಟಿದರು. ಅವರೆಲ್ಲರು ಬ್ರಹ್ಮನಿಗೆ ಸಮಾನರಾಗಿದ್ದು ಕೆಂಪುವಸ್ತ್ರ, ಗಂಧ, ಹೂಗಳನ್ನುಧರಿಸಿ ಕೆಂಪಾದಭಸ್ಮವನ್ನೂ ಕುಂಕುಮವನ್ನೂ ಲೇಪಿಸಿಕೊಂಡಿದ್ದರು. **'ಓಂವಾಮದೇವಾಯನಮಃ'** ಎಂಬ ಮಂತ್ರವನ್ನು ಸಾವಿರವರುಷ ಜಪಮಾಡಿ ಶಿಷ್ಯ ಹಿತಕ್ಕಾಗಿ ಎಲ್ಲ ಜನರಿಗೂ ಧರ್ಮೋಪದೇಶಮಾಡಿ ರುದ್ರಲೋಕ ಪ್ರವೇಶವನ್ನು ಮಾಡಿದರು.

*ಲಿಂಗಮಹಾಪುರಾಣದ ಪೂರ್ವಾರ್ಧದ ವಾಮದೇವನ ಮತ್ತು ಶಿಷ್ಯರ ಉತ್ಪತ್ತಿ ಎಂಬ ಹನ್ನೆರಡನೆಯ ಅಧ್ಯಾಯ ಮುಗಿದುದು.*



## ರುದ್ರಗಾಯತ್ರಿಯ ವರ್ಣನೆ

ಅಧ್ಯಾಯ - ೧೩

**ಸೂತ :-** ಇಪ್ಪತ್ತೊಂದನೆಯ ಕಲ್ಪದಲ್ಲಿ ಶಿವನು ಹಳದಿ ಬಣ್ಣದ ಪೀತಾಂಬರವನ್ನು ಧರಿಸಿದ್ದನು ಆದುದರಿಂದ ಅದಕ್ಕೆ ಪೀತವಾಸಕಲ್ಪವೆಂದು ಹೆಸರು ಬಂದಿತು. ಆ ಸರಸ್ವತಿಯ ಪತಿಯಾದ ಬ್ರಹ್ಮನು ಪುತ್ರನ ಆಕಾಂಕ್ಷೆಯಿಂದ ಧ್ಯಾನಮಾಡುತ್ತಿರುವಾಗ ಬಂಗಾರದ ಯಜ್ಞೋಪವೀತವನ್ನೂ, ಹಳದಿಬಣ್ಣದ ಗಂಧವಸ್ತ್ರಪುಷ್ಪಾದಿಗಳನ್ನು ಧರಿಸಿದ ಓರ್ವ ತರುಣ ಕುಮಾರನು ಅವತರಿಸಿದನು. ಅವನ ಮುಖದಿಂದ ಒಂದು ಶ್ರೇಷ್ಠವಾದ ಗೋವು ಉತ್ಪನ್ನವಾಯಿತು. ಆ ಗೋವಿಗೆ ನಾಲ್ಕು ಕಾಲು, ನಾಲ್ಕು ಮುಖ, ನಾಲ್ಕು ಕೈ, ನಾಲ್ಕು ಮೊಲೆಗಳು, ನಾಲ್ಕು ಕಣ್ಣುಗಳು, ನಾಲ್ಕು ಕೊಂಬುಗಳು, ನಾಲ್ಕು ಹಲ್ಲುಗಳು ಇದ್ದವು. ಮಹಾ ಮಹಿಮಳಾದ, ಗೋರೂಪಳಾದ ಆ ಮಹೇಶ್ವರಿಯನ್ನು 'ಎಲೈ ಮಹಾದೇವಿಯೇ ಬಾ ಬಾ' ಎಂದು ಕರೆದನು. ಆಗ ಮತಿ, ಸ್ಮೃತಿ, ಬುದ್ಧಿ ಎಂದು ಆ ಮಹಾದೇವನಿಂದ ಸ್ತುತಿಸಲ್ಪಟ್ಟ ಆ ಗೋಮಾತೆಯು ಕೈಮುಗಿದುಕೊಂಡು ಮಹಾದೇವನ ಎದುರಿಗೆ ನಿಂತಳು. ಅವಳಿಗೆ ಶಿವನು ರುದ್ರಾಣಿ ಎಂಬ ಹೆಸರನ್ನು ಕೊಟ್ಟು ಪುತ್ರ ಕಾಮನೆಯಿಂದ ತನ್ನನ್ನು ಧ್ಯಾನಮಾಡುವ ಬ್ರಹ್ಮನಿಗೆ ಕೊಟ್ಟನು. ಅನಂತರ ಬ್ರಹ್ಮ ದೇವನು ಗೋರೂಪಧಾರಿಣಿಯಾದ ಆ ರುದ್ರಾಣಿಯಿಂದ ರುದ್ರಗಾಯತ್ರಿ ಮಂತ್ರವನ್ನು ಉಪದೇಶರೂಪವಾಗಿ ಪಡೆದನು. ಅನಂತರ ಧ್ಯಾನಯೋಗದಿಂದ ಯೋಗನಿಷ್ಠನಾಗಿ **''ತತ್ಪುರುಷಾಯವಿದ್ಮಹೆ''** ಎಂಬ ರುದ್ರಗಾಯತ್ರಿ ಮಂತ್ರವನ್ನು ಜಪಿಸಿ ಧ್ಯಾನಮಾಡಿದನು. ಅದರಿಂದ ಪ್ರೀತನಾದ ಮಹಾದೇವನು ಬ್ರಹ್ಮದೇವರಿಗೆ ದಿವ್ಯವಾದ ಯೋಗಶಕ್ತಿಯನ್ನು, ಶಾಸ್ತ್ರಜ್ಞಾನವನ್ನು ಅನುಗ್ರಹಿಸಿದನು.

ಅನಂತರ ಆ ಮಹಾದೇವನ ಪಾರ್ಶ್ವಗಳಿಂದ ಹಳದಿಬಣ್ಣದ ವಸ್ತ್ರ, ಹಳದಿಹೂವು ಹಳದಿಗಂಧವನ್ನು ಲೇಪಿಸಿಕೊಂಡು ಪೀತವರ್ಣದ ದಿವ್ಯಕುಮಾರರು ಪ್ರಾದುರ್ಭೂತರಾದರು. ಅವರು ಆರು ಸಾವಿರ ವರುಷಗಳವರೆಗೆ ಯೋಗಾಭ್ಯಾಸವನ್ನು ತಪಸ್ಸನ್ನು ಮಾಡಿ ಯಾಗಯೋಗಾಸಕ್ತರಾದ ಋಷಿಗಳಿಗೆ ಯೋಗವಿದ್ಯೆಯನ್ನು ಉಪದೇಶಮಾಡಿದರು. ಆ ಯೋಗ ಪ್ರಭಾವದಿಂದ ಕೊನೆಗೆ ಅವರೆಲ್ಲರೂ ಪರಮೇಶ್ವರನಲ್ಲಿಯೇ ಐಕ್ಯ ಹೊಂದಿದರು.

*ಇತಿ ಲಿಂಗಮಹಾಪುರಾಣದ ಪೂರ್ವಾರ್ಧದ ಬ್ರಹ್ಮನ ಧ್ಯಾನದಿಂದ ತತ್ಪುರುಷನ ಪ್ರಾದುರ್ಭಾವ ಮತ್ತು ರುದ್ರಗಾಯತ್ರಿಯ ವರ್ಣನೆ ಎಂಬ ಹದಿಮೂರನೆಯ ಅಧ್ಯಾಯ ಮುಗಿದುದು.*

—o—

## ಅಘೋರ ಮತ್ತು ಕುಮಾರರ ಉತ್ಪತ್ತಿ

ಅಧ್ಯಾಯ - ೧೪

**ಸೂತ :-** ಬ್ರಹ್ಮನ ಪೀತಕಲ್ಪ ಕೊನೆಗೊಂಡ ಬಳಿಕ ಅಸಿತಕಲ್ಪವು ಪ್ರಾರಂಭ ವಾಯಿತು. ದೇವಮಾನದ ಒಂದು ಸಾವಿರ ವರುಷ ಸಕಲ ಪ್ರಪಂಚವು ಸಮುದ್ರದಲ್ಲಿ ಲೀನವಾಗಿ ಹೋದ ಬಳಿಕ ಜೀವರ ಸೃಷ್ಟಿಯನ್ನು ಹೇಗೆ ಮಾಡಬೇಕು? ಎಂದು ಬ್ರಹ್ಮನು ಆಲೋಚನೆಯಿಂದ ವಿಷಣ್ಣನಾಗಿದ್ದನು. ಹೀಗೆ ಪುತ್ರಕಾಮನೆಯಿಂದ ಚಿಂತಿಸುತ್ತಿರುವ ಬ್ರಹ್ಮನ ಎದುರು ಕೃಷ್ಣವರ್ಣದ ಓರ್ವ ಪುರುಷನು ಪ್ರಾದುರ್ಭೂತನಾದನು. ದಿವ್ಯವಾದ ಯಜ್ಞೋಪವೀತ ಗಂಧಗಳನ್ನು ಧರಿಸಿದ ಆ ಕೃಷ್ಣ ಕುಮಾರನು ಕಪ್ಪುಬಣ್ಣದ ವಸ್ತ್ರವನ್ನು ಧರಿಸಿದ್ದನು. ಅವನ ರೂಪವು ಶತ್ರು ಭಯಂಕರವಾಗಿದ್ದಿತು. ಕೃಷ್ಣಪಿಂಗಳನೂ, ಆಶ್ಚರ್ಯಕರವಾದ ರೂಪವುಳ್ಳವನೂ ಆದ ಬ್ರಹ್ಮದೇವನು ಪರಬ್ರಹ್ಮನ ಸ್ವರೂಪವನ್ನು ಧ್ಯಾನಮಾಡಿದನು. ಆ ಅಘೋರಮೂರ್ತಿಯ ಅಕ್ಕಪಕ್ಕಗಳಿಂದ ಕೃಷ್ಣವರ್ಣದ ದೇಹವುಳ್ಳ, ಕರಿಯ ಹೂವಿನ ಮಾಲೆಯನ್ನು ಮುಡಿದ ಮಹಾನುಭಾವರಾದ ನಾಲ್ಕು ಜನ ಕಪ್ಪುಬಣ್ಣದ ಕುಮಾರರು ಉದ್ಭೂತರಾದರು ಅವರಿಗೆ ಕೃಷ್ಣ, ಕೃಷ್ಣಶಿಖ, ಕೃಷ್ಣಾಸ್ಯ, ಕೃಷ್ಣ ವಸ್ತ್ರಧಾರಿ ಎಂದು ಹೆಸರುಗಳಾದವು. ಅನಂತರ ಆ ನಾಲ್ವರು ಕೃಷ್ಣ ವರ್ಣದ ಕುಮಾರರು ಒಂದು ಸಾವಿರ ವರುಷಗಳವರೆಗೆ ಪರಶಿವನನ್ನು ಆರಾಧನೆಮಾಡಿ ಅಸಂಖ್ಯ ಶಿಷ್ಯರಿಗೆ ಶಿವೋಪಾಸನೆಯ ಯೋಗಕ್ರಮವನ್ನು ಉಪದೇಶಮಾಡಿದರು ಅನಂತರ ಯೋಗಾಭ್ಯಾಸದಿಂದ ಯೋಗಸಿದ್ಧಿಯನ್ನು ಪಡೆದು ಏಕಾಗ್ರ ಮನಸ್ಸಿನಿಂದ ತಮ್ಮ ಉಪಾಸ್ಯನಾದ ಪರಶಿವನಲ್ಲಿ ಲೀನರಾದರು.

*ಲಿಂಗಮಹಾಪುರಾಣದ ಪೂರ್ವಾರ್ಧದ ಅಘೋರನ ಹಾಗೂ ಅವನ ನಾಲ್ಕು ಜನ ಕುಮಾರರ ಉತ್ಪತ್ತಿ ಎಂಬ ಹದಿನಾಲ್ಕನೆಯ ಅಧ್ಯಾಯ ಮುಗಿದುದು.*

—o—

**ಸೂತ :-** ಆ ಕೃಷ್ಣಕಲ್ಪವು ಮುಗಿದ ಬಳಿಕ ಬ್ರಹ್ಮನು ಅಘೋರ ಮಂತ್ರ ಸ್ವರೂಪನಾದ ಮಹಾದೇವನನ್ನು ಭಕ್ತಿಯಿಂದ ಸ್ತೋತ್ರಮಾಡಿದನು. ಆ ಸ್ತೋತ್ರದಿಂದ ಸಂತುಷ್ಟನಾದ ಆ ಪಾರ್ವತೀಪತಿಯು ಬ್ರಹ್ಮನಿಗೆ ಇಂತು ನುಡಿದನು.

**ಪರಮೇಶ್ವರ :-** ಚತುರ್ಮುಖ, ನಾನು ನನ್ನನ್ನು ಈ ಅಘೋರಮಂತ್ರದಿಂದ ಉಪಾಸನೆ ಮಾಡುವವರ ಬ್ರಹ್ಮಹತ್ಯಾದಿ ಸಕಲ ಪಾಪಗಳನ್ನು ಪರಿಹಾರ ಮಾಡುತ್ತೇನೆ. ಮನಃಪೂರ್ವಕವಾಗಿ ಬ್ರಹ್ಮಹತ್ಯಾಮಾಡಿದ ಪಾಪಕ್ಕೆ ನಾಲ್ಕು ಲಕ್ಷ ಅಘೋರ ಮಂತ್ರ ಜಪವನ್ನು ಮಾಡಬೇಕು. ಕೋಪದಿಂದ ಮಾಡಿದ ಬ್ರಹ್ಮಹತ್ಯೆಗೆ ಎಂಟು ಲಕ್ಷ ಜಪ, ಭ್ರೂಣಹತ್ಯಾಪಾಪಕ್ಕೆ ಒಂದು ಕೋಟಿ ಈ ಮಂತ್ರ ಜಪವನ್ನು ಮಾಡಬೇಕು. ಮಾತೃಹತ್ಯಾ, ಗೋಹತ್ಯಾ, ಸ್ತ್ರೀಹತ್ಯಾ, ಮದ್ಯಪಾನ ಮುಂತಾದ ಪಾಪಗಳಿಗೆ ಒಂದು ಲಕ್ಷ ಅಘೋರಮಂತ್ರ ಜಪಮಾಡಿದರೆ ಆ ಪಾಪ ಪರಿಹಾರವಾಗುತ್ತದೆ. ಬ್ರಹ್ಮಸ್ವವನ್ನು ಕದ್ದವನೂ, ಚಿನ್ನವನ್ನು ಕದ್ದವನೂ, ಗುರುಪತ್ನಿಯ ಸಂಗಮಾಡಿದವನು ಒಂದೊಂದು ಲಕ್ಷ ಈ ಜಪ ಮಾಡಿದರೆ ಶುದ್ಧರಾಗುವರು. ಈ ನಾಲ್ಕು ಮಹಾಪಾಪ ಮಾಡಿದವರು ಅಘೋರಮಂತ್ರ ಜಪಮಾಡಿದರೆ ಆ ಪಾಪ ನಷ್ಟವಾಗಿ ಪರಿಶುದ್ಧನಾಗುವನು. ಈ ಮಹಾಪಾಪ ನಾಶಕ್ಕಾಗಿ ಹೇಳಿದ ಸಂಖ್ಯೆಯ ಅರ್ಧ ಸಂಖ್ಯೆಯಷ್ಟಾದರೂ ಈ ಅಘೋರ ಮಂತ್ರ ಜಪಮಾಡಿದರೆ ಉಪಪಾತಕಗಳ ಪರಿಹಾರವಾಗುವದು.

ಬ್ರಾಹ್ಮಣನು ಬ್ರಹ್ಮಹತ್ಯಾ, ಚಿನ್ನದ ಚೌರ್ಯ, ಮದ್ಯಪಾನ, ಗುರುಪತ್ನಿ ಗಮನ ಎಂಬ ನಾಲ್ಕು ಮಹಾಪಾಪಗಳನ್ನು ಮಾಡಿದರೆ ಕಪಿಲವರ್ಣದ ಆಕಳಿನ ಮೂತ್ರವನ್ನು, ರುದ್ರ ಗಾಯತ್ರಿಯಾದ ತತ್ಪುರುಷಾಯ ಎಂಬ ಮಂತ್ರದಿಂದಲೂ, ಆಗತಾನೆ ಬೀಳುತ್ತಿರುವ ಗೋಮಯದಿಂದಲೂ, **'ಗಂಧದ್ವಾರಾಂ'** ಎಂಬ ಮಂತ್ರದಿಂದಲೂ, ತುಪ್ಪವನ್ನು **'ಶುಕ್ರಮಸಿ'** ಎಂಬ ಮಂತ್ರದಿಂದಲೂ, ಮೊಸರನ್ನು **'ದಧಿಕ್ರಾವಣ'** ಎಂಬ ಮಂತ್ರದಿಂದಲೂ, ಕುಶೋದಕವನ್ನು **'ದೇವಸ್ಯಾತ್ವಾ'** ಎಂಬ ಮಂತ್ರದಿಂದಲೂ ಗ್ರಹಣಮಾಡಬೇಕು.

ಈ ಎಲ್ಲ ಗೋಮೂತ್ರ, ಗೋಘೃತ, ಗೋದಧಿ ಹಾಗೂ ಕುಶೋದಕಗಳನ್ನು ಚಿನ್ನ ಬೆಳ್ಳಿ ತಾಮ್ರದ ಪಾತ್ರೆಗಳಲ್ಲಾಗಲಿ, ಕಮಲದ ಎಲೆಯಲ್ಲಿಯಾಗಲಿ ಹಾಕಿ, ಅಘೋರ ಮಂತ್ರದಿಂದ ಒಟ್ಟುಗೂಡಿಸಿ ದರ್ಭೆಯ ಕೂರ್ಚವನ್ನೂ, ಸಕಲ ರತ್ನಗಳಿಂದ ಕೂಡಿದ ಸುವರ್ಣವನ್ನೂ ಅದರಲ್ಲಿ ಹಾಕಿ ಒಂದು ಲಕ್ಷ ಅಘೋರಮಂತ್ರಗಳ ಜಪವನ್ನು ಮಾಡಬೇಕು ಮತ್ತು ತುಪ್ಪ, ಚರು, ಸಮಿಧೆ, ಎಳ್ಳು, ಗೋಧಿ, ಭತ್ತ ಈ ಪದಾರ್ಥಗಳಿಂದ ಬೇರೆ ಬೇರೆ ಹೋಮಕುಂಡಗಳಲ್ಲಿ ಏಳೇಳು ಸಂಖ್ಯೆಯ ಹೋಮಗಳನ್ನು ಮಾಡಬೇಕು. ಈ ದ್ರವ್ಯಗಳು ದೊರೆಯದಿದ್ದರೆ ಅಷ್ಟು ಸಂಖ್ಯೆಯ ಹೋಮವನ್ನು ಮಾಡಬೇಕು. ಹೋಮಾನಂತರ ಅದೇ ಮಂತ್ರದಿಂದ ಸ್ನಾನಮಾಡಿ ಎಂಟು ದ್ರೋಣ ಪರಿಮಾಣದ ತುಪ್ಪದಿಂದ ಶಿವಲಿಂಗಕ್ಕೆ ಅಭಿಷೇಕ ಮಾಡಬೇಕು. ಒಂದು ದಿನ ಉಪವಾಸ ಮಾಡಿ ಬಳಿಕ ಸ್ನಾನಾನಂತರ ಶಿವಲಿಂಗದ ಎದುರು ಕೂರ್ಚ ಸಹಿತವಾದ ಪಂಚಗವ್ಯವನ್ನು ಪ್ರಾಶನಮಾಡಿ ಆಚಮನಮಾಡಿ ಬ್ರಹ್ಮ ಗಾಯತ್ರಿ ಮಂತ್ರ ಜಪವನ್ನು ಮಾಡಬೇಕು. ಈ ರೀತಿಯಾಗಿ ಪ್ರಾಯಶ್ಚಿತ್ತ ಮಾಡಿಕೊಂಡರೆ.

ಬ್ರಹ್ಮಹತ್ಯೆ, ಭ್ರೂಣಹತ್ಯೆ, ವೀರಹತ್ಯೆ, ಗುರುಹತ್ಯೆ, ವಿಶ್ವಾಸಘಾತ, ಚಿನ್ನದ ಚೌರ್ಯ, ಗುರುಪತ್ನಿ ಸಂಗ, ಮದ್ಯಪಾನ, ಪರಸ್ತ್ರೀಗಮನ, ಬ್ರಹ್ಮಸ್ವ ಅಪಹರಣ, ಗೋಹತ್ಯಾ, ಮಾತೃಹತ್ಯಾ, ಪಿತೃಹತ್ಯಾ, ದೇವತಾ ಮೂರ್ತಿ ನಾಶ ಲಿಂಗಭಂಗ ಮತ್ತು ಇತರ ಮಾತಿನಿಂದ, ಮನಸ್ಸಿನಿಂದ, ಕೃತಿಯಿಂದ ಮಾಡಿದ ಅನೇಕ ಪಾಪಗಳು ಪರಿಹಾರವಾಗುವವು.

*ಲಿಂಗ ಮಹಾಪುರಾಣದ ಪೂರ್ವಾರ್ಧದ ಅಘೋರೇಶನ ಮಹಿಮೆ*
*ಎಂಬ ಹದಿನೈದನೇಯ ಅಧ್ಯಾಯ ಮುಗಿದುದು*

—o—

## ಈಶಾನಮೂರ್ತಿಯ ಮಹಿಮೆ

ಅಧ್ಯಾಯ - ೧೬

**ಸೂತ :-** ಕೃಷ್ಣಕಲ್ಪ ಮುಗಿದ ಬಳಿಕ ವಿಶ್ವರೂಪ ಕಲ್ಪದಲ್ಲಿ ಬ್ರಹ್ಮನು ಪುತ್ರಾಪೇಕ್ಷೆಯಿಂದ ಧ್ಯಾನಮಾಡುತ್ತಿರಲು ಪರಮೇಶ್ವರನ ವಾಙ್ಮಯ ಪ್ರಪಂಚ ಸ್ವರೂಪವಾದ ಒಂದು ವಾಣಿಯು ಪ್ರಾದುರ್ಭೂತವಾಯಿತು. ಆ ವಿಶ್ವರೂಪಕ್ಕೆ ಪ್ರಪಂಚಗಳೇ ಹೂವಿನಹಾರ, ವಸ್ತ್ರ, ಯಜ್ಞೋಪವಿತಗಳಾಗಿ ಶೋಭಿಸುತ್ತಿದ್ದವು. ಈಶಾನನ ಆ ವಾಗ್‌ರೂಪವು ಪ್ರಪಂಚಗಳಿಗೆಲ್ಲ ಮಾತೃ ಸ್ವರೂಪವಾಗಿದ್ದಿತು. ಸಕಲಾ ಭರಣಗಳಿಂದ ಕೂಡಿ ಸ್ಫಟಿಕಮಣಿಯಂತೆ ಕಾಂತಿಯುಕ್ತನಾದ ಆ ಈಶಾನ ಮೂರ್ತಿಯನ್ನು ಬ್ರಹ್ಮದೇವನು ಪಂಚಬ್ರಹ್ಮ ಮಂತ್ರಾರ್ಥವನ್ನು ಅನುವಾದ ಮಾಡುತ್ತ ಓಂಕಾರ ಪೂರ್ವಕವಾಗಿ ಸ್ತೋತ್ರ ಮಾಡಿದನು. ಅವನಿಗೆ ಶರಣಾಗತನಾಗಿ ನಮಸ್ಕಾರ ಮಾಡಿ ನಾಲ್ಕುಮುಖಗಳಿಂದಲೂ ಭಕ್ತಿಯುಕ್ತನಾಗಿ ಅವನ ಪ್ರಾರ್ಥನಾ ಪದ್ಯಗಳನ್ನು ಪಠಿಸಿದನು.

**''ತಂವಂದೇ ದೇವಮೀಶಾನಂ ಸರ್ವೇಶಂ ಸರ್ವಗಂ ಪ್ರಭುಂ ।**
**ಓಮೀಶಾನ ನಮಸ್ತೇಸ್ತು ಮಹಾದೇವ ನಮೋಸ್ತುತೇ ॥**

**ನಮೋಸ್ತು ಸರ್ವವಿದ್ಯಾನಾಮೀಶಾನ ಪರಮೇಶ್ವರ ।**
**ನಮೋಸ್ತು ಸರ್ವಭೂತಾನಾಮೀಶಾನ ವೃಷವಾಹನ ॥**

**ಬ್ರಹ್ಮಣೋಽಧಿಪತೇ ತುಭ್ಯಂ ಬ್ರಹ್ಮಣೇ ಬ್ರಹ್ಮರೂಪಿಣೇ ।**
**ನಮೋ ಬ್ರಹ್ಮಾಧಿಪತಯೇ ಶಿವಂ ಮೇಽಸ್ತು ಸದಾಶಿವ ॥**

**ಓಂಕಾರಮೂರ್ತೀ ದೇವೇಶ ಸದ್ಯೋಜಾತ ನಮೋನಮಃ ।**
**ಪ್ರಪದ್ಯೇ ತ್ವಾಂ ಪ್ರಪನ್ನೋಽಸ್ಮಿ ಸದ್ಯೋಜಾತಾಯ ವೈ ನಮಃ ॥''**

ಈ ಬ್ರಹ್ಮಕೃತವಾದ ಸ್ತೋತ್ರದಿಂದ ಪರಿತುಷ್ಟನಾದ ಪರಮೇಶ್ವರನು ನಿನಗೆ ಬೇಕಾದ ವರವನ್ನು ಕೇಳು ಎಂದು ಹೇಳಿದನು. ಆಗ ಚತುರ್ಮುಖ ಬ್ರಹ್ಮನು ಕೈ ಮುಗಿದು. 'ಭಗವನ್, ನಿನ್ನ ವಿಶ್ವರೂಪವು ಗೋವಿನ ರೂಪವಾಗಿರುವದಷ್ಟೇ; ಈ ದೇವಿ ಯಾರು? ಇವಳಿಗೆ ವಿಶ್ವರೂಪ ಎಂದು ಹೆಸರು ಬರಲು ಕಾರಣವೇನು? ಇವಳ ಕ್ರಿಯಾಶಕ್ತಿ ಏನು? ಎನ್ನುವದನ್ನು ನಮಗೆ ನಿರೂಪಿಸು'' ಎಂದು ಕೇಳಿದನು.

**ಪರಶಿವ :-** ಬ್ರಹ್ಮನೆ ಈಗ ನಡೆಯುತ್ತಿರುವ ಕಲ್ಪಕ್ಕೆ ವಿಶ್ವರೂಪಕಲ್ಪ ಎನ್ನುವರು. ಈ ಕಲ್ಪದಲ್ಲಿ ನೀನು ಬ್ರಹ್ಮನ ಅಧಿಕಾರವನ್ನು ಪಡೆದಿರುವೆ. ನನ್ನ ಎಡಭಾಗದ

ಅವಯವದಲ್ಲಿ ಹುಟ್ಟಿದ ವಿಷ್ಣುವು ವೈಕುಂಠಲೋಕದ ಆಧಿಪತ್ಯವನ್ನು, ಅಧಿಕಾರವನ್ನು ಪಡೆದಿದ್ದಾನೆ. ಅವನ ಅಧಿಕಾರ ಪ್ರಾರಂಭದಿಂದ ಈ ಕಲ್ಪವು ಮೂವತ್ತೊಂಬತ್ತನೆಯದಾಗಿರುತ್ತದೆ. ನಿನ್ನ ಹಿಂದೆ ನೂರಾರು ಸಾವಿರ ಬ್ರಹ್ಮರ ಆಡಳಿತ ಅಧಿಕಾರಗಳು ಮುಗಿದು ಹೋಗಿರುವವು. ಮಾಂಡವ್ಯಗೋತ್ರದ ನೀನು ತಪಸ್ಸಿನಿಂದ ನನಗೆ ಪುತ್ರನಾಗಿರುವೆ. ಆನಂದ ಸ್ವರೂಪನಾಗಿರುವ ನೀನು ಆ ಬ್ರಹ್ಮಾನಂದವೇ ಎಂದು ತಿಳಿ. ನಿನ್ನಲ್ಲಿ ರಕಾರಾದಿಯಾದ ಮುವ್ವತ್ತೆರಡು ಅಕ್ಷರಗಳ ಸಂಜ್ಞೆಯಿಂದ ಮುವ್ವತ್ತೆರಡು ಗುಣಗಳು ನೆಲೆಸಿರುತ್ತವೆ. (೧) ಚಿತ್ತವೃತ್ತಿನಿರೋಧ ಎಂಬ ಯೋಗವು ನಿನ್ನ ಮೊದಲನೆಯ ಗುಣ. (೨) ಸಾಂಖ್ಯತತ್ವಜ್ಞಾನವು ಎರಡನೆಯ ಗುಣ. (೩) ತಪಸ್ಸು (೪) ವಿದ್ಯೆ (೫) ನಿಯಮ (೬) ಕ್ರಿಯೆ (೭) ಪ್ರಿಯವಚನ (೮) ಸತ್ಯ (೯) ದಯೆ (೧೦) ವೇದಾಧ್ಯಯನ (೧೧) ಅಹಿಂಸೆ (೧೨) ಸದ್ಬುದ್ಧಿ (೧೩) ಕ್ಷಮೆ (೧೪) ಏಕಾಗ್ರಚಿತ್ತ (೧೫) ಈಶ್ವರ ಸಾನ್ನಿಧ್ಯ (೧೬) ಇಂದ್ರಿಯ ನಿಗ್ರಹ (೧೭) ಶಾಂತಿ (೧೮) ಜ್ಞಾನ (೧೯) ಮಾಯೆ (೨೦) ಬುದ್ಧಿ (೨೧) ಧೈರ್ಯ (೨೨) ತೇಜಸ್ಸು (೨೩) ನ್ಯಾಯ (೨೪) ಕೀರ್ತಿ (೨೫) ಧಾರಣಾಶಕ್ತಿ (೨೬) ನಾಚಿಕೆ (೨೭) ದಿವ್ಯಜ್ಞಾನ (೨೮) ನಿರ್ದುಷ್ಟವಚನ (೨೯) ಸಂತೋಷ (೩೦) ಇಂದ್ರಿಯಪಾಟವ (೩೧) ವೇದೋಕ್ತಕರ್ಮ (೩೨) ಪ್ರಸನ್ನತೆ ಇವೇ ಮುವ್ವತ್ತೆರಡು ಅಕ್ಷರಗಳ ಸಂಜ್ಞೆಯಿಂದ ನೆಲೆ ನಿಂತಿರುವವು.

ಬ್ರಹ್ಮನೆ, ನಾನು ಪ್ರಕೃತಿಯನ್ನು ಸೃಷ್ಟಿಸಿದೆ. ಆ ಪ್ರಕೃತಿಯೆ ನಿನಗೂ, ವಿಷ್ಣುವಿಗೂ, ದೇವತೆಗಳಿಗೂ ತಾಯಿ, ನಾಲ್ಕು ಮುಖವುಳ್ಳ ಗೋರೂಪಳಾದ ಆ ಪ್ರಕೃತಿ ದೇವಿಯು ನನ್ನ ಸನ್ನಿಧಾನ ಬಲದಿಂದ ಪ್ರಪಂಚವನ್ನು ಸೃಷ್ಟಿಮಾಡುವ ರುದ್ರಾದಿ ರೂಪನಾದ ನನಗೂ ತಾಯಿಯಾಗಿರುವಳು. ಆ ಪ್ರಕೃತಿಗೆ ಗೌರಿ, ಮಾಯಾ, ವಿದ್ಯಾ, ಕೃಷ್ಣಾ, ಹೈಮವತಿ ಎಂಬ ಹೆಸರುಗಳಿರುವವು. ಸಾಂಖ್ಯಶಾಸ್ತ್ರಜ್ಞರು ಪ್ರಧಾನ, ಪ್ರಕೃತಿ ಎಂದು ಹೇಳುವರು. ಇಪ್ಪತ್ನಾಲ್ಕು ತತ್ವಗಳ ಪ್ರಪಂಚವು ಆ ಪ್ರಧಾನ ಮೂಲಕವಾಗಿ ಪರಿಷ್ಕೃತವಾಗಿದೆ ಎಂದು ಹೇಳುವರು. ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಂದ ಪ್ರಪಂಚವನ್ನು ಸೃಷ್ಟಿಮಾಡುವ ಆ ಗೋರೂಪಳಾದ ಪ್ರಕೃತಿಯೇ ಗಾಯತ್ರಿದೇವಿ. ನಿರ್ವಿಕಾರನಾದ ಉತ್ಪತ್ತಿರಹಿತನಾದ ಪರಬ್ರಹ್ಮನೆಂದರೆ ನಾನೇ ಎಂದು ತಿಳಿ.''

ಬ್ರಹ್ಮದೇವನಿಗೆ ಹೀಗೆ ತಿಳಿ ಹೇಳಿ ಆ ಮಹಾದೇವನು ಜಟಿ, ಮುಂಡಿ, ಶಿಖಂಡಿ, ಅರ್ಧಮುಂಡಿ ಎಂಬ ಹೆಸರುಳ್ಳ ನಾಲ್ಕು ಜನ ಶಿಷ್ಯರನ್ನು ಸೃಷ್ಟಿಮಾಡಿದನು. ಎಲ್ಲ ಸಲ್ಲಕ್ಷಣಗಳಿಂದೊಡಗೂಡಿದ ಪ್ರಕೃತಿದೇವಿಯ ಅಕ್ಕಪಕ್ಕಗಳಲ್ಲಿ ಕಂಗೊಳಿಸುವ ಆ ನಾಲ್ಕು ಜನ ತೇಜಸ್ವಿಗಳಾದ ಶಿಷ್ಯರು ಆ ಈಶಾನ ದೇವಗುರು ಹೇಳಿಕೊಟ್ಟಯೋಗದಿಂದ ಮಹೇಶ್ವರನ ಉಪಾಸನೆಯನ್ನು ಮಾಡಿದರು. ಹೀಗೆ ಜಪ ತಪೋನುಷ್ಠಾನ, ಜ್ಞಾನೋಪದೇಶಗಳಿಂದ ದೇವಮಾನದ ಸಾವಿರವರುಷಗಳು ಕಳೆದಮೇಲೆ ಈಶಾಪರೋಕ್ಷವನ್ನು ಮಾಡಿಕೊಂಡು ಪರಮೇಶ್ವರನಲ್ಲಿ ಐಕ್ಯವನ್ನು ಹೊಂದಿದರು.

*ಲಿಂಗ ಮಹಾಪುರಾಣದ ಪೂರ್ವಾರ್ಧದಲ್ಲಿ ಈಶಾನ ಮೂರ್ತಿಯ ಮಹಿಮಾ ವರ್ಣನೆ ಎಂಬ ಹದಿನಾರನೆಯ ಅಧ್ಯಾಯ ಮುಗಿದುದು.*

**ಸೂತ** :- ದೇವತೆಗಳು ಋಷಿಗಳು ಪಿತಾಮಹನಿಗೆ ನಮಸ್ಕಾರವನ್ನು ಮಾಡಿ, ''ಪರಮಪೂಜ್ಯಬ್ರಹ್ಮದೇವನೆ, ಲಿಂಗವು ಹೇಗೆ ಉತ್ಪನ್ನವಾಯಿತು? ಆ ಲಿಂಗದಲ್ಲಿ ಮಹಾದೇವನನ್ನು ಹೇಗೆ ಪೂಜಿಸಬೇಕು? ಲಿಂಗ ಎಂದರೇನು? ಲಿಂಗಿಯು ಯಾರು?'' ಎಂದು ಕೇಳಿದರು.

**ಬ್ರಹ್ಮ** :- ಲಿಂಗ ಎಂದರೆ ಪ್ರಕೃತಿ. ಲಿಂಗಿಯೇ ಪರಮೇಶ್ವರ. ಪೂರ್ವಕಾಲದಲ್ಲಿ ನನಗೂ ವಿಷ್ಣುವಿಗೂ ಪ್ರಳಯಕಾಲದ ಸಮುದ್ರಮಧ್ಯದಲ್ಲಿ ಪರಸ್ಪರಯುದ್ಧವು ಸಂಭವಿಸಿತು. ಆ ಸಂದರ್ಭವು ಹೀಗಿದೆ. ನಾನು ಸೃಷ್ಟಿ ಮಾಡಿದ ದೇವತೆಗಳ ಸ್ಥಿತಿಕಾಲವಾದ ಸಾವಿರ ಚತುರ್ಯುಗಗಳು ಪೂರ್ಣವಾಗಿ ಕಳೆದ ಬಳಿಕ ದೇವತೆಗಳೆಲ್ಲರೂ ಋಷಿಗಳೊಡನೆ ಜನೋಲೋಕಕ್ಕೆ ಹೋದರು. ಆ ಲಯಕಾಲದಲ್ಲಿ ಮಳೆ ಇಲ್ಲದ್ದರಿಂದ ಎಲ್ಲ ಮರಗಳು ಒಣಗಿಹೋದವು. ಪಶು, ಮನುಷ್ಯ, ಪಿಶಾಚ, ಗಂಧರ್ವ ಹಾಗೂ ಮಾಂಸಾಹಾರಿ ಪ್ರಾಣಿಗಳೆಲ್ಲವೂ ಸೂರ್ಯನ ಕಿರಣಗಳಿಂದ ಸುಟ್ಟು ಹೋದವು. ಪ್ರಪಂಚವೆಲ್ಲವು ಏಕಾಕಾರ ಸಮುದ್ರವಾಗಿ ಆ ಪ್ರಳಯಕಾಲದಲ್ಲಿ ಕತ್ತಲೆಯಿಂದ ತುಂಬಿಹೋಗಿತ್ತು. ಆ ಸಮುದ್ರದ ನೀರಿನಲ್ಲಿ ಸಹಸ್ರಾಕ್ಷನು, ಸಹಸ್ರಶೀರ್ಷನೂ, ಪರಮಪರಿಶುದ್ಧನೂ, ಅಸಂಖ್ಯ ಕೈಕಾಲು ಕಣ್ಣು ತಲೆ ಬಾಹುಗಳುಳ್ಳವನೂ, ಸರ್ವಸದ್ಗುಣಸಂಪನ್ನನೂ ಆದ ನಾರಾಯಣನು ಶಯನ ಮಾಡಿದ್ದನು. ಅವನು ಸಕಲ ದೇವತೆಗಳ ಉತ್ಪತ್ತಿಗೆ ಕಾರಣನೂ, ಸರ್ವಸಂಸಾರ ಸೃಷ್ಟಿಗೆ ನಿಮಿತ್ತಕಾರಣನೂ, ರಜೋಗುಣದಿಂದ ಬ್ರಹ್ಮನೂ, ತಮೋಗುಣದಿಂದ ಶಂಕರನೂ ಸತ್ವಗುಣದಿಂದ ಮಹಾವಿಷ್ಣುವೂ ಆಗಿದ್ದನು. ಅವನೇ ಕಾಲ ಸ್ವರೂಪನೂ ಕಾಲ ನಿಯಾಮಕನೂ ಕಾಲಕಾರಣನೂ ಆಗಿದ್ದಾನೆ.

ಸಮುದ್ರಶಾಯಿಯಾಗಿರುವ ಆ ವಿಷ್ಣುವನ್ನು ನೋಡಿ ನಾನು ಅವನ ಮಾಯೆಯಿಂದ ಮೋಹಿತನಾಗಿ ಭ್ರಾಂತಿಷ್ಟನಂತೆ ಕೋಪದಿಂದ ಕೈ ತಟ್ಟಿ ಎಬ್ಬಿಸಿ ನೀನು ಯಾರು ? ಹೇಳು ಎಂದು ಕೇಳಿದೆನು. ನನ್ನ ಹಸ್ತಪ್ರಹಾರದಿಂದ ಎಚ್ಚರಗೊಂಡ ಆ ಶಾಂತಮೂರ್ತಿಯು ಹಾವಿನ ಹಾಸಿಗೆಯಿಂದ ಎದ್ದು ಕುಳಿತು ಒಂದು ಕ್ಷಣ ನನ್ನನ್ನು ನೋಡಿದನು. ಮತ್ತು ನನ್ನನ್ನು ಕುರಿತು ಮಂದಹಾಸಬೀರುತ್ತ, 'ವತ್ಸ ಬ್ರಹ್ಮನೆ, ನಿನಗೆ ಸ್ವಾಗತ. ಕುಮಾರ ನಿನಗೆ ಸುಸ್ವಾಗತ' ಎಂದು ಹೇಳಿದನು. ಆಗ ನನ್ನಲ್ಲಿ ರಜೋಗುಣ ಪ್ರಾಚುರ್ಯದಿಂದ ಆ ಭಗವಂತನ ವಿಷಯದಲ್ಲಿ ನನಗೆ ದ್ವೇಷಹುಟ್ಟಿ ಕೋಪದಿಂದ ನಾನು ನುಡಿದೆನು.

**ಬ್ರಹ್ಮ** :- ನಿರ್ದುಷ್ಟನಾದ ನಾರಾಯಣನೆ, ಪ್ರಪಂಚವನ್ನೆಲ್ಲ ಸೃಷ್ಟಿಮಾಡಿ ಕೊನೆಗೆ ಸಂಹಾರವನ್ನುಮಾಡುವ ನನ್ನನ್ನು 'ವತ್ಸ' 'ಮಗನೆ' ಎಂದು ಮಾತನಾಡಿಸಿದೆಯಲ್ಲ. ಅಜ್ಞಾನದಿಂದ ನೀನು ನನ್ನನ್ನು ಹೀಗೇಕೆ ಕರೆದೆ ?

**ನಾರಾಯಣ** :- ಚತುರ್ಮುಖನೆ ಲೋಕದ ಸೃಷ್ಟಿ ಸ್ಥಿತಿ, ಸಂಹಾರ ಮಾಡಿದವನು ನಾನೇ ಎಂದು ತಿಳಿ. ನೀನು ನನ್ನ ಹೊಕ್ಕಳದ ಕೆಂದಾವರೆಯಿಂದ ಹುಟ್ಟಿರಲೂ ನನ್ನ ಪುತ್ರನಾಗಿರುವೆ. ನೀನು ನನ್ನನ್ನು ಮರೆತಿರುವೆ.

ಹೀಗೆ ನಮ್ಮಿಬ್ಬರಲ್ಲಿ ಮಾತಿಗೆಮಾತುಬೆಳೆದು ಭಯಂಕರ ಯುದ್ಧದಲ್ಲಿ ಪರ್ಯವಸಾನವಾಯಿತು. ನಮ್ಮಿಬ್ಬರ ಆ ಕಲಹವನ್ನು ಶಾಂತಮಾಡುವದಕ್ಕಾಗಿ ನಮ್ಮ ಎದುರು ದೇದಿಪ್ಯಮಾನವಾದ ಒಂದು ಲಿಂಗವು ಉದ್ಭವಿಸಿತು. ಆ ಲಿಂಗವು ಸಾವಿರ ಸಾವಿರ ಜ್ವಾಲಾಮಾಲೆಗಳಿಂದಕೂಡಿ ಪ್ರಳಯಾಗ್ನಿಯಂತೆ ತೋರುತ್ತಿತ್ತು. ಅದರ ಜ್ವಾಲೆಗಳನ್ನು ಕಂಡು ಭ್ರಾಂತನಾದ ಹರಿಯು ಬ್ರಹ್ಮನನ್ನು ಕುರಿತು "ಅಗ್ನಿಯಿಂದುಂಟಾದ ಈ ಲಿಂಗವನ್ನು ಪರೀಕ್ಷಿಸೋಣ" ಎಂದು ಹೇಳಿದನು. ಅವನ ಮಾತಿನಂತೆ ನಾನು ಹಂಸರೂಪವನ್ನು ತಳೆದು ಮನೋವೇಗದಿಂದ ಆ ಲಿಂಗ ಪರೀಕ್ಷೆಗಾಗಿ ಮೇಲೆ ಮೇಲೆ ಹಾರಿ ಹೋದೆನು. ಹರಿಯು ಆ ಲಿಂಗದ ಕೆಳಭಾಗವನ್ನು ಪರೀಕ್ಷೆ ಮಾಡಲಿಕ್ಕಾಗಿ ಘೋರಾಕಾರದ ವರಾಹರೂಪವನ್ನು ತಾಳಿದನು. ಹತ್ತುಯೋಜನಅಗಲ, ಮೂರುಯೋಜನಉದ್ದದ ಮೇರು ಪರ್ವತದಂತೆ ದೇಹವುಳ್ಳ ವರಾಹರೂಪವನ್ನು ಹೊಂದಿದ ಹರಿಯು ಲಿಂಗಪರೀಕ್ಷೆಗಾಗಿ ಅದರ ಕೆಳಭಾಗದಲ್ಲಿ ಹೋದನು. ಹೀಗೆ ಒಂದು ಸಾವಿರ ವರುಷ ವಿಷ್ಣುವು ಕೆಳಭಾಗಕ್ಕೆ ಹೋದರೂ ಆ ಲಿಂಗದ ಬುಡವನ್ನೇ ಕಾಣಲಿಲ್ಲ. ನಾನೂ ಕೂಡ ಅವನಂತೆ ಹಂಸ ಪಕ್ಷಿಯ ರೂಪದಿಂದ ಲಿಂಗದ ಮೇಲ್ಭಾಗವನ್ನು ಕಾಣಬೇಕೆಂದು ಮೇಲೆಮೇಲೆ ಸಾವಿರವರುಷ ಹಾರುತ್ತ ಹೋದರೂ ಆ ಲಿಂಗದ ತುದಿಯನ್ನು ಕಾಣಲಿಲ್ಲ. ಹೀಗೆ ನಾವಿಬ್ಬರು ಆ ಲಿಂಗದ ತುದಿ ಮೊದಲುಗಳನ್ನು ಪರೀಕ್ಷಿಸಬೇಕೆಂಬ ಹುರುಪು ಹುಮ್ಮಸ್ಸುಗಳಿಂದ ಮೇಲೆಮೇಲೆ ಹಾರಿ ಕೆಳಕೆಳಗೆ ಹೋಗಿ ನೋಡಿ ಬಳಲಿ ಆ ಲಿಂಗದ ಅಂತಪಾರವನ್ನು ಕಾಣದೆ ಕೊನೆಗೆ ಭಯಭ್ರಾಂತರಾಗಿ ಹೊರಟ ಸ್ಥಳಕ್ಕೆ ಬಂದೆವು. ಆಗ ವಿಷ್ಣುವು ನನ್ನೊಡನೆ ಆ ಲಿಂಗ ರೂಪನಾದ ಪರಮೇಶ್ವರನಿಗೆ ಸಕಲ ದಿಕ್ಕುಗಳಲ್ಲಿಯೂ ನಮಸ್ಕಾರಮಾಡಿ ಈ ಜ್ವಾಲಾಸ್ಥಂಭವು ಏನಿರಬಹುದು ಎಂದು ಯೋಚನೆ ಮಾಡಿದನು.

ಆಗ ಆ ಜ್ವಾಲಾಲಿಂಗದ ಬಲಭಾಗದ ಪ್ರದೇಶದಲ್ಲಿ **ಓಂ** ಎಂಬ ಸ್ಪಷ್ಟವಾದ ಒಂದು ಧ್ವನಿಯು ಉತ್ಪನ್ನವಾಯಿತು. ಆ ಲಿಂಗದ ಬಲಭಾಗದಲ್ಲಿ ಮೊದಲನೆಯ 'ಅ' ವರ್ಣವು ಅದರ ಮೇಲೆ **'ಉ'** ಕಾರವು, ನಡುವೆ 'ಮ'ಕಾರವು ಕೊನೆಯಲ್ಲಿ ನಾದವು ಎಲ್ಲವೂ ಸೇರಿ ಒಂದು ಅವ್ಯಕ್ತವಾದ **'ಓಂ'** ಎಂಬ ಅನಾದಿಯಾದ ಧ್ವನಿಯು ಕಂಡು ಬಂದಿತು. ನಾನು ಅದನ್ನು ಕೇಳಿದೆನು. ಅಕಾರ ಉಕಾರ ಮಕಾರ ರೂಪವಾದ ಮೂರು ಮಾತ್ರೆಗಳೂ, ಅರ್ಧಮಾತ್ರೆಯೂ ಸೇರಿ ಓಂಕಾರ ರೂಪವಾಯಿತು. ಆ ಪ್ರಣವದ ಕೊನೆಯಲ್ಲಿ ಉಂಟಾಗುವ ಧ್ವನಿಗೆ ನಾದ ಎನ್ನುವರು. ಅದೇ ಬ್ರಹ್ಮ. ವಿಷ್ಣುವು ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಮಾತ್ರ ರೂಪದಿಂದ ತಿಳಿದು ಆ ವೇದಗಳ ಶಬ್ದಗಳಿಂದಲೇ ಪ್ರಪಂಚ ಸ್ವರೂಪವಾದ ಶಿವನನ್ನು ಧ್ಯಾನಮಾಡಿದನು. ಮನಸ್ಸಿನಿಂದ ಒಡಗೂಡಿದ ಮಾತು ಯಾವನನ್ನು ತಿಳಿಸಲಾರದೆ ನೀತಿ ಎಂದು ಹಿಂದಿರುಗುವದೋ ಅಂತಹ ರುದ್ರನು ಏಕಾಕ್ಷರವಾದ ಪ್ರಣವಕ್ಕೆ ಅರ್ಥಸ್ವರೂಪನಾಗಿರುವನು. ನಿತ್ಯವೂ, ಆನಂದ ಸ್ವರೂಪವೂ, ನಾಶರಹಿತವೂ, ಪರಬ್ರಹ್ಮ ವಸ್ತುವು ಅತ್ಯಂತ ಶ್ರೇಷ್ಠ. ಏಕಾಕ್ಷರ ವಾಚ್ಯನಾದುದರಿಂದ ಹಿರಣ್ಯಗರ್ಭನು ಅಕಾರಸ್ವರೂಪ. ಸಕಲಕಾರಣನಾದ ಹರಿಯು ಉಕಾರಸ್ವರೂಪ, ಮಹಾಮಹಿಮನಾದ ರುದ್ರನು ಮಕಾರಸ್ವರೂಪನು ಆಗಿರುವನು. ಆ ಮಹಾರುದ್ರನೇ ವಿಷ್ಣು ಬ್ರಹ್ಮರಿಗೆ ಅನುಗ್ರಾಹಕನಾಗಿದ್ದಾನೆ. ಈ ಮೂರು ಮಾತ್ರೆಗಳ ನಾದದಿಂದ ಹೇಳಲ್ಪಡತಕ್ಕವನಾದುದರಿಂದ ನಾದವೇ ಮಹೇಶ್ವರ.

ಮಕಾರ ಸ್ವರೂಪನಾದುದರಿಂದ ಶಿವನು ಬೀಜಕಾರಣ. ಅಕಾರಸ್ವರೂಪನಾದ ಬ್ರಹ್ಮನು ಬೀಜಸ್ವರೂಪ ಉಕಾರಸ್ವರೂಪನಾದ ಹರಿಯು ಉತ್ಪತ್ತಿ ಸ್ವರೂಪವಾದ ಯೋನಿ ಸ್ವರೂಪ. ಬೀಜಕಾರಣ, ಬೀಜಯೋನಿ. ಈ ಮೂರು ಸೇರಿ ಪ್ರಧಾನವೆಂಬ ಪ್ರಕೃತಿಗೂ ಪುರುಷನಿಗೂ ಅಧಿಪತಿಯಾದ ನಾದ ಸ್ವರೂಪನಾದ ಶಿವನೇ ಪರಮೇಶ್ವರ ಎನಿಸಿಕೊಳ್ಳುವನು. ಬೀಜಕಾರಣನಾದ ಪರಮೇಶ್ವರನ ಲಿಂಗದಿಂದ ಉಕಾರಯೋನಿ ಸ್ವರೂಪನಾದ ವಿಷ್ಣುವಿನಲ್ಲಿ ಇಡಲ್ಪಟ್ಟ ಅಕಾರ ಬೀಜವಾದ ಬ್ರಹ್ಮನು ಅಭಿವೃದ್ಧಿ ಹೊಂದಿದನು. ಎಂದರೆ ಬೀಜವು ಬ್ರಹ್ಮಾಂಡ ಕಾರಣವಾಯಿತು. ಅದೇ ಬೀಜವು ದೊಡ್ಡದಾಗಿ ಚಿನ್ನದ ಮೊಟ್ಟೆಯಾಯಿತು. ಅನೇಕ ಸಾವಿರ ವರುಷಗಳವರೆಗೆ ಪ್ರಳಯ ಜಲದಲ್ಲಿ ತೇಲಾಡುವ ಆ ಅಂಡ-ಬ್ರಹ್ಮಾಂಡವು ಈಶ್ವರನಿಂದ ಎರಡು ಭಾಗವಾಗಿ ಮಾಡಲ್ಪಟ್ಟಿತು. ಮೇಲಿನ ಭಾಗವೇ ಸ್ವರ್ಗ ಪಂಚಭೂತಾತ್ಮಕವಾದ ಕೆಳಭಾಗವೇ ಭೂಮಿ. ಓಂಕಾರ ರೂಪನಾದ ಬ್ರಹ್ಮನನ್ನು ಯಜುರ್ವೇದದ ಉಪನಿಷತ್ತುಗಳು 'ಓಂ' ಎಂಬುವ ಪ್ರಣವ ಮಂತ್ರದಿಂದ ಪ್ರತಿಪಾದ್ಯ ಎಂದು ಹೇಳುವವು ಅದನ್ನು ಅನುಸರಿಸಿ ಋಗ್ವೇದ ಸಾಮವೇದ ಮಂತ್ರಗಳು ಆ ಪರಮೇಶ್ವರನು ಪ್ರಣವ ಪ್ರತಿಪಾದ್ಯ ಎಂದು ಪುನರುಚ್ಚರಿಸುವವು. ಆದುದರಿಂದ **"ತಸ್ಯ ಯಜುರೇವ ಶಿರಃ"** ಎಂಬ ಶ್ರುತಿಯಿಂದ ಯಜುರ್ವೇದಕ್ಕೆ ಪ್ರಾಧಾನ್ಯವು ಬಂದಿತು. ಅನಂತರ ನಾನು ಶ್ರೀಹರಿಯು ಕೂಡಿ ವೇದಪ್ರತಿಪಾದ್ಯನಾದ ಆ ಪರಮೇಶ್ವರನನ್ನು ವೇದಮಂತ್ರಗಳಿಂದಲೇ ಸ್ತೋತ್ರಮಾಡಿದೆವು.

ಶಬ್ದ ಬ್ರಹ್ಮ ಸ್ವರೂಪವಾದ ಆ ಮಹೇಶ್ವರನ ಒಂದೊಂದು ಅವಯವಗಳೂ ಒಂದೊಂದು ಧ್ವನಿಯ ಸ್ವರೂಪಗಳಾಗಿರುತ್ತವೆ. ಅಕಾರವು ನೆತ್ತಿ, ಆಕಾರ ಹಣೆ, ಹಾಗೆಯೇ ಇ-ಬಲಗಣ್ಣು, ಈ-ಎಡಗಣ್ಣು, ಉ-ಬಲಗಿವಿ, ಊ-ಎಡಗಿವಿ, ಋ-ಬಲಗೆನ್ನೆ, ೠ-ಎಡದ ಕೆನ್ನೆ, ಎ-ಮೇಲಿನ ತುಟಿ, ಐ-ಕೆಳಗಿನ ತುಟಿ, ಓ-ಔಗಳು ಹಲ್ಲಿನ ಸಾಲುಗಳು, ಅನುಸ್ವಾರ ವಿಸರ್ಗಗಳು ಆ ದೇವನ ದವಡೆಗಳು, ಕಕಾರ ಮೊದಲಾದ ಐದು ಅಕ್ಷರಗಳು ಬಲಗೈ, ಚಕಾರಾದಿ ಐದಕ್ಷರಗಳು ಎಡಗೈ, ಟಕಾರಾದಿ ಐದಕ್ಷರಗಳು ಬಲಗಾಲು, ತಕಾರಾದಿ ಐದಕ್ಷರಗಳು ಎಡಗಾಲು ಪ-ಹೊಟ್ಟೆ, ಫ - ಬಲಪಾರ್ಶ್ವ, ಬ - ಎಡಪಾರ್ಶ್ವ, ಭ - ಹೆಗಲು, ಮ - ಹೃದಯ, ಯ, ರ, ಲ, ವ, ಶ, ಷ, ಸ - ಇವು ಸಪ್ತಧಾತುಗಳು, ಹ-ಆತ್ಮಸ್ವರೂಪ, ಕ್ಷ-ಕ್ರೋಧ. ಹೀಗೆ ಆ ವಿರೂಪಾಕ್ಷನು ಅಕ್ಷರ ಸ್ವರೂಪನಾಗಿದ್ದಾನೆ. ಅರ್ಧನಾರೀಶ್ವರನೂ, ಷಡ್ಗುಣೈಶ್ವರ್ಯ ಸಂಪನ್ನನೂ ಆದ ಆ ಮಹೇಶ್ವರನನ್ನು ನೋಡಿ ನಮಸ್ಕರಿಸಿ ವಿಷ್ಣುವು ಓಂಕಾರದಿಂದ ಕೂಡಿದ ಐದು ಅವಯವಗಳುಳ್ಳ ಪಂಚಮಹಾಮಂತ್ರಗಳನ್ನು ಕಂಡನು. ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ ಎಂಬ ಐದು ಮಂತ್ರಗಳನ್ನು ಪಡೆದು ಮಹಾಮಹಿಮನಾದ ಶ್ರೀಹರಿಯು ಜಪಮಾಡಿದನು. ಅನಂತರ ಆ ಲಕ್ಷ್ಮೀಪತಿಯು ಅತ್ಯಂತ ಭಕ್ತಿಯುತನಾಗಿ ಈಶ್ವರನನ್ನು ಸ್ತೋತ್ರ ಮಾಡಿದನು.

*ಲಿಂಗಮಹಾಪುರಾಣ ಪೂರ್ವಾರ್ಧದ ಜ್ಯೋತಿರ್ಲಿಂಗದ ಉದ್ಭವ ಎಂಬ ಹದಿನೇಳನೆಯ ಅಧ್ಯಾಯವು ಮುಗಿದುದು.*

—o—

ಲಿಂಗೇ ತ್ವಷ್ಟಾ ಮಹೇಶಸ್ತೋತ್ರಮುತ್ತಮಂ ।
ಫಲಶ್ರುತಿ ಸಮಾಯುಕ್ತಂ ವಿಷ್ಣುಪ್ರೋಕ್ತಂ ನಿರೂಪ್ಯತೇ ॥

ವಿಷ್ಣುರುವಾಚ :-

ಏಕಾಕ್ಷರಾಯ ರುದ್ರಾಯ ಅಕಾರಾಯಾತ್ಮರೂಪಿಣೇ ।
ಉಕಾರಾಯಾದಿದೇವಾಯ ವಿದ್ಯಾದೇಹಾಯ ವೈ ನಮಃ ॥೧॥

ತೃತೀಯಾಯ ಮಕಾರಾಯ ಶಿವಾಯ ಪರಮಾತ್ಮನೇ ।
ಸೂರ್ಯಾಗ್ನಿಸೋಮವರ್ಣಾಯ ಯಜಮಾನಾಯ ವೈನಮಃ ॥೨॥

ಅಗ್ನಯೇ ರುದ್ರರೂಪಾಯ ರುದ್ರಾಣಾಂಪತಯೇ ನಮಃ ।
ಶಿವಾಯಶಿವಮಂತ್ರಾಯ ಸದ್ಯೋಜಾತಾಯ ಮೇಧಸೇ ॥೩॥

ವಾಮಾಯ ವಾಮದೇವಾಯ ವರದಾಯಾಽಮೃತಾಯ ತೇ ।
ಅಘೋರಾಯಾತಿಘೋರಾಯ ಸದ್ಯೋಜಾತಾಯರಂಹಸೇ ॥೪॥

ಈಶಾನಾಯ ಸ್ಮಶಾನಾಯ ಅತಿವೇಗಾಯ ವೇಗಿನೇ ।
ನಮೋಸ್ತುಶ್ರುತಿಪಾದಾಯ ಊರ್ಧ್ವಲಿಂಗಾಯ ಲಿಂಗಿನೇ ॥೫॥

ಹೇಮಲಿಂಗಾಯ ಹೇಮಾಯ ವಾರಿಲಿಂಗಾಯ ಜಾಂಭಸೇ ।
ಶಿವಾಯ ಶಿವಲಿಂಗಾಯ ವ್ಯಾಪಿನೇವ್ಯೋಮವ್ಯಾಪಿನೇ ॥೬॥

ವಾಯವೇ ವಾಯುವೇಗಾಯ ನಮಸ್ತೇ ವಾಯುವ್ಯಾಪಿನೇ ।
ತೇಜಸೇ ತೇಜಸಾಂಭರ್ತ್ರೇ (ನಮಸ್ತೇಜೋ ದೀವ್ಯಾಪಿನೇ) ॥೭॥

ಜಲಾಯ ಜಲಭೂತಾಯ ನಮಸ್ತೇ ಜಲವ್ಯಾಪಿನೇ ।
ಪೃಥಿವ್ಯೈಚಾಂತರಿಕ್ಷಾಯ ಪೃಥಿವೀವ್ಯಾಪಿನೇ ನಮಃ ॥೮॥

ಶಬ್ದಸ್ಪರ್ಶಸ್ವರೂಪಾಯ ರಸಗಂಧಾಯಗಂಧಿನೇ ।
ಗಣಾಧಿಪತಯೇ ತುಭ್ಯಂ ಗುಹ್ಯಾದ್ಗುಹ್ಯತಮಾಯ ತೇ ॥೯॥

ಅನಂತಾಯ ವಿರೂಪಾಯ (ಅನಂತನಾಮಯಾಯಚ) ।
ಶಾಶ್ವತಾಯ ವರಿಷ್ಠಾಯ ವಾರಿಗರ್ಭಾಯ ಯೋಗಿನೇ ॥೧೦॥

ಸಂಸ್ಥಿತಾಯಾಂಭಸಾಂಮಧ್ಯೇ ಆವಯೋರ್ಮಧ್ಯವರ್ಚಸೇ ।
ಗೋಪ್ತ್ರೇ ಹರ್ತ್ರೇ ಸದಾ ಕರ್ತ್ರೇ ನಿಧನಾಯೇಶ್ವರಾಯ ಚ ॥೧೧॥

ಅಚೇತನಾಯ ಚಿಂತ್ಯಾಯ ಚೇತನಾಯಾಪಹಾರಿಣೇ ।
ಅರೂಪಾಯ ಸುರೂಪಾಯ ಅನಂಗಾಯಾಂಗಹಾರಿಣೇ ॥೧೨॥

ಭಸ್ಮದಿಗ್ಧ ಶರೀರಾಯ ಭಾನುಸೋಮಾಗ್ನಿ ಹೇತವೇ ।
ಶ್ವೇತಾಯ ಶ್ವೇತವರ್ಣಾಯ ತುಹಿನಾದ್ರಿಚರಾಯ ಚ ॥೧೩॥

ಸುಶ್ವೇತಾಯ ಸುವಕ್ತ್ರಾಯ ನಮಃ ಶ್ವೇತಶಿಖಾಯ ಚ ।
ಶ್ವೇತಾಸ್ಯಾಯ ಮಹಾಸ್ಯಾಯ ನಮಸ್ತೇ ಶ್ವೇತ ಲೋಹಿತ ॥೧೪॥

ಸುತಾರಾಯ ವಿಶಿಷ್ಟಾಯ ನಮೋ ದುಂದಭನೇ ಹರ ।
ಶತರೂಪ ವಿರೂಪಾಯ ನಮಃ ಕೇತು ಮತೇ ಸದಾ ॥೧೫॥

ಋದ್ಧಿಶೋಕ ವಿಶೋಕಾಯ ಪಿನಾಕಾಯ ಕಪರ್ದಿನೇ ।
ವಿಪಾಶಾಯ ಹವಿಷ್ಯಾಯ ಸುಬ್ರಹ್ಮಣ್ಯಾಯತೇ ನಮಃ ॥೧೬॥

ಸುಹೋತ್ರಾಯ ಹವಿಷ್ಯಾಯ ಸುಬ್ರಹ್ಮಣ್ಯಾಯ ಸೂರಿಣೇ ।
ಸುಮುಖಾಯ ಸುವಕ್ತ್ರಾಯ ದುರ್ದಮಾಯ ದಮಾಯ ಚ ॥೧೭॥

ಕಂಕಾಯ ಕಂಕರೂಪಾಯ ಕಂಕಣೀಕೃತ ಪನ್ನಗ ।
ಸನಕಾಯ ನಮಸ್ತುಭ್ಯಂ ಸನಾತನ ಸನಂದನ ॥೧೮॥

ಸನತ್ಕುಮಾರ ಸಾರಂಗಮಾರಣಾಯ ಮಹಾತ್ಮನೇ ।
ಲೋಕಾಕ್ಷಿಣೇ ತ್ರಿಧಾಮಾಯ ನಮೋ ವಿರಜಸೇ ಸದಾ ॥೧೯॥

ಶಂಖ ಪಾಲಾಯ ಶಂಖಾಯ ರಜಸೇ ತಮಸೇ ನಮಃ ।
ಸಾರಸ್ವತಾಯ ಮೇಘಾಯ ಮೇಘವಾಹನ ತೇ ನಮಃ ॥೨೦॥

ಸುವಾಹಾಯ ವಿವಾಹಾಯ ವಿವಾದ ವರದಾಯ ಚ ।
ನಮಃಶಿವಾಯ ರುದ್ರಾಯ ಪ್ರಧಾನಾಯ ನಮೋನಮಃ ॥೨೧॥

ನಿರ್ಗುಣಾಯ ನಮಸ್ತುಭ್ಯಂ ಚತುರ್ವ್ಯೂಹಾತ್ಮನೇ ನಮಃ ।
ಸಂಸಾರಾಯ ನಮಸ್ತುಭ್ಯಂ ನಮಃ ಸಂಸಾರ ಹೇತವೇ ॥೨೨॥

ಮೋಕ್ಷಾಯ ಮೋಕ್ಷರೂಪಾಯ ಮೋಕ್ಷಕರ್ತ್ರೇ ನಮೋ ನಮಃ।
ಆತ್ಮನೇ ಋಷಯೇ ತುಭ್ಯಂ ಸ್ವಾಮಿನೇ ವಿಷ್ಣವೇ ನಮಃ ॥೨೩॥

ನಮೋ ಭಗವತೇ ತುಭ್ಯಂ ನಾಗಾನಾಂ ಪತಯೇ ನಮಃ ।
ಓಂಕಾರಾಯ ನಮಸ್ತುಭ್ಯಂ ಸರ್ವಜ್ಞಾಯ ನಮೋನಮಃ ॥೨೪॥

ಸರ್ವಾಯ ಚ ನಮಸ್ತುಭ್ಯಂ ನಮೋ ನಾರಾಯಣಾಯ ಚ ।
ನಮೋ ಹಿರಣ್ಯಗರ್ಭಾಯ ಆದಿದೇವಾಯ ತೇ ನಮಃ ॥೨೫॥

ನಮೋಸ್ತ್ವಜಾಯಪತಯೇ ಪ್ರಜಾನಾಂ ವ್ಯೂಹಹೇತವೇ ।
ಮಹಾದೇವಾಯ ದೇವಾನಾಮೀಶ್ವರಾಯ ನಮೋ ನಮಃ ॥೨೬॥

ಶರ್ವಾಯ ಚ ನಮಸ್ತುಭ್ಯಂ ಸತ್ಯಾಯ ಶಮನಾಯ ಚ ।
ಬ್ರಹ್ಮಣೇ ಚೈವ ಭೂತಾನಾಂ ಸರ್ವಜ್ಞಾಯ ನಮೋನಮಃ ॥೨೭॥

ಮಹಾತ್ಮನೇ ನಮಸ್ತುಭ್ಯಂ ಪ್ರಜ್ಞಾರೂಪಾಯ ವೈ ನಮಃ ।
ಚಿತಯೇ ಚಿತಿರೂಪಾಯ ಸ್ಮೃತಿ ರೂಪಾಯ ವೈ ನಮಃ ॥೨೮॥

ಜ್ಞಾನಾಯ ಜ್ಞಾನಗಮ್ಯಾಯ ನಮಸ್ತೇ ಸಂವಿದೇ ಸದಾ ।
ಶಿಖರಾಯ ನಮಸ್ತುಭ್ಯಂ ನೀಲಕಂಠಾಯ ವೈ ನಮಃ ॥೨೯॥

ಅರ್ಧನಾರೀ ಶರೀರಾಯ ಅವ್ಯಕ್ತಾಯ ನಮೋ ನಮಃ ।
ಏಕಾದಶ ವಿಭೇದಾಯ ಸ್ಥಾಣವೇ ತೇ ನಮಃ ಸದಾ ॥೩೦॥

ನಮಃ ಸೋಮಾಯ ಸೂರ್ಯಾಯ ಭವಾಯ ಭವಹಾರಿಣೇ ।
ಯಶಸ್ಕರಾಯ ದೇವಾಯ ಶಂಕರಾಯೇಶ್ವರಾಯ ಚ ॥೩೧॥

ನಮೋಽಂಬಿಕಾಧಿಪತಯೇ ಉಮಾಯಾಃಪತಯೇ ನಮಃ ।
ಹಿರಣ್ಯಬಾಹವೇ ತುಭ್ಯಂ ನಮಸ್ತೇ ಹೇಮರೇತಸೇ ॥೩೨॥

ನೀಲ ಕೇಶಾಯ ವಿತ್ತಾಯ ಶಿತಿಕಂಠಾಯ ವೈ ನಮಃ ।
ಕಪರ್ದಿನೇ ನಮಸ್ತುಭ್ಯಂ ನಾಗಾಂಗಾಭರಣಾಯ ಚ ॥೩೩॥

ವೃಷಾರೂಢಾಯ ಸರ್ವಸ್ಯ ಹರ್ತ್ರೇ ಕರ್ತ್ರೇ ನಮೋ ನಮಃ ।
ವೀರರಾಮಾತಿರಾಮಾಯ ರಾಮನಾಥಾಯ ತೇ ವಿಭೋ ॥೩೪॥

ನಮೋ ರಾಜಾಧಿರಾಜಾಯ ರಾಜ್ಞಾಮಧಿಗತಾಯ ತೇ ।
ನಮಃ ಪಾಲಾಧಿಪತಯೆ ಪಾಲಾಶಾಕೃಂತತೇ ನಮಃ ॥೩೫॥

ನಮಃ ಕೇಯೂರ ಭೂಷಾಯ ಗೋಪತೇ ತೇ ನಮೋನಮಃ ।
ನಮಃ ಶ್ರೀಕಂಠನಾಥಾಯ ನಮೋ ಲಿಕುಚಪಾಣಯೇ ॥೩೬॥

ಭುವನೇಶಾಯ ದೇವಾಯ ವೇದಶಾಸ್ತ್ರನಮೋಽಸ್ತುತೇ ।
ಸಾರಂಗಾಯ ನಮಸ್ತುಭ್ಯಂ ರಾಜಹಂಸಾಯ ತೇ ನಮಃ ॥೩೭॥

ಕನಕಾಂಗದಹಾರಾಯ ನಮಃ ಸರ್ಪೋಪವೀತಿನೇ ।
ಸರ್ಪಕುಂಡಲಮಾಲಾಯ ಕಟಸೂತ್ರೀ ಕೃತಾಹಿನೇ ॥೩೮॥
ವೇದಗರ್ಭಾಯ ಗರ್ಭಾಯ ವಿಶ್ವಗರ್ಭಾಯ ತೇ ಶಿವ ।

ಬ್ರಹ್ಮೋವಾಚ

ವಿರರಾಮೇತಿ ಸಂಸ್ತುತ್ವಾ ಬ್ರಹ್ಮಣಾ ಸಹಿತೋ ಹರಿಃ ॥೩೯॥

**ಏತತ್ ಸ್ತೋತ್ರವರಂ ಪುಣ್ಯಂ ಸರ್ವಪಾಪ ಪ್ರಣಾಶನಂ ।**
**ಯಃ ಪಠೇಚ್ಛ್ರಾವಯೇದ್ವಾಽಪಿ ಬ್ರಾಹ್ಮಣಾನ್ವೇದ ಪಾರಗಾನ್ ॥೪೦॥**

**ಸಯಾತಿ ಬ್ರಹ್ಮಣೋ ಲೋಕೇ ಪಾಪಕರ್ಮರತೋಽಪಿವೈ ।**
**ತಸ್ಮಾಜ್ಜಪೇತ್ಪಠೇನ್ನಿತ್ಯಂ ಶ್ರಾವಯೇದ್ಬ್ರಾಹ್ಮಣಾನ್ ಶುಭಾನ್ ॥೪೧॥**

**ಸರ್ವಪಾಪ ವಿಶುದ್ಧ್ಯರ್ಥಂ ವಿಷ್ಣು ನಾ ಪರಿಭಾಷಿತಂ ॥೪೨॥**

*ಲಿಂಗಮಹಾಪುರಾಣ ಪೂರ್ವಾರ್ಧದ ವಿಷ್ಣುವಿನಿಂದ ಶಿವನ ಸ್ತೋತ್ರ*
*ಎಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.*

—o—

## ಲಿಂಗಸ್ವರೂಪ

## ಅಧ್ಯಾಯ - ೧೯

**ಸೂತ** :- ಶ್ರೀ ಹರಿಯು ಮಾಡಿದ ಶಿವಸ್ತೋತ್ರವನ್ನು ಬ್ರಹ್ಮನು ತಾನೂ ಅದರಂತೆ ಮಹಾದೇವನನ್ನು ಸ್ತೋತ್ರಮಾಡಿದನು. ಈ ವಿಷ್ಣು ಬ್ರಹ್ಮ ಕೃತ ಶಂಕರ ಸ್ತೋತ್ರವನ್ನು ಪಠಣ ಮಾಡಿದವರು ಶ್ರವಣಮಾಡಿದವರು ಮತ್ತು ಈ ಸ್ತೋತ್ರವನ್ನು ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಗೆ ಕೇಳಿಸಿದವರು ಬ್ರಹ್ಮಲೋಕಕ್ಕೆ ಹೋಗುವರು.

ವಿಷ್ಣು ಬ್ರಹ್ಮ ಕೃತವಾದ ಈ ಸ್ತೋತ್ರದಿಂದ ಪ್ರೀತನಾದ ಪರಮೇಶ್ವರನು ಆ ವಿಷ್ಣು ಬ್ರಹ್ಮರ ಅಪೇಕ್ಷೆಗೆ ತಕ್ಕಂತೆ ತನ್ನಲ್ಲಿ ಅಚಂಚಲವಾದ ಭಕ್ತಿಯನ್ನು ನೀಡಿದನು.

ಅದರಿಂದ ಸಂಪ್ರೀತನಾದ ನಾರಾಯಣನು ಆ ವಿಶ್ವೇಶ್ವರನಿಗೆ ನಮಸ್ಕಾರ ಮಾಡಿ, ''ದೇವೇಶ್ವರನೇ ನಮ್ಮಿಬ್ಬರ ಕಲಹವನ್ನು ತೀರಿಸುವದಕ್ಕಾಗಿ ನೀನು ಇಲ್ಲಿಗೆ ಬಂದಿದ್ದರಿಂದ ನಮ್ಮ ಕಲಹವು ಮಂಗಲಕರವಾಗಿ ಮುಕ್ತಾಯವಾಯಿತು.

**ಪರಮೇಶ್ವರ** :- ಧರಣೀಪತಿಯಾದ ವಿಷ್ಣುವೆ ನೀನು ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವ ಸಾಮರ್ಥ್ಯವುಳ್ಳವನು. ನಿರ್ಗುಣ ಪರಮೇಶ್ವರನಾದ ನಾನೇ ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಗುಣಗಳಿಂದ ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ಹೆಸರಿನಿಂದ ಮೂರು ಭಾಗವಾಗಿರುವೆನು. ಮಹಾವಿಷ್ಣುವೆ ಈ ಬ್ರಹ್ಮನನ್ನು ನೀನು ರಕ್ಷಣೆಮಾಡು. ಈ ಬ್ರಹ್ಮನು ಪದ್ಮ ಕಲ್ಪದಲ್ಲಿ ನಿನ್ನ ಮಗನಾಗಿ ಹುಟ್ಟುವನು.

ಹೀಗೆ ಹೇಳಿ ಭಗವಂತನಾದ ಶಿವನು ಅಲ್ಲಿಯೇ ಅದೃಶ್ಯನಾದನು.

ಆ ದಿನ ಮೊದಲುಗೊಂಡು ಲೋಕದಲ್ಲಿ ಲಿಂಗಪೂಜೆಯ ಪ್ರಸಾರವಾಯಿತು. ಲಿಂಗವನ್ನು ಇಟ್ಟಿರುವ ವೇದಿಕೆ ಅಥವಾ ಪರಿನಾಳಿಕೆಯು ಪಾರ್ವತಿದೇವಿ. ಲಿಂಗವೇ ಮಹಾದೇವ. ಆ ಲಿಂಗಾಕೃತಿಯಲ್ಲಿಯೇ ಸಮಸ್ತ ಪ್ರಪಂಚವು ಲಯವನ್ನು ಹೊಂದುವದರಿಂದ ''**ಲಯಂ ಗಚ್ಛತಿ ಇತಿ ಲಿಂಗಂ**'' ಎಂದು ಹೆಸರು ಬಂದಿರುವದು.

*ಲಿಂಗಮಹಾಪುರಾಣ ಪೂರ್ವಾರ್ಧ ಲಿಂಗಸ್ವರೂಪ ಕಥನ*
*ಎಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.*

—o—

## ಮಹಾದೇವನ ಸ್ವರೂಪ ಕಥನ

ಅಧ್ಯಾಯ - ೨೦

**ಋಷಿಗಳು :-** ಸೂತನೆ ಪದ್ಮಕಲ್ಪದಲ್ಲಿ ಬ್ರಹ್ಮನು ಕಮಲದಿಂದ ಹೇಗೆ ಹುಟ್ಟಿದನು ? ಆ ಬ್ರಹ್ಮ ಹರಿ ಇಬ್ಬರು ಶಿವನ ದರ್ಶನವನ್ನು ಹೇಗೆ ಮಾಡಿಕೊಂಡರು ಇದೆಲ್ಲವನ್ನು ವಿಸ್ತಾರವಾಗಿ ಹೇಳು.

**ಸೂತ :-** ಅತಿ ಪ್ರಾಚೀನ ಕಾಲದಲ್ಲಿ, ಪ್ರಳಯ ಕಾಲದ ಸಮುದ್ರದಲ್ಲಿ ಆದಿಶೇಷನ ಮೇಲೆ ಮಹಾವಿಷ್ಣುವು ಶಯನಮಾಡಿದ್ದ. ಅವನು ತನ್ನ ನಾಭಿಯಲ್ಲಿ ವಜ್ರದ ನಾಳವುಳ್ಳ ಒಂದು ಕಮಲವನ್ನು ಸೃಷ್ಟಿಸಿದ. ಈ ನೀರಿನಲ್ಲಿ ಶಯನಮಾಡಿದ್ದರಿಂದ ಆ ನಾರಾಯಣನು ಎಲ್ಲ ಜೀವರಾಶಿಯನ್ನು ಪ್ರಳಯಕಾಲದಲ್ಲಿ ತನ್ನ ಉದರದಲ್ಲಿ ಇರಿಸಿಕೊಂಡು ಹೊಸ ಪ್ರಪಂಚಕ್ಕೆ ಕಾರಣ ಎನಿಸಿದ್ದನು. ಆಗ ಶೇಷಶಾಹಿಯಾದ ಆ ಯೋಗೇಶ್ವರ ವಿಷ್ಣುವಿನ ಬಳಿಗೆ ಬ್ರಹ್ಮಾಂಡದಿಂದ ಉದಿಸಿ ಹಿರಣ್ಯಗರ್ಭನು ಅಕಸ್ಮಾತ್ತಾಗಿ ಬಂದನು. ಅವನು ಸೂರ್ಯನಂತೆ ತೇಜಸ್ವಿಯಾದ ಆ ಶೇಷಶಾಹಿಯನ್ನು ''ಏಕಾರ್ಣವ ಸಾಗರದ ಸಲೀಲದಲ್ಲಿ ಹಾವಿನ ಹಾಸಿಗೆಯ ಮೇಲೆ ಹಾಯಾಗಿ ಮಲಗಿ ಜಲವಿಹಾರ ಮಾಡುತ್ತಿರುವ ನೀನು ಯಾರು?'' ಎಂದು ಕೇಳಿದನು. ಬ್ರಹ್ಮನ ಪ್ರಶ್ನೆಗೆ ನಾರಾಯಣನು ''ನಾನು ಜಗದಾಧಾರ, ಜಗನ್ನಿವಾಸ. ಪ್ರತಿಯೊಂದು ಕಲ್ಪದಲ್ಲಿಯೂ ಸಕಲ ಪ್ರಪಂಚಕ್ಕೆ ನಾನೇ ಆಧಾರವಾಗಿ ನಿಂತಿರುವೆನು. ನೀನು ಯಾರು? ನನ್ನ ಬಳಿಗೆ ಏಕೆ ಬಂದೆ? ನೀನು ಎಲ್ಲಿಗೆ ಹೋಗಬೇಕು? ನಿನ್ನ ಆಶ್ರಯ ಸ್ಥಾನ ಯಾವುದು? ಎಂದು ಕೇಳಿದನು. ಆಗ ಆ ಬ್ರಹ್ಮನು ನಾರಾಯಣನ ನಿಜವಾದ ಸ್ವರೂಪವನ್ನು ತಿಳಿಯದೆ. ''ನಿನ್ನಂತೆ ನಾನೂ ಸೃಷ್ಟಿಕರ್ತನಾಗಿದ್ದೇನೆ. ಪ್ರಜಾಪತಿ ಎಂದು ನನ್ನ ಹೆಸರು.'' ಎಂದು ಉತ್ತರಿಸಿದನು.

ಅನಂತರ ಆ ನಾರಾಯಣನು ಬ್ರಹ್ಮನ ಒಪ್ಪಿಗೆಯಿಂದ ಕುತೂಹಲಭರಿತವಾಗಿ ಅವನ ಬಾಯಿಯೊಳಗೆ ಪ್ರವೇಶಮಾಡಿದನು. ಆ ಬ್ರಹ್ಮನ ಹೊಟ್ಟೆಯೊಳಗೆ ಅನೇಕ ಸಮುದ್ರಗಳು, ಪರ್ವತ, ದೊಡ್ಡ ದೊಡ್ಡ ದ್ವೀಪಗಳು, ಅನಂತಾನಂತ ಜೀವರಾಶಿಗಳು, ಏಳುಲೋಕ ಎಲ್ಲವು ಕಂಡು ಬಂದವು. ಅವೆಲ್ಲವನ್ನು ನೋಡಿ ವಿಷ್ಣುವು ಆಶ್ಚರ್ಯ ಚಕಿತನಾದನು ಅನಂತರ ವಿಷ್ಣುವಿನ ಆಜ್ಞೆಯಿಂದ ಬ್ರಹ್ಮನೂ ಕೂಡ ಹರಿಯ ದೇಹದೊಳಗೆ ಪ್ರವೇಶಮಾಡಿ ಮಹಾಬ್ರಹ್ಮಾಂಡವನ್ನೇ ನೋಡಿದನು. ಆ ನಾರಾಯಣನ ಉದರದಲ್ಲಿರುವ ಅನೇಕ ಲೋಕಗಳ ಕೊನೆಯನ್ನು ನೋಡಲಿಕ್ಕಾಗಲಿಲ್ಲ. ಆ ಬ್ರಹ್ಮನಿಗೆ ವಿಷ್ಣುವು ತನ್ನ ವಿರಾಟಶರೀರದ ಸಮಸ್ತ ರಂಧ್ರಗಳನ್ನು ಮುಚ್ಚಿ ಸುಖ ಶಯನಮಾಡಿದ್ದನು. ಆಗ ಬ್ರಹ್ಮನು ಹರಿದೇಹದ ಎಲ್ಲ ರಂಧ್ರಗಳು ಮುಚ್ಚಿದುದರಿಂದ ಅವನ ನಾಭೀ ಕಮಲದ ನಾಳದ ರಂಧ್ರದಿಂದ ಹೊರಗೆ ಬಂದು ಕಮಲದಲ್ಲಿ ತನ್ನ ರೂಪವನ್ನು ಪ್ರಕಾಶಪಡಿಸಿದನು. ಆದರಿಂದ ಮಹಾಮಹಿಮನಾದ ಆ ಬ್ರಹ್ಮನು ಕಮಲ ಸಂಭವನೆಂದು ಪ್ರಸಿದ್ಧನಾದನು.

ಆ ಸಂದರ್ಭದಲ್ಲಿ ಸಮುದ್ರದ ನಟ್ಟನಡುವೆ ಇರುವ ಪದ್ಮದ ದಳಗಳಲ್ಲಿ ಒಂದಕ್ಕೊಂದು ಘರ್ಷಣೆ ಉಂಟಾಯಿತು. ಆಗ ಶೂಲಾಯುಧವನ್ನು ಧಾರಣೆಮಾಡಿ ಈಶ್ವರನು ಶೇಷಶಾಹಿಯಾದ ವಿಷ್ಣುವಿನ ಕಡೆಗೆ ಬರತೊಡಗಿದನು. ಅವನ ವೇಗದ ನಡಿಗೆಯ ಕಾಲಿನ ತುಳಿತದಿಂದ ಆಕಾಶದಲ್ಲಿ ಅತ್ಯಂತ ಬಿಸಿ ಹಾಗೂ ತಣ್ಣಗಿನ ನೀರಿನ ಹನಿಗಳು ಉಂಟಾದವು. ಅದರಂತೆ ಅತಿಶೀತ ಅತಿಉಷ್ಣ ಗಾಳಿಯೂ ಬೀಸಿತು. ಈ ಆಶ್ಚರ್ಯವನ್ನು ನೋಡಿ ಬ್ರಹ್ಮನು ವಿಷ್ಣುವಿನನ್ನು ಕುರಿತು, ''ಈ ಶೀತೋಷ್ಣವಾದ ನೀರಿನ ಹನಿಗಳು ನಾನು ಕುಳಿತ ಕಮಲದ ಎಲೆಗಳು ಮಲಗುವಂತೆ ಮಾಡಿವೆ. ಇದಕ್ಕೇನು ಕಾರಣ ? ನನಗೆ ಸಂದೇಹ ಬಂದಿದೆ. ನಿವಾರಣೆಮಾಡು.'' ಎಂದು ಹೇಳಿದನು. ಆಗ ವಿಷ್ಣುವಿಗೂ ಪರಮಾಶ್ಚರ್ಯವಾಯಿತು. ನನ್ನ ಹೊಕ್ಕಳದ ಕಮಲದಲ್ಲಿ ಬೇರೆ ಒಂದು ಯಾವುದೋ ಪ್ರಾಣಿಯು ಬಂದು ಕುಳಿತು ಏನೇನೋ ಮಾತನಾಡುತ್ತಿದೆಯಲ್ಲ! ಎಂದು ಮನದಲ್ಲಿ ಯೋಚಿಸಿ ಉತ್ತರ ಹೇಳಿದನು.

**ವಿಷ್ಣು :-** ಓ ದೇವನೆ ನೀನು ಈ ಕಮಲದಲ್ಲಿ ಏಕೆ ಬಂದು ಕುಳಿತಿರುವೆ? ನೀನು ಈಗ ಸಂಭ್ರಮದಲ್ಲಿ ಇದ್ದು ನನ್ನನ್ನು ಏನು ಕೇಳುವೆ?

**ಬ್ರಹ್ಮ :-** ನಾನು ನಿನ್ನಭಿಪ್ರಾಯದಂತೆ ನಿನ್ನ ಶರೀರದೊಳಗೆ ಪ್ರವೇಶಮಾಡಿ ಸಕಲ ಲೋಕಗಳನ್ನು ನೋಡಿದೆ. ನೀನು ನನ್ನ ಶರೀರದೊಳಗೆ ಪ್ರವೇಶಿಸಿ ಬ್ರಹ್ಮಾಂಡವನ್ನು ಕಂಡಂತೆ ನಾನು ಕೂಡ ನಿನ್ನ ವಿರಾಟ ಶರೀರದಲ್ಲಿ ಒಳ ಹೊಕ್ಕು ಅದರ ತುದಿ ಮೊದಲುಗಳನ್ನು ಕಾಣದೆ, ಅಂತಪಾರವನ್ನು ನೋಡದೆ ತಿರುಗಿ ಬರಲು ಪ್ರಯತ್ನಿಸಿದೆ. ಆದರೆ ನೀನು ನನ್ನ ಮೇಲಿನ ಮಾತ್ಸರ್ಯದಿಂದ ನೀನು ನಿನ್ನ ದೇಹದ ಎಲ್ಲ ರಂಧ್ರಗಳನ್ನು ಮುಚ್ಚಿ ಮಲಗಿದ್ದೆ. ಆಗ ನಾನು ನಿನ್ನ ಹೊಕ್ಕಳದಲ್ಲಿರುವ ಕಮಲದ ದೇಟಿನ ಗುಂಟ ಹೊರಬಿದ್ದು ಈ ಪದ್ಮದ ಆಸನದಲ್ಲಿ ಕುಳಿತುಕೊಂಡಿದ್ದೇನೆ. ನೀನು ನಿನ್ನ ಮನಸ್ಸಿನಲ್ಲಿ ನನ್ನ ವಿರುದ್ಧವಾದ ಯಾವ ಭಾವವನ್ನು ತಾಳಬೇಡಿ. ನಾನು ಹಾಗೂ ನನ್ನ ಇಲ್ಲಿಯ ಆಗಮನವು ನಿನ್ನ ಕಾರ್ಯಾನುಕೂಲಕ್ಕಾಗಿಯೇ ಇರುತ್ತದೆ. ನಾನು ಇನ್ನು ಮುಂದೆ ಏನು ಮಾಡಬೇಕು ? ಹೇಳು.

**ವಿಷ್ಣು :-** ನಾನು ನಿನಗೆ ನನ್ನ ಸರಿಯಾದ ಜ್ಞಾನವನ್ನು ಮಾಡಿಕೊಡಬೇಕು ಎಂಬ ಉದ್ದೇಶದಿಂದ ವಿನೋದಕ್ಕಾಗಿ ನನ್ನ ದೇಹದ ಸಮಸ್ತ ರಂಧ್ರಗಳನ್ನು ಮುಚ್ಚಿದ್ದೆ ತೇಜೋರೂಪನಾದ ನಿನ್ನ ಭಾರವನ್ನು ಹೊರಲಾರೆ. ಆದುದರಿಂದ ನನ್ನ ನಾಭಿಯ ಪದ್ಮದಿಂದ ನೀನು ಈಗ ಕೆಳಗೆ ಇಳಿದು ಬಾ.

**ಬ್ರಹ್ಮ :-** ಮಹಾವಿಷ್ಣುವೆ ನೀನೆ ನನ್ನನ್ನು ಕಮಲದಿಂದ ಕೆಳಗೆ ಇಳಿಸು. ಭೂಮಿಯಲ್ಲಿ ಸ್ಥಾಪಿಸು. ಮತ್ತು ಬೇಕಾದ ವರವನ್ನು ಕೇಳಿಕೊ.

**ವಿಷ್ಣು :-** ಶತ್ರುಗಳನ್ನು ಸಂಹರಿಸುವ ಬ್ರಹ್ಮನೆ ನೀನು ನನ್ನ ಪುತ್ರನಾಗು. ನಿನಗೆ ಮಂಗಳವಾಗಲಿ. ಇದರಿಂದ ಮುಂದೆ ನೀನು ಪರಮಾನಂದವನ್ನು ಹೊಂದುವೆ. ಇಂದಿನಿಂದ ನೀನು ಪದ್ಮಸಂಭವನೆಂದು ಪ್ರಸಿದ್ಧನಾಗುವೆ. ನನ್ನ ಪುತ್ರನಾಗಿ ಸಪ್ತಲೋಕಗಳಿಗೂ ಅಧಿಪತಿಯಾದ ಪ್ರಜಾಪತಿ ಎಂದು ಪ್ರಸಿದ್ಧನಾದ ನೀನು ಕಮಲಸಂಭವ ಎಂಬ ಹೆಸರಿನಿಂದ ಜಗತ್ತಿನಲ್ಲಿ ಎಲ್ಲ ದೇವತೆಗಳಿಗೂ ಪೂಜ್ಯನಾಗುವೆ.

ಹೀಗೆ ಅವರಿಬ್ಬರು ಮಾತನಾಡುತ್ತಿರುವಾಗಲೇ ಅಲ್ಲಿಗೆ ತ್ರಿಶೂಲವನ್ನು ಹಿಡಿದು ಅನೇಕ ಬಾಹು, ಅನೇಕ ನೇತ್ರ ಹಾಗೂ ಕೆದರಿದ ಕೂದಲುಳ್ಳ ಮಹಾದೇವನು ಭಯಂಕರಾಕಾರದ ಲಿಂಗದಿಂದ ಕೂಡಿಕೊಂಡು ದಶದಿಕ್ಕುಗಳಲ್ಲಿ ಬೆಳಕನ್ನು ಬೀರುತ್ತ ಅಲ್ಲಿಗೆ ಬಂದನು. ಆಗ ಬ್ರಹ್ಮನು ವಿಷ್ಣುವಿಗೆ 'ಇತ್ತ ಕಡೆಗೆ ಬರುವವನು ಇವನು ಯಾರು?' ಎಂದು ಕೇಳಿದನು.

**ವಿಷ್ಣು:-** ಇವನು ಈಶ್ವರ. ಸಮುದ್ರದಲ್ಲಿ ಇವನು ನಡೆದು ಬರುವಾಗ ವೇಗದಿಂದ ಇಟ್ಟ ಕಾಲಿನಿಂದ ಆಕಾಶಕ್ಕೆ ಹಾರಿದ ನೀರು, ಒಂದೊಂದು ಹನಿಯು ಒಂದೊಂದು ಜಲಾಶಯವಾಗಿದೆ. ಇವನ ಶಾಸೋಚ್ಛ್ವಾಸದ ಗಾಳಿಯಿಂದ ನನ್ನ ಹೊಕ್ಕಳದಲ್ಲಿ ಹುಟ್ಟಿದ ಕಮಲವು ಅದರಲ್ಲಿ ಕುಳಿತ ನೀನು ಸಹಿತವಾಗಿ ವಿಶೇಷವಾಗಿ ತೂಗಾಡಿತು.

ವೃಷಭಧ್ವಜನಾದ ಅವನನ್ನು ಇಬ್ಬರು ಕೂಡಿ ಪ್ರಾರ್ಥನೆ ಮಾಡೋಣ.

ವಿಷ್ಣುವಿನ ಈ ಮಾತನ್ನು ಕೇಳಿ ಬ್ರಹ್ಮನಿಗೆ ಕೋಪ ಬಂದಿತು.

**ಬ್ರಹ್ಮ:-** ಶ್ರೀ ಹರಿಯೇ ಎಲ್ಲ ಲೋಕಗಳಿಗೂ ನೀನೆ ಸ್ವಾಮಿ ಎಂಬುವದು ನಿನಗೆ ತಿಳಿದಿಲ್ಲವೇ? ಈ ಪ್ರಪಂಚವನ್ನೇ ಸೃಷ್ಟಿಸುವವ ಅನಾದಿಯಾದ ನಾನು ಎಂಬುದು ನಿನಗೆ ತಿಳಿದಿಲ್ಲವೆ? ನಮ್ಮಿಬ್ಬರ ಹೊರತು ಈ ಶಂಕರ ಎನ್ನುವವನು ಯಾವನು?

**ವಿಷ್ಣು :-** ಬ್ರಹ್ಮನೆ ಮಹಾದೇವನ ವಿಷಯವಾಗಿ ಈ ರೀತಿ ನಿಂದೆಯ ಮಾತುಗಳನ್ನು ಆಡಬೇಡ. ಬ್ರಹ್ಮನೆ ಮಹೇಶ್ವರ ತತ್ವಕ್ಕಿಂತ ದೊಡ್ಡದಾದ ರಹಸ್ಯವಾದ ತತ್ವವು ಬೇರೆ ಯಾವುದು ಇರುವದಿಲ್ಲ. ಈ ಶಿವನು ತನ್ನನ್ನು ಎರಡು ಭಾಗವಾಗಿ ಮಾಡಿಕೊಂಡಿದ್ದಾನೆ. ಒಂದು ಭಾಗ ಯಾರಿಗೂ ಗೋಚರವಾಗದ ನಿರಾಕಾರ ಸ್ವರೂಪ. ಇನ್ನೊಂದು ಸಗುಣವಾದ ಮಹೇಶ್ವರಸ್ವರೂಪ. ಈ ಸಮಸ್ತ ಪ್ರಪಂಚಕ್ಕೂ ಒಡೆಯನಾದ ಈಶ್ವರನೊಬ್ಬನಿರುವನು. ಅವನೇ ಮಹಾದೇವನು. ಎಲ್ಲ ದೇವತೆಗಳಿಗಿಂತಲೂ ಅವನೇ ದೊಡ್ಡವನು. ನನಗೂ ನಿನಗೂ ಸಕಲ ಜನರಿಗೂ ವರವನ್ನು ಅವನೇ ಕೊಡುವವನು. ಆ ಲೋಕಗುರುವನ್ನು ನೀನು ಎದ್ದು ನಿಂತು ವಂದಿಸು. ಅವನು ಕೋಪಗೊಂಡರೆ ನಿನ್ನನ್ನು ನನ್ನನ್ನು ತನ್ನ ನಿಶ್ವಾಸದ ಗಾಳಿಯಿಂದಲೇ ಸುಟ್ಟುಬಿಡುವನು. ಈಗ ನೀನು ಎದ್ದು ನಿಲ್ಲು ನಿನ್ನನ್ನು ಮುಂದು ಮಾಡಿಕೊಂಡು ನಾನು ಆ ತೇಜಸ್ವಿಯಾದ ಮಹಾದೇವ ರುದ್ರನನ್ನು ಸ್ತೋತ್ರ ಮಾಡುತ್ತೇನೆ.

*ಲಿಂಗಮಹಾಪುರಾಣ ಪೂರ್ವಾರ್ಧದ ಮಹಾವಿಷ್ಣುವಿನಿಂದ*
*ಮಹಾದೇವನ ಸ್ವರೂಪ ಕಥನ ಎಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.*

—o—

ವಿಷ್ಣುಕೃತ ಶಿವಸ್ತುತಿ

## ಅಧ್ಯಾಯ - ೨೧

**ವಿಷ್ಣು:-**

ನಮಸ್ತುಭ್ಯಂ ಭಗವತೇ ಸುವ್ರತಾನಂತ ತೇಜಸೇ ।
ನಮಃ ಕ್ಷೇತ್ರಾಧಿಪತಯೇ ಬೀಜಿನೇ ಶೂಲಿನೇ ನಮಃ ॥

ನಮೋ ಜ್ಯೇಷ್ಠಾಯ ಶ್ರೇಷ್ಠಾಯ ಪೂರ್ವಾಯ ಪ್ರಥಮಾಯ ಚ ।
ನಮೋ ಮಾನ್ಯಾಯ ಪೂಜ್ಯಾಯ ಸದ್ಯೋಜಾತಾಯ ವೈ ನಮಃ ॥

ವೇದಾನಾಂ ಪ್ರಭವೇ ಚೈವ ಸ್ಮೃತೀನಾಂ ಪ್ರಭವೇ ನಮಃ ।
ಪ್ರಭವೇ ಕರ್ಮದಾನಾನಾಂ ದ್ರವ್ಯಾಣಾಂ ಪ್ರಭವೇ ನಮಃ ॥

ಧರ್ಮವೃಕ್ಷಾಯ ಧರ್ಮಾಯ ಸ್ಥಿತೀನಾಂ ಪ್ರಭವೇ ನಮಃ ।
ಪ್ರಭವೇ ಚ ಪರಾರ್ಧಸ್ಯ ಪರಸ್ಯ ಪ್ರಭವೇ ನಮಃ ॥

ಮಂತ್ರಾಣಾಂ ಪ್ರಭವೇ ತುಭ್ಯಂ ಮಂತ್ರಾಧಿಪತಯೇ ನಮಃ ।
ಪಿತೃಣಾಂ ಪತಯೇ ಚೈವ ಪಶೂನಾಂ ಪತಯೇ ನಮಃ ॥

ವಾಗ್ವೃಷಾಯ ನಮಸ್ತುಭ್ಯಂ ಪುರಾಣ ವೃಷಭಾಯ ಚ ।
ನಮಃ ಪಶೂನಾಂ ಪತಯೇ ಗೋವೃಷೇಂದ್ರಧ್ವಜಾಯ ಚ ॥

ಪ್ರಜಾಪತೀನಾಂ ಪತಯೇ ಸಿದ್ಧಾನಾಂ ಪತಯೇ ನಮಃ ।
ದೈತ್ಯದಾನವ ಸಂಘಾನಾಂ ರಕ್ಷಸಾಂ ಪತಯೇ ನಮಃ ॥

ಗಂಧರ್ವಾಣಾಂ ಚ ಪತಯೇ ಯಕ್ಷಾಣಾಂ ಪತಯೇ ನಮಃ ।
ಗರುಡೋರಗಸರ್ಪಾಣಾಂ ಪಕ್ಷಿಣಾಂ ಪತಯೇ ನಮಃ ॥

ಬ್ರಹ್ಮವಿಷ್ಣುಮಾಡಿದ ಈ ಶಿವಸ್ತುತಿಯನ್ನು ಕೇಳಿದವರೂ ಹೇಳಿದವರೂ ಹತ್ತುಸಾವಿರ ಅಶ್ವಮೇಧಯಜ್ಞಗಳನ್ನುಮಾಡಿದ ಪುಣ್ಯವನ್ನುಹೊಂದುತ್ತಾರೆ. ಯಜ್ಞಯಾಗಾದಿ ಕಾರ್ಯಗಳ ಕೊನೆಗೆ ಅವಭೃತಸ್ನಾನ ಸಂದರ್ಭದಲ್ಲಿ ಅಥವಾ ಬೇರೆ ಯಾವುದೇ ದೇವತಾ ಕಾರ್ಯಗಳಲ್ಲಿ ಮತ್ತು ಶ್ರಾದ್ಧಾದಿಪಿತೃಕಾರ್ಯಗಳಲ್ಲಿ ವಿಷ್ಣುಕೃತ ಈ ಶಂಕರಸ್ತೋತ್ರವನ್ನು ಪಾರಾಯಣ ಮಾಡುವವರು ಬ್ರಹ್ಮನ ಸಾಮಿಪ್ಯವನ್ನು ಹೊಂದುವರು.

*ಲಿಂಗಮಹಾಪುರಾಣ ಪೂರ್ವಾರ್ಧದ ಬ್ರಹ್ಮವಿಷ್ಣುಕೃತ ಶಿವಸ್ತೋತ್ರ ಎಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.*

—o—

## ಬ್ರಹ್ಮದೇವರಿಗೆ ಶಿವನಿಂದ ಜೀವದಾನ

ಅಧ್ಯಾಯ - ೨೨

**ಸೂತ :-** ಬ್ರಹ್ಮವಿಷ್ಣುಗಳು ಮಾಡಿದ ಸ್ತೋತ್ರವನ್ನು ಕೇಳಿ ಹಾಗೂ ತನಗೆ ಭಕ್ತಿಯಿಂದ ನಮಸ್ಕರಿಸಿದ ಆ ದೇವತಾ ಜೋಡಿಯ ಶ್ರದ್ಧಾ ವಿನಯಗಳನ್ನು ಕಂಡು ಪರಮೇಶ್ವರನು ಅತ್ಯಂತ ಸಂತುಷ್ಟನಾದನು. ನಿಮಗೆ ಬೇಕಾದ ವರಗಳನ್ನು ಕೇಳಿರಿ ಎಂದು ಸಂತಸದಿಂದ ನುಡಿದನು. ಅದಕ್ಕೆ ಅವರಿಬ್ಬರು. ''ಶಂಕರನೇ ನಮಗೆ ನಿನ್ನಲ್ಲಿ ಶಾಶ್ವತವಾದ ಭಕ್ತಿಯುಂಟಾಗಲಿ'' ಎಂದು ಕೇಳಿಕೊಂಡರು. ಆಗ ಅವರಿಬ್ಬರನ್ನು ಶ್ಲಾಘಿಸಿ ''ನೀವು ಈ ಪ್ರಪಂಚದ ಸೃಷ್ಟಿಪಾಲನಾದಿ ಕಾರ್ಯಗಳನ್ನುಮಾಡಿರಿ. ನಿಮಗೆ ಮಂಗಳವಾಗಲಿ'' ಎಂದು ಹೇಳಿ ಅಂತರ್ಧಾನ ಹೊಂದಿದನು.

ಕಮಲದಲ್ಲಿ ಹುಟ್ಟಿದ ಬ್ರಹ್ಮನು ಸೃಷ್ಟಿ ಮಾಡಬೇಕು ಎಂಬ ಇಚ್ಛೆಯಿಂದ ಘೋರ ತಪಸ್ಸನ್ನು ಮಾಡಿದನು. ಅವನ ಆ ಉಗ್ರತಪೋನುಷ್ಠಾನಕ್ಕೆ ಯಾವ ಫಲವು ದೊರಕದಿದ್ದಾಗ ಅವನಿಗೆ ಕೋಪವು ಬಂದಿತು. ಮನದಲ್ಲಿ ತಾಪವು ಉಂಟಾಯಿತು. ಅದರಿಂದ ಅವನ ಕಣ್ಣಿನಿಂದ ನೀರಿನ ಹನಿಗಳು ಉದುರತೊಡಗಿದವು. ಬ್ರಹ್ಮನ ಕಣ್ಣೀರಿನ ಹನಿಗಳಿಂದ ವಾತ, ಪಿತ್ತ, ಕಫ ರೂಪವಾದ ಮಹಾಬಲವುಳ್ಳ ಸ್ವಸ್ತಿಕ ಚಿನ್ಹದಿಂದ ಕೂಡಿದ ಭಯಂಕರ ಸರ್ಪಗಳು ಹುಟ್ಟಿದವು. ಅವುಗಳನ್ನು ನೋಡಿ, ''ಅಯ್ಯೋ ನನ್ನ ತಪಸ್ಸಿನ ಫಲವು ಇಷ್ಟು ಘೋರವಾಯಿತೆ? ನನ್ನ ಸೃಷ್ಟಿಕಾರ್ಯದ ಪ್ರಾರಂಭದಲ್ಲಿಯೇ ಲೋಕಕ್ಕೆ ನಾಶವನ್ನುಂಟುಮಾಡುವ ಇಂಥ ಕ್ರೂರಪ್ರಾಣಿಗಳು ಹುಟ್ಟಿದವೆ ? ಸಾಕು ಇನ್ನು ನನ್ನ ಸೃಷ್ಟಿ. ನಾನು ಬದುಕಿ ಇರುವುದು ವ್ಯರ್ಥ'' ಎಂದು ಅಂದು ವೈರಾಗ್ಯದಿಂದ ನಿರ್ವಿಣ್ಣನಾದ ಬ್ರಹ್ಮನು ದುಃಖೋದ್ರೇಕದಿಂದ ಮೂರ್ಛೆ ಹೊಂದಿ ಕೆಳಗೆಬಿದ್ದನು. ಎಷ್ಟು ಹೊತ್ತಾದರೂ ಅವನು ತಿರುಗಿ ಏಳದೇ ಇದ್ದಾಗ ಆ ಮೂರ್ಛೆ ಮರಣದಲ್ಲಿಯೇ ಪರ್ಯವಸಾನವಾಯಿತು. ಆ ಬ್ರಹ್ಮನ ದೇಹದಿಂದ ಅಳುತ್ತಲಿರುವ ಹನ್ನೊಂದು ಜನ ರುದ್ರರು ಹೊರಟರು. ರೋದನಮಾಡಿದುದರಿಂದ ಅವರು ಏಕಾದಶರುದ್ರರು ಎಂದು ಕರೆಯಲ್ಪಟ್ಟರು. ಅವರೇ ಬ್ರಹ್ಮನ ರುದ್ರಸ್ವರೂಪರಾದ ಪ್ರಾಣಗಳಾಗಿದ್ದರು. ಅದನ್ನು ನೋಡಿ ಅಲ್ಲಿಯೇ ಇದ್ದ ಕರುಣಾಶಾಲಿಯಾದ ಮಹಾದೇವನು ಆ ಬ್ರಹ್ಮನಿಗೆ ಜೀವದಾನಮಾಡಿದನು. ಆನಂತರ ಆ ಚತುರ್ಮುಖನು ರುದ್ರಗಾಯತ್ರಿಮಂತ್ರದಿಂದ ಮಹಾದೇವನ ದಿವ್ಯದರ್ಶನವನ್ನು ಪಡೆದನು. ಮತ್ತು ಅವನಿಗೆ ಪುನಃ ಪುನಃ ನಮಸ್ಕಾರವನ್ನು ಮಾಡಿ ಆ ಪರಮೇಶ್ವರನನ್ನು ಕುರಿತು, ''ಭಗವನ್ ನಿನ್ನ ಸದ್ಯೋಜಾತಾದಿ ರೂಪವು ಹೇಗೆ ಉಂಟಾಯಿತು? ಎನ್ನುವದನ್ನು ಹೇಳು'' ಎಂದು ಪ್ರಶ್ನೆ ಮಾಡಿದನು.

*ಲಿಂಗಮಹಾಪುರಾಣ ಪೂರ್ವಾರ್ಧ ಮರಣ ಹೊಂದಿದ ಬ್ರಹ್ಮದೇವರಿಗೆ ಶಿವನಿಂದ ಜೀವದಾನ ಎಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.*

—o—

**ಸೂತ** :- ಶ್ವೇತಕಲ್ಪ ಪ್ರಾರಂಭದಲ್ಲಿ ನಾನೇ ತಲೆಯಮೇಲೆ ಶಿರೋವೇಷ್ಟನ ಶುಭ್ರವಾದ ವಸ್ತ್ರ, ಶುಭ್ರರಕ್ತ, ಶುಭ್ರಮೂಳೆ, ಶುಭ್ರಕೇಶಗಳಿಂದ ಕೂಡಿದವನಾಗಿದ್ದೆ. ಆದುದರಿಂದ ಅದಕ್ಕೆ ಶ್ವೇತಕಲ್ಪ ಎಂದು ಹೆಸರಾಯಿತು. ನನ್ನಿಂದ ಉತ್ಪನ್ನಳಾದ ದೇವಿಯೂ ಕೂಡ ಶುಭ್ರವಾದ ಅಂಗವುಳ್ಳವಳಾಗಿರುವದರಿಂದ ಬ್ರಹ್ಮಗಾಯತ್ರಿ ಮಂತ್ರದ ದೇವತೆಯಾದಳು. ಬಳಿಕ ನಾನು ಆಗ **ಸದ್ಯೋಜಾತ** ಎಂಬ ಹೆಸರನ್ನು ಪಡೆದೆನು. ಲೋಹಿತಕಲ್ಪವು ಪ್ರಾರಂಭವಾದಾಗ ಕೆಂಬಣ್ಣದ ಮಾಂಸ, ಮೂಳೆ, ಕಣ್ಣು, ಹಾಲು, ಮೊಲೆಗಳಿಂದ ಕೂಡಿದ ಗಾಯತ್ರಿ ದೇವಿಯು ಗೋರೂಪವನ್ನು ಧರಿಸಿದಳು. ವರ್ಣ ವ್ಯತ್ಯಾಸದಿಂದ ನಾನು ಲೋಹಿತ ವರ್ಣದವನಾಗಿ ಸುಂದರನಾಗಿದ್ದುದರಿಂದ **ವಾಮದೇವ** ಎಂಬ ಹೆಸರನ್ನು ಹೊಂದಿದೆ. ಮುಂದೆ ಪೀತ ಕಲ್ಪದಲ್ಲಿ ನನ್ನಿಂದಲೇ ಹುಟ್ಟಿದ ದೇವಿಯು ಹಳದೀ ಬಣ್ಣ ಉಳ್ಳವಳಾಗಿ ಬ್ರಹ್ಮಗಾಯತ್ರಿ ರೂಪಳಾಗಿರುವಳು. ಆಗ ನಾನು ತತ್ಪುರುಷ ಮಂತ್ರದಿಂದ ಹಿರಣ್ಯಗರ್ಭನಾದ ನಿನ್ನಿಂದ ಆರಾಧಿಸಲ್ಪಡುವೆನು. ಆಗ ನನಗೆ **ತತ್ಪುರುಷ** ಎಂಬ ಹೆಸರು ಬರುವದು. ರುದ್ರನಾದ ನನ್ನನ್ನು ರುದ್ರಾಣಿಯಾದ ದೇವಿಯನ್ನು ವೇದತಾಯಿಯಾದ ತತ್ಪುರುಷ ಎಂಬ ಗಾಯತ್ರಿ ಮಂತ್ರವನ್ನು ಹೇಳಿ ಜಪಿಸಿ ಪಠಿಸಿ ತಪಸ್ಸನ್ನು ಮಾಡುವರೋ ಅವರು ಪುನರಾವೃತ್ತಿ ಇಲ್ಲದ ರುದ್ರಲೋಕಕ್ಕೆ ಹೋಗುವರು.

ಕೃಷ್ಣಕಲ್ಪ ಪ್ರಾರಂಭದಲ್ಲಿ ನಾನು ಪ್ರಳಯಾಂತಕನಾದ ಯಮನಂತೆ ಭಯಂಕರನಾಗಿ ಪ್ರಕಾಶಿಸುವೆನು. ನನ್ನಿಂದ ಹುಟ್ಟಿದ ಗಾಯತ್ರಿದೇವಿಯು ಕೃಷ್ಣವರ್ಣದಿಂದ ಬ್ರಹ್ಮಸ್ವರೂಪಿಣಿಯಾಗಿರುವಳು. ಆಗ ನೀನು ನನ್ನನ್ನು ಘೋರಮೂರ್ತಿಯನ್ನಾಗಿ ಉಪಾಸಿಸುವೆ. ಅಂಥ ಭಯಂಕರ ಸ್ವರೂಪನಾದ ನನ್ನನ್ನು ಲೋಕದಲ್ಲಿ **ಅಘೋರೇಭ್ಯೋಽಥ'** ಇತ್ಯಾದಿ ಮಂತ್ರದಿಂದ ಯಾರು ತಿಳಿಯುವರೋ ಅವರಿಗೆ ನಾನು ಸೌಮ್ಯರೂಪದಿಂದ ಶಾಂತಮೂರ್ತಿಯಾಗಿ ಕಾಣುವೆನು. ನನಗೆ ವಿಶ್ವರೂಪವು ಬಂದಾಗ ಆ ಕಲ್ಪಕ್ಕೆ ವಿಶ್ವರೂಪ ಕಲ್ಪ ಎಂದು ಹೆಸರು ಬರುವದು. ದೇವಿಯೂ ಕೂಡ ವಿಶ್ವರೂಪಗಾಯತ್ರಿ ಎಂದು ಪ್ರಸಿದ್ಧಿಯನ್ನು ಹೊಂದುವಳು. ಸದ್ಯೋಜಾತ, ವಾಮದೇವ, ತತ್ಪುರುಷ, ಅಘೋರ ಎಂಬ ನಾಲ್ಕು ಮೂರ್ತಿಗಳು ಗಾಯತ್ರಿಯಂತೆ ನನ್ನ ಪುತ್ರರಾಗಿ ಪ್ರಾದುರ್ಭೂತರಾಗಿ ಲೋಕಪ್ರಸಿದ್ಧಿಯನ್ನು ಪಡೆಯುವರು. ಈ ಚತುಮೂರ್ತಿಗಳಿಂದಲೇ ಜಗತ್ತಿನಲ್ಲಿ ಬ್ರಾಹ್ಮಣಾದಿ ನಾಲ್ಕು ವರ್ಣಗಳು ಉತ್ಪನ್ನವಾಗಿರುವವು.

ಈ ನನ್ನ ಚತುಃಸ್ವರೂಪಗಳಿಂದಲೇ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬ ನಾಲ್ಕು ವೇದಗಳೂ, ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ ಎಂದು ನಾಲ್ಕು ಬಗೆಯ ಜೀವಗಳೂ, ಬ್ರಹ್ಮಚರ್ಯ, ಗೃರಹಸ್ಥ್ಯ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕು ಆಶ್ರಮಗಳೂ, ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳು ನನ್ನ ಪುತ್ರ

ಸ್ವರೂಪಗಳಾಗಿ ನನ್ನಿಂದಲೇ ಉತ್ಪನ್ನವಾಗಿರುತ್ತವೆ. ಚರಾಚರ ಪ್ರಾಣಿಗಳಿಂದ ಕೂಡಿದ ಈ ಪ್ರಪಂಚವು ಚತುರ್ವಿಧವಾಗಿದ್ದು ಚತುಃಷ್ಪಾದ ಎಂಬ ಹೆಸರನ್ನು ಹೊಂದಿರುತ್ತದೆ.

ಭೂಲೋಕ, ಭುವರ್ಲೋಕ, ಸ್ವರ್ಲೋಕ; ಮಹರ್ಲೋಕ, ಜನೋಲೋಕ ತಪೋಲೋಕ, ಸತ್ಯಲೋಕ, ವಿಷ್ಣುಲೋಕ ಎಂಬ ಎಂಟು ಲೋಕಗಳು, ಓಂಕಾರ ಸಹಿತವಾದ ಗಾಯತ್ರಿಯ ಎಂಟು ಅಕ್ಷರಗಳಿಂದ ಸೂಚಿತವಾಗಿರುತ್ತವೆ. ಭೂಃ, ಭುವಃ, ಸ್ವಃ, ಮಃ ಎಂಬ ಅಕ್ಷರಗಳಿಂದ ನಾಲ್ಕುಪಾದಗಳು, ನಾಲ್ಕುಲೋಕಗಳು ಸೂಚಿತವಾಗಿವೆ.

ಭೂಲೋಕವು ಮೊದಲನೆಯ ಪಾದ, ಭುವರ್ಲೋಕ ಎರಡನೆಯದು, ಸ್ವರ್ಲೋಕ ಮೂರನೆಯದು, ಮಹರ್ಲೋಕ ನಾಲ್ಕನೆಯದು. ಜನೋಲೋಕ ಐದನೆಯದು ತಪೋಲೋಕ ಆರನೆಯದು ಸತ್ಯಲೋಕವು ಏಳನೆಯದು. ಈ ಸತ್ಯಲೋಕಕ್ಕೆ ಹೋದವರಿಗೆ ಪುನರ್ಜನ್ಮವಿಲ್ಲ. ವಿಷ್ಣುಲೋಕ, ಸ್ಕಂಧಲೋಕ, ಉಮಾಲೋಕ, ಮಹೇಶ್ವರಲೋಕ ಎಂಬ ನಾಲ್ಕು ಲೋಕಗಳು ನಿನ್ನ ಧ್ಯಾನಗಮ್ಯವಾಗಿರುತ್ತವೆ. ಇದನ್ನು ಅನುಸರಿಸಿಯೇ ಪ್ರಪಂಚದಲ್ಲಿರುವ ಪಶುಗಳೆಲ್ಲವೂ ನಾಲ್ಕು ಪಾದಗಳುಳ್ಳವಳಾಗಿ, ನಾಲ್ಕು ಸ್ತನಗಳುಳ್ಳವುಗಳು ಆಗಿರುವವು.

ಯಜ್ಞದಲ್ಲಿ ಮಂತ್ರದಿಂದ ಹೋಮಮಾಡುವ ಸೋಮರಸವು ನನ್ನ ಮುಖದಿಂದ ಬಿದ್ದು ಪ್ರಾಣಿಗಳಿಗೆ ಜೀವಸ್ವರೂಪವಾಗಿರುವದು. ಆ ಸೋಮರಸವೇ ಪಶುಗಳ ನಾಲ್ಕು ಮೊಲೆಗಳಲ್ಲಿ ಹಾಲಿನ ರೂಪದಿಂದ ಬರುವದು. ಹಾಲು ಅಮೃತ ಸ್ವರೂಪವಾಗಿ ಸೋಮರಸ ಸ್ವರೂಪವಾದುದರಿಂದಲೇ ಶುಭ್ರವಾಗಿ ಜೀವನ ಎಂಬ ರಸವನ್ನು ಪಡೆಯುವದು. ಸಾವಿತ್ರಿದೇವಿಯು ಕ್ರಿಯಾಶಕ್ತಿಸ್ವರೂಪಳಾಗಿ ಎರಡು ಕಾಲುಗಳುಳ್ಳವಳಾಗಿ ಕಾಣಿಸಿಕೊಂಡದ್ದರಿಂದ ಜನರೆಲ್ಲರೂ ಎರಡು ಕಾಲುಗಳು, ಎರಡು ಸ್ತನಗಳುಳ್ಳವರಾಗಿರುತ್ತಾರೆ. ಸಾವಿತ್ರಿದೇವಿಯು ಸಮಸ್ತಪ್ರಾಣಿಗಳನ್ನು ಧರಿಸಿದ ಪ್ರಕೃತಿ ಸ್ವರೂಪಳಾಗಿರುವಳು. ಅವಳನ್ನು ನೀನು ನೋಡಿದುದರಿಂದ ವಿಶ್ವರೂಪ ಎಂಬ ಹೆಸರನ್ನು ಪಡೆಯುವೆ. ನನ್ನ ಎಲ್ಲ ರೂಪದ ಮುಖಗಳಲ್ಲಿಯೂ ತೇಜಶಾಲಿಯಾದ ಅಗ್ನಿಯು ಇರುವದರಿಂದ ಅವನು ಸರ್ವಗತನಾಗಿ ಪರಿಶುದ್ಧನಾಗಿ ಪಶುಸ್ವರೂಪನಾಗಿರುವನು. ಎಲ್ಲದಕ್ಕೂ ಒಡೆಯನಾದುದರಿಂದ ನಾನು **'ಪಶುಪತಿ'** ಎನಿಸಿರುವೆನು.

*ಲಿಂಗಮಹಾಪುರಾಣ ಪೂರ್ವಾರ್ಧದ ಈಶ್ವರನ ಸದ್ಯೋಜಾತಾದಿ ಅವತಾರ ಮತ್ತು ಗಾಯತ್ರಿ ಮಂತ್ರದ ಮಹಿಮಾನಿರೂಪಣ ಎಂಬ ಇಪ್ಪತ್ಮೂರನೆಯ ಅಧ್ಯಾಯವು ಮುಗಿದುದು.*

—o—

## ಪರಮೇಶ್ವರನ ಯುಗಕ್ರಮ ಮತ್ತು ಯೋಗ, ವ್ಯಾಸಾವತಾರ ನಿರೂಪಣೆ

ಅಧ್ಯಾಯ - ೨೪

**ಬ್ರಹ್ಮ** :- ಮಹಾದೇವನೆ ಯಾವ ಕಾಲದಲ್ಲಿ ಯಾವ ಯುಗದಲ್ಲಿ ತಪಸ್ವಿಗಳು ನಿನ್ನ ಸದ್ಯೋಜಾತಾದಿ ಅವತಾರಗಳನ್ನು ಯಾವ ತಪಸ್ಸಿನ ಬಲದಿಂದ ಅಥವಾ ಯೋಗಾಭ್ಯಾಸ ಬಲದಿಂದ ನಿನ್ನನ್ನು ನೋಡಲು ಸಮರ್ಥರಾಗಿರುವರು? ಅದನ್ನು ನಮಗೆ ಹೇಳು.

**ಮಹಾದೇವ** :- ಕಮಲಸಂಭವನೆ, ನಾನು ಏಕಾಗ್ರಚಿತ್ತದಿಂದ ಧ್ಯಾನಮಾಡುವದರಿಂದ ಮಾತ್ರ ಗೋಚರನಾಗುತ್ತೇನೆ. ಧ್ಯಾನವಿಲ್ಲದ ಕೇವಲ ತಪಸ್ಸು. ದಾನ, ಧರ್ಮ, ತೀರ್ಥಯಾತ್ರೆ, ವೇದಾಧ್ಯಯನಗಳಿಂದ ನಾನು ಗಮ್ಯನಾಗುವದಿಲ್ಲ. ಶ್ವೇತ ವರಾಹಕಲ್ಪದಲ್ಲಿ ಏಳನೆಯದಾದ ವೈವಸ್ವತಮನ್ವಂತರದಲ್ಲಿ ಆ ಕಲ್ಪಕ್ಕೆ ಅಧಿಪತಿಯಾದ ನಾನು ಸಕಲ ಲೋಕಗಳನ್ನು ಪ್ರಕಾಶಪಡಿಸುವವನಾಗಿ ಉತ್ಪನ್ನನಾಗುತ್ತೇನೆ. ಸೂರ್ಯನ ಮಗನಾದ ವೈವಸ್ವತ ಮನುವು ನಿನ್ನ ಮೊಮ್ಮಗನಾಗಿ ಬರುವನು. ಈ ಕಲ್ಪದಲ್ಲಿ ದ್ವಾಪರ ಯುಗದ ಕೊನೆಯಲ್ಲಿ ಲೋಕಾನುಗ್ರಹಕ್ಕೆ ನಾನು ಅವತಾರಮಾಡುವೆನು. ವೈವಸ್ವತ ಮನ್ವಂತರದ ಮೊದಲನೆಯ ಚತುರ್ಯುಗದ ದ್ವಾಪರಾಂತ್ಯದಲ್ಲಿ ನಾನೇ ವ್ಯಾಸಾವತಾರವನ್ನು ಮಾಡುವೆನು. ಅದೇ ಕಲಿಯುಗದ ಕೊನೆಗೆ ಶ್ವೇತ ಎಂಬ ಮುನಿಯಾಗಿ ನಾನು ಅವತಾರವನ್ನು ಮಾಡುವೆನು. ಹಿಮಾಲಯ ಪರ್ವತದ **ಛಾಗಲ** ಎಂಬ ಶಿಖರದಲ್ಲಿ ಶಿಖಾಯುಕ್ತನಾಗಿ ಶ್ವೇತ ಮುನಿಯಾಗಿ ನಾನು ಅವತಾರ ಮಾಡಿದಾಗ ನನಗೆ ಶ್ವೇತ, ಶ್ವೇತಶಿಖ, ಶ್ವೇತಾಸ್ಯ, ಶ್ವೇತ ಲೋಹಿತ ಎಂಬ ನಾಲ್ಕು ಜನ ಬ್ರಹ್ಮಜ್ಞಾನಿಗಳಾದ ಶಿಷ್ಯರಿರುವರು.

ಎರಡನೆಯ ದ್ವಾಪರದಲ್ಲಿ ಸತ್ಯನೆಂಬ ವ್ಯಾಸನು ಅವತಾರಮಾಡಿರುವನು. ಎರಡನೆಯ ಕಲಿಯುಗದಲ್ಲಿ ನಾನು ಸುತಾರ ಎಂಬ ಹೆಸರಿನಿಂದ ಅವತಾರ ಮಾಡುವೆನು. ಆಗ ನನಗೆ ದುಂದುಭಿ, ಶತರೂಪ, ರಚಿಕ, ಕೇತುಮಂತ ಎಂಬ ನಾಲ್ಕು ಜನ ಶಿಷ್ಯರಾಗುವರು.

ಮೂರನೆಯ ದ್ವಾಪರದಲ್ಲಿ ಭಾರ್ಗವನೆಂಬುವನು ವ್ಯಾಸನಾಗುವನು. ಆ ಕಲಿಯುಗದಲ್ಲಿ ದಮನ ಎಂಬ ಹೆಸರಿನಿಂದ ಅವತಾರಮಾಡಿದ ನನಗೆ ವಿಕೋಶ, ವಿಕೇಶ, ವಿಪಾಶ, ಪಾಪನಾಶನ ಎಂಬ ಶಿಷ್ಯರು ಯೋಗಶಾಸ್ತ್ರೋಕ್ತವಾದ ಮಾರ್ಗದಿಂದ ನನ್ನ ಆರಾಧನೆಯನ್ನು ಮಾಡಿ ರುದ್ರಲೋಕವನ್ನು ಪಡೆಯುವರು.

ನಾಲ್ಕನೆಯ ದ್ವಾಪರದಲ್ಲಿ ಅಂಗಿರಸನೆಂಬುವನು ವ್ಯಾಸ. ಆ ಕಲಿಯುಗದಲ್ಲಿ ನನ್ನ ಸುಹೋತ್ರ ಅವತಾರದಲ್ಲಿ ಸುಮುಖ, ದುರ್ಮುಖ, ದುರ್ಧರ, ದುರತಿಕ್ರಮ ಎಂಬ ನಾಲ್ವರು ಶಿಷ್ಯರು. ಯೋಗಮಾರ್ಗದಿಂದ ನನ್ನ ಉಪಾಸನೆ ಮಾಡುವರು.

ಐದನೆಯ ದ್ವಾಪರದಲ್ಲಿ ಸವಿತಾ ಎಂಬುವವ ವ್ಯಾಸ. ಕಂಕ ಎಂದು ನನ್ನ ಅವತಾರ ಸನಕ, ಸನಂದನ, ಸನಾತನ, ಸನತ್ಕುಮಾರರು ನನ್ನ ಶಿಷ್ಯರು.

ಆರನೆಯ ದ್ವಾಪರದಲ್ಲಿ ಮೃತ್ಯು ಎಂಬ ಹೆಸರಿನವನು ವ್ಯಾಸ. ಆ ಕಲಿಯುಗದಲ್ಲಿ ಲೋಲಾಕ್ಷಿ ಎಂಬ ಹೆಸರಿನಿಂದ ಅವತರಿಸಿದ ನನಗೆ ಸುಧಾಮ, ವಿರಜ, ಶಂಖಪಾದ, ರಜ ಎಂಬ ನಾಲ್ವರು ಶಿಷ್ಯರು.

ಏಳನೇಯ ದ್ವಾಪರಾಂತ್ಯದಲ್ಲಿ ಶತಕ್ರತುವೇ ವ್ಯಾಸ. ಹಿಂದಿನ ಜನ್ಮದಲ್ಲಿ ಅವನು ವಿಭು ಎಂದು ಪ್ರಸಿದ್ಧನಾಗಿದ್ದ. ಏಳನೆಯ ಕಲಿಯುಗದ ಕೊನೆಯಲ್ಲಿ ಜೈಗೀಶವ್ಯ ಎಂಬ ಹೆಸರಿನಿಂದ ನಾನು ಯೋಗಿ ಶ್ರೇಷ್ಠನಾಗಿ ಅವತಾರಮಾಡುವೆನು. ಆಗ ನನಗೆ ಸಾರಸ್ವತ, ಮೇಘ, ಮೇಘವಾಹ, ಸುವಾಹನ ಎಂಬ ನಾಲ್ವರು ಶಿಷ್ಯರಿರುವರು.

ಎಂಟನೆಯ ದ್ವಾಪರಾಂತ್ಯದಲ್ಲಿ ವಸಿಷ್ಠನೆಂಬುವನು ವ್ಯಾಸನಾದರೆ ನಾನು ದಧಿವಾಹನ ಎಂಬ ಹೆಸರಿನಿಂದ ಅವತಾರಮಾಡುವೆನು. ಕಪಿಲ, ಆಸುರಿ, ಪಂಚಶಿಖ, ಬಾಷ್ಕಲ ಎಂಬುವರು ಶಿಷ್ಯರು.

ಒಂಬತ್ತನೆಯದರಲ್ಲಿ ಸಾರಸ್ವತನೇ ವ್ಯಾಸ ಋಷಭನೆಂಬ ಯೋಗಿಯಾದ ನನಗೆ ಪರಾಶರ, ಗರ್ಗ, ಭಾರ್ಗವ, ಅಂಗೀರಸ ಶಿಷ್ಯರು.

ಹತ್ತನೆಯದರಲ್ಲಿ ತ್ರಿಪಾದನೇ ವ್ಯಾಸ. ವಿಪ್ರಮುನಿ ಎಂಬ ಹೆಸರಿನಿಂದ ಹಿಮಾಲಯದ ಭೃಗುತುಂಗ ಪರ್ವತದ ಭೃಗು ಶಿಖರದಲ್ಲಿ ನಾನು ಅವತರಿಸುವೆನು, ಆಗ ಬಲ, ಬಂಧು, ನಿರಾಮಿತ್ರ, ಕೇತುಶೃಂಗ ತಪೋಧನ ಎಂಬುವರು ನನ್ನ ಶಿಷ್ಯರು.

ಹನ್ನೊಂದನೆಯದರಲ್ಲಿ ತ್ರಿವೃತನೇ ವ್ಯಾಸ. ಆಗ ಉಗ್ರ ಹೆಸರಿನಿಂದ ಗಂಗಾದ್ವಾರದಲ್ಲಿ ಅವತರಿಸಿದ ನನಗೆ ಲಂಬೋದರ, ಲಂಬಾಕ್ಷ, ಲಂಬಕೇಶ, ಪ್ರಲಂಬಕ ಎನ್ನುವವರು ನಾಲ್ಕು ಶಿಷ್ಯರು.

ಹನ್ನೆರಡನೆಯದರಲ್ಲಿ ಶತತೇಜ ಮುನಿಯೇ ವ್ಯಾಸ. ಆ ಕಲಿಯುಗದಲ್ಲಿ ನಾನು ಹೈತುಕವನದಲ್ಲಿ ಅತ್ರಿ ಎಂಬ ಹೆಸರಿನಿಂದ ಅವತರಿಸುವೆನು. ಸರ್ವಜ್ಞ, ಸಮಬುದ್ಧಿ, ಸಾಧ್ಯ, ಸರ್ವ ಎಂಬ ಹೆಸರುಳ್ಳ ನನ್ನ ನಾಲ್ಕು ಜನ ಶಿಷ್ಯರು ಮಾಹೇಶ್ವರಯೋಗದಿಂದ ರುದ್ರಲೋಕಕ್ಕೆ ಹೋಗುವರು.

ಹದಿಮೂರನೆಯ ದ್ವಾಪರಾಂತ್ಯದಲ್ಲಿ ಧರ್ಮದೇವನು ನಾರಾಯಣನೆಂಬ ವ್ಯಾಸನಾಗುವನು ಆಗ ನಾನು ವಾಲಖಿಲ್ಯಾಶ್ರಮದಲ್ಲಿ ಗಂಧಮಾದನ ಪರ್ವತದಲ್ಲಿ ವಾಲಿ ಎಂಬ ಹೆಸರಿನಿಂದ ಅವತರಿಸುವೆನು. ಸುಧಾಮ, ಕಾಶ್ಯಪ, ವಾಸಿಷ್ಠ, ವಿರಜ ಎಂಬ ನಾಲ್ಕು ಜನ ಶಿಷ್ಯರು ಮಾಹೇಶ್ವರಯೋಗದಿಂದ ರುದ್ರಲೋಕಕ್ಕೆ ಪ್ರಯಾಣಿಸುವರು.

ಹದಿನಾಲ್ಕರಲ್ಲಿ ತರಕ್ಷು ಎಂಬುವವ ವ್ಯಾಸನಾಗುವನು. ಆಗ ನಾನು ಆಂಗೀರಸ ವಂಶದಲ್ಲಿ ಗೌತಮನೆಂಬ ಹೆಸರಿನಿಂದ ಅವತರಿಸುವೆನು. ಅತ್ರಿ, ದೇವಸದ, ಶ್ರವಣ, ಶೃವಿಷ್ಟಕ ಎಂಬ ನಾಲ್ಕು ಜನ ಯೋಗಿಗಳು ನನ್ನ ಶಿಷ್ಯರಾಗುವರು.

ಹದಿನೈದನೆಯ ದ್ವಾಪರದಲ್ಲಿ ತ್ರೈಯಾರುಣಿ ಎಂಬುವವನು ವ್ಯಾಸನಾಗುವನು. ಆಗ ನಾನು ವೇದಶಿರ ಎಂಬ ಬ್ರಾಹ್ಮಣನಾಗಿ ಹಿಮಾಲಯ ಪರ್ವತದ ಸರಸ್ವತಿತೀರದಲ್ಲಿ ವೇದಶೀರ್ಷ ಪರ್ವತದಲ್ಲಿ ಅವತರಿಸುವೆನು. ಕುಣಿ, ಕುಣಿಬಾಹು, ಕುಶರೀರ, ಕುನೇತ್ರರು ಎಂಬುವವರು ನನ್ನ ಶಿಷ್ಯರಾಗುವರು.

ಹದಿನಾರನೆಯ ದ್ವಾಪರದಲ್ಲಿ ದೇವನೆಂಬುವವನು ವ್ಯಾಸ. ಆಗ ಗೋಕರ್ಣ ಹೆಸರಿನ ನನಗೆ ಕಾಶ್ಯಪ, ಉಶನ, ಚ್ಯವನ, ಬೃಹಸ್ಪತಿ ಎಂದು ನಾಲ್ಕು ಜನ ಶಿಷ್ಯರು. ನಾನು ವಾಸಿಸಿದ ಆ ಸ್ಥಾನಕ್ಕೆ ಗೋಕರ್ಣ ಎಂದು ಹೆಸರಾಗುವದು.

ಹದಿನೇಳನೆಯ ದ್ವಾಪರದಲ್ಲಿ ಕೃತಂಜಯ ವ್ಯಾಸನಾದಾಗ ಗುಹಾವಾಸಿ ಎಂಬ ಹೆಸರಿನಿಂದ ಅವತರಿಸುವೆನು. ಉತಥ್ಯ, ವಾಮದೇವ, ಮಹಾಯೋಗ, ಮಹಾಬಲ ಎಂಬವರು ನನ್ನ ಶಿಷ್ಯರಾಗುವರು. ಅವರಿಗೆ ನೂರಾರು ಸಾವಿರಾರು ಶಿಷ್ಯರಾಗುವರು. ಹಿಮಾಲಯದ ಮಹಾಲಯ ಶಿಖರದಲ್ಲಿ ಇರುವ ನನ್ನನ್ನು ಆ ಶಿಷ್ಯರೆಲ್ಲರೂ ಧ್ಯಾನಮಾಡಿ ಶಿವಲೋಕವನ್ನು ಹೊಂದುವರು.

ಹದಿನೆಂಟನೆಯ ದ್ವಾಪರದಲ್ಲಿ ಋತಂಜಯನು ವ್ಯಾಸ. ನಾನು ಶಿಖಂಡಿ. ವಾಚಶ್ರಮ ಋಚೀಕ, ಶಾವಾಶ್ವ, ಯತೀಶ್ವರರು ನನ್ನ ಶಿಷ್ಯರು.

ಹತ್ತೊಂಬತ್ತನೆಯ ದ್ವಾಪರದಲ್ಲಿ ಭರದ್ವಾಜಮುನಿಯೇ ವ್ಯಾಸ. ಜಟಾಮಾಲಿ ಎಂಬುವದು ನನ್ನ ಅವತಾರ. ಹಿರಣ್ಯನಾಭ, ಕೌಶಲ್ಯ, ಲೋಲಾಕ್ಷಿ, ಕುಥುಮಿ ಎಂಬವರು ಶಿಷ್ಯರು.

ಇಪ್ಪತ್ತನೆಯ ದ್ವಾಪರಾಂತ್ಯದಲ್ಲಿ ಗೌತಮ ಮುನಿಯೇ ವ್ಯಾಸ. ಆಗ ಅಟ್ಟಹಾಸ ಎಂಬ ನನ್ನ ಅವತಾರ. ಹಿಮಾಲಯದಲ್ಲಿರುವ ಅಟ್ಟಹಾಸ ಎಂಬ ಪರ್ವತದಲ್ಲಿ ಸುಮಂತು, ಬರ್ಬರಿ, ಕಬಂಧ, ಕುಶಿಕಂಧರ ಎಂಬ ನನ್ನ ಶಿಷ್ಯರು ಮಾಹೇಶ್ವರ ಯೋಗದಿಂದ ಸದ್ಗತಿ ಪಡೆಯುವರು.

ಇಪ್ಪತ್ತೊಂದನೆಯ ದ್ವಾಪರದಲ್ಲಿ ವಾಚಶ್ರವನು ವ್ಯಾಸ. ದಾರುಕನೆಂಬುವದೆ ನನ್ನ ಅವತಾರ. ನಾನು ವಾಸಮಾಡುವದು. ಸುಪ್ರಸಿದ್ಧವಾದ ದೇವದಾರುವನದಲ್ಲಿ ಪ್ಲಕ್ಷ, ದರ್ಭಾಯಣಿ, ಕೇತು ಮಂತ, ಗೌತಮ ಎಂಬ ನಾಲ್ವರು ನನ್ನ ಶಿಷ್ಯರು.

ಶುಷ್ಮಾಯಣ ಎಂಬ ವ್ಯಾಸನಿರುವ ಇಪ್ಪತ್ತೆರಡನೆಯ ದ್ವಾಪರಾಂತ್ಯದಲ್ಲಿ ನಾನು ಕಾಶಿಯಲ್ಲಿ ಲಾಂಗಲಿ ಎಂಬ ಹೆಸರಿನಿಂದ ಅವತಾರವನ್ನು ಮಾಡುವೆನು. ಭಲ್ಲವಿ, ಮಧುಪಿಂಗ, ಶ್ವೇತಕೇತು, ಕುಶ ಎಂಬ ನಾಲ್ಕು ಶಿಷ್ಯರು ಮಾಹೇಶ್ವರ ಯೋಗದಿಂದ ಮಹೇಶಲೋಕಕ್ಕೆ ಪ್ರಯಾಣಿಸುವರು.

ಇಪ್ಪತ್ಮೂರನೆಯದರಲ್ಲಿ ತೃಣಬಿಂದು ಮುನಿಯೇ ವ್ಯಾಸ. ಶ್ವೇತ ಎಂಬ ಮುನಿಪುತ್ರನಾಗಿ ನನ್ನ ಅವತಾರವಾಗುವದು. ಆಗ ನಾನು ಧರ್ಮೋಪದೇಶಮಾಡಿದ ಸ್ಥಾನಕ್ಕೆ ಕಾಲಂಜರ ಪರ್ವತ ಎಂದು ಹೆಸರು ಬರುವದು. ಆಗ ನನಗೆ ಉಶಿಕ, ಬೃಹದಶ್ವ, ದೇವಲ, ಕವಿ ಎಂಬ ನಾಲ್ಕು ಶಿಷ್ಯರು ಇರುವರು.

ಇಪ್ಪತ್ನಾಲ್ಕನೆಯ ದ್ವಾಪರಾಂತ್ಯದಲ್ಲಿ ಋಕ್ಷ ಎಂಬವನು ವ್ಯಾಸನಾಗುವನು. ನಾನು ನೈಮಿಷಾರಣ್ಯದಲ್ಲಿ ಸೂರಿ ಎಂಬ ಹೆಸರಿನಿಂದ ಅವತಾರಮಾಡುವೆನು. ಆಗ ನನಗೆ ಶಾಲಿಹೋತ್ರ, ಅಗ್ನಿವೇಶ್ಯ, ಯುವನಾಶ್ವ, ಶರದ್ವಸು ಎಂಬ ನಾಲ್ಕು ತಪಸ್ವಿಗಳಾದ ಶಿಷ್ಯರು ಇರುವರು.

ಇಪ್ಪತ್ತೈದನೆಯ ದ್ವಾಪರಾಂತ್ಯದಲ್ಲಿ ವಸಿಷ್ಠ ಪುತ್ರನಾದ ಶಕ್ತಿಮುನಿಯು ವ್ಯಾಸ. ಆಗ ನಾನು ಈಶ್ವರ ಎಂಬ ಸನ್ಯಾಸಿಯಾಗಿ ಅವತರಿಸುವೆನು. ಛಗಲ, ಕುಂಡಕರ್ಣ, ಕುಹಾಂಡ, ಪ್ರವಾಹಕ ಎಂಬ ನಾಲ್ಕು ಜನ ಶಿಷ್ಯರು ಆಗುವರು.

ಇಪ್ಪತ್ತಾರನೆಯ ದ್ವಾಪರಾಂತ್ಯದಲ್ಲಿ ಪರಾಶರ ಮುನಿಯು ವ್ಯಾಸನಾಗುವನು. ಆಗ ಭದ್ರವಟಪಟ್ಟಣದಲ್ಲಿ ನಾನು ಸಹಿಷ್ಣು ಎಂಬ ಹೆಸರಿನಿಂದ ಅವತರಿಸಿ ಉಲೂಕ, ವಿದ್ಯುತ, ಶಂಬೂಕ, ಆಶ್ವಲಾಯನ ಎಂಬ ನಾಲ್ಕು ಜನ ಶಿಷ್ಯರಿಗೆ ಮಾಹೇಶ್ವರ ಯೋಗವನ್ನು ಉಪದೇಶಿಸುವೆನು.

ಇಪ್ಪತ್ತೇಳರಲ್ಲಿ ಜಾತುಕರ್ಣಿ ವ್ಯಾಸನಾದಾಗ ನಾನು ಪ್ರಭಾಸತೀರ್ಥದಲ್ಲಿ ಸೋಮಶರ್ಮನಾಗಿ ಅವತರಿಸುವೆನು. ಆಗ ನನಗೆ ಅಕ್ಷಪಾದಕುಮಾರ, ಉಲೂಕ, ವತ್ಸ ಎನ್ನುವವರು ಶಿಷ್ಯರಾಗುವರು.

ಇಪ್ಪತ್ತೆಂಟನೆಯ ದ್ವಾಪರಾಂತ್ಯದಲ್ಲಿ ಸಾಕ್ಷಾತ್ ವಿಷ್ಣುವೇ ಪರಾಶರ ಸುತನಾಗಿ ದ್ವೈಪಾಯನ ಎಂಬ ಹೆಸರಿನಿಂದ ವ್ಯಾಸಪೀಠವನ್ನು ಮಂಡಿಸುವನು. ಆಗ ವಿಷ್ಣುವು ಕೃಷ್ಣ ಎಂಬ ಹೆಸರಿನಿಂದ ಅವತರಿಸಿ ದುಷ್ಟಶಿಕ್ಷಣಶಿಷ್ಟರಕ್ಷಣ ಮೊದಲಾದ ಅವತಾರ ಕಾರ್ಯಗಳನ್ನು ಮಾಡುವನು. ಆಗ ನಾನು ಬ್ರಹ್ಮಚಾರಿ ಶರೀರವುಳ್ಳವನಾಗಿ ಅವತಾರ ಮಾಡುವೆನು ಮರಣ ಹೊಂದಿ ಸ್ಮಶಾನದಲ್ಲಿ ದಿಕ್ಕಿಲ್ಲದೇ ಬಿದ್ದಿರುವ ಒಬ್ಬ ಬ್ರಹ್ಮಚಾರಿಯ ಶವದಲ್ಲಿ ಪ್ರವೇಶಿಸಿ ಅದಕ್ಕೆ ಜೀವಬರುವಂತೆ ಮಾಡಿ ಲಕುಲಿ ಎಂಬ ಹೆಸರಿನಿಂದ ಸಿದ್ಧಕ್ಷೇತ್ರದಲ್ಲಿ ವಾಸವಾಗಿರುವೆನು. ಆ ಕಾಲದಲ್ಲಿ ನನಗೆ ಕುಶಿಕ, ಗರ್ಗ, ಮಿತ್ರ, ಕೌರುಷ್ಯ ಎಂದು ನಾಲ್ಕು ಜನ ಶಿಷ್ಯರು ವೇದಾಧ್ಯಯನವನ್ನುಮಾಡಿ ಬ್ರಹ್ಮಜ್ಞಾನಿಗಳಾಗಿ ನನ್ನಿಂದ ಮಾಹೇಶ್ವರಯೋಗವನ್ನು ಪಡೆದು ರುದ್ರಲೋಕಕ್ಕೆ ಹೋಗುವರು.

ಈವರೆಗೆ ನಾನು ಹೇಳಿದ ನನ್ನ ಶಿಷ್ಯರೆಲ್ಲರೂ ನನ್ನ ಅಚ್ಛಿನ್ನ ಭಕ್ತರು. ಪ್ರತಿ ನಿತ್ಯವೂ ಭಸ್ಮಧಾರಣೆಯನ್ನು ಮಾಡಿಕೊಂಡು ಲಿಂಗಾರ್ಚನೆಯನ್ನುಮಾಡುತ್ತ ಜಿತೇಂದ್ರಿಯರಾಗಿ ಯೋಗದಿಂದ ಧ್ಯಾನಾರೂಢರಾಗುವರು. ಯೋಗಮಾರ್ಗವು ಬಹುವಿಧವಾಗಿದೆ. ಜ್ಞಾನಮಾರ್ಗವು ನಾನಾ ಬಗೆಯಾಗಿದೆ. ಆದರೆ ಶಿವಪಂಚಾಕ್ಷರಿ ಮಂತ್ರ ಜಪರೂಪವಾದ ವಿದ್ಯೆಯನ್ನು ಬಿಟ್ಟು ಮತ್ತೊಂದರಿಂದ ದುಃಖನಿವೃತ್ತಿಯಾಗಿ ಸುಖದ ಪ್ರಾಪ್ತಿಯಾಗುವದಿಲ್ಲ. ಹೀಗೆ ಸಾಕ್ಷಾತ್ ಮಹಾದೇವನು ಹೇಳಿದ ರುದ್ರಾವತಾರಗಳ ವಿಷಯಗಳನ್ನು ಕೇಳಿ ಸಂತುಷ್ಟನಾದ ಬ್ರಹ್ಮನು ಅವನನ್ನು ಸ್ತೋತ್ರಮಾಡಿ ಸಂತೋಷಪಡಿಸಿದನು. ಅದರಿಂದ ಪ್ರೀತನಾದ ಪರಮೇಶ್ವರನು ಆ ಬ್ರಹ್ಮನಿಗೆ ''ಲಿಂಗ ಪೂಜೆಯ ಮಹತ್ವವನ್ನು ಹೇಳಿ ನಾರಾಯಣನು ಕೂಡ ಲಿಂಗರೂಪಿಯಾದ ನನ್ನನ್ನು ಪ್ರತಿದಿನವೂ ಭಕ್ತಿಯಿಂದ ಪೂಜಿಸುವನು. ಅದರಿಂದಲೇ ಅವನು ಮಹಾಮಹಿಮನಾಗಿ ಸರ್ವೇಶ್ವರನಾಗಿರುವನು''. ಹೀಗೆ ಹೇಳಿ ಮಹೇಶ್ವರನು ಬ್ರಹ್ಮನಿಗೆ ಅನುಗ್ರಹವನ್ನು ಮಾಡಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

*ಲಿಂಗಮಹಾಪುರಾಣ ಪೂರ್ವಾರ್ಧದ ಪರಮೇಶ್ವರನ ಯುಗಕ್ರಮದಿಂದ ಬಂದ ಯೋಗಾವತಾರ ವ್ಯಾಸಾವತಾರ ನಿರೂಪಣೆ ಎಂಬ ಇಪ್ಪತ್ನಾಲ್ಕನೆಯ ಅಧ್ಯಾಯವು ಮುಗಿದುದು.*

—o—

## ಸ್ನಾನ ಆಚಮನ ಕ್ರಮ

**ಅಧ್ಯಾಯ - ೨೫**

**ಋಷಿಗಳು** :- ಸೂತಾಚಾರ್ಯರೆ ಲಿಂಗಮೂರ್ತಿಯಾದ ಮಹೇಶ್ವರನ ಪೂಜಾವಿಧಿಯನ್ನು ಹೇಳಿರಿ.

**ಸೂತ** :- ಕೈಲಾಸಪರ್ವತದಲ್ಲಿ ತನ್ನ ಅಂಕಾರೂಢಳಾದ ಪಾರ್ವತಿಯ ಪ್ರಶ್ನೆಗೆ ಉತ್ತರರೂಪವಾಗಿ ಶಂಕರನು ಲಿಂಗಾರ್ಚನೆಯ ವಿಧಿಯನ್ನು ಹೇಳಿದನು. ಆಗ ಅಲ್ಲಿಯೇ ಸಮೀಪದಲ್ಲಿದ್ದ ಶಾಲಂಕಾಯನ ಋಷಿಯ ಮಗನಾದ ನಂದೀಶ್ವರನು ಅದೆಲ್ಲವನ್ನು ಕೇಳಿ ಬ್ರಹ್ಮಪುತ್ರನಾದ ಸನತ್ಕುಮಾರನಿಗೆ ಹೇಳಿದನು. ಸನತ್ಕುಮಾರನು ವೇದ್ಯೋಕ್ತವಾದ ಲಿಂಗಪೂಜಾವಿಧಿಯನ್ನು ವ್ಯಾಸನಿಗೆ ಹೇಳಿದನು. ಅದನ್ನು ನಾನು ನಿಮಗೆ ಹೇಳುತ್ತೇನೆ. ಲಿಂಗಪೂಜೆಯ ಅಂಗವಾದ ಸ್ನಾನವು ಮೂರು ವಿಧವಾಗಿದೆ. ವಾರುಣ, ಆಗ್ನೇಯ, ಮಂತ್ರಸ್ನಾನ ಎಂದು. ನೀರಿನಲ್ಲಿ ಮುಳುಗಿಮಾಡುವದು ವಾರುಣಸ್ನಾನ ಎಂದಾಗುವದು. ಭಸ್ಮಧಾರಣೆಯು ಆಗ್ನೇಯಸ್ನಾನ, ಆಪೋಹಿಷ್ಠಾದಿ ಮಂತ್ರಗಳ ಮಾರ್ಜನೆಯು ಮಂತ್ರಸ್ನಾನ. ಹೀಗೆ ವಿಧಿಪೂರ್ವಕವಾಗಿ ಸ್ನಾನಮಾಡಿ ಕೈಯ್ಯಲ್ಲಿ ಪವಿತ್ರವನ್ನು ಇಟ್ಟುಕೊಂಡು ಶುದ್ಧಸ್ಥಳದಲ್ಲಿ ಕುಳಿತು. ವಿಧಿಗೆ ಅನುಸಾರವಾಗಿ ಆಚಮನವನ್ನು ಮಾಡಬೇಕು. ಬಲಗೈಯಿಂದ ದರ್ಭೆಸಹಿತವಾದ ನೀರನ್ನು ಸುತ್ತಲೂ ಪ್ರೋಕ್ಷಿಸಿ ಮೂರಾವೃತ್ತಿ ನೀರನ್ನು ಚಕ್ರಾಕಾರವಾಗಿ ಚೆಲ್ಲಿ ಪಾನಮಾಡಬೇಕು.

*ಲಿಂಗಮಹಾಪುರಾಣ ಪೂರ್ವಾರ್ಧದ ಸ್ನಾನ ಆಚಮನಕ್ರಮನಿರೂಪಣ*
*ಎಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.*



## ಪಂಚಯಜ್ಞ ವಿವರಣ

**ಅಧ್ಯಾಯ - ೨೬**

**ನಂದೀಶ್ವರ** :- ಸ್ನಾನದ ಬಳಿಕ **'ಆಯಾತುವರದಾದೇವಿ'** ಎಂಬ ಮಂತ್ರದಿಂದ ಗಾಯತ್ರಿದೇವಿಯನ್ನು ಆವಾಹನಮಾಡಬೇಕು. ಅನಂತರ ಆಚಮನ ಪ್ರಾಣಾಯಾಮ ಮಾಡಿ ಸಾವಿರ, ಐನೂರು, ನೂರಎಂಟು. ಯಥಾಶಕ್ತಿ ಗಾಯತ್ರಿಮಂತ್ರವನ್ನು ಜಪಿಸಬೇಕು. ಜಪಕ್ಕಿಂತ ಮೊದಲು ಸೂರ್ಯನಿಗೆ ಗಾಯತ್ರಿಮಂತ್ರದಿಂದಲೇ ಅರ್ಘ್ಯವನ್ನು ಕೊಡಬೇಕು. ಅನಂತರ **'ಉತ್ತಮೇಶಿಖರೇದೇವಿ'** ಎಂಬ ಮಂತ್ರದಿಂದ ಗಾಯತ್ರಿಯ ಉದ್ವಾಸನೆಮಾಡಿ ಪೂರ್ವಾದಿದಿಕ್ಕುಗಳಿಗೂ ಗಾಯತ್ರಿಗೂ ಸಾವಿತ್ರಿಗೂ, ದೇವತೆಗಳಿಗೂ ನಮಸ್ಕರಿಸಿ. ಸೂರ್ಯನನ್ನು ಪ್ರಾರ್ಥಿಸಬೇಕು. ಸೂರ್ಯನ ಪ್ರಾರ್ಥನೆಯ ಕಾಲದಲ್ಲಿ **'ಉದುತ್ಯಂಜಾತವೇದಸಂ', ಚಿತ್ರಂದೇವಾನಾಮ್ 'ಜಾತ ವೇದಸೇ ಸುನವಾಮ'** ಮುಂತಾದ ಮಂತ್ರಗಳನ್ನು ಸೂರ್ಯ ಸೂಕ್ತಗಳನ್ನು ಜಪಿಸಬೇಕು. ಅನಂತರ ಅಗ್ನಿಹೋತ್ರಮಾಡಿ ಪಿತೃಗಳನ್ನು, ಋಷಿಗಳನ್ನು ಅವರವರ ಹೆಸರಿನಿಂದ ಆವಾಹನಮಾಡಿ ನೀರಿನಿಂದ ತರ್ಪಣ ಕೊಡಬೇಕು.

ಸದಾಚಾರಿಯಾದ ಮನುಷ್ಯನು ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ, ಬ್ರಹ್ಮಯಜ್ಞ ಎಂಬ ಐದು ವಿಧವಾದ ಯಜ್ಞಗಳನ್ನು ಮಾಡಬೇಕು.

ದೇವತೆಗಳನ್ನು ಉದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡುವದು ದೇವಯಜ್ಞ. ಪ್ರಾಣಿಗಳಿಗೆ ಬಲಿನೀಡುವದು ಭೂತಯಜ್ಞ. ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಗೂ, ಬಡಬಗ್ಗರಿಗೂ ಅನ್ನದಾನಮಾಡುವದು ಮನುಷ್ಯಯಜ್ಞ. ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಮಾಡುವದು ಪಿತೃಯಜ್ಞ. ಈ ಎಲ್ಲ ಯಜ್ಞಗಳಿಗಿಂತ ಬ್ರಹ್ಮಯಜ್ಞವು ಶ್ರೇಷ್ಠವಾಗಿದೆ. ಸದಾಚಾರಿಯಾದವನು. ಈ ಪಂಚಮಹಾಯಜ್ಞಗಳನ್ನು ಮಾಡದೇ ಭೋಜನಮಾಡಿದರೆ ಹಂದಿಯಾಗಿ ಹುಟ್ಟುವನು. ಸರ್ವರೀತಿಯಿಂದಲೂ ತಮಗೆ ಮಂಗಳವಾಗಬೇಕೆಂದು ಬಯಸುವವರು ಪ್ರಯತ್ನ ಪೂರ್ವಕವಾಗಿ ಪಂಚಮಹಾಯಜ್ಞಗಳನ್ನು ಮಾಡಬೇಕು.

*ಇತಿ ಲಿಂಗಮಹಾಪುರಾಣ ಪೂರ್ವಾರ್ಧದ ಪಂಚಯಜ್ಞವಿವರಣ ಎಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.*

—o—

## ಲಿಂಗಾರ್ಚನೆ ಕ್ರಮ

ಅಧ್ಯಾಯ - ೨೭

**ನಂದೀಶ್ವರ :-** ಲಿಂಗಾರ್ಚನೆ ವಿಧಿಯನ್ನು ವಿಸ್ತಾರವಾಗಿ ಹೇಳಲು ನೂರು ವರುಷವಾದರೂ ಸಾಲದು. ಆದುದರಿಂದ ಸಂಕ್ಷೇಪವಾಗಿ ಹೇಳುತ್ತೇನೆ ಕೇಳು. ಮೊದಲು ವಿಧಿಪೂರ್ವಕವಾಗಿ ಸ್ನಾನಮಾಡಿ ಪೂಜಾಗೃಹದಲ್ಲಿ ಕುಳಿತು ಆಚಮನ ಪ್ರಾಣಾಯಮಗಳನ್ನುಮಾಡಿ ಪರಮೇಶ್ವರನ ಧ್ಯಾನಮಾಡಬೇಕು. ದೇಹಶುದ್ಧಿಯನ್ನು ಮಾಡಿಕೊಂಡು ಪ್ರಣವ ಸಹಿತವಾದ ಪಂಚಬ್ರಹ್ಮ ಮೂಲಮಂತ್ರಗಳಿಂದ ಅಂಗನ್ಯಾಸ ಮಾಡಬೇಕು. ಪ್ರೋಕ್ಷಣಪಾತ್ರೆ, ಅರ್ಘ್ಯಪಾತ್ರೆ, ಪಾದ್ಯಪಾತ್ರೆ, ಆಚಮನೀಯ ಪಾತ್ರೆಗಳನ್ನು ದರ್ಭೆಯಿಂದ ಮುಚ್ಚಿ ಶುದ್ಧನೀರಿನಿಂದ ಪ್ರೋಕ್ಷಿಸಿ ಎಲ್ಲಪಾತ್ರೆಗಳಲ್ಲಿಯೂ ತಣ್ಣೀರನ್ನು ಹಾಕಿ ಇಡಬೇಕು. ಅನಂತರ ಪ್ರಣವಮಂತ್ರಗಳಿಂದ ಪಾದ್ಯಪಾತ್ರೆಯಲ್ಲಿ ಶ್ರೀಗಂಧ, ಬಾಳದಬೇರು ಇವುಗಳನ್ನು, ಆಚಮನೀಯ ಪಾತ್ರೆಯಲ್ಲಿ ಜಾಜಿ, ಶಕಾಲೆರಿ ಹೊಂಗೆ ಎಲೆಗಳ ಚೂರ್ಣವನ್ನು ಹಾಕಬೇಕು. ಎಲ್ಲ ಪಾತ್ರೆಗಳಲ್ಲಿಯೂ ಶ್ರೀಗಂಧ, ಪಚ್ಚಕರ್ಪೂರ ಹೂಗಳನ್ನು ಹಾಕಬೇಕು. ಅರ್ಘ್ಯ ಪಾತ್ರೆಯಲ್ಲಿ ದರ್ಭೆಯ ತುದಿಗಳು, ಅಕ್ಷತೆ, ಗೋದಿ, ಎಳ್ಳು, ತುಪ್ಪ, ಬಿಳಿಸಾಸಿವೆ, ತುಪ್ಪ, ವಿಭೂತಿಗಳನ್ನೂ ಪ್ರೋಕ್ಷಣಪಾತ್ರೆಯಲ್ಲಿ ದರ್ಭೆ, ಹೂವು, ಗೋದಿ, ಭತ್ತ, ಶತಾವರಿ, ಹೊಂಗೆ, ಭಸ್ಮಗಳನ್ನೂ ಹಾಕಬೇಕು. ಬಳಿಕ ರುದ್ರಗಾಯತ್ರಿ, ಪಂಚಾಕ್ಷರಿ ಮಂತ್ರದಿಂದಾಗಲಿ ಅಥವಾ ಕೇವಲ ಪ್ರಣವಮಂತ್ರದಿಂದಾಗಲಿ ಅಂಗನ್ಯಾಸಗಳನ್ನು ಮಾಡಬೇಕು. ಅನಂತರ ಪರಮೇಶ್ವರನ ದಕ್ಷಿಣದಲ್ಲಿ ನಂದಿಯನ್ನು, ಉತ್ತರದಲ್ಲಿ ಅವನ ಪತ್ನಿಯಾದ ಮಹದೇವಿಯನ್ನು ಪೂಜಿಸಬೇಕು. ಬಳಿಕ ಸದ್ಯೋಜಾತಾದಿ ಪಂಚಮಂತ್ರಗಳಿಂದ ಶಿವರೂಪಿ ಪಂಚಮುಖಿ ಪರಮೇಶ್ವರನಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ಅನಂತರ ಶಿವ, ಸ್ಕಂದ, ಗಣಪತಿ, ಪಾರ್ವತಿ ಇವರನ್ನುಪೂಜಿಸಿ ಲಿಂಗಶುದ್ಧಿಯನ್ನು ಮಾಡಬೇಕು. ಎಂದರೆ ಲಿಂಗದ ಮೇಲೆ ನಿನ್ನೆ ಏರಿಸಿದ ನಿರ್ಮಾಲ್ಯವನ್ನು ತೆಗೆಯಬೇಕು. ಓಂಕಾರ ಪೂರ್ವಕವಾಗಿ **''ಓಂನಿಧನಪತಯೇನಮಃ'** ಎಂಬ ಮಂತ್ರದಿಂದ ಮೊದಲಾಗಿ **'ಪರಮಲಿಂಗಾಯನಮಃ'** ಎಂಬ ಕೊನೆಯವರೆಗೂ ಎಲ್ಲ ಮಂತ್ರಗಳನ್ನು ಜಪಿಸಬೇಕು.

ಸರ್ವವ್ಯಾಪ್ತನಾದ ರುದ್ರನಿಗೆ ಪಾದ್ಯ ಆಚಮನೀಯ, ಅರ್ಘ್ಯಾದಿಗಳನ್ನು ಸಮರ್ಪಿಸಿ. ಶ್ರೀಗಂಧಯುಕ್ತ ನೀರಿನಿಂದ ಸ್ನಾನಮಾಡಿಸಬೇಕು. ಪ್ರಣವ ಮಂತ್ರದಿಂದ ಹಾಲು, ಮೊಸರು, ತುಪ್ಪ, ಜೇನು, ಕಬ್ಬಿನ ರಸ ಮುಂತಾದವುಗಳಿಂದ ಅಭಿಷೇಕಮಾಡಬೇಕು. ಹೀಗೆ ಪಂಚಾಮೃತಸ್ನಾನಮಾಡಿಸಿದ ಬಳಿಕ ಶುದ್ಧೋದಕದಲ್ಲಿ ಪಚ್ಚಕರ್ಪೂರ, ಜಾಜಿ, ಸಂಪಿಗೆ, ಮಲ್ಲಿಗೆ, ಸುಗಂಧಿತದ್ರವ್ಯಗಳನ್ನು ಹಾಕಬೇಕು. ಸದ್ಯೋಜಾತಾದಿ ಪಂಚಬ್ರಹ್ಮ ಮಂತ್ರಗಳಿಂದ ಆ ನೀರನ್ನು ಅಭಿಮಂತ್ರಣೆ ಮಾಡಿ ಚಿನ್ನ, ಬೆಳ್ಳಿ, ತಾಮ್ರ, ಕಮಲದ ಎಲೆ, ಶಂಖ, ಮಣ್ಣಿನ ಪಾತ್ರೆ, ಇವುಗಳಿಂದ ಆ ನೀರನ್ನು ತೆಗೆದುಕೊಂಡು ಮಂತ್ರ ಪೂರ್ವಕವಾಗಿ ಶಿವಲಿಂಗಕ್ಕೆ ಅಭಿಷೇಕ ಮಾಡಬೇಕು. ಅಭಿಷೇಕ ಮಾಡುವಾಗ ಪವಮಾನ ಸೂಕ್ತ, ವಾಮನ ಸೂಕ್ತ, ಶ್ರೀ ರುದ್ರ, ನೀಲರುದ್ರ ಮಂತ್ರ, ಶ್ರೀ ಸೂಕ್ತ, ರಾತ್ರಿಸೂಕ್ತ, ಚಮಕ ಮುಂತಾದ ಮಂತ್ರಗಳಿಂದ ಅಥವಾ ಸ್ವಶಾಖೋಕ್ತವಾದ ಅಭಿಷೇಕ ಮಂತ್ರಗಳಿಂದ ಪರಮೇಶ್ವರನನ್ನು ಸ್ನಾನಮಾಡಿಸಬೇಕು. ಆ ಮೇಲೆ ವಸ್ತ್ರ, ಆಚಮನ ಯಜ್ಞೋಪವೀತ, ಗಂಧ, ಹೂವು, ಧೂಪ, ದೀಪ, ನೈವೇದ್ಯ, ಪುನರಾಚಮನ, ಕಿರೀಟ, ಛತ್ರ, ಆಭರಣ, ಚಾಮರ ತಾಂಬೂಲ ಮುಂತಾದವುಗಳನ್ನು ಪ್ರಣವಮಂತ್ರ ಒಂದರಿಂದಲೇ ಸಮರ್ಪಿಸಬೇಕು. ಅನಂತರ ಸ್ತೋತ್ರಮಾಡಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಪಾದಗಳ ಮೇಲೆ ಹೂವುಗಳನ್ನು ಹಾಕಿ ನಮಸ್ಕರಿಸಿ ಆ ಶಿವನನ್ನು ತನ್ನ ಹೃದಯ ಪೀಠದಲ್ಲಿ ಆವಾಹನೆಮಾಡಿ ಆತ್ಮಸಮಾರೋಪಣವನ್ನು ಮಾಡಿಕೊಳ್ಳಬೇಕು.

*ಲಿಂಗಮಹಾ ಪುರಾಣ ಪೂರ್ವಾರ್ಧದ ಲಿಂಗಾರ್ಚನೆಯ ಕ್ರಮದ ವಿವರಣೆ*
*ಎಂಬ ಇಪ್ಪತ್ತೇಳನೆಯ ಅಧ್ಯಾಯ ಮುಗಿದುದು*



## ಅಭ್ಯಂತರ ಲಿಂಗಪೂಜೆ

**ಅಧ್ಯಾಯ - ೨೮**

**ಸೂತ** :- ನಂದೀಶ್ವರನು ಹಿಂದೆ ಬಾಹ್ಯವಾದ ಲಿಂಗಾರ್ಚನೆಯ ವಿಧಾನವನ್ನು ಹೇಳಿ ಈಗ ಆಭ್ಯಂತರಪೂಜೆಯನ್ನು ವಿವರಿಸುತ್ತಾನೆ. ಪೂಜಕನು ತನ್ನ ಹೃದಯಕಮಲದಲ್ಲಿ ಅಗ್ನಿಮಂಡಲ ಅದರ ಮೇಲೆ ಸೂರ್ಯಮಂಡಲ, ಅದರ ಮೇಲೆ ಚಂದ್ರಮಂಡಲ, ಅದರ ಮೇಲೆ ಸತ್ವ, ರಜಸ ತಮೋಗುಣಗಳನ್ನೂ, ವಿಶ್ವ-ತೈಜಸ ಪ್ರಾಜ್ಞರೂಪವಾದ ಆತ್ಮತ್ರಯಗಳನ್ನೂ ಭಾವನೆಮಾಡಬೇಕು. ಅದರ ಮೇಲೆ ಪರಿಶುದ್ಧವಾದ ಅರ್ಧದೇಹದಲ್ಲಿ ಪಾರ್ವತಿಯಿಂದೊಡಗೂಡಿದ ಮಹಾದೇವನನ್ನು ಧ್ಯಾನರೂಪವಾದ ಯೋಗವಿದ್ಯೆಯಿಂದ ಪೂಜಿಸಬೇಕು.

**'ಸರ್ವಂ ಖಲ್ವಿದಂ ಬ್ರಹ್ಮ' 'ಸರ್ವೋ ವೈ ರುದ್ರಃ ' 'ಮರುತೋವೈ ಮಹಾದೇವಃ.' 'ವಿಶ್ವರೂಪಾಯ ವೈ ನಮಃ'** ಎಂದು ವೇದದಲ್ಲಿ ಹೇಳಿದಂತೆ ಪರಮೇಶ್ವರನನ್ನು ಮನಸ್ಸಿನಲ್ಲಿ ಯೋಚಿಸುವದೇ ಧ್ಯಾನ ಎನಿಸುವದು. ಆಕಾಶ, ವಾಯು, ತೇಜಸ್ಸು, ನೀರು,ಭೂಮಿ, ಯಜಮಾನ, ಸೂರ್ಯ, ಚಂದ್ರ ಈ ಎಂಟು ಶಿವನ ಶರೀರಗಳು. ಇವುಗಳು ಇಲ್ಲದೆ ಪ್ರಪಂಚವು ವ್ಯಕ್ತವಾಗುವದಿಲ್ಲ ವಿಚಾರಮಾಡಿದರೆ ಈ ಚರಾಚರ ಪ್ರಪಂಚವೆಲ್ಲವೂ ರುದ್ರನ ಸ್ಥೂಲ ರೂಪವೇ ಆಗಿದೆ. ತತ್ವಜ್ಞಾನಿಗಳಾದ

ಮುನಿಗಳು ರುದ್ರನ ವಿಭೂತಿಗಳನ್ನು ತಿಳಿದು ಎಲ್ಲ ಕಡೆಯು ಆ ವಿಭೂತಿಯು ಇರುವದರಿಂದ ಸಕಲವು ರುದ್ರಮಯ ಎಂದು ಧ್ಯಾನಮಾಡುವರು.

ಧ್ಯಾನವು ಚತುರ್ವ್ಯೂಹಾತ್ಮಕ ಆಗಿರುವದು. ಅದು ಏಕಾಗ್ರವಾದರೆ ಯೋಗ ನಿಷ್ಠೆ ಎನಿಸುವದು ರುದ್ರ, ಇಂದ್ರ, ಚಂದ್ರ, ನಾರಾಯಣ, ಸೂರ್ಯ, ಅಗ್ನಿ, ಹೀಗೆ ಒಂದೊಂದು ವಸ್ತುವೇ ಧ್ಯಾನ ಗೋಚರವಾದರೆ ಅದೇ ಏಕನಿಷ್ಠೆ. ಆ ಏಕನಿಷ್ಠೆಯಲ್ಲಿ ವಿಚಾರಮಾಡಿ ಧ್ಯಾನ ಗೋಚರವಸ್ತುವೆ ನಾನು ಎಂಬ ಭಾವವು ನೆಲೆಸಬೇಕು. ಈ ಭಕ್ತನು ಈಶ್ವರನಿಗಿಂತಲೂ ಬೇರೆಯಲ್ಲ ಎಂಬ ಭಾವನೆಯನ್ನು ಬ್ರಾಹ್ಮೀಚಿಂತಾ ಎಂದು ಕರೆಯುವರು. ಹಿಂದೆ ಹೇಳಿದ ಅಷ್ಟಮೂರ್ತಿ ಸ್ವರೂಪವಾದ ಪ್ರಪಂಚವನ್ನು ಪರಬ್ರಹ್ಮಸ್ವರೂಪವಾಗಿ ಧ್ಯಾನಮಾಡಬೇಕು. ಇದೇ ಅಭ್ಯಂತರ ಪೂಜೆ ಎನಿಸುವದು.

*ಇತಿ ಲಿಂಗಮಹಾಪುರಾಣ ಪೂರ್ವಾರ್ಧದ ಅಭ್ಯಂತರ ಲಿಂಗ ಪೂಜೆಯ ವಿವರಣೆ*
*ಎಂಬ ಇಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*



## ಸುದರ್ಶನನ ಕಥೆ

**ಅಧ್ಯಾಯ - ೨೯**

**ಸನತ್ಕುಮಾರ :-** ನಂದೀಶ್ವರನೇ ಹಿಂದೆ ದಾರುವನದಲ್ಲಿದ್ದ ಋಷಿಗಳಿಗೆ ಏನಾಯಿತು? ಮಹಾದೇವನು ದಿಗಂಬರನಾಗಿ ದಾರುವನಕ್ಕೆ ಏಕೆ ಬಂದನು? ಆ ಮಹಾದೇವನ ಕಾರ್ಯಗಳನ್ನು ಯಥಾರ್ಥವಾಗಿ ನಮಗೆ ನಿರೂಪಿಸು.

**ನಂದೀಶ್ವರ :-** ದಾರುವನದಲ್ಲಿ ಋಷಿಗಳು ದೇವಾದಿದೇವನಾದ ಶಂಕರನನ್ನು ಸಂತೋಷಪಡಿಸಲು ಘೋರವಾದ ತಪಸ್ಸನ್ನು ಆಚರಿಸಿದರು. ಅವರ ತಪಸ್ಸಿಗೆ ಮೆಚ್ಚಿದ ಮಹಾದೇವನು ಆ ದೇವದಾರುವನದಲ್ಲಿರುವವರ ಪ್ರವೃತ್ತಿ ಲಕ್ಷಣಜ್ಞಾನವು ಭಕ್ತಿಯಿಂದ ಕೂಡಿದೆಯೋ ಇಲ್ಲವೋ ಎನ್ನುವದನ್ನು ಪರೀಕ್ಷಿಸುವುದಕ್ಕಾಗಿ ಮತ್ತು ಪ್ರವೃತ್ತಿ ಜ್ಞಾನವುಳ್ಳ ಋಷಿಗಳಿಗೆ ನಿವೃತ್ತಿಲಕ್ಷಣ ಜ್ಞಾನವನ್ನು ಧೃಡಪಡಿಸಲಿಕ್ಕಾಗಿಯೂ ವಿಕೃತ ರೂಪದಿಂದ ಅಲ್ಲಿಗೆ ಶಿವನು ಬಂದನು. ಕಪ್ಪುಕಪ್ಪಾದ ಶರೀರ, ಮೂರುಕಣ್ಣುಗಳು, ವಿಕಾರವಾದ ರೂಪ, ನೋಡಲು ಹುಚ್ಚನಂತೆ ಕಾಣುವ ಆ ದೇವನು ಆ ದೇವದಾರು ವನಕ್ಕೆ ಬಂದನು ಆದರೆ ಅಲ್ಲಿರುವ ಋಷಿರಮಣಿಯರಿಗೆ ಮಾತ್ರ ಅತ್ಯಂತ ಸುಂದರನಾಗಿ ಕಾಣುತ್ತಿದ್ದನು. ಮಹಾ ಪತಿವ್ರತೆಯರಾದ ಋಷಿಪತ್ನಿಯರು ಕೂಡ ಆ ಶಿವನನ್ನು ನೋಡಿ ಪ್ರೀತಿಯಿಂದ ಕಾಮಿಸಿದರು. ಅವನ ಅಸಾಧಾರಣವಾದ ಸೌಂದರ್ಯವು ಹೆಂಗೆಳೆಯರ ಅಂತರಂಗದಲ್ಲಿ ಅನಂಗ ವಿಕಾರವನ್ನು ಹುಟ್ಟಿಸುತ್ತಿತ್ತು. ಅಲ್ಲಿಯೆ ಎಲೆಮನೆಗಳ ಬಾಗಿಲಿನಲ್ಲಿ ನಿಂತ ಸ್ತ್ರೀಯರೂ ಆ ಚಂದ್ರಶೇಖರನ ಮುಖದಲ್ಲಿಯ ಮಂದಹಾಸವನ್ನು ಕಂಡು ಭ್ರಾಂತರಾದರು. ಆ ಋಷಿ ರಮಣಿಯರೆಲ್ಲರೂ ತಮ್ಮ ವಸ್ತ್ರ ಆಭರಣಗಳು ಜಾರಿಬೀಳುತ್ತಿದ್ದರೂ ಅದನ್ನು ಸರಿಪಡಿಸಿಕೊಳ್ಳದೇ ಆ ಭವಾನೀ ಪತಿಯ ಹಿಂದೆ ನಡೆದರು. ಮೋಹನಾಂಗನಾದ ಮಹಾದೇವನನ್ನು ನೋಡಿ ಎಷ್ಟೋ ವೃದ್ಧಸ್ತ್ರೀಯರು ಕೂಡ ಕಾಮುಕದೃಷ್ಟಿಯಿಂದ ಶಿವನಿಗೆ ತಮ್ಮ ಹುಬ್ಬು ಹಾರಿಸಿ ಸನ್ನೆಯನ್ನುಮಾಡಿದರು.

ಆ ಶಂಕರನನ್ನು ಕಂಡು ಕೆಲವು ಸ್ತ್ರೀಯರು ಗಾನಮಾಡಿದರು. ಕೆಲವರು ನರ್ತನವನ್ನು ಮಾಡಿದರು. ಕೆಲವರು ದಿಟ್ಟತನದಿಂದ ಆ ಪರಮೇಶ್ವರನಿಗೆ ನೀನು ಯಾರು ಎಂದು ಪ್ರಶ್ನೆ ಮಾಡಿದರು. ಎಲ್ಲಿಂದ ಬಂದೆ ಎಂದು ಕೆಲವರು, ಎಲ್ಲಿಗೆ ಹೋಗುವೆ ಎಂದು ಕೆಲವರು,ಇಲ್ಲಿಯೇ ಕುಳಿತುಕೋ ಎಂದು ಉಳಿದವರು ಹೀಗೆ ಕಾಮವಶರಾಗಿ ಮನಬಂದಂತೆ ಮಾತನಾಡಿದರು.

ನಿತ್ಯ ಸತ್ಯನಾದ ಆ ಶಂಕರನು ಮಾತ್ರ ಆ ಸ್ತ್ರೀಯರ ಪ್ರೇಮ ಚೇಷ್ಟೆಗಳನ್ನೂ, ಕಾಮ ಸಂಕೇತಗಳನ್ನೂ ಗಣಿಸದೆ ಮಾತನ್ನೇ ಆಡದೆ ಸುಮ್ಮನಿದ್ದನು. ಆದರೆ ಮುನಿಗಳಾದ ಬ್ರಾಹ್ಮಣರು ಮಾತ್ರ ಹುಚ್ಚನಂತಿರುವ ಆ ಹರನನ್ನೂ ಅವನನ್ನು ಕಂಡ ಸ್ತ್ರೀಯರ ವಿಕಾರಗಳನ್ನೂ ನೋಡಿ ಕ್ರುದ್ಧರಾಗಿ ಶಿವನಿಗೆ ಬಿರುನುಡಿಗಳನ್ನಾಡಿದರು. ಸೂರ್ಯನ ಬೆಳಕಿನಿಂದ ನಕ್ಷತ್ರಗಳ ಪ್ರಕಾಶವು ಮ್ಲಾನವಾಗುವಂತೆ ಶಿವನ ವಿಷಯದಲ್ಲಿ ಆ ಋಷಿಗಳ ತಪಸ್ಸಿನ ಮಹಿಮೆಯೆಲ್ಲವು ಪ್ರಕಾಶಕ್ಕೆ ಬಾರದೆ ಹೋದವು.

ಪೂರ್ವಕಾಲದಲ್ಲಿ ಎಷ್ಟೋ ಋಷಿಗಳು ತಮ್ಮ ಕೋಪಶಾಪಗಳಿಂದ ತಮ್ಮ ತಪೋಬಲವನ್ನು ಹಾಳುಮಾಡಿಕೊಂಡರು. ಹಿಂದೆ ಓರ್ವ ಋಷಿಯ ಶಾಪದಿಂದ ಬ್ರಹ್ಮದೇವನು ಮಾಡುವ ಒಂದು ಯಜ್ಞವು ನಾಶವಾಯಿತು. ಭೃಗುಮುನಿಯ ಶಾಪದಿಂದ ವಿಷ್ಣುವು ಹತ್ತು ಅವತಾರಗಳನ್ನು ಎತ್ತಬೇಕಾಯಿತು. ಗೌತಮ ಋಷಿಯ ಶಾಪದಿಂದ ದೇವೇಂದ್ರನ ಅಂಡಗಳು ಕತ್ತರಿಸಿ ನೆಲಕ್ಕೆ ಬಿದ್ದವು. ವಸಿಷ್ಠರ ಶಾಪದಿಂದ ಅಷ್ಟವಸುಗಳಿಗೆ ಗರ್ಭವಾಸದ ದುಃಖವು ಬಂದಿತು. ಅಗಸ್ತ್ಯರ ಶಾಪದಿಂದ ನಹುಷನು ಸರ್ಪಜನ್ಮವನ್ನು ಹೊಂದಿದನು. ಹಾಲಿನ ಸಮುದ್ರವನ್ನು ಕುಡಿದ ಅಗಸ್ತ್ಯನೆಂಬ ಬ್ರಾಹ್ಮಣನು ಅದನ್ನು ಕುಡಿಯಲಿಕ್ಕಾಗದ ಉಪ್ಪು ನೀರಿನಸಮುದ್ರವನ್ನಾಗಿ ಮಾಡಿದನು. ಮಾಂಡವ್ಯ ಋಷಿಯು ಯುಮಧರ್ಮನಿಗೂ, ದುರ್ವಾಸಮುನಿಯು ಯಾದವರಿಗೂ, ಕೃಷ್ಣನಿಗೂ ಕೋಪದಿಂದ ಶಾಪ ಕೊಟ್ಟರು. ಅದೇ ದುರ್ವಾಸಮುನಿಯು ಸಹೋದರ ಸಹಿತನಾದ ಶ್ರೀರಾಮನಿಗೂ ಶಾಪ ಕೊಟ್ಟನು. ಸಾಕ್ಷಾತ್ ವಿಷ್ಣುವು ರಾಮನಾಗಿ ಅವತರಿಸಿ ದುರ್ವಾಸ ಮುನಿಯಿಂದ ಶಾಪವನ್ನು ಪಡೆದನು. ಶ್ರೀ ವತ್ಸಚಿನ್ಹೆಗಳುಳ್ಳ ವಿಷ್ಣುವು, ಭೃಗುವಿನಪಾದಪ್ರಹಾರವನ್ನು ಸಹನೆಮಾಡಿದನು. ಹೀಗೆ ಭೃಗುವಿನ ಕಾಲಿನ ಏಟನ್ನು ಸಹಿಸಿದನು. ಹೀಗೆ ಎಷ್ಟೋ ಜನರು ಬ್ರಾಹ್ಮಣರ ಶಾಪಕ್ಕೆ ಗುರಿಯಾದರು. ಆದರೆ ಆ ಉಮಾಪತಿಯು ಮಾತ್ರ ಯಾರ ಶಾಪಕ್ಕೆ ಗುರಿಯಾಗಲಿಲ್ಲ. ಈ ರೀತಿಯಾಗಿ ಮಾಯಾಮೋಹಿತರಾದ ಮುನಿಗಳು ಹರನನ್ನು ಅರಿಯಲಿಲ್ಲ. ಭವನನ್ನು ಕುರಿತು ಬಿರುನುಡಿಗಳನ್ನಾಡಿದರು. ಆಗ ಕೂಡಲೇ ಆ ಪುರಹರನು ಅವರಿಂದ ಮರೆಯಾದನು. ತೋಜೋಹೀನರಾದ ಮುನಿಗಳು ಪ್ರಾತಃಕಾಲದಲ್ಲಿ ದೇವದಾರುವನದಿಂದ ಹೊರಟು ಬ್ರಹ್ಮನ ಸಮೀಪಕ್ಕೆ ಹೋಗಿ ಅವನಿಗೆ ನಡೆದ ಸಂಗತಿಯನ್ನೆಲ್ಲ ಅರುಹಿದರು.

ಬ್ರಹ್ಮ:- ಬ್ರಾಹ್ಮಣರೆ ನೀವು ಮಹಾದುರ್ದೈವಿಗಳು ನಿಮ್ಮ ಕೈಗೆ ಸಿಕ್ಕ ಮಹಾನಿಧಿಯನ್ನು ಕಳೆದುಕೊಂಡು ದಾರುವನಕ್ಕೆ ವಿಕಾರವಾದ ಆಕಾರದಿಂದ ಬಂದವನು ಸಾಕ್ಷಾತ್ ಪರಮೇಶ್ವರನೇ ಆಗಿದ್ದನು. ಅತಿಥಿಯಾಗಿ ಬಂದವನು ಕುರೂಪಿಯಾಗಲಿ

ಸುರೂಪಿಯಾಗಲಿ ಮೂಢನಾಗಲಿ ಕೊಳಕನಾಗಲಿ ಏನಾದರೂ ಗೃಹಸ್ಥರು ಅತಿಥಿಗಳನ್ನು ನಿಂದಿಸಬಾರದು. ಪೂರ್ವಕಾಲದಲ್ಲಿ ಸುದರ್ಶನ ಎಂಬ ವೀರೋತ್ತಮನು ಅತಿಥಿ ಸತ್ಕಾರವನ್ನು ಮಾಡಿದ್ದರಿಂದ ಕಾಲ ಮೃತ್ಯುವನ್ನು ಜಯಿಸಿದನು. ಅದೇ ಸುದರ್ಶನ ಹೆಸರಿನ ಬೇರೊಬ್ಬ ಗೃಹಸ್ಥನು ತಾನೂ ಕೂಡ ಮೃತ್ಯುವನ್ನು ಜಯಿಸುತ್ತೇನೆ ಎಂದು ಪ್ರತಿಜ್ಞೆಮಾಡಿದನು. ಮತ್ತು ತನ್ನ ಪತಿವ್ರತೆಯಾದ ಮಡದಿಗೆ ಹೇಳಿದನು.

**ಸುದರ್ಶನ :-** ಪ್ರಿಯೆ ನೀನು ಪರಮಸುಂದರಿಯು ಅಹುದು. ಮಹಾಪತಿವ್ರತೆಯು ಅಹುದು, ನೀನು ನನ್ನ ಮಾತನ್ನು ಕೇಳು. ಮನೆಗೆ ಬಂದ ಅತಿಥಿಗಳನ್ನು ಎಂದೂ ಅಪಮಾನಮಾಡಬೇಡ. ಬಂದ ಅತಿಥಿಗಳೆರಲ್ಲರೂ ಶಿವಸ್ವರೂಪರೆಂದೇ ತಿಳಿ ಪ್ರಸಂಗ ಬಂದರೆ ನಿನ್ನ ಶರೀರವನ್ನು ಕೊಟ್ಟಾದರೂ ಅವರನ್ನು ಸಂತೋಷಪಡಿಸು. ಗಂಡನ ಈ ಖಂಡ ತುಂಡ ಮಾತನ್ನು ಕೇಳಿ ಆ ಸಾಧ್ವಿಮಣಿಗೆ ಬಹಳ ದುಃಖವಾಯಿತು. ಅವಳು ದುಃಖದಿಂದ ಅಳುತ್ತ. ''ಇದು ಏನು ನೀವು ಹೇಳುತ್ತಿರಿವಿರಿ? ನಾನು ಮಹಾಪತಿವ್ರತೆ ಎಂಬುದು ನಿಮಗೆ ಗೊತ್ತಿಲ್ಲವೆ? ಪರಪುರುಷನಿಗೆ ದೇಹವನ್ನು ಒಪ್ಪಿಸು ಎಂದು ನನಗೆ ಆಜ್ಞೆಮಾಡುವದೆ? ಥೇ. ಇದು ಆಗದ ಮಾತು ಬೇರೆ ನೀವು ಏನು ಹೇಳಿದರೂ ಶಿರಸಾ ಧಾರಣ ಮಾಡುವೆನು. ಇಂಥ ಅನ್ಯಾಯದ ಆಜ್ಞೆಯನ್ನು ಮಾಡಬೇಡಿರಿ.

**ಸುದರ್ಶನ :-** ಮಂಗಳಾಂಗಿಯೇ ನಮ್ಮಲ್ಲಿ ಇದ್ದುದೆಲ್ಲವನ್ನೂ ಶಿವಾರ್ಪಣ ಮಾಡುವದು ಗೃಹಸ್ಥನ ಕರ್ತವ್ಯ. ಮನೆಗೆ ಬಂದ ಅತಿಥಿಯು ಮಹಾದೇವನೆ ಸರಿ. ಮಹಾದೇವನು ಕೇಳಿದ ಬಳಿಕ ಇಲ್ಲ ಎಂದು ಹೇಳಲಿಕ್ಕಾದೀತೆ? ಈ ದೇಹ ಈ ಗೇಹ ಸರ್ವಸ್ವವು ಶಿವನದೆ. ಅವನದನ್ನು ಅವನಿಗೆ ಕೊಡಲಿಕ್ಕೆ ಇಷ್ಟೇಕೆ ಸಂಕೋಚ? ಪತಿಯ ಈ ಕಟ್ಟಪ್ಪಣೆಯನ್ನು ಆ ಸಾಧ್ವಿಮಣಿಯು ಹಾಗೆಯೇ ಆಗಲಿ ಎಂದು ಅಂಗೀಕರಿಸಿದಳು. ಅವರಿಬ್ಬರ ಭಕ್ತಿಯನ್ನು ಪರೀಕ್ಷಿಸಬೇಕೆಂದು ಸಾಕ್ಷಾತ್ ಯುವಧರ್ಮದೇವನೇ ಸುದರ್ಶನಮುನಿಯ ಮನೆಗೆ ಹೋದನು. ಆಗ ಆ ಪತಿವ್ರತೆಯು ಆ ಅತಿಥಿಯನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದಳು. ಅನಂತರ ಅತಿಥಿರೂಪನಾದ ಯಮಧರ್ಮನು ಅವಳಿಗೆ ನಿನ್ನ ಪತಿ ಕಾಣುವುದಿಲ್ಲವಲ್ಲ ? ಎಲ್ಲಿಗೆ ಹೋಗಿರುವನು ? ಅತಿಥಿ ಸೇವಾಪರಾಯಣಳಾದ ನೀನು ನನಗೆ ರುಚಿಕರವಾದ ಮೃಷ್ಟಾನ್ನ ಭೋಜನವನ್ನು ನೀಡಬೇಕೆಂದು ಸಿದ್ಧತೆಯನ್ನು ನಡೆಸಿರುವಿ. ಆದರೆ ನನಗೆ ನಿನ್ನ ಆ ಯಾವ ಮೃಷ್ಟಾನ್ನ ಪಕ್ವಾನ್ನಗಳು ಬೇಕಾಗಿಲ್ಲ. ನಿನ್ನ ಶರೀರವನ್ನೇ ನನಗೆ ಸಮರ್ಪಿಸು ಎಂದು ಹೇಳಿದನು. ಅತಿಥಿಯ ಮಾತನ್ನು ಕೇಳಿ ಆ ಸ್ವಾಧ್ವಿಮಣಿಗೆ ಆಜ್ಞೆ ಸಂಕೋಚ ಅನಾದರ ಹುಟ್ಟಿತು. ಆದರೆ ಕೂಡಲೇ ಅವಳಿಗೆ ತನ್ನ ಪತಿಯ ಕಟ್ಟಪ್ಪಣೆ ನೆನಪಾಯಿತು. ಅದರಿಂದ ಅವಳು ಒಂದು ಕ್ಷಣಹೊತ್ತು ಚಲವಿಚಲಳಾಗಿ ಎರಡೂ ಕಣ್ಣುಗಳನ್ನು ಮುಚ್ಚಿಕೊಂಡು ಮನೆಯ ಒಳಗೆ ಹೋದಳು. ಮರುಕ್ಷಣದಲ್ಲಿ ಹೊರಗೆ ಬಂದು. ''ನನ್ನ ಪತಿದೇವನೇ ಆಜ್ಞೆಮಾಡಿದ್ದರಿಂದ ಅವರ ಅಪ್ಪಣೆಯಂತೆ ಹಾಗೂ ನಿಮ್ಮ ಅಪೇಕ್ಷೆಯಂತೆ ಅತಿಥಿಗಳಾದ ನಿಮಗೆ ನನ್ನ ಶರೀರವನ್ನು ಸಮರ್ಪಿಸುವೆನು'' ಎಂದು ನುಡಿದಳು. ಅಷ್ಟರಲ್ಲಿ ಅದೇ ಸಮಯಕ್ಕೆ ಸರಿಯಾಗಿ ಅವಳ ಪತಿ ಸುದರ್ಶನನು ಮನೆಯ ಬಾಗಿಲಿಗೆ ಬಂದನು. ''ಮಂಗಳಾಗಿಯೇ ಎಲ್ಲಿ ಹೋದೆ? ಬೇಗ ಬಾ'' ಎಂದು ಕರೆದನು. ಆಗ ಅಲ್ಲಿಯೇ ನಿಂತ ಆ ಅತಿಥಿಯಾದ ಬ್ರಾಹ್ಮಣನು ಸುದರ್ಶನನಿಗೆ ಅಂದನು.

**ಅತಿಥಿ** :- ಧರ್ಮಾತ್ಮನಾದ ಸುದರ್ಶನ ನಾನು ನಿನ್ನ ಈ ಧರ್ಮಪತ್ನಿಯೊಡನೆ ಸಮಾಗಮವನ್ನು ಮಾಡಿದೆನು. ಅವಳು ಕೊಟ್ಟ ಸ್ತ್ರೀಸುಖದಿಂದ ನಾನು ತೃಪ್ತನಾಗಿದ್ದೇನೆ. ನಾನು ಮುಂದೆ ಏನು ಮಾಡಬೇಕು ಹೇಳು.

**ಸುದರ್ಶನ** :- ಅತಿಥಿದೇವ ನನ್ನ ಆಜ್ಞೆಯಂತೆ ನನ್ನ ಸತಿಯು ನಿನಗೆ ತನ್ನ ದೇಹವನ್ನೇ ಅರ್ಪಿಸಿದ್ದಾಳೆ ನಿನಗೆ ಇಷ್ಟ ಬಂದಂತೆ ಇವಳನ್ನು ನೀನು ಭೋಗಿಸು ನಾನು ಈಗ ಇಲ್ಲಿಂದ ಹೋಗುತ್ತೇನೆ. ಸುದರ್ಶನನ ಈ ಮಾತನ್ನು ಕೇಳಿ ಅತಿಥಿಯಾದ ಯಮಧರ್ಮನು ಪರಮ ಸಂತುಷ್ಟನಾಗಿ ಹೇಳಿದನು.

**ಯಮಧರ್ಮ** :- ಬ್ರಾಹ್ಮಣೋತ್ತಮ ಪರಮಪತಿವ್ರತೆಯಾದ ಈ ನಿನ್ನ ಧರ್ಮಪತ್ನಿಯನ್ನು ನಾನು ಮನಸ್ಸಿನಿಂದಲೂ ಅನುಭವಿಸಿಲ್ಲ. ದೇಹದಿಂದ ಮುಟ್ಟಿಲ್ಲ ಅವಳು ನನ್ನಿಂದ ಸರ್ವಥಾ ಅಸ್ಪೃಶ್ಯಳು. ಅತ್ಯಂತ ನಿರ್ದುಷ್ಟಳು. ಸತಿ ಶ್ರೇಷ್ಠಳು ನಿಮ್ಮಿಬ್ಬರ ಭಕ್ತಿಯನ್ನು ತಿಳಿಯುವದಕ್ಕಾಗಿ ನಾನು ಇಲ್ಲಿಗೆ ಬಂದೆ. ನೀವು ಮಾಡುವ ಅತಿಥಿ ಸೇವೆಯು ಒಂದು ದೊಡ್ಡವ್ರತ ಈ ಧರ್ಮದಿಂದ ನೀವಿಬ್ಬರೂ ಮೃತ್ಯುವನ್ನೇ ಜಯಿಸಿರುವಿರಿ ನಿಮ್ಮ ತಪಸ್ಸಿನ ಮಹಿಮೆ ಆಶ್ಚರ್ಯಕರ ಎಂದು ಹೇಳಿ ಯಮಧರ್ಮನು ಅಲ್ಲಿಂದ ಹೊರಟು ಹೋದನು. ಬ್ರಹ್ಮದೇವರು ತಮ್ಮ ಬಳಿಗೆ ಚಿಂತಾಕ್ರಾಂತರಾಗಿ ಬಂದ ಆ ಬ್ರಾಹ್ಮಣರಿಗೆ, ''ವಿಪ್ರವರ್ಯರೆ ಮನೆವರೆಗೆ ಬಂದ ಪರಶಿವನನ್ನು ಅರಿಯದೆ ನಿಂದಿಸಿದ ನಿಮ್ಮ ಪುಣ್ಯಬಲವು ಕ್ಷೀಣವಾಗಿದೆ. ನೀವು ಕೂಡಲೇ ಆ ಪರಮೇಶ್ವರನಿಗೆ ಶರಣು ಹೋಗಿರಿ.

**ಬ್ರಾಹ್ಮಣರು** :- ಮಹಾಮಹಿಮನಾದ ಬ್ರಹ್ಮದೇವನೆ ಮನಸ್ಸು ವಿಕಾರಗೊಂಡ ಆ ಸ್ತ್ರೀಯರು ನಮಗೆ ಬೇಡ. ನಿಂದೆಗೆ ಯೋಗ್ಯನಲ್ಲದ ಆ ಭಗವಂತನನ್ನು ತಿಳಿಯದೆ ಅಜ್ಞಾನದಿಂದ ನಾವು ನಿಂದೆ ಮಾಡಿದೆವು. ತ್ರಿಶೂಲ, ಪಿನಾಕಗಳನ್ನು ಹಿಡಿದ ಶಿವನನ್ನು ನೋಡಿಯೂ ನಾವು ಅವನಿಗೆ ಶಾಪಕೊಟ್ಟೆವು. ಅವನ ನೋಟದಿಂದಲೇ ನಮ್ಮ ಶಾಪಶಕ್ತಿಯು ನಾಶವಾಗಿ ಹೋಯಿತು. ನಾವು ಪುನಃ ಆ ಪರಮೇಶ್ವರನನ್ನು ಕಾಣಲಿಕ್ಕಾಗಿ ನಮಗೆ ಮತ್ತೆ ಕ್ರಮ ಸನ್ಯಾಸವನ್ನು ಉಪದೇಶಿಸಿ ಎಂದು ಬೇಡಿಕೊಂಡರು.

**ಬ್ರಹ್ಮ**:- ಮೊದಲು ಭಕ್ತಿಯಿಂದ ಗುರುವಿನ ಬಳಿಗೆ ಹೋಗಿ ಹನ್ನೆರಡು ವರುಷ ವೇದಶಾಸ್ತ್ರವನ್ನು ಓದಬೇಕು. ಅನಂತರ ಮದುವೆ ಮಾಡಿಕೊಂಡು ಗೃಹಸ್ಥನಾಗಿ ಮಕ್ಕಳನ್ನು ಪಡೆದು ಯಜ್ಞ, ಯಾಗ, ದೇವತಾರ್ಚನ, ಅತಿಥಿಸತ್ಕಾರ, ಜ್ಞಾನ ಪ್ರಸಾರಾದಿ ಕಾರ್ಯಗಳನ್ನು ಮಾಡಬೇಕು. ಬಳಿಕ ಮಕ್ಕಳಿಗೆ ಮನೆಯ ಭಾರವನ್ನು ಒಪ್ಪಿಸಿ ವನಕ್ಕೆ ಹೋಗಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಸೂರ್ಯಾಂತರ್ಗತ ನಾರಾಯಣನನ್ನು ಪೂಜಿಸಬೇಕು. ಹನ್ನೆರಡು ವರುಷ ಅಥವಾ ಹನ್ನೆರಡು ತಿಂಗಳು, ಹನ್ನೆರಡು ಪಕ್ಷ, ಕೊನೆಗೆ ಹನ್ನೆರಡು ದಿವಸಗಳಾದರೂ ಮೌನವ್ರತದಿಂದ ಕೇವಲ ಕ್ಷೀರಪಾನಮಾಡಿ ಸಕಲ ದೇವತೆಗಳನ್ನು ಪೂಜೆಮಾಡಬೇಕು. ಬಳಿಕ ಸರ್ವಸಂಗಪರಿತ್ಯಾಗ ಸಲಕರಣೆಗಳನ್ನು ಮಂತ್ರೋಚ್ಚಾರಣ ಪೂರ್ವಕವಾಗಿ ಹೋಮಮಾಡಿ ಅಗ್ನಿಗೆ ಅರ್ಪಿಸಿ ಬಿಡಬೇಕು. ಬ್ರಾಹ್ಮಣರಿಗೆ ತನ್ನ ಸರ್ವಸ್ವವನ್ನು ದಾನಮಾಡಿ ಗುರುವಿನ ಮುಖಾಂತರ ಸನ್ಯಾಸಗ್ರಹಣ ಮಾಡಬೇಕು. ಜುಟ್ಟಿನೊಡನೆ ತಲೆಯ ಮೇಲಿನ ಕೂದಲುಗಳನ್ನೆಲ್ಲ ಮುಂಡನಮಾಡಿ

ತೆಗೆಸಬೇಕು. ಯಜ್ಞೋಪವೀತವನ್ನು ವಿಸರ್ಜನೆಮಾಡಿ ಭೂಸ್ವಾಃ ಮೊದಲಾದ ಐದು ಮಂತ್ರಗಳಿಂದ ನೀರಿನಲ್ಲಿ ಹೋಮಮಾಡಬೇಕು.

ಹೀಗೆ ವಿಧಿ ಪೂರ್ವಕವಾಗಿ ಮೋಕ್ಷಪ್ರಾಪ್ತಿಯ ಉದ್ದೇಶದಿಂದ ಯತ್ಯಾಶ್ರಮವನ್ನು ಸ್ವೀಕರಿಸಿದ ಬಳಿಕ ಕೆಲವು ವರುಷ ಕೇವಲ ನೀರು,ಎಲೆ, ಹಾಲು, ಹಣ್ಣುಗಳಿಂದ ನಿರಶನವ್ರತವನ್ನು ಪಾಲನೆಮಾಡುತ್ತ ಒಂದು ವರುಷ ಅಥವಾ ಆರು ತಿಂಗಳವರೆಗೆ ಅತ್ಯಂತ ಪರಿಮಿತವಾದ ಅಲ್ಪಹಾರದಿಂದ ಇದ್ದು ವ್ರತಾಚರಣೆಯನ್ನು ಮಾಡಬೇಕು.

ಹೀಗೆ ಯತಿಯಾದವನು ಸ್ವಧರ್ಮಾಚರಣೆ, ಸರ್ವಸಂಗ ಪರಿತ್ಯಾಗ ಶಿವೋಪಾಸನೆ ಮಾಡುತ್ತ ಇದ್ದರೆ ಅವರಿಗೆ ಶಿವ ಸಾಯುಜ್ಯವು ಪ್ರಾಪ್ತವಾಗುವದು.

*ಲಿಂಗಮಹಾಪುರಾಣ ಪೂರ್ವಾರ್ಧದ ಸುದರ್ಶನನ ಕಥೆ ಸನ್ಯಾಸ ಕ್ರಮ*
*ಎಂಬ ಇಪ್ಪತ್ತೊಂಬತ್ತನೆಯ ಅಧ್ಯಾಯ ಸಮಾಪ್ತವಾದುದು*



## ಶ್ವೇತೋಪಾಖ್ಯಾನ

ಅಧ್ಯಾಯ - ೩೦

**ಬ್ರಾಹ್ಮಣರು :-** ಬ್ರಹ್ಮದೇವ ನಮಗೆ ಶ್ವೇತಮುನಿಯ ಚರಿತೆಯನ್ನು ನಿರೂಪಿಸು.

ಬ್ರಹ್ಮ:- ಶ್ವೇತ ಋಷಿಯು ತನ್ನ ಆಯುಷ್ಯವು ಮುಗಿದು ಹೋದ ಬಳಿಕ ಪರ್ವತದ ಗುಹೆಯಲ್ಲಿ ಇದ್ದು ಏಕಾಗ್ರಚಿತ್ತದಿಂದ ಶಿವನನ್ನು ಭಕ್ತಿಯಿಂದಪೂಜಿಸಿದನು. ಭಕ್ತಿಯಿಂದ ಸ್ತೋತ್ರವನ್ನು ಮಾಡಿದನು. ರುದ್ರಾಧ್ಯಾಯದ ನಮಸ್ತೇ ರುದ್ರಮನ್ಯವೇ, ಮೊದಲಾದ ಮಂತ್ರಗಳನ್ನು ಅವಿರತವಾಗಿ ಪಠಣಮಾಡಿದನು. ಅವನ ಆಯುಷ್ಯವು ಮುಗಿದದ್ದರಿಂದ ಮರಣ ಕಾಲವು ಬಂದಿದೆ. ಎಂದು ತಿಳಿದು ಸಾಕ್ಷಾತ್ ಯಮಧರ್ಮನೆ ಅವನ ಪ್ರಾಣವನ್ನು ತೆಗೆದುಕೊಳ್ಳಲು ಸಮೀಪಕ್ಕೆ ಬಂದಾಗ ಶ್ವೇತ್ರಮುನಿಯು **''ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ''** ಎಂಬ ಮಂತ್ರವನ್ನು ಜಪಿಸುತ್ತ ಮಹಾದೇವನನ್ನು ಪೂಜಿಸುತ್ತಿದ್ದನು. ಸಮಗ್ರ ಸಂಸಾರಕ್ಕೆ ತುಷ್ಟಿಯನ್ನು ಪುಷ್ಟಿಯನ್ನು ಕೊಡುವವನು ಆ ಪರಶಿವ. ಅವನು ಮೃತ್ಯುವಿಗೂ ಮೃತ್ಯುವು. ಮೃತ್ಯುಂಜಯ ಮಹಾದೇವನನ್ನು ಭಜಿಸುವ ನಂಬಿರುವ ನನಗೆ ಮೃತ್ಯುವು ಏನು ಮಾಡುವದು? ಈಗ ನಾನು ಮೃತ್ಯುವಿಗೆ ಮೃತ್ಯುಸ್ವರೂಪನಾಗಿದ್ದೇನೆ. ಎಂಬ ಅರ್ಥವುಳ್ಳ ಆ ಮಂತ್ರವನ್ನು ಗಟ್ಟಿಯಾಗಿ ಪಠಿಸುತ್ತ ಶಿವಪೂಜಾಪರನಾಗಿ ನಿಂತುಕೊಂಡನು.

ಆಗ ಲೋಕಭಯಂಕರನಾದ ಯಮಧರ್ಮನು ಆ ಶ್ವೇತಮುನಿಗೆ. ''ಬ್ರಾಹ್ಮಣಾ ನಿನ್ನ ಆಯುಷ್ಯ ತೀರಿಹೋಗಿದೆ. ಈಗ ಈ ನಿನ್ನ ತ್ರ್ಯಂಬಕಮಂತ್ರ ಪಠನೆಯಿಂದ ಏನು ಪ್ರಯೋಜನೆ? ಮೃತ್ಯುಗ್ರಸ್ತರಾದವರನ್ನು ಬ್ರಹ್ಮ ವಿಷ್ಣು ಮಹೇಶ್ವರ ತ್ರಿಮೂರ್ತಿಗಳಲ್ಲಿ ಯಾರೂ ಕಾಪಾಡಲು ಸಮರ್ಥರಲ್ಲ. ನಿನ್ನ ಆಯುಷ್ಯವು ಮುಗಿದು ಹೋದದ್ದರಿಂದ ಈ ಕ್ಷಣದಲ್ಲಿ ನಾನು ನಿನ್ನನ್ನು ಯಮಲೋಕಕ್ಕೆ ಕರೆದೊಯ್ಯುವೆನು. ಆಗ ಯಮನ ಈ ಭಯಂಕರವಾದ ಮಾತನ್ನು ಕೇಳಿ. ''ಶಿವ ಶಿವ, ಶಂಕರ ಮಹಾದೇವ ನೀನೇ ನನ್ನನ್ನು ಕಾಪಾಡಬೇಕು.'' ಎಂದು ಬೇಡಿಕೊಂಡು ಯಮಧರ್ಮನನ್ನು ಕುರಿತು ''ಯಮಧರ್ಮನೇ

ನನಗೆ ಮಹಾದೇವನೇ ಒಡೆಯನಾಗಿರುವಾಗ ನಿನ್ನದೇನು ಭೀತಿ? ನನ್ನಂಥ ಭಕ್ತರ ರಕ್ಷಣೆಗಾಗಿ ಆ ಮಹಾಶಿವನು ಜಾಗರೂಕನಾಗಿರುವಾಗ ನಿನ್ನ ನೇಮದಿಂದ ಏನಾಗುವದು? ನೀನು ಬಂದಹಾಗೆ ತಿರುಗಿ ಹೋಗು'' ಎಂದು ಹೇಳಿದನು.

ಶ್ವೇತಮುನಿಯ ಈ ಮಾತುಗಳನ್ನು ಕೇಳಿ ಪಾಶಾಯುಧವನ್ನು ಕೈಯಲ್ಲಿಹಿಡಿದ ಯಮಧರ್ಮನು ಕೋಪದಿಂದ ಸಿಂಹನಾದವನ್ನು ಮಾಡಿ ಮತ್ತೆ ಮತ್ತೆ ತನ್ನ ಭುಜವನ್ನು ತಟ್ಟಿಕೊಳ್ಳುತ್ತ ಆಯುಷ್ಯವು ತೀರಲಿಕ್ಕೆ ಬಂದ ಆ ಶ್ವೇತ ಮುನಿಯನ್ನು ತನ್ನ ಹಗ್ಗದಿಂದ ಬಿಗಿದು. ''ಬ್ರಹ್ಮ ಋಷಿಯೇ ಶ್ವೇತನೆಂಬ ಜೀವನಾದ ನಿನ್ನನ್ನು ಯಮಲೋಕಕ್ಕೆ ತೆಗೆದು ಕೊಂಡು ಹೋಗಬೇಕೆಂದು ನಾನು ಬಿಗಿದು ಕಟ್ಟಿರುವೆನು ನಿನ್ನ ಆ ದೇವದೇವನಾದ ರುದ್ರನು ಏನು ಮಾಡಿದನು? ಆ ನಿನ್ನ ಶಿವನು ಎಲ್ಲಿ? ನಿನ್ನ ಭಕ್ತಿ ಎಲ್ಲಿ? ನಿನ್ನ ದೇವನಾದ ಆ ರುದ್ರನು ಈ ಲಿಂಗದಲ್ಲಿ ಚಲಿಸದೇ ಇರುವನು. ಶ್ವೇತನೆ ನಿನ್ನ ರುದ್ರನು ಈ ಲಿಂಗದಲ್ಲಿ ಚಲಿಸದೇ ಇರುವನು. ಅಣು ಪ್ರಮಾಣದ ಈ ಲಿಂಗದಲ್ಲಿ ಚಲಿಸದೆ ಇರುವ ಆ ಶಿವನನ್ನು ಮಹೇಶ್ವರನೆಂದು ಹೇಗೆ ಪೂಜಿಸುವದು ? ಹೀಗೆ ಯಮ ಹಾಗೂ ಶ್ವೇತ ಬ್ರಾಹ್ಮಣರಲ್ಲಿ ಸಂಭಾಷಣೆ ನಡೆದಾಗ ಮಹಾದೇವನು ಪಾರ್ವತಿ, ನಂದಿ, ಗಣೇಶ್ವರ ಸಹಿತನಾಗಿ ಆ ಲಿಂಗದಿಂದ ವ್ಯಕ್ತನಾದನು. ಶಿವನನ್ನು ನೋಡಿದ ಕೂಡಲೆ ಯಮನು ಭಯಭೀತನಾಗಿ ಶ್ವೇತಮುನಿಯ ಜೀವವನ್ನು ತಕ್ಷಣದಲ್ಲಿಯೇ ಬಿಟ್ಟುಬಿಟ್ಟನು. ಕಣ್ಣೀರು ಸುರಿಸುತ್ತ ಶ್ವೇತ ಮುನಿಯ ಎದುರಿಗೆ ಯಮನು ಬಿದ್ದು ಬಿಟ್ಟನು. ಶ್ವೇತ ಮುನಿಗೆ ತನ್ನನ್ನು ಸಾಯಿಸ ಬಂದ ಯಮಧರ್ಮನು ತಾನೇ ಮರಣಹೊಂದಿ ಬಿದ್ದುದನ್ನು ನೋಡಿ ಸಂತೋಷವಾಗಿ ಗಟ್ಟಿಯಾಗಿ ಧ್ವನಿಮಾಡಿದನು. ಮತ್ತು ಪಾರ್ವತಿ ಪರಮೇಶ್ವರರಿಗೆ ನಮಸ್ಕಾರಮಾಡಿದನು. ಋಷಿಗಳೆಲ್ಲರೂ ಸಂತುಷ್ಟರಾದರು ಗಗನಚಾರಿಗಳಾದ ಸಿದ್ಧಗಂಧರ್ವರು ಶಿವನ ಮೇಲೆಯೂ ಶ್ವೇತಮುನಿಯ ಮೇಲೆಯೂ ಪುಷ್ಪವೃಷ್ಟಿಯನ್ನು ಮಾಡಿದರು.

ಮರಣಹೊಂದಿದ ಯಮನನ್ನು ನೋಡಿ ಶಿಲಾದ ಪುತ್ರನಾದ ನಂದೀಶ್ವರನಿಗೆ ಪರಮಾಶ್ಚರ್ಯವಾಯಿತು. ಆಗ ಅವನು ''ಪರಶಿವನಿಗೆ ಯಮನಿಗೆ ಪುನರ್ಜನ್ಮವನ್ನು ದಯಪಾಲಿಸಿ ಶ್ವೇತಮುನಿಗೆ ವರವನ್ನು ನೀಡು'' ಎಂದು ಪ್ರಾರ್ಥಿಸಿದನು. ಅವನ ಬಿನ್ನಹವನ್ನು ಮನ್ನಿಸಿ ಪರಮೇಶ್ವರನು ತಕ್ಷಣದಲ್ಲಿ ಯಮಧರ್ಮನನ್ನು ಬದುಕಿಸಿದನು. ಮತ್ತು ಶ್ವೇತ ಮುನಿಯಮೇಲೆ ಪರಮಾನುಗ್ರಹವನ್ನುಮಾಡಿ ಅವನಿಗೆ ಈಕ್ಷಿತವಾದ ವರವನ್ನುನೀಡಿ ಅಂತರ್ಧಾನವನ್ನು ಹೊಂದಿದನು. ಆದುದರಿಂದ ಎಲ್ಲರಿಗೂ ಭಕ್ತಿ ಮುಕ್ತಿಗಳನ್ನು ದಯಪಾಲಿಸುವ ಆ ಮೃತ್ಯುಂಜಯನನ್ನೇ ಎಲ್ಲರೂ ಭಕ್ತಿಯಿಂದ ಪೂಜಿಸಬೇಕು. ಆ ಶಿವನಲ್ಲಿ ಪರಮಭಕ್ತಿಯು ಕೇವಲ ದಾನ, ಧರ್ಮ, ತಪಸ್ಸು, ವಿದ್ಯೆ, ಯಜ್ಞ, ಹೋಮ, ವ್ರತ, ವೇದಾಭ್ಯಾಸ, ಯೋಗಾಭ್ಯಾಸದಿಂದ ಮಾತ್ರ ಮುಕ್ತರಾಗಬಹುದು. ಆ ಶಿವನಲ್ಲಿ ಪರಮಭಕ್ತಿಯು ಆ ಶಿವನ ಸಂಪೂರ್ಣ ಅನುಗ್ರಹವಿದ್ದರೆ ಮಾತ್ರ ಉಂಟಾಗುವದು.

*ಲಿಂಗ ಮಹಾಪುರಾಣ ಪೂರ್ವಾರ್ಧದ ಶ್ವೇತೋಪಾಖ್ಯಾನ*
*ಎಂಬ ಮೂವತ್ತನೆಯ ಅಧ್ಯಾಯ ಮುಗಿದುದು*

—○—

**ಸನತ್ಕುಮಾರ :-** ನಂದೀಶ್ವರನೇ ದೇವದಾರುವನದಲ್ಲಿ ಇದ್ದ ಋಷಿಮುನಿಗಳು ಹೇಗೆ ಅವನಿಗೆ ಶರಣು ಎಂದರು? ಎಂಬುದನ್ನು ನಮಗೆ ಹೇಳು.

**ನಂದೀಶ್ವರ :-** ದೇವದಾರು ವನದಲ್ಲಿ ತಪೋನಿರತರಾದ ಆ ಋಷಿಗಳಿಗೆ ಬ್ರಹ್ಮದೇವನು ಹೇಳಿದನು.

**ಬ್ರಹ್ಮದೇವ :-** ಮಹಾಮಹಿಮನಾದ ಪರಮೇಶ್ವರನೇ ಮಹೇಶ್ವರ ಎಂದು ತಿಳಿಯಿರಿ. ಅವನಿಗಿಂತ ಶ್ರೇಷ್ಠರಾದ ದೇವತೆಗಳು ಯಾರು ಇಲ್ಲ. ಸೃಷ್ಟಿಕಾಲದಲ್ಲಿ ಅವನೇ ಬ್ರಹ್ಮನಾಗಿ ಸೃಷ್ಟಿಮಾಡುವನು. ಪ್ರಳಯಕಾಲದಲ್ಲಿ ಯಮನಾಗಿ ಸಕಲ ಜೀವರನ್ನು ಸಂಹರಿಸುವನು. ಇವನು ಕೃತಯುಗದಲ್ಲಿ ಯೋಗಿ ಸ್ವರೂಪನೂ, ತೇತ್ರಾಯುಗದಲ್ಲಿ ಯಜ್ಞಸ್ವರೂಪನೂ, ದ್ವಾಪರಯುಗದಲ್ಲಿ ಕಾಲಾಗ್ನಿ ಸ್ವರೂಪನು, ಕಲಿಯುಗದಲ್ಲಿ ಧರ್ಮಧ್ವಜನೂ ಆಗಿರುವನು. ಲಿಂಗಮೂರ್ತಿಯಾದ ಆ ಪರಮೇಶ್ವರನನ್ನು ಲಿಂಗದಲ್ಲಿಯೇ ಆರಾಧಿಸಬೇಕು. ಚಕ್ರಾಕಾರ ಒಳಗೂ ಹೊರಗೂ ಚಚ್ಚೌಕ ಅಥವಾ ಎಂಟುಮೂಲೆಗಳು ಇಲ್ಲವೆ ಗುಂಡಾದ ಆಕಾರದಿಂದ ಕೂಡಿದ ಲಿಂಗವು ಪೂಜಾಯೋಗ್ಯವಾಗಿದೆ. ಸಮಾಧಿಯಿಂದ ಕೂಡಿದ ಜೀವನದಲ್ಲಿ ಧ್ಯಾನ ರೂಪದಿಂದ ನೆಲೆಸಿದ ಲಿಂಗವೇ ಬ್ರಹ್ಮಸ್ವರೂಪವಾದದ್ದು ಅಂಥಹ ಶಿವನನ್ನು ಕಾಮಕ್ರೋಧಾದಿಗಳಿಂದರಹಿತರಾದ ಜಿತೇಂದ್ರಿಯರಾದ ಶಿವಭಕ್ತರು ಶಾಸ್ತ್ರಾನುಸಾರವಾಗಿ ಸಮಸ್ತ ಲಕ್ಷಣಗಳಿಂದ ಕೂಡಿದ ಲಿಂಗದಲ್ಲಿ ಅವಾಹನೆ ಮಾಡಿ ಪೂಜಿಸಬೇಕು. ಲಿಂಗವು ಹೆಬ್ಬೆರಳಿನ ಗಾತ್ರಕ್ಕಿಂತ ಅತ್ಯಂತ ಮಂಗಳಕರ ಗುಂಡಗಿರುವ ಲಿಂಗವು ಇಷ್ಟಾರ್ಥಪ್ರದ. ಚೌಕಾಕಾರ, ಅಷ್ಟಮುಖ, ಹದಿನಾರುಮುಖದ ಲಿಂಗವಾದರೂ ಪೂಜೆಗೆ ಅರ್ಹವಾಗಿದೆ. ಲಿಂಗದ ವೇದಿಕೆಯು ಎಂದರೆ ಜಗಲಿಯಂತಿರುವ ಆಧಾರವು ಲಿಂಗದ ಎರಡರಷ್ಟಿರಬೇಕು. ಗೋಮುಖಿಯು ಮೂರನೇ ಒಂದು ಭಾಗದಷ್ಟಿರಬೇಕು. ವೇದಿಕೆಯ ಸುತ್ತಲೂ ಗೋಧಿಯ ಕಾಳಿನಷ್ಟು ಗಾತ್ರದ ಪಟ್ಟಿಯು ಸಮಸ್ತ ಲಕ್ಷಣಗಳಿಂದ ಕೂಡಿದುದಾಗಿರಬೇಕು.

ಬೆಳ್ಳಿ, ಬಂಗಾರ, ಶಿಲಾ, ತಾಮ್ರ ಇವುಗಳಿಂದ ಲಿಂಗವನ್ನುಮಾಡಿ ಆ ಲಿಂಗದ ಮೂರರಷ್ಟು ವಿಸ್ತಾರ ಉಳ್ಳ ವೇದಿಕೆಯನ್ನು ರಚಿಸಬೇಕು. ಆ ಲಿಂಗದ ವೇದಿಕೆಯ ನಡುವೆ ಕಲಶವನ್ನು ಪ್ರತಿಷ್ಠೆಮಾಡಬೇಕು. ಕಲಶದಲ್ಲಿ ಸುವರ್ಣವನ್ನು ಹಾಕಿ ಪಂಚಾಕ್ಷರಿಬೀಜಮಂತ್ರದಿಂದ ಮತ್ತು ಪಂಚಬ್ರಹ್ಮಮಂತ್ರದಿಂದಲೂ ಅಭಿಮಂತ್ರಿಸಿ ಆ ನೀರಿನಿಂದ ಲಿಂಗಕ್ಕೆ ಅಭಿಷೇಕವನ್ನು ಮಾಡಬೇಕು. ಹೀಗೆ ನಿಮ್ಮ ಶಕ್ತ್ಯಾನುಸಾರವಾಗಿ ಲಿಂಗಪೂಜೆಯನ್ನು ಮಾಡಿ ಶೂಲಪಾಣಿಯಾದ ಪರಮೇಶ್ವರನನ್ನೇ ಶರಣು ಹೊಂದಿರಿ ಅದರಿಂದ ನಿಮಗೆ ಶಿವದರ್ಶನವಾಗುವದು. ಈ ರೀತಿಯಾಗಿ ಬ್ರಹ್ಮದೇವರು ಉಪದೇಶಮಾಡಿದನಂತರ ಆ ಎಲ್ಲ ಋಷಿಮುನಿಗಳು ಬ್ರಹ್ಮನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ತಮ್ಮ ದೇವದಾರುವನಕ್ಕೆ ತೆರಳಿದರು. ಬ್ರಹ್ಮೋಪದೇಶದಂತೆ

ಆ ಎಲ್ಲ ಋಷಿಗಳು ಗುಹಾ, ನದಿತೀರ, ದರ್ಭಾಸನಗಳಲ್ಲಿ ಕುಳಿತು ತಪಸ್ಸು ಮಾಡಿದರು. ಕೆಲವರು ಹೆಬ್ಬೆರಳಿನ ತುದಿಗಾಲಿನ ಮೇಲೆ ನಿಂತು, ಕೆಲವರು ವೀರಾಸನದಲ್ಲಿ ಕುಳಿತು ಒಂದು ವರುಷದವರೆಗೆ ಶಿವೋಪಾಸನೆ, ಶಿವತಪಸ್ಸುಗಳನ್ನು ಮಾಡಿದರು. ಒಂದು ವಸಂತ ಋತುವಿನಲ್ಲಿ ಮಹೇಶನು ಆ ದೇವದಾರುವನಕ್ಕೆ ಆಗಮಿಸಿದ.

ಆ ಪರಮೇಶ್ವರನು ಮೈಗೆಲ್ಲ ಭಸ್ಮವನ್ನು ಬಳಿದುಕೊಂಡು ದಿಗಂಬರನಾಗಿ ವಿಕಾರವಾದ ವೇಷದಿಂದ ಕೈಯಲ್ಲಿ ಕೊಳ್ಳಿಯನ್ನು ಹಿಡಿದುಕೊಂಡು ಕಣ್ಣು ಕೆಂಪಗೆ ಮಾಡಿಕೊಂಡು ಭಯಂಕರವಾಗಿ ನಗುತ್ತ, ಗಾನಮಾಡುತ್ತ, ಕುಣಿಯುತ್ತ, ಗಟ್ಟಿಯಾಗಿ ಧ್ವನಿಮಾಡುತ್ತ ಆ ಋಷ್ಯಾಶ್ರಮಗಳಲ್ಲಿ ಭಿಕ್ಷೆಬೇಡುತ್ತ ಬರುತ್ತಿದ್ದನು. ಆಗ ಮುನಿಗಳೆಲ್ಲರು ಏಕಾಗ್ರ ಚಿತ್ತದಿಂದ ಆ ದೇವೇಶನನ್ನು ನೀರು, ಪುಷ್ಪ, ಧೂಪ, ದೀಪ ಗಂಧಗಳಿಂದ ಪೂಜಿಸಿದರು. ಸ್ತೋತ್ರಮಾಡಿದರು ಪ್ರಾರ್ಥಿಸಿದರು.

ದೇವದೇವನೆ ನಾವು ಅಜ್ಞಾನದಿಂದ ಕಾಯಾ, ವಾಚಾ ಮನಸಾಮಾಡಿದ ಅಪರಾಧಗಳೆಲ್ಲವನ್ನೂ ನೀನು ಕ್ಷಮಿಸು. ಚಿತ್ರವಿಚಿತ್ರವಾದ ನಿನ್ನ ಚರಿತ್ರೆಗಳು ರಹಸ್ಯವಾಗಿವೆ. ಬ್ರಹ್ಮಾದಿದೇವತೆಗಳಿಂದಲೂ ಅವುಗಳನ್ನು ತಿಳಿಯಲು ಸಾಧ್ಯವಿಲ್ಲ.

**ನಮೋ ಭವಾಯ ಭವ್ಯಾಯ ಭಾವನಾಯೋದ್ಭವಾಯಚ ।**
**ಅನಂತ ಬಲವೀರ್ಯಾಯ ಭೂತಾನಾಂ ಪತಯೇ ನಮಃ**
**ಸಂಹರ್ತ್ರೇಚ ಪಿಶಂಗಾಯ ಅವ್ಯಯಾಯ ವ್ಯಯಾಯ ಚ**
**ಗಂಗಾ ಸಲೀಲಧಾರಾಯ ಆಧಾರಾಯ ಗುಣಾತ್ಮನೇ ॥**
**ತ್ರ್ಯಂಬಕಾಯ ತ್ರಿನೇತ್ರಾಯ ತ್ರಿಶೂಲವರಧಾರಿಣೇ ।**
**ಕಂದರ್ಪಾಯ ಹುತಾಶಾಯ ನಮೋಽಸ್ತು ಪರಮಾತ್ಮನೇ ॥**
**ಶಂಕರಾಯ ವೃಷಾಂಕಾಯ ಗಣಾನಾಂ ಪತಯೇ ನಮಃ ।**
**ದಂಡಹಸ್ತಾಯ ಕಾಲಾಯ ಪಾಶಹಸ್ತಾಯ ವೈ ನಮಃ ॥**

ಈ ರೀತಿಯಾಗಿ ಆ ಋಷಿಗಳೆಲ್ಲರು ಸ್ತೋತ್ರಮಾಡಿ, 'ದೇವೇಶ ನಾವು ಹಿಂದೆ ನಿನ್ನನ್ನು ಹೇಗೆ ನೋಡುತ್ತಿದ್ದವೊ. ಆ ರೂಪದಿಂದಲೇ ನಿನ್ನ ದರ್ಶನವನ್ನು ಕರುಣಿಸು ಎಂದು ಬೇಡಿಕೊಂಡರು. ಅವರ ಈ ಸ್ತೋತ್ರದಿಂದ ದೃಷ್ಟಿಯನ್ನು ಅನುಗ್ರಹಿಸಿ ಕೊಟ್ಟನು. ದೇವದಾರು ವನನಿವಾಸಿಗಳಾದ ಮುನಿಗಳೆಲ್ಲರು ಮುಕ್ಕಣ್ಣ ಕೊಟ್ಟ ದಿವ್ಯದೃಷ್ಟಿಯಿಂದ ಆ ದೇವದೇವೋತ್ತಮನನ್ನು ನೋಡಿ ಕೃತಾರ್ಥರಾಗಿ ಸಂತೋಷಭರಿತರಾಗಿ ಮತ್ತೆ ಸ್ತೋತ್ರ ಮಾಡಿದರು.

*ಲಿಂಗಮಹಾಪುರಾಣದ ಪೂರ್ವಾರ್ಧದ ಶಿವ ಪೂಜೆಯ ಕ್ರಮ ನಿರೂಪಣೆ ಎಂಬ ಮುವತ್ತೊಂದನೆಯ ಅಧ್ಯಾಯ ಮುಗಿದದು.*

—o—

## ದಾರುಕವನಋಷಿಗಳ ಶಿವಪ್ರಾರ್ಥನೆ

ಅಧ್ಯಾಯ - ೩೨

**ಋಷಿಯ ಉವಾಚಃ :-**

**ನಮೋ ದಿಗ್ವಾಸಸೇ ನಿತ್ಯಂ ಕೃತಾಂತಾಯ ತ್ರಿಶೂಲಿನೇ।**
**ವಿಕಟಾಯ ಕರಾಲಾಯ ಕರಾಲ ವದನಾಯಚ॥**

**ಅರೂಪಾಯ ಸುರೂಪಾಯ ವಿಶ್ವರೂಪಾಯ ತೇ ನಮಃ।**
**ಕಟಂಕಟಾಯ ರುದ್ರಾಯ ಸ್ವಾಹಾಕಾರಾಯ ವೈ ನಮಃ॥**

ದಿಕ್ಕುಗಳೇ ಬಟ್ಟೆಗಳಾಗಿರುವ, ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲ ಸಂಹಾರ ಮಾಡುವ, ತ್ರಿಶೂಲವನ್ನು ಧರಿಸಿದ, ಸಂಹಾರವೆಂಬ ಮರಕ್ಕೆ ಕೊಡಲಿಯಂತಿರುವ, ಭಯಂಕರವಾದ ಮುಖವುಳ್ಳ ನಿನಗೆ ಸರ್ವದಾ ನಮಸ್ಕಾರ. ಯಾವುದೇ ಪ್ರಾಕೃತ ರೂಪವಿಲ್ಲದ ಅತ್ಯಂತ ಸುಂದರವಾದ ಸ್ವಸ್ವರೂಪವುಳ್ಳ ಪ್ರಪಂಚ ಸ್ವರೂಪನಾದ ಗಜಾನನನ ತಲೆಯ ಮೇಲೆ ವರದಹಸ್ತಇಟ್ಟಿರುವ ಯಜಮಾನ ಸ್ವರೂಪನಾದ ಸರ್ವಾತ್ಮಕನಾದ ಮಹಾರುದ್ರ ದೇವರಿಗೆ ನಮ್ಮ ನಮಸ್ಕಾರ.

'ಭಗವಾನ್ ಪರಮೇಶ್ವರ ನೀನು ದೇವತೆಗಳಲ್ಲಿ ಬ್ರಹ್ಮ, ಏಕಾದಶರುದ್ರದಲ್ಲಿ ನೀಲಲೋಹಿತ, ಸಾಂಖ್ಯಶಾಸ್ತ್ರದಲ್ಲಿ ಪುರುಷ, ಪರ್ವತಗಳಲ್ಲಿ ಮೇರು. ನಕ್ಷತ್ರಗಳಲ್ಲಿ ಚಂದ್ರ, ಋಷಿಗಳಲ್ಲಿ ವಸಿಷ್ಠ, ದೇವತೆಗಳಲ್ಲಿ ಇಂದ್ರ, ವೇದಗಳಲ್ಲಿ ಓಂಕಾರ, ಪಶುಗಳಲ್ಲಿ ಸಿಂಹ, ಗ್ರಾಮ್ಯ ಪಶುಗಳಲ್ಲಿ ಎತ್ತಿನ ಸ್ವರೂಪನಾಗಿದ್ದು ಜನರು ಮಾಡುವ ಪೂಜೆಯನ್ನು ಸ್ವೀಕರಿಸುವೆ.

ಪ್ರಳಯಕಾಲವು ಪ್ರಾಪ್ತವಾದಾಗ ನೀನು ನಿನ್ನ ಕೈಯ್ಯಿಂದಲೆ ನಿನ್ನಹಣೆಯನ್ನು ಉಜ್ಜಿಕೊಂಡು ಅಗ್ನಿಯನ್ನು ಹುಟ್ಟಿಸಿದೆ. ಆಗ ಅಗ್ನಿಯು ಲೋಕಗಳನ್ನೆಲ್ಲ ಆವರಿಸಿತು. ಆ ಅಗ್ನಿಯಿಂದ ಚರಾಚರ ಪ್ರಾಣಿಗಳೆಲ್ಲವು ಸುಟ್ಟುಹೋಗುತ್ತಿದ್ದವು. ಆಗ ನೀನು ಚಂದ್ರನ ರೂಪದಿಂದ ಎಲ್ಲ ಕಡೆಗೂ ನೀರನ್ನು ಸಿಂಪಡಿಸಿ ಎಲ್ಲ ಪ್ರಾಣಿಗಳನ್ನು ಅಗ್ನಿಯಿಂದ ಕಾಪಾಡಿ ಎಲ್ಲರೂ ತಣ್ಣಗೆ ಉಳಿದು ಶಾಂತರಾಗಿ ಬದುಕುವಂತೆ ಮಾಡಿದೆ ನಾವು ನಿನ್ನ ಆಜ್ಞೆಯಂತೆ ನಡೆಯುತ್ತೇವೆ ನಮಗೆ ಅಪ್ಪಣೆಯನ್ನು ಕೊಡು ಎಂದು ಬೇಡಿಕೊಂಡು ನಮಸ್ಕಾರ ಮಾಡಿದರು.

*ಇತಿ ಲಿಂಗಮಹಾಪುರಾಣ ಪೂರ್ವಾರ್ಧದ ದಾರುಕವನಋಷಿಗಳುಮಾಡಿದ ಶಿವಪ್ರಾರ್ಥನೆ ಎಂಬ ಮೂವತ್ತೆರಡನೆಯ ಅಧ್ಯಾಯ ಮುಗಿದುದು*

—o—

## ಋಷಿವಾಕ್ಯ

**ಅಧ್ಯಾಯ - ೩೩**

**ಮಹಾದೇವ :-** ಮುನಿಶ್ರೇಷ್ಠರೆ ಜಗತ್ತಿನಲ್ಲಿರುವ ಸ್ತ್ರಿಯರೆಲ್ಲರೂ ನನ್ನ ಶರೀರದಿಂದ ಹುಟ್ಟಿದ ಪ್ರಕೃತಿ ಸ್ವರೂಪರಾದ ದೇವಿಯರು. ಪುರುಷರೆಲ್ಲರೂ ನನ್ನ ದೇಹದಲ್ಲಿ ಹುಟ್ಟಿದ ಪುರುಷ ಸ್ವರೂಪರೇ ಆದುದರಿಂದ ನನ್ನ ಸಂಬಂಧವಾದ ಸ್ತ್ರೀ ಪುರುಷರಿಂದಲೇ ಈ ಪ್ರಪಂಚವು ಸೃಷ್ಟಿಯಾಗಿರುವದು. ನನ್ನ ಭಕ್ತರಾದ ಕೆಲವರು ಕಾಮಕ್ರೋಧಾದಿಗಳಿಲ್ಲದೆ ನನ್ನನ್ನೇ ಭಜಿಸುತ್ತ ಯತಿಗಳಾಗಿ ದಿಗಂಬರರಾಗಿ ಸಂಚರಿಸುವರು. ಯಾವಾಗಲೂ ನನ್ನ ಧ್ಯಾನದಲ್ಲೇ ಆಸಕ್ತರಾಗಿರುವದರಿಂದ ಹುಚ್ಚರಂತೆ, ಬಾಲಕರಂತೆ, ಅಜ್ಞಾನಿಗಳಂತೆ ತೋರುವರು. ಆದರೆ ಅವರು ಶ್ರೇಷ್ಠರಾದ ಶಿವಭಕ್ತರು. ಅಂಥ ದಿಗಂಬರರನ್ನು ಯತಿಗಳನ್ನು ನಿಂದಿಸಬಾರದು. ಪ್ರತಿದಿನವೂ ಭಸ್ಮಧಾರಣೆಮಾಡಿಕೊಂಡು ಇಂದ್ರಿಯಗಳನ್ನು ನಿಗ್ರಹಿಸಿ ಧ್ಯಾನಾಸಕ್ತರಾಗಿ ಮಹಾದೇವನಲ್ಲಿಯೇ ಭಕ್ತಿಯುಳ್ಳವರಾಗಿರುವರೊ ಮತ್ತು ಯತಿ ಹಾಗೂ ಬ್ರಹ್ಮ ಚರ್ಯದಿವ್ರತಗಳನ್ನು ಪಾಲನೆಮಾಡುತ್ತ ಊರ್ಧ್ವರೇತಸ್ಕರಾಗಿ ಮನೋ ವಾಕ್ ಕಾಯಗಳೆಂಬ ತ್ರಿಕರಣಗಳಿಂದ ಮಹಾದೇವನನ್ನು ಪೂಜಿಸುತ್ತಲಿರುವರೊ ಅವರೆಲ್ಲರು ಈ ಪಂಚಭೌತಿಕ ಶರೀರಗಳನ್ನು ಬಿಟ್ಟಮೇಲೆ ನನ್ನ ರುದ್ರಲೋಕಕ್ಕೆ ಬರುವರು. ಸ್ವಾಭಾವಿಕವಾದ ಶೈವ ಚಿನ್ಹೆಗಳಿಂದಕೂಡಿದ ಭಸ್ಮಧಾರಿಗಳೂ, ಸನ್ಯಾಸಿಗಳೂ ಪಾಶುಪತವ್ರತನಿಷ್ಠರೂ, ದಿಗಂಬರರಾದ ಶಿವಭಕ್ತರೂ, ಮಹಾಶೈವರೂ ಎನಿಸುವರು. ಅಂಥ ಶಿವಯೋಗಿಗಳನ್ನು ಎಂದು ನಿಂದಿಸಬಾರದು ಹಾಸ್ಯಮಾಡಬಾರದು. ಇಂಥ ಶಿವನಿಷ್ಠರಾದ ಶಿವಭಕ್ತರನ್ನು ನಿಂದಿಸುವವರು ಸಾಕ್ಷಾತ್ ಶಿವನನ್ನೇ ನಿಂದಿಸಿದಂತೆ. ಇಂಥವರನ್ನು ಪೂಜಿಸಿದರೆ ಸಾಕ್ಷಾತ್ ಶಂಕರನನ್ನೆ ಪೂಜೆ ಮಾಡಿದಂತಾಗುವದು.''

ಹೀಗೆ ಶಿವನು ಹೇಳಿದ ಬ್ರಹ್ಮಸ್ವರೂಪವನ್ನು ತಿಳಿದು ಆಶಾಪಾಶವಿಮುಕ್ತರಾಗಿ ಅಜ್ಞಾನವನ್ನು ಕಳೆದುಕೊಂಡು ಆ ಭಗವಂತನಿಗೆ ಭಕ್ತಿಯಿಂದ ನಮಸ್ಕಾರಮಾಡಿದರು. ಮತ್ತು ಸ್ತೋತ್ರಮಾಡಿದರು. ಆ ಸ್ತೋತ್ರದಿಂದ ಪ್ರೀತನಾದ ಪರಮೇಶ್ವರನು ನಿಮಗೆ ಬೇಕಾದ ವರಗಳನ್ನು ಕೇಳಿಕೊಳ್ಳಿರಿ ಎಂದು ಹೇಳಿದನು. ಆಗ ಭೃಗು, ಅಂಗೀರಸ, ವಸಿಷ್ಠ, ವಿಶ್ವಾಮಿತ್ರ, ಅತ್ರಿ, ಸುಕೇಶ, ಪುಲಸ್ತ್ಯ, ಪುಲಹ, ಕೃತು, ಮರೀಚಿ, ಕಶ್ಯಪ, ಕಣ್ವ, ಸಂವರ್ತ ಮೊದಲಾದ ಮಹಾತಪಸ್ವಿಗಳು ಮಹಾದೇವನಿಗೆ ನಮಸ್ಕಾರವನ್ನು ಮಾಡಿದರು ಮತ್ತು ಕೇಳಿಕೊಂಡರು.

**ಋಷಿಗಳು:-** ಭಸ್ಮಧಾರಣ, ನಗ್ನಂಕರಣ, ಸವ್ಯಮಾರ್ಗಪ್ರಕಾರ, ಕಾಮ್ಯ ಕರ್ಮಗಳ ಆಚಾರ ಇವು ನಾಲ್ಕು ಆಚರಿಸಲು ಯೋಗ್ಯವೆ? ಅಲ್ಲವೆ? ಎಂಬುದನ್ನು ತಿಳಿಸಬೇಕು. ಆಗ ಮಹಾದೇವನು ನಸುನಕ್ಕು ಆ ಮುನಿ ಮನೀಶಿಗಳ ಪ್ರಶ್ನೆಗೆ ಉತ್ತರ ಕೊಡಲು ಉಪಕ್ರಮಿಸಿದನು.

*ಲಿಂಗ ಮಹಾಪುರಾಣ ಪೂರ್ವಾರ್ಧದ ಋಷಿ ವಾಕ್ಯ*
*ಎಂಬ ಮೂವತ್ತಮೂರನೆಯ ಅಧ್ಯಾಯ ಸಮಾಪ್ತವಾದುದು*

—o—

**ಮಹಾದೇವ :-** ಭಸ್ಮಸ್ನಾನಾದಿಗಳ ಮಹಾತ್ಮೆಯು ವೇದಗಳಲ್ಲಿ ಅನೇಕ ಕಥೋಪ ಕಥೆಗಳ ಜೊತೆಗೆ ಹೇಳಲ್ಪಟ್ಟಿರುವದು. ಆ ಕಥೆಗಳ ಸಾರವನ್ನು ನಾನು ಈಗ ನಿಮಗೆ ಹೇಳುತ್ತೇನೆ. ಹೋಮಕ್ಕೆ ಕಾರಣವಾದ ಅಗ್ನಿಯೇ ನಾನು. ಆ ಅಗ್ನಿಯನ್ನು ಆಶ್ರಯಿಸಿದ ಸೋಮನು ನಾನೇ. ಅಗ್ನಿಕಾರ್ಯವನ್ನುಮಾಡಿ **'ತ್ರಿಯಾಯುಷಂಜಮದಗ್ನೇ'** ಎಂಬ ಮಂತ್ರದಿಂದ ಭಸ್ಮಧಾರಣೆಮಾಡಿದರೆ ಸರ್ವಪಾಪಗಳೂ ಪರಿಹಾರವಾಗುತ್ತವೆ. ಪ್ರಕಾಶಿಸುವದರಿಂದಲೂ ಶುಭವನ್ನು ಭಾವಿಸುವದರಿಂದಲೂ ಸಕಲಪಾಪಗಳನ್ನು ಭಕ್ಷಿಸುವದರಿಂದಲೂ ಭಾಸ್ಯ, ಭೂ, ಭಕ್ಷ, ಎಂಬ ಮೂರು ಧಾತುಗಳಿಂದ ಭಸ್ಮ ಎಂಬ ರೂಪವು ನಿಷ್ಪನ್ನವಾಗಿರುತ್ತದೆ. ಸೋಮನಿಂದಲೇ ಊಷ್ಮ ಎಂಬ ಪಿತೃದೇವತೆಗಳು ಉತ್ಪನ್ನರಾದರು. ಈ ಚರಾಚರಪ್ರಪಂಚವೆಲ್ಲವೂ ಅಗ್ನಿ ಹೋಮಸ್ವರೂಪ ವಾಗಿರುವದು. ನಾನೇ ಅಗ್ನಿಯು, ದೇವಿಯೇ ಸೋಮನು, ಪ್ರಕೃತಿಯೊಡನೆ ಕೂಡಿದ ಪುರುಷನಾದ ನಾನು ಅಗ್ನಿಹೋಮ ಸ್ವರೂಪನು. ಭಸ್ಮವು ನನ್ನ ವೀರ್ಯ ಎಂಬ ಹೆಸರನ್ನು ಹೊಂದಿರುವದು. ಆದುದರಂದಲೇ ಲೋಕದಲ್ಲಿ ಅಶುಭ ಕಾಲಗಳಲ್ಲಿ ರಕ್ಷಣಾರ್ಥವಾಗಿ ಪ್ರಸೂತಿ ಗೃಹದಲ್ಲಿಯೂ ಭಸ್ಮದಿಂದ ರಕ್ಷಣೆಯನ್ನು ಕಲ್ಪಿಸುವರು. ಭಸ್ಮಸ್ನಾನದಿಂದ ಶುದ್ಧನಾಗಿ ನನ್ನ ಸಮೀಪಕ್ಕೆ ಬಂದವನು ಮತ್ತೆ ಭೂಮಿಯಲ್ಲಿ ಹುಟ್ಟುವದಿಲ್ಲ. ಪಾಶುಪತ ವ್ರತ, ಯೋಗಶಾಸ್ತ್ರ, ಸಾಂಖ್ಯಶಾಸ್ತ್ರ ಇವುಗಳನ್ನು ನಾನೇ ನಿರ್ಮಿಸಿದೆನು.

ದೇವತೆಗಳು, ಮುನಿಗಳು, ಮಾನವರು, ಎಲ್ಲ ಪ್ರಾಣಿಗಳು ಹುಟ್ಟುವಾಗ, ವಸ್ತ್ರವನ್ನು ಧರಿಸದೇ ಬೆತ್ತಲೆಯಾಗಿಯೇ ಹುಟ್ಟುತ್ತಾರೆ. ವಸ್ತ್ರಗಳನ್ನು ಧರಿಸಿದ್ದರೂ ಇಂದ್ರಿಯ ಜಯವಿಲ್ಲದವರು ದಿಗಂಬರರೇ ಸರಿ. ಇಂದ್ರಿಯ ಜಯವುಳ್ಳವರು ವಸ್ತ್ರಾಲಂಕಾರ ಸಹಿತರು ಎನ್ನಬೇಕು. ನಗ್ನಾವಸ್ಥೆಗೆ ವಸ್ತ್ರ ಒಂದೇ ಕಾರಣವಲ್ಲ. ಕ್ಷಮಾಗುಣ, ಧೈರ್ಯ, ಅಹಿಂಸೆ, ವೈರಾಗ್ಯ ಮುಂತಾದ ಗುಣಗಳೇ ಮನುಷ್ಯನಿಗೆ ಉತ್ತಮವಾದ ಆಭರಣ ಎನಿಸುವವು. ಮನುಷ್ಯನು ಭಸ್ಮಸ್ನಾನಮಾಡಿ ಮೈಗೆಲ್ಲ ಭಸ್ಮವನ್ನು ಲೇಪಿಸಿಕೊಂಡು ಮಹಾದೇವನನ್ನು ಧ್ಯಾನಮಾಡಿದರೆ ಆ ಭಸ್ಮವು ಅವರು ಮಾಡಿದ ಅನೇಕ ಪಾಪಗಳನ್ನು ಅಗ್ನಿಯು ವನವನ್ನು ಸುಡುವಂತೆ ಸುಟ್ಟು ಬಿಡುವದು. ಆದುದರಿಂದ ಪ್ರಯತ್ನ ಪೂರ್ವಕವಾಗಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಭಸ್ಮಸ್ನಾನಮಾಡಿದವನು ಗಾನಪತ್ಯ ಪದವಿಯನ್ನು ಹೊಂದುವನು.

ವೇದ ರಹಿತವಾದ ಪಂಚಮಹಾಯಜ್ಞಗಳನ್ನು ಮಾಡಿ ಮಹಾದೇವನನ್ನು ಧ್ಯಾನಮಾಡುವವರು. ಉತ್ತರಮಾರ್ಗವನ್ನು ಅನುಸರಿಸಿ ಮೋಕ್ಷವನ್ನುಹೊಂದುವರು ದಕ್ಷಿಣಮಾರ್ಗವನ್ನು ಅನುಸರಿಸಿ ಕಾಮ್ಯಕರ್ಮಗಳನ್ನು ಮಾಡುವವರು ಅಣಿಮಾದಿ ಅಷ್ಟಸಿದ್ಧಿಗಳನ್ನೂ ದೇವತ್ವವನ್ನೂ ಹೊಂದುವರು. ರಾಗ, ಮದ, ದೋಷಗಳಿಲ್ಲದೇ ಭಕ್ತರಾದ ಮಾನವರು ಪಾಶುಪತ ವ್ರತವನ್ನು ಆಚರಿಸುತ್ತಲಿರಬೇಕು. ಪಶುಪತಿ ಶಬ್ದದ ಅರ್ಥವನ್ನು ರುದ್ರಭಾಷ್ಯದಲ್ಲಿ, **'ಬ್ರಹ್ಮಾದ್ಯಾಃಪಶವಃತೇಷಾಂಪತಿಃಪಶುಪತಿಃ** ಬ್ರಹ್ಮಾದಿ ದೇವತೆಗಳೆಲ್ಲರೂ ಪಶುಗಳು. ಅವರೆಲ್ಲರ ಒಡೆಯನಾದ ಮಹಾದೇವನೇ ಪಶುಪತಿ ಎನಿಸುವನು. ಈ ಪಾಶುಪತವ್ರತವನ್ನು ಧ್ಯಾನಮಾಡಿ ಭಕ್ತಿಯಿಂದ ಹೇಳುವವರು ಕೇಳುವವರು ರುದ್ರಲೋಕಕ್ಕೆ ಹೋಗುವರು.

*ಲಿಂಗ ಮಹಾಪುರಾಣ ಪೂರ್ವಾರ್ಧ ಪಾಶುಪತ ಯೋಗಿಗಳ ಗುಣ ಕಥನ*
*ಎಂಬ ಮೂವತ್ತನಾಲ್ಕನೇಯ ಅಧ್ಯಾಯಮುಗಿದುದು.*

## ಶುಕ್ರಾಚಾರ್ಯರಿಂದ ಮೃತ ಸಂಜೀವಿನಿ ಮಂತ್ರ

**ಅಧ್ಯಾಯ - ೩೫**

**ಸನತ್ಕುಮಾರ** :- ನಂದೀಶ್ವರನೆ ದಧಿಚನು ಯುದ್ಧದಲ್ಲಿ ವಿಷ್ಣುವನ್ನು ಗೆದ್ದು ಕ್ಷುಪರಾಜನನ್ನು ಹೇಗೆ ಸಂಹರಿಸಿದನು. ಮಹಾದೇವನಿಂದ ವಜ್ರಸ್ವರೂಪವಾದ ಮೂಳೆಯನ್ನು ಹೇಗೆ ಪಡೆದನು? ಇವೆಲ್ಲವನ್ನು ನನಗೆ ಹೇಳು.

**ನಂದೀಶ್ವರ** :- ಪೂರ್ವಕಾಲದಲ್ಲಿ ಬ್ರಹ್ಮದೇವರ ಮಗನಾದ ಕ್ಷುಪ ಎಂಬ ಮಹಾರಾಜನು ಇದ್ದನು. ಆ ರಾಜನಿಗೂ ದಧಿಚ ಎಂಬ ಮಹಾ ಮಹರ್ಷಿಗೂ ಒಳ್ಳೆಯ ಸ್ನೇಹವಿದ್ದಿತು. ಅವರಿಬ್ಬರಲ್ಲಿ ಬ್ರಾಹ್ಮಣನು ಶ್ರೇಷ್ಠನೋ, ಕ್ಷತ್ರಿಯನು ಶ್ರೇಷ್ಠನೋ ಎಂಬ ವಿಷಯದಲ್ಲಿ ವಾದವಿವಾದ ನಡೆಯಿತು. ಕ್ಷತ್ರಿಯನೇ ಶ್ರೇಷ್ಠ ಎಂಬ ಕ್ಷುಪರಾಜನ ವಾದವಾಗಿತ್ತು. ರಾಜನು ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ, ಈಶಾನ, ಎಂಬ ಅಷ್ಟದಿಕ್ಪಾಲಕರು ಅಂಶಗಳುಳ್ಳ ಶರೀರವನ್ನು ಧಾರಣಮಾಡಿರುವನು. ಆದುದರಿಂದ ನಾನು ರಾಜನು. ಈ ಅಷ್ಟದಿಕ್ಪಾಲಕರ ಸ್ವರೂಪನು ನನ್ನನ್ನು ಅಪಮಾನ ಮಾಡಕೂಡದು. ಮತ್ತು **'ನಾವಿಷ್ಣುಃಪ್ರಥಿವಿಪತಿಃ'** ಎಂಬ ಮುಂತಾದ ಪ್ರಮಾಣ ವಚನಗಳಿಂದ ರಾಜನಾದವನು ಅರ್ಥಾತ್ ನಾನು ವಿಷ್ಣುವಿನ ಅಂಶಭೂತನು ಆದುದರಿಂದಲೇ ನಾನು ಪೂಜ್ಯನು ಆಗಿರುತ್ತೇನೆ. ಎಂದು ತನ್ನ ವಾದವನ್ನು ಮಂಡಿಸಿದನು.

ಕ್ಷುಪರಾಜನ ಈ ವಾದವನ್ನು ಕೇಳಿ ಮುನಿಶ್ರೇಷ್ಠನಾದ ದಧಿಚನಿಗೆ ಬ್ರಹ್ಮಾಂಡ ಕೋಪ ಬಂದಿತು. ಅವನು ಸಿಟ್ಟಿನಿಂದ ಎಡಗೈ ಮುಷ್ಟಿಮಾಡಿ ಕ್ಷುಪರಾಜನ ತಲೆಯ ಮೇಲೆ ಹೊಡೆದನು. ಆಗ ಬಲಶಾಲಿಯಾದ ಕ್ಷುಪ ಮಹಾರಾಜನು. ವಜ್ರಾಯುಧದಿಂದ ದಧಿಚ ಮುನಿಯನ್ನು ಪ್ರಹರಿಸಿದನು. ಪೂರ್ವಕಾಲದಲ್ಲಿ ಬ್ರಹ್ಮಲೋಕದಲ್ಲಿ ಬ್ರಹ್ಮದೇವನು ಸೀನಿದಾಗ ಅವನ ಆ ಸೀನಿನಿಂದ ಕ್ಷುಪನು ಜನಿಸಿದ್ದನು. ರಾಕ್ಷಸರನ್ನು ಗೆಲ್ಲಲಿಕ್ಕಾಗಿ ದೇವೇಂದ್ರನು. ಆ ಕ್ಷುಪರಾಜನಿಗೆ ವಜ್ರಾಯುಧವನ್ನು ಕೊಟ್ಟಿದ್ದನು. ಆ ವಜ್ರಾಯುಧದಿಂದ ಕ್ಷುಪರಾಜನು ಬ್ರಾಹ್ಮಣ ಶ್ರೇಷ್ಠನಾದ ದಧಿಚನನ್ನು ಗೆದ್ದನು. ದಧಿಚ ಮುನಿಯು ದೇವೇಂದ್ರನಂತೆಯೇ ಮಹಾತೇಜಸ್ವಿಯೂ ಬಲಿಷ್ಠನೂ ಆಗಿದ್ದರೂ ವಜ್ರಾಘಾತದಿಂದ ಜ್ಞಾನ ತಪ್ಪಿ ಅವನು ನೆಲದ ಮೇಲೆ ಬಿದ್ದನು.

ಆಗ ದಧಿಚ ಮುನಿಯು ತನ್ನ ವಂಶದ ಮೂಲ ಪುರುಷನಾದ ಶುಕ್ರಾಚಾರ್ಯರನ್ನು ತನ್ನ ಯೋಗಶಕ್ತಿಯಿಂದ ಸ್ಮರಣಮಾಡಿದನು. ಕೂಡಲೇ ಶುಕ್ರಾಚಾರ್ಯರು ಯೋಗ ಶಕ್ತಿಯಿಂದ ಅಲ್ಲಿಗೆ ಬಂದು ವಜ್ರ ಪ್ರಹಾರದಿಂದ ಛಿನ್ನಭಿನ್ನವಾದ ದಧಿಚರ ದೇಹದ ಭಾಗವನ್ನು ಕೂಡಿಸಿ ಮೊದಲಿನಂತೆ ಮಾಡಿದರು. ಮತ್ತು ಅವನಿಗೆ ಹೇಳಿದರು ಮುನಿಶ್ರೇಷ್ಠನಾದ ದಧಿಚನೆ ನೀನು ಉಮಾಪತಿಯಾದ ಶಂಕರನನ್ನು ಪೂಜಿಸು ಅವನ ಅನುಗ್ರಹದಿಂದ ಬ್ರಹ್ಮರ್ಷಿಯಾದ ನೀನು ಮೃತ್ಯುಂಜಯನಾಗಿ ಅವಧ್ಯನಾಗು. ಆ ಶಂಕರನಿಂದಲೇ ನಾನು ಮೃತಸಂಜೀವಿನಿಮಂತ್ರವನ್ನು ಪಡೆದಿರುವೆನು. ಶಿವಭಕ್ತನಿಗೆ ಈ ಲೋಕದಲ್ಲಿ ನಿನಗೆ ಆ ಮೃತ್ಯುವಿನ ಭಯವಿಲ್ಲ. ನಿನಗೆ ಆ ಮೃತಸಂಜೀವಿನಿ

ಮಂತ್ರವನ್ನು ಉಪದೇಶ ಮಾಡುತ್ತೇನೆ ಕೇಳು. **'ತ್ರ್ಯಂಬಕಂ ಯಜಾ ಮಹೆ ಸುಗಂಧಿಂ ಪುಷ್ಟಿವರ್ಧನಂ.** ಎನ್ನುವ, ಮೃತಸಂಜೀವಿನಿ ಮಂತ್ರದಲ್ಲಿಯ ತ್ರ್ಯಂಬಕಂ' ಎಂಬ ಶಬ್ದಕ್ಕೆ ಮೂರು ಲೋಕಕ್ಕೂ ತಂದೆ ಎಂದು ಅರ್ಥ ಇದಲ್ಲದೇ ಶಬ್ದಕ್ಕೆ ಸೋಮ ಅಗ್ನಿ ಸೂರ್ಯ ಮಂಡಲಗಳೆಂದೂ, ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೆಂದೂ, ಬುದ್ಧಿ ಮನಸ್ಸು, ಅಹಂಕಾರ ಎಂಬ ಮೂರು ತತ್ವಗಳೆಂದೂ, ಗಾರ್ಹಪತ್ಸ, ಅಹವನೀಯ, ದಕ್ಷಿಣಾಗ್ನಿ ಎಂಬ ಮುಖರು ಅಗ್ನಿಗಳೆಂದೂ, ಬ್ರಹ್ಮ, ವಿಷ್ಣು, ರುದ್ರರೂಪರಾದ ಮೂರು ದೇವತೆಗಳೆಂದು ಅರ್ಥವಾಗುವದು. ಅಂಬಕ ಶಬ್ದಕ್ಕೆ ತಂದೆ ಎಂದು ಅರ್ಥ.

**'ಪುಷ್ಟಿವರ್ಧನಂ'** ಎನ್ನುವದಕ್ಕೆ ಸಮಸ್ತ ಪ್ರಾಣಿಗಳಲ್ಲಿಯೂ ಎಲ್ಲ ದೇಶ ಕಾಲಗಳಲ್ಲಿಯೂ, ಇಂದ್ರಿಯಗಳಲ್ಲಿಯೂ. ಇತರ ದೇವತೆಗಳಲ್ಲಿಯೂ ಪರಮೇಶ್ವರನು ಹೂಗಳಲ್ಲಿ ಪರಿಮಳವು ಇರುವಂತೆ ಸೂಕ್ಷ್ಮ ರೂಪದಿಂದ ಇರುವನು. ಆದುದರಿಂದ ಅವನನ್ನು ಸುಗಂಧಿ ಎಂದು ವೇದಗಳಲ್ಲಿ ಹೇಳಲಾಗಿದೆ. ಪುಷ್ಪಗಳಲ್ಲಿರುವ ಪರಿಮಳವು ಘ್ರಾಣೇಂದ್ರಿಯದಿಂದ ಮಾತ್ರವೇ ಹೇಗೆ ತಿಳಿಯಲು ಶಕ್ಯವೋ ಅದರಂತೆ ಪರಮೇಶ್ವರನು ಶುದ್ಧವಾದ ಶ್ರದ್ಧಾಯುಕ್ತವಾದ ಮನಸ್ಸಿನಿಂದ ಮಾತ್ರ ತಿಳಿಯಲು ಸಾಧ್ಯ ಎಂದು ಸುಗಂಧಿಂ ಎಂಬ ವೇದ ಮಂತ್ರ ಘಟಕವಾದ ಶಬ್ದದ ಮುಖ್ಯ ಅಭಿಪ್ರಾಯ.

ಪುರುಷನಾದ ಪರಮೇಶ್ವರನಿಗೆ ಪ್ರಕೃತಿಯೇ ಪುಷ್ಟಿಯು ವಿಷ್ಣು ಬ್ರಹ್ಮ ಇಂದ್ರಾದಿ ದೇವತೆಗಳು ಇವರೆಲ್ಲರು ಪ್ರಕೃತಿಯಿಂದಲೇ ಅಭಿವೃದ್ಧಿ ಹೊಂದುವರು. ಇವರನ್ನು ಅಭಿವೃದ್ಧಿ ಹೊಂದಿಸುವನು ಪುರುಷನು. ಆದುದರಿಂದ ಪರಮೇಶ್ವರನನ್ನು ಪುಷ್ಟಿವರ್ಧನ ಎಂದು ವೇದದಲ್ಲಿ ಹೇಳಿದ್ದಾರೆ. ಅಮೃತಸ್ವರೂಪನು ಅಜ್ಞಾನ ನಾಶಕನೂ ಆದ ಆ ದೇವದೇವೋತ್ತಮನನ್ನು ನಾವು ವ್ರತ. ತಪಸ್ಸು, ವೇದಾಧ್ಯಯನ, ಸಮಾಧಿ, ಧ್ಯಾನಗಳಿಂದ ಪೂಜಿಸುತ್ತೇನೆ. ಅವನು ನಮ್ಮನ್ನು ಮೃತ್ಯು ಪಾಶದಿಂದ ಬಿಡಿಸುವನು. ಸವತೆಕಾಯಿಯು ಸೂರ್ಯಕಿರಣದಿಂದ ದಪ್ಪವಾಗಿ ತಾನಾಗಿಯೆ ಹೇಗೆ ತೊಟ್ಟುಕಳಚಿ ಬೀಳುವದೋ ಹಾಗೆಯೇ ಶಿವನ ಅನುಗ್ರಹದಿಂದ ಅಜ್ಞಾನವೆಂಬ ಹೃದಯ ಗ್ರಂಥಿಯು ಕಳಚಿ ಹೋಗಿ ಮೋಕ್ಷವು ದೊರಕುವದು ಎಂದು ಊರ್ವಾರುಕ (ಸವತೆಕಾಯಿದೃಷ್ಟಾಂತದಿಂದ) ಸೂಚಿಸಲಾಗಿದೆ.

ಈ ಮೃತ ಸಂಜೀವಿನಿ ಮಂತ್ರವನ್ನು ನಾನು ಶಿವನ ಅನುಗ್ರಹದಿಂದ ಪಡೆದಿರುವೆನು ನೀನಾದರೂ ಈ ಮಂತ್ರವನ್ನು ಜಪಮಾಡಿ ಅನಂತರ ಹೋಮವನ್ನುಮಾಡಿ, ಇದರಿಂದ ಅಭಿಮಂತ್ರಿಸಿದ ನೀರನ್ನು ಪಾನಮಾಡಿ, ಲಿಂಗರೂಪಿ ಶಂಕರನನ್ನು ಧ್ಯಾನಮಾಡಿ ಪರಮೇಶ್ವರನೆ ಪರಮಾನುಗ್ರಹದಿಂದ ಮೃತ್ಯು ಭಯವನ್ನು ನಿವಾರಣೆಮಾಡಿಕೊಳ್ಳು.

ದಧಿಚಿ ಮಹರ್ಷಿಯು ತಮ್ಮ ವಂಶದ ಮಹಾಪುರುಷನಾದ ಶುಕ್ರಾಚಾರ್ಯರ ಮಾತುಗಳನ್ನು ಅವರು ಹೇಳಿದಂತೆ ಮೃತಸಂಜೀವಿನಿ ಮಂತ್ರವನ್ನು ಜಪಮಾಡಿದನು. ಅವನ ಮಂತ್ರ ಜಪ ಮತ್ತು ನಿರಂತರ ತಪಸ್ಸುಗಳಿಂದ ಪ್ರೀತನಾದ ಪರಮೇಶ್ವರನು ಆ ದಧಿಚಿ ಮುನಿಗೆ ವಜ್ರದಂತೆ ಗಟ್ಟಿಮುಟ್ಟಿಯಾದ ಮೂಳೆಗಳನ್ನು ಅವಧ್ಯತ್ವವಾದ ವರವನ್ನು ಅಧೀನತ್ವ ಸೌಭಾಗ್ಯವನ್ನು ಕರುಣಿಸಿದನು.

ಮಹಾಮುನಿಯಾದ ದಧಿಚಿ ಮಹರ್ಷಿಯು ಪರಮೇಶ್ವರನಿಂದ ಅವಧ್ಯತ್ವ ಹಾಗೂ ವಜ್ರಾಸ್ಥಿತ್ವಗಳನ್ನು ಪಡೆದು ಬಳಿಕ ತನ್ನನ್ನು ವಜ್ರಾಯುಧದಿಂದ ಹೊಡೆದು ಸಾಯಿಸಿದ ಕ್ಷುಪರಾಜನ ತಲೆಯಮೇಲೆ ಕಾಲಿನಿಂದ ಒದೆದನು. ಆಗ ಕ್ಷುಪ ಮಹಾರಾಜನು ಮತ್ತೆ ವಜ್ರಾಯುಧದಿಂದ ದಧಿಚ ಮುನಿಯ ಎದೆಗೆ ಪ್ರಹರಿಸಿದನು. ಆದರೆ ಪರಮೇಶ್ವರನ ಅನುಗ್ರಹದಿಂದ ವಜ್ರಶರೀರಿಯಾದ ದಧಿಚಿ ಮುನಿಗೆ ಕ್ಷುಪ ರಾಜನ ವಜ್ರಾಯುಧದ ಪುನಃಪ್ರಹಾರದಿಂದ ಏನೂ ನೋವು ಸಾವು ಉಂಟಾಗಲಿಲ್ಲ. ಆಗ ಕ್ಷುಪರಾಜನು ದಧಿಚನ ಅವಧ್ಯತ್ವ ವಜ್ರಾಂಗತ್ವಾದಿ ಮಹಿಮೆಯನ್ನು ನೋಡಿ ಇಂಥ ಪರಮಾನುಗ್ರಹವನ್ನು ಮಾಡಿದ ಶ್ರೀ ಹರಿಯನ್ನು ತಪಸ್ಸಿನಿಂದ ಪೂಜಿಸಿದನು.

*ಲಿಂಗ ಮಹಾಪುರಾಣ ಪೂರ್ವಾರ್ಧ ಶುಕ್ರಾಚಾರ್ಯರಿಂದ ಮೃತಸಂಜೀವಿನಿ ಮಂತ್ರ ಪ್ರಭಾವ ನಿರೂಪಣೆ ಎಂಬ ಮೂವತ್ತೈದನೆಯ ಅಧ್ಯಾಯ ಮುಗಿದುದು*



## ಕ್ಷುಪರಾಜ ಮತ್ತು ದಧೀಚಿಮುನಿಗಳ ಉಪಾಖ್ಯಾನ — ಅಧ್ಯಾಯ - ೩೬

**ನಂದೀಶ್ವರ :-** ಕ್ಷುಪ ಮಹಾರಾಜನ ಪೂಜೆಯಿಂದ ಮಹಾವಿಷ್ಣುವು ಪರಿತುಷ್ಟನಾದ ಶ್ರೀದೇವಿ ಭೂದೇವಿಯರಿಂದ ಕೂಡಿಕೊಂಡು ತನ್ನ ನಾಲ್ಕೂ ಕೈಗಳಲ್ಲಿ ಶಂಖ ಚಕ್ರ ಗದಾ ಪದ್ಮಾದಿ ಆಯುಧಗಳನ್ನು ಧರಿಸಿ ಪೀತಾಂಬರವನ್ನು ಉಟ್ಟು ಕ್ಷುಪರಾಜನಿಗೆ ತನ್ನ ದರ್ಶನವನ್ನು ನೀಡಿದನು. ಭಗವದ್ದರ್ಶನದಿಂದ ಕೃತಾರ್ಥನಾದ ಕ್ಷುಪರಾಜನು ಆ ಭಗವಂತನನ್ನು ಸ್ತೋತ್ರಮಾಡಿದನು.

**ಪುರುಷಸ್ತ್ವಂ ಜಗನ್ನಾಥೋ ವಿಷ್ಣುರ್ವಿಶ್ವೇಶ್ವರೋ ಭವಾನ್ ।**
**ಯೋಽಯಂ ಬ್ರಹ್ಮಾಸಿ ಪುರುಷೋ ವಿಶ್ವಮೂರ್ತಿಃ ಪಿತಾಮಹಃ ॥**

**ತತ್ವಮಾದ್ಯಂ ಭವಾನೇವ ಪರಂಜ್ಯೋತಿರ್ಜನಾರ್ದನಃ ।**
**ಪರಮಾತ್ಮಾ ಪರಂಧಾಮ ಶ್ರೀಪತೇ ಭೂಪತೇ ಪ್ರಭೋ ॥**

**ತತ್ಕ್ರೋಧಸಂಭವೋ ರುದ್ರಸ್ತಮಸಾ ಚ ಸಮಾವೃತಃ ।**
**ತ್ವತ್ಪ್ರಸಾದಾಜ್ಜಗದ್ಧಾತಾ ರಜಸಾ ಚ ಪಿತಾಮಹಃ ॥**

**ತ್ವತ್ಪ್ರಸಾದಾತ್ಸ್ವಯಂ ವಿಷ್ಣುಃ ಸತ್ವೇನ ಪುರುಷೋತ್ತಮಃ ।**
**ಕಾಲಮೂರ್ತೇ ಹರೇ ವಿಷ್ಣೋ ನಾರಾಯಣ ಜಗನ್ಮಯ ॥**

ಸರ್ವಜಗತ್ತಿಗೆ ಒಡೆಯನಾಗಿ ಎಲ್ಲ ಮಾನವರ ಶರೀರದಲ್ಲಿ ವಾಸ ಮಾಡುವದರಿಂದ ನೀನು ಪುರುಷ ಎನಿಸಿರುವೆ. ಸರ್ವತ್ರ ವ್ಯಾಪ್ತನಾದ ನೀನು ಬ್ರಹ್ಮ ನಾಮಕನಾಗಿ ಜಗತ್ತಿನ ಸೃಷ್ಟಿಯನ್ನು ಮಾಡುವೆ. ನೀನೇ ಮಹತ್ ತತ್ವಕ್ಕೆ ನಿಯಾಮಕನು. ನೀನೇ ಪರಂಜ್ಯೋತಿ ಸ್ವರೂಪನಾಗಿರುವೆ. ಶ್ರೀ ದೇವಿಭೂದೇವಿಯರಿಗೆ ಪತಿಯಾದ ನೀನೇ ಪರಮಾತ್ಮ ಪರಬ್ರಹ್ಮ ಎನಿಸಿರುವೆ. ನಿನ್ನ ಕ್ರೋಧದಿಂದ ಹುಟ್ಟಿದ, ತಮೋಗುಣಗಳಿಂದ ಕೂಡಿದ ರುದ್ರನಾಗಿರುವನು. ರಜೋಗುಣಗಳಿಂದ ಕೂಡಿದ ಬ್ರಹ್ಮನು ಈ ಜಗತ್ತನ್ನು

ಸೃಷ್ಟಿಸುವನು. ನಿನ್ನ ಪ್ರಸಾದದಿಂದಲೇ ವಿಷ್ಣುವು ಸತ್ವಗುಣದಿಂದ ಕೂಡಿ ಪುರುಷೋತ್ತಮ ಎನಿಸುವನು. ನೀನು ಕಾಲ ನಿಯಾಮಕನಾಗಿರುವದರಿಂದ ಕಾಲಮೂರ್ತಿ ಎನಿಸಿರುವೆ. ಸರ್ವ ಜಗತ್ತಿನಲ್ಲಿಯೂ ವ್ಯಾಪಿಸಿರುವ ನೀನು ಹರಿ, ವಿಷ್ಣು, ನಾರಾಯಣ ಮುಂತಾದ ನಾಮಗಳಿಂದ ಪೂಜಿಸಲ್ಪಡುವೆ.

ಕ್ಷೀರಸಮುದ್ರದಲ್ಲಿ ಪ್ರಕೃತಿ ರೂಪನಾದ ಸಾವಿರ ಹೆಡೆಗಳುಳ್ಳ ಹದಿನಾಲ್ಕುಲೋಕಗಳನ್ನು ಹೆಡೆಯಮೇಲೆ ಹೊತ್ತು ನಿಂತಿರುವ ಆದಿಶೇಷನು ನಿನಗೆ ವಿಸ್ತಾರವಾದ ಶ್ರೇಷ್ಠ ಪೀಠನಾಗಿರುವನು. ಇದರ ಕೆಳಭಾಗದಲ್ಲಿ ಧರ್ಮ, ಜ್ಞಾನ ವೈರಾಗ್ಯ, ಐಶ್ವರ್ಯ ಎಂಬ ನಾಲ್ಕು ಗುಣಗಳು ಆ ಪೀಠದ ಪಾದರೂಪಗಳಾಗಿರುವವು. ಕೆಳಗಿನ ಎರಡು ಪಾತಾಳಲೋಕಗಳೇ ನಿನ್ನ ಪಾದಗಳು. ನಿನ್ನ ಸೊಂಟವೇ ಭೂಮಿ. ಏಳು ಸಾಗರಗಳೇ ನಿನಗೆ ವಸ್ತ್ರ. ದಿಕ್ಕುಗಳೇ ಭುಜಗಳು. ಸ್ವರ್ಗಾದಿ ಲೋಕಗಳೇ ನಿನ್ನ ತಲೆ. ಆಕಾಶವೇ ಹೊಕ್ಕಳು. ನಿನ್ನ ಮೂಗಿನಲ್ಲಿ ಸಂಚರಿಸುವದೇ ಗಾಳಿ. ಚಂದ್ರ ಸೂರ್ಯರೇ ನಿನ್ನ ಕಣ್ಣುಗಳು. ಗ್ರಹ ನಕ್ಷತ್ರಗಳೆಲ್ಲವೂ ನಿನ್ನ ಕಂಠಾಭರಣ. ಪುರುಷಶ್ರೇಷ್ಠನಾದ ನೀನು ಪರಮ ಪೂಜ್ಯನಾಗಿರುವೆ.'' ಹೀಗೆ ಕ್ಷುಪರಾಜನು ಮಾಡಿದ ಈ ಸ್ತೋತ್ರವನ್ನು ಪಠಿಸುವವರೂ, ಹೇಳುವವರೂ, ಕೇಳುವವರೂ ವಿಷ್ಣುಲೋಕಕ್ಕೆ ಹೋಗುವರು.'' ಹೀಗೆ ಭಗವಂತನನ್ನು ಭಕ್ತಿಯಿಂದ ಸ್ತೋತ್ರಮಾಡಿ ಸಾಷ್ಟಾಂಗ ನಮಸ್ಕಾರವನ್ನು ಕೂಡ ಮಾಡಿ ಆ ಕ್ಷುಪರಾಜನು ಭಗವಂತನಿಗೆ ವಿಜ್ಞಾಪನೆಯನ್ನು ಮಾಡಿಕೊಂಡನು.

ಕ್ಷುಪರಾಜ :- ಷಡ್ಗುಣೈಶ್ವರ್ಯ ಸಂಪನ್ನನಾದ ಮಹಾವಿಷ್ಣುವೇ ಧರ್ಮಶಾಸ್ತ್ರ ಮರ್ಮವನ್ನು ಚೆನ್ನಾಗಿ ಅರಿತುಕೊಂಡ ಆ ಕ್ಷುಪಮಹಾರಾಜನು ಭಗವಂತನಿಗೆ ಸಾಷ್ಟಾಂಗ ನಮಸ್ಕಾರವನ್ನುಮಾಡಿ ವಿಜ್ಞಾಪನೆ ಮಾಡಿಕೊಂಡನು.

''ಮಹಾವಿಷ್ಣುವೆ ಧರ್ಮಜ್ಞನೂ, ವಿನಯ ಸಂಪನ್ನನೂ ಆದ ದಧೀಚ ಮುನಿಯು ಮೊದಲು ನನಗೆ ಪರಮ ಮಿತ್ರನಾಗಿದ್ದನು. ಅವನು ಶಿವನ ಆರಾಧನೆಯನ್ನುಮಾಡಿ ಅವಧ್ಯತ್ವವರವನ್ನು ಪಡೆದುಕೊಂಡನು. ಅನಂತರ ಮದಾಂಧನಾಗಿ ನಾನು ಸಭೆಯಲ್ಲಿದ್ದಾಗ ಎಡಗಾಲಿನಿಂದ ನನ್ನ ತಲೆಯ ಮೇಲೆ ಒದೆದನು. ಮದೋನ್ಮತ್ತನಾಗಿ ನಾನು ಯಾರಿಗೂ ಹೆದರುವದಿಲ್ಲ ಎಂದು ಹೇಳಿದನು. ಅಂಥಹ ಮದಮೋಹಗಳು ತಲೆಗೆ ಏರಿದವರನ್ನು ಗೆಲ್ಲಬೇಕು ಎಂದು ನನಗೆ ಇಚ್ಛೆಯಾಗಿದೆ. ಜಗದೀಶ್ವರನೆ ನನಗೆ ದಧೀಚನಿಂದ ಜಯ ಉಂಟಾಗಲು ನೀನು ಸಹಾಯಕನಾಗಿರಬೇಕು.''

ನಂದೀಶ್ವರ :- ಮಹಾದೇವನನ್ನು ಶರಣು ಹೊಂದಿದವರಿಗೆ ಭಯವಿಲ್ಲ. ನೀಚರಾದ ಶಿವಭಕ್ತರಿಗೂ ಯಾವ ಭಯವೂ ಇಲ್ಲವೆಂದು ಬ್ರಹ್ಮಜ್ಞಾನಿಯಾದ ದಧೀಚನಿಗೆ ಯಾವುದೇ ಭಯ ಅಪಾಯ ಸಾವು ನೋವು ಉಂಟಾಗಲಾರದೆಂಬುದು ನಿಶ್ಚಿತ. ಆದುದರಿಂದ ರಾಜನೆ ನಿನಗೆ ದಧೀಚನ ಮೇಲೆ ಜಯವನ್ನು ಸಾಧಿಸಲಿಕ್ಕಾಗುತ್ತಿಲ್ಲ. ಆದರೂ ದೇವತೆಗಳಿಂದ ಕೂಡಿದ ನನಗೆ ಅವನಿಂದ ಶಾಪ ಪ್ರಾಪ್ತಿಯಾಗುವದಕ್ಕೋಸ್ಕರ ಆ ಬ್ರಾಹ್ಮಣನಿಗೆ ದುಃಖವನ್ನುಂಟುಮಾಡುತ್ತೇನೆ. ಆ ದಧೀಚನ ಶಾಪದಿಂದ ಮುಂದೆ ದಕ್ಷಯಜ್ಞದಲ್ಲಿ ನನ್ನ ನಾಶವೂ ಪುನರುತ್ಪತ್ತಿಯು ಸಂಭವಿಸುವದು. ಆ ಕಾರಣದಿಂದ

ದಧೀಚನನ್ನು ಸೋಲಿಸಲು ನಿನಗೆ ಸರ್ವ ಪ್ರಯತ್ನದಿಂದಲೂ ಸಹಾಯಕನಾಗುತ್ತೇನೆ. ವಿಷ್ಣುವಿನ ವಚನವನ್ನು ಕೇಳಿ ಕ್ಷುಪರಾಜನು ''ಹಾಗೆಯೇ ಆಗಲಿ'' ಎಂದು ಹೇಳಿದನು. ಅನಂತರ ಭಕ್ತ ವತ್ಸಲನಾದ ಆ ಭಗವಂತನು ಓರ್ವ ಬ್ರಾಹ್ಮಣನ ರೂಪದಿಂದ ದಧೀಚಮುನಿಯ ಆಶ್ರಮಕ್ಕೆ ಹೋದನು. ಅವನಿಗೆ ನಮಸ್ಕಾರಮಾಡಿ ಅವನಿಗೆ ಹೇಳಿದನು.

**ವಿಪ್ರರೂಪಿ ವಿಷ್ಣು** :- ಮಹಾಮುನಿಯೇ ನಾನು ನಿನಗೆ ಒಂದು ವರವನ್ನು ಕೇಳುತ್ತೇನೆ. ನೀನು ಅದನ್ನು ಇಲ್ಲ ಎನ್ನಬಾರದು. ನಾನು ಬೇಡಿದ್ದನ್ನು ಕೊಡಬೇಕು.

**ದಧೀಚ** :- ನೀನು ಯಾರು ಎನ್ನುವದು ನನಗೆ ತಿಳಿದು ಹೋಗಿದೆ. ನೀನು ಏನನ್ನು ಬಯಸುವೆ ಎನ್ನುವದೂ ನನಗೆ ಗೊತ್ತು. ನಾನು ನಿನಗೆ ಹೆದರುವದಿಲ್ಲ. ಸಾಕ್ಷಾತ್ ಮಹಾವಿಷ್ಣುವೇ ನೀನು. ಪರಶಿವನ ಪರಮಾನುಗ್ರಹದಿಂದ ನನಗೆ ಭೂತಭವಿಷ್ಯ ವರ್ತಮಾನ ಕಾಲದಲ್ಲಿ ನಡೆಯುವದೆಲ್ಲವೂ ಸ್ಪಷ್ಟವಾಗಿ ತಿಳಿಯುವದು. ನಿನ್ನ ಈ ಕಪಟ ವೇಶವನ್ನು ಬಿಟ್ಟು ಬಿಡು. ನಿಜರೂಪದಿಂದ ಪ್ರಕಟನಾಗು. ಕ್ಷುಪರಾಜನು ನಿನ್ನನ್ನು ಪೂಜೆ ಮಾಡಿಬೇಡಿಕೊಂಡಿದ್ದಾನೆ. ನೀನು ಭಕ್ತವತ್ಸಲ ಎಂಬುದನ್ನು ನಾನು ಬಲ್ಲೆ. ಇದು ನಿನಗೆ ಉಚಿತವೇ ಆಗಿದೆ. ಶಿವೋಪಾಸಕನಾದ ನನಗೆ ಭಯಾಪಾಯವು ಬರುವದಿದ್ದರೆ ಹೇಳು. ಮಹಾದೇವನ ದಯೆಯಿಂದ ನನಗೆ ದೇವದಾನವ ಬ್ರಾಹ್ಮಣ ಯಾರಿಂದಲೂ ಭಯವಿಲ್ಲ.

**ವಿಷ್ಣು** :- ವ್ರತಾನುಷ್ಠಾನ ನಿರತನಾದ ದಧೀಚನೆ ವಾಸ್ತವಿಕವಾಗಿ ನಿನಗೆ ಭಯ ಎಂಬುದೇ ಇಲ್ಲ. ಏಕೆಂದರೆ ನೀನು ಯಾವಾಗಲು ಶಿವನ ಪೂಜೆಯಲ್ಲಿಯೇ ಆಸಕ್ತನಾಗಿರುವೆ. ಸರ್ವಜ್ಞನೂ ಆಗಿರುವೆ. ಆದರೆ ನೀನು ನನ್ನ ಒಂದು ಮಾತನ್ನು ನಡೆಸಬೇಕು. ಬ್ರಾಹ್ಮಣನಾದ ನಿನಗೆ ನಾನು ನಮಸ್ಕಾರವನ್ನು ಮಾಡುವೆನು. ನನಗಾಗಿ ನೀನು ಸಭೆಯಲ್ಲಿ ''ನಾನು ಕ್ಷುಪರಾಜನಿಗೆ ಅಂಜುತ್ತೇನೆ'' ಎಂದು ಹೇಳಬೇಕು. ಒಂದೇ ಒಂದು ಸಲ ನಾನು ಕ್ಷುಪನಿಗೆ ಬೆದರುವೆ ಎಂದು ಹೇಳಿದರೂ ಸಾಕು.

**ದಧೀಚ** :- ಮಹಾದೇವನ ದಯೆಯಿಂದ ನಿರ್ಭಯನಾದ ನಾನು ಕ್ಷುಪರಾಜನಿಗೆ ಎಂದೂ ಹೆದರುವದಿಲ್ಲ.

ದಧೀಚನು ತನ್ನ ಮಾತನ್ನು ನಡೆಸದಿದ್ದದಕ್ಕಾಗಿ ಶ್ರೀಹರಿಗೆ ಸಿಟ್ಟು ಬಂತು. ಅವನು ತನ್ನ ಮಾತನ್ನು ಸುತರಾಂ ಕೇಳಲು ಒಪ್ಪದಿದ್ದ ದಧೀಚ ಮುನಿಯ ಮೇಲೆ ತನ್ನ ಸುದರ್ಶನ ಚಕ್ರವನ್ನು ಎತ್ತಿದನು. ಅದನ್ನು ದಧೀಚನ ಮೇಲೆ ಪ್ರಯೋಗಿಸಿದನು. ಆದರೆ ದಧೀಚನ ಪ್ರಭಾವದಿಂದ ಕ್ಷುಪರಾಜನು ನೋಡುತ್ತಲಿರುವಾಗಲೇ ವಿಷ್ಣುವಿನ ಸುದರ್ಶನ ಚಕ್ರದ ಮೊನೆಯು ಮುರಿದು ಅದು ಕುಂಠಿತವಾಗಿ ಹೋಯಿತು. ಆಗ ದಧೀಚನು ನಗುತ್ತ ವಿಷ್ಣುವಿಗೆ ನುಡಿದನು.

**ದಧೀಚ** :- ಪೂಜ್ಯನಾದ ಶ್ರೀ ಹರಿಯೆ ಈ ಸುದರ್ಶನ ಚಕ್ರವು ಮೂಲತಃ ಮಹಾದೇವನದೇ ನೀನು ಬಹು ಪ್ರಯತ್ನಮಾಡಿ ಇದನ್ನು ಪೂರ್ವದಲ್ಲಿ ಪಡೆದಿರುವೆ. ಇದು ಮಹಾದೇವನದೇ ಆಯುಧವಾದುದರಿಂದ ಈ ಚಕ್ರವು ನನ್ನನ್ನು ಕೊಲ್ಲಲಾರದು. ಇದು ನನಗೆ ಪರಮ ಮಂಗಳಕರ. ಆದುದರಿಂದ ನೀನು ಸುದರ್ಶನ ಚಕ್ರವನ್ನು ಬಿಟ್ಟು ಬೇರೆ ಬ್ರಹ್ಮಾಸ್ತ್ರಾದಿಗಳಿಂದ ನನ್ನನ್ನು ಗೆಲ್ಲಲು ಪ್ರಯತ್ನಮಾಡು.

ಆಗ ನಾರಾಯಣನು ನಿರ್ಭಯನಾದ ದಧೀಚ ಮುನಿಯ ನಿಷ್ಠುರ ವಚನವನ್ನು ಕೇಳಿದ. ಅವನ ಸುದರ್ಶನ ಚಕ್ರವಂತೂ ನಿರ್ವೀರ್ಯವಾಗಿದ್ದಿತು. ಆಗ ಶ್ರೀ ಹರಿಯು ದಧೀಚನ ಮೇಲೆ ತನ್ನ ಎಲ್ಲ ಅಸ್ತ್ರಗಳನ್ನು ಪ್ರಯೋಗಿಸಲು ಶುರುಮಾಡಿದ. ಯುದ್ಧ ಪ್ರವೃತ್ತನಾದ ಆ ವಿಷ್ಣುವಿಗೆ ಸಹಾಯಮಾಡಲು ದೇವತೆಗಳು ಧಾವಿಸಿಬಂದರು. ಅವರೆಲ್ಲರು ಮಹಾ ಬಲಿಷ್ಠರು. ವಿಷ್ಣು ಹಾಗೂ ದೇವತೆಗಳು ಅಸಂಖ್ಯ ಜನರು. ಎಲ್ಲರೂ ಶಸ್ತ್ರಾಸ್ತ್ರಸಂಪನ್ನರು. ಇತ್ತ ದಧೀಚ ಒಬ್ಬಂಟಿಗ. ಅವನ ಕೈಯ್ಯಲ್ಲಿ ಬೇರೆ ಯಾವ ಅಸ್ತ್ರವು ಇಲ್ಲ. ಅವನ ಕೈಯ್ಯಲ್ಲಿ ಇದ್ದುದ್ದು ಒಂದು ಹಿಡಿ ದರ್ಭೆ ಮಾತ್ರ. ಆ ಹಿಡಿ ಹುಲ್ಲನ್ನೇ ಕೈಯ್ಯಲ್ಲಿ ಹಿಡಿದು ಮಹಾದೇವನನ್ನು ನೆನೆಸಿ ತನ್ನೊಡನೆ ಯುದ್ಧಕ್ಕೆ ಬಂದ ದೇವತೆಗಳ ಮೇಲೆ ಪ್ರಯೋಗಿಸಿದ. ಆ ಕುಶ ಮುಷ್ಠಿಯಲ್ಲಿಯ ಒಂದೊಂದು ಹುಲ್ಲು ಕಡ್ಡಿಯೂ ಕೂಡ ತ್ರಿಶೂಲಾಯುಧವಾಯಿತು. ಒಂದೊಂದು ದರ್ಭೆಯ ತುಂಡು ಕೂಡ ಪ್ರಳಯಾಗ್ನಿ. ನಾರಾಯಣನೆ ಮುಂತಾದ ಎಲ್ಲ ದೇವತೆಗಳು ಪ್ರಯೋಗಿಸಿದ ಅಸ್ತ್ರಗಳೆಲ್ಲವು ದಧೀಚಿಮುನಿಯ ದರ್ಭಾಸ್ತ್ರಕ್ಕೆ ನಮಸ್ಕಾರ ಮಾಡಿದವು. ಆ ಕುಶಾಸ್ತ್ರದಿಂದ ಭಯ ಭೀತರಾದ ದೇವತೆಗಳು ತಮ್ಮ ಬಲಸಾಮರ್ಥ್ಯವನ್ನೆಲ್ಲ ಕಳೆದುಕೊಂಡು ಓಡಿ ಹೋದರು. ಆಗ ಮಹಾಮಹಿಮನಾದ ಭಗವಾನ್ ವಿಷ್ಣುವು ಲಕ್ಷಲಕ್ಷ ವಿಷ್ಣು ಗಣಗಳನ್ನು ಸೃಷ್ಟಿಸಿದನು. ಮೂಲ ಮಹಾವಿಷ್ಣುವಿಗೆ ಸಮಾನರಾದ ಆ ಹರಿಗಣದ ವೀರರೆಲ್ಲ ದಧೀಚ ಮುನಿಯ ಮೇಲೆ ಏರಿ ಬಂದರು. ಅವರೆಲ್ಲರನ್ನು ಕ್ಷಣಾರ್ಧದಲ್ಲಿ ದಧೀಚಋಷಿಯು ಸುಟ್ಟು ಬಿಟ್ಟನು. ಆಗ ಆ ಲಕ್ಷ್ಮೀಕಾಂತನು ದಧೀಚನನ್ನು ತನ್ನ ವಿಶ್ವರೂಪವನ್ನು ತೋರಿಸಿ ದಧೀಚನನ್ನು ಆಶ್ಚರ್ಯ ಚಕಿತನನ್ನಾಗಿ ಮಾಡಿ ಗೆಲ್ಲಬೇಕು ಎಂದು ಬಹುರೂಪಿಯಾಗಿ ನಿಂತು ಕೊಂಡನು. ಕೋಟಿಸಂಖ್ಯೆಯ ದೇವಗಣಗಳನ್ನು, ಕೋಟಿಸಂಖ್ಯೆಯ ರುದ್ರಗಳನ್ನು ಕೋಟಿಕೋಟಿಬ್ರಹ್ಮಾಂಡಗಳನ್ನು, ದಧೀಚಮುನಿಗೆ ವಿಷ್ಣುವು ತನ್ನ ಶರೀರದಲ್ಲಿ ತೋರಿಸಿದನು. ಆಗ ದಧೀಚ ಮುನಿಯು ವಿಶ್ವರೂಪವನ್ನು ಧರಿಸಿದ ಆ ವಿಷ್ಣುವಿನ ಮೇಲೆ ನೀರನ್ನು ಪ್ರೋಕ್ಷಿಸಿದನು ಮತ್ತು ಹೇಳಿದನು.

**ದಧೀಚ :-** ಮಹಾಪರಾಕ್ರಮಿಯಾದ ವಿಷ್ಣುವೇ ಈ ಮಾಯೆಯನ್ನು ಬಿಟ್ಟು ಬಿಡು. ಮಾಯೆ ಎಲ್ಲವೂ ನಿತ್ಯಾಭೂತವಾಗಿದೆ. ನನ್ನ ಶರೀರದಲ್ಲಿಯೂ ಕೂಡ ಸಕಲ ಜಗತ್ತು ಇರುತ್ತದೆ. ನೀನು ಬ್ರಹ್ಮ ರುದ್ರ ಎಲ್ಲರೂ ನನ್ನ ಉದರದಲ್ಲಿ ಇರುತ್ತೀರಿ. ನಿನಗೆ ದಿವ್ಯ ಚಕ್ಷುಸ್ಸನ್ನು ಕೊಡುತ್ತೇನೆ. ನನ್ನ ಮಹಿಮೆಯನ್ನು ನೋಡು. ಹೀಗೆ ಹೇಳಿ ತನ್ನ ದೇಹದಲ್ಲಿ ಸಮಸ್ತ ಪ್ರಪಂಚವನ್ನೇ ಶ್ರೀಹರಿಗೆ ತೋರಿಸಿದನು. ಮತ್ತು ಹರಿಯನ್ನು ಕುರಿತು. ''ಈ ಮಾಯಾ ಮಂತ್ರಗಳಿಂದ ಏನು ಪ್ರಯೋಜನ? ವಸ್ತು ಶಕ್ತಿಯಾಗಲಿ ಧ್ಯಾನ ಶಕ್ತಿಯಾಗಲಿ ಏನು ಪ್ರಯೋಜನ? ಎಲ್ಲವೂ ಮಾಯೆಯೇ. ಈ ಮಾಯೆಯನ್ನು ಬಿಟ್ಟು ಪ್ರಯತ್ನ ಪೂರ್ವಕವಾಗಿ ನಿನ್ನ ನಿಜವಾದ ಶಕ್ತಿಯಿಂದ ನನ್ನ ಜೊತೆಗೆ ಯುದ್ಧ ಮಾಡು.'' ಎಂದು ಹೇಳಿದನು. ಮುನಿಯ ಈ ಮಾತನ್ನು ಕೇಳಿ ಮತ್ತು ಅವನ ಮಹಾ ಮಹಿಮೆಯನ್ನು ಕಂಡು ದೇವತೆಗಳು ನಾರಾಯಣನ ಕಡೆ ಧಾವಿಸಿ ಹೋದರು. ಆಗ ಬ್ರಹ್ಮನು ಬಂದು ವಿಷ್ಣುವಿಗೆ ಯುದ್ಧವನ್ನು ಮಾಡಬೇಡ ಎಂದು ಹೇಳಿ ಸಂಗ್ರಾಮದಿಂದ ಹರಿಯನ್ನು ಪರಾಙ್ಮುಖನನ್ನಾಗಿ ಮಾಡಿದನು. ಬ್ರಹ್ಮನ ಮಾತನ್ನು ಕೇಳಿ

ಸೋತು ಹೋದ ಆ ಶ್ರೀ ಹರಿಯು ದಧೀಚಮುನಿಗೆ ನಮಸ್ಕಾರಮಾಡಿ ಅಲ್ಲಿಂದ ಹೊರಟು ಹೋದನು. ಆಗ ಕ್ಷುಪರಾಜನು ಅತ್ಯಂತ ಖಿನ್ನನಾಗಿ ದಧೀಚಮುನಿಯ ಬಳಿಗೆ ಬಂದು ಅವನಿಗೆ ನಮಸ್ಕಾರಮಾಡಿದನು. ಅನಂತರ ಪೂಜಿಸಿದನು. ಕೊನೆಗೆ ಪ್ರಾರ್ಥಿಸಿ ವಿಜ್ಞಾಪನೆ ಮಾಡಿ ಬಂದನು.

**ಕ್ಷುಪರಾಜ** :- ಮಿತ್ರನಾದ ದಧೀಚಿಮುನಿಯೆ ನಾನು ಅಜ್ಞಾನದಿಂದ ಈ ಕಾರ್ಯವನ್ನು ಮಾಡಿದೆ. ನೀನು ಮಹಾರುದ್ರಭಕ್ತ. ನಿನಗೆ ವಿಷ್ಣುವಿನಿಂದಲೂ ದೇವತೆಗಳಿಂದಲೂ ಯಾವುದೇ ಭಯವಿಲ್ಲ. ಅಪಾಯವೂ ಇಲ್ಲ. ನೀನು ಪ್ರಸನ್ನನಾಗು. ದುರ್ಜನರಿಗೆ ಪರಮೇಶ್ವರನಲ್ಲಿ ಭಕ್ತಿಯು ದೊರಕಲಾರದು. ನನ್ನಂಥಹ ಕ್ಷುದ್ರ ಕ್ಷತ್ರಿಯರಿಗೂ ಪರಮೇಶ್ವರನಲ್ಲಿ ಭಕ್ತಿಯು ದುರ್ಲಭ. ನೀನು ಈಶ್ವರಭಕ್ತರಲ್ಲಿ ಅತ್ಯಂತ ಶ್ರೇಷ್ಠ ನಾಗಿರುವೆ. ಆಗ ದಧೀಚ ಮುನಿಯು ತನಗೆ ಕ್ಷಮೆಯನ್ನು ಕೇಳಿದ ಮಿತ್ರ ಕ್ಷುಪರಾಜನಿಗೆ ಅನುಗ್ರಹವನ್ನು ಮಾಡಿದನು. ಆದರೆ ತನ್ನ ಮೇಲೆ ಯುದ್ಧಮಾಡಲು ಬಂದ ದೇವತೆಗಳಿಗೆ ಮಾತ್ರ ಶಾಪವನ್ನು ಕೊಟ್ಟನು. ''ದಕ್ಷಪ್ರಜಾಪತಿಯ ಯಜ್ಞದಲ್ಲಿ ವಿಷ್ಣುವೂ ದೇವೇಂದ್ರನೆ ಮೊದಲಾದ ದೇವತೆಗಳು ಹರನ ಕೋಪಾಗ್ನಿಯಿಂದ ನಾಶವಾಗಲಿ.'' ಹೀಗೆ ಹೇಳಿ ದೇವತೆಗಳಿಗೆ ಶಾಪಕೊಟ್ಟು ಕ್ಷುಪನನ್ನು ಕುರಿತು ದಧೀಚನು ಹೇಳಿದನು.

**ದಧೀಚ** :- ರಾಜಶ್ರೇಷ್ಠನೇ ದೇವತೆಗಳಿಗೂ ರಾಜರಿಗೂ ಬ್ರಾಹ್ಮಣರೇ ಪೂಜ್ಯರಾಗಿರುವರು. ಅವರೇ ಸರ್ವಶಕ್ತರು. ಸಮಸ್ತಶಕ್ತಿಗಳನ್ನು ಯೋಗ್ಯ ಬ್ರಾಹ್ಮಣರು ಸಂಪಾದಿಸಬಲ್ಲರು.'' ಎಂದು ಹೇಳಿ ಮಹಾ ತೇಜಸ್ವಿಯಾದ ಆ ದಧೀಚನು ತನ್ನ ಪರ್ಣಶಾಲೆಯಲ್ಲಿ ಪ್ರವೇಶಿಸಿದನು. ದಧೀಚಮುನಿಗೆ ನಮಸ್ಕಾರಮಾಡಿ ಕ್ಷುಪರಾಜನೂ ಕೂಡ ತನ್ನ ಅರಮನೆಗೆ ತೆರಳಿದನು.

ಆ ದಧೀಚಮಹರ್ಷಿಯ ಆಶ್ರಮ ಸ್ಥಾನವೇ ಸ್ಥಾನೇಶ್ವರ ಎಂಬ ಪ್ರಸಿದ್ಧ ಕ್ಷೇತ್ರವಾಗಿದೆ. ಸ್ಥಾನೇಶ್ವರ ಕ್ಷೇತ್ರದ ಯಾತ್ರೆಯನ್ನು ಮಾಡಿದವರಿಗೆ ಶಿವ ಸಾಯುಜ್ಯವು ಪ್ರಾಪ್ತವಾಗುತ್ತದೆ.

*ಲಿಂಗ ಮಹಾಪುರಾಣ ಪೂರ್ವಾರ್ಧದ ಕ್ಷುಪರಾಜ ದಧೀಚಿಮುನಿಗಳ ಉಪಾಖ್ಯಾನ ಎಂಬ ಮೂವತ್ತಾರನೆಯ ಅಧ್ಯಾಯ ಸಮಾಪ್ತವಾದುದು.*

—o—

**ಸನತ್ಕುಮಾರ :-** ನಂದೀಶ್ವರನೇ ನೀನು ಆ ಪರಮೇಶ್ವರನ ಬಳಿಗೆ ಹೇಗೆ ಬಂದೆ ? ಅದನ್ನು ಹೇಳು.

**ನಂದೀಶ್ವರ :-** ನನ್ನ ತಂದೆಯ ಹೆಸರು ಶಿಲಾದ. ಅವನು ಕುರುಡ. ಏನು ಕಾಣುತ್ತಿದ್ದಿಲ್ಲ. ಆದರೆ ಅಂಧನಾದರೂ ಅವನಿಗೆ ಮಕ್ಕಳಾಗಬೇಕು ಎಂಬ ಹೆಬ್ಬಯಕೆ ಹಂಬಲಾಗಿ ಅವನ ಹೃದಯವನ್ನು ಹಿಂಡುತ್ತಿತ್ತು. ಅದಕ್ಕಾಗಿ ನನ್ನ ತಂದೆ ಶಿಲಾದನು ಇಂದ್ರನ ಕುರಿತು ತಪಸ್ಸು ಮಾಡಿದನು. ಅವನ ತೀವ್ರ ತಪಸ್ಸಿಗೆ ಪರಿತುಷ್ಟನಾದ ಪುರಂದರ 'ಬೇಕಾದವರಬೇಡು' ಎಂದು ಹೇಳಿದ. ಆಗ ತಪಸ್ವಿ ಶಿಲಾದನು. ''ನನಗೆ ಮೃತ್ಯು ಇಲ್ಲದಿರುವ ಮಗನನ್ನು ಕರುಣಿಸು. ಅವನು ಅಯೋನಿಜನಾಗಿರಬೇಕು.

**ದೇವೇಂದ್ರ:-** ನಾನು ಯೋನಿಜನು ಮರಣವುಳ್ಳವನೂ ಆದ ಮಗನನ್ನು ಮಾತ್ರ ಕೊಡಬಲ್ಲೆ. ಲೋಕದಲ್ಲಿ ಮರಣವಿಲ್ಲದವರು ಯೋನಿಯಿಲ್ಲದೆ ಹುಟ್ಟಿದವರು ಯಾರೂ ಇಲ್ಲ. ಸ್ವಯಂ ಬ್ರಹ್ಮನೂ ಕೂಡ ಅಂಥಹ ಮಗನನ್ನು ಕೊಡಲಾರ. ಬ್ರಹ್ಮನೂ ಕೂಡ ಕಮಲದಲ್ಲಿ ಹುಟ್ಟಿದನು. ಅಂಡದಲ್ಲಿ ಹುಟ್ಟಿದನು. ಮಹೇಶ್ವರನ ಅವಯವದಲ್ಲಿ ಹುಟ್ಟಿದನು. ಭವಾನಿಯ ಮಗನಾಗಿ ಹುಟ್ಟಿದನು. ಮರಣವು ಅವನಿಗೂ ತಪ್ಪಿದ್ದಲ್ಲ. ಎರಡು ಪರಾರ್ಧ ವರುಷ ಬದುಕಿದ್ದರೂ ಕೊನೆಗೆ ಅವನೂ ಕೂಡ ಮರಣ ಹೊಂದಲೇ ಬೇಕು. ಆದುದರಿಂದ ನೀನು ಅಯೋನಿಜನೂ ಮೃತ್ಯುರಹಿತನೂ ಆದ ಮಗನನ್ನು ಪಡೆಯಲು ಪ್ರಯತ್ನವನ್ನು ಆಶೆಯನ್ನು ಬಿಟ್ಟು ಬಿಡು. ನಿನಗೆ ಸಮಾನನಾದ ಮಗನನ್ನು ಬೇಕಾದರೆ ಕೊಡುತ್ತೇನೆ.

**ಶಿಲಾದ :-** ಬ್ರಹ್ಮನು ಅಂಡದಲ್ಲಿಯ ಬ್ರಹ್ಮಾಂಡದಲ್ಲಿ ಹುಟ್ಟಿದನು. ತಾವರೆಯಲ್ಲಿ ಜನಿಸಿದನು. ಮಹೇಶ್ವರನ ಅವಯವದಲ್ಲಿ ಜನಿಸಿದನು. ಬ್ರಹ್ಮನ ಈ ಉತ್ಪತ್ತಿಯು ಹೇಗೆ ಸಂಗತವಾಗುವದು? ಕಮಲದಲ್ಲಿ ಹುಟ್ಟಿದ ಬ್ರಹ್ಮನ ಮಗನೆ ದಕ್ಷ ಪ್ರಜಾಪತಿಯು ಆ ದಕ್ಷನ ಮಗನಾದ ದಾಕ್ಷಾಯಣಿಯೇ ಬ್ರಹ್ಮನ ಮಗಳು. ಅಂದ ಬಳಿಕ ಬ್ರಹ್ಮನು ಭವಾನಿಯ ಮಗನೇ ಎಂದು ನೀನು ಹೇಳಿದುದು ಹೇಗೆ ಸಂಗತವಾದದ್ದು?

**ದೇವೇಂದ್ರ:-** ಶಿಲಾದ ಮುನಿಯೆ ಬ್ರಹ್ಮನ ಉತ್ಪತ್ತಿ ವಿಷಯದಲ್ಲಿ ಸಂದೇಹಕ್ಕೆ ಅವಕಾಶವಿಲ್ಲದ್ದು ನಿಜವೆ. ಅದಕ್ಕೆ ಕಾರಣವನ್ನು ಹೇಳುತ್ತೇನೆ. ತತ್ಪುರುಷ ಎಂಬ ಕಲ್ಪದಲ್ಲಿ ಬಂದ ಪರಮೇಶ್ವರನ ಅವತಾರವನ್ನು ನಿನ್ನ ಸಂದೇಹ ಪರಿಹಾರಕ್ಕಾಗಿ ಹೇಳುತ್ತೇನೆ. ಮಹಾದೇವನು ಮೊದಲು ಬ್ರಹ್ಮನನ್ನು ಸೃಷ್ಟಿಸಿದನು. ಮೇಘವಾಹನ ಕಲ್ಪದಲ್ಲಿ ನಾರಾಯಣನು ಮೇಘವಾಗಿ ದೇವಮಾನದ ಅನೇಕ ಸಾವಿರ ವರ್ಷಗಳವರೆಗೆ ಮಹಾದೇವನನ್ನು ಪ್ರೀತಿಯಿಂದ ತನ್ನ ಮೇಲೆ ಕೂಡಿಸಿಕೊಂಡಿದ್ದನು. ಶಿವನು ಹರಿಯ ಮನೋಭಾವವನ್ನು ತಿಳಿದು ಬ್ರಹ್ಮನೊಡನೆ ಕೂಡಿದ ಸಕಲ ಪ್ರಪಂಚವನ್ನೂ ಸೃಷ್ಟಿಮಾಡುವ ಶಕ್ತಿಯನ್ನು ಆ ಹರಿಗೆ ಕೊಟ್ಟನು. ಆಗ ಆ ಕಲ್ಪಕ್ಕೆ ಮೇಘವಾಹನ ಕಲ್ಪವೆಂದು

ಹೆಸರು ಬಂದಿತು. ಆ ಹರಿಯ ದೇಹದಲ್ಲಿ ಹುಟ್ಟಿದ ಹಿರಣ್ಯಗರ್ಭ ಬ್ರಹ್ಮನು ತಪಸ್ಸಿನಿಂದ ಶಿವನನ್ನು ಪ್ರತ್ಯಕ್ಷಮಾಡಿಕೊಂಡು ಅವನನ್ನು ಕುರಿತು ಹೇಳಿದನು. ನಿನ್ನ ಎಡಭಾಗದ ಅವಯವದಿಂದ ವಿಷ್ಣುವು ಹುಟ್ಟಿದನು. ಬಲಭಾಗದ ಅವಯವದಿಂದ ನಾನು ಹುಟ್ಟಿದೆನು. ನನ್ನೊಡನೆ ಕೂಡಿ ನಾರಾಯಣನು ಈ ಸಕಲ ಜಗತ್ತನ್ನೂ ಸೃಷ್ಟಿಸಿದನು. ದೇವದೇವನೂ ಲೋಕಕ್ಕೆಗುರುವೂ ಆದ ನಿನ್ನನ್ನು ವಿಶ್ವರೂಪನಾದ ವಿಷ್ಣುವು ಮೇಘವಾಗಿ ಹಗಲೂ, ರಾತ್ರಿಯೂ, ಹೊತ್ತುಕೊಂಡಿದ್ದನು. ಓ ಶಂಕರನೇ ಆ ನಾರಾಯಣನಿಗಿಂತಲೂ ನಾನು ನಿನ್ನಲ್ಲಿ ಹೆಚ್ಚು ಭಕ್ತಿಯಳ್ಳವನಾಗಿರುವೆನು. ನೀನು ಪ್ರಸನ್ನನಾಗಿ ನನಗೆ ನಿನ್ನ ಸರ್ವಾತ್ಮಸ್ವರೂಪವನ್ನು ಕರುಣಿಸು ಎಂದನು. ಆಗ ಬ್ರಹ್ಮನು ಆ ಕ್ಷಣದಲ್ಲಿಯೇ ಶಿವನಿಂದ ಸರ್ವಾತ್ಮ ಭಾವವನ್ನು ಪಡೆದು ಆತುರದಿಂದ ಹೋಗಿ ಬೆಳ್ಳಗಿರುವ ಪ್ರಳಯ ಸಮುದ್ರದಲ್ಲಿ ಭಯಂಕರವಾದ ಅಂಧಕಾರದಲ್ಲಿ ಪುರುಷೋತ್ತಮನಾದ ನಾರಾಯಣನನ್ನು ಕಂಡನು. ಕ್ಷೀರಸಮುದ್ರದಲ್ಲಿ ಯೋಗ ನಿದ್ರೆಯಿಂದ ಶೇಷಶಾಹಿಯಾಗಿ ಮಲಗಿರುವ ನಾರಾಯಣನನ್ನು ನೋಡಿ, ''ನಾರಾಯಣ ಹಿಂದೆ ನೀನು ನನ್ನನ್ನು ನುಂಗಿದಂತೆ ಈಗ ನಾನು ಶಿವನ ಅನುಗ್ರಹದಿಂದ ನಿನ್ನನ್ನು ನುಂಗುತ್ತೇನೆ.'' ಎಂದು ಹೇಳಿದನು. ಆಗ ಯೋಗನಿದ್ರೆಯಿಂದ ಎಚ್ಚೆತ್ತ ವಿಷ್ಣುವು ಮಂದಹಾಸಮಾಡುತ್ತ ಹಿರಣ್ಯಗರ್ಭನ ಶರೀರದಲ್ಲಿಯೇ ಪ್ರವೇಶಮಾಡಿದನು. ಆಗ ಆ ಬ್ರಹ್ಮನು ತನ್ನ ಭ್ರೂಮಧ್ಯದಿಂದ ಸೃಷ್ಟಿಸಿದನು. ಆ ಸಮಯಕ್ಕೆ ಸರಿಯಾಗಿ ಆ ವಿಷ್ಣು ಬ್ರಹ್ಮನಿಗೆ ಹಿಂದೆ ವರ ಕೊಟ್ಟಂತೆ ಈಗ ವಿಶೇಷ ಅನುಗ್ರಹ ಮಾಡಬೇಕೆಂದು ವಿಕಾರ ರೂಪದಿಂದ ಅಲ್ಲಿಗೆ ಬಂದನು. ವಿಷ್ಣು ಬ್ರಹ್ಮರಿಬ್ಬರು ಪ್ರಳಯಾಗ್ನಿಗೆ ಸಮಾನವಾದ ತೇಜೋರೂಪದಿಂದ ಬೆಳಗುವ ಶಿವನನ್ನು ನೋಡಿದರು. ಮತ್ತು ಆ ಶಿವನಿಗೆ ನಮಸ್ಕಾರಮಾಡಿದರು. ಅನಂತರ ಆ ಶಂಕರನು ಬ್ರಹ್ಮ ಶಿವರಿಗೆ ಅನುಗ್ರಹ ಮಾಡಿ ವರಕೊಟ್ಟು ಅಲ್ಲಿಯೇ ಅಂತರ್ಧಾನ ಹೊಂದಿದನು.

*ಲಿಂಗ ಮಹಾಪುರಾಣ ಪೂರ್ವಾರ್ಧದ ಬ್ರಹ್ಮನಿಗೆ ವರಲಾಭವನ್ನು ವರ್ಣನೆ ಎಂಬ ಮೂವತ್ತೇಳನೆಯ ಅಧ್ಯಾಯ ಮುಗಿದುದು.*



## ಮುಖ್ಯ ಸೃಷ್ಟಿಯ ನಿರೂಪಣ

**ಅಧ್ಯಾಯ - ೩೮**

**ನಂದೀಶ್ವರ :-** ಮಹಾದೇವನು ಅದೃಶ್ಯನಾಗಿ ಹೋದ ಬಳಿಕ ಬ್ರಹ್ಮನ ಭ್ರೂಮಧ್ಯದಿಂದ ಹುಟ್ಟಿದ ವಿಷ್ಣುವು ಬ್ರಹ್ಮನಿಗೆ ಹೇಳಿದನು.

**ವಿಷ್ಣು :-** ಚತುರ್ಮುಖನೆ ಶಂಕರನ ಎಡಭಾಗದಿಂದ ನಾನು ಹುಟ್ಟಿದೆನು. ಅವನ ಬಲಭಾಗದಿಂದ ನೀನು ಜನಿಸಿದೆ. ನನ್ನನ್ನು ಋಷಿಗಳು ಪ್ರಧಾನ, ಪ್ರಕೃತಿ, ಅವ್ಯಕ್ತ, ಅಜ ಎಂಬ ಹೆಸರಿನಿಂದ ಕರೆಯುವರು. ನಿನಗೆ ಪುರುಷ ಎಂದು ಕರೆಯುವರು. ಸಮಸ್ತ ಜಗತ್ತಿಗೆ ಒಡೆಯನಾದ ಈಶ್ವರನು ನಮ್ಮಿಬ್ಬರಿಗೂ ಕಾರಣ ಪುರುಷನಾಗಿ ಶ್ರುತಿಸ್ಮೃತಿಸಿದ್ಧನಾಗಿದ್ದಾನೆ.

ವಿಷ್ಣುವಿನ ಮಾತಿನಿಂದ ಕಮಲ ಸಂಭವನಾದ ಬ್ರಹ್ಮನು ಮಹಾರುದ್ರ ದೇವರನ್ನು ಸ್ತೋತ್ರಮಾಡಿ ನಮಸ್ಕಾರಮಾಡಿದನು. ಅನಂತರ ವಿಷ್ಣುವು ವರಾಹ ಅವತಾರಮಾಡಿ ಪ್ರಳಯ ಜಲದಲ್ಲಿ ಮುಳುಗಿ ಭೂಮಿಯನ್ನು ಎತ್ತಿ ತಂದು ಮೊದಲಿನಂತೆ ಅದರ

ಸ್ಥಾನದಲ್ಲಿ ಸ್ಥಾಪಿಸಿದನು. ಬಳಿಕ ಆ ಭೂಮಿಯಲ್ಲಿ ಪರ್ವತ, ನದಿ, ಸಮುದ್ರ, ಹಳ್ಳ, ತಿಟ್ಟುಗಳನ್ನೆಲ್ಲ ಸಮಪಡಿಸಿ ಸಕಲ ಸಸ್ಯಸಂಪತ್ತು ಸಮೃದ್ಧವಾಗಿ ಬೆಳೆಯುವಂತೆ ಮಾಡಿದನು. ಮತ್ತು ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮರ್ಹಲೋಕಗಳು ಎಂಬ ನಾಲ್ಕು ಲೋಕಗಳನ್ನು ಮೊದಲಿನಂತೆಯೇ ಕಲ್ಪಿಸಿದನು.

ಸರ್ವವ್ಯಾಪಿಯಾದ ವಿಷ್ಣುವು ಮೊದಲು ಕೌಮಾರಸೃಷ್ಟಿಯನ್ನು ಮಾಡಿ ಸನಕ, ಸನಂದನ, ಸನಾತನ, ಸನತ್ಕುಮಾರ ಎಂದು ನಾಲ್ಕು ಯೋಗ ನಿಷ್ಠರಾದ ಸನ್ಯಾಸಿಗಳನ್ನು ಸೃಷ್ಟಿಸಿದನು. ಅನಂತರ ಅವ್ಯಕ್ತದಿಂದ ಉತ್ಪನ್ನನಾದ ಬ್ರಹ್ಮದೇವನು ಮರೀಚಿ, ಭೃಗು, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ, ಸಂಕಲ್ಪ, ಧರ್ಮ, ಅಧರ್ಮ ಎಂಬ ಹನ್ನೆರಡು ಜನ ಪ್ರಜಾಪತಿಗಳನ್ನು ಬ್ರಹ್ಮದೇವರಲ್ಲಿ ಇದ್ದ ಮಹಾವಿಷ್ಣುವೇ ಹುಟ್ಟಿಸಿದನು. ಇವರಿಗಿಂತಲೂ ಮೊದಲು ಆ ವಿಷ್ಣುವು ಋಹು, ಸನತ್ಕುಮಾರ ಎಂಬ ಇಬ್ಬರು ಊರ್ಧ್ವ ರೇತಸ್ಕರಾದ ಬ್ರಹ್ಮ ಜ್ಞಾನಿಗಳನ್ನು ಹುಟ್ಟಿಸಿದನು. ಅವರು ನಿರಂತರ ಕೌಮಾರಾವಸ್ಥೆಯಲ್ಲಿ ಇರುವ ಬ್ರಹ್ಮರಿಗೆ ಸಮಾನರಾದ ಸರ್ವಜ್ಞಮೂರ್ತಿಗಳೇ ಆಗಿದ್ದಾರೆ. ಸಕಲ ಸಿದ್ಧಿಗಳೂ ಅವರಿಗೆ ಸ್ವಾಧೀನ.

*ಲಿಂಗ ಮಹಾಪುರಾಣ ಪೂರ್ವಾರ್ಧದ ವಿಷ್ಣುಮಾಡಿದ ಮುಖ್ಯ ಸೃಷ್ಟಿಯ ನಿರೂಪಣ ಎಂಬ ಮೂವತ್ತೆಂಟನೆಯ ಅಧ್ಯಾಯ ಸಮಾಪ್ತವಾದುದು*



## ಯುಗಧರ್ಮ ವಿವರಣೆ — ಅಧ್ಯಾಯ - ೩೯

**ನಂದೀಶ್ವರ :-** ಸನತ್ಕುಮಾರನೆ ಶಿಲಾದ ಮುನಿಯು ದೇವೇಂದ್ರನಿಗೆ ಬ್ರಹ್ಮನು ಯುಗಧರ್ಮಗಳನ್ನು ಹೇಗೆ ಕಲ್ಪಿಸಿದ್ದಾನೆ? ಎನ್ನುವದನ್ನು ಹೇಳು ಎಂದು ಕೇಳಿದನು.

**ದೇವೇಂದ್ರ :-** ಕೃತ, ತ್ರೇತಾ, ದ್ವಾಪರ, ಕಲಿ ಎಂದು ನಾಲ್ಕು ಬಗೆಯಾದ ಯುಗಗಳಿಗೆ ಅದೇ ಹೆಸರಿನ ಯುಗಾಭಿಮಾನಿಗಳಾದ ನಾಲ್ಕು ದೇವತೆಗಳಿರುತ್ತಾರೆ. ಕೃತ ಯುಗವು ಸತ್ವಗುಣ ಸ್ವರೂಪ. ತ್ರೇತಾಯುಗವು ರಜೋಗುಣ ಸ್ವರೂಪ. ದ್ವಾಪರ ಯುಗವು ರಜಸ್ಸು ತಮಸ್ಸು ಎಂಬ ಗುಣಗಳ ಮಿಶ್ರಣದಿಂದ ಕೂಡಿದುದು. ಕಲಿಯುಗವು ತಮೋಗುಣ ಸ್ವರೂಪವಾಗಿದೆ. ಆ ಯುಗಗಳಲ್ಲಿರುವ ಜನಜೀವನಾದಿಗಳು ಅದೇ ಗುಣಗಳನ್ನು ಅನುಸರಿಸಿರುವವು. ಕೃತಯುಗದಲ್ಲಿ ಪರಮೇಶ್ವರನ ಧ್ಯಾನೋಪಾಸನೆಗಳು ಅತ್ಯುತ್ತಮ ಧರ್ಮ. ತ್ರೇತಾಯುಗದಲ್ಲಿ ಯಜ್ಞ ಯಾಗಗಳು. ದ್ವಾಪರದಲ್ಲಿ ಭಕ್ತಿಯಿಂದ ಕೂಡಿದ ಪೂಜಾ ಪುನಸ್ಕಾರಗಳು. ಕಲಿಯುಗದಲ್ಲಿ ದಾನವು ಅತ್ಯಂತ ಶ್ರೇಷ್ಠ ಕರ್ಮ ಮತ್ತು ಅತ್ಯುತ್ತಮ ಧರ್ಮ ಎನಿಸುವುದು.

ಕೃತಯುಗಕ್ಕೆ ದೇವ ಮಾನದ ನಾಲ್ಕು ಸಾವಿರ ವರುಷಗಳು. ಸಂಧಿಕಾಲವು ನಾನೂರು ವರ್ಷಗಳು. ಸಂಧ್ಯಾಂಶವೂ, ನಾನೂರು ವರ್ಷಗಳು. ಕೃತಯುಗದಲ್ಲಿ ಮನುಷ್ಯರ ಪ್ರಮಾಣದಲ್ಲಿ ಪ್ರಜೆಗಳಿಗೆ ನಾಲ್ಕು ಸಾವಿರ ವರ್ಷಗಳ ಆಯುಸ್ಸು ಇರುವುದು. ಎಲೈ ಶಿಲಾದ ಮುನಿಯೇ ಭರತ ಖಂಡದಲ್ಲಿ ಈ ವ್ಯವಹಾರವೆಂದು ತಿಳಿ. ಕೃತಯುಗದಲ್ಲಿ

ಧರ್ಮವು ಪೂರ್ಣವಾಗಿರುವುದು. ಸಂಧಿಕಾಲವು ಕಳೆಯುತ್ತಲೂ, ಕಾಲುಭಾಗ ಧರ್ಮವು ಕಡಿಮೆಯಾಗುವುದು. ಹೀಗೆಯೇ ಪ್ರತಿಯೊಂದು ಯುಗದಲ್ಲೂ ಧರ್ಮವು ಕಾಲುಭಾಗ ಕಡಿಮೆಯಾಗುತ್ತ ಬರುವುದು.

ತ್ರೇತಾಯುಗ ಪ್ರಮಾಣವು ಕೃತಯುಗದ ನಾಲ್ಕನೆಯ ಒಂದು ಪಾಲು ಕಡಿಮೆಯಾದುದು. ದ್ವಾಪರಯುಗ ಪ್ರಮಾಣವು ಕೃತಯುಗದ ಅರ್ಧಭಾಗವು. ಕಲಿಯುಗ ಪ್ರಮಾಣವು ದ್ವಾಪರದ ಅರ್ಧಭಾಗವು. ಸಂಧಿಕಾಲವು ಕ್ರಮವಾಗಿ ಮುನ್ನೂರು ಇನ್ನೂರು ಒಂದು ನೂರು ವರ್ಷಗಳು. ಸಂಧ್ಯಾಂಶವೂ ಅಷ್ಟೇ ವರ್ಷಗಳು ಪ್ರತಿಯೊಂದು ಕಲ್ಪದಲ್ಲಿಯೂ ಕಾಲ ಪ್ರಮಾಣ ವ್ಯವಸ್ಥೆಯು ಹೀಗೆಯೇ ಇರುವುದು.

ಮೊದಲನೆಯದಾದ ಕೃತಯುಗದಲ್ಲಿ ಸನಾತನಧರ್ಮವು ನಾಲ್ಕುಭಾಗದಿಂದ ಪೂರ್ಣವಾಗಿರುವದು. ತ್ರೇತಾಯುಗದಲ್ಲಿ ಮೂರುಪಾದಗಳು. ದ್ವಾಪರಯುಗದಲ್ಲಿ ಎರಡು ಪಾದಗಳು ಕಲಿಯುಗದಲ್ಲಿ ಮೂರು ಪಾದಗಳಿಲ್ಲದುದಾಗಿ ಒಂದು ಪಾದದಿಂದ ಹೆಸರು ಉಳಿದಿರುವಷ್ಟು ಮಾತ್ರ ಧರ್ಮವಿರುವುದು.

ಕೃತಯುಗದಲ್ಲಿ ಸ್ತ್ರೀ ಪುರುಷ ರೂಪವಾದ ಮಿಥುನೋತ್ಪತ್ತಿಯೂ, ಮಧುರಾದಿ ರಸಗಳ ಪೂರ್ಣತೆಯಿಂದ ಕೂಡಿದ ಆಹಾರಗಳ ಉಪಯೋಗವೂ, ಪ್ರಜೆಗಳೆಲ್ಲರೂ ತೃಪ್ತರಾಗಿ ಯಾವಾಗಲೂ ಸಂತೋಷದಿಂದ ಕೂಡಿ ಸುಖಾನುಭವದಲ್ಲಾ ಸಕ್ತರಾಗಿರುವಿಕೆಯೂ, ಪ್ರಜೆಗಳಲ್ಲಿ ಒಬ್ಬರಿಗೊಬ್ಬರಿಗೆ ಉತ್ತಮಾಧಮವೆಂಬ ಭೇದ ವಿಲ್ಲದಿರುವಿಕೆಯೂ, ಶುಭಕಾರ್ಯ ಪ್ರವರ್ತನೆಯೂ ಸ್ತ್ರೀ ಪುರುಷರಿಗೆ ಸಮಾನವಾದ ಆಯುಃ ಪ್ರಮಾಣವೂ ರೂಪವೂ, ಸುಖವೂ, ಸಮಾನವಾದುದಾಗಿಯೂ ಇರುವುದು. ಸ್ತ್ರೀ ಪುರುಷರು ಪ್ರೀತಿಯಲ್ಲಿ ಸಮಾನವಾದವರಾಗಿ ಶಿತೋಷ್ಣಾದಿ ದ್ವಂದ್ವ ಬಾಧೆಗಳಿಲ್ಲ ದವರಾಗಿ ಪರಸ್ಪರ ದ್ವೇಷ, ಅಸೂಯಾ ಮುಂತಾದುವಿಲ್ಲದವರಾಗಿರುವರು. ಪ್ರಜೆಗಳು, ಪರ್ವತಗಳು, ಸಮುದ್ರ ತೀರಗಳು ಮುಂತಾದ ಸುಂದರ ಪ್ರದೇಶಗಳಲ್ಲಿ ಮನೆಗಳನ್ನು ಕಟ್ಟಿಕೊಳ್ಳದೆ ದುಃಖವಿಲ್ಲದೇ ಸತ್ವಗುಣಗಳಿಂದ ಕೂಡಿ ಒಬ್ಬೊಬ್ಬರೇ ವಾಸಮಾಡುವದರಲ್ಲಿ ಆಸಕ್ತರಾಗಿರುವರು. ಆ ಪ್ರಜೆಗಳು ನಿಷ್ಕಾಮಕರ್ಮಾಚರಣ ದಲ್ಲಾಸಕ್ತರಾಗಿಯೂ, ಯಾವಾಗಲೂ ಸಂತೋಷಚಿತ್ತರಾಗಿರುವರು. ಕೃತಯುಗದಲ್ಲಿ ಜನರಿಗೆ ಶುಭಕರ್ಮಗಳಲ್ಲಿಯಾಗಲೀ, ಪಾಪಕರ್ಮಗಳಲ್ಲಿಯಾಗಲೀ ರಾಗದ್ವೇಷದ ಪ್ರವೃತ್ತಿ ಇಲ್ಲ. ಅಗ ವರ್ಣಗಳ ಮತ್ತು ಆಶ್ರಮಗಳ ವ್ಯವಸ್ಥೆಯೂ ಕೂಡ ಸರಿಯಾಗಿತ್ತು. ಆದುದರಿಂದ ವರ್ಣ ಸಾಂಕರ್ಯವೂ ಇರಲಿಲ್ಲ.

ತ್ರೇತಾಯುಗವು ಬಂದ ಮೇಲೆ ಕೃತಯುಗದ ರಸಪುಷ್ಟಿಯ ನಾಶವಾಗುವುದು. ಈ ರಸಪುಷ್ಟಿ ರೂಪವಾದ ಸಿದ್ಧಿಯು ನಷ್ಟವಾದರೆ ಮತ್ತೊಂದು ಸಿದ್ಧಿಯುಂಟಾಗುವದು. ಅದೇನೆಂದರೆ ? ನೀರು ಸೂರ್ಯಕಿರಣಗಳಿಂದ ಸೂಕ್ಷ್ಮವಾಗಿ ಮೇಘವಾಗಿ ಪರಿಣಮಿಸುವುದು. ಧ್ವನಿ ಮಾಡುತ್ತಿರುವ ಆ ಮೇಘಗಳ ದೆಸೆಯಿಂದ ಭೂಮಿಯ ಮೇಲೆ ಮಳೆಯು ಬೀಳುವುದು. ಒಂದಾವೃತ್ತಿ ಮಳೆಯು ಬಿದ್ದರೇ ಸಾಕು. ಆ ಮಳೆಯಿಂದ ನೆನೆದ ಭೂಮಿಯಲ್ಲಿ ಗೃಹವೆಂಬ ಹೆಸರಿನ ಅನೇಕ ಮರಗಳು ಬೆಳೆದು ಸಕಲ ಪ್ರಜೆಗಳಿಗೂ ಜೀವನಕ್ಕೆ ಬೇಕಾದ ವಸ್ತುಗಳೆಲ್ಲಿವೂ ಅವುಗಳಿಂದ ದೊರಕುವವು. ತ್ರೇತಾಯುಗದ

ಆದಿಯಲ್ಲಿ ಪ್ರಜೆಗಳು ಆ ಮರಗಳಿಂದ ದೊರಕಿದ ವಸ್ತುಗಳಿಂದಲೇ ಜೀವನವನ್ನು ನಡೆಸುವರು. ಹೀಗೆಯೇ ಅನೇಕ ವರ್ಷಗಳು ಕಳೆಯಲು ಆ ಪ್ರಜೆಗಳ ಬುದ್ಧಿ ವ್ಯತ್ಯಾಸದಿಂದ ಅಕಸ್ಮಾತಾಗಿ ಪ್ರೀತಿ ಅತ್ಯಾಶೆ ಮುಂತಾದ ಮನೋಭಾವಗಳುಂಟಾಗುವವು. ಪ್ರಜೆಗಳ ಆ ದುಷ್ಟ ಭಾವಗಳ ವ್ಯತ್ಯಾಸದಿಂದ ಗೃಹವೆಂಬ ಹೆಸರಿನ ಮರಗಳೆಲ್ಲವೂ ನಾಶವಾಗುವವು.

ಆ ಗೃಹ ಸಂಜ್ಞೆಯ ಮರಗಳು ನಾಶವಾಗುತ್ತಲೂ ಸ್ತ್ರೀ ಪುರುಷರೂಪದಿಂದ ಏಕಕಾಲದಲ್ಲಿ ಹುಟ್ಟಿದ ಪ್ರಜೆಗಳು ಆ ಸಿದ್ಧಿಯನ್ನು ಮತ್ತೆ ಧ್ಯಾನಮಾಡುವರು. ಅವರ ಧ್ಯಾನವು ಸತ್ಯ ಸ್ವರೂಪವಾದುದರಿಂದ ಮತ್ತೆ ಆ ವೃಕ್ಷಗಳು ಉತ್ಪತ್ತಿಯಾಗುವವು. ಆ ಮರಗಳು ವಸ್ತ್ರಗಳನ್ನೂ, ಫಲಗಳನ್ನೂ ಆಭರಣಗಳನ್ನೂ ಕೊಡುವವು. ಆ ಮರಗಳಲ್ಲಿಯೇ ಪ್ರತಿಯೊಂದು ಎಲೆಯಲ್ಲಿಯೂ ಸುವಾಸನೆಯಿಂದಲೂ, ಒಳ್ಳೆಯ ಬಣ್ಣದಿಂದಲೂ, ಉತ್ತಮವಾದ ರುಚಿಯಂದಲೂ ಕೂಡಿದ, ನೊಣಗಳು ಮುತ್ತದ, ಅತ್ಯಂತ ಬಲವನ್ನು ಕೊಡುವ ಮಧುವು ತುಂಬಿರುವುದು. ಆ ಮಧುವಿನಿಂದ ಆ ಪ್ರಜೆಗಳು ತಮ್ಮ ಆಯಸ್ಸು ಕಳೆಯುವವರೆಗೂ ಸುಖವಾಗಿ ಜೀವನ ಮಾಡಿಕೊಂಡಿರುವರು. ಆ ಸಿದ್ಧಿಯಿಂದ ಪ್ರಜೆಗಳು ಸಂತೋಷ ಚಿತ್ತರಾಗಿ ಪುಷ್ಟಿಯುಳ್ಳವರಾಗಿಯೂ, ಯಾವ ದುಃಖವೂ ಇಲ್ಲದವರಾಗಿದ್ದರು. ಕೆಲವು ಕಾಲದ ಮೇಲೆ ಆ ಪ್ರಜೆಗಳು ಮತ್ತೆ ಅತ್ಯಾಸೆಯಿಂದ ಪೀಡಿತರಾಗಿ ಆ ವೃಕ್ಷಗಳಲ್ಲಿ ಮಧುವನ್ನು ಬಲಾತ್ಕಾರದಿಂದ ಸಂಗ್ರಹಿಸಬೇಕಾಯಿತು. ಜೇನುನೊಣಗಳು ಸಂಗ್ರಹಿಸಿದ ಜೇನನ್ನು ತೆಗೆದುಕೊಳ್ಳಬೇಕಾಯಿತು. ಆ ಪ್ರಜೆಗಳ ಅತ್ಯಾಸೆಯಿಂದ ಕೂಡಿದ ಅಪಚಾರದಿಂದ ಆ ಕಲ್ಪವೃಕ್ಷಗಳು ಅಲ್ಲಲ್ಲಿ ನಾಶವಾದವು. ಜೇನು ಕೂಡ ನಾಶವಾಯಿತು. ಕಾಲವಶದಿಂದ ಸಿದ್ಧಿಯು ಸ್ವಲ್ಪ ಮಾತ್ರ ಉಳಿದುಕೊಂಡಿದ್ದಿತು. ತ್ರೇತಾಯುಗವು ಮುಂದುವರಿಯುತ್ತ ಪ್ರಜೆಗಳು ಶೀತ, ಉಷ್ಣ, ಮಳೆ, ಗಾಳಿ, ಬಿಸಿಲು ಮುಂತಾದವುಗಳ ಬಾಧೆಯಿಂದ ದುಃಖವುಳ್ಳವರಾದರು. ಈ ದ್ವಂದ್ವದುಃಖಗಳಿಂದ ಪೀಡಿತರಾದ ಆ ಪ್ರಜೆಗಳು ಆ ದುಃಖ ನಿವಾರಣೆಗಾಗಿ ಪರ್ವತಗಳಲ್ಲಿ ಮನೆಗಳನ್ನು ಕಟ್ಟಿಕೊಂಡು ವಾಸವಾಗಿದ್ದರು. ಆ ಪ್ರಜೆಗಳು ಪೂರ್ವದಲ್ಲಿ ಮನೆಯಿಲ್ಲದೇ ಸ್ವೇಚ್ಛಾಚಾರಿಗಳಾಗಿ ಹೇಗೆ ವಾಸವಾಗಿದ್ದರೋ ಹಾಗೆಯೇ ಮನೆಗಳನ್ನು ಕಟ್ಟಿಕೊಂಡು ಮೇಲೆಯೂ ತಮ್ಮ ತಮ್ಮ ಪ್ರೀತಿ ಸಂಬಂಧಗಳಿಗನುಸಾರವಾಗಿ ವಾಸವಾಗಿದ್ದರು. ಶೀತೋಷ್ಣಾದಿ ದ್ವಂದ್ವಗಳ ಬಾಧೆಗೆ ಪ್ರತೀಕಾರವನ್ನು ಮಾಡಿದಮೇಲೆ ಕಲ್ಪವೃಕ್ಷಗಳು ಮಧುವಿಲ್ಲದೇ ನಾಶವಾದುದರಿಂದ ಜೀವನೋಪಾಯದ ಯೋಚನೆಯನ್ನು ಮಾಡಿದರು. ಪ್ರಜೆಗಳು ಈ ವಿಚಾರದಲ್ಲಿ ಒಬ್ಬರಿಗೊಬ್ಬರು ವಿವಾದಮಾಡುತ್ತಾ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿರಲು ಆ ತ್ರೇತಾಯುಗದಲ್ಲಿ ಮತ್ತೆ ಇನ್ನೊಂದು ಸಿದ್ಧಿಯು ಅವರಿಗೆ ಕಾಣಿಸಿಕೊಂಡಿತು. ಅವರ ಜೀವನೋಪಾಯ ಸಾಧಕವಾದ ಮತ್ತೊಂದು ಮಳೆಯು ವಿಶೇಷವಾಗಿ ಸುರಿಯಿತು. ಆ ಮಳೆಯ ನೀರುಗಳು ದೊಡ್ಡ ದೊಡ್ಡ ನದಿಗಳಾದವು. ಮಳೆಯು ಹೆಚ್ಚಾಗಿ ಆಗಲು ಗಿರಿ ನದಿಗಳೂ ದೊಡ್ಡ ಹೊಳೆಗಳಾದವು. ಎರಡನೆಯ ಮಳೆಯಿಂದ ಹೀಗೆ ನದಿಗಳುಂಟಾಗಲು, ಭೂಮಿಯ ಮೇಲೆ ಬಿದ್ದ ಮಳೆಯ ನೀರಿನ ಸಂಬಂಧದಿಂದ ಭೂಮಿಯಲ್ಲಿ ಸಸ್ಯಗಳು ಉಂಟಾದವು. ಆ ಮೇಲೆ ಸ್ವಲ್ಪ ಮಟ್ಟಿಗೆ ಉತ್ತ ಭೂಮಿಯಲ್ಲಿ ಗ್ರಾಮಗಳಲ್ಲಿ ಬೆಳೆಯುವ ಸಸ್ಯಗಳೂ,

ಬೀಜವನ್ನು ಬಿತ್ತದೆ ಕಾಡಿನಲ್ಲಿ ಬೆಳೆಯುವ ಸಸ್ಯಗಳೂ ಸೇರಿ ಹದಿನಾಲ್ಕು ಬಗೆಯ ಧಾನ್ಯಗಳೂ, ಋತುಗಳಿಗನುಸಾರವಾದ ಹೂಗಳೂ, ಹಣ್ಣುಗಳೂ, ಮರಗಳೂ, ಪೊದೆಗಳೂ, ಉಂಟಾದವು. ಭತ್ತ, ಜವೇಗೋಧಿ, ಉದ್ದು, ಗೋಧಿ, ಕಡಲೆ, ಎಳ್ಳು, ಹೆಸರು, ಹುರಳಿ ಇವು ಗ್ರಾಮದಲ್ಲಿ ಬೆಳೆಯುವವು. ಸಾಮೆ, ತೃಣಧಾನ್ಯ, ಕಾಡುಎಳ್ಳು, ಬಿಳೀ ಗುಲಗಂಜಿ, ಬಿದಿರಕ್ಕಿ, ಕಾಡು ಹೆಸರು. ಇವು ಬಿತ್ತದೇ ಕಾಡಿನಲ್ಲಿ ಬೆಳೆವ ಧಾನ್ಯಗಳು. ಇವೇ ಹದಿನಾಲ್ಕು ಬಗೆಯ ಧಾನ್ಯಗಳು. ಈ ರೀತಿಯಲ್ಲಿ ಬೇರೆ ಬೇರೆ ಮರಗಳ ಜಾತಿಗಳೂ, ಸಸ್ಯಗಳೂ ಬೆಳೆದವು. ಇವುಗಳಿಂದ ತ್ರೇತಾಯುಗದಲ್ಲಿ ಪ್ರಜೆಗಳು ಜೀವನವನ್ನು ನಡೆಸುತ್ತಿದ್ದರು. ಮತ್ತೆ ಆ ಜನರಿಗೆ ಪ್ರೀತಿಯೂ, ಅತ್ಯಾಸೆಯೂ ವಿಶೇಷವಾಗಿ ಹೆಚ್ಚಿ, ಆ ತ್ರೇತಾಯುಗದ ಕಾಲಧರ್ಮಕ್ಕನುಸಾರವಾಗಿ ಪದಾರ್ಥಗಳ ಅವಶ್ಯಕತೆಯು ಹೆಚ್ಚಿದುದರಿಂದ ಆ ಪ್ರಜೆಗಳು ಪ್ರಯತ್ನ ಪೂರ್ವಕವಾಗಿ ತಮ್ಮ ಶಕ್ತಿಗನುಸಾರವಾಗಿ ನದಿಗಳನ್ನೂ, ಹೊಲಗದ್ದೆಗಳನ್ನೂ, ಪರ್ವತಗಳನ್ನೂ, ಆಶ್ರಯಿಸಿ, ಮರ ಗಿಡಗಳನ್ನೂ, ಸಸ್ಯಗಳನ್ನೂ, ಬೆಳೆಮಾಡಿದರು.

ಕಾಲ ವಿಪರ್ಯಸದಿಂದ ಹಿಂದೆ ಹೇಳಿದ ಹದಿನಾಲ್ಕು ಬಗೆಯ ಸಸ್ಯಗಳೂ ನಾಶ ಹೊಂದಿದವು. ಅವುಗಳೆಲ್ಲವೂ ಭೂಮಿಯನ್ನು ಪ್ರವೇಶಿಸಿದುವೆಂದು ತಿಳಿದು ವಿಷ್ಣುವು ಪೃಥು ಚಕ್ರವರ್ತಿಯ ರೂಪದಿಂದ ಪ್ರಯತ್ನ ಪೂರ್ವಕವಾಗಿ ಸಕಲ ಪ್ರಾಣಿಗಳ ಹಿತಕ್ಕಾಗಿ ಆ ಭೂಮಿಯನ್ನು ಗೋವನ್ನಾಗಿ ಭಾವಿಸಿ ಸಕಲ ವಸ್ತುಗಳನ್ನೂ ಕರೆದನು. ಎಂದರೆ ಸಕಲ ವಸ್ತುಗಳೂ ಭೂಮಿಯಲ್ಲಿ ಬೆಳೆಯುವಂತೆ ಮಾಡಿದನು. ಅದು ಮೊದಲುಗೊಂಡು ಸಸ್ಯಗಳೆಲ್ಲವೂ ನೇಗಿಲಿನಿಂದ ಉತ್ತ ಭೂಮಿಯಲ್ಲಿ ಬೆಳೆಯುವ ಅಭ್ಯಾಸವಾಯಿತು. ಜೀವಿಸಲಿಚ್ಛೆಯುಳ್ಳ ಪ್ರಜೆಗಳು ಕೃಷಿರೂಪಜೀವನವನ್ನು ಹೊಂದಿದರು. ಕೃಷಿಮಾಡಬೇಕೆಂಬ ಪ್ರಯತ್ನವನ್ನು ವಾರ್ತಾವೃತ್ತಿಯೆಂದು ಹೇಳುವರು.

ತ್ರೇತಾಯುಗದ ಕೊನೆಯಲ್ಲಿ ಜನಗಳಿಗೆ ಕೃಷಿಯನ್ನು ಬಿಟ್ಟು ಮತ್ತೊಂದರಿಂದ ಜೀವನವು ದೊರೆಯುತ್ತಿರಲಿಲ್ಲ. ಆ ಕಾಲದಲ್ಲಿ ಹರಿಯುವ ನೀರನ್ನು ಗುದ್ದಲಿ ಮುಂತಾದವುಗಳ ಸಹಾಯವಿಲ್ಲದೇ ಕೈಯಿಂದಲೇ ಬೇಕಾದ ಕಡೆಗೆ ತಿರುಗಿಸಿಕೊಂಡು ವ್ಯವಸಾಯ ಮಾಡುತ್ತಿದ್ದರು. ಆ ಕಾಲದಲ್ಲಿ ಜನರು ಒಬ್ಬರು ಮೇಲೊಬ್ಬರು ಕೋಪವನ್ನು ಹೊಂದಿ ಹೆಂಡತಿ, ಮಕ್ಕಳು ಮುಂತಾದವರ ಧನವನ್ನು ಬಲಾತ್ಕಾರದಿಂದ ಕಿತ್ತುಕೊಳ್ಳುತ್ತಿದ್ದರು. ಯುಗಧರ್ಮವು ಈ ಸ್ಥಿತಿಗೆ ಬಂದಿತು.

ಇವನ್ನು ಕಂಡು ಸರ್ವವ್ಯಾಪಿಯಾದ ವಿಷ್ಣುವು ಲೋಕದಲ್ಲಿ ಧರ್ಮ ರಕ್ಷಣೆ ಮಾಡಿ ಅದನ್ನು ನೆಲೆಗೊಳಿಸುವದಕ್ಕೂ, ಜನರ ದುಃಖವನ್ನು ನಾಶಮಾಡಿ ರಕ್ಷಿಸುವದಕ್ಕೂ, ಕ್ಷತ್ರಿಯರನ್ನು ಸೃಷ್ಟಿಮಾಡಿದನು. ಆ ಪ್ರಪಂಚ ಸ್ವರೂಪನಾದ ವಿಷ್ಣುವು ತನ್ನ ತೇಜಸ್ಸಿನ ಶಕ್ತಿಯಿಂದಲೇ ವರ್ಣಾಶ್ರಮಧರ್ಮಗಳನ್ನು ಪ್ರತಿಷ್ಠೆಮಾಡಿದನು. ಸ್ವಧರ್ಮದಿಂದಲೂ, ಜೀವನೋಪಾಯದಿಂದಲೇ ಜೀವನಮಾಡಬೇಕೆಂಬ ನಿಯಮವನ್ನೂ ನಿರ್ಮಿಸಿದನು. ಆ ತ್ರೇತಾಯುಗದಲ್ಲಿ ಕ್ರಮವಾಗಿ ಯಜ್ಞಕಾರ್ಯ ಪ್ರವರ್ತನೆಯುಂಟಾಯಿತು. ಆ ಕಾಲದಲ್ಲಿಯೂ ಕೆಲವರು ಮೋಕ್ಷೇಚ್ಛೆಯುಳ್ಳವರು ಪಶುಯಜ್ಞವನ್ನು ಮಾಡುತ್ತಿರಲಿಲ್ಲ. ಶಿಲಾದ ಮುನಿಯೇ ಕೇಳು. ಸರ್ವಜ್ಞನಾದ ವಿಷ್ಣುವು ಕ್ರಮವಾಗಿ ಆ ತ್ರೇತಾಯುಗದ ಕೊನೆಯಲ್ಲಿ

ಬಲಾತ್ಕಾರದಿಂದ ಪಶುಯಜ್ಞವನ್ನು ಮಾಡಿದನು. ಆಗ ಬ್ರಾಹ್ಮಣರು ಪಶುಯಜ್ಞಮಾಡುವವನಿಗಿಂತಲೂ ಅಹಿಂಸಾಧರ್ಮದಿಂದ ಚರುಪುರೋಡಾಶಾದಿಗಳನ್ನು ಉಪಯೋಗಿಸಿ ಯಜ್ಞಮಾಡುವವನನ್ನು ಹೊಗಳುತ್ತಿದ್ದರು.

ದ್ವಾಪರ ಯುಗದಲ್ಲಿಯೂ ಕೂಡ ಮನುಷ್ಯರಲ್ಲಿ ಬುದ್ಧಿ ಭೇದಗಳುಂಟಾಗಿದ್ದವು. ಮನಸ್ಸಿನಿಂದಲೂ, ಮಾತಿನಿಂದಲೂ, ಕಾರ್ಯದಿಂದಲೂ, ಪ್ರತಿಯೊಬ್ಬರೂ ಬೇರೆ ಬೇರೆ ಭಾವಗಳನ್ನು ತೋರ್ಪಡಿಸುವರು. ಒಂದೆಡೆಯ ವರ್ತಮಾನವು ಮತ್ತೊಂದೆಡೆಗೆ ಬಹು ಕಷ್ಟದಿಂದ ತಿಳಿಯಬೇಕಾಗಿದ್ದಿತು. ಆ ಯುಗದಲ್ಲಿ ಸಮಸ್ತ ಪ್ರಾಣಿಗಳಿಗೂ ಶರೀರಾಯಾಸದಿಂದ ಜೀವನವು ಜರುಗಬೇಕಾಗಿದ್ದಿತು. ಈ ಕಾರಣದಿಂದ ಲೋಭ ಬುದ್ಧಿಯೂ ಸಂಬಳವನ್ನು ತೆಗೆದುಕೊಂಡು ಸೇವೆಮಾಡುವದೂ, ವ್ಯಾಪಾರ ಸಂಬಂಧವಾದ ಪರಸ್ಪರ ವಿವಾದವೂ, ಉಂಟಾಗಿ ಚಿತ್ತ ಕಾಲುಷ್ಯದಿಂದ ಯಥಾರ್ಥ ಸ್ವರೂಪವಾದ ಆತ್ಮವಸ್ತುವಿನ ನಿಶ್ಚಯವು ಇಲ್ಲದೇ ಹೋಯಿತು. ದ್ವಾಪರಯುಗದಲ್ಲಿ ಕ್ರಮವಾಗಿ ಜನರು ಕಾಮ, ದ್ವೇಷ, ಪ್ರೀತಿ, ಲೋಭ, ಮದ ಮುಂತಾದ ದುರ್ಗುಣಗಳು ಹೆಚ್ಚಿ ಧರ್ಮಗಳ ಸಾಂಕರ್ಯವುಂಟಾಗಿ ಬ್ರಾಹ್ಮಣಾದಿ ವರ್ಣಗಳ ಮತ್ತು ಬ್ರಹ್ಮಚರ್ಯಾದ್ಯಾಶ್ರಮಗಳ ನಾಶವುಂಟಾಗಿ ವೇದಕ್ಕೆ ಶಾಖಾ ಭೇದಗಳುಂಟಾಗುವವು. ವ್ಯಾಸರೆಂಬ ಋಷಿಗಳು ದ್ವಾಪರಾದಿ ಯುಗಗಳಲ್ಲಿ ವೇದವನ್ನು ನಾಲ್ಕುಭಾಗವಾಗಿ ವಿಂಗಡಿಸುವರು. ತ್ರೇತಾಯುಗದ ಕೊನೆಯಲ್ಲಿ ಈ ಭೂಲೋಕದಲ್ಲಿ ಒಂದೇ ವೇದವು ನಾಲ್ಕು ಭಾಗವಾಗಿ ಅಭ್ಯಾಸ ಮಾಡಲಾಗುತ್ತದೆ. ದ್ವಾಪರಯುಗದಲ್ಲಿ ಮನುಷ್ಯರ ಆಯುಸ್ಸು ಕಡಿಮೆಯಾಗುವದರಿಂದ ಆ ವೇದವನ್ನು ನಾಲ್ಕು ಭಾಗವಾಗಿ ವಿಂಗಡಿಸುವರು.

ಬುದ್ಧಿವಂತರಾದ ಋಷಿ ಪುತ್ರರು ದೃಷ್ಟಿ ಭೇದದಿಂದ ಋಗ್ವೇದ, ಯಜುರ್ವೇದ, ಸಾಮವೇದಗಳ ಸಂಹಿತೆಯನ್ನು ಕ್ರಮಪಡಿಸುವರು. ಇದಲ್ಲದೆ ಮಂತ್ರಗಳು, ಬ್ರಾಹ್ಮಣಗಳು, ಎಂಬ ಭೇದದಿಂದಲೂ, ಸ್ವರಗಳ ಮತ್ತು ವರ್ಣಗಳ ವ್ಯತ್ಯಾಸದಿಂದಲೂ, ಸಾಮಾನ್ಯವೆಂದೂ, ವಿಕಾರವೆಂದೂ ಬೇರೆ ಬೇರೆಯಾಗಿ ವಿಂಗಡಿಸುವರು. ಯಜ್ಞಾದಿಗಳ ವಿಧಿಯನ್ನು ಹೊಗಳಿ ಮಂತ್ರಗಳನ್ನು ಉಪಯೋಗಿಸುವ ಕ್ರಮವನ್ನು ಬ್ರಾಹ್ಮಣ ಭಾಗವು ಹೇಳುವದು. ಯಜ್ಞಾದಿಗಳಲ್ಲಿ ಮಾಡಬೇಕಾದ ಕಾರ್ಯಗಳನ್ನು ಕಲ್ಪಸೂತ್ರಗಳು ಹೇಳುವವು. ಮೀಮಾಂಸಾನ್ಯಾಯ ಸೂತ್ರಗಳೇ ಮಂತ್ರ ಪ್ರವಚನಗಳೆನಿಸುವವು. ಇವುಗಳನ್ನು ಬುದ್ಧಿವಂತರಾದ ಋಷಿಗಳು ಮಾಡಿದರು. ಕೆಲವರು ಇವುಗಳನ್ನು ಪ್ರತಿಭಟಿಸಿದರು. ಮತ್ತೆ ಕೆಲವರು ಇವನ್ನು ಹೊಗಳಿದರು.

ಇತಿಹಾಸ ಪುರಾಣಗಳೂ ಕೂಡ ಅನೇಕ ಕಲ್ಪಗಳ ಭೇದದಿಂದ ಬೇರೆ ಬೇರೆ ಯಾಗಿರುವವು. ಬ್ರಹ್ಮ, ಪದ್ಮ, ವಿಷ್ಣು, ಶಿವ, ಭಾಗವತ, ಭವಿಷ್ಯ, ನಾರದೀಯ, ಮಾರ್ಕಂಡೇಯ, ಅಗ್ನೇಯ, ಬ್ರಹ್ಮ, ವೈವರ್ತ, ಲಿಂಗ, ವರಾಹ, ವಾಮನ, ಕೂರ್ಮ, ಮಾತ್ಸ್ಯ, ಗರುಡ, ಸ್ಕಾಂದ, ಬ್ರಹ್ಮಾಂಡ ಎಂದು ಪುರಾಣಗಳು ಹದಿನೆಂಟಿರುವವು. ದ್ವಾಪರ ಯುಗದಲ್ಲಿ ಲಿಂಗಪುರಾಣವು ಹನ್ನೊಂದು ವಿಧವಾಗಿ ವಿಭಾಗವಾಯಿತು. ಮನು, ಅತ್ರಿ, ವಿಷ್ಣು, ಹಾರೀತ, ಯಾಜ್ಞವಲ್ಕ್ಯ, ಶುಕ್ರ, ಅಂಗೀರಸ, ಯಮ, ಆಪಸ್ತಂಬ, ಸಂವರ್ತ,

ಕಾತ್ಯಾಯನ, ಬೃಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೌತಮ, ಶಾತಾತಪ, ವಸಿಷ್ಠ, ಇವರೇ ಮುಂತಾದ ಋಷಿಗಳಿಂದ ಈ ಪುರಾಣವು ಅನೇಕ ಭಾಗಿರುವುದು.

ಮಳೆಯಿಲ್ಲದಿರುವುದು, ಅಕಾಲಮರಣ, ರೋಗಾದಿಗಳ ಬಾಧೆ, ಇವುಗಳಿಂದ ಪ್ರಾಣಿಗಳಿಗೆ ಮಾತು, ಮನಸ್ಸು, ಕಾರ್ಯ, ಇವುಗಳಲ್ಲಿ ದುಃಖವುಂಟಾಗುವುದು. ಈ ದುಃಖದಿಂದ ಬೇಸರವು ಉತ್ಪತ್ತಿಯಾಗುವುದು. ಬೇಜಾರಿನಿಂದ ದುಃಖವನ್ನು ತಪ್ಪಿಸಿ-ಕೊಳ್ಳಬೇಕೆಂದು ಯುಕ್ತಾಯುಕ್ತವಿಮರ್ಶೆಯು ಹುಟ್ಟುವದು. ವಿವೇಕದಿಂದ ವೈರಾಗ್ಯವೂ, ವೈರಾಗ್ಯದಿಂದ ಸಕಲ ವಸ್ತುಗಳಲ್ಲಿಯೂ ದೋಷದರ್ಶನವೂ, ದೋಷದರ್ಶನದಿಂದ ಜ್ಞಾನಸಂಪಾದನೆಯ ವೃತ್ತಿಯೂ ಉಂಟಾಗುವುದು. ಇದು ದ್ವಾಪರಯುಗದಲ್ಲಿ ಜ್ಞಾನೋತ್ಪತ್ತಿ ಕ್ರಮವು. ಕೃತ ತ್ರೇತಾಯುಗಗಳಲ್ಲಿ ಸ್ವಾಭಾವಿಕವಾಗಿ ಮನುಷ್ಯರಿಗೆ ಜ್ಞಾನದಲ್ಲಿ ಪ್ರವೃತ್ತಿಯುಂಟಾಗುವದೆಂದು ಇದರಿಂದ ಸೂಚಿತವಾದಂತಾಯಿತು.

ಈ ರೀತಿಯಲ್ಲಿ ರಜೋಗುಣ, ತಮೋಗುಣಗಳಿಂದ ಕೂಡಿದ ಕಾರ್ಯ ಪ್ರವೃತ್ತಿಯು ದ್ವಾಪರಯುಗದಲ್ಲಿರುವುದು. ಮೊದಲನೆಯ ಕೃತಯುಗದಲ್ಲಿ ಧರ್ಮವು ಎಲ್ಲೆಡೆಯಲ್ಲಿಯೂ, ಇರುವುದು. ತ್ರೇತಾಯುಗದಲ್ಲಿ ಅದು ಶಾಸ್ತ್ರವಿಧಿಯಿಂದಲೂ, ಮಹಾತ್ಮರ ಪ್ರೇರಣೆಯಿಂದಲೂ, ಆಚರಣೆಯಲ್ಲಿರುತ್ತದೆ. ದ್ವಾಪರಯುಗದಲ್ಲಿ ಭೇದ ಬುದ್ಧಿಯಿಂದ ಧರ್ಮಕ್ಕೆ ಗ್ಲಾನಿಯುಂಟಾಗುವುದು. ಕಲಿಯುಗದಲ್ಲಿ ಆ ಧರ್ಮವು ಬಹುಮಟ್ಟಿಗೆ ಕುಗ್ಗಿ ಕಡೆಗೆ ನಾಶವನ್ನೈದುವದು.

*ಲಿಂಗ ಮಹಾಪುರಾಣ ಪೂರ್ವಾರ್ಧದ ಯುಗಗಳಲ್ಲಿನ ಸಾಮಾನ್ಯ ಧರ್ಮಗಳ ವಿವರಣೆ ಎಂಬ ಮೂವತ್ತೊಂಬತ್ತನೆಯ ಅಧ್ಯಾಯ ಸಮಾಪ್ತವಾದುದು*

—o—

## ಕಲಿಯುಗ ಧರ್ಮ

## ಅಧ್ಯಾಯ - ೪೦

**ದೇವೇಂದ್ರ :-** ಕಲಿಯುಗದಲ್ಲಿ ಜನರು ತಾಮಸಸ್ವಭಾವದವರು. ತಮೋಗುಣದಿಂದ ವ್ಯಾಕುಲರಾದ ಮನುಷ್ಯರು ಇಂದ್ರಿಯಲೋಲುಪರಾಗಿ ಮೋಸ, ಅಸೂಯೆ, ಮೊದಲಾದ ದೋಷದಿಂದ ಕೂಡಿರುವರು. ತಪಸ್ವಿಗಳಾದ ಸಜ್ಜನರನ್ನು ಕೊಲ್ಲುವ ಪ್ರಯತ್ನವನ್ನು ಮಾಡುತ್ತಲೇ ಇರುತ್ತಾರೆ. ಕಲಿಯುಗದಲ್ಲಿ ಜನರು ಯಾವ ಧರ್ಮಕಾರ್ಯಗಳನ್ನು ಮಾಡಿದರೂ ಅದರಲ್ಲಿ ತಪ್ಪುಗಳು ಪದೇ ಪದೇ ಆಗುತ್ತವೆ. ಕರ್ಮದಲ್ಲಾಗುವ ಲೋಪದೋಷಗಳಿಂದ ಆ ಕಾಲದ ಪ್ರಜೆಗಳಿಗೆ ರೋಗ, ಹಸಿವು, ಅನಾವೃಷ್ಟಿ ಮುಂತಾದ ಜನರಿಗೆ ಯಾವಾಗಲೂ ಭೀತಿಯ ವಾತಾವರಣ ಇರುವದು. ದೇಶಗಳ ರಾಜಕಾರಣದಲ್ಲಿ ಬಹಳಷ್ಟು ಬದಲಾವಣೆಗಳು ನಡೆಯುವವು. ಜನರು ವೇದಗಳನ್ನು ಪ್ರಮಾಣ ಎಂದು ಒಪ್ಪುವದಿಲ್ಲ. ಉತ್ತಮರು ನೀಚ ಜನರ ಸೇವೆಯನ್ನು ಮಾಡುವರು. ಕಲಿಯುಗದಲ್ಲಿ ಬಹಳಷ್ಟು ಜನರು ನಾಸ್ತಿಕರು. ಅನಾಚಾರಿಗಳು, ಮಹಾ ಕೋಪಿಷ್ಟರು. ಕ್ಷುದ್ರಬುದ್ಧಿಯುಳ್ಳವರು. ಸಹಜವಾಗಿ ಸುಳ್ಳು ಮಾತುಗಳನ್ನಾಡುವರು. ಮಹಾಲೋಭಿಗಳು. ಅದರಂತೆಯೇ ಅವರ ಮಕ್ಕಳೂ ಕೂಡ ದುರ್ಬುದ್ಧಿಯುಳ್ಳವರೇ

ಇರುವರು. ಅವರು ಮಾಡುವದು ದುರಾಚಾರ. ಓದುವದು ದುಶ್ಶಾಸ್ತ್ರ. ಅವರು ಅನುಸರಿಸುವದು ದುಷ್ಟಆಯಾಮಗಳು. ಬ್ರಾಹ್ಮಣರ ಕರ್ಮದೋಷದಿಂದ ಎಲ್ಲ ಪ್ರಜೆಗಳಿಗೂ ಭಯಾಪಾಯಗಳುಂಟಾಗುವವು. ಅಧ್ಯಯನ, ಯಜ್ಞ, ಧರ್ಮಕರ್ಮ ಇವೆಲ್ಲವೂ ಲೋಪವಾಗಿ ಬಿಡುತ್ತವೆ. ಬ್ರಾಹ್ಮಣರು ದೇವರಪೂಜೆ ಪಂಚಮಹಾಯಜ್ಞಗಳನ್ನು ಬಿಟ್ಟುಬಿಡುವರು. ಕೀಳು ಜನರು ಜಾತಿಹೀನರು ಮಂತ್ರ ಶಾಸ್ತ್ರಾದಿಗಳನ್ನು ಅಧ್ಯಯನ ಮಾಡಿ ಬ್ರಾಹ್ಮಣರಿಗೂ ಮಿಗಿಲಾಗಿ ಮೆರೆಯುವರು. ಪ್ರಜಾಜನರಲ್ಲಿ ಭ್ರೂಣ ಹತ್ಯಾ, ವೀರ್ಯ ಹತ್ಯಾ, ಬ್ರಹ್ಮ ಹತ್ಯಾದಿ ಪಾತಕಗಳು ಸಾಮಾನ್ಯ ಎನಿಸುವವು. ಕಳ್ಳರು, ಮೋಸಗಾರರು ರಾಜ ಮನ್ನಣೆಯನ್ನು ಪಡೆದು ರಾಜರು ಪ್ರಜೆಗಳ ಸಂಪತ್ತನ್ನೆಲ್ಲ ಅಪಹರಿಸಿ ತಾವೇ ಮಹಾ ಶೂರರಾಗುವರು. ಪತಿವ್ರತಾ ಸ್ತ್ರೀಯರು ಪ್ರಾಯಃ ಎಲ್ಲಿಯೂ ಉಳಿಯುವದಿಲ್ಲ. ಪುರುಷರಲ್ಲಿಯೂ, ಸ್ತ್ರೀಯರಲ್ಲಿಯೂ ವ್ಯಭಿಚಾರಿಗಳೇ ಹೆಚ್ಚಾಗಿರುವರು. ಕಲಿಯುಗದಲ್ಲಿ ಜನರು ವರ್ಣಾಶ್ರಮ ಧರ್ಮಗಳನ್ನು ಪಾಲಿಸುವದಿಲ್ಲ. ಆದರಿಂದ ಪುಣ್ಯವಂತ ಜನರು ಇದ್ದಲ್ಲಿ ಭೂಮಿ ಒಳ್ಳೆಯ ಮಳೆಬೆಳೆಯಾಗಿ ಸುಖ ಸಮೃದ್ಧಿ ಇದ್ದರೂ ಬಹಳ ಕಡೆ ಭೂಮಿಯು ಅಲ್ಪ ಫಲವುಳ್ಳದ್ದು ಆಗುವದು. ಪ್ರಜಾ ಜನರನ್ನು ಕಾಪಾಡಬೇಕಾದ ಭೂಪರು ಪ್ರಜೆಗಳ ಐಶ್ವರ್ಯವನ್ನೆಲ್ಲ ಅಪಹರಿಸುವ ಪ್ರಯತ್ನ ಮಾಡುವರು. ಶೂದ್ರರು ಬ್ರಾಹ್ಮಣರಿಗಿಂತ ಹೆಚ್ಚು ಓದಿಕೊಂಡು ಮಹಾಜ್ಞಾನಿಗಳು ಎನಿಸಿಕೊಳ್ಳುವರು. ಮತ್ತು ಸಂತತ ಅಧ್ಯಯನದಿಂದ ಮಹಾಜ್ಞಾನಿಗಳಾದ ಆ ಶೂದ್ರರು ಬ್ರಾಹ್ಮಣರ ನಮಸ್ಕಾರಗಳನ್ನು ಸ್ವೀಕರಿಸುವರು. ರಾಜರಲ್ಲಿ ಕ್ಷತ್ರಿಯರ ಶಕ್ತಿಯು ಇರುವುದಿಲ್ಲ. ಬ್ರಾಹ್ಮಣರು ಶೂದ್ರರ ಸೇವೆಯನ್ನುಮಾಡಿ ಉಪಜೀವನವನ್ನು ಮಾಡುವರು. ಕೀಳು ಜಾತಿಯವರು ಪೀಠದ ಮೇಲೆ ಕುಳಿತು ಬಂದ ಬ್ರಾಹ್ಮಣರಿಗೆ ಅವಮಾನ ಮಾಡಿ ಆ ಬ್ರಾಹ್ಮಣರಿಗೆ ಘೋರವಾದ ದಂಡವನ್ನು ವಿಧಿಸುವರು.

ಕಲಿಯುಗದಲ್ಲಿ ದುಷ್ಟರು ನೀಚರು ಆದ ರಾಜರು ಹಾಗೂ ಮಂತ್ರಿಗಳ ಕೈಯ್ಯಲಿ, ಅಧಿಕಾರವೆಲ್ಲ ಕೇಂದ್ರೀಕೃತವಾಗುವದು. ವೇದವೇದಾಂತಾದಿ ವಿದ್ಯೆಗಳನ್ನು ಅಧ್ಯಯನ ಮಾಡಿದ ವಿದ್ವಾಂಸರು ಗಂಧ ಪುಷ್ಪ ಅಲಂಕಾರ ವಸ್ತ್ರ ದಕ್ಷಿಣಾ ತಾಂಬೂಲಾದಿಗಳನ್ನು ಕೊಟ್ಟು ನೀಚ ಜನರನ್ನು ಆರಾಧನೆಮಾಡುವರು. ದುಷ್ಟ ಜನರ ಸಹಾಯದಿಂದ ಹೊಟ್ಟೆ ಹೊರೆದುಕೊಂಡು ತಿಂದುಣ್ಣುವ ಬ್ರಾಹ್ಮಣರು ಭಿಕ್ಷುಕರಂತೆ ಶ್ರೀಮಂತರ ಮನೆಯಲ್ಲಿ ದೀನರಾಗಿ ನಿಂತಿರುವರು. ವಾಹನದಲ್ಲಿ ಕುಳಿತುಕೊಂಡು ಬರುವ ಆ ನೀಚ ಪುರುಷರನ್ನು ಶ್ರೇಷ್ಠ ವರ್ಣದವರು ಅಖಂಡಸ್ತೋತ್ರಮಾಡಿ ಓಲೈಸುತ್ತಿರುವರು. ಬ್ರಾಹ್ಮಣರಲ್ಲಿ ಶ್ರೇಷ್ಠರಾದ ಪಂಡಿತರೂ ಕೂಡ ತಾವು ಮಾಡಿದ ಮಾಡುತ್ತಲಿರುವ ಅಧ್ಯಯನ ತಪಸ್ಸು ಹಾಗೂ ಯಜ್ಞಯಾಗಗಳ ಪುಣ್ಯ ಫಲವನ್ನೆಲ್ಲ ಹಣ ತೆಗೆದುಕೊಂಡು ಅಧಮ ಜನರಿಗೆ ಮಾರಿಬಿಡುವರು.

ಈ ಕಲಿಯುಗದಲ್ಲಿ ಸನ್ಯಾಸಿಗಳು ಅನೇಕರಿರುವರು. ಎಲ್ಲರೂ ವೇಷಧಾರಿಗಳು. ಕಲಿಯುಗವು ಕೊನೆಯಾಗುತ್ತಿರಲು ಪುರುಷರ ಸಂಖ್ಯೆಯು ಕಡಿಮೆಯಾಗಿ ಸ್ತ್ರೀಯರ ಸಂಖ್ಯೆಯು ಹೆಚ್ಚುವದು. ಆ ಕಾಲದಲ್ಲಿ ಬ್ರಾಹ್ಮಣರು ವೇದವಿದ್ಯೆಯನ್ನು ಕರ್ಮಗಳನ್ನೂ ನಿಂದಿಸುವರು. ಈ ಯುಗದಲ್ಲಿ ನೀಲಲೋಹಿತನೆಂದು ಪ್ರಸಿದ್ಧನಾದ ಶಿವನು ಸಕಲರಿಗೂ

ದೇವನಾಗಿರುವನು. ಧರ್ಮವನ್ನು ನೆಲೆಗೊಳಿಸುವುದಕ್ಕಾಗಿ ಈಗ ಕಾಶೀ ಮುಂತಾದ ಕ್ಷೇತ್ರಗಳಲ್ಲಿ ಕಾಣುವಂತೆ ಭಿನ್ನಭಿನ್ನವಾದ ಲಿಂಗಸ್ವರೂಪನಾಗಿ ಪ್ರಕಾಶಿಸುತ್ತಿರುವನು. ಯಾವಮಾರ್ಗದಿಂದಾಗಲೀ ಬ್ರಾಹ್ಮಣರು ಆ ಲಿಂಗ ಪೂಜೆಯನ್ನುಮಾಡಿದರೆ ಅವರು ಕಲಿಯುಗ ಸಂಬಂಧವಾದ ದೋಷಗಳಿಂದ ಸಂಭವಿಸಿದ ಪಾಪಗಳನ್ನು ಕಳೆದುಕೊಂಡು ಪರಮಪದವನ್ನು ಹೊಂದುವರು.

ಈ ಯುಗದ ಕೊನೆಯಲ್ಲಿ ಕಾಡುಗಳಲ್ಲಿ ಕ್ರೂರ ಮೃಗಗಳು ಹೆಚ್ಚಿ ಗೋವುಗಳು ನಾಶವಾಗುವವು. ಸಜ್ಜನರು ಇರುವುದಿಲ್ಲ. ಈ ಕಾಲದಲ್ಲಿ ದಾನವೇ ಕಾರಣವಾದ ಸೂಕ್ಷ್ಮವಾದ ಸಂಪತ್ತು ಜನರಿಗೆ ದುರ್ಲಭವಾಗುವದು. ನಾಲ್ಕು ಆಶ್ರಮದ ಧರ್ಮವೂ ಬಲಹೀನವಾಗುತ್ತಿರಲು ದೇಶಧರ್ಮವು ನಾಶವಾಗುವುದು. ರಾಜರು ಕಂದಾಯವನ್ನು ಮಾತ್ರ ತೆಗೆದು ಕೊಂಡು ದೇಶರಕ್ಷಣೆಯನ್ನು ಬಿಡುವರು.

ಈ ಯುಗದ ಕೊನೆಯಲ್ಲಿ ಜನರು ತಂತಮ್ಮ ರಕ್ಷಣೆಯನ್ನು ತಾವು ತಾವು ಮಾಡಿಕೊಳ್ಳುವುದರಲ್ಲಿ ಆಸಕ್ತರಾಗುವರು. ದುರ್ಬಲರಾದವರ ರಕ್ಷಣೆಯ ಗಮನವೇ ಇರುವುದಿಲ್ಲ. ದೇಶದಲ್ಲಿ ಎಲ್ಲೆಲ್ಲಿಯೂ ಅನ್ನವನ್ನು ಮಾರುವರು. ಅಥವಾ ಕನ್ಯಾವಿಕ್ರಯ ಮಾಡುವರು. ಬ್ರಾಹ್ಮಣರು ವೇದಶಾಸ್ತ್ರಗಳನ್ನು ಮಾರುವರು. ಅಥವಾ ನಾಲ್ಕು ದಾರಿಗಳು ಕೂಡುವ ಸ್ಥಳದಲ್ಲಿಯೇ ವ್ಯಭಿಚಾರಾದಿಗಳ ವ್ಯಾಪಾರವು ನಡೆವುದು. ಸ್ತ್ರೀಯರು ತಮ್ಮ ದೇಹ ವಿಕ್ರಯವನ್ನು ಮಾಡುವರು (ರಹಸ್ಯಾಂಗಗಳ ವಿಕ್ರಯವನ್ನು ಮಾಡುವರು).

ದೇವೇಂದ್ರನು ಸಕಾಲದಲ್ಲಿ ಮಳೆ ಸುರಿಸುವದಿಲ್ಲ. ಬೆಳೆ ಚೆನ್ನಾಗಿ ಬರುವದಿಲ್ಲ. ಎಲ್ಲರು ವ್ಯಾಪಾರ ಕಾರ್ಯದಲ್ಲಿ ತೊಡಗುವರು. ಜನರ ನಡೆ ಶುದ್ಧ ಇರುವದಿಲ್ಲ. ನುಡಿ ಸತ್ಯಯುಕ್ತವಾಗಿರುವದಿಲ್ಲ. ಎಲ್ಲೆಡೆಗೂ ವೈದಿಕಮಾರ್ಗವನ್ನು ಬಿಟ್ಟ ಡಾಂಭಿಕರೇ ತುಂಬಿರುವರು. ಮಂತ್ರತಂತ್ರಗಳಜ್ಞಾನ ಲೇಶವೂ ಇರದಿದ್ದ ಪುರೋಹಿತರು ಯಜ್ಞಯಾಗಗಳನ್ನು ಮಾಡಿಸುವರು. ಆ ಕಾಲದಲ್ಲಿ ಬಿರುಸು ಮಾತುಗಳನ್ನು ಆಡದ ಜಗಳಗಳನ್ನು ಮಾಡದ ಸರಳಸ್ವಭಾವದ ಅಸೂಯೆಪಡದಿರುವ ಮಾಡಿದ ಉಪಕಾರಕ್ಕೆ ಪ್ರತಿ ಉಪಕಾರಮಾಡುವ ಕೃತಜ್ಞ ಜನರು ಎಲ್ಲಿಯೂ ದೊರೆಯುವದಿಲ್ಲ. ದೇಶದಲ್ಲಿ ರಾಜರಿಲ್ಲದೆ ಜನರ ಜೀವನವು ಕಳ್ಳಕಾಕರಿಂದ ಭಯಗ್ರಸ್ತವಾಗುವದು. ದೇಶಗಳು ನಗರಗಳು ಜನಶೂನ್ಯವಾಗುವವು. ಭೂಮಿಯಲ್ಲಿ ಅಲ್ಪವೃಷ್ಟಿ, ಸ್ವಲ್ಪ ನೀರು, ಅತ್ಯಲ್ಪಧಾನ್ಯ ಇವುಗಳಿಂದ ಜನರ ಜೀವನವೇ ದುರ್ಬಲವಾಗುವದು.

ಕಲಿಯುಗದ ಕೊನೆಯಲ್ಲಿ ಪುರುಷರು ತಮ್ಮ ಪೌರುಷವೃತ್ತಿಯನ್ನು ಕಳೆದುಕೊಂಡು ರೋಗಿಗಳಾಗಿ ತಮ್ಮ ಹದಿನಾರನೆಯ ವಯಸ್ಸಿಗೆ ಮುಪ್ಪು ಮರಣಗಳನ್ನು ಹೊಂದುವರು. ಕೀಳು ಜನರು ಸನ್ಯಾಸಿಗಳಾಗಿ ಕಾಷಾಯವಸ್ತ್ರಗಳನ್ನು ಧರಿಸಿ, ಬಿಳಿಯ ರುದ್ರಾಕ್ಷಿ ಮಾಲೆಗಳನ್ನು ಹಾಕಿಕೊಂಡು ಕೃಷ್ಣಾಜಿನವನ್ನು ಹೊಡೆದುಕೊಂಡು, ಸನಾತನ ಧರ್ಮಕ್ಕೆ ವಿಡಂಬನಮಾಡುವರು.

ಯೋಗ್ಯವಾದ ಕರ್ಮಗಳು ನಾಶವಾಗಿ ಲೋಕವೆಲ್ಲವೂ ಕರ್ಮಹೀನವೂ ಧರ್ಮಹಿನವೂ ಆಗುವದು. ಆಗ ಇಲಿಗಳು, ಹುಳುಗಳು, ಹಾವುಗಳು ಮಾನವರನ್ನು

ಹೆದರಿಸುವವು. ಸುಭಿಕ್ಷವು, ಸುಖವು, ಆರೋಗ್ಯವು, ಶಕ್ತಿಯು ದುರ್ಲಭವಾಗುವದು. ಹಸಿವೆಯಿಂದ ಕಂಗಾಲಾದ ಭೂಭುಕ್ಷಿತ ಜನರು ಕೌಶಿಕನದಿಯು ಹರಿಯುತ್ತಿರುವ ಸ್ಥಾನಕ್ಕೆ ಹೋಗುವರು. ಬಗೆಬಗೆಯ ದುಃಖ ದುಮ್ಮಾನಗಳನ್ನು ಅನುಭವಿಸುತ್ತಿರುವ ಜನರಿಗೆ ನೂರುವರುಷ ಆಯುಷ್ಯವಿರುವದು. ಆಗ ದೇವತೆಗಳು ಯಾರು ದೃಷ್ಟಿಗೋಚರರಾಗುವದಿಲ್ಲ. ಅಧರ್ಮವು ಹೆಚ್ಚುವದು. ಯಜ್ಞಕ್ರಮಗಳು ಶೂದ್ರವಂಶದಲ್ಲಿ ಹುಟ್ಟಿದ ರಾಜರು ಅಶ್ವಮೇಧ, ರಾಜಸೂಯ ಮೊದಲಾದ ಯಜ್ಞಗಳನ್ನು ಮಾಡುವರು. ನಿರಂಕುಶರಾದ ಸ್ವಚ್ಛಂದಚಾರಿಗಳಾದ ಇಂದಿನ ಪ್ರಜೆಗಳು ಸ್ತ್ರೀಯರನ್ನು, ಬಾಲಕರನ್ನು, ಗೋವುಗಳನ್ನು ಸಂಹಾರಮಾಡುವರು. ತಾವು ಒಬ್ಬರಿಗೊಬ್ಬರು ಹೊಡೆದಾಡಿ ಜನರಿಗೆಲ್ಲ ತೊಂದರೆಯನ್ನುಂಟುಮಾಡುವರು.

ಕಲಿಯುಗದಲ್ಲಿ ಅವರ ದುಷ್ಕರ್ಮದಿಂದ ದುಃಖವು ಹೆಚ್ಚು, ಆಯುಷ್ಯವು ಅಲ್ಪ. ಶರೀರವು ರೋಗಿಷ್ಟವಾಗುವದು. ಆದರೂ ಕಲಿಯುಗದಲ್ಲಿ ಯಾರು ಶೃತಿ ಸ್ಮೃತಿಗಳಲ್ಲಿ ಹೇಳಿದ ಧರ್ಮವನ್ನು ವಿರೋಧವಿಲ್ಲದಂತೆ ನಡೆಸಿಕೊಂಡು ಬರುವರೋ ಅವರು ಅಲ್ಪಕಾಲದಲ್ಲಿಯೇ ತಪ್ಪದೆ ಅದರ ಫಲವನ್ನು ಪಡೆಯುವರು. ಯುಗದ ಕೊನೆಯಲ್ಲಿ ಧರ್ಮವನ್ನಾಚರಿಸುವ ಬ್ರಾಹ್ಮಣ ಶ್ರೇಷ್ಠರೇ ಪುಣ್ಯವಂತರು.

ತ್ರೇತಾಯುಗದಲ್ಲಿ ಒಂದು ವರ್ಷ ಕಷ್ಟವನ್ನು ಸಹಿಸಿ ಮಾಡುವ ಧರ್ಮದ ಫಲವು ದ್ವಾಪರದಲ್ಲಿ ಒಂದು ತಿಂಗಳಲ್ಲಿ ದೊರೆಯುವುದು. ಕಲಿಯುಗದಲ್ಲಿ ಅದು ಒಂದು ದಿನದಲ್ಲಿಯೇ ಫಲ ಕೊಡುವುದು. ವಿಷ್ಣು ಪುರಾಣದಲ್ಲಿಯೂ,

**''ಯುತ್ಕೃತೇ ದಶಭಿರ್ವರ್ಷೈಃ ತ್ರೇತಾಯಾಂ ಹಾಯನೇನ ತತ್ ।**
**ದ್ವಾಪರೇ ತಚ್ಚ ಮಾಸೇನ ಅಹೋರಾತ್ರೇಣ ತತ್ಕಲೌ ।**
**ತಪಸೋ ಬ್ರಹ್ಮಚರ್ಯಸ್ಯ ಜಪಾದೇಶ್ಚ ಫಲಂ ದ್ವಿಜಾಃ**
**ಪ್ರಾಪ್ನೋತಿ ಪುರುಷ ಸ್ತೇನ ಕಲಿಃ ಸಾಧ್ವಿತಿ ಭಾಷಿತಂ ॥''**

ಎಂದು ಹೇಳಿರುವುದು. ಇದುವರೆಗೆ ಹೇಳಿದುದೇ ಕಲಿಯುಗ ಸ್ವರೂಪವು. ಇನ್ನು ಸಂಧಿಕಾಲ ಸ್ವರೂಪವನ್ನು ಹೇಳುವೆನು, ಕೇಳು. ಪ್ರತಿಯೊಂದು ಯುಗದಲ್ಲಿಯೂ ಸಿದ್ಧಿಗಳು ಮುಕ್ಕಾಲು ಭಾಗದಷ್ಟು ಕಡಿಮೆಯಾಗುವುವು. ಎಂದರೆ ಕೃತಯುಗದಲ್ಲಿ ಪೂರ್ಣವಾದ ಸಿದ್ಧಿ ಇದ್ದರೆ ತ್ರೇತಾಯುಗದಲ್ಲಿ ಕಾಲು ಭಾಗವಿರುವುದು. ದ್ವಾಪರದಲ್ಲಿ ತ್ರೇತಾಯುಗದ ಸಿದ್ಧಿಯ ಮುಕ್ಕಾಲು ಭಾಗವು ಕಡಿಮೆಯಾಗುವುದು. ಇದರಂತೆಯೇ ಕಲಿಯುಗದಲ್ಲಿ ದ್ವಾಪರ ಯುಗದ ಸಿದ್ಧಿಯ ಮುಕ್ಕಾಲು ಭಾಗವು ಕಡಿಮೆಯಾಗುವುದು.

ಯುಗಧರ್ಮದಲ್ಲಿ ಕಾಲುಭಾಗವು ಕಡಿಮೆಯಾಗಿ ಸಂಧಿಕಾಲದಲ್ಲಿ ನಡೆಯುವದು. ಸಂಧಿಕಾಲದ ಧರ್ಮದ ಕಾಲುಭಾಗವು ಕಡಿಮೆಯಾಗಿ ಸಂಧ್ಯಾಂಶದಲ್ಲಿ ನಡೆಯುವುದು. ಹೀಗೆ ಯುಗದ ಕೊನೆಯಲ್ಲಿ ಸಂಧಿಕಾಲದ ಅಂಶವು ಪ್ರಾಪ್ತವಾದಾಗ ಆಗ ಇದ್ದ ದುಷ್ಟರಾದ ಜನರನ್ನು ದಂಡಿಸುವದಕ್ಕೂ ಅವರನ್ನು ನಾಶಮಾಡುವದಕ್ಕೂ ವಿಷ್ಣುವು ಅವತಾರ ಮಾಡುವನು. ಹಿಂದೆ ಸ್ವಾಯಂಭುವ ಮನ್ವಂತರದಲ್ಲಿದ್ದ ಪ್ರಮಿತಿ ಎಂಬ ಹೆಸರಿನ ಮನುಪುತ್ರನ ಅಂಶದಿಂದ ಸೋಮಶರ್ಮನೆಂಬ ಬ್ರಾಹ್ಮಣನ ಗೋತ್ರದಲ್ಲಿ ವಿಷ್ಣುವು ಅವತರಿಸುವನು.

ಆ ಕಲ್ಕಿ ಅವತಾರವನ್ನು ಮಾಡಿದ ವಿಷ್ಣುವು ಇಪ್ಪತ್ತು ವರ್ಷಗಳವರೆಗೆ ಭೂಮಿಯಲ್ಲೆಲ್ಲಾ ಸಂಚರಿಸಿ ಚತುರಂಗಸೇನೆಗಳನ್ನು ಕೂಡಿಸಿ, ಆಯುಧವನ್ನು ಧರಿಸಿದ ಬ್ರಾಹ್ಮಣರಿಂದ ಕೂಡಿ ಅನೇಕ ಮ್ಲೇಚ್ಛರನ್ನು ಕೊಲ್ಲುವನು. ಆ ಕಲ್ಕಿಯು ಶೂದ್ರವಂಶದಲ್ಲಿ ಹುಟ್ಟಿದ ರಾಜರನ್ನೆಲ್ಲರನ್ನೂ ಕೊಂದು ವೇದ ನಿಂದಕರಾದ ಪಾಷಂಡಿಗಳನ್ನೆಲ್ಲರನ್ನೂ ನಾಶಮಾಡುವನು. ಎಲ್ಲೆಡೆಯಲ್ಲಿಯೂ ವಿಶೇಷವಾಗಿ ಅಧರ್ಮಮಾರ್ಗದಲ್ಲಿರುವವರನ್ನೂ, ವರ್ಣವ್ಯತ್ಯಾಸದಿಂದ ಹುಟ್ಟಿದವರನ್ನೂ, ಅವರನ್ನು ಅನುಸರಿಸಿದವರನ್ನೂ ನಾಶಮಾಡುವನು. ಆ ಕಲ್ಕಿಯು ಬಲಶಾಲಿಯಾಗಿ ಆ ಕಾಲದಲ್ಲಿದ್ದ ಯಾವ ಮನುಜರಿಗೂ ಜಯಿಸಲಸಾಧ್ಯನಾಗಿ ತನ್ನ ಆಜ್ಞೆಯನ್ನು ನಡೆಸುತ್ತ ಮ್ಲೇಚ್ಛರನ್ನು ನಾಶಮಾಡುತ್ತ ಭೂಮಿಯಲ್ಲಿ ಸಂಚರಿಸುವನು.

ಪೂರ್ವಜನ್ಮದಲ್ಲಿ ಸ್ವಾಯಂಭುವ ಮನುಪುತ್ರನಾದ ಪ್ರಮಿತಿ ಎಂಬ ಶೂರನು ಈ ಜನ್ಮದಲ್ಲಿ ವಿಷ್ಣುವಿನ ಅವತಾರಕ್ಕಾಗಿ ಕಲಿಯುಗದಲ್ಲಿ ಸೋಮಶರ್ಮನೆಂಬ ಬ್ರಾಹ್ಮಣನ ವಂಶದಲ್ಲಿ ಹುಟ್ಟಿದನು. ಇಪ್ಪತ್ತುವರ್ಷಗಳವರೆಗೆ ಭೂಮಿಯಲ್ಲೆಲ್ಲ ಸಂಚರಿಸಿ, ಮ್ಲೇಚ್ಛರನ್ನೂ, ಕ್ರೂರಕರ್ಮಿಗಳಾದ ಜನರನ್ನೂ ಕೊಂದು. ಶೂದ್ರ ರಾಜರುಗಳನ್ನು ಆಕಸ್ಮಿಕವಾಗಿ ಉಂಟಾದ ಕೋಪದಿಂದ ಅವರವರಲ್ಲಿಯೇ ವಿರೋಧವು ಹುಟ್ಟಿ ಅಧರ್ಮದಿಂದ ಹೊಡೆದಾಡುತ್ತಿದ್ದವರನ್ನೆಲ್ಲರನ್ನೂ ಜಯಿಸಿ ತನ್ನ ಮೂವತ್ತೆರಡನೆಯ ವಯಸ್ಸಿನಲ್ಲಿ ತನ್ನ ಪರಿವಾರದೊಡನೆ ಗಂಗಾಯಮುನಾ ನದಿಗಳ ಮಧ್ಯ ಪ್ರದೇಶದಲ್ಲಿ ವಾಸಮಾಡುವನು.

ಆ ಮೇಲೆ ಕೆಲವು ಕಾಲ ಕಳೆದ ಮೇಲೆ ಕಲ್ಕಿಯು ತನ್ನ ಮಂತ್ರಿಗಳೊಡನೆಯೂ ಸೈನಿಕರೊಡನೆಯೂ ಕೂಡಿ ಸಕಲ ದುಷ್ಟರಾಜರುಗಳನ್ನೂ, ಮ್ಲೇಚ್ಛರನ್ನೂ ನಾಶಮಾಡಿ ಬಿಡುವನು. ಯುಗದ ಕೊನೆಯಲ್ಲಿ ಸಂಧ್ಯಾಂಶವು ಪ್ರಾಪ್ತವಾದಾಗ ಅಲ್ಲಲ್ಲಿ ಪ್ರಜೆಗಳು ಅಲ್ಪಸ್ವಲ್ಪವಾಗಿ ಉಳಿದುಕೊಂಡಿರುವರು. ಅವರಿಗೆ ಜೀವನಕ್ಕೆ ಬೇಕಾದ ಪದಾರ್ಥಗಳು ಸಿಕ್ಕದಿರಲು ಆತ್ಯಾಸೆಯಿಂದ ಕೂಡಿದವರಾಗಿ ಎಲ್ಲರೂ ಒಬ್ಬರನ್ನೊಬ್ಬರು ಹಿಂಸಿಸುವರು. ಯುಗಧರ್ಮದಿಂದ ದೇಶದಲ್ಲಿ ರಾಜರಿಲ್ಲದೇ ಹೋಗಲು ಎಲ್ಲರೂ ಸಂದೇಹಗ್ರಸ್ತರಾಗಿ ಒಬ್ಬರಿಂದೊಬ್ಬರು ಭಯಪಡುತ್ತ ದುಃಖಿತರಾಗಿ ಭ್ರಾಂತಿಯಿಂದ ಮನೆಯನ್ನೂ ಹೆಂಡತಿ ಮಕ್ಕಳನ್ನೂ ಬಿಟ್ಟು ತಮ್ಮ ಪ್ರಾಣರಕ್ಷಣೆಯ ವಿಷಯದಲ್ಲಿಯೂ ಗಮನವಿಡದೆ ಕರುಣವಿಲ್ಲದವರಾಗಿ ಅತ್ಯಂತ ದುಃಖ ಪಡುವರು.

ಶ್ರೌತಸ್ಮಾರ್ತಧರ್ಮಗಳು ನಾಶವಾಗಲು ಜನರೆಲ್ಲರೂ ಒಂದು ಕಟ್ಟಿಲ್ಲದವರಾಗಿ ಪರಸ್ಪರ ಸಹಾಯವನ್ನು ಬಿಟ್ಟು ಪ್ರೀತಿಯಿಲ್ಲದವರಾಗಿಯೂ, ನಾಚಿಕೆಯಿಲ್ಲದವರಾಗಿಯೂ ಇರುವರು. ಧರ್ಮನಾಶವಾಗಲು ಭ್ರಾಂತಚಿತ್ತರಾಗಿ, ಕುಳ್ಳರಾಗಿ ಇಪ್ಪತ್ತೈದು ವರ್ಷ ಆಯುಃಪ್ರಮಾಣ ಉಳ್ಳವರಾಗಿ ಹೆಂಡತಿ ಮಕ್ಕಳುಗಳನ್ನು ಬಿಟ್ಟು ಅವರೊಡನೆ ಮಾತನ್ನೂ ಬಿಟ್ಟು ದೂರದೇಶಗಳಿಗೆ ಹೋಗುವರು. ಕೆಲವರು ಸ್ವದೇಶವನ್ನು ಬಿಟ್ಟು ಮ್ಲೇಚ್ಛ ದೇಶಗಳಿಗೆ ಹೋಗಿ ವಾಸಮಾಡುವರು.

ಕೆಲವರು ನದಿ, ಸಮುದ್ರ, ಬಾವಿ, ಪರ್ವತಪ್ರದೇಶಗಳು ಇವುಗಳನ್ನು ಆಶ್ರಯಿಸಿ ಮದ್ಯ, ಮಾಂಸ, ಗೆಡ್ಡೆಗೆಣಸುಗಳಿಂದ ದುಃಖದ ಜೀವನವನ್ನು ನಡೆಸುವರು. ಮರದ

ತೊಗಟೆಯನ್ನೂ, ಎಲೆಗಳನ್ನೂ, ಚರ್ಮವನ್ನೂ ವಸ್ತ್ರವಾಗಿ ಧರಿಸಿ ಯಾವ ಕೆಲಸವನ್ನೂ ಮಾಡದೆ ಬಂಧುಗಳು ಯಾರೂ ಇಲ್ಲದೆ ವರ್ಣಾಶ್ರಮಾಚಾರಗಳಿಲ್ಲದೆ ಭಯಂಕರವಾದ ದುಃಖವನ್ನು ಹೊಂದುವರು.

ಈ ರೀತಿಯಲ್ಲಿ ಕಷ್ಟವನ್ನು ಹೊಂದಿದ ಪ್ರಜೆಗಳು ಸ್ವಲ್ಪವಾಗಿ ಉಳಿಯುವರು. ಅವರೂ ಕೂಡ ಮುಪ್ಪು, ರೋಗ, ಹಸಿವು ಇವುಗಳಿಂದ ಕೂಡಿದವರಾಗಿ ದುಃಖದಿಂದ ಅವರಿಗೆ ಯುಕ್ತಾಯುಕ್ತ ವಿಮರ್ಶೆಮಾಡಬೇಕೆಂಬ ಬುದ್ಧಿಯು ಹುಟ್ಟುವುದು. ಪ್ರಜೆಗಳೆಲ್ಲರೂ ಸಮಾನರೆಂಬ ಬುದ್ಧಿಯು ಅವರಿಗೆ ವಿಚಾರದಿಂದ ಉತ್ಪನ್ನವಾಗುವುದು. ಆ ಬಳಿಕ ಧರ್ಮಾಸಕ್ತಿಯುಂಟಾಗುವುದು. ಒಟ್ಟಿನಲ್ಲಿ ಆ ಕಲಿಯುಗದ ಕೊನೆಯಲ್ಲಿ ಉಳಿದ ಪ್ರಜೆಗಳು ಶರೀರದಲ್ಲಿ ಶಕ್ತಿಹೀನರಾದುದರಿಂದ ಶಾಂತವಾದ ಮನಸ್ಸುಳ್ಳವರಾಗುವರು. ಆ ಬಳಿಕ ಜನರಿಗೆ ಒಂದು ದಿನದೊಳಗೆ ಯುಗವು ವ್ಯತ್ಯಾಸವಾಗುವುದು. ಮೂರ್ಛೆಗೊಂಡವರು. ಎದ್ದಂತೆಯೂ, ಮಲಗಿ ನಿದ್ರಿಸುತ್ತಿದ್ದವರು ಎದ್ದಂತೆಯೂ, ಮುಂದಿನ ಕಾರ್ಯಗೌರವದಿಂದ ಕೃತಯುಗವು ಪ್ರಾರಂಭವಾಗುವದು. ಕಲಿಯುಗವು ಕಳೆದು ಕೃತಯುಗವು ಪ್ರಾರಂಭವಾಗುತ್ತಲೂ ಕಲಿಯುಗದಲ್ಲಿ ಉಳಿದ ಪ್ರಜೆಗಳೇ ಕೃತಯುಗದ ಪ್ರಜೆಗಳಾಗಿ ಹುಟ್ಟುವರು.

ಈ ಸಂದರ್ಭದಲ್ಲಿ ಸಪ್ತಸಿದ್ಧರು ಯಾರಿಗೂ ಕಾಣದವರಾಗಿ ಸಂಚರಿಸುತ್ತಿರುವರು. ಅವರು ಸಪ್ತರ್ಷಿಗಳೊಡನೆ ಕೂಡಿ ಕೃತಯುಗಧರ್ಮ ಸ್ಥಾಪನೆಗಾಗಿ ಸಿದ್ಧರಾಗಿರುವರು. ಮಂತ್ರಜ್ಞ, ಮಂತ್ರವಿತ್ಪ್ರಾಜ್ಞ, ಮಂತ್ರರಾಟ್, ಸಿದ್ಧ ಪೂಜಿತ, ಸಿದ್ಧವತ್, ಪರಮಸಿದ್ಧ, ಸರ್ವಸಿದ್ಧಿಪ್ರದ, ಇವರೇ ಸಪ್ತಸಿದ್ಧರು. ಕಶ್ಯಪ, ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ ಇವರೇ ಸಪ್ತ ಋಷಿಗಳು. ಕಲಿಯುಗದ ಕೊನೆಯಲ್ಲಿ ಬ್ರಹ್ಮ ಕ್ಷತ್ರ, ವೈಶ್ಯ, ಶೂದ್ರ ವರ್ಣಗಳಿಗೆ ಬೀಜ ರೂಪದಿಂದ ಉಳಿದವರು ಸಮಾನಧರ್ಮದಿಂದ ಕೂಡಿದವರಾಗಿದ್ದರು. ಅವರಿಗೆ ಸಪ್ತರ್ಷಿಗಳೂ, ಸಿದ್ಧರೂ, ವರ್ಣಾಶ್ರಮಾಚಾರಗಳನ್ನೂ, ಶೌತ್ರ ಸ್ಮಾರ್ತ ಧರ್ಮಗಳನ್ನೂ ಹೇಳುವರು. ಆ ಬಳಿಕ ಅವರು ಧರ್ಮಾನುಸಾರವಾಗಿ ಕರ್ಮಗಳನ್ನು ಮಾಡಲು ಕೃತಯುಗದಲ್ಲಿ ಪ್ರಜಾವೃದ್ಧಿಯುಂಟಾಗುವುದು.

ಸಪ್ತ ಋಷಿಗಳು ತೋರಿಸಿದ ಶ್ರೌತ ಸ್ಮಾರ್ತ ಧರ್ಮಗಳಲ್ಲಿ ಧರ್ಮವ್ಯವಸ್ಥೆ ಗೋಸ್ಕರವಾಗಿ ಮನ್ವಂತರಾಧಿಕಾರದಲ್ಲಿರುವ ಕೆಲವರು ಮುನಿಗಳು ಕಲಿಯುಗದ ಕೊನೆಯಲ್ಲಿ ಇರುವರು. ಕಾಡುಕಿಚ್ಚಿನಿಂದ ಸುಟ್ಟುಹೋದ ಹುಲ್ಲುಕಾಡಿನಲ್ಲಿ ಮೊದಲು ಮಳೆ ಬಂದೊಡನೆಯೇ ಹೇಗೆ ಚಿಗುರುವುದೋ ಹಾಗೆಯೇ ಕಲಿಯುಗದಲ್ಲಿ ಬೀಜರೂಪದಲ್ಲಿ ಉಳಿದ ಪ್ರಜೆಗಳಿಂದಲೇ ಕೃತಯುಗದ ಪ್ರಜೆಗಳುಂಟಾಗುವರು.

ಹೀಗೆಯೇ ಒಂದು ಯುಗದಿಂದ ಮತ್ತೊಂದು ಯುಗಕ್ಕೆ ಸಂಬಂಧವು ಬಿಡದೇ ಇದ್ದೇ ಇರುವುದು. ಒಂದು ಮನ್ವಂತರವು ಕಳೆಯುವವರೆಗೂ ಈ ಸಂಬಂಧವು ತಪ್ಪುವದಿಲ್ಲ. ಸುಖ, ಆಯುಸ್ಸು, ಬಲ, ರೂಪ, ಧರ್ಮ, ಅರ್ಥ, ಕಾಮ, ಇವುಗಳು ಒಂದು ಯುಗಕ್ಕಿಂತ ಮತ್ತೊಂದು ಯುಗದಲ್ಲಿ ಕ್ರಮವಾಗಿ ಮುಕ್ಕಾಲು ಭಾಗ ಶಕ್ತಿಹೀನವಾಗುತ್ತ ಬರುವುದು.

ಸಂಧ್ಯಾಂಶಗಳಲ್ಲಿ ಯುಗಧರ್ಮ ಸಿದ್ಧಿಗಳು ನಾಶವಾಗುವವು. ಪ್ರತಿಯುಗ ಸಂಧ್ಯಾಂಶಗಳಲ್ಲಿಯೂ ಈ ಕ್ರಮವಿರುವುದು. ಇದು ಪುರಾಣಪ್ರಸಿದ್ಧವಾದುದಾಗಿರುವುದು.

ಈ ಕ್ರಮದಲ್ಲಿಯೇ ಚತುರ್ಯುಗಗಳು ಆವೃತ್ತಿಯಾಗುತ್ತಾ ಒಂದು ಸಾವಿರ ಚತುರ್ಯುಗಗಳು ಕಳೆದರೆ ಸೃಷ್ಟಿಕರ್ತನಾದ ಬ್ರಹ್ಮನಿಗೆ ಆ ಕಾಲವು ಒಂದು ಹಗಲಾಗುವುದು. ರಾತ್ರಿಯೂ ಇದೇ ಪ್ರಮಾಣವುಳ್ಳದ್ದು. ಸರಳತೆ ಇಲ್ಲದಿರುವುದು, ಆಲಸ್ಯ, ಈ ಗುಣಗಳು ಪ್ರಾಣಿಗಳಿಗೆ ಯುಗಗಳು ಕಳೆಯುತ್ತ ಕಳೆಯುತ್ತ ಹೆಚ್ಚುತ್ತಿರುವುದು. ಸಮಸ್ತ ಯುಗಗಳಿಗೂ ಇದೇ ಲಕ್ಷಣವಿರುವುದು.

ಇಂತಹ ಚತುರ್ಯುಗಗಳು ಎಪ್ಪತ್ತೊಂದು ಆದರೆ ಒಂದು ಮನ್ವಂತರ ವಾಗುವುದು. ಒಂದು ಚತುರ್ಯುಗದಲ್ಲಿ ಯಾವ ಧರ್ಮಗಳು ನಡೆಯುವವೋ ಮತ್ತೊಂದು ಚತುರ್ಯುಗದಲ್ಲಿಯೂ ಅದರಂತೆ ಧರ್ಮಗಳು ನಡೆಯುವವು. ಇದರಂತೆ ಪ್ರತಿಯೊಂದು ಬ್ರಹ್ಮಸೃಷ್ಟಿಯಲ್ಲಿಯೂ ಇರುವ ಭೇದಗಳು ಹಿಂದಿನ ಸೃಷ್ಟಿಯನ್ನು ಅನುಸರಿಸಿ ಇರುವುದು.

ಬ್ರಹ್ಮ ಸೃಷ್ಟಿಯು ಇಪ್ಪತ್ತೈದು ತತ್ವಗಳಿಂದ ಕೂಡಿರುವುದು. ಅವಕ್ಕೆ ಹೆಚ್ಚೂ ಇಲ್ಲ ಕಡಿಮೆಯೂ ಇಲ್ಲ. ಹೀಗೆಯೇ ಯುಗಗಳಿಂದ ಕೂಡಿ ಕಲ್ಪಗಳು ಅವುಗಳ ಲಕ್ಷಣಗಳಿಗನು ಸಾರವಾಗಿ ನಡೆಯುವವು. ಸಕಲ ಮನ್ವಂತರಗಳಿಗೂ, ಇದೇ ಲಕ್ಷಣಗಳೆಂದು ತಿಳಿಯತಕ್ಕದ್ದು. ಯುಗಗಳ ಸ್ವಭಾವದಿಂದ ಹೇಗೆ ಯುಗಗಳ ಆವೃತ್ತಿಯಾಗುತ್ತಿರುವಿಕೆಯು ಬಹಳ ಕಾಲದಿಂದ ಬಂದಿರುವುದೋ. ಹಾಗೆಯೇ ಜನರುಗಳೂ ವೃದ್ಧಿಕ್ಷಯಗಳಿಂದ ಕೂಡಿದವರುಗಳಾಗಿ ಆವೃತ್ತಿಯಾಗುತ್ತಿರುವರು. ಅಂದರೆ ಜನ್ಮವನ್ನೆತ್ತುತ್ತಿರುವರು.

ಈ ರೀತಿಯಲ್ಲಿ ಕಳೆದುಹೋದ ಮತ್ತು ಮುಂದೆಬರುವ ಯುಗಗಳ ಲಕ್ಷಣಗಳನ್ನು ಸಕಲ ಮನ್ವಂತರಗಳಲ್ಲಿಯೂ ಹೇಳಿದಂತೆ ಆಯಿತು. ಒಂದು ಮನ್ವಂತರದ ಲಕ್ಷಣವನ್ನು ಹೇಳಿದರೆ ಸಕಲ ಮನ್ವಂತರಗಳ ಲಕ್ಷಣಗಳನ್ನೂ ಹೇಳಿದಂತೆ ಆಗುವದು. ಒಂದು ಕಲ್ಪದ ಲಕ್ಷಣವನ್ನು ಹೇಳಿದರೆ ಸಕಲ ಕಲ್ಪಗಳ ಲಕ್ಷಣಗಳನ್ನೂ ಹೇಳಿದಂತೆ ಆಗುವುದು. ಕಳೆದ ಒಂದು ಮನ್ವಂತರದ ಲಕ್ಷಣವನ್ನು ತಿಳಿದವನು ವಿಚಾರಮಾಡಿ ಮುಂದೆ ಬರುವ ಮನ್ವಂತರವೂ ಇದೇ ಲಕ್ಷಣವುಳ್ಳದ್ದೆಂದು ಊಹಿಸಿ ತಿಳಿದುಕೊಳ್ಳಬೇಕು. ಸಕಲ ಮನ್ವಂತರಗಳಲ್ಲಿಯೂ ಉಂಟು ಬಗೆಯ ದೇವತೆಗಳೂ, ಮನ್ವಂತರಾಧಿಪತಿಗಳೂ, ಋಷಿಗಳೂ, ಮನುಗಳೂ, ನಾಮ ರೂಪ ಕಾರ್ಯಗಳಿಂದ ಸಮಾನರಾಗಿರುವರು. ಹೀಗೆಯೇ ವರ್ಣಾಶ್ರಮ ವಿಭಾಗಗಳೂ ಪ್ರತಿಯುಗದಲ್ಲಿಯೂ ಸಮಾನವಾಗಿರುವವು.

ಮಹೇಶ್ವರನು ಯುಗಸ್ವಭಾವಗಳನ್ನೂ ವರ್ಣಾಶ್ರಮ ವಿಭಾಗಗಳನ್ನೂ, ಯುಗಗಳನ್ನೂ, ಯುಗಸಿದ್ಧಿಗಳನ್ನೂ ಈ ರೀತಿಯಲ್ಲಿ ನಿರ್ಮಿಸಿರುವನು. ಯುಗ ಪ್ರಮಾಣಗಳನ್ನು ಸಂಗ್ರಹವಾಗಿ ನಿನಗೆ ಹೇಳಿರುವನು. ಇನ್ನು ಮುಂದೆ ಬ್ರಹ್ಮನು ದಾಕ್ಷಾಯಣಿ ದೇವಿಯ ಪುತ್ರನಾದ ಬಗೆಯನ್ನು ಸಂಗ್ರಹವಾಗಿ ಹೇಳುವೆನು.

*ಲಿಂಗಮಹಾಪುರಾಣದ ಪೂರ್ವಾರ್ಧದ ಕಲಿಯುಗಧರ್ಮ ವಿಶೇಷಗಳ ವಿವರಣೆ ಎಂಬ ನಲವತ್ತನೆಯ ಅಧ್ಯಾಯ ಮುಗಿದುದು.*

—o—

**ದೇವೇಂದ್ರ** :- ಲೋಕ ಪಿತಾಮಹನಾದ ಬ್ರಹ್ಮದೇವನು ಒಂದು ಸಾವಿರ ಚತುರ್ಯುಗ ರೂಪವಾದ ತನ್ನ ರಾತ್ರಿಯು ಕಳೆದ ಬಳಿಕ ನಷ್ಟರಾದ ಜೀವಿಗಳನ್ನೆಲ್ಲ ಮತ್ತೆ ಮೊದಲಿನಂತೆಯೆ ಸೃಷ್ಟಿ ಮಾಡಿದನು. ಎರಡೂ ಬ್ರಹ್ಮನ ಪರಾರ್ಧವರ್ಷಗಳು ಕಳೆದ ಬಳಿಕ ಪೃಥ್ವಿಯು ಜಲದಲ್ಲಿಯೂ, ಜಲವು ಅಗ್ನಿಯಲ್ಲಿಯೂ, ಆ ಅಗ್ನಿಯು ವಾಯುವಿನಲ್ಲಿಯೂ ವಾಯುವು ಆಕಾಶದಲ್ಲಿಯೂ ತಮ್ಮ ತಮ್ಮ ಮಾತ್ರಾರೂಪವಾಗಿ ವಿಲೀನವಾಗುವವು. ಪೃಥ್ವಿ, ಜಲ, ತೇಜ, ವಾಯು, ಆಕಾಶಗಳ ಮಾತ್ರೆಳಾದ ಗಂಧ, ರಸ, ರೂಪ, ಸ್ಪರ್ಶ, ಶಬ್ದ ಈ ಪಂಚತನ್ಮಾತ್ರೆಗಳೂ, ಹನ್ನೊಂದು ಇಂದ್ರಿಯಗಳು ಅಹಂಕಾರ ತತ್ವದಲ್ಲಿ ಲೀನವಾಗುವವು. ಆ ಅಹಂಕಾರ ತತ್ವ ಮಹತ್ತತ್ವದಲ್ಲಿ ಲೀನವಾಗುವದು. ಆ ಮಹತತ್ವವು ಅವ್ಯಕ್ತ ಅಥವಾ ಪ್ರಧಾನ ಎನ್ನುವ ಪ್ರಕೃತಿಯಲ್ಲಿ ಆ ಪ್ರಕೃತಿಯು ತನ್ನ ಸತ್ವರಜಸ್ಸುತಮಸ್ಸುಗಳೆಂಬ ಮೂರುಗುಣಗಳಿಂದಕೂಡಿ ಮಹಾಪುರುಷನಾದ ಮಹಾದೇವನಲ್ಲಿ ಲೀನವಾಗುವದು. ಇದಕ್ಕೆ ಮಹಾಪ್ರಳಯ ಎನ್ನುವರು.

ಅನಂತರ ಆ ಮಹಾಪುರುಷನಾದ ಶಂಕರನಿಂದ ಮೊದಲಿನಂತೆ ಸೃಷ್ಟಿಯಾಯಿತು ಅನಂತರ ಆ ಬ್ರಹ್ಮನ ಸಂಕಲ್ಪದಿಂದ ಸೃಷ್ಟಿಸಲ್ಪಟ್ಟವರು ಅವನ ಮಾನಸಪುತ್ರರಾದರು. ಕಮಲಕುಮಾರನಾದ ಚತುರ್ಮುಖನಿಂದ ಮೊಟ್ಟಮೊದಲು ಸೃಷ್ಟಿಸಲ್ಪಟ್ಟ ಮಾನಸ ಪುತ್ರರಿಂದ ಈ ಲೋಕದಲ್ಲಿ ಪ್ರಜೆಗಳ ಅಭಿವೃದ್ಧಿಯು ಆಗಲಿಲ್ಲ. ಆಗ ಪ್ರಜಾಭಿವೃದ್ಧಿಗಾಗಿ ಬ್ರಹ್ಮದೇವನು ತನ್ನ ಮಾನಸಪುತ್ರರೊಡನೆ ಒಡಗೂಡಿ ಆ ಪರಮೇಶ್ವರನನ್ನು ಕುರಿತು ಘೋರವಾದ ತಪಸ್ಸನ್ನು ಆಚರಿಸಿದನು. ಆಗ ಆ ವಿರೂಪಾಕ್ಷನು ಪಿತಾಮಹನ ಅತ್ಯುಗ್ರವಾದ ತಪಸ್ಸಿಗೆ ಮೆಚ್ಚಿದನು. ಅವನ ಅಪೇಕ್ಷೆ ಏನೆನ್ನುವದನ್ನು ತಾನು ಚೆನ್ನಾಗಿ ಅರಿತನು. ಮತ್ತು ಆ ಬ್ರಹ್ಮನ ಲಲಾಟದ ಮಧ್ಯಭಾಗವನ್ನು ಭೇದಿಸಿಕೊಂಡು ಪುತ್ರ ಸ್ನೇಹವೆಂದು ಹೇಳುತ್ತ ಸ್ತ್ರೀ ಪುರುಷರೂಪದಿಂದ ಪ್ರಾದುರ್ಭೂತನಾದನು. ಇದೇ ಆ ಪರಮೇಶ್ವರನ ಬ್ರಹ್ಮಪುತ್ರನಾದ ಅರ್ಧನಾರೀಶ್ವರರೂಪ. ಅನಂತರ ಮಹಾನುಭಾವನಾದ ಆ ಮಹಾದೇವನು ಬ್ರಹ್ಮನೊಡನೆ ಸರ್ವ ಜಗತ್ತನ್ನು ಸುಟ್ಟುಬಿಟ್ಟನು. ಅನಂತರ ಜಗತ್ತಿನ ಅಭಿವೃದ್ಧಿಗಾಗಿ ತನ್ನ ಅರ್ಧಶರೀರಳಾದ ಮಂಗಳ ಸ್ವರೂಪಳಾದ ಆ ದೇವಿಯನ್ನು ಯೋಗಮಾರ್ಗದಿಂದ ಭೋಗಮಾಡಿದನು. ಆ ಚಂದ್ರಚೂಡನು ತನ್ನ ದೇಹಾರ್ಧಳಾದ ಆ ಸತೀದೇವಿಯಲ್ಲಿ ಹರಿಯನ್ನೂ, ಬ್ರಹ್ಮನನ್ನೂ, ಪಾಶುಪತವೆಂಬ ಅಸ್ತ್ರವನ್ನು ಸೃಷ್ಟಿಸಿದನು. ಆ ಮಹಾದೇವಿಯ ಅಂಶದಿಂದ ಹುಟ್ಟಿದ ಹರಿಯು, ಬ್ರಹ್ಮನು ಶಿವನ ಲಿಂಗದಿಂದಲೇ ಉದ್ಭೂತರಾಗಿರುವರು. ಅನಂತರ ಶ್ರೀ ಹರಿಯು ತನ್ನ ದೇಹವನ್ನೇ ಸ್ತ್ರೀಪುರುಷರೂಪವಾಗಿ ಎರಡುಭಾಗಮಾಡಿಕೊಂಡು ಸಮಸ್ತ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವನ್ನೆಲ್ಲ ಸೃಷ್ಟಿಮಾಡಿದನು. ಅನಂತರ ಲೋಕಪಿತಾಮಹನಾದ ಬ್ರಹ್ಮನನ್ನೂ ಸೃಷ್ಟಿಸಿದನು. ಆ ಬ್ರಹ್ಮನು ರುದ್ರನನ್ನು ಸೃಷ್ಟಿಮಾಡಿದನು. ಮತ್ತೊಂದು ಕಲ್ಪದಲ್ಲಿ ಮಹಾದೇವನು ವಿಷ್ಣುವನ್ನು, ಬ್ರಹ್ಮನನ್ನು ತಾನೇ ಸೃಷ್ಟಿಸಿದನು. ಇನ್ನೊಂದು ಕಲ್ಪದಲ್ಲಿ ಸ್ವಯಂ ಹರಿಯೇ

ಈಶ್ವರನನ್ನು ಬ್ರಹ್ಮನನ್ನು ಸೃಷ್ಟಿಸಿದನು. ಹಾಗೂ ಬ್ರಹ್ಮನು ತಾನೇ ನಾರಾಯಣನನ್ನು ಶಂಕರನು ಬ್ರಹ್ಮನನ್ನು ಸೃಷ್ಟಿಸಿದರು. ಆ ಬ್ರಹ್ಮನು ಹತ್ತುಸಾವಿರವರ್ಷ ಸಮಾಧಿ ಸ್ಥಿತಿಯಲ್ಲಿದ್ದಾಗ ಅವನ ಹೃದಯ ಪದ್ಮದ ಕರ್ಣಿಕೆಯ ನಡುವೆ ಓಂಕಾರದ ಅರ್ಥಮಂತ್ರರೂಪನೂನಾದ ಪ್ರತಿಪಾದ್ಯನೂ ಆದ ಶಿವನನ್ನು ಸ್ಥಾಪಿಸಿದ. ತನ್ನ ಹೃದಯ ಕಮಲದಲ್ಲಿದ್ದ ಶಿವನ ಆಜ್ಞೆಯಿಂದ ಒಂದು ಅಂಶದಿಂದ ಜನಿಸಿದನು. ಆ ರುದ್ರನು ಸ್ವಾಭಾವಿಕವಾಗಿ ನೀಲವರ್ಣ ದಿಂದ ಕೂಡಿದ್ದರಿಂದ ಮತ್ತು ಅಗ್ನಿಯ ಸಂಬಂಧದಿಂದ **'ನೀಲಲೋಹಿತ'** ಎಂದು ಕರೆಯಲ್ಪಟ್ಟನು. ಅನಂತರ ಬ್ರಹ್ಮನು ಅವನನ್ನು ಎಂಟು ನಾಮಗಳಿಂದ ಸ್ತೋತ್ರಮಾಡಿದನು.

**॥ಪಿತಾಮಹ ಉವಾಚ॥**

**ನಮಸ್ತೇ ಭಗವನ್‌ರುದ ಭಾಸ್ಕರಾಮಿತ ತೇಜಸೇ ।**
**ನಮೋ ಭವಾಯ ದೇವಾಯ ರಸಾಯಾಂಬುಮಯಾಯ ತೇ ॥**
**ಶರ್ವಾಯ ಕ್ಷಿತಿರೂಪಾಯ ಸದಾಸುರಭಿಣೇ ನಮಃ ।**
**ಈಶಾಯ ವಾಯವೇ ತುಭ್ಯಂ ಸಂಸ್ಪರ್ಶಾಯ ನಮೋ ನಮಃ ॥**

ಸೂರ್ಯರೂಪನಾದ ರುದ್ರನೆಂಬ ಹೆಸರುಳ್ಳ ನಿನಗೆ ನಮಸ್ಕಾರವು. ಸುಗಂಧವಾದ ಭೂರೂಪವಾದ ಶರ್ವನೆಂಬ ನಿನಗೆ ನಮಸ್ಕಾರವು. ರಸರೂಪವಾದ ಭವನೆಂಬ ದೇವನಾದ ನಿನಗೆ ನಮಸ್ಕಾರವು. ಸ್ಪರ್ಶಗುಣವುಳ್ಳ ವಾಯುಸ್ವರೂಪನಾದ ಈಶಾನನೆಂಬ ನಿನಗೆ ನಮಸ್ಕಾರವು.

**ಪಶೂನಾಂ ಪತಯೇ ಚೈವ ಪಾವಕಾಯಾತಿ ತೇಜಸೇ ।**
**ಭೀಮಾಯ ವ್ಯೋಮರೂಪಾಯ ಶಬ್ದ ಮಾತ್ರಾಯ ತೇ ನಮಃ ॥**
**ಮಹಾದೇವಾಯ ಸೋಮಾಯ ಅಮೃತಾಯ ನಮೋಸ್ತು ತೇ ।**
**ಉಗ್ರಾಯ ಯಜಮಾನಾಯ ನಮಸ್ತೇ ಕರ್ಮಯೋಗಿನೇ ॥**

ವಿಶೇಷವಾದ ತೇಜಸ್ಸುಳ್ಳ ಅಗ್ನಿಸ್ವರೂಪನಾದ ಪಶುಪತಿಯೆಂಬ ನಿನಗೆ ನಮಸ್ಕಾರವು. ಶಬ್ದಗುಣವುಳ್ಳ ಆಕಾಶರೂಪನಾದ ಭೀಮನೆಂಬ ಹೆಸರುಳ್ಳ ನಿನಗೆ ನಮಸ್ಕಾರವು. ಅಮೃತಕಿರಣವುಳ್ಳ ಚಂದ್ರಸ್ವರೂಪನಾದ ಮಹಾದೇವನೆಂಬ ನಿನಗೆ ನಮಸ್ಕಾರವು. ಕರ್ಮಫಲವನ್ನನುಭವಿಸುವ ಜೀವಸ್ವರೂಪನಾದ ಯಜಮಾನನಾದ ಉಗ್ರನೆಂಬ ಹೆಸರುಳ್ಳ ನಿನಗೆ ನಮಸ್ಕಾರವು.

**ಯಃ ಪಠೇಚ್ಛೃಣುಯಾದ್ವಾಽಪಿ ಪೈತಾಮಹಮಿಮಂ ಸ್ತವಂ ।**
**ರುದ್ರಾಯ ಕಥಿತಂ ವಿಪ್ರಾನ್ ಶ್ರಾವಯೇದ್ವಾ ಸಮಾಹಿತಃ ॥**
**ಅಷ್ಟಮೂರ್ತೇಸ್ತು ಸಾಯುಜ್ಯಂ ವರ್ಷಾದೇಕಾದವಾಪ್ನುಯಾತ್ ।**
**ಏವಂ ಸ್ತುತ್ವಾ ಮಹಾದೇವಮವೈಕ್ಷತ ಪಿತಾಮಹಃ ॥**

ಬ್ರಹ್ಮನು ರುದ್ರನನ್ನು ಕುರಿತು ಹೇಳಿದ ಈ ಸ್ತೋತ್ರವನ್ನು ಯಾರು ಹೇಳುವರೋ, ಕೇಳುವರೋ, ಭಕ್ತಿಯಿಂದ ಬ್ರಾಹ್ಮಣರಿಗೆ ಕೇಳಿಸುವರೋ ಅವರು ಒಂದು ವರ್ಷದೊಳಗಾಗಿ ಅಷ್ಟಮೂರ್ತಿ ಸ್ವರೂಪನಾದ ಶಿವನ ಸಾಯುಜ್ಯವನ್ನು ಪಡೆಯುವರು.

ಹೀಗೆ ಬ್ರಹ್ಮದೇವನು ಮಹಾದೇವನನ್ನು ಸ್ತೋತ್ರಮಾಡಿದ ಬಳಿಕ ಆ ದೇವದೇವನು ಬ್ರಹ್ಮನ ಸುತ್ತಲೂ ಎಂಟು ಬಗೆಯಾಗಿ ಗೋಚರನಾದನು. ಸೂರ್ಯ, ಅಗ್ನಿ, ಚಂದ್ರ, ಭೂಮಿ, ವಾಯು, ಜಲ, ಆಕಾಶ, ಪುರುಷ ಈ ಅಷ್ಟಮೂರ್ತಿಯಾಗಿ ಕಾಣಿಸಿಕೊಂಡನು.

ಅವನನ್ನು ಕುರಿತು ಪ್ರಜಾಸೃಷ್ಟಿಮಾಡಬೇಕೆಂಬ ಮನಸ್ಸಿನಿಂದ ಬ್ರಹ್ಮನು ಘೋರತಪವನ್ನುಮಾಡಿದನು. ಅದರಿಂದ ಯಾವ ಪ್ರಯೋಜನವೂ ಉಂಟಾಗಲಿಲ್ಲ. ಆಗ ಬ್ರಹ್ಮನಿಗೆ ದುಃಖದಿಂದ ಕೋಪ ಬಂದು ಕಣ್ಣುಗಳಿಂದ ಕಂಬನಿಗಳು ಕೆಳಗೆ ಬಿದ್ದವು. ಅದರಿಂದ ಬರೆ ಭೂತ ಪ್ರೇತ ಪಿಶಾಚಿಗಳು ಹುಟ್ಟಿ ಕೊಂಡವು. ಅದರಿಂದ ದುಃಖಿತನಾದ ಬ್ರಹ್ಮನು ಪ್ರಾಣತ್ಯಾಗಮಾಡಿದನು. ಅನಂತರ ಪ್ರಾಣ ಸ್ವರೂಪನಾದ ಮಹಾದೇವನು ಬ್ರಹ್ಮನ ಮೂಲದಲ್ಲಿ ಅರ್ಧನಾರೀಶ್ವರನಾಗಿ ವ್ಯಕ್ತನಾದನು. ಅನಂತರ ಆ ರುದ್ರನು 'ಅಜೈಕಪಾದ', 'ಅಹಿರ್ಬುಧ್ನ್ಯ', 'ತ್ವಷ್ಟಾ', ರುದ್ರ. ಹರ, ಬಹುರೂಪ, ತ್ರ್ಯಂಬಕ, ಅಪರಾಜಿತ, ವೃಷಾಕಪಿ, ಶಂಭು, ಕಪರ್ದಿ ಎಂಬ ತನ್ನ ಏಕಾದಶ ರುದ್ರರೂಪದಿಂದ ಶೋಭಿಸಿದನು. ಮತ್ತು ತನ್ನ ಅರ್ಧಾಂಶದಿಂದ ಆ ಶಿವನು ಮಂಗಳಕರಳಾದ ಉಮಾದೇವಿಯನ್ನು ಸೃಷ್ಟಿಸಿದನು. ಆ ಉಮಾದೇವಿಯು ಲಕ್ಷ್ಮಿಯನ್ನೂ, ದುರ್ಗೆಯನ್ನೂ, ಸರಸ್ವತಿಯನ್ನೂ ಸೃಷ್ಟಿಸಿದಳು. ಹಾಗೂ ವಾಮ, ರೌದ್ರಿ, ಮಹಾಮಾಯಾ, ವೈಷ್ಣವಿ, ಕಲಾ, ವಿಕರಣೀ, ಕಾಲೀ, ಬಲವಿಕರಣೀ, ಬಲಪ್ರಮಥಿನಿ. ಸರ್ವಭೂತದಮನಿ, ಮನೋನ್ಮನಿ ಮುಂತಾದ ಅನೇಕ ಸ್ತ್ರೀಯರನ್ನು ಸೃಷ್ಟಿಸಿದಳು. ಅನಂತರ ಅವರೆಲ್ಲರೂ ಏಕಾದಶರುದ್ರರಿಂದಲೂ ಉಮಾದೇವಿಯು ಸೃಷ್ಟಿಸಿದ ಸ್ತ್ರೀಯರಿಂದಲೂ ಕೂಡಿ ಮರಣ ಹೊಂದಿದ ಆ ಬ್ರಹ್ಮನ ಸಮೀಪದಲ್ಲಿಯೇ ಇದ್ದರು. ಬ್ರಹ್ಮನ ಮುಖದಿಂದ ಉದ್ಭೂತನಾದ ಪರಮೇಶ್ವರನು ದಯಾಪೂರ್ಣನಾಗಿ ಮರಣ ಹೊಂದಿದ ಬ್ರಹ್ಮನಿಗೆ ತನ್ನ ಪ್ರಾಣವಾಯುವನ್ನು ಕೊಟ್ಟನು. ಮತ್ತು ತನ್ನ ಅಮೃತ ಹಸ್ತಗಳಿಂದ ಬ್ರಹ್ಮನನ್ನು ಮುಟ್ಟಿ ಸಂತೋಷವನ್ನುಂಟುಮಾಡಿ ಹೇಳಿದನು.

**ಮಹಾದೇವ**:- ''ಬ್ರಹ್ಮನೇ, ನಾನೇ ಪರಮಾತ್ಮ. ಈ ದೇವಿಯೇ ಅಜಾ ಎಂಬ ಹೆಸರುಳ್ಳ ಮಹಾಮಾಯೆ. ಈ ಏಕಾದಶ ರುದ್ರರು ನಿನ್ನನ್ನು ರಕ್ಷಿಸುವುದಕ್ಕಾಗಿ ಇಲ್ಲಿಗೆ ಬಂದಿರುವರು.'' ಆಗ ಬ್ರಹ್ಮನು ನಮಸ್ಕಾರ ಮಾಡಿ ಗದ್ಗದ ಕಂಠದಿಂದ ಕೈ ಜೋಡಿಸಿ ಮಾತನಾಡಿದನು.

ಬ್ರಹ್ಮ :- ದೇವದೇವೋತ್ತಮನಾದ ಮಹಾರುದ್ರನೇ ದುಃಖದಿಂದ ವ್ಯಾಕುಲನಾದ ನನ್ನನ್ನು ಸಂಸಾರದಿಂದ ಬಿಡುಗಡೆಮಾಡು.

ಆಗ ಆ ಉಮಾಪತಿಯು ಮುಕ್ತನೇ ಆದ ನಿನ್ನನ್ನು ಸಂಸಾರದಿಂದ ಮತ್ತೇನು ಮೋಚನೆಯನ್ನು ಮಾಡುವದು ? ಎಂದು ಹಾಸ್ಯಮಾಡಿ ತನ್ನ ಏಕಾದಶರುದ್ರರು ಹಾಗೂ ಉಮಾದೇವಿ ಸಹಿತನಾಗಿ ಅಂತರ್ಧಾನ ಹೊಂದಿದನು.

ಮೃತ್ಯು ಮೂಸದ ಮುಪ್ಪುಬಾರದ ಮಗನನ್ನು ನನಗೆ ಕೊಡು ಎಂದು ಕೇಳಿದ ಶಿಲಾದ ಮುನಿಗೆ ದೇವೇಂದ್ರನು. ''ಬ್ರಹ್ಮನಿಗೂ ಕೂಡ ಮೃತ್ಯುವು ತಪ್ಪಿದ್ದಲ್ಲ. ಮರಣರಹಿತನಾದ ಮಗನನ್ನು ಅನುಗ್ರಹಿಸುವದು ನನಗಾಗಲಿ, ಬ್ರಹ್ಮನಿಗಾಗಲಿ, ವಿಷ್ಣುವಿಗಾಗಲಿ ಸಾಧ್ಯವಿಲ್ಲ. ಮೃತ್ಯುವನ್ನು ಮೆಟ್ಟಿನಿಂತ ಅಯೋನಿಜಪುತ್ರನನ್ನು ಮೃತ್ಯುಂಜಯನಾದ ಮಹಾದೇವನು ಮಾತ್ರ ಕೊಡಲು ಸಮರ್ಥ. ಹೀಗೆ ಶಿಲಾದ ಮುನಿಗೆ ಹೇಳಿ ದೇವೇಂದ್ರನು ಐರಾವತವನ್ನು ಆರೋಹಣಮಾಡಿ ಉಳಿದೆಲ್ಲ ದೇವತೆಗಳೊಂದಿಗೆ ಸ್ವರ್ಗಲೋಕಕ್ಕೆ ಪ್ರಯಾಣ ಮಾಡಿದನು.

*ಲಿಂಗಾಮಹಾಪುರಾಣ ಪೂರ್ವಾರ್ಧದ ದೇವೇಂದ್ರನಿಂದ ಶಿಲಾದ ಮುನಿಗೆ ತ್ರಿಮೂರ್ತಿಗಳ ಉತ್ಪತ್ತಿಯ ಕ್ರಮ ಎಂಬ ನಾಲವತ್ತೊಂದನೆಯ ಅಧ್ಯಾಯ ಮುಗಿದುದು*

—o—

**ಸೂತ :-** ದೇವೇಂದ್ರನು ಹೊರಟು ಹೋದ ಬಳಿಕ ಶಿಲಾದಮುನಿಯು ಅವನ ಆದೇಶದಂತೆ ಜರಾಮರಣಗಳಿಲ್ಲದ ಅಯೋನಿಜಪುತ್ರನನ್ನು ಪಡೆಯಬೇಕೆಂಬ ಹಂಬಲದಿಂದ ಆ ಮಹಾದೇವನನ್ನು ಕುರಿತು ಘೋರ ತಪೋನುಷ್ಠಾನವನ್ನು ಕೈಗೊಂಡನು. ದೇವಮಾನದ ಒಂದು ಸಾವಿರ ವರುಷ ಶಿಲಾದನು ಹರನನ್ನು ಕುರಿತು ಘೋರ ತಪೋನುಷ್ಠಾನವನ್ನು ಮಾಡಿದನು. ಸಮಾಧಿಲೀನನಾದ ಅವನ ಸುತ್ತುಮುತ್ತು ಹುತ್ತವು ಬೆಳೆಯಿತು. ವಜ್ರಸೂಜಿ ಹುಳವು, ರಕ್ತಕೀಟಗಳೆಂಬ ಹುಳವೂ ಅವನ ದೇಹದ ಚರ್ಮ ರಕ್ತ ಮಾಂಸಗಳನ್ನೆಲ ತಿಂದುಹಾಕಿದವು. ಮೈತುಂಬ ಬರೆ ಮೂಳೆಗಳು ಮಾತ್ರ ಉಳಿದು ಅಚಲನಾಗಿ ತಪಸ್ಸಿನಲ್ಲಿ ವಿಲೀನನಾದ ಅವನ ದೃಷ್ಟಿಗೆ ಆ ಗೌರಿ ಪತಿಯು ಗೋಚರನಾದನು. ಅನುಗ್ರಹ ಪೂರ್ವಕವಾಗಿ ತನ್ನ ಹಸ್ತದಿಂದ ಅವನನ್ನು ಮುಚ್ಚಿದನು. ಅದರಿಂದ ಶಿಲಾದ ಮುನಿಯ ಆಯಾಸ ಪರಿಹಾರವಾಗಿ ದೇಹದಲ್ಲಿ ಬಲವು ಬಂದಂತೆ ಎನಿಸಿತು. ಆಗ ಕರುಣಾಶಾಲಿಯಾದ ಆ ಕೈಲಾಸಪತಿಯು, ''ತಪಸ್ವಿಯಾದ ಶಿಲಾದ ಮುನಿಯೆ, ನಾನು ನಿನ್ನ ತಪಸ್ಸಿನಿಂದ ಪ್ರೀತನಾಗಿದ್ದೇನೆ. ಉಮಾದೇವಿಯೊಂದಿಗೆ ನೀನು ಇದ್ದ ಕಡೆ ಬಂದು ದರ್ಶನನೀಡಿದ್ದೇನೆ. ನಿನಗೆ ಸರ್ವ ಶಾಸ್ತ್ರಾರ್ಥಗಳನ್ನು ಸಂಪೂರ್ಣವಾಗಿ ತಿಳಿದ ಸರ್ವಜ್ಞನಾದ ಮಗನನ್ನು ಕರುಣಿಸುತ್ತೇನೆ'' ಎಂದು ಹೇಳಿದನು.

ಆಗ ಶಿಲಾದ ಮುನಿಯ ಕೊರಳು ಸಂತಸದಿಂದ ಬಿಗಿದುಬಂದು ಆ ಭಗವಂತನನ್ನು ''ಸ್ತ್ರೀಯೋನಿಯಿಂದ ಹುಟ್ಟದ ಮೃತ್ಯುವನ್ನು ಮೀರಿದ ಓರ್ವ ಸತ್ಪುತ್ರನನ್ನು ಕರುಣಿಸು'' ಎಂದು ಬೇಡಿಕೊಂಡನು.

**ಮಹಾದೇವ :-** ಶಿಲಾದನೆ, ಈ ಮೊದಲು ಬ್ರಹ್ಮನೂ, ಮುನಿಗಳೂ, ದೇವತೆಗಳೂ ತಪಸ್ಸಿನಿಂದ ನನ್ನನ್ನು ಆರಾಧಿಸಿ ಅವತಾರಮಾಡು ಎಂದು ಬೇಡಿಕೊಂಡಿರುವರು. ಅವರೆಲ್ಲರ ಇಷ್ಟಾನುಸಾರವಾಗಿ ಹಾಗೂ ನಿನ್ನ ಅಪೇಕ್ಷೆಯಂತೆ ನಾನು 'ನಂದೀ' ಎಂಬ ಹೆಸರಿನಿಂದ ಅಯೋನಿಜ ಪುತ್ರನಾಗಿ ನಿನ್ನಿಂದ ಹುಟ್ಟಿ ಬರುವೆನು. ಸಕಲ ಪ್ರಪಂಚಕ್ಕೆಲ್ಲ ತಂದೆಯಾದ ನನಗೆ ಅರ್ಥಾತ್ ನನ್ನ 'ನಂದಿ' ಅವತಾರಕ್ಕೆ ನೀನೆ ತಂದೆ ಎನಿಸುವೆ.'' ಹೀಗೆ ಹೇಳಿ ಕರುಣಾಪೂರ್ಣನಾದ ಕೈಲಾಸಪತಿಯು ಶಿಲಾದ ಮುನಿಯನ್ನು ಅನುಗ್ರಹಿಸಿ ಪಾರ್ವತಿಯೊಂದಿಗೆ ಅಲ್ಲಿಯೇ ಅದೃಶ್ಯನಾದನು. ನಂದೀಶ್ವರನು ತನ್ನ ಉತ್ಪತ್ತಿಯ ಕಥೆಯನ್ನು ಇನ್ನೂ ವಿಸ್ತಾರ ಪೂರ್ವಕವಾಗಿ ಬಿತ್ತರಿಸಿದನು.

**ನಂದೀಶ್ವರ :-** ನನ್ನ ತಂದೆಯಾದ ಶಿಲಾದನು ಯಜ್ಞ ಮಾಡಬೇಕೆಂದು ನಿರ್ಮಿಸಿದ ಯಜ್ಞಾಂಗಣದಲ್ಲಿ ನಾನು ಶಿಲಾದ ಪುತ್ರನಾಗಿ ಜನಿಸಿದೆ. ನಾನು ಹುಟ್ಟಿದಾಗ ಮೋಡಗಳು ಮಳೆಗರೆದವು. ಕಿನ್ನರರು ಸಿದ್ಧರು ಸಾಧ್ಯರು ಗಾನಮಾಡಿದರು. ಸಾಕ್ಷಾತ್ ವಿಷ್ಣುವು ನನ್ನ ಮೇಲೆ ಪುಷ್ಪವೃಷ್ಟಿ ಮಾಡಿದನು. ಆಗಿನ ನನ್ನ ಕಾಂತಿಯು ಸೂರ್ಯನಿಗೆ ಸಮಾನ. ತೇಜಸ್ಸು ಪ್ರಳಯಾಗ್ನಿಗೆ ಸಮಾನ, ಮೂರುಕಣ್ಣುಗಳು, ನಾಲ್ಕು ತೋಳುಗಳು. ತಲೆಯಮೇಲೆ ರತ್ನ ಕೀರಿಟ, ಕೈಗಳಲ್ಲಿ ಶೂಲ, ಟಂಕ, ಗದಾ, ವಜ್ರ ಎಂಬ ಆಯುಧಗಳು, ಮೇಘಧ್ವನಿಗೆ ಸಮಾನವಾದ ಧ್ವನಿ, ವಜ್ರದ ಕರ್ಣಾಭರಣ. ಇಂಥ ನನ್ನನ್ನು ನೋಡಿ ಇಂದ್ರ ಸ್ತುತಿಸಿದ.

ಬ್ರಹ್ಮಸ್ತೋತ್ರಮಾಡಿದ. ಅಪ್ಸರೆಯರು ಕುಣಿದರು. ಬ್ರಹ್ಮ, ಹರಿ, ರುದ್ರ ಎಂಬ ತ್ರಿಮೂರ್ತಿಗಳೂ ಸಾಕ್ಷಾತ್ ಪಾರ್ವತಿ ದೇವಿಯೂ, ಇಂದ್ರ, ಚಂದ್ರ, ಸೂರ್ಯ, ವಾಯು, ಅಗ್ನಿ, ಈಶಾನ್ಯ, ನಿಖುತಿ, ಕುಬೇರ, ಯಮ, ವರುಣ ಹಾಗೂ ವಿಶ್ವ ದೇವತೆಗಳೂ, ಏಕಾದಶರುದ್ರರೂ, ಅಷ್ಟವಸ್ತುಗಳೂ ಮತ್ತು ಲಕ್ಷ್ಮಿ, ಶಚಿ, ಸರಸ್ವತಿ, ಅದಿತಿ, ದಿತಿ, ಶ್ರದ್ಧಾ, ಲಜ್ಜಾ, ಧೃತಿ, ನಂದಾ, ಭದ್ರಾ, ಸುರಭಿ, ಸುಶೀಲಾ, ಸುಮನಾ ಮುಂತಾದ ದೇವಿಯರೂ ವೃಷಭದೇವ, ಧರ್ಮದೇವ, ಧರ್ಮಪುತ್ರ ಮೊದಲಾದವರೆಲ್ಲರೂ ನನ್ನ ಸುತ್ತಮುತ್ತಲು ನಿಂತುಕೊಂಡು ನನ್ನನ್ನು ಆಲಂಗಿಸಿ ಸ್ತೋತ್ರಮಾಡಿದರು. ನನ್ನ ತಂದೆಯಾದ ಶಿಲಾದಮುನಿಯು ಪ್ರೀತಿಯಿಂದ ನನ್ನನು ನಮಸ್ಕರಿಸಿ ಸ್ತೋತ್ರಮಾಡಿದನು.

**ಶಿಲಾದ** :- ಮಹಾಮಹಿಮನಾದ ಪರಮೇಶ್ವರನೆ ನೀನು ನನಗೆ ಪುತ್ರನಾಗಿ ಜನಿಸಿರುವೆ. ಸರ್ವವ್ಯಾಪಿಯಾದ ನೀನು ಪ್ರಪಂಚವನ್ನೆಲ್ಲ ನಿರ್ವ್ಯಾಜವಾಗಿ ರಕ್ಷಿಸುವುದರಿಂದ. ಲೋಕಕ್ಕೆ ತಂದೆಯಾಗಿರುವೆ ನೀನು ಪುತ್ರನಾಗಿ ಜನಿಸಿದ್ದರಿಂದ ನಾನು ಆನಂದವನ್ನು ಹೊಂದಿರುವೆ. ಆದುದರಿಂದ ನೀನು '**ನಂದಿ**' ಎಂದೇ ಹೆಸರನ್ನು ಹೊಂದು. ನೀನು ನನ್ನ ಪುತ್ರನಾಗಿ ಜನಿಸಿದ್ದರಿಂದ ನನ್ನ ಹಿಂದಿನ ಪಿತೃ, ಪಿತಾಮಹ, ಪ್ರಪಿತಾಮಹರೆಲ್ಲರೂ ಈ ದಿನ ರುದ್ರಲೋಕಕ್ಕೆ ಪ್ರಯಾಣಮಾಡಿದರು. ನೀನು ಅವತಾರ ಮಾಡಿದುದರಿಂದ ನನ್ನ ಜನ್ಮವು ಸಾರ್ಥಕವಾಯಿತು. ನೀನೆ ನನ್ನನ್ನು ಕಾಪಾಡು. ನೀನು ಪುತ್ರನೆಂದು ತಿಳಿದು ನಾನು ಯಾವ ಮಾತನ್ನಾಡಿದರೂ ನೀನು ನನ್ನನ್ನು ಕ್ಷಮಿಸು. ಹೀಗೆ ಶಿಲಾದಮುನಿಯು ಬಾಲಕನಾದ ನಂದಿಯನ್ನು ಹೊಗಳಿ ನಮಸ್ಕರಿಸಿ ಋಷಿಮುನಿಗಳಿಗೆಲ್ಲ ತನ್ನ ಪುತ್ರ ಜನ್ಮದ ಸಂದರ್ಭವನ್ನು ನಿರೂಪಿಸಿದನು.

*ಲಿಂಗಮಹಾಪುರಾಣ ಪೂರ್ವಾರ್ಧದ ನಂದೀಕೇಶ್ವರನ ಉತ್ಪತ್ತಿ*
*ಎಂಬ ನಲವತ್ತರಡನೆಯ ಅಧ್ಯಾಯ ಮುಗಿದುದು.*

—o—

## ನಂದಿಕೇಶ್ವರನ ಅಭಿಷೇಕ

**ಅಧ್ಯಾಯ - ೪೩**

**ನಂದೀಶ್ವರ** :- ನನ್ನ ತಂದೆಯಾದ ಶಿಲಾದಮುನಿಯು ಪರಮೇಶ್ವರನಿಗೆ ಪ್ರಣಾಮ ಮಾಡಿ ಪುತ್ರನಾದ ನನ್ನೊಂದಿಗೆ ತನ್ನ ಪರ್ಣಶಾಲೆಯ ಆಶ್ರಮಕ್ಕೆ ತೆರಳಿದನು. ನನ್ನನ್ನು ಪಡೆದ ಆ ತಂದೆಗೆ ದಟ್ಟದರಿದ್ರನಿಗೆ ದೊಡ್ಡ ನಿಧಿ ದೊರಕಿದಂತೆ ಪರಮಾನಂದವಾಯಿತು. ನಾನು ನನ್ನ ತಂದೆಯ ಜೊತೆಗೆ ಅವನ ಆಶ್ರಮವಾದ ಪರ್ಣಕುಟೀರಕ್ಕೆ ಹೋದ ಕೂಡಲೆ ನನ್ನ ದೈವಿರೂಪವು ಹೊರಟುಹೋಯಿತು. ಅದರೊಡನೆ ಆ ದಿವ್ಯಜ್ಞಾನವೂ ಹೊರಟು ಹೋಯಿತು. ಆಗ ಶಾಲಂಕಾಯನ ಋಷಿಯ ಮಗನಾದ ನನ್ನ ತಂದೆ ಶಿಲಾದಮುನಿಯು ತನ್ನ ಬಂಧುಗಳೊಡನೆ ಜಾತಕರ್ಮಾದಿ ಬ್ರಾಹ್ಮಣ ಸಂಸ್ಕಾರಗಳನ್ನೆಲ್ಲ ಮಾಡಿದನು. ನನಗೆ ನನ್ನ ತಂದೆಯು ಋಗ್ವೇದ, ಯಜುರ್ವೇದ, ಸಾಮವೇದಗಳನ್ನೂ ವೇದಗಳ ಆರೂಅಂಗಗಳನ್ನು, ಆಯುರ್ವೇದ, ಧನುರ್ವೇದ, ಗಾಂಧರ್ವ ವೇದಗಳನ್ನೂ ಅಶ್ವರಕ್ಷಣ ಗಜರಕ್ಷಣ, ಮನುಷ್ಯರಕ್ಷಣ ಹಾಗೂ ಉಳಿದೆಲ್ಲ ಶಾಸ್ತ್ರಗಳನ್ನೂ ಉಪದೇಶಮಾಡಿ ಕಲಿಸಿದನು. ನಾನು ಏಳನೆಯ ವರ್ಷದವನಿದ್ದಾಗ ಮಿತ್ರಾವರುಣರೆಂಬ ದೇವಮುನಿಗಳು ಪಶುಪತಿಯ ಆಜ್ಞೆಯಂತೆ ಆಶ್ರಮಕ್ಕೆ ಬಂದರು. ಮತ್ತು ನನ್ನ ತಂದೆಗೆ ಹೇಳಿದರು.

**ಮಿತ್ರಾವರುಣ** :- ಮುನಿಪುಂಗವನಾದ ಶಿಲಾದನೆ, ಈ ನಿನ್ನ ಮಗನು ಸರ್ವಶಾಸ್ತ್ರಾರ್ಥಗಳನ್ನು ಸಂಪೂರ್ಣವಾಗಿ ತಿಳಿದಿದ್ದಾನೆ. ಆದರೆ ಈ ನಿನ್ನ ಮಗನು ಅಲ್ಪಾಯುಷಿಯಾಗಿದ್ದಾನೆ. ಇನ್ನು ಒಂದು ವರುಷಕ್ಕಿಂತ ಹೆಚ್ಚಾಗಿ ಅವನು ಬದುಕುವದಿಲ್ಲ.'' ಮಿತ್ರಾವರುಣ ಮುನಿಯು ಹೀಗೆ ಹೇಳಿದ್ದನ್ನು ಕೇಳಿ ಶಿಲಾದ ಮುನಿಯು ಬಹಳ ದುಃಖಿತನಾದನು. ಮಗನನ್ನು ಆಲಿಂಗಿಸಿಕೊಂಡು ದುಃಖಾತಿರೇಕದಿಂದ ಶೋಕಮಾಡುತ್ತ ನೆಲದ ಮೇಲೆ ಬಿದ್ದನು. ನಾನು ಕೂಡ ಆಗ ಮೃತ್ಯುವಿಗೆ ಹೆದರಿ ಸತ್ತಂತೆ ನೆಲದ ಮೇಲೆ ಬಿದ್ದ ತಂದೆಗೂ ಆತನಿಗೂ ನಮಸ್ಕಾರವನ್ನು ಮಾಡಿ ಪ್ರದಕ್ಷಿಣೆಗೈದು ರುದ್ರಮಂತ್ರವನ್ನು ಜಪಿಸತೊಡಗಿದೆ. ಹೃದಯಕಮಲ ಮಧ್ಯದಲ್ಲಿ ದಹರಾಕಾಶದಲ್ಲಿ ಮೂರು ಕಣ್ಣು, ಹತ್ತು ತೋಳು, ಐದು ಮುಖಗಳಿಂದ ದೇದೀಪ್ಯಮಾನನಾಗಿ ಬೆಳಗುವ ಮಹಾದೇವನನ್ನು ತ್ರ್ಯಂಬಕಮಂತ್ರ ಜಪವನ್ನು ಮಾಡುತ್ತ ಧ್ಯಾನಮಾಡಿದೆನು. ನದಿ ಪ್ರವಾಹದ ನಟ್ಟನಡುವೆ ನಿಂತು ಶಿವನನ್ನು ಕುರಿತು ಅವನ ಧ್ಯಾನೈಕತಾನಲೀನ ಮಾನಸನಾಗಿ ಉಪಾಸನೆಮಾಡಿದೆನು. ಅದರಿಂದ ಪರಮಪ್ರೀತನಾದ ಪರಮೇಶ್ವರನು ಹೇಳಿದನು.

**ಮಹಾದೇವ** :- ''ನನ್ನ ಪರಮ ಪ್ರೀತ್ಯಾಸ್ಪದನಾದ ನಂದಿಯೇ, ನಿನಗೆ ಮರಣಭೀತಿ ಸರ್ವಥಾ ಇಲ್ಲ. ಆ ಮಿತ್ರಾವರುಣನೆಂಬ ಬ್ರಾಹ್ಮಣನನ್ನು ನಾನೇ ನಿನ್ನ ಬಳಿಗೆ ಕಳುಹಿಸಿದ್ದೆ. ನೀನು ನನಗೆ ಸಮಾನನೇ ಆಗಿರುವೆ. ನಿನ್ನ ಈ ಶರೀರವು ಈ ಮನುಷ್ಯ ಲೋಕಕ್ಕೆ ಸಂಬಂಧಪಟ್ಟದ್ದು. ಮಾನವರಿಗೆ ಸ್ತ್ರೀಸಂಗಪರಿತ್ಯಾಗವು ಸರ್ವಥಾ ಶ್ರೇಷ್ಠವಾದದ್ದು.'' ಎಂದು ಹೇಳಿ ರುದ್ರಾವತಾರ ಮಾಡಿದ ಮಹಾದೇವನು ತನ್ನ ಎರಡು ಕೈಗಳಿಂದ ನನ್ನನ್ನು ಮುಟ್ಟಿದನು. ಹಾಗೂ ಪಾರ್ವತಿದೇವಿಯನ್ನೂ ಗಣಾಧಿಪತಿಗಳನ್ನೂ ದಯಾಪೂರ್ಣ ದೃಷ್ಟಿಯಿಂದ ನೋಡಿ ಹೇಳಿದನು.

**ಮಹಾದೇವ** :- ''ಈ ಬಾಲಕನು ನನಗೆ ಅತ್ಯಂತ ಇಷ್ಟನಾದವನು. ನನ್ನಷ್ಟೇ ತೇಜಸ್ಸು ಹಾಗೂ ಪರಾಕ್ರಮ ಉಳ್ಳವನು. ಗಣಾಧಿಪತಿಯಾಗಿ ಇವನು ಯಾವಾಗಲೂ ನನ್ನ ಪಾರ್ಶ್ವದಲ್ಲಿಯೇ ಇರುವನು. ಇವನಿಗೆ ಮುಪ್ಪು ಇಲ್ಲ. ಮರಣ ಇಲ್ಲ. ದುಃಖವಿಲ್ಲ, ನಾಶವಿಲ್ಲ. ಮಹಾಯೋಗಶಕ್ತಿಯಿಂದ ಕೂಡಿದ ಇವನು ನನ್ನಷ್ಟೇ ಶಕ್ತಿಯುಳ್ಳವನಾಗಿದ್ದಾನೆ.'' ಹೀಗೆ ಹೇಳಿ ಮಹಾತ್ಮನಾದ ಪರಮೇಶ್ವರನು ತನ್ನ ಕುತ್ತಿಗೆಯಲ್ಲಿದ್ದ ಬಿಳಿಕಮಲದ ಮಾಲೆಯನ್ನು ತೆಗೆದು ನನ್ನ ಕೊರಳಿಗೆ ಹಾಕಿದನು. ಶುಭಕರವಾದ ಕಮಲಮಾಲೆಯ ಪ್ರಭಾವದಿಂದ ನನಗೆ ಆ ಕ್ಷಣದಲ್ಲಿಯೇ ಮೂರು ಕಣ್ಣುಗಳು ಮೂಡಿದವು. ಹತ್ತುತೋಳುಗಳು ಚಿಗಿತು ನಿಂತವು. ನಾನು ಎರಡನೆಯ ಶಿವನಂತೆಯೇ ಆದೆನು. ಆಗ ಶಂಕರನು ತನ್ನ ಜಡೆಯಲ್ಲಿರುವ ನೀರನ್ನು ತೆಗೆದುಕೊಂಡು 'ನದಿಯಾಗು' ಎಂದು ಹೇಳಿ ಮೇಲೆ ಎರಚಿದನು. ಧೂರ್ಜಡೆಯ ಜಟಾಜೂಟದಲ್ಲಿರುವ ಜಲವು ಕಮಲ ಪುಷ್ಪ ಹಾಗೂ ಕನ್ನೈದಿಲೆಯ ಹೂಗಳಿಂದ ಕೂಡಿ ಮಹಾನದಿಯಾಗಿ ಹರಿಯಿತು. ತನ್ನ ಜಡೆಯಿಂದ ಹುಟ್ಟಿದುದರಿಂದ ಮಹಾದೇವನು ಅದಕ್ಕೆ ಜಟೋದಕ ಎಂದು ಹೆಸರಿಟ್ಟನು. ಜಟೋದಕ ಎಂಬ ''ಈ ಪುಣ್ಯನದಿಯಲ್ಲಿ ಸ್ನಾನ ಮಾಡಿದವರ ಸರ್ವ ಪಾಪಗಳು ಪರಿಹಾರವಾಗಲಿ'' ಎಂದು ಪರಮೇಶ್ವರನು ವರವನ್ನು ಕೊಟ್ಟನು. ಮತ್ತು

'ಇವನು ನಿನ್ನ ಮಗನು' ಎಂದು ಮಹಾದೇವಿಗೆ ಹೇಳಿ ಆ ನಂದೀಶ್ವರನನ್ನು ಪಾರ್ವತಿದೇವಿಯ ಪಾದದ ಮೇಲೆ ಬೀಳಿಸಿದನು.

ಆಗ ಆ ಮಹಾದೇವಿಯು ನನ್ನ ತಲೆಯನ್ನು ಮೂಸಿನೋಡಿ ತನ್ನ ಪುತ್ರ ಎಂಬ ಪ್ರೇಮದಿಂದ ನನ್ನ ಮೈಯ್ಯನ್ನು ಸವರಿದಳು. ಆಗ ನನ್ನ ಮೇಲಿನ ಪುತ್ರ ಪ್ರೇಮೋದ್ರಕದಿಂದ ಆ ತಾಯಿಯ ಮೊಲೆಗಳಲ್ಲಿ ಹಾಲು ಪುಟಿದು ಮೂರು ಪಯಃ ಪ್ರವಾಹಗಳು ಉಂಟಾದವು. ದೇವಿಯ ಹಾಲಿನ ಆ ಮೂರು ನದೀ ಪ್ರವಾಹಗಳಿಗೆ ಶಿವನು **'ತ್ರಿಸ್ರೋತಾನದಿ'** ಎಂದು ಹೆಸರಿಟ್ಟನು. ಆ ನದಿಯನ್ನು ನೋಡಿ ನಂದೀಶ್ವರನಿಗೆ ಮಹದಾನಂದವಾಗಿ ಗಟ್ಟಿಯಾಗಿ ಧ್ವನಿಮಾಡಿ ಆನಂದೋದ್ಗಾರವನ್ನು ತೆಗೆದನು. ಆ ಧ್ವನಿಯಿಂದಲೂ ಒಂದು ನದಿ ಉಂಟಾಯಿತು. ಅದಕ್ಕೆ **'ವೃಷಧ್ವನಿ'** ಎಂದು ಹರನು ಹೆಸರಿಟ್ಟನು. ಅನಂತರ ಆ ದೇವದೇವೋತ್ತಮನು ವಿಶ್ವಕರ್ಮನಿಂದ ಮಾಡಿಸಿದ ಸುವರ್ಣ ಖಚಿತವಾದ ರತ್ನದ ಕಿರೀಟವನ್ನು ನನ್ನ ತಲೆಯ ಮೇಲೆ ಇಟ್ಟನು. ವಜ್ರ, ವೈಡೂರ್ಯ, ರತ್ನಗಳನ್ನು ಕೆತ್ತಿದ ಕರ್ಣಾಭರಣಗಳನ್ನು ತಾನೇ ನನ್ನ ಕಿವಿಗಳಿಗಿಟ್ಟು ಅಲಂಕರಿಸಿದನು. ಆಗ ಸೂರ್ಯನು ಮೇಘೋದಕದಿಂದ ನನಗೆ ಅಭಿಷೇಕಮಾಡಿದನು. ಆ ಅಭಿಷೇಕಮಾಡಿದ ನೀರು ನನ್ನ ರನ್ನ ಚಿನ್ನದ ಕಿರೀಟದ ಸಂಬಂಧದಿಂದ ಒಂದು ನದಿಯಾಗಿ ಹರಿಯಿತು. ಅದಕ್ಕೆ 'ಸ್ವರ್ಣೋದಕ' ಎಂದು ಮಹಾದೇವನೇ ಹೆಸರಿಟ್ಟನು. ಜಾಂಬೂನದಮಯವಾದ ನನ್ನ ಮತ್ತೊಂದು ಕಿರೀಟದಿಂದ ಇನ್ನೊಂದು ನದಿ ಹರಿಯಿತು. ಅದಕ್ಕೆ **'ಜಾಂಬೂನದಿ'** ಎಂದು ಹೆಸರಾಯಿತು. ಹೀಗೆ ಜಟೋದಕಾ, ತ್ರಿಸ್ರೋತಾ, ವೃಷಧ್ವನಿ, ಸ್ವರ್ಣೋದಕಾ, ಜಂಬೂನದಿ ಈ ಐದೂ ನದಿಗಳು 'ಜಪೇಶ್ವರ' ಕ್ಷೇತ್ರದ ಸಮೀಪದಲ್ಲಿರುವವು. ಈ ಪಂಚನದಿ ಕ್ಷೇತ್ರಕ್ಕೆ ಹೋಗಿ ಆ ನದಿಗಳಲ್ಲಿ ಸ್ನಾನಮಾಡಿ ಜಪೇಶ್ವರ ಎಂಬ ಶಿವಲಿಂಗವನ್ನು ಪೂಜಿಸಿದರೆ ಶಿವಸಾಯುಜ್ಯವನ್ನು ಪೂಜಕನು ಹೊಂದುವನು. ಮತ್ತು ಮಹಾದೇವನು ಉಮಾದೇವಿಯನ್ನು ಕುರಿತು ನುಡಿದನು.

**ಮಹಾದೇವ :-** ದೇವಿ, ಈ ನಂದೀಶ್ವರನನ್ನು ಭೂತಗಣಗಳಿಗೆ ಅಧಿಪತಿಯನ್ನಾಗಿಸಿ ಪಟ್ಟಾಭಿಷೇಕವನ್ನು ಮಾಡುವೆನು. ಗಣೇಂದ್ರನೆಂದು ಕರೆಯುವೆನು. ನಿನ್ನ ಅಭಿಪ್ರಾಯವೇನು ? ಎಂದು ಕೇಳಿದನು.

**ಪಾರ್ವತಿ :-** ''ಪ್ರಭು, ಶಿಲಾದ ಪುತ್ರನಾದ ನಂದಿಯು ನನ್ನ ಪುತ್ರನೇ ಆಗಿರುವನು. ಅವನಿಗೆ ಸರ್ವಲೋಕಾಧಿಪತ್ಯವನ್ನೂ, ಗಣಾಧೀಶತ್ವವನ್ನೂ ಅವಶ್ಯವಾಗಿ ಕೊಡಿರಿ.'' ಆಗ ಮಹಾದೇವನು ಗಣದೇವತೆಗಳನ್ನು ಸ್ಮರಿಸಿದನು.

*ಲಿಂಗಮಹಾಪುರಾಣ ಪೂರ್ವಾರ್ಧ ನಂದಿಕೇಶ್ವರನ ಪ್ರಾದುರ್ಭಾವ ಅಭಿಷೇಕದ ಸಮಾಲೋಚನೆ ಎಂಬ ನಲವತ್ತೂರನೆಯ ಅಧ್ಯಾಯ ಮುಗಿದುದು*

—o—

**ನಂದೀಶ್ವರ :-** ಶಂಕರನು ಸ್ಮರಣೆ ಮಾಡಿದ ಕೂಡಲೇ ಎಲ್ಲ ಗಣೇಶ್ವರರು ಅಲ್ಲಿಗೆ ಬಂದರು. ಆ ಗಣಾಧೀಶರ ಗಣಗಳಲ್ಲಿ ಇದ್ದವರೆಲ್ಲರೂ ಸಹಸ್ರಾಕ್ಷರು. ಅವರಿಗೆ ಕಣ್ಣು ಸಾವಿರ. ಕೈಗಳೂ ಸಾವಿರ. ಎಲ್ಲ ಕೈಗಳಲ್ಲಿಯೂ ಸಾವಿರ ಆಯುಧಗಳನ್ನು ಹಿಡಿದಿದ್ದರು. ಮುಕ್ಕಣನ ಪ್ರತಿರೂಪದಂತಿರುವ ಅವರೆಲ್ಲರೂ ಪ್ರಳಯಾಗ್ನಿಯ ಕೋಟಿ ಪಾಲು ಹೆಚ್ಚು ಪ್ರಕಾಶ ಉಳ್ಳವರು. ಬಾಯಿಂದಲೇ ಅನೇಕ ವಾದ್ಯಗಳನ್ನು ಬಾರಿಸುತ್ತ, ಗಾನಮಾಡುತ್ತ, ಕುಣಿಯುತ್ತ ಬರುತ್ತಿರುವ ಅವರಲ್ಲಿ ಕೆಲವರು ರಥ, ಕುದುರೆ, ಆನೆಗಳ ಮೇಲೆಯೂ, ಸಿಂಹ, ಕಪಿ, ವಿಮಾನಗಳ ಮೇಲೆಯೂ ಕುಳಿತಿದ್ದರು. ನಗಾರಿ, ಮೃದಂಗ, ಪಣವ ಎಂಬ ತಮಟೆ, ಆನಕ, ಗೋಮುಖ ಮುಂತಾದ ಬಗೆ ಬಗೆಯ ವಾದ್ಯಗಳನ್ನು ಅವರು ಬಾರಿಸುತ್ತಿದ್ದರು. ಕೊಂಬು, ಕಹಳೆ, ಕೊಳಲು, ವೀಣೆ ಮುಂತಾದ ವಾದ್ಯಗಳನ್ನು ನುಡಿಸುತ್ತಿದ್ದರು. ಅವರೆಲ್ಲರೂ ಅತ್ಯಂತ ಉತ್ಸಾಹ ಸಂಭ್ರಮದಿಂದ ಬಂದು ಮಹಾದೇವನಿಗೂ ಮಹಾದೇವಿಗೂ ನಮಸ್ಕಾರ ಮಾಡಿ, ''ದೇವ ದೇವನೆ, ನೀನು ನಮ್ಮನ್ನು ಏಕೆ ಸ್ಮರಿಸಿದೆ? ನಾವು ಏನು ಮಾಡಬೇಕು? ಅಪ್ಪಣೆ ಕೊಡು. ನೀನು ಆಜ್ಞೆ ಮಾಡಿದರೆ ಸಪ್ತಸಾಗರಗಳನ್ನು ನಾವು ಒಣಗಿಸಬಲ್ಲೆವು. ಯಮನನ್ನು ಕೂಡ ಅವನ ದೂತರೊಡನೆ ಸಂಹರಿಸಬಲ್ಲೆವು. ಹೇಳು ನಾವು ಏನು ಮಾಡಬೇಕು? ಮೃತ್ಯುದೇವತೆಯ ಮಗಳಾದ ಜರೆಂಗುನ್ನು ಸಾಯಿಸಬೇಕೆ? ವಿಧಿಯನ್ನು ವಧಿಸಬೇಕೆ? ದೇವೇಂದ್ರನನ್ನು ದೇವತೆಗಳನ್ನು ಬಂಧಿಗಳನ್ನಾಗಿ ಹಿಡಿದು ತರಬೇಕೆ? ವಾಯು ವಿಷ್ಣು ಮೊದಲಾದ ದೇವತೆಗಳನ್ನು ಬಂಧನದಿಂದ ಕಟ್ಟಿ ಬಿಗಿದು ತರೋಣವೆ? ಏನು ಮಾಡೋಣ ! ಹೇಳು.

**ಮಹಾದೇವ :-** ಈ ನಂದೀಶ್ವರನು ನಮ್ಮ ಪುತ್ರನು. ಬ್ರಾಹ್ಮಣನು. ಸಮಸ್ತ ಪ್ರಪಂಚಕ್ಕೆ ಸ್ವಾಮಿಯು. ನಿಮ್ಮೆಲ್ಲರಿಗೂ ಸೇನಾನಾಯಕನು. ಮಹಾಯೋಗಿಯಾದ ಇವನನ್ನು ನೀವೆಲ್ಲರೂ ಕೂಡಿ ಸೇನಾಪತಿಪಟ್ಟದಲ್ಲಿ ಅಭಿಷೇಕಮಾಡಿರಿ.'' ಮಹಾದೇವನ ಅಪ್ಪಣೆಯ ಪ್ರಕಾರ ಗಣಾಧೀಶರು ಉನ್ನತವಾದ ಸುಂದರ ಸುವರ್ಣ ಪೀಠವನ್ನು ತಂದರು. ಚಿನ್ನದ ಕಂಬಗಳುಳ್ಳ ಒಂದು ಮಂಟಪವನ್ನು ಮಾಡಿ ನಡುನಡುವೆ ಮುತ್ತಿನ ಸರಗಳನ್ನು ತೂಗುಬಿಟ್ಟು ರತ್ನಾಲಂಕಾರಗಳನ್ನು ಮಾಡಿದರು. ರತ್ನದ ಭಿತ್ತಿ, ವೈಡೂರ್ಯದ ವೇದಿಕೆ ಸುವರ್ಣದ ಗಂಟೆಗಳಿಂದ ನಾಲ್ಕುಕಡೆಗಳಲ್ಲಿಯೂ ಆ ಮಂಟಪವನ್ನು ಅಲಂಕರಿಸಿ ಅದರ ನಟ್ಟ ನಡುವೆ ಆ ಸುವರ್ಣ ಪೀಠವನ್ನು ಇರಿಸಿದರು. ಆ ಪೀಠದ ಮುಂಭಾಗದಲ್ಲಿ ಪಾದಗಳನ್ನು ಇರಿಸಲು ನೀಲ ಮತ್ತು ವಜ್ರಗಳಿಂದ ನಿರ್ಮಿಸಿದ ಪಾದಪೀಠಗಳನ್ನಿಟ್ಟು ಅದರ ಎರಡು ಕಡೆಗಳಲ್ಲಿ ಎರಡು ಕಲಶಗಳನ್ನಿಟ್ಟರು. ಇದಲ್ಲದೇ ಬೆಳ್ಳಿ ಬಂಗಾರ ತಾಮ್ರಗಳಿಂದ ಮಾಡಿದ ಅನೇಕ ಸಾವಿರ ಕಲಶಗಳಲ್ಲಿ ಸಕಲ ಪುಣ್ಯ ತೀರ್ಥಗಳ ನೀರನ್ನು ತುಂಬಿಟ್ಟರು.

ನಂದೀಶ್ವರನ ಈ ಪಟ್ಟಾಭಿಷೇಕಕ್ಕೆ ದಿವ್ಯವಾದ ಎರಡು ವಸ್ತ್ರಗಳು, ಗಂಧ, ತೋಳ ಬಂಧಿ, ಕರ್ಣಕುಂಡಲ, ಶಿರಃಕಿರೀಟ, ಕೊರಳಹಾರ, ಛತ್ರ, ಚಾಮರಗಳನ್ನು ಬ್ರಹ್ಮನು ನೀಡಿದನು. ಅನಂತರ ಎಲ್ಲ ದೇವತೆಗಳೊಡನೆ ದೇವೇಂದ್ರನೂ, ಶ್ರೀಹರಿಯೂ,

ಮುನಿಗಳೂ, ಬ್ರಹ್ಮದೇವನೂ, ಒಂಬತ್ತು ಜನ ಬ್ರಹ್ಮಮಾನಸಪುತ್ರರೂ ಸಂತೋಷದಿಂದ ಅಲ್ಲಿಗೆ ಬಂದರು. ಆಗ ಬ್ರಹ್ಮದೇವನು ಮಹಾದೇವನ ಅಪ್ಪಣೆಯಿಂದ ಸಮಸ್ತಕಾರ್ಯಗಳನ್ನು ಮಾಡಿ ತಾನೇ ನಂದಿಯನ್ನು ಪೂಜಿಸಿ ಪಟ್ಟಾಭಿಷೇಕವನ್ನು ಮಾಡಿದನು. ಅನಂತರ ಮಹಾವಿಷ್ಣುವೂ, ದೇವೇಂದ್ರನೂ, ಅಷ್ಟದಿಕ್ಪಾಲಕರೂ, ಶಾಸ್ತ್ರವಿಧಿಗನು ಸಾರವಾಗಿ ನನ್ನನ್ನು ಗಣಾಧೀಶನನ್ನಾಗಿ ಪಟ್ಟಾಭಿಷೇಕಮಾಡಿದರು. ಬ್ರಹ್ಮನೇ ಮೊದಲಾದ ಸಮಸ್ತ ದೇವತೆಗಳು, ಸಮಸ್ತ ಋಷಿಗಳು ಸ್ತೋತ್ರ ಮಾಡಿದರು. ಆಗ ವಿಷ್ಣುವೂ ಕೂಡ ತಲೆಯ ಮೇಲೆ ಕೈ ಮುಗಿದು ಏಕಾಗ್ರತೆಯಿಂದ ಸ್ತೋತ್ರವನ್ನೂ ನಮಸ್ಕಾರವನ್ನೂ ಮಾಡಿ ಜಯ ಶಬ್ದವನ್ನು ಉಚ್ಚರಿಸಿ ಅವನ ಪರಾಕುಗಳನ್ನು ಹೇಳಿದನು.

ಹೀಗೆ ಸ್ತೋತ್ರ ವೇದ ಮಂತ್ರಗಳಿಂದ ನನಗೆ ಪಟ್ಟಾಭಿಷೇಕವು ಆದ ಬಳಿಕ ಆ ಅಭಿಷೇಕಮಂಟಪದಲ್ಲಿಯೇ ಇರುವ ಮರುದ್ರಗಳ ಮಗಳಾದ ಶ್ವೈಶಾ ಎಂಬವಳನ್ನು ಬ್ರಹ್ಮನ ಅಪ್ಪಣೆಯಂತೆ ತಂದು ನನಗೆ ವಿವಾಹಮಾಡಿದರು. ಚಂದ್ರನಂತೆ ಕಾಂತಿ ಯುಕ್ತವಾದ ಶ್ವೇತಛತ್ರವನ್ನು ನವ ವಿವಾಹಿತರಾದ ನಮ್ಮ ಮೇಲೆ ಹಿಡಿದರು. ದೇವತಾ ಸ್ತ್ರೀಯರು ಚಾಮರಗಳನ್ನು ಬೀಸಿದರು. ಶ್ರೇಷ್ಠವಾದ ಸಿಂಹಾಸನದಲ್ಲಿ ನಾವಿಬ್ಬರೂ ನವದಂಪತಿಗಳು ಕುಳಿತುಕೊಂಡೆವು. ಮಹಾಲಕ್ಷ್ಮೀ ದೇವಿಯು ನನ್ನ ಮಡದಿಗೆ ಮಣಿಮಯ ಕಿರೀಟ, ರತ್ನದ ಆಭರಣ ಮೊದಲಾದ ಅಲಂಕಾರಗಳನ್ನು ನೀಡಿದಳು. ಪಾರ್ವತೀ ದೇವಿಯು ತನ್ನ ಕೊರಳಲ್ಲಿ ಇದ್ದ ರತ್ನಹಾರವನ್ನು ನನ್ನ ಹೆಂಡತಿಯ ಕೊರಳಿಗೆ ಹಾಕಿದಳು. ಇವಲ್ಲದೇ ಆ ಮಹಾದೇವಿಯು ನಮಗೆ ಒಂದು ಶ್ರೇಷ್ಠವಾದ ಶುಭ್ರ ಎತ್ತು, ಬೆಳ್ಳಗಿನ ಆನೆ, ಸಿಂಹ ಸಿಂಹಧ್ವಜ, ರಥ, ಚಿನ್ನದ ಹಿಡಿಯ ಬಿಳಿಯ ಛತ್ರ ಇವೆಲ್ಲವುಗಳನ್ನು ಕೊಟ್ಟರು.

ಅನಂತರ ಮಹಾದೇವನು ನನ್ನ ವಂಶದವರನ್ನೂ, ಅಪ್ತೇಷ್ಟರನ್ನೂ ಕರೆದುಕೊಂಡು 'ವೃಷಭ' ಎಂಬ ಎತ್ತನ್ನು ಏರಿ ನನ್ನೊಡನೆ ಪ್ರಯಾಣಮಾಡಿದನು. ಬಳಿಕ ಶಿವಸತಿ ದಂಪತಿಗಳಿಗೂ, ಅವನ ಗಣಗಳಿಗೂ ನಾನು ಶುಭಕರವಾದ ಪಾಶುಪತವ್ರತವನ್ನು ಶಿವನ ಅಪ್ಪಣೆಯಂತೆ ನೀಡಿದೆನು. ನನ್ನ ಶಿವಪೂಜಾ ಮಹಿಮೆಯನ್ನು ನೋಡಿ ಎಲ್ಲ ಮುನಿಗಳು ಶಿವನಲ್ಲಿ ಅಂದಿನಿಂದ ವಿಶೇಷ ಭಕ್ತಿಯುಳ್ಳವರಾದರು. ಆದುದರಿಂದ ಈ ರೀತಿಯಲ್ಲಿ ಭಕ್ತರ ವಿಶ್ವಾಸವನ್ನು ಅಭಿವೃದ್ಧಿ ಪಡಿಸುವದರಿಂದ ಆ ದೇವದೇವೋತ್ತಮನಾದ ಶಿವನನ್ನು ಚೆನ್ನಾಗಿ ಪೂಜಿಸಬೇಕು. ಶಿವನಿಗೆ ನಮಸ್ಕಾರವನ್ನು ಮಾಡದೇ, ಕೇವಲ ಶಿವನಾಮೋಚ್ಚಾರಣೆಯನ್ನು ಮಾಡಿದರೆ ಆ ಮನುಷ್ಯನಿಗೆ ಹತ್ತು ಬ್ರಹ್ಮ ಹತ್ಯೆಗಳನ್ನು ಮಾಡಿದ ಪಾಪವು ಬರುತ್ತದೆ. ಆದುದರಿಂದ ಸರ್ವಪ್ರಯತ್ನದಿಂದಲೂ ತ್ರಿಕರಣ ಶುದ್ಧಿಪೂರ್ವಕವಾಗಿ ನಮಸ್ಕಾರವನ್ನುಮಾಡಿ, ನಮಸ್ಕಾರದ ಶಬ್ದಗಳನ್ನು ಉಚ್ಚರಿಸಿ, ವಾಚಾವಂದನವನ್ನು ಮಾಡಿ, ಹಣೆಮಣಿದು, ದೇಹದಿಂದಲೂ, ಭಗವಂತನಿಗೆ ನಮಸ್ಕಾರ ಶಬ್ದೋಚ್ಚಾರಣೆಯನ್ನು ಮಾಡಬೇಕು. ಅದರಿಂದ ಕೊನೆಯಲ್ಲಿ ಮಾನವನಿಗೆ ಮಂಗಳ ಸ್ವರೂಪವು ತಾನಾಗಿಯೇ ಪ್ರಾಪ್ತವಾಗುವದು.

*ಲಿಂಗಮಹಾಪುರಾಣ ಪೂರ್ವಾರ್ಧದ ನಂದಿಕೇಶ್ವರನ ಪಟ್ಟಾಭಿಷೇಕ ವರ್ಣನೆ ಎಂಬ ನಲವತ್ತನಾಲ್ಕನೆಯ ಅಧ್ಯಾಯ ಮುಗಿದುದು.*

—o—

ಪಾತಾಳಾದಿ ವರ್ಣನೆ

ಅಧ್ಯಾಯ - ೪೫

**ಋಷಿಗಳು** :- ಶಂಕರನ ದಿವ್ಯ ಸ್ವರೂಪವನ್ನು ನೀನು ನಮಗೆ ಚೆನ್ನಾಗಿ ನಿರೂಪಿಸಿದೆ. ಆದರೆ ಆ ಮಹಾದೇವನಿಗೆ ಸರ್ವಾತ್ಮ ಸ್ವರೂಪವು ಹೇಗೆ ಪ್ರಾಪ್ತವಾಯಿತು? ಎಂಬುದನ್ನು ನಮಗೆ ಹೇಳು.

**ಸೂತ** :- ಮುನಿಗಳೆ, ಭೂಲೋಕ, ಭೂಲೋಕದ ಮೇಲಿರುವ ಭುವರ್ಲೋಕ, ಸ್ವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಮೊದಲಾದ ಮೇಲಿನ ಏಳು ಲೋಕಗಳೂ, ಪಾತಾಳವೇ ಮೊದಲಾದ ಕೆಳಗಿನ ಏಳು ಲೋಕಗಳೂ, ಅಸಂಖ್ಯ ನರಕಗಳೂ, ನಕ್ಷತ್ರಗಳೂ, ಗ್ರಹಗಳೂ, ಸೂರ್ಯ ಚಂದ್ರರೂ, ಧ್ರುವಮಂಡಲ ಸಪ್ತರ್ಷಿಮಂಡಲಗಳೂ, ವೈಮಾನಿಕರಾದ ದೇವಾಧಿದೇವತೆಗಳೂ, ಮಹಾಶಿವನ ಪರಮಾನುಗ್ರಹದಿಂದಲೇ ಸ್ವಸ್ವಸ್ಥಾನಗಳಲ್ಲಿ ಸುಸ್ಥಿರರಾಗಿ ಸುರಕ್ಷಿತರಾಗಿರುವರು. ಆ ಶಿವನಿಂದಲೇ ಈ ಸಮಸ್ತ ಪ್ರಪಂಚವೆಲ್ಲವೂ ನಿರ್ಮಿತವಾಗಿ ಅವನ ಸ್ವರೂಪಭೂತವಾಗಿಯೇ ಇರುತ್ತದೆ. ಎಲ್ಲ ಪದಾರ್ಥಗಳಲ್ಲಿಯೂ ಆ ಶಿವನೇ ಅಂತರ್ಯಾಮಿಯಾಗಿ ನಿಂತುಕೊಂಡಿದ್ದಾನೆ. ಈ ತ್ರಿಲೋಕ, ಸಪ್ತಲೋಕ, ಚತುರ್ದಶ ಲೋಕಗಳಿಂದ ಕೂಡಿದ ಇಡೀ ಬ್ರಹ್ಮಾಂಡವೆಲ್ಲವೂ ಶಿವನ ಶರೀರವೇ ಆಗಿದೆ. ಆ ಶಿವನಿಗೆ ನಮಸ್ಕಾರಮಾಡಿ ಶುಭಕರವಾದ ಈ ಜಗತ್ತಿನ ವಿಭಾಗ ಸ್ವರೂಪವನ್ನು ಹೇಳುತ್ತೇನೆ ಕೇಳಿರಿ. ಹಿಂದೆ ನಾನು ನಿಮಗೆ ಈ ಬ್ರಹ್ಮಾಂಡವನ್ನು ಭೂಮಿ ಅಂತರಿಕ್ಷ, ಸ್ವರ್ಗ, ಮಹ, ಜನ, ತಪ, ಸತ್ಯ ಎಂಬ ಏಳು ಲೋಕಗಳು ಒಂದಕ್ಕಿಂತ ಮತ್ತೊಂದು ಉತ್ತಮವಾಗಿರುತ್ತವೆ. ಈ ಲೋಕಗಳ ಕೆಳಭಾಗದಲ್ಲಿ ತಲ, ಮಹಾತಲ, ವಿತಲ, ಸುತಲ, ತಲಾತಲ, ರಸಾತಲ, ಪಾತಾಲಗಳೆಂಬ ಏಳು ಲೋಕಗಳು ಇರುವವು. ಅವುಗಳ ಕೆಳಗೆ ಅನೇಕಾನೇಕ ನರಕ ಲೋಕಗಳು. ಕೆಳಗಿನ ಮಹಾತಲ ಎಂಬ ಲೋಕವು ಸುವರ್ಣಮಯವಾಗಿ ಬಗೆ ಬಗೆಯ ರತ್ನಗಳಿಂದ ಅಲಂಕೃತವಾಗಿದೆ. ಅಲ್ಲಿ ಅಸಂಖ್ಯ ಶಿವಮಂದಿರಗಳಿರುತ್ತವೆ. ಅಲ್ಲಿ ಆದಿಶೇಷನೂ, ಮುಚಕುಂದನೆಂಬ ಮಹಾರಾಜನೂ, ಬಲಿಚಕ್ರವರ್ತಿಯೂ ಅಲ್ಲಿ ವಾಸಮಾಡಿದ್ದಾರೆ. ರಸಾತಲವು ಶಿಲಾಮಯ. ತಲಾತಲವು ಉಸುಕುಕಲ್ಲುಗಳಿಂದ ಕೂಡಿದ್ದು ಎಲ್ಲವೂ ಪೀತವರ್ಣದ್ದಾಗಿರುವದು. ವಿತಲವು ವಿದ್ರುಮದ ಕಾಂತಿಯಿಂದ ಕಂಗೊಳಿಸುತ್ತದೆ. ಅತಲವು ಶುಭ್ರ ಬಿಳಿಬಣ್ಣದ್ದು. ತಲಾತಲವು ಕೃಷ್ಣವರ್ಣ ಉಳ್ಳದ್ದು.

ಕೆಳಗಿನ ಈ ಎಲ್ಲ ತಲಲೋಕಗಳು ಒಂದು ಸಾವಿರ ಯೋಜನ ವಿಸ್ತಾರಗಳುಳ್ಳವುಗಳು. ಅಲ್ಲಿಯ ಆಕಾಶಗಳು ಹತ್ತು ಸಾವಿರ ಯೋಜನ ಅಗಲವಾಗಿವೆ. ಮಹಾತಲವೇ ಮೊದಲಾದ ನಾಲ್ಕು ಲೋಕಗಳು ಮೇಘ ಮಂಡಲಗಳಿಂದ ಕೂಡಿದ ಆಕಾಶ ಪ್ರದೇಶಗಳಿಂದ ಸಾವಿರ ಯೋಜನದಿಂದ ಏಳುಸಾವಿರ ಯೋಜನ ವಿಸ್ತಾರವಾಗಿದೆ. ಮೂಲ ಭೂತವಾದ ತಲಾದಿ ಮೂರು ಲೋಕಗಳ ಆಕಾಶಗಳು ಮುವ್ವತ್ತು ಸಾವಿರ ಯೋಜನ ಪ್ರಮಾಣ ಉಳ್ಳವುಗಳು.

ರಸಾತಲದಲ್ಲಿ ಸುವರ್ಣನೆಂಬ ವಾಸುಕಿಯು ಸಪರಿವಾರವಾಗಿ ವಾಸಮಾಡಿದ್ದಾನೆ. ಸಮಸ್ತ ಅಲಂಕಾರಗಳಿಂದ ಕೂಡಿದ ತಲಾತಲ ಎಂಬ ಲೋಕದಲ್ಲಿ ವಿರೋಚನ, ಹಿರಣ್ಯಾಕ್ಷ, ನರಕ ಮಂತಾದವರು ವಾಸಮಾಡಿದ್ದಾರೆ. ವಿತಲ ಲೋಕದಲ್ಲಿ ಕಾಲನೇಮಿಯೇ ಮುಂತಾದ ವೈನಾಶಕ ಹೆಸರಿನ ದೈತ್ಯರೂ, ಇತರ ಪ್ರಾಣಿಗಳೂ ತುಂಬಿಕೊಂಡಿವೆ. ವಿತಲ ಲೋಕದಲ್ಲಿ ತಾರಕ, ಅಗ್ನಿಮುಖ ಮುಂತಾದ ದೈತ್ಯರೂ, ಮಹಾಂತನೆ ಮುಂತಾದ ನಾಗಗಳೂ, ಪ್ರಲ್ಹಾದನೆಂಬ ಅಸುರರಾಜನೂ ನೆಲೆ ನಿಂತಿದ್ದಾರೆ. ವಿತಲ ಲೋಕವು ಕಂಬಲಾಶ್ವ ಎಂಬ ಸರ್ಪರಾಜನಿಂದಲೂ, ಕುಂಭ ಮಹಾಕುಂಭ ಮೊದಲಾದ ರಾಕ್ಷಸರಿಂದಲೂ, ಹಯಗ್ರೀವಾಸುರರಿಂದಲೂ ಪ್ರಸಿದ್ಧವಾಗಿದೆ. ತಲಲೋಕದಲ್ಲಿ ಶಂಖಕರ್ಣ, ನಮುಚಿ ಮುಂತಾದ ರಾಕ್ಷಸವೀರರು ಶಾಸನವನ್ನು ಮಾಡುತ್ತಿದ್ದಾರೆ. ಈ ಎಲ್ಲ ಲೋಕಗಳಲ್ಲಿಯು ಗೌರೀ ಸಹಿತನಾದ ಮಹಾದೇವನು ಸ್ಕಂದ, ನಂದೀಶ್ವರ ಮೊದಲಾದ ಗಣಾಧಿಪತಿಗಳೊಂದಿಗೆ ವಾಸಮಾಡಿದ್ದಾನೆ. ಈ ಎಲ್ಲ ಸಮಸ್ತ ತಲಗಳಿಗೂ ಮೇಲು ಭಾಗದಲ್ಲಿ ಭೂಮಿಯೂ ಉರ್ಧ್ವ ಲೋಕಗಳೂ ಇರುವವು.

*ಲಿಂಗಮಹಾಪುರಾಣ ಪೂರ್ವಾರ್ಧದ ಪಾತಾಳಾದಿ ವರ್ಣನೆ*
*ಎಂಬ ನಲವತ್ತೈದನೆಯ ಅಧ್ಯಾಯ ಮುಗಿದುದು*



## ಸಪ್ತದ್ವೀಪಗಳ ವರ್ಣನೆ

ಅಧ್ಯಾಯ - ೪೬

**ಸೂತ :-** ಭೂಲೋಕವು ನದಿ ಪರ್ವತಗಳಿಂದ ಕೂಡಿ ಸಪ್ತದ್ವೀಪ ಎನಿಸಿದೆ. ಆ ಏಳು ದ್ವೀಪಗಳ ಸುತ್ತಲೂ ಏಳುಸಮುದ್ರಗಳು ಮೊರೆಯುತ್ತಿದ್ದು ಅವು ಭೂಮಿಗೆ ಅಲಂಕಾರಪ್ರಾಯವಾಗಿರುತ್ತವೆ. ಆ ಏಳು ದ್ವೀಪಗಳಿಗೆ ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರ ಎಂಬ ಏಳು ಹೆಸರುಗಳಿರುತ್ತವೆ. ಈ ಭೂಲೋಕದಲ್ಲಿ ಇರುವ ಜಂಬೂದ್ವೀಪದ ಸುತ್ತಲೂ ಉಪ್ಪು ನೀರಿನ ಕಪ್ಪು ಸಮುದ್ರವು ಘೂರ್ಮಿಸುತ್ತಿದೆ. ಪ್ಲಕ್ಷದ್ವೀಪವನ್ನು ಕಬ್ಬಿನ ರಸದ ಕಡಲು ಸುತ್ತುವರೆದಿದೆ. ಶಾಲ್ಮಲಿದ್ವೀಪವು ಮದ್ಯದ ಮಧ್ಯದಲ್ಲಿಯೇ ಎದ್ದು ನಿಂತಿದೆ. ಕುಶ ದ್ವೀಪವು ತುಪ್ಪದ ಸಾಗರದಲ್ಲೇ ತೇಲಾಡುತ್ತದೆ. ಕೌಂಚದ್ವೀಪದ ಸುತ್ತು ಮುತ್ತು ಮೊಸರಿನ ಮಹಾಸಾಗರವು ಮೊರೆಯುತ್ತಿದೆ. ಶಾಕದ್ವೀಪದ ಎಲ್ಲ ಬದಿಗೂ ಹಾಲ್ಗಡಲು ಉಕ್ಕುತ್ತಲಿದೆ. ಪುಷ್ಕರದ್ವೀಪವು ಶುದ್ಧವಾದ ಸಿಹಿನೀರಿನ ಸಮುದ್ರದಿಂದ ಆವೇಷ್ಟಿತವಾಗಿದೆ. ಆ ಎಲ್ಲ ಏಳುದ್ವೀಪಗಳಲ್ಲಿ ಶಿವನು ದೇವೀ ಸಹಿತನಾಗಿ ಬಗೆಬಗೆಯ ವೇಷ ಭೂಷಣಗಳಿಂದ ಶೋಭಿಸುತ್ತಿದ್ದಾನೆ. ಸಪ್ತಸಮುದ್ರಗಳಲ್ಲಿ ಶಂಕರನು ಸಲಿಲ ರೂಪದಿಂದ ತನ್ನ ಗಣಗಳೊಡನೆ ವಾಸಮಾಡಿ ತರತರದ ತೆರೆಗಳೆಂಬ ತನ್ನ ತೋಳುಗಳಿಂದ ನೀರಾಟವಾಡುತ್ತ ಕಾಂತಿಯುಕ್ತನಾಗಿ ಕಂಗೊಳಿಸುತ್ತಿದ್ದಾನೆ. ಕ್ಷೀರಸಮುದ್ರದಲ್ಲಿ ಶ್ರೀ ಹರಿಯು ಅಹರ್ನಿಶವು ಶಿವನ ಧ್ಯಾನ ರೂಪವಾದ ಯೋಗನಿದ್ರೆಯಿಂದ ಕೂಡಿ ಶಯನಮಾಡಿರುತ್ತಾನೆ. ಹರಿಯು ನಿದ್ರೆಯಿಂದ ಎಚ್ಚೆತ್ತಾಗ ಸಕಲ ಪ್ರಪಂಚವು ಎಚ್ಚರವಾಗಿಯೇ ಇರುವದು. ಅವನು ಮಲಗಿದಾಗ

ಜಗತ್ತೆಲ್ಲವೂ ಮಲಗಿರುವದು. ಆ ಮಹಾವಿಷ್ಣುವೇ ಮಹಾದೇವನ ದಯೆಯಿಂದ ಈ ಸಮಸ್ತ ಪ್ರಪಂಚವನ್ನು ಸೃಷ್ಟಿಸಿದನು. ಅವನೇ ಸರ್ವ ಜಗತ್ತನ್ನು ಪಾಲಿಸಿದನು. ಕೊನೆಗೆಲ್ಲರನ್ನು ಸಂಹಿರಿಸುವವನು ಅವನೇ.

ಶಂಖಚಕ್ರಗದಾಧಾರಿಯಾದ ಪುರುಷಶ್ರೇಷ್ಠನಾದ ಆ ಅನಿರುದ್ಧಮೂರ್ತಿಯನ್ನು ಶುಷೇಣರು ಎಂಬ ಮುನಿಶ್ರೇಷ್ಠರು ಅರ್ಚಿಸುವರು. ಅನಿರುದ್ಧ ರೂಪನಾದ ಈ ಮಹಾವಿಷ್ಣುವನ್ನು ಧ್ಯಾನಮಾಡಿದವರು ಸಕಲ ಸೌಭಾಗ್ಯ ಸಂಪದಗಳನ್ನು ಪಡೆದು ಕೊನೆಗೆ ಆತ್ಮಜ್ಞಾನಿಗಳಾಗಿ ನಾರಾಯಣನ ಸ್ವಾರೂಪ್ಯವನ್ನು ಹೊಂದುವರು. ಮಹಾಜ್ಞಾನಿಗಳಾದ ಸನಕ, ಸನಂದನ, ಸನಾತನ, ಸನತ್ಕುಮಾರ ಎಂಬ ಮಹಾಮಹರ್ಷಿಗಳೂ, ವಾಲಖಿಲ್ಯರೆಂಬ ಮುನಿಗಳೂ, ಸಿದ್ಧರೂ, ಮಿತ್ರಾವರುಣರೆಂಬ ಮುನಿ ಮನೀಷಿಗಳು. ಸಕಲ ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರ ಕಾರಣನಾದ ಆ ಹರಿಯನ್ನು ಆ ಹುಲ್ಲುಗಡಲಿನಲ್ಲಿ ಯಾವಾಗಲೂ ಪೂಜಿಸುತ್ತಿರುವರು. ಭೂಮಂಡಲದ ಮಧ್ಯದಲ್ಲಿರುವ ಈ ಸಪ್ತದ್ವೀಪಗಳಲ್ಲಿಯೂ ನಾನಾ ಬಗೆಯ ಶಿಖರಗಳಿಂದ ಕೂಡಿದ ಪರ್ವತಗಳು. ಅನೇಕ ಗುಹಾಗಹ್ವರಗಳಿಂದ ಕೂಡಿ ಸಮುದ್ರದವರೆಗೂ ಹಬ್ಬಿರುತ್ತವೆ.

ಮೇಲೆ ಹೇಳಿದ ಏಳುದ್ವೀಪ ಖಂಡಗಳಲ್ಲಿ ಶಿವನ ಅನುಗ್ರಹದಿಂದ ಹಿಂದೆ ಆಗಿ ಹೋದ ಮನ್ವಂತರಗಳಲ್ಲಿ ಅನೇಕ ರಾಜರುಗಳು ರಾಜ್ಯ ಶಾಸನ ಮಾಡಿದರು. ಮುಂದಿನ ಮನ್ವಂತರಗಳಲ್ಲಿಯೂ ಅನೇಕ ಶೂರವೀರರಾದ ಮಹಾರಾಜರು ರಾಜ್ಯಭಾರವನ್ನು ಮಾಡುವರು. ಸ್ವಾಯಂಭುವ ಮನ್ವಂತರದಲ್ಲಿ ಮಹಾನುಭಾವನಾದ ಪ್ರಿಯವ್ರತ ಎಂಬ ಹೆಸರಿನ ಮಹಾರಾಜನು ತನ್ನ ಏಳು ಜನ ಮಕ್ಕಳನ್ನು ಸಪ್ತದ್ವೀಪಗಳಿಗೆ ರಾಜರನ್ನಾಗಿ ಮಾಡಿ ಪಟ್ಟಾಭಿಷೇಕಗೈದನು. ಜಂಬೂದ್ವೀಪಕ್ಕೆ ಅಗ್ನಿಧರನನ್ನು, ಪ್ಲಕ್ಷದ್ವೀಪಕ್ಕೆ ಮೇಧಾತಿಥಿಯನ್ನೂ, ಶಾಲ್ಮಲಿದ್ವೀಪಕ್ಕೆ ವಪುಂಷ್ಮನನ್ನೂ, ಕುಶದ್ವೀಪಕ್ಕೆ ಜ್ಯೋತಿಗ್ಮಂತನನ್ನು, ಕ್ರೌಂಚದ್ವೀಪಕ್ಕೆ ದ್ಯುತಿಮಂತನನ್ನೂ, ಶಾಖದ್ವೀಪಕ್ಕೆ ಹವ್ಯನನ್ನೂ, ಪುಷ್ಕರದ್ವೀಪಕ್ಕೆ ಸವನನನ್ನೂ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕವನ್ನು ಮಾಡಿ ಮಹಾರಾಜರನ್ನಾಗಿ ನೇಮಿಸಿದನು. ಪುಷ್ಕರದ್ವೀಪದ ಅಧೀಶ್ವರನಾದ ಸವನ ಮಹಾರಾಜನಿಗೆ ಮಹಾವೀರ, ಧಾತಕಿ ಎಂಬ ಇಬ್ಬರು ಮಕ್ಕಳಿದ್ದುದರಿಂದ ಪುಷ್ಕರ ದ್ವೀಪವು ಮಹಾವೀರವರ್ಷ, ಧಾತಕೀಖಂಡ ಎಂದು ಎರಡು ಭಾಗವಾಯಿತು. ಶಾಕದ್ವೀಪ ಪತಿಯಾದ ಹವ್ಯರಾಜನಿಗೆ ಜಲದ, ಕುಮಾರ, ಸುಕುಮಾರ, ಮಣೀಚರ, ಕುಸುಮೋತ್ತರ, ಮೋದಾಕಿ, ಮಹಾದ್ರುಮ ಎಂಬ ಏಳು ಜನ ಮಕ್ಕಳು ಹುಟ್ಟಿದರು. ಅವರವರ ಭಾಗಕ್ಕೆ ಬಂದ ಆ ದ್ವೀಪದ ಆ ಭಾಗವು ಜಲದವರ್ಷ, ಕೌಮಾರವರ್ಷ, ಸುಕುಮಾರವರ್ಷ, ಮಣೀಚಕವರ್ಷ, ಕುಸುಮೋತ್ತರವರ್ಷ, ಮೋದಕವರ್ಷ, ಮಹಾದ್ರುಮವರ್ಷ ಎಂದು ಆ ಶಾಕ ದ್ವೀಪವು ಏಳು ಭಾಗವಾಯಿತು.

ಕೌಂಚ ದ್ವೀಪಾಧಿಪತಿಯಾದ ದ್ಯುತಿಮಂತನೆಂಬ ರಾಜನಿಗೆ ಕುಶಲ, ಮನೋನುಗ, ಉಷ್ಣ, ಪೀವರ, ಅಂಧಕಾರ, ಮುನಿ, ದುಂದುಭಿ ಎಂದು ಏಳು ಜನ ಮಕ್ಕಳಿದ್ದರು. ದ್ಯುತಿಮಂತರಾಜನ ಸಪ್ತಪುತ್ರರ ಹೆಸರಿನಿಂದಲೇ ಆ ಕ್ರೌಂಚದ್ವೀಪವು ಕುಶಲ ದೇಶ,

ಮನೋನುಗದೇಶ, ಉಷ್ಣದೇಶ, ಪೀವರದೇಶ, ಅಂಧಕಾರದೇಶ, ಮುನಿದೇಶ, ದುಂದುಭಿ ದೇಶ ಎಂದ ಏಳು ಭಾಗವುಳ್ಳದ್ದಾಗಿ ಶೋಭಾಯಮಾನವಾಗಿದೆ.

ಕುಶದ್ವೀಪದ ಪತಿಯಾದ ಜ್ಯೋತಿಷ್ಮಂತನಿಗೆ ಉದ್ಭಿಧ, ವೇಣುಮಂತ, ದ್ವೈರಥ, ಲವಣ, ಧೃತಿ, ಪ್ರಭಾಕರ, ಕಪಿಲ, ಎಂಬ ಏಳು ಜನ ಸತ್ಪುತ್ರರಿದ್ದರು. ಜ್ಯೋತಿಷ್ಮಂತ ಮಹಾರಾಜನು ಆ ಕುಶದ್ವೀಪವನ್ನು ಏಳು ಭಾಗಮಾಡಿ ಏಳುಜನ ಮಕ್ಕಳಿಗೆ ಆಳಲು ಕೊಟ್ಟನು. ಅವರ ಹೆಸರಿನಿಂದಲೇ ಆ ಕುಶದ್ವೀಪದಲ್ಲಿ ಉದ್ಭಿಧವರ್ಷ, ವೇಣು ಮಂಡಲವರ್ಷ, ದ್ವೈರಥವರ್ಷ, ಲವಣವರ್ಷ, ಧೃತಿಮಂತವರ್ಷ, ಪ್ರಭಾಕರವರ್ಷ, ಕಪಿಲವರ್ಷ ಎಂಬ ಏಳು ಕುಶದ್ವೀಪ ವಿಭಾಗಗಳು ಆದವು. ಶಾಲ್ಮಲಿದ್ವೀಪದ ಒಡೆಯನಾದ ವಪುಷ್ಮಂತ ಮಹಾರಾಜನಿಗೆ. ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾನಸ, ಸುಪ್ರಭ ಎಂಬ ಹೆಸರಿನ ಏಳು ಜನ ತನಯರಿದ್ದರು. ಆ ಪುತ್ರರ ಹೆಸರಿನಿಂದಲೇ ಆ ಶಾಲ್ಮಲಿದ್ವೀಪವು ಶ್ವೇತದೇಶ, ಹರಿತದೇಶ, ಜೀಮೂತದೇಶ, ರೋಹಿತದೇಶ, ವೈದ್ಯುಪದೇಶ, ಮಾನಸದೇಶ, ಸುಪ್ರಭದೇಶ ಎಂದು ಏಳು ಭಾಗಗಳಾಗಿ ವಿಭಾಗಿಸಲ್ಪಟ್ಟಿತು. ಪ್ಲಕ್ಷದ್ವೀಪವು ಜಂಬೂದ್ವೀಪದ ಸಮೀಪದಲ್ಲಿಯೇ ಇದ್ದು ಆ ದ್ವೀಪಾಧಿಪತಿಯಾದ ಮೇಧಾತಿಥಿ ರಾಜನಿಗೆ ಏಳು ಜನ ಚಿರಂಜೀವಿಗಳು. ಆ ಮೇಧಾತಿಥಿರಾಜನು ಶಾಂತಭಯ, ಶಿಶಿರ, ಸುಖೋದಯ, ಆನಂದ, ಶಿವ, ಕ್ಷೇಮಕ, ಧ್ರುವ ಎಂಬ ತನ್ನ ಸಪ್ತ ಸತ್ಪುತ್ರರಿಗೆ ಪ್ಲಕ್ಷದ್ವೀಪವನ್ನು ವಿಭಾಗಿಸಿ ಕೊಟ್ಟು ಆ ಪ್ರದೇಶಗಳಿಗೆ ತನ್ನ ಮಕ್ಕಳ ಹೆಸರನ್ನೇ ಇಟ್ಟು ಆ ಏಳು ವರ್ಷಗಳನ್ನೂ ತನ್ನ ಮಕ್ಕಳಿಗೆ ಶಾಸನ ಮಾಡಲು ಒಪ್ಪಿಸಿಕೊಟ್ಟನು.

ಪ್ಲಕ್ಷ, ಶಾಲ್ಮಲಿ, ಕುಶ, ಕೌಂಚ, ಶಾಖ ಈ ಐದು ದ್ವೀಪಗಳಲ್ಲಿ ಸುಖ ಆಯುಷ್ಯ, ಸ್ವರೂಪ, ಬಲ, ಧರ್ಮ ಇವುಗಳು ಎಲ್ಲ ಪ್ರಜರಿಗೂ ಸಾಮಾನ್ಯವಾಗಿರುವವು. ಮಿಕ್ಕ ಪುಷ್ಕರದ್ವೀಪ ಶ್ವೇತದ್ವೀಪಗಳಲ್ಲಿ ಹುಟ್ಟಿದವರು ಅನುದಿನವೂ ಮಹಾದೇವರ ಪೂಜೆಯಲ್ಲಿ ಆಸಕ್ತರಾಗಿರುವರು. ಆ ಮಹೇಶ್ವರನನ್ನೇ ಧ್ಯಾನಮಾಡುತ್ತ ಭಕ್ತಿಯುಕ್ತವಾದ ಅಮೃತರಸಾಸ್ವಾದನೆಯನ್ನು ಆನಂದದಿಂದ ಅನುಭವಿಸುತ್ತ. ಅಜ್ಞಾನದ ಆವರಣವನ್ನು ಕಳಚಿಕೊಂಡು ಪ್ರಜೇಶ್ವರರಾಗಿರುವರು.

*ಲಿಂಗಮಹಾಪುರಾಣ ಪೂರ್ವಾರ್ಧದ ಸಪ್ತದ್ವೀಪಗಳು ಮತ್ತು ಆ ದ್ವೀಪಾಧಿಪತಿಗಳು ನಿರೂಪಣೆ ಎಂಬ ನಲವತ್ತಾರನೆಯ ಅಧ್ಯಾಯ ಮುಗಿದುದು*

—o—

**ಸೂತ** :- ಪ್ರಿಯವ್ರತ ಮಹಾರಾಜನು ಸತ್ಸಂತಾನ ಪ್ರಾಪ್ತಿಗಾಗಿ ಪುತ್ರಕಾಮೇಷ್ಟಿ ಎಂಬ ಯಜ್ಞವನ್ನು ಪ್ರಾರಂಭಿಸಿದನು. ಅವನ ಚೊಚ್ಚಲ ಗಂಡುಮಗನಾದ ಆಗ್ನೀಧ್ರನು ಮಹಾಪರಾಕ್ರಮಶಾಲಿ. ಪ್ರಿಯವ್ರತನು ಅವನನ್ನು ಜಂಬೂದ್ವೀಪಕ್ಕೆ ಅಧಿಪತಿಯನ್ನು ಮಾಡಿ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡಿದನು. ಮಹಾಶಿವಭಕ್ತನಾದ ಅಗ್ನಿಧ್ರ ರಾಜನಿಗೆ ಶಿವಭಕ್ತರಾದ ಒಂಭತ್ತು ಜನ ಸತ್ಪುತ್ರರು ಜನಿಸಿದರು. (೧) ನಾಭಿ (೨) ಕಿಂಪುರುಷ (೩) ಹರಿವರ್ಷ (೪) ಇಲಾವೃತ (೫) ರಮ್ಯ (೬) ಹಿರಣ್ಮಯ (೭) ಕುರು (೮) ಭದ್ರಾಶ್ವ (೯) ಕೇತುಮಾಲ. ಪ್ರಿಯವ್ರತ ಮಹಾರಾಜನ ನವರತ್ನಗಳಂತಿದ್ದ ಈ ಒಂಬತ್ತು ಜನ ರಾಜಕುಮಾರರು ಒಂದೊಂದು ದೇಶಗಳ ಅಧಿರಾಜರಾಗಿ ಧರ್ಮಶಾಸನವನ್ನು ಪ್ರವರ್ತಿಸಿದರು.

ಪ್ರಿಯವ್ರತ ಮಹಾರಾಜನು ತನ್ನ ಜ್ಯೇಷ್ಠ ಕುಮಾರನಾದ ನಾಭಿರಾಜನಿಗೆ ದಕ್ಷಿಣ ದಿಕ್ಕಿನ ಹೇಮವರ್ಷವನ್ನೂ, ಮರುಚಲ ಮಗನಾದ ಕಿಂಪುರುಷನಿಗೆ ಹೇಮಕೂಟ ದೇಶವನ್ನೂ, ಹರಿವರ್ಷ ಎಂಬ ತನ್ನ ಮೂರನೆಯ ಮಗನಿಗೆ ನಿಷಧದೇಶವನ್ನೂ, ಇಲಾವೃತ ಕುಮಾರನಿಗೆ ಮಧ್ಯಮೇರುವರ್ಷವನ್ನೂ, ರಮ್ಯ ಎಂಬ ತನ್ನ ತನಯನಿಗೆ ನೀಲಾಚಲವರ್ಷವನ್ನೂ, ಹಿರಣ್ಯಂತನಿಗೆ ಉತ್ತರ ದಿಕ್ಕಿನ ಶ್ವೇತವರ್ಷವನ್ನೂ, ಕುರು ರಾಜನಿಗೆ ಶೃಂಗವರ್ಷವನ್ನೂ, ಭದ್ರಾಶ್ವ ಎಂಬ ತನ್ನ ಪುತ್ರರಿಗೆ ಮಾಲ್ಯವಂತ ವರ್ಷವನ್ನೂ, ಕೇತುಮಾಲನಿಗೆ ಗಂಧಮಾದನವರ್ಷವನ್ನೂ ಶಾಸನಮಾಡಲಿಕ್ಕೆ ನಿಯೋಜಿಸಿದನು. ಹೀಗೆ ತನ್ನ ನವಪುತ್ರರಿಗೆ ನವರಾಷ್ಟ್ರಗಳನ್ನು ಒಪ್ಪಿಸಿಕೊಟ್ಟು ಪಟ್ಟಾಭಿಷೇಕಮಾಡಿ ರಾಜನು ವೇದಾಧ್ಯಯನ ತತ್ಪರನಾಗಿ ಶಂಕರನ ಧ್ಯಾನೋಪಾಸನೆಯಲ್ಲಿ ಶೇಷಾಯುಷ್ಯವನ್ನು ಸವೆಸಿದನು.

ಕಿಂಪುರುಷ ಮೊದಲಾದ ಎಂಟು ರಾಷ್ಟ್ರಗಳಲ್ಲಿ ಧರ್ಮಾಧರ್ಮಗಳ ಗೊಂದಲವಿಲ್ಲ. ಉತ್ತಮ, ಮಧ್ಯಮ, ಅಧಮ ಎಂದು ಆ ರಾಷ್ಟ್ರದ ಜನರಲ್ಲಿ ತರತಮ ಭಾವವು ಇರುವದಿಲ್ಲ. ಅಲ್ಲಿ ಎಲ್ಲ ಕಡೆಗೂ ಮಹಾರುದ್ರದೇವರು ತಾನು ನಿತ್ಯವು ಸನ್ನಿಹಿತವಾಗಿರುವ ಎಂಟುಕ್ಷೇತ್ರಗಳನ್ನು ನಿರ್ಮಿಸಿದನು. ಅಲ್ಲಿಯ ಜನರು ಮಹಾದೇವನ ದರ್ಶನವನ್ನು ಮಾಡಿಕೊಂಡು ಸುಖಸಮೃದ್ಧಿಯಲ್ಲಿ ಓಲಾಡುವರು.

ಹಿಮಾಲಯ ಪರ್ವತವೇ ಗುರುತಾಗಿವುಳ್ಳ ಈ ಭೂಮಿಯಲ್ಲಿ ನಾಭಿರಾಜನು ರಾಜ್ಯ ಶಾಸನದ ಸೂತ್ರವನ್ನು ವಹಿಸಿ ಧರ್ಮದಿಂದ ಆಡಳಿತವನ್ನು ನಡೆಸಿದನು. ನಾಭಿರಾಜನಿಗೆ ಮೇರುದೇವಿ ಎಂಬ ಪತ್ನಿಯಿಂದ ಋಷಭ ಎಂಬ ಸತ್ಪುತ್ರನು ಜನಿಸಿದನು. ಆ ಋಷಭ ರಾಜನು ಕ್ಷತ್ರಿಯರೆಲ್ಲಗಿರೂ ಪರಮಪೂಜ್ಯನಾಗಿದ್ದನು. ಆ ಋಷಭದೇವನಿಗೆ ನೂರು ಜನ ಗಂಡು ಮಕ್ಕಳು. ಅವರಲ್ಲಿ ಭರತನೇ ಜ್ಯೇಷ್ಠ. ಮತ್ತು ಗುಣಗಳಿಂದ ಸರ್ವಶ್ರೇಷ್ಠ. ಆ ಮಗನ ಮೇಲೆ ವಿಶೇಷ ಪ್ರೇಮವುಳ್ಳ ಋಷಭರಾಜನು ತನ್ನ ಪ್ರಿಯ ಪುತ್ರನಾದ

ಭರತನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಅನಂತರ ತಾನು ಇಂದ್ರಿಯಗಳನ್ನು ನಿಗ್ರಹಿಸಿ ಮನಸ್ಸಿನಲ್ಲಿ ಪರಮಾತ್ಮನನ್ನು ನೆಲೆಗೊಳಿಸಿ ಆಹಾರ ನಿದ್ರಾ ವ್ಯವಹಾರ ಎಲ್ಲವನ್ನು ಬಿಟ್ಟು ಜಟಾಧಾರಿಯಾಗಿ ಮೈ ಮೇಲೆ ಬಟ್ಟೆ ಇಲ್ಲದೇ ದಿಗಂಬರನಾಗಿ ಶಿವೋಪಾಸನೆ ಗೈದು ತನ್ನ ಅಜ್ಞಾನವನ್ನು ಕಳೆದುಕೊಂಡನು. ಋಷಭರಾಜನು ತನ್ನ ಎಲ್ಲ ಆಶಾಪಾಶಗಳನ್ನು ಹರಿದೊಗೆದು ಶಿವಧ್ಯಾನಿರತನಾಗಿ ಪಾಪಗಳನ್ನು ಕಳೆದುಕೊಂಡನು. ಮತ್ತು ತಾನು ತಪೋವನಕ್ಕೆ ತೆರಳುವಾಗ ತನ್ನ ಪ್ರಿಯ ಪುತ್ರನಾದ ಭರತನಿಗೆ ಹಿಮಾಲಯ ಪರ್ವತದ ದಕ್ಷಿಣ ದಿಕ್ಕಿನ ವಿಸ್ತಾರವಾದ ಪ್ರದೇಶವನ್ನು ಕೊಟ್ಟನು. ಆ ಭರತನಿಂದಾಗಿಯೇ ಈ ದೇಶಕ್ಕೆ '**ಭಾರತವರ್ಷ**' ಎಂದು ಹೆಸರು ಬಂದಿರುವದು.

ಆ ಭರತ ಮಹಾರಾಜನಿಗೆ ಸುಮತಿ ಎಂಬ ವಿದ್ಯಾಸಂಪನ್ನನಾದ ಮಗನು ಹುಟ್ಟಿದನು. ಭರತನು ಆ ರಾಜ್ಯವನ್ನು ಮಗನಿಗೆ ಒಪ್ಪಿಸಿ ತಾನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ತಪೋನುಷ್ಠಾನಕ್ಕಾಗಿ ವನಪ್ರದೇಶದಲ್ಲಿ ಪ್ರವೇಶವನ್ನು ಮಾಡಿದನು.

*ಲಿಂಗಮಹಾಪುರಾಣ ಪೂರ್ವಾರ್ಧದ ಭಾರತವರ್ಷದ ವೈಶಿಷ್ಟ್ಯ ನಿರೂಪಣ*
*ಎಂಬ ನಲವತ್ತೇಳನೆಯ ಅಧ್ಯಾಯ ಮುಗಿದುದು*



## ಮೇರುಪರ್ವತದ ವರ್ಣನೆ

**ಅಧ್ಯಾಯ - ೪೮**

**ಸೂತ :-** ಜಂಬೂದ್ವೀಪದ ನಟ್ಟನಡುವೆ ಇರುವ ಮೇರುಪರ್ವತವು ಬಗೆ ಬಗೆಯ ರತ್ನಶಿಖರಗಳಿಂದ ಮುಗಿಲಿನ ಹೆಗಲೆಣೆಯಾಗಿ ಸ್ಥಿರವಾಗಿ ನಿಂತು ಕೊಂಡಿರುವುದು. ಆ ಮೇರು ಪರ್ವತದ ಎತ್ತರ ಎಂಬತ್ನಾಲ್ಕು ಸಾವಿರ ಯೋಜನ. ಅದರ ಅಗಲ ಹದಿನಾರು ಸಾವಿರ ಯೋಜನ. ಅದು ಹದಿನಾರು ಸಾವಿರ ಯೋಜನ ಭೂಗರ್ಭದಲ್ಲಿ ಅಂತಃ ಪ್ರವಿಷ್ಟವಾಗಿರುವದು. ಆ ಮೇರು ಪರ್ವತದ ಮೇಲುಭಾಗ ಮುವ್ವತ್ತೆರಡು ಸಾವಿರ ಯೋಜನದಷ್ಟು ವಿಸ್ತಾರವಾಗಿದೆ. ಆ ವಿಸ್ತಾರದ ಮೂರರಷ್ಟು ಎಂದರೆ ತೊಂಬತ್ತಾರು ಸಾವಿರ ಯೋಜನ ಸುತ್ತಳತೆ ಇರುವದು. ಪರಮೇಶ್ವರನ ದೇಹ ಸ್ಪರ್ಶದಿಂದ ಬ್ರಹ್ಮದಾಕಾರದ ಆ ಬೆಟ್ಟವು ಸುವರ್ಣಮಯವಾಗಿರುವದು. ಅದೊಂದು ದೇವಾಧಿದೇವತೆಗಳ ಆಡುಂಬೊಲ. ಸುರಸಂದೋಹದ ಕ್ರೀಡಾಭೂಮಿಯಾದ ಆ ಪರ್ವತದ ಒಟ್ಟು ವಿಸ್ತಾರ ಒಂದು ಲಕ್ಷ ಯೋಜನ.

ಆ ವಿರಾಟ ಪರ್ವತವು ಪಡುವಲದಿಕ್ಕಿನಲ್ಲಿ ಪದ್ಮರಾಗ ರತ್ನದಕಾಂತಿಯಿಂದ ಹೊಳೆಯುತ್ತದೆ. ದಕ್ಷಿಣದಿಕ್ಕಿನಲ್ಲಿ ಚಿನ್ನದಕಾಂತಿಯಿಂದಲೂ, ಪಶ್ಚಿಮದಲ್ಲಿ ನೀಲರತ್ನದ ಕಾಂತಿಯಿಂದಲೂ, ಉತ್ತರದಿಕ್ಕಿನಲ್ಲಿ ಹವಳದಕಾಂತಿಯಿಂದಲೂ ಪ್ರಕಾಶಿಸುತ್ತಿರುವದು. ಆ ಶೈಲದ ಪೂರ್ವದ ದಿಕ್ಕಿನಲ್ಲಿ ದೇವೇಂದ್ರನ ರಾಜಧಾನಿಯಾದ ಅಮರಾವತಿ ಪಟ್ಟಣವು ಗಗನಚುಂಬಿ ಪ್ರಾಸಾದಗಳಿಂದ ಕೂಡಿ ರತ್ನರಾಶಿಗಳ ಪ್ರಭಾಪುಂಜದಿಂದ ಮನೋಹರವಾಗಿ ಕಂಗೊಳಿಸುತ್ತದೆ. ಆ ಅಮರಾವತಿಯಲ್ಲಿರುವ ನಾಗರಿಕರೆಲ್ಲರು ಸರ್ವದಾ ಸರ್ವಾಲಂಕಾರ ಭೂಷಿತರು. ರಮಣೀಯವಾದ ರೂಪ ಸಿರಿಯಿಂದ ಸೌಂದರ್ಯದ ಅಧಿದೇವತೆಯಂತೆ

ಕಂಗೊಳಿಸುವ ನಾರಿಯರು ಸ್ತನಭಾರದಿಂದ ಬಾಗಿದ್ದರೂ ಚಂಚಲ ಕಟಾಕ್ಷ ವೀಕ್ಷಣದಿಂದ ಸುರೋತ್ತಮರನ್ನು ಆಕರ್ಷಿಸುತ್ತಾರೆ. ಆ ಅಮರಪುರಿಯ ಪ್ರಮದೆಯರಿಗೆ ಅಪ್ಸರೆಯರು ಎಂದು ಕರೆಯುತ್ತಾರೆ. ಆ ಸುರಪುರಿಯ ನಟ್ಟನಡುವೆ ಚಿನ್ನದ ಮೆಟ್ಟಿಲಗಳು ಇರುವ ಅನೇಕ ತಿಳಿನೀರಿನ ಕೊಳಗಳು ಅರಳಿದ ಕಮಲಗಳಿಂದ ಸುಗಂಧವನ್ನು ಸೂಸುತ್ತಿರುತ್ತವೆ. ಆ ಮೇರುಪರ್ವತದ ಪೂರ್ವ ದಿಕ್ಕಿನಲ್ಲಿ ಹರಿಯುವ, ಮೊರೆಯುವ, ತೊರೆ, ಕೆರೆ, ಹೊಳೆ, ಹಳ್ಳಗಳ ನೀರು ಅಮೃತದಂತೆ ಸ್ವಾದಿಷ್ಟ. ಆ ಎಲ್ಲ ಜಲಾಶಯಗಳ ತೀರದಲ್ಲಿರುವ ಮರಳರಾಶಿಯು ಮೃಣ್ಮಯವಲ್ಲ. ಚಿನ್ಮಯ, ಸುವರ್ಣದ ಅಲ್ಲಿಯ ಪುಲಿನರಾಶಿಯ ಮೇಲೆ ಸುರಸುಂದರಿಯರು ಆನಂದದಿಂದ ಸ್ವಚ್ಛಂದ ವಿಹಾರವನ್ನು ಮಾಡುತ್ತಿರುತ್ತಾರೆ.

ಆ ಮೇರುಪರ್ವತದ ಆಗ್ನೇಯದಿಕ್ಕಿನಲ್ಲಿ ಅಗ್ನಿದೇವನ ತೇಜಸ್ವಿನಿ ಎಂಬ ರಾಜಧಾನಿಯ ಇರುತ್ತದೆ. ಅದು ಎಲ್ಲ ರೀತಿಯಿಂದಲೂ ಅಮರಾವತಿಗೆ ಸರಿಸಾಟಿಯಾಗಿ ಸಕಲವಿಧವಾದ ದಿವ್ಯಭೋಗೋಪಭೋಗ ಸಾಧನದಿಂದ ಕೂಡಿರುತ್ತದೆ. ಅದೇ ಮೇರುಪರ್ವತದ ದಕ್ಷಿಣ ದಿಕ್ಕಿನಲ್ಲಿ ಯಮದೇವರ ವೈವಸ್ವತ ನಗರವು ಸುವರ್ಣದಿಂದ ನಿರ್ಮಿತವಾದ ದಿವ್ಯ, ಹರ್ಮ್ಯ ಶ್ರೇಣಿಗಳಿಂದ ಶೋಭಾಯಮಾನವಾಗಿ ಪ್ರಕಾಶಿಸುತ್ತದೆ. ನೈಋತ್ಯದಿಕ್ಕಿನಲ್ಲಿ ನಿಋತಿ ಲೋಕಪಾಲಕನ ಕೃಷ್ಣವರ್ಣಾ ಎಂಬ ಪಟ್ಟಣವಿದೆ. ಮೇರು ಪರ್ವತದ ಪಶ್ಚಿಮದಲ್ಲಿ ವರುಣ ದೇವನ ಶುದ್ಧವತಿ ಎಂಬ ಪಟ್ಟಣವೂ, ವಾಯುವ್ಯದಿಕ್ಕಿನಲ್ಲಿ ವಾಯುದೇವರ ಗಂಧವತಿ ನಗರವೂ ಕಂಗೊಳಿಸುತ್ತಿರುವದು. ಉತ್ತರದಿಕ್ಕಿನಲ್ಲಿ ಕುಬೇರನ ಮಹೋದಯ ಪಟ್ಟಣವೂ, ಈಶಾನ್ಯದಿಕ್ಕಿನಲ್ಲಿ ಮಹಾದೇವನ ಯಶೋವತಿ ನಗರವೂ ಪ್ರಕಾಶಿಸುತ್ತವೆ.

ಗಿರಿ ಸೌರ್ವಭೌಮವಾದ ಈ ಮೇರುಪರ್ವತವು ಬ್ರಹ್ಮ, ವಿಷ್ಣು ಮಹೇಶ್ವರ ಎಂಬ ತ್ರಿಮೂರ್ತಿಗಳ ಆವಾಸಸ್ಥಾನವಾಗಿದೆ. ಉಳಿದ ಎಲ್ಲ ದೇವತೆಗಳು ಇಲ್ಲಿಯೇ ಮನೆ ಮಾಡಿಕೊಂಡು ನೆಲೆಸಿರುತ್ತಾರೆ. ಇದರಂತೆಯೆ ಅನೇಕಾನೇಕ ಸಿದ್ಧರೂ, ಯಕ್ಷರೂ, ಗಂಧರ್ವರೂ, ಋಷಿಗಳೂ ಈ ಮಹಾಪರ್ವತದ ಶೈಲ, ಶಿಖರ, ಸಾಣು, ಕಾಣು, ಪ್ರತ್ಯಂತ ಪ್ರದೇಶಗಳಲ್ಲಿ ವಾಸಮಾಡಿರುವದರಿಂದ ಇದೊಂದು ಅತ್ಯಂತ ಪುಣ್ಯಕರವಾದ ಶ್ರೇಷ್ಠ ಪರ್ವತವೆನಿಸಿದೆ. ಈ ಮೇರು ಪರ್ವತದ ಮೇಲೆ ಪರಿಶುಭ್ರವಾದ ಸ್ಫಟಿಕಮಣಿಯ ದಿವ್ಯ ಕಾಂತಿಯಿಂದ ಒಡಗೂಡಿದ ಸಹಸ್ರಮಂಟಪ ಎಂಬ ವಿಮಾನವು ಮಧ್ಯಭಾಗ ದಲ್ಲಿರುವದು. ಆ ವಿಮಾನದ ನಟ್ಟನಡುವೆ ರತ್ನಸಿಂಹಾಸನದಲ್ಲಿ ಪಾರ್ವತಿದೇವಿಯೊಡನೆ ಪರಮೇಶ್ವರನು ಸ್ವಯಂ ಮಂಡಿಸಿದ್ದಾನೆ. ಅವನೊಡನೆ ಅವರ ಪ್ರಿಯಪುತ್ರನಾದ ಷಣ್ಮುಖನೂ ಇರುತ್ತಾನೆ. ಈ ಸಹಸ್ರ ಮಂಟಪ ವಿಮಾನದ ಎಡಭಾಗದಲ್ಲಿ ಪದ್ಮರಾಗ ರತ್ನಗಳನ್ನು ಕೆತ್ತಿಮಾಡಲ್ಪಟ್ಟ ಹರಿಯ ವಿಮಾನವು ಬಲಭಾಗದಲ್ಲಿ ಅದೇ ಅಳತೆಯ ಬ್ರಹ್ಮನ ವಿಮಾನವೂ ಇರುತ್ತದೆ. ಅಲ್ಲಿಯ ಆ ಶಿವಗೃಹದ ಸುತ್ತಲೂ ಇಂದ್ರ, ಯಮ, ವರುಣ, ಕುಬೇರ, ಅಗ್ನಿ, ನಿಋತಿ, ವಾಯು, ಈಶಾನ ಎಂಬ ಅಷ್ಟ ದಿಕ್ಪಾಲಕರ ಬಗೆ ಬಗೆಯ ವಿಮಾನಗಳಲ್ಲಿಯೂ, ಈಶಾನ್ಯದಿಕ್ಕಿನ ಈಶ್ವರ ಕ್ಷೇತ್ರದಲ್ಲಿ ಇರುವ ಶಿವವಿಮಾನದಲ್ಲಿಯೂ, ಶಂಕರನ ಪೂಜೆಯು ವೈಭವದಿಂದ ನಿತ್ಯವು ನಡೆಯುತ್ತಿರುತ್ತದೆ.

ಅಲ್ಲಿ ಶಿಲಾದ ಪುತ್ರನಾದ ನಂದೀಶ್ವರನು ಅಸಂಖ್ಯ ಸಿದ್ಧರಿಂದ ಪೂಜಿಸಲ್ಪಡುತ್ತಾನೆ. ಸನಕ, ಸನಂದನ, ಸನತ್ಕುಮಾರಾದಿ ಮಹಾಮುನಿಗಳಿಗೆ ಸಮಾನರಾದ ಅನೇಕ ಯೋಗಿಗಳೂ ಸಿದ್ದರೂ ಅಲ್ಲಿ ಜನಿಸಿದ್ದಾರೆ. ಆ ಮೇರು ಪರ್ವತದಲ್ಲಿ ಕೆಲವೆಡೆಗಳಲ್ಲಿ ಯೋಗಾಭ್ಯಾಸ ಮಾಡುವವರ ವಾಸಯೋಗ್ಯವಾದ ಯೋಗಭೂಮಿಯೂ, ಸುಖಾನುಭವ ಮಾಡುವವರಿಗೆ ಯೋಗ್ಯವಾದ ಭೋಗಭೂಮಿಯೂ ಇರುವದು. ಅಲ್ಲಿ ಬಾಲಸೂರ್ಯನಂತೆ ಹೊಳೆಯುವ ಶಿಲಾದ ಪುತ್ರನಾದ ನಂದಿಯ ದಿವ್ಯವಾದ ವಿಮಾನವಿರುವುದು. ಅದರಲ್ಲಿ ಗಣೇಶ್ವರನಾದ ನಂದಿಯು ಕುಳಿತಿರುವನು.

ಷಣ್ಮುಖ, ಗಣೇಶ ಮುಂತಾದ ಸಾವಿರಾರು ಗಣಗಳ ಮತ್ತು ಸುಯಶ, ಸುನೇತ್ರ ಎಂಬ ಪಾರ್ವತೀದೇವಿಯ ಸಖಿಯರ, ಸಪ್ತಮಾತೃಗಳ ಮತ್ತು ಮನ್ಮಥನ ವಿಮಾನಗಳೂ ಇರುವವು. ಆ ವಿಮಾನಗಳಲ್ಲಿ ಅವರವರು ಕುಳಿತಿರುವರು. ಆ ಮೇರು ಪರ್ವತದ ಬುಡವನ್ನು ಸುತ್ತಿಕೊಂಡು ಜಂಬೂನದಿಯು ಹರಿಯುತ್ತಿರುವದು. ಆ ನದಿಯ ಬಲಗಡೆಯಲ್ಲಿ ಬಹಳ ಎತ್ತರವೂ ವಿಸ್ತಾರವೂ ಉಳ್ಳದ್ದಾಗಿ ಯಾವಾಗಲೂ ಹಣ್ಣಿನಿಂದ ತುಂಬಿ ಮನೋಹರವಾಗಿರುವ ಜಂಬೂವೃಕ್ಷವಿರುವದು.

ಮೇರು ಪರ್ವತದ ಸುತ್ತಲೂ ಶುಭವಾದ ಇಳಾವೃತವೆಂಬ ವರ್ಷವು ವಿಸ್ತಾರವಾದುದಾಗಿರುವದು. ಆ ದೇಶದಲ್ಲಿ ಜಂಬೂಫಲವನ್ನೇ ಆಹಾರವಾಗಿ ಉಪಯೋಗಿಸುವವರೂ, ಅಮೃತಪಾನಮಾಡಿದ ಕೆಲವರೂ, ಚಿನ್ನದಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದವರೂ, ಬಗೆಬಗೆಯ ಪುಣ್ಯದ ಫಲವನ್ನನುಭವಿಸುವ ಜನರೂ ಇರುವರು.

ಎಲೈ ಋಷಿಗಳೇ, ಮೇರುಪರ್ವತದ ಪಾದದಲ್ಲಿರುವ ಈ ಜಂಬೂದ್ವೀಪವು ಮಧ್ಯದಲ್ಲಿದ್ದು ಮಂಗಳಕರವಾದುದಾಗಿರುವದು. ಇದರಲ್ಲಿ ನದಿಗಳೂ, ಪರ್ವತಗಳೂ, ಇವುಗಳಿಂದ ಕೂಡಿದ ಒಂಬತ್ತು ವರ್ಷಗಳೆಂಬ ಭಾಗಗಳಿರುವವು. ಆ ಭಾಗಗಳನ್ನು ಮುಂದೆ ಹೇಳುವೆನು. ಈ ಜಂಬೂದ್ವೀಪದ ವಿಸ್ತಾರಗಳನ್ನೂ, ದೇಶಗಳನ್ನೂ, ಯೋಜನಗಳ ಲೆಕ್ಕದಿಂದ ಹೇಳುವೆನು ಕೇಳಿರಿ.

*ಲಿಂಗಮಹಾಪುರಾಣ ಪೂರ್ವಾರ್ಧದ ಮೇರು ಪರ್ವತದ ವಿವರ ವರ್ಣನೆ*
*ಎಂಬ ನಲವತ್ತೆಂಟನೆಯ ಅಧ್ಯಾಯ ಮುಗಿದುದು*

—o—

## ನವವರ್ಷಗಳ ವರ್ಣನೆ

**ಅಧ್ಯಾಯ - ೪೯**

**ಸೂತ** :- ಜಂಬೂದ್ವೀಪವು ಲಕ್ಷಯೋಜನ ವಿಸ್ತೀರ್ಣವುಳ್ಳದ್ದಾದರೆ ಅದರ ಸಮೀಪದಲ್ಲಿರುವ ಪ್ಲಕ್ಷದ್ವೀಪವು ಎರಡುಲಕ್ಷಯೋಜನ ವಿಸ್ತಾರವಾಗಿದೆ. ಅದರಂತೆ. ಇವುಗಳ ಮುಂದಿನ ಶಾಲ್ಮಲಿದ್ವೀಪ, ಕುಶದ್ವೀಪ, 'ಕ್ರೌಂಚದ್ವೀಪ, ಶಾಕದ್ವೀಪ, ಪುಷ್ಕರದ್ವೀಪ ಮೊದಲಾದವುಗಳು ಹಿಂದಿನ ದ್ವೀಪಗಳ ಎರಡರಷ್ಟು ಯೋಜನದ ವಿಸ್ತಾರವುಳ್ಳವುಗಳು ಆಗಿರುತ್ತವೆ. ಸಮುದ್ರವಲಯಾಂಕಿತವಾದ ಸಿಂಧು ಸಹಿತವಾದ ಈ ಭೂಮಂಡಲದ ವಿಸ್ತಾರ ಐವತ್ತುಕೋಟಿಯೋಜನ. ಸಪ್ತದ್ವೀಪಗಳಿಂದಲೂ ಲೋಕಾಲೋಕ ಪರ್ವತದಿಂದಲೂ ಇದು ಸುತ್ತುವರಿಯಲ್ಪಟ್ಟಿದೆ.

ಮೇರುಪರ್ವತದ ಉತ್ತರದಲ್ಲಿ ನೀಲಗಿರಿ, ಅದಕ್ಕೆ ಉತ್ತರದಲ್ಲಿ ಶ್ವೇತಾಚಲ, ಅದರ ಎತ್ತರದಲ್ಲಿ ಶೃಂಗಿಪರ್ವತವೂ ಇರುತ್ತವೆ. ಇವು ಮೂರೂ ವರ್ಷ ಪರ್ವತಗಳು. ಮೇರುಗಿರಿಯ ಪೂರ್ವದಿಕ್ಕಿನಲ್ಲಿ ಜಠರ, ದೇವಕೂಟ ಎಂಬ ಎರಡು ಪರ್ವತಗಳೂ, ದಕ್ಷಿಣದಿಕ್ಕಿನಲ್ಲಿ ನಿಷಧ, ಹೇಮಕೂಟ, ಹಿಮವಂತ ಎಂಬ ಪರ್ವತಗಳೂ ಇರುತ್ತವೆ. ಪಶ್ಚಿಮದಿಕ್ಕಿನಲ್ಲಿ ಧರಾಧರಪರ್ವತಗಳೂ, ಉತ್ತರದಿಕ್ಕಿನಲ್ಲಿ ಮಾಲ್ಯವಂತ, ಗಂಧಮಾದನ ಎಂಬ ಬೆಟ್ಟಗಳೂ ಬೆಳೆದು ನಿಂತಿರುತ್ತವೆ. ಈ ಎಲ್ಲ ದೊಡ್ಡ ದೊಡ್ಡ ಗುಡ್ಡಗಳಲ್ಲಿ ಸಿದ್ಧರೂ, ಚಾರಣರೂ ವಾಸವಾಗಿದ್ದಾರೆ. ಈ ಪರ್ವತಗಳ ಮಧ್ಯ ಪ್ರದೇಶವು ಪ್ರತಿಯೊಂದು ಒಂಬತ್ತು ಸಾವಿರ ಯೋಜನ ವಿಸ್ತಾರವುಳ್ಳದ್ದಾಗಿರುವದು.

ಹಿಮಾಲಯ ಪರ್ವತದ ದಕ್ಷಿಣ ದಿಕ್ಕಿನ ಭೂಭಾಗವು ಭಾರತವರ್ಷ ಎಂಬ ಸುಪ್ರತಿಥಿತವಾಗಿದೆ. ಈ ಭಾರತವರ್ಷದ ಉತ್ತರದಿಕ್ಕಿನಲ್ಲಿ ಹೇಮಕೂಟ ಪರ್ವತಕ್ಕೆ ಸಂಬಂಧಿಸಿದ ಭೂಮಿಯು ಕಿಂಪುರುಷವರ್ಷ ಎನಿಸುವದು. ಅದರ ಎತ್ತರಕ್ಕೆ ಇರುವ ನೈಷಧ ಪ್ರದೇಶಕ್ಕೆ ಸಂಬಂಧಿಸಿದ ಭೂಖಂಡವು ಹರಿವರ್ಷ ಎನಿಸುವದು. ಈ ಹರಿ ವರ್ಷದ ಉತ್ತರಕ್ಕೆ ಇರುವ ಮೇರುಗಿರಿಗೆ ಸಂಬಂಧಿಸಿದ ಭೂಭಾಗವು ಇಲಾವೃತವರ್ಷ ಎಂದು ಕರೆಯಲ್ಪಡುವದು. ಇಲಾವೃತವರ್ಷದಿಂದ ಮುಂದೆ ನೀಲಪರ್ವತ ಸಂಬಂಧಿಯಾದ ಭೂಮಿಗೆ ರಮ್ಯಕವರ್ಷವೆಂದೂ, ರಮ್ಯಕವರ್ಷದಿಂದ ಮುಂದೆ ಶ್ವೇತ ಪರ್ವತದ ಸಂಬಂಧಿಯಾದ ಭೂಮಿಗೆ ಹಿರಣ್ಮಯವರ್ಷವೆಂದೂ, ಹಿರಣ್ಮಯ ವರ್ಷದಿಂದ ಮುಂದೆ ಶೃಂಗಪರ್ವತ ಸಂಬಂಧಿಯಾದ ಭೂಮಿಗೆ ಕುರುವರ್ಷವೆಂದೂ ಹೆಸರಿರುವುದು. ಮೇರುವಿನ ದಕ್ಷಿಣ, ಮತ್ತು ಉತ್ತರದಲ್ಲಿರುವ ಎರಡುವರ್ಷಗಳು ಧನುಸ್ಸಿನ ಆಕಾರವಾಗಿರುವವು. ಮಧ್ಯದಲ್ಲಿರುವ ಇಲಾವೃತವರ್ಷವೂ, ಮಿಕ್ಕ ನಾಲ್ಕು ವರ್ಷಗಳೂ ಉದ್ದವಾಗಿರುವವು. ಪಶ್ಚಿಮ ಮತ್ತು ಪೂರ್ವಗಳಲ್ಲಿರುವ ಎರಡು ವರ್ಷಗಳು ಉದ್ದವಿಲ್ಲದವುಗಳಾಗಿ ತುಂಡಾಗಿರುವವು.

ನಿಷಧ ಪರ್ವತದ ದಕ್ಷಿಣಕ್ಕೂ ಉತ್ತರಕ್ಕೂ ಇರುವ ಪ್ರದೇಶಗಳಿಗೆ ಅರ್ಧವೇದಿ ಎಂದು ಹೆಸರು. ಆ ಅರ್ಧವೇದಿಯ ದಕ್ಷಿಣ ದಿಕ್ಕಿನಲ್ಲಿ ಮೂರು ವರ್ಷಗಳೂ ಉತ್ತರ ದಿಕ್ಕಿನಲ್ಲಿ ಮೂರುವರ್ಷಗಳೂ ಇರುವವು. ಆ ಅರ್ಧವೇದಿಗಳ ನಡುವೆ ಮೇರು

ಪರ್ವತದ ಮಧ್ಯಭಾಗಕ್ಕೆ ಇಲಾವೃತವರ್ಷವೆಂದು ಹೆಸರಿರುವುದು. ಈ ಇಲಾವೃತವರ್ಷವೆಂಬುದು ನೀಲಪರ್ವತಕ್ಕೆ ದಕ್ಷಿಣದಿಕ್ಕಿನಲ್ಲಿಯೂ ನಿಷಧಪರ್ವತಕ್ಕೆ ಉತ್ತರದಿಕ್ಕಿನಲ್ಲಿಯೂ ಇರುವುದು. ಮಾಲ್ಯವಂತಪರ್ವತವು ಉತ್ತರದಿಕ್ಕಿಗೆ ಹಬ್ಬಿಕೊಂಡಿರುವುದು. ಅದರ ಮೇಲಿನ ಭಾಗವು ಎರಡು ಸಾವಿರ ಯೋಜನಗಳುಳ್ಳದ್ದಾಗಿರುವುದು. ಅಗಲದಲ್ಲಿ ಮೂವತ್ತುನಾಲ್ಕು ಸಾವಿರ ಯೋಜನಗಳುಳ್ಳದ್ದಾಗಿರುವುದು. ಮಾಲ್ಯವಂತಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿ ಗಂಧಮಾಧನ ಪರ್ವತವಿರುವುದು. ಅದು ಮಾಲ್ಯ ವತ್ಪರ್ವತದಷ್ಟೇ ವಿಸ್ತಾರವಾದುದು. ಜಂಬೂದ್ವೀಪದ ವಿಸ್ತಾರವನ್ನೂ ಈ ಪರ್ವತಗಳು ಸಮವಾಗಿ ಭಾಗ ಮಾಡಿಕೊಂಡು ಸುತ್ತಲೂ ಇರುವವು. ಈ ಆರು ವರ್ಷಪರ್ವತಗಳೂ ಪೂರ್ವದಿಕ್ಕಿಗೆ ವಿಸ್ತರಿಸಿಕೊಂಡು ಒಳ್ಳೆಯ ಭಾಗಗಳುಳ್ಳವುಗಳಾಗಿ ಎರಡು ಕಡೆಗಳಲ್ಲೂ ಪೂರ್ವ ಪಶ್ಚಿಮ ಸಮುದ್ರಗಳಿಗೆ ಚಾಚಿಕೊಂಡಿರುವವು.

ಹಿಮವತ್ಪರ್ವತದಲ್ಲಿ ಹಿಮವು ತುಂಬಿರುವುದು. ಹೇಮಕೂಟಪರ್ವತದಲ್ಲಿ ಚಿನ್ನವಿರುವುದು. ನಿಷಧಪರ್ವತವು ಬಾಲಸೂರ್ಯನಂತೆ ಪ್ರಕಾಶಿಸುತ್ತಾ ಸುವರ್ಣಮಯವಾಗಿರುವುದು. ಮೇರುಪರ್ವತವು ಪದ್ಮರಾಗ, ಚಿನ್ನ, ನೀಲ, ರತ್ನ, ಹವಳ ಈ ನಾಲ್ಕು ಬಣ್ಣಗಳಿಂದ ಕೂಡಿ ವಿಶೇಷ ಚಿನ್ನವುಳ್ಳದ್ದಾಗಿ ಎತ್ತರವಾಗಿರುವುದು. ಗುಂಡಾದ ಆಕೃತಿಯಿಂದ ಹಬ್ಬಿ ಮೇಲುಭಾಗದಲ್ಲಿ ಚಚ್ಚೌಕವಾಗಿ ವಿಸ್ತರಿಸಿರುವುದು. ನೀಲಪರ್ವತವು ವೈಡೂರ್ಯ ರತ್ನಗಳಿಂದ ತುಂಬಿರುವುದು. ಶ್ವೇತಪರ್ವತವು ಬೆಳ್ಳಗಿರುವುದಲ್ಲದೆ ವಿಶೇಷವಾಗಿ ಸುವರ್ಣವುಳ್ಳದ್ದಾಗಿರುವುದು. ತ್ರಿಶೃಂಗ ಪರ್ವತವು ನವಿಲಿನಗರಿಯ ಬಣ್ಣ ಇವು ಉಳ್ಳದ್ದಾಗಿರುವದು.

ಮಂದರ, ದೇವಕೂಟ ಈ ಎರಡೂ ಪೂರ್ವ ದಿಕ್ಕಿನಪರ್ವತಗಳು. ಕೈಲಾಸ, ಗಂಧಮಾದನ ಪರ್ವತಗಳೆರಡೂ ದಕ್ಷಿಣದಿಕ್ಕಿನವು. ನಿಷಧ, ಪಾರಿಯಾತ್ರ ಪರ್ವತಗಳೆರಡೂ ಪಶ್ಚಿಮದಿಕ್ಕಿನ ಪರ್ವತಗಳು. ತ್ರಿಶೃಂಗ, ಜಾರುಜಿ ಎಂಬೆರಡು ಪರ್ವತಗಳು ಉತ್ತರದಿಕ್ಕಿನವು. ಪೂರ್ವದಿಕ್ಕಿನಪರ್ವತಗಳಂತೆ ಎಲ್ಲವೂ ಸಮುದ್ರದೊಳಕ್ಕೆ ಚಾಚಿಕೊಂಡಿರುವವು. ಈ ಎಂಟೂ ಪರ್ವತಗಳನ್ನು ತಲೆಕಟ್ಟಿನ ಪರ್ವತಗಳೆಂದು ಬುದ್ಧಿವಂತರು ಹೇಳುವರು.

ಮೇರುಪರ್ವತವೆಂಬುದು ಎತ್ತರವಾದ ದೊಡ್ಡ ಚಿನ್ನದ ಪರ್ವತವು. ಅದರ ಪಾದದಲ್ಲಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ದೊಡ್ಡ ಪರ್ವತಗಳಿರುವವು. ಅವುಗಳ ಸಂಬಂಧದಿಂದ ಸಪ್ತದ್ವೀಪಗಳಿಂದ ಕೂಡಿದ ಭೂಮಿಯು ಚಲಿಸದೇ ಸ್ಥಿರವಾಗಿರುವುದು. ಆ ನಾಲ್ಕು ಪರ್ವತಗಳಲ್ಲಿ ಪ್ರತಿಯೊಂದು ಪರ್ವತವೂ ಹತ್ತು ಸಾವಿರ ಯೋಜನ ವಿಸ್ತಾರವುಳ್ಳದ್ದು. ಆ ಪರ್ವತಗಳಾವುವೆಂದರೆ ಪೂರ್ವದಲ್ಲಿ ಮಂದರ, ದಕ್ಷಿಣದಲ್ಲಿ ಗಂಧಮಾಧನ, ಪಶ್ಚಿಮದಲ್ಲಿ ವಿಪುಲ, ಉತ್ತರದಲ್ಲಿ ಸುಪಾರ್ಶ್ವ, ನಾಲ್ಕುದಿಕ್ಕಿನಲ್ಲಿರುವ ನಾಲ್ಕುದ್ವೀಪಗಳಿಗೂ, ಧ್ವಜದಂತೆ ನಾಲ್ಕು ಮಹಾವೃಕ್ಷಗಳು ಹುಟ್ಟಿರುವವು. ಪೂರ್ವದಿಕ್ಕಿನ ಮಂದರಪರ್ವತದಲ್ಲಿ ಕದಂಬವೆಂಬ ವೃಕ್ಷವು ದೊಡ್ಡಕೊಂಬೆಗಳಿಂದ ಕೂಡಿ ವೃಕ್ಷರಾಜನಾಗಿರುವುದು. ದಕ್ಷಿಣದಿಕ್ಕಿನ ಗಂಧಮಾದನ ಪರ್ವತದ ಶಿಖರದಲ್ಲಿ ದೇವತೆಗಳು ಉಪಯೋಗಿಸುವ ಜಂಬೂವೃಕ್ಷವು ಪುಣ್ಯವಂತರಿಗೆ ಫಲವನ್ನು ಕೊಡುವುದಕ್ಕಾಗಿ ಯಾವಾಗಲೂ ಹೂಕಾಯಿಹಣ್ಣುಗಳಿಂದ ತುಂಬಿದುದಾಗಿ ದಕ್ಷಿಣ ದಿಕ್ಕಿನ ಜಂಬೂದ್ವೀಪದಲ್ಲಿ

ಪ್ರಸಿದ್ಧವಾಗಿರುವುದು. ಪಶ್ಚಿಮ ದಿಕ್ಕಿನ ವಿಪುಲ ಪರ್ವತದಲ್ಲಿ ದೇವ ವೃಕ್ಷವಾದ ದೊಡ್ಡ ಅರಳಿಯ ಮರವು ಹುಟ್ಟಿರುವುದು. ಉತ್ತರ ದಿಕ್ಕಿನ ಸುಪಾರ್ಶ್ವ ಪರ್ವತದಲ್ಲಿ ಅನೇಕ ಯೋಜನ ವಿಸ್ತಾರವಾದ ದೊಡ್ಡ ಕೊಂಬೆಗಳುಳ್ಳ ಆಲದಮರವು ಹುಟ್ಟಿರುವುದು.

ಆ ನಾಲ್ಕುಪರ್ವತಗಳನ್ನು ಸಂಬಂಧಿಸಿ ಎಲ್ಲ ಋತುಗಳ ಗುಣವುಳ್ಳ, ದೇವತೆಗಳ ಕ್ರೀಡೆಗೆ ಯೋಗ್ಯವಾದ, ಮನುಷ್ಯರ ಸಂಬಂಧವಿಲ್ಲದ, ಸುಂದರವಾದ ನಾಲ್ಕು ವನಗಳಿರುವುವು. ಪೂರ್ವದಲ್ಲಿ ಚೈತ್ರರಥವನ, ದಕ್ಷಿಣದಲ್ಲಿ ಗಂಧಮಾದನವನ, ಪಶ್ಚಿಮದಲ್ಲಿ ವೈಭ್ರಾಜವನ, ಉತ್ತರದಲ್ಲಿ ಸವಿತ್ರವನ ಅಥವಾ ಶಿವವನ. ಪೂರ್ವದಲ್ಲಿ ಮಿತ್ರೇಶ್ವರಲಿಂಗವೂ, ದಕ್ಷಿಣದಲ್ಲಿ ಷಷ್ಠೇಶ್ವರಲಿಂಗವೂ, ಪಶ್ಚಿಮದಲ್ಲಿ ವರ್ಕೇಶ್ವರಲಿಂಗವೂ, ಉತ್ತರದಲ್ಲಿ ಆಮ್ರಕೇಶ್ವರಲಿಂಗವೂ ಇರುವುದು. ಪೂರ್ವದಲ್ಲಿ ಅರುಣೋದ ಸರೋವರ, ದಕ್ಷಿಣದಲ್ಲಿ ಮಾನಸ ಸರೋವರ, ಪಶ್ಚಿಮದಲ್ಲಿ ಸತೋದ ಸರೋವರ, ಉತ್ತರದಲ್ಲಿ ಮಹಾಭದ್ರ ಸರೋವರ. ಈ ಸರೋವರಗಳಲ್ಲಿಯೂ, ಪರ್ವತಗಳಲ್ಲಿಯೂ, ವನಗಳಲ್ಲಿಯೂ ಮುನಿಗಳು ಕ್ರೀಡಿಸುತ್ತಿರುವರು. ಕಾರ್ತಿಕೇಯನಾದ ಷಣ್ಮುಖಸ್ವಾಮಿಗೆ ಮೂರ್ತಿಭೇದದಿಂದ ಬೇರೆ ಬೇರೆ ಕ್ಷೇತ್ರಗಳಿರುವವು. ದಕ್ಷಿಣದಲ್ಲಿ ಶಾಖಕ್ಷೇತ್ರ, ವಿಶಾಖನಿಗೆ ಪಶ್ಚಿಮಕ್ಷೇತ್ರ, ನೈಗಮೇಯನಿಗೆ ಉತ್ತರಕ್ಷೇತ್ರ, ಕುಮಾರ ಸ್ವಾಮಿಗೆ ಪೂರ್ವದಿಕ್ಕಿನ ಕ್ಷೇತ್ರ.

ಅರುಣೋದ ಸರೋವರದ ಪೂರ್ವದಿಕ್ಕಿನಲ್ಲಿರುವ ಪರ್ವತಗಳೆಂದರೆ ಸಿತಾಂತ, ಕುರಂಡ, ಕುರುರ, ವಿಕರ, ಮಣಿಶೈಲ, ವೃಕ್ಷಪರ್ವತ, ಮಹಾನೀಲ, ರುಚಕ, ಸಬಿಂದು, ದರ್ದುರ, ವೇಣುಮಂತ, ಸಮೇಘ, ನಿಷಧ, ದೇವಪರ್ವತ. ಇವೂ ಅಲ್ಲದೆ ಇನ್ನೂ ಸಣ್ಣ ಬೆಟ್ಟಗಳೂ ಇರುವವು. ಮಂದರಪರ್ವತದ ಪೂರ್ವದಿಕ್ಕಿನ ಈ ಪರ್ವತಗಳೆಲ್ಲವೂ ಸಿದ್ಧಾಶ್ರಮಗಳು. ಆ ಪರ್ವತಗಳಲ್ಲಿಯೂ, ಗುಹೆಗಳಲ್ಲಿಯೂ, ವನಗಳಲ್ಲಿಯೂ, ರುದ್ರಕ್ಷೇತ್ರಗಳೂ ಸರ್ವವ್ಯಾಪಿಯಾದ ನಾರಾಯಣನ ಕ್ಷೇತ್ರಗಳೂ ಇರುವವು. ದಕ್ಷಿಣದಿಕ್ಕಿನ ಮಾನಸಸರೋವರವನ್ನನುಸರಿಸಿದ ಪರ್ವತಗಳೆಂದರೆ ವಿಶಿರ ಪರ್ವತ, ಶಿಖರ ಪರ್ವತ, ಏಕಶೃಂಗ, ಮಹಾಶೂಲ, ಗಜಶೈಲ, ಪಿಶಾಚಕ, ಪಂಚಶೈಲ, ಕೈಲಾಸ, ಹಿಮವಂತ. ಈ ಪರ್ವತಗಳಲ್ಲಿಯೂ, ವನಗಳಲ್ಲಿಯೂ ದೇವತೆಗಳು ಸಂಚರಿಸುವರು. ಆ ದೇವಶ್ರೇಷ್ಠರು ಅವುಗಳಲ್ಲೆಲ್ಲಾ ರುದ್ರಕ್ಷೇತ್ರಗಳನ್ನು ಸ್ಥಾಪಿಸಿರುವರು. ಸಿತೋದ ಸರೋವರಕ್ಕೆ ಸಂಬಂಧಿಸಿದ ಶಕ್ರಪರ್ವತ, ಮಹಾಬಲ, ಕುಮುದ, ಮಧುಮಂತ, ಅಂಜನ, ಮುಕುಟ, ಕೃಷ್ಣ, ಪಾಂಡುರ, ಸಹಸ್ರಶಿಖರ, ಪಾರಿಜಾತ, ಶ್ರೀಶೃಂಗ ಎಂಬ ಪರ್ವತಗಳು ದೇವತೆಗಳ ಸಂಚಾರ ಉಳ್ಳದ್ದಾಗಿ ಪಶ್ಚಿಮ ದಿಕ್ಕಿನಲ್ಲಿ ರುದ್ರಕ್ಷೇತ್ರಗಳಿಂದ ಕೂಡಿದುದಾಗಿರುವುವು.

ಶಂಖಕೂಟ, ವೃಷಭ, ಹಂಸಪರ್ವತ, ನಾಗ, ಕಪಿಲ, ಇಂದ್ರಶೈಲ, ಸಾನುಮತ್ಪರ್ವತ, ನೀಲ, ಕಂಟಕ ಶೃಂಗ, ಶತಶೃಂಗ, ಪುಷ್ಪಕೋಶ, ಪ್ರಶೈಲ, ವಿರಜ, ವರಾಹಪರ್ವತ, ಮಯೂರ, ಜಾರುಧಿ, ಇವುಗಳೆಲ್ಲ ಉತ್ತರ ದಿಕ್ಕಿನಲ್ಲಿರುವ ಪರ್ವತಗಳು. ಆ ದಿವ್ಯಪರ್ವತಗಳಲ್ಲಿ ದೇವದೇವನಾದ ಶಿವನ ಲೆಕ್ಕವಿಲ್ಲದಷ್ಟು ವಿಮಾನಗಳು ಇರುವುವು. ಈ ಮುಖ್ಯಪರ್ವತಗಳೊಳಗೆ ಗೋಪ್ಯವಾದ ಗವಿಗಳೂ, ಸರೋವರಗಳೂ, ಉಪವನಗಳೂ, ಇರುವವು. ಅಲ್ಲಿ ದೇವತೆಗಳೂ, ಮುನಿಗಳೂ, ಸಿದ್ಧರೂ, ಪರಮೇಶ್ವರನ

ಅನುಗ್ರಹದಿಂದ ಪತ್ನೀಸಹಿತರಾಗಿ ವಾಸಮಾಡಿಕೊಂಡಿರುವರು. ಅವರೆಲ್ಲರೂ ಭಕ್ತಿಯಿಂದ ತಮ್ಮ ಮನಸ್ಸಿನಲ್ಲಿ ಶಿವನ ಧ್ಯಾನವನ್ನು ಮಾಡುತ್ತಿರುವರು. ಲಕ್ಷ್ಮೀದೇವಿಯೇ ಮುಂತಾದವರು ಬಿಲ್ವವನದಲ್ಲಿಯೂ, ಕಕುಭವನದಲ್ಲಿ ಕಶ್ಯಪಾದಿಗಳೂ ಕಾಲವನದಲ್ಲಿ ಇಂದ್ರ, ಉಪೇಂದ್ರರೂ, ಉರಗರೂ, ಅತ್ತಿಯಮರದವನದಲ್ಲಿ ಕರ್ದಮ ಮುಂತಾದ ಮಹಾತ್ಮರೂ, ಮಾವಿನವನದಲ್ಲಿ ವಿದ್ಯಾಧರರೂ ಸಿದ್ಧರೂ ವಾಸಮಾಡುವರು.

ಬೇವಿನಗಿಡದವನದಲ್ಲಿ ನಾಗರೂ, ಸಿದ್ಧರೂ, ಮುತ್ತುಗದ ವನದಲ್ಲಿ ಸೂರ್ಯನೂ, ರುದ್ರಗಣಗಳೂ, ಬೇರೆಬೇರೆ ಹಣ್ಣಿನ ಗಿಡಗಳಿರುವ ವನದಲ್ಲಿ ದೇವತೆಗಳ ಗುರುವಾದ ಬೃಹಸ್ಪತಿಯೂ, ನೈದಿಲೆಯ ವನದಲ್ಲಿ ವಿಷ್ಣುವೇ ಮುಂತಾದ ಮಹಾತ್ಮರೂ, ನೆಲದಾವರೆಯ ವನದಲ್ಲಿರುವ ಆಲದ ಮರದಲ್ಲಿ ಆದಿಶೇಷನಲ್ಲದ ಮಿಕ್ಕ ಸರ್ಪಗಳೂ, ವಾಸವಾಗಿರುವರು. ಆದಿಶೇಷನು ಕಾಲಸ್ವರೂಪನಾಗಿ ಸಕಲ ಲೋಕಾಧಿಪತಿಯಾಗಿ ಗರ್ವದಿಂದ ಕೂಡಿ ಪಾತಾಳಲೋಕದಲ್ಲಿರುವನು. ಅವನು ವಿಷ್ಣುವಿನ ಅವತಾರವಾದ ಹಲಾಯುಧನಾದ ಬಲರಾಮನ ಬೇರೊಂದು ಅವತಾರ ಮೂರ್ತಿಯಾಗಿರುವನು. ಆ ಆದಿಶೇಷನು ದೇವದೇವನಾದ ಹರಿಗೆ ಹಾಸಿಗೆಯಾಗಿಯೂ, ಶಿವನಿಗೆ ಕಂಕಣವಾಗಿಯೂ ಇರುವನು. ಹಲಸಿನ ಮರದ ವನದಲ್ಲಿ ಶುಕ್ರಾಚಾರ್ಯ ಸಹಿತರಾದ ದಾನವರೂ, ಕೊಂಬೆಗಳಿಲ್ಲದ ಅಡಿಕೆ ತೆಂಗು ಮುಂತಾದ ಮರಗಳಿರುವ ವನಗಳಲ್ಲಿ ಕಿನ್ನರರೂ, ಉರಗರೂ ವಾಸವಾಗಿರುವರು ಎಲ್ಲ ವಿಧವಾದ. ಮರಗಳೂ ಅನೇಕವಾಗಿರುವ ಮನೋಹರವೆಂಬ ವನದಲ್ಲಿ ನಂದೀಶ್ವರನು ತನ್ನ ಗುಣಗಳಿಂದ ಹೊಗಳಿಸಿಕೊಳ್ಳುತ್ತಾ ವಾಸವಾಗಿರುವನು. ಸಂತಾನಕವೆಂಬ ಕಲ್ಪವೃಕ್ಷ ವನದಲ್ಲಿ ಸರಸ್ವತೀ ದೇವಿಯು ವಾಸವಾಗಿರುವಳು.

*ಲಿಂಗಮಹಾಪುರಾಣ ಪೂರ್ವಾರ್ಧದ ನವವರ್ಷಗಳ ವರ್ಣನೆ*
*ಎಂಬ ನಲವತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

## ಬ್ರಹ್ಮಾಂಡದ ರಚನೆ

**ಅಧ್ಯಾಯ - ೫೦**

**ಸೂತ :-** ಶಿತಾಂತವೆಂಬ ಪರ್ವತ ಶಿಖರದಲ್ಲಿರುವ ಪಾರಿಜಾತವನದಲ್ಲಿ ದೇವೇಂದ್ರನಿರುವನು. ಅದರ ಪೂರ್ವದಿಕ್ಕಿನಲ್ಲಿ ಕುಮುದಾದ್ರಿಯೆಂಬ ಪರ್ವತಗಳ ಗುಂಪು ಅತ್ಯಂತ ವಿಸ್ತಾರವಾಗಿರುವುದು. ಸುವರ್ಣಕೋಟರವೆಂಬ ಪರ್ವತದಲ್ಲಿ ಮಹಾತ್ಮರಾದ ದನುದೇವಿಯ ಮಕ್ಕಳಾದ ರಾಕ್ಷಸರ ಎಂಟು ಪಟ್ಟಣಗಳೂ ಇರುವುವು. ನೀಲಪರ್ವತದಲ್ಲಿ ರಾಕ್ಷಸರ ಅರವತ್ತೆಂಟು ಪಟ್ಟಣಗಳಿರುವುವು. ಮಹಾನೀಲ ಪರ್ವತದಲ್ಲಿ ಹದಿನೈದು ಪಟ್ಟಣಗಳಿರುವುವು. ಅವು ಕುದುರೆಯ ಮುಖದ ಕಿನ್ನರರೆಂಬ ದೇವತೆಗಳ ಪಟ್ಟಣಗಳು. ವೇಣುಸೌಧವೆಂಬ ದೊಡ್ಡ ಪರ್ವತದಲ್ಲಿ ವಿದ್ಯಾಧರರ ಮೂರು ಪಟ್ಟಣಗಳಿರುವುವು. ವೈಕುಂಠವೆಂಬ ಪರ್ವತದಲ್ಲಿ ಗರುಡನೂ, ಕರಂಜ ಪರ್ವತದಲ್ಲಿ ನೀಲಲೋಹಿತನೆಂಬ ರುದ್ರನೂ, ವಸುಧಾರಾ ಪರ್ವತದಲ್ಲಿ ಅಷ್ಟವಸುಗಳೂ ವಾಸವಾಗಿರುವರು. ರತ್ನಧಾರಾ ಪರ್ವತದಲ್ಲಿ ಸಪ್ತರ್ಷಿಗಳ ಪುಣ್ಯಕರವಾದ ಸಪ್ತಸ್ಥಳಗಳೂ, ಸಿದ್ಧರ ವಾಸಸ್ಥಾನಗಳೂ ಇರುವುವು. ಏಕ ಶೃಂಗ

ಪರ್ವತದಲ್ಲಿ ಬ್ರಹ್ಮನ ದೊಡ್ಡ ಮನೆಯು ಇರುವುದು. ಗಜಪರ್ವತದಲ್ಲಿ ದುರ್ಗಾದಿ ದೇವಿಯರೂ. ಅಷ್ಟವಸುಗಳೂ, ದ್ವಾದಶಾದಿತ್ಯರೂ, ಏಕಾದಶರುದ್ರರೂ ಅಶ್ವಿನೀ ದೇವತೆಗಳೂ, ಮನೆಮಾಡಿಕೊಂಡಿರುವರು. ಹೇಮಕಕ್ಷಪರ್ವತದಲ್ಲಿ ಎಂಭತ್ತು ದೇವತೆಗಳ ಪಟ್ಟಣಗಳಿರುವುವು. ಸುನೀಲ ಪರ್ವತದಲ್ಲಿ ಐನೂರು ಕೋಟಿ ರಾಕ್ಷಸರು ವಾಸಮಾಡುವರು. ಪಂಚಕೂಟ ಪರ್ವತದಲ್ಲಿ ಐದು ಕೋಟಿ ಪಟ್ಟಣಗಳಿರುವುವು.

ಶತಶೃಂಗ ಪರ್ವತದಲ್ಲಿ ಪರಾಕ್ರಮಶಾಲಿಗಳಾದ ನೂರು ಯಕ್ಷರ ಮನೆಗಳೂ, ತಾಮ್ರಪರ್ವತದಲ್ಲಿ ಕದ್ರೂ ದೇವಿಯ ಪುತ್ರರಾದ ನಾಗರಮನೆಗಳೂ, ವಿಶಾಖ ಪರ್ವತದಲ್ಲಿ ಕುಮಾರಸ್ವಾಮಿಯ ಮನೆಯೂ, ಶ್ವೇತೋದರ ಪರ್ವತದಲ್ಲಿ ಮಹಾತ್ಮನಾದ ಗರುಡನ ಮನೆಯೂ, ಪಿಶಾಚಪರ್ವತದಲ್ಲಿ ಕುಬೇರನ ಮನೆಯೂ, ಹರಿಕೂಟವೆಂಬ ಪರ್ವತದಲ್ಲಿ ಹರಿಯ ಮನೆಯೂ ಇರುವುವು. ಕುಮುದ ಪರ್ವತದಲ್ಲಿ ಕಿನ್ನರರ ಮನೆಗಳೂ, ಅಂಜನ ಪರ್ವತದಲ್ಲಿ ಚಾರಣರ ಮನೆಗಳೂ, ಕೃಷ್ಣ ಪರ್ವತದಲ್ಲಿ ಗಂಧರ್ವರ ಮನೆಗಳೂ, ಪಾಂಡುರ ಪರ್ವತದಲ್ಲಿ ಸಮಸ್ತ ಪ್ರಪಂಚದ ಸುಖಕರವಾದ ವಸ್ತುಗಳಿಂದ ತುಂಬಿದ ವಿದ್ಯಾಧರರ ಏಳು ಪಟ್ಟಣಗಳೂ ಇರುವುವು. ಸಹಸ್ರ ಶಿಖರವೆಂಬ ಪರ್ವತದಲ್ಲಿ ದೇವೇಂದ್ರನ ಶತ್ರುಗಳಾದ ಕ್ರೂರವಾದ ಕಾರ್ಯಗಳನ್ನು ಮಾಡುವ ರಾಕ್ಷಸರ ಏಳುಸಾವಿರಪಟ್ಟಣಗಳಿರುವುವು. ಮುಕುಟ ಪರ್ವತವು ಪನ್ನಗರ ವಾಸಸ್ಥಾನವಾಗಿರುವುದು. ಪುಷ್ಪಕೇತು ಪರ್ವತವು ವೈವಸ್ವತ ಮನು, ಸೋಮ, ವಾಯು, ನಾಗರಾಜ, ಇವರ ವಾಸಸ್ಥಾನವಾಗಿರುವುದು. ತಕ್ಷಕವೆಂಬ ಪರ್ವತದಲ್ಲಿ ಬ್ರಹ್ಮ, ಇಂದ್ರ, ವಿಷ್ಣು, ರುದ್ರರ ನಾಲ್ಕು ಮನೆಗಳೂ, ಕುಮಾರಸ್ವಾಮಿ, ಕುಬೇರ, ಸೋಮ ಮುಂತಾದ ಇನ್ನೂ ಕೆಲವು ಮಹಾಮಹಿಮರ ಮನೆಗಳೂ ಇರುವುವು.

ಎಲ್ಲೆಕಟ್ಟಿನ ಪರ್ವತಗಳಲ್ಲಿಯೂ, ಕೆಲವು ಮುಖ್ಯವಾದ ಮನೆಗಳಿರುವುವು. ಶ್ರೀಕಂಠವೆಂಬ ಪರ್ವತದ ಗುಹೆಯಲ್ಲಿ ಸಮಸ್ತ ಪ್ರಪಂಚಗಳಿಗೂ ಆಶ್ರಯ ಸ್ಥಾನನಾದ ಶಿವನು ಉಮಾದೇವಿಯೊಡನೆ ವಾಸವಾಗಿರುವನು. ಶ್ರೀಕಂಠಪರ್ವತಕ್ಕೆ ಸಮಸ್ತ ದೇವತೆಗಳಿಗೂ ಅಧಿಪತಿಯಾದ ಶಿವನೇ ಒಡೆಯನು. ಈ ಬ್ರಹ್ಮಾಂಡದ ಕಾರ್ಯಗಳೂ ಕೂಡ ಆ ಶಿವನಿಂದಲೇ ನಡೆಯುತ್ತಿರುವವು. ಈ ವಿಷಯದಲ್ಲಿ ಸಂದೇಹವಿಲ್ಲ. ವಿಷ್ಣು, ರುದ್ರ, ಬ್ರಹ್ಮ ಮುಂತಾದ ದೇವತೆಗಳು ಬೇರೆ ಬೇರೆಯಾಗಿ ಒಂದೊಂದು ಬ್ರಹ್ಮಾಂಡಕ್ಕೆ ಅಧಿಪತಿಗಳಾಗಿರುವರಲ್ಲದೆ ಮಾಯೆಗೂ ಅಧಿಪತಿಗಳಾಗಿರುವರು. ಆ ಕಾರಣದಿಂದ ಅವರು ಈ ಬ್ರಹ್ಮಾಂಡಕ್ಕೆ ಚಕ್ರವರ್ತಿಗಳೆನಿಸಿಕೊಂಡು ತಡೆಯಿಲ್ಲದ ಆಜ್ಞೆಯುಳ್ಳವರಾಗಿರುವರು. ಈ ಭೂಲೋಕದಲ್ಲಿರುವ ಎಲ್ಲೆಕಟ್ಟಿನ ಪರ್ವತಗಳಲ್ಲಿ ಶಿವನು ನೆಲೆಸಿರುವ ಸ್ಥಳಗಳು ಯಿವಾಗಿರುವವು. ಸಮಸ್ತ ಚರಾಚರಪ್ರಪಂಚವೂ ಶಿವನಲ್ಲಿಯೇ ಇರುವುದು. ಕಾಲಾಗ್ನಿ ರುದ್ರ ಪರ್ಯಂತವಾದ ಸಕಲ ಶಿವಾವತಾರಗಳೂ ಈ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಇರುವುದರಿಂದ ವಿಸ್ತಾರವಾಗಿ ಆ ಶಿವನ ನೆಲೆಯನ್ನು ವಿವರಿಸಲು ನನ್ನಿಂದ ಸಾಧ್ಯವಾಗಲಾರದು.

*ಲಿಂಗಮಹಾಪುರಾಣ ಪೂರ್ವಾರ್ಧದ ಬ್ರಹ್ಮಾಂಡದರಚನೆ, ಸ್ಥಳ ವಿಶೇಷಗಳ ವರ್ಣನೆ ಎಂಬ ಐವತ್ತನೆಯ ಅಧ್ಯಾಯ ಮುಗಿದುದು*

## ದೇವಕೂಟದ ವಿವರಣ

ಅಧ್ಯಾಯ - ೫೧

**ಸೂತ :-** ದೇವಕೂಟವೆಂಬ ಪರ್ವತದಲ್ಲಿ ಮಹಾಕೂಟ ಎಂಬ ಗಿರಿಶಿಖರವಿದೆ. ಅಲ್ಲಿ ಭೂತವನ ಎಂಬ ಅರಣ್ಯವು ಅನೇಕ ಪ್ರಾಣಿಗಳಿಗೆ ಆವಾಸಸ್ಥಾನವಾಗಿದೆ. ಅದು ಚಿನ್ನ, ವೈಡೂರ್ಯ, ಕೆಂಪು, ನೀಲ, ಗೋಮೇಧ ಮುಂತಾದ ರತ್ನಗಳಿಂದ ಒಡಗೂಡಿದ ಆ ಶೈಲದಲ್ಲಿ ಪಾರಿಜಾತವೃಕ್ಷವಿದ್ದು ಉಳಿದ ಸಂಪಿಗೆ, ಅ ಶೋಕ, ಪುನ್ನಾಗ, ಬಕುಳ ಮುಂತಾದ ಬಗೆಬಗೆಯ ಸುಗಂಧ ಸೂಸುವ ಪುಷ್ಪಗಳಿಂದ ಆಶೈಲವು ಶೋಭಿಸುತ್ತದೆ. ಅಸಂಖ್ಯ ಮರಗಳಿಂದ ಆ ಅದ್ರಿಶ್ರೇಷ್ಠವು ಗಂಧಾಢ್ಯವೂ ಸುಮನೋಹರವೂ ಆಗಿದೆ.

ಆ ಭೂತ - ವನದಲ್ಲಿ ಅತ್ಯುತ್ತಮವಾದ ಒಂದು ಶಿವಾಲಯವಿದೆ. ಚಿನ್ನದ ಪ್ರಾಕಾರದ ಗೋಡೆಗಳುಳ್ಳ ಆ ಧೂರ್ಜಟಿ ಧಾಮಕ್ಕೆ ರತ್ನದಬಾಗಿಲುಗಳು. ಸ್ಫಟಿಕದ ಗೋಪುರಗಳು ಇದ್ದು ಆ ಆಲಯದೊಳಗೆ ರತ್ನಖಚಿತವಾದ ಸಿಂಹಾಸನಗಳು ಇರುವವು. ಶುಭಕರವಾದ ಆ ಪೀಠದ ಮೇಲೆ ಪರಮೇಶ್ವರನು ಮಂಡಿಸಿದ್ದಾನೆ.

ಅಲ್ಲಿರುವ ಕೈಲಾಸ ಪರ್ವತವು ಶಂಖದಂತೆ ಶುಭ್ರಕಾಂತಿಯುಕ್ತವಾದ ಶಿಖರಗಳಿಂದ ಶೋಭಿಸುತ್ತದೆ. ಆ ಕೈಲಾಸವು ಅನೇಕ ಯಕ್ಷರ ಹಾಗೂ ಕುಬೇರನ ವಾಸಸ್ಥಾನವಾಗಿದೆ. ಆ ಕೈಲಾಸಪರ್ವತದಲ್ಲಿ ಇದ್ದ ಅತ್ಯಂತ ವಿಶಾಲವಾದ ಶಿವನ ಸೌಧದಲ್ಲಿ ಸ್ವಯಂ ಮಹಾದೇವರು ಪಾರ್ವತೀದೇವಿ ಹಾಗೂ ತನ್ನ ಪ್ರಮಥಗಣ ಪರಿವಾರದೊಂದಿಗೆ ವಾಸ ಮಾಡಿದ್ದಾನೆ. ಅಲ್ಲಿ ಹರಿಯುವ ಮಂದಾಕಿನಿ ಎಂಬ ಹೆಸರಿನ ಗಂಗಾನದಿಯಲ್ಲಿ ಬಂಗಾರ ಬಣ್ಣದ ತಾವರೆಗಳೂ, ಸುಗಂಧಬೀರುವ ಕನ್ನೈದಿಲೆಗಳೂ, ನೀಲಿಬಣ್ಣದ ಕಮಲಗಳೂ ಸೌರಭವನ್ನು ಸೂಸುತ್ತ ಅರಳಿ ನಿಂತಿವೆ. ಅಲ್ಲಿ ಕನಕನಂದಾ ಎಂಬ ಹೆಸರಿನ ತಿಳಿನೀರಿನ ತರಂಗಿಣಿಯು ಹರಿಯುತ್ತಲಿದೆ. ಅಲ್ಲಿ ತಪಸ್ವಿಗಳಾದ ಬ್ರಾಹ್ಮಣರಿಂದಲೂ ಪಶುಪಕ್ಷಿಗಳಿಂದಲೂ ಕೂಡಿದ ಒಂದು ವನ ಇರುವುದು. ಆ ವನದಲ್ಲಿಯು ಅತ್ಯಂತ ಉನ್ನತವಾಗಿರುವ ಒಂದು ಶಿವಾಲಯದಲ್ಲಿ ಪಾರ್ವತೀಸಹಿತನಾದ ಪರಮೇಶ್ವರನು ತನ್ನ ರುದ್ರಪುರಿ ಎಂಬ ಪಟ್ಟಣದ ಹೊರ ಅಂಗಣದಲ್ಲಿ ದೇವೀ ಸಹಿತನಾಗಿ ನೂರಾರು ರೂಪಗಳನ್ನು ತೆಗೆದುಕೊಂಡು ತನ್ನ ಗಣಗಳೊಡನೆ ಕ್ರೀಡಿಸುತ್ತಿರುತ್ತಾನೆ. ಆದುದರಿಂದ ಅದು ಶಿವಕ್ಷೇತ್ರ ಎಂದು ಹೆಸರಾಗಿದೆ.

*ಇತಿ ಲಿಂಗಮಹಾಪುರಾಣ ಪೂರ್ವಾರ್ಧದ ದೇವಕೂಟ ಮುಂತಾದ ಕಡೆಗಳಲ್ಲಿ ಶಿವಾಲಯ ವಿವರಣ ಎಂಬ ಐವತ್ತೊಂದನೆಯ ಅಧ್ಯಾಯ ಮುಗಿದುದು*

—o—

**ಸೂತ :-** ಸರೋವರಗಳಿಂದ ಹುಟ್ಟಿದ ಲೆಕ್ಕವಿಲ್ಲದಷ್ಟು ನದಿಗಳು ಹೆಚ್ಚು ನೀರುಳ್ಳವುಗಳಾಗಿ ಪ್ರತಿಯೊಂದು ವರ್ಷಭಾಗದಲ್ಲಿಯೂ, ಪೂರ್ವಾದಿ ನಾಲ್ಕು ದಿಕ್ಕುಗಳಿಗೂ ಹರಿಯುತ್ತಿರುವುವು. ಉಮಾದೇವೀ ಸಹಿತನಾದ ಪರಮೇಶ್ವರನನ್ನೇ ಆಕಾಶ, ಸಮುದ್ರ ಎಂದು ವೇದವು ಹೇಳುವುದು. ಪರಮೇಶ್ವರನೇ ಸಮಸ್ತಪ್ರಾಣಿಗಳಿಗೂ ಆಶ್ರಯನಾಗಿ, ದೇವತೆಗಳಿಗೆ ಅಮೃತದ ಗಣಿಯಾಗಿರುವನು. ಇಂತಹ ಪರಮೇಶ್ವರನಿಂದ ಆಕಾಶದಲ್ಲಿ ಹರಿಯುವ ಅಮೃತದ ನೀರುಳ್ಳ ಪುಣ್ಯಕರವಾದ ನದಿಯೂ ಏಳನೆಯ ವಾಯು ಮಾರ್ಗದಿಂದ ಹೊರಟಿರುವುದು. ಆ ಆಕಾಶಗಂಗೆಯು ಪ್ರಕಾಶವುಳ್ಳ ಗ್ರಹಗಳನ್ನು ಅನುಸರಿಸಿ ಅವುಗಳಿಗೂ ಅವಕಾಶವನ್ನು ಮಾಡಿಕೊಡುವದು. ಆಕಾಶದಲ್ಲಿರುವ ಅನೇಕ ಕೋಟಿ ನಕ್ಷತ್ರಗಳಿಂದ ಕೂಡಿ ಉಮಾಸಹಿತನಾದ ಪರಮೇಶ್ವರನು ಹೇಗೆ ಸರ್ವವ್ಯಾಪಿಯೋ ಹಾಗೆ ಸಮಸ್ತ ದಿಕ್ಕುಗಳಲ್ಲಿಯೂ ವ್ಯಾಪಿಸಿ ಯಾವಾಗಲೂ ಆ ದೇವನದಿಯು ಹರಿಯುತ್ತಲಿರುವುದು.

ಎಂಬತ್ತು ನಾಲ್ಕು ಸಾವಿರ ಯೋಜನ ವಿಸ್ತಾರವಾದ ಮತ್ತು ಎತ್ತರವಾದ ಮಹಾಮೇರು ಪರ್ವತವು ಶಿವನ ಕ್ರೀಡೆಗೆ ಮನೋಹರವಾದ ಪ್ರದೇಶವಾಗಿರುವುದು. ಅಲ್ಲಿಯೇ ದೇವೀ ಸಹಿತನಾದ ಶಿವನು ತನ್ನ ಗಣೇಶ್ವರರೊಡನೆ ಬಹಳಕಾಲದಿಂದ ಕ್ರೀಡಿಸುತ್ತಿರುವನು. ಆ ಕಾರಣದಿಂದ ಪುಣ್ಯಕರವಾದ ನೀರುಳ್ಳ ಶುಭ್ರವಾದ ಆ ದೇವಗಂಗಾನದಿಯು ಮೇರುಪರ್ವತವನ್ನು ಪ್ರದಕ್ಷಿಣೆಯಾಗಿ ಸುತ್ತಿಕೊಂಡು ಹರಿಯುತ್ತಿರುವುದು. ಆ ದೇವಗಂಗಾನದಿಯು ವಾಯುವಿನ ವೇಗದಿಂದಲೂ ತನ್ನ ವೇಗದಿಂದಲೂ ನೀರನ್ನು ವಿಭಾಗ ಮಾಡಿಕೊಂಡು ಮೇರು ಪರ್ವತದ ನಾಲ್ಕು ಶಿಖರಗಳ ನಡುವೆ ಬಿದ್ದಿತು. ಆ ಪ್ರವಾಹವು ಭಾಗವಾಗಿ ಆ ಪರ್ವತವನ್ನೆಲ್ಲವನ್ನೂ ಸುತ್ತಲೂ ಬಳಸಿ ದೇವದೇವನಾದ ಶಿವನ ಅಪ್ಪಣೆಯಿಂದ ಸಮುದ್ರವನ್ನು ಪ್ರವೇಶಿಸಿತು. ಈ ದೇವಗಂಗಾನದಿಯಿಂದ ಹೊರಟ ನದಿಗಳು ಸಕಲ ದ್ವೀಪಗಳಲ್ಲಿಯೂ, ಪರ್ವತಗಳಲ್ಲಿಯೂ, ವರ್ಷ ಭಾಗಗಳಲ್ಲಿಯೂ ಲೆಕ್ಕವಿಲ್ಲದಷ್ಟು ಇರುವುವು. ಆಕಾಶದಿಂದ ಭೂಮಿಗೆ ಬಂದುದರಿಂದ ಈ ನದಿಗೆ ದೇವಗಂಗೆ ಎಂದು ಹೆಸರಾಯಿತು.

ಕೇತುಮಾಲ ವರ್ಷದಲ್ಲಿರುವ ಜನರೆಲ್ಲರೂ ಕಪ್ಪು ಬಣ್ಣದವರು. ಸ್ತ್ರೀಯರು ಕರಿಯ ನೈದಿಲೆಯ ಬಣ್ಣದವರು. ಎಲ್ಲರೂ ಹಲಸಿನ ಹಣ್ಣನ್ನೇ ಆಹಾರ ಮಾಡುವರು. ಅವರ ಆಯುಸ್ಸು ಹತ್ತು ಸಾವಿರ ವರ್ಷಗಳು. ಭದ್ರಾಶ್ವವರ್ಷದಲ್ಲಿರುವ ಜನರು ಬಿಳಿಯ ಬಣ್ಣದವರು. ಸ್ತ್ರೀಯರು ಬೆಳದಿಂಗಳ ಕಾಂತಿಯಂತಿರುವರು. ಕಾಲದಲ್ಲಿ ಪಕ್ವವಾದ ಮಾವಿನಹಣ್ಣನ್ನು ತಿಂದು ಜೀವಿಸುತ್ತಿರುವರು. ಅವರ ಮನಸ್ಸಿನ ಆತಂಕವಿಲ್ಲದೆ ಸ್ತ್ರೀ ಪುರುಷರು ಕ್ರೀಡಾಸಕ್ತರಾಗಿ ಶಿವನನ್ನುಧ್ಯಾನಿಸುತ್ತಾ ಹತ್ತು ಸಾವಿರವರ್ಷ ಬದುಕುವರು. ಹೆಚ್ಚು ಸುವರ್ಣವುಳ್ಳವರಾಗಿ ಈಶ್ವರಾರ್ಪಣ ಬುದ್ಧಿಯಿಂದ ಸಕಲಕಾರ್ಯವನ್ನೂ ಮಾಡುವರು. ರಮಣಕದ್ವೀಪದಲ್ಲಿ ಪ್ರಾಣಿಗಳೆಲ್ಲರೂ ಆಲದ ಹಣ್ಣನ್ನು ತಿಂದು

ಜೀವಿಸುತ್ತಿರುವರು. ಅಲ್ಲಿರುವ ಮನುಜರಿಗೆ ಹನ್ನೊಂದು ಸಾವಿರದ ಐನೂರು ವರ್ಷಗಳು ಆಯುಸ್ಸಿರುವುದು. ಎಲ್ಲರೂ ಪರಿಶುದ್ಧರಾಗಿ ಶಿವನ ಧ್ಯಾನದಲ್ಲಾಸಕ್ತರಾಗಿರುವರು. ಹಿರಣ್ಮಯ ವರ್ಷದ ಮಹಾಪುಣ್ಯವಂತರಾದ ಜನರು ಹಿರಣ್ಮಯವೆಂಬ ವನದಲ್ಲಿ ವಾಸಮಾಡುತ್ತ ಹನ್ನೆರಡು ಸಾವಿರದ ಐನೂರು ವರ್ಷ ಬದುಕುವರು. ಅವರು ಅರಳಿಯ ಹಣ್ಣನ್ನು ತಿಂದು ಜೀವಿಸುತ್ತಿರುವರು. ಹೆಚ್ಚು ಚಿನ್ನಗಳುಳ್ಳವರಾಗಿದ್ದರೂ, ಈಶ್ವರಾರ್ಪಣ ಬುದ್ಧಿಯುಳ್ಳವರಾಗಿ, ಆಸೆಯಿಲ್ಲದವರಾಗಿ ಕರ್ಮವನ್ನು ಮಾಡುತ್ತಿರುವರು.

ಕುರುವರ್ಷದಲ್ಲಿ ವಾಸವಾಗಿರುವ ಕುರುಗಳು ಸ್ವರ್ಗಲೋಕದಲ್ಲಿ ಸುಖವನ್ನನುಭವಿಸಿ ಬಂದು ಜನ್ಮವನ್ನೆತ್ತಿದವರು. ಅವರು ಸ್ತ್ರೀ ಪುರುಷ ಸಂಬಂಧದಿಂದ ಹುಟ್ಟಿದವರು. ವಿಶೇಷವಾಗಿ ಹಾಲುಳ್ಳವರು. ಹಾಲೇ ಇವರ ಆಹಾರವು. ಆ ಪ್ರದೇಶದಲ್ಲಿ ಸ್ತ್ರೀ ಪುರುಷರು ಪರಸ್ಪರ ಪ್ರೀತಿಯುಳ್ಳವರಾಗಿ ಚಕ್ರವಾಕಪಕ್ಷಿಗಳಂತೆ ಅಗಲದೇ ಇರುವರು. ರೋಗ ದುಃಖಗಳಿಲ್ಲದೇ ಯಾವಾಗಲೂ ಸುಖಾನುಭವವುಳ್ಳವರಾಗಿರುವರು. ಅವರು ಹದಿನಾಲ್ಕುವರೆ ಸಾವಿರವರ್ಷ ಬದುಕುವರು. ಅತ್ಯಂತ ಶಕ್ತರಾಗಿ ಪರಸ್ತ್ರೀಯರ ಸಹವಾಸವಿಲ್ಲದವರಾಗಿರುವರು. ಸ್ವರ್ಗವಾಸಿಗಳಾದ ಆ ಕುರುಗಳು ಸ್ತ್ರೀಪುರುಷರಿಬ್ಬರೂ ಜೊತೆಯಲ್ಲಿ ಮರಣ ಹೊಂದುವರು. ಅವರು ಜೀವಿಸಿರುವವರೆಗೂ ಸಂತೋಷಚಿತ್ತರಾಗಿ ಸಮಸ್ತ ಅಮೃತಾನ್ನವನ್ನೂ ಭೋಜನಮಾಡುತ್ತಾ ಯಾವಾಗಲೂ ಯೌವನವಂತರಾಗಿ ಚಂದ್ರನಂತೆ ಕಾಂತಿಯುಕ್ತರಾಗಿ ಸಕಲಾಭರಣಗಳಿಂದಲೂ ಮೇಘದಂತೆ ಕಪ್ಪಾದ ತಮ್ಮ ಶರೀರವನ್ನು ಅಲಂಕರಿಸಿಕೊಂಡಿರುವರು. ಜಂಬೂದ್ವೀಪದಲ್ಲಿರುವ ಕುರುವರ್ಷವೆಂಬ ಭಾಗವು ಅತ್ಯಂತ ಪುಣ್ಯಕರವಾಗಿರುವುದು. ಅಲ್ಲಿ ಚಂದ್ರಪ್ರಭವೆಂಬ ಚಂದ್ರಶೇಖರನಾದ ಶಿವನ ವಿಮಾನವಿರುವುದು.

ಭಾರತವರ್ಷದಲ್ಲಿರುವ ಮನುಷ್ಯರು ಪುಣ್ಯವಂತರು. ಅವರವರ ಕರ್ಮಫಲಾನುಸಾರವಾಗಿ ಆಯುಸ್ಸನ್ನು ಪಡೆದವರಾಗಿರುವರು. ಸಾಮಾನ್ಯವಾಗಿ ನೂರು ವರ್ಷ ಆಯುಸ್ಸು ಎಲ್ಲರಿಗೂ ಇರುವುದು. ಜನರು ಬಗೆಬಗೆಯ ಬಣ್ಣದ ಚಿಕ್ಕ ಶರೀರ ಉಳ್ಳವರಾಗಿರುವರು ಅನೇಕ ದೇವತೆಗಳನ್ನು ಪೂಜಿಸುತ್ತಿರುವರು. ತಾವು ಮಾಡಿದ ಕರ್ಮಗಳ ಫಲವನ್ನು ಅನುಭವಿಸುವರು. ತಿಳುವಳಿಕೆಯುಳ್ಳವರಾಗಿ ಅನೇಕ ಪ್ರಯೋಜನವನ್ನು ಪಡೆಯುವವರು. ಆದರೆ ಶರೀರದ ಬಲವು ಕಡಿಮೆಯಾಗಿ ಸ್ವಲ್ಪ ಸುಖಾನುಭವವುಳ್ಳವರಾಗಿರುವರು. ಭರತಖಂಡದಲ್ಲಿ ಇಂದ್ರ, ಕಶೇರು, ತಾಮ್ರ, ಗಭಸ್ತಿಮಾನ್, ನಾಗ, ಸೌಮ್ಯ, ಗಾಂಧರ್ವ, ವಾರುಣ ಎಂಬ ದ್ವೀಪಗಳಿರುವುವು. ಜನರು ಆ ದ್ವೀಪವಾಸಿಗಳಾಗಿರುವರಲ್ಲದೆ ಕೆಲವರು ಮ್ಲೇಚ್ಛರಾಗಿಯೂ, ಪುಲಿಂದರಾಗಿಯೂ, ನಾನಾ ವಿಧವಾದ ಜಾತಿಗಳಲ್ಲಿ ಹುಟ್ಟುವರು. ಭರತಖಂಡದ ಪೂರ್ವದಿಕ್ಕಿನಲ್ಲಿ ಕಿರಾತರೂ, ಪಶ್ಚಿಮದಲ್ಲಿ ಯವನರೂ, ಮಧ್ಯದಲ್ಲಿ ಬ್ರಾಹ್ಮಣ, ಕ್ಷತ್ರಿಯ ವೈಶ್ಯರೂ, ಎಲ್ಲಕಡೆಯಲ್ಲಿಯೂ ಶೂದ್ರರೂ ವಾಸವಾಗಿರುವರು. ಬ್ರಾಹ್ಮಣಾದಿ ಮೂರು ವರ್ಣದವರು ಕ್ರಮವಾಗಿ ಯಜ್ಞ, ಯುದ್ಧ, ವ್ಯಾಪಾರ, ಇವುಗಳಿಂದ ಜೀವನವನ್ನು ನಡೆಸುತ್ತಾ ಮೂರು ವರ್ಣದವರೂ ಪರಸ್ಪರ ಉಪಕಾರ ಪ್ರತ್ಯುಪಕಾರಗಳನ್ನು ಮಾಡುತ್ತಾ ಒಟ್ಟಿಗೆ ವ್ಯವಹರಿಸುತ್ತಿರುವರು. ಮೂರು ವರ್ಣದವರೂ ಧರ್ಮ, ಅರ್ಥ, ಕಾಮ ಎಂಬ ಪುರುಷಾರ್ಥಗಳ ಸಾಧನೆಗಾಗಿ ಕರ್ಮಗಳನ್ನು ಮಾಡುತ್ತಾ ಒಂದು

ಉದ್ದೇಶವೂ, ಅಭಿಮಾನವೂ ಉಳ್ಳವರಾಗಿ ತಂತಮ್ಮ ಆಶ್ರಮಗಳಿಗೆ ವಿಹಿತವಾದ ಕರ್ಮಗಳನ್ನು ನಡೆಸಿಕೊಂಡು ಬರುತ್ತಿರುವರು. ಈ ಭರತ ಖಂಡದಲ್ಲಿಯೇ ಸ್ವರ್ಗಫಲಾನುಭವಕ್ಕಾಗಿಯೂ, ಮೋಕ್ಷಕ್ಕಾಗಿಯೂ ಮನುಷ್ಯರೆಲ್ಲರೂ ಕರ್ಮಗಳನ್ನು ಮಾಡುವರು. ಇವರಿಗೆ ಯುಗ ಧರ್ಮಗಳಿರುವುವು. ಮತ್ತೆಲ್ಲಿಯೂ ಯುಗ ಧರ್ಮವಾಗಲೀ ವಿಹಿತ ಕರ್ಮವಾಗಲೀ ಇರುವುದಿಲ್ಲ.

ಕಿಂಪುರುಷವರ್ಷದಲ್ಲಿ ಮನುಷ್ಯರು ಹತ್ತು ಸಾವಿರವರ್ಷಜೀವಿಸುವರು. ಎಲ್ಲರೂ ಚಿನ್ನದಂತೆ ಮೈಬಣ್ಣವುಳ್ಳವರು. ಸ್ತ್ರೀಯರು ಅಪ್ಸರಸ್ತ್ರೀಯರಿಗೆ ಸಮಾನರು. ಎಲ್ಲರೂ ರೋಗದುಃಖಗಳಿಲ್ಲದೇ ಶಿವನನ್ನು ಧ್ಯಾನಿಸುತ್ತಾ ಶುದ್ಧವಾದ ಸತ್ವಗುಣದಿಂದ ಕೂಡಿರುವರು. ಅವರೆಲ್ಲರೂ ಅರಳೀ ಹಣ್ಣನ್ನು ತಿಂದು ಜೀವಿಸುವರು. ಹರಿವರ್ಷದಲ್ಲಿರುವ ಮನುಷ್ಯರು ಬೆಳ್ಳಿಯಂತೆ ಮೈಯುಳ್ಳವರು. ಎಲ್ಲರೂ ದೇವಲೋಕದಿಂದ ಬಂದವರು. ದೇವತೆಗಳಂತೆಯೇ ಆಕಾರವುಳ್ಳವರು. ಸರ್ವೇಶ್ವರನಾದ ಶಿವನನ್ನು ಪೂಜಿಸುವರು. ಕಬ್ಬಿನರಸವನ್ನು ಕುಡಿದು ಜೀವಿಸುವರು. ಅವರಿಗೆ ಮುಪ್ಪು ಬರುವುದಿಲ್ಲ. ಹತ್ತು ಸಾವಿರ ವರ್ಷಗಳವರೆಗೆ ಬದುಕುವರು.

ಇಲಾವೃತವೆಂಬ ವರ್ಷದಲ್ಲಿ ಸೂರ್ಯನ ತಾಪವಿಲ್ಲ. ಚಂದ್ರ ಸೂರ್ಯ ನಕ್ಷತ್ರಗಳ ಪ್ರಕಾಶವಿಲ್ಲ. ಅಲ್ಲಿರುವ ಜನರು ದೇವಲೋಕದಿಂದ ಬಂದವರು. ಮುಪ್ಪು ಮರಣಗಳಿಲ್ಲದವರು. ಕಮಲದಂತೆ ಮುಖವೂ, ಕಣ್ಣುಗಳೂ, ಶರೀರದ ವಾಸನೆಯೂ ಉಳ್ಳವರು. ಶಿವನನ್ನೇ ಧ್ಯಾನಮಾಡುತ್ತಾ ನೇರಳೆಯ ಹಣ್ಣಿನ ರಸವನ್ನೇ ಆಹಾರ ಮಾಡುತ್ತಾ ಶಕೆ, ಚಳಿ ಮುಂತಾದವುಗಳ ಬಾಧೆಗಳಿಲ್ಲದೇ ಇರುವರು. ಆ ಜನರಿಗೆ ಹದಿಮೂರು ಸಾವಿರ ವರ್ಷಗಳ ಆಯುಸ್ಸಿರುವುದು. ನೇರಳೇ ಹಣ್ಣಿನ ರಸವನ್ನು ಕುಡಿದ ಇವರನ್ನು ಮುಪ್ಪು ಮುಟ್ಟದು. ಹಸಿವಾಗಲೀ ಆಯಾಸವಾಗಲೀ ಅಪಮೃತ್ಯುವಾಗಲೀ ಇವರನ್ನು ತೊಂದರೆಗೊಳಿಸದು. ಅಲ್ಲಿ ಜಂಬೂನದವೆಂಬ ಚಿನ್ನವು ದೇವತೆಗಳಿಗೆ ಆಭರಣವಾಗಿರುವುದು. ಈ ಆಭರಣವೇ ಅವರಿಗೆ ಸೂರ್ಯನಂತೆ ಬೆಳಕನ್ನು ಕೊಡುವುದು.

ಈ ರೀತಿಯಲ್ಲಿ ಒಂಬತ್ತುವರ್ಷ ಭಾಗಗಳಲ್ಲಿ ವಾಸಮಾಡುವವರ ವರ್ಣ, ಆಯುಸ್ಸು, ಆಹಾರ ಮೊದಲಾದವುಗಳನ್ನು ಸಂಕ್ಷೇಪವಾಗಿ ಹೇಳಲ್ಪಟ್ಟಿವೆ. ಹೇಮಕೂಟ ಪರ್ವತದಲ್ಲಿ ಗಂಧರ್ವರೂ ಅಪ್ಸರಸ್ತ್ರೀಯರೂ ವಾಸವಾಗಿರುವರು. ನಿಷಧ ಪರ್ವತದಲ್ಲಿ ಶೇಷ, ವಾಸುಕಿ, ತಕ್ಷಕ ಮುಂತಾದ ಸಮಸ್ತ ನಾಗರೂ ಇರುವರು. ವೈಡೂರ್ಯ, ರತ್ನ ಇವುಗಳು ತುಂಬಿರುವ ನೀಲಪರ್ವತದಲ್ಲಿ ಯಜ್ಞಕರ್ಮದಿಂದ ದೇವತ್ವವನ್ನು ಪಡೆದ ಮಹಾಬಲಶಾಲಿಗಳಾದ ಮೂವತ್ತುಮೂರು ದೇವತೆಗಳು ಕ್ರೀಡಿಸುತ್ತಿರುವರು. ಅಲ್ಲದೆ ಬ್ರಹ್ಮರ್ಷಿಗಳೂ ಸಿದ್ಧರೂ ಅಲ್ಲಿ ವಾಸವಾಗಿರುವರು.

ಶ್ವೇತಪರ್ವತವು ದೈತ್ಯರಿಗೂ, ದಾನವರಿಗೂ ವಾಸಸ್ಥಾನವಾಗಿರುವುದು. ಶೃಂಗ ಪರ್ವತದಲ್ಲಿ ಪಿತೃದೇವತೆಗಳು ಯಾವಾಗಲೂ ಇರುವರು. ಹಿಮವತ್ಪರ್ವತವು ಯಕ್ಷರಿಗೂ, ಭೂತಗಳಿಗೂ ವಾಸಸ್ಥಾನವಾಗಿರುವುದು. ಸಮಸ್ತ ಪರ್ವತಗಳಲ್ಲಿಯೂ, ವರ್ಷಗಳಲ್ಲಿಯೂ ವನಗಳಲ್ಲಿಯೂ ಮಹಾದೇವನಾದ ಶಿವನು, ದೇವೀ, ಹರಿ, ಬ್ರಹ್ಮ, ನಂದಿಗಳೊಡನೆ ಸಮಸ್ತಗಣಗಳಿಂದಕೂಡಿ ವಾಸಿಸುವನು. ನೀಲ, ಶ್ವೇತ, ತ್ರಿಶೃಂಗವೆಂಬ

ಮೂರು ಪರ್ವತಗಳಲ್ಲಿ ಮಹಾಮಹಿಮನಾದ ನೀಲಲೋಹಿತನೆಂಬ ರುದ್ರನು, ಸಿದ್ಧರು, ದೇವತೆಗಳು, ಪಿತೃದೇವತೆಗಳು ಇವರುಗಳಿಂದಕೂಡಿ ಯಾವಾಗಲೂ ವಾಸವಾಗಿರುವನು. ನೀಲಪರ್ವತದಲ್ಲಿ ವೈಡೂರ್ಯ, ರತ್ನಗಳು ವಿಶೇಷವಾಗಿರುವುವು. ಶ್ವೇತ ಪರ್ವತವು ಬೆಳ್ಳಗಿರುವುದು. ತ್ರಿಶೃಂಗ ಪರ್ವತವು ಚಿನ್ನದ ಬಣ್ಣದ್ದಾಗಿಯೂ ನವಿಲುಗರಿಯ ಬಣ್ಣ ಉಳ್ಳದ್ದಾಗಿಯೂ ಇರುವುದು. ಈ ಪರ್ವತ ಶ್ರೇಷ್ಠಗಳು ಜಂಬೂದ್ವೀಪದಲ್ಲಿ ಒಂದು ಕ್ರಮದಿಂದ ಇರುವವು.

*ಲಿಂಗಮಹಾಪುರಾಣ ಪೂರ್ವಾರ್ಧದ ಭೂಮಂಡಲದ ವಿವರ ವಿಶೇಷಗಳ ವರ್ಣನೆ ಎಂಬ ಐವತ್ತೆರಡನೆಯ ಅಧ್ಯಾಯ ಮುಗಿದುದು*



## ಭಾರತವರ್ಷದ ಅರ್ಥ ಮತ್ತು ಬ್ರಹ್ಮಾಂಡ ವಿವರ | ಅಧ್ಯಾಯ - ೫೩

**ಸೂತ :-** ಪ್ಲಕ್ಷಾದಿ ಏಳು ದ್ವೀಪಗಳಲ್ಲಿಯೂ, ದೇಶವನ್ನು ಬೇರೆಯಾಗಿ ವಿಭಾಗ ಮಾಡುವ, ಎತ್ತರವಾಗಿಯು ಅಗಲವಾಗಿಯೂ ಇರುವ. ದಿಕ್ಕುದಿಕ್ಕಿಗೂ ವ್ಯಾಪಿಸಿರುವ ಪರ್ವತಗಳು ಇವೆ. ಪ್ಲಕ್ಷ ದ್ವೀಪದಲ್ಲಿ ಏಳು ಮಹಾಪರ್ವತಗಳು ಇರುತ್ತವೆ. ಗೋಮಧಕ, ಚಾಂದ್ರ ನಾರದ ದುಂದುಭಿ ಸೋಮಶ, ಸುಮನ, ವೈಭ್ರಾಜ ಎಂಬುವು ಕ್ರಮವಾಗಿ ಏಳು ಪರ್ವತಗಳ ಹೆಸರು. ಆ ಪ್ಲಕ್ಷದೀಪದಲ್ಲಿ ಈ ಏಳುಪರ್ವತಗಳೇ ವಿಶೇಷವಾದವುಗಳು. ಶಾಲ್ಮಲೀ ದ್ವೀಪದಲ್ಲಿರುವ ಏಳು ಪರ್ವತಗಳೆಂದರೆ ಕುಮುದ, ಉತ್ತಮ, ಬಲಾಹಕ, ದ್ರೋಣ, ಕಂಕ ಮಹಿಷ, ಕಕುದ್ಮಾನ್ ಎಂಬವುಗಳು, ಕುಶದ್ವೀಪದಲ್ಲಿ ಏಳುಕುಲಪರ್ವತಗಳೂ, ದ್ವೀಪಗಳೂ ಇವೆ. ಅವುಗಳ ಹೆಸರುಗಳೆಂದರೆ ವಿದ್ರುಮ, ಹೇಮಪರ್ವತ, ದ್ಯುತಿಮಾನ್, ಪುಷ್ಪಿತ, ಕುಶೇಶಯ, ಹರಿಗಿರಿ, ಮಂದರ. ಆ ಮಂದರ ಪರ್ವತದಲ್ಲಿ ಶಿವನು ವಾಸವಾಗಿರುವನು. ಮಂದಾ ಎಂದರೆ ನೀರಿಗೆ ಹೆಸರು. ಇದರಲ್ಲಿ ನೀರು ಇರುವುದರಿಂದ ಮಂದರ ಎಂದು ಹೆಸರಾಯಿತು. ಈ ಮಂದರ ಪರ್ವತದಲ್ಲಿ ಪ್ರಪಂಚಕ್ಕೆ ಒಡೆಯನಾದ ನಿಷ್ಕಳಂಕವಾದ, ವೃಷಭವನ್ನೇ ಧ್ವಜ ಚಿನ್ಹೆಯಾಗಿಯುಳ್ಳ ಶಿವನು ಪಾರ್ವತಿ, ನಂದೀ, ಇವರೊಡನೆ ಇಲ್ಲಿಯ ಉತ್ತಮವಾದ ಚಿನ್ನದ ಗೃಹದಲ್ಲಿ ವಾಸಮಾಡುತ್ತಿರುವನು. ಪೂರ್ವದಲ್ಲಿ ಮಂದರಪರ್ವತವು. ಅವಿಮುಕ್ತವೆಂಬ ಕ್ಷೇತ್ರದಲ್ಲಿ ಈಶ್ವರನನ್ನು ಕುರಿತು ತಪಸ್ಸುಮಾಡಿತು. ಆ ತಪಸ್ಸಿನಿಂದ ಸಂತುಷ್ಟನಾದ ಪರಮೇಶ್ವರನು ವರವನ್ನು ಕೊಟ್ಟನು. ವರವೇನೆಂದರೆ ಪಾರ್ವತಿಯೊಡನೆ ಈಶ್ವರನು ಮಂದರಪರ್ವತದಲ್ಲಿ ವಾಸಮಾಡಬೇಕೆಂದು. ಅದೇ ಅದರ ಪ್ರಾರ್ಥನೆಯೂ ಆಗಿತ್ತು. ಆಗ ಮಹಾದೇವನು ಆ ಅವಿಮುಕ್ತ ಕ್ಷೇತ್ರದಿಂದ ಹೊರಟು ಬಂದು ಪಾರ್ವತಿಯೊಡನೆಯೂ ನಂದಿಯೊಡನೆಯೂ, ಕೂಡಿ ಪ್ರಮಥಗಣಗಳೊಡನೆಯೂ ಮಂದರಪರ್ವತದಲ್ಲಿ ವಾಸಮಾಡುತ್ತಿರುವನು. ವರವನ್ನು ಕೊಟ್ಟಿದ್ದರಿಂದ ಮಂದರ ಪರ್ವತವನ್ನು ಎಂದಿಗೂ ಶಿವನು ಬಿಡುವುದಿಲ್ಲ.

ಕ್ರೌಂಚದ್ವೀಪದಲ್ಲಿ ಕ್ರೌಂಚವೇ ಮೊದಲಾದ ಏಳು ಕುಲಪರ್ವತಗಳಿರುವುವು. ಕ್ರೌಂಚ, ವಾಮನಕ, ಅಂಧಕಾರ. ದಿವಾವೃತ್, ವಿವಿಂದ, ಪುಂಡರೀಕ, ದುಂದುಭಿಸ್ವನ, ಇವೆಲ್ಲವೂ ರತ್ನಮಯವಾದುವುಗಳು, ಶಾಕದ್ವೀಪದಲ್ಲಿ ಏಳು ಪರ್ವತಗಳಿವೆ. ಉದಯ, ರೈವತ, ಶ್ಯಾಮಕ, ರಜತ, ಮನೋಹರವಾದ ಆಂಬಿಕೇಯ, ಎಲ್ಲ ಔಷಧಿಗಳಿಂದಲೂ ತುಂಬಿರುವ ರಮ್ಯಪರ್ವತ, ವಾಯುವಿನ ಉತ್ಪತ್ತಿ ಸ್ಥಾನವಾದ ಕೇಸರಿ. ಇವುಗಳೆ ಏಳು ಪರ್ವತಗಳು. ಪುಷ್ಪರದ್ವೀಪದಲ್ಲಿ ಚಿತ್ರ ವಿಚಿತ್ರವಾಗಿಯೂ ರತ್ನಗಳಿಂದ ಕೂಡಿಯೂ ಇರುವ ಶಿಖರಗಳಿಂದ ಶೋಭಿಸುತ್ತಿರುವ, ದೊಡ್ಡ ದೊಡ್ಡ ಕಲ್ಲು ಬಂಡೆಗಳಿಂದ ಕೂಡಿರುವ ಒಂದೇ ಒಂದು ಮಹಾಶಿಲವೆಂಬ ಪರ್ವತವಿರುವದು. ಆ ಪುಷ್ಕರದ್ವೀಪದ ಪೂರ್ವಾರ್ಧದಲ್ಲಿ ದೊಡ್ಡದಾಗಿರುವ ಚಿತ್ರವರ್ಣವಾಗಿರುವ ಶಿಖರಗಳುಳ್ಳ ಆ ಮಹಾಶಿಲಪರ್ವತವು ಹಬ್ಬಿದೆ. ಅದು ಐವತ್ತು ಸಾವಿರ ಯೋಜನ ಮೇಲಕ್ಕೂ, ಮುವತ್ತು ನಾಲ್ಕು ಸಾವಿರ ಯೋಜನ ಕೆಳಕ್ಕೂ ಹಬ್ಬಿ ದೊಡ್ಡ ಪರ್ವತವಾಗಿರುವುದು. ಮತ್ತು ಆ ದ್ವೀಪದ ಅರ್ಧವನ್ನು ಆವರಿಸಿ ಮಾನಸಕ್ಕೆ ಉತ್ತರ ತಟದ ಸಮೀಪದಲ್ಲಿದ್ದು ಆಗ ತಾನೇ ಹುಟ್ಟಿದ ಚಂದ್ರನಂತೆ ಪ್ರಕಾಶಿಸುತ್ತಾ ಇದೆ. ಎತ್ತರದಲ್ಲಿ ಐವತ್ತುಸಾವಿರಯೋಜನವೂ, ಅಗಲದಲ್ಲಿ ಅಷ್ಟೇ ವಿಸ್ತೀರ್ಣವುಳ್ಳದ್ದಾಗಿರುವುದು. ಅದೇ ಪರ್ವತವು ದ್ವೀಪದ ಉತ್ತರಾರ್ಧದಲ್ಲಿ ಮಾನಸವೆಂಬ ಹೆಸರಿನಿಂದ ಹಬ್ಬಿರುವುದು. ಒಂದೇ ಪರ್ವತವೇ ಸ್ಥಾನ ವಿಭಾಗದಿಂದ ಎರಡಾಗಿ ಭಾಗಿಸಲ್ಪಟ್ಟಿರುವುದು.

ಆ ಪುಷ್ಪರ ದ್ವೀಪದಲ್ಲಿ ಪುಣ್ಯಕರವಾದ ಮಂಗಳಕರವಾದ ಎರಡು ದೇಶಗಳಿವೆ. ಅವು ಮಾನಸಪರ್ವತವನ್ನು ಸುತ್ತಿಕೊಂಡು ಪ್ರಕಾಶಿಸುತ್ತವೆ. ಮಹಾವೀತ ಎಂಬ ಒಂದು ದೇಶವು ಮಾನಸಪರ್ವತದ ಒಳಭಾಗದಲ್ಲಿದೆ. ಸಿಹಿಯಾದ ನೀರಿನಿಂದ ಕೂಡಿದ ಉದಧಿಯಿಂದಲೂ ಪುಷ್ಕರದ್ವೀಪವು ಸುತ್ತುವರಿಯಲ್ಪಟ್ಟಿದೆ. ಅಲ್ಲಿರುವ ದ್ವೀಪವೂ ಪುಷ್ಪರದ್ವೀಪದಂತೆಯೇ ಸುತ್ತಲೂ ವಿಸ್ತಾರವುಳ್ಳದ್ದಾಗಿರುವದು. ಮತ್ತು ವಿಸ್ತಾರದಲ್ಲಿಯೂ ಸುತ್ತವರಿಯುವಿಕೆಯಲ್ಲಿಯೂ ಪುಷ್ಕರದ್ವೀಪಗಳು ಏಳು ಏಳು ಸಮುದ್ರಗಳಿಂದ ಆವೃತವಾಗಿರುವುವು. ದ್ವೀಪವು ಮುಗಿಯಲು ಏಳನೆಯ ಸಮುದ್ರವು ಸಿಕ್ಕುವುದು. ಈ ರೀತಿಯಾಗಿ ಸಮುದ್ರದ ಮಧ್ಯದಲ್ಲಿ ದ್ವೀಪಗಳಿರುವುದರಿಂದಲೂ ಸಮುದ್ರಗಳು ದ್ವೀಪಗಳನ್ನು ಆವರಿಸಿರುವುದರಿಂದಲೂ, ಪರಸ್ಪರ ದ್ವೀಪಗಳ ಮತ್ತು ಸಮುದ್ರಗಳ ಅಭಿವೃದ್ಧಿಯಾಗುವುದೆಂದು ತಿಳಿಯತಕ್ಕದ್ದು. ಆ ಪುಷ್ಕರದ್ವೀಪವನ್ನು ಆವರಿಸಿರುವ ದೊಡ್ಡದಾದ ಸಿಹಿ ನೀರಿನ ಸಮುದ್ರವು ಆ ದ್ವೀಪವನ್ನು ಸುತ್ತಿಕೊಂಡಿದೆ.

ಆ ಸಮುದ್ರದ ನಂತರ ಒಂದು ದೊಡ್ಡ ಏಕಶಿಲಾಪರ್ವತದಂತೆ ವಿಶಾಲವಾದ ಭೂಮಿಯ ಎರಡರಷ್ಟು ಕಾಂಚನೀ ಎಂಬ ದೇಶವಿದೆ. ಆ ದೇಶದ ನಂತರ ತನ್ನ ಎಲ್ಲೆಯನ್ನೂ ಸಹ ದಾಟಿ ಹಬ್ಬಿರುವ ಕೆಲವೆಡೆ ಪ್ರಕಾಶವಾಗಿಯೂ ಕೆಲವೆಡೆ ಅಪ್ರಕಾಶವಾಗಿಯೂ ಇರುವ ಲೋಕಾಲೋಕವೆಂಬ ಪರ್ವತವುಂಟು. ಈ ಲೋಕಾಲೋಕಗಿರಿಯು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೂ ಈ ಭೂಮಿಯು ಸ್ಥಿರವಾಗಿರುತ್ತದೆ. ಈ ಲೋಕಾಲೋಕಪರ್ವತವು ಎತ್ತರದಲ್ಲಿಯೂ ಅಗಲದಲ್ಲಿಯೂ, ಹತ್ತು ಸಾವಿರ ಯೋಜನ ವಿಸ್ತೀರ್ಣವುಳ್ಳದ್ದಾಗಿದೆ. ಆ ಪರ್ವತದ

ಪೂರ್ವಾರ್ಧದಲ್ಲಿ ಸೂರ್ಯನ ಕಿರಣಗಳು ಸಂಚರಿಸುವವು. ಅದುದರಿಂದ ಅಲ್ಲಿ ಲೋಕವಿದೆ. ಅದರ ಪಶ್ಚಿಮಾರ್ಧದಲ್ಲಿ ಯಾವಾಗಲೂ ಅಂಧಕಾರವಿರುವದರಿಂದ ಅಲ್ಲಿ ಅಲೋಕವಿರುವುದು. ಆದುದರಿಂದ ಈ ಪರ್ವತಕ್ಕೆ ಲೋಕಾಲೋಕವೆಂದು ಹೆಸರು ಬಂದಿದೆ. ಈ ರೀತಿಯಾಗಿ ಸಂಕ್ಷೇಪವಾಗಿ ಭೂಲೋಕದ ವಿಸ್ತಾರವು ಹೇಳಲ್ಪಟ್ಟಿತು. ಸೂರ್ಯಮಂಡಲದ ಪರ್ಯಂತ ಭೂಲೋಕವು ವ್ಯಾಪಿಸಿದೆ. ಸ್ವರ್ಲೋಕವಾದರೋ ಆ ಧ್ರುವ ಮಂಡಲದ ಪರ್ಯಂತವಾಗಿ ವ್ಯಾಪಿಸಿದೆ.

ವಾಯುವಿಗೆ ಏಳು ಚಕ್ರದ ಪಟ್ಟಗಳಿವೆ. ಅವುಗಳಿಗೆ ಕ್ರಮವಾಗಿ ಆವಹ, ಪ್ರವಹ, ಅನುವಹ, ಸಂವಹ, ವಿವಹ, ಪರಾವಹ, ಪರಿವಹವೆಂದು ಅನುಗತವಾದ ಹೆಸರುಗಳು. ಆವಹಕ್ಕೆ ಮೇಘಗಳೂ, ಪ್ರವಹಕ್ಕೆ ಸೂರ್ಯನೂ,ಅನುವಹಕ್ಕೆ ಚಂದ್ರನೂ, ಸಂವಹಕ್ಕೆ ನಕ್ಷತ್ರರಾಶಿಗಳೂ, ವಿವಹಕ್ಕೆ ಗ್ರಹಗಳೂ, ಪರಾವಹಕ್ಕೆ ಸಪ್ತರ್ಷಿಗಳೂ, ಪರಿವಹಕ್ಕೆ ಧ್ರುವ ನಕ್ಷತ್ರವೂ, ನೇಮಿಯನ್ನು ತಿರುಗಿಸತಕ್ಕವುಗಳು. ಮೇಲಿನಿಂದ ಹಿಡಿದು, ಭೂಮಿಯಿಂದ ಧ್ರುವಲೋಕ ಪರ್ಯಂತವಾಗಿ, ಹದಿನೈದು ನಿಯುತಯೋಜನದ ದೂರವು ನಿಯತ ಮಾಡಲ್ಪಟ್ಟಿದೆ. ಭೂಮಿಯ ಮೇಲಿಂದ ಅಷ್ಟೇ ದೂರದಲ್ಲಿ ಸೂರ್ಯ ಮಂಡಲವಿರುವುದು. ಅದರ ಮೇಲ್ಭಾಗದಲ್ಲಿ ಸೂರ್ಯನ ಷೋಡಶಸಹಸ್ರಯೋಜನವಾದ ರಥವಿರುವುದು. ಭೂಮಿಯ ಮೇಲಿನಿಂದ ಎಂಬತ್ತು ನಾಲ್ಕು ಸಾವಿರ ಯೋಜನ ಎತ್ತರವಾಗಿ ಮೇರು ಪರ್ವತವಿರುವದು. ಧ್ರುವಲೋಕದಿಂದ ಒಂದು ಕೋಟಿಯೋಜನದ ದೂರವಾದ ಮೇಲೆ ದೈನಂದಿನ ಪ್ರಳಯ ರಹಿತವಾದ ಮಹಲೋಕವು ಇರುವುದು.

ಮಹರ್ಲೋಕದಿಂದ ಮುಂದಕ್ಕೆ ಎರಡು ಕೋಟಿ ಯೋಜನ ಸಂಖ್ಯೆಯಷ್ಟು ದೂರ ಜನೋಲೋಕವು. ಜನೋಲೋಕದಿಂದ ಮುಂದಕ್ಕೆ ನಾಲ್ಕು ಕೋಟಿ ಯೋಜನದ ದೂರ ತಪೋಲೋಕವೂ ಇರುವವು. ತಪೋಲೋಕದಿಂದ ಆರು ಕೋಟಿ ಯೋಜನ ಸಂಖ್ಯೆಯಷ್ಟು ದೂರ ಹೋದರೆ ಬ್ರಹ್ಮಲೋಕವಿರುವುದು. ಈ ಬ್ರಹ್ಮಾಂಡದಲ್ಲಿ ಹೀಗೆ ಏಳು ಲೋಕಗಳಿರುವುವು. ಅತಲವಿತಲಾದಿ ಸಪ್ತತಲಗಳ ಕೆಳಗಡೆ ಘೋರಾ ಎಂಬ ನರಕದಿಂದ ಹಿಡಿದು ಮಾಯಾ ಎಂಬ ನರಕದವರೆಗೂ ಇಪ್ಪತ್ತೆಂಟು ಕೋಟಿ ನರಕಗಳಿವೆ. ಆ ನರಕಗಳಲ್ಲಿ ತಮ್ಮ ತಮ್ಮ ಕರ್ಮಫಲಗಳಿಗನುಸಾರವಾಗಿ. ಪಾಪಿಗಳು ಶಿಕ್ಷಿಸಲ್ಪಡುತ್ತಾರೆ. ಅವುಗಳಲ್ಲಿ ರೌರವದಿಂದ ಮೊದಲುಗೊಂಡು ಅವೀಚಿಯವರೆಗೂ ನರಕಗಳಿವೆ. ಅವುಗಳಲ್ಲಿ ಒಂದೊಂದರಲ್ಲಿ ಐದು ಐದು ಮುಖ್ಯವಾದ ನರಕಗಳು. ನಾನು ನಿಮಗೆ ಹಿಂದೆಯೇ ಮೊದಲು ಅಂಡವನ್ನೂ, ಅಂಡದ ಆವರಣವನ್ನೂ ಹಿರಣ್ಯಗರ್ಭ ಬ್ರಹ್ಮನ ಉತ್ಪತ್ತಿಯನ್ನೂ, ಬಹಳ ವಿಸ್ತಾರವಾಗಿ ಹೇಳಿದ್ದೇನೆ. ಇಂಥ ಅಂಡಗಳು ಸಾವಿರ ಕೋಟಿಗಳಷ್ಟಿರುವುವು. ಆ ಎಲ್ಲ ಅಂಡಗಳಲ್ಲಿ ಪ್ರತಿಯೊಂದರಲ್ಲಿಯೂ ಹದಿನಾಲ್ಕು ಲೋಕಗಳಿರುವವು. ಅವೆಲ್ಲವುಗಳಿಗೂ ಈಶ್ವರನೇ ಕಾರಣನು.

ಈ ಅಂಡಗಳ ಒಳಗೂ ಹೊರಗಡೆಯೂ ಅದರ ಆವರಣಗಳಲ್ಲಿಯೂ, ಅಂಧಕಾರದ ಕೊನೆಯಲ್ಲಿಯೂ ಮತ್ತು ಆಚೆಯಲ್ಲಿಯೂ ಅಂಡಗಳು ಆತ್ಮನಾದ, ಜ್ಞಾನಿಯಾದ ದೊಡ್ಡ ಸ್ವಾಮಿಯಾದ ಈಶ್ವರನ ಎಂಟುಮೂರ್ತಿಗಳು ವ್ಯವಸ್ಥಿತವಾಗಿವೆ. ಪ್ರಾಕೃತ

ದೇಹವಿಲ್ಲದಿರುವ ಆ ಪರಮಾತ್ಮನಾದ ಶಿವನಿಗೆ ಎಲ್ಲ ದೇಹವೂ ಮಾಯಿಕವಾದುದೆಂಬುದು ಆಶ್ಚರ್ಯಕರವಾದುದು! ಗೃಹಸ್ಥನಾಗಿರುವ ಅಷ್ಟಮೂರ್ತಿ ಸ್ವರೂಪನಾಗಿರುವ ಆ ಶಿವನಿಗೆ ಪ್ರಕೃತಿಯು ಹೆಂಡತಿಯಾಗಿಯೂ, ಮಹತ್ ಅಹಂಕಾರ ಮುಂತಾದ ಪ್ರಕೃತಿಯ ತತ್ವಗಳೇ ಪ್ರಜೆಗಳಾಗಿಯೂ, ದೇಹವೆಂಬ ಅಭಿಮಾನದಿಂದ ಕೂಡಿರುವ ಪರಿಣಾಮ ಜೀವರೆಂಬ ಪಶುಗಳು ಆಳುಗಳಾಗಿಯೂ ಇರುವವರು. ಭಗವಂತನಾದ ಶಿವನೇ ಆದಿಯೂ, ಅಂತ್ಯವೂ ಇಲ್ಲದೇ ಅನಂತನೂ ಆಗಿರುವನು ಪುರುಷ,ಪ್ರಕೃತಿಯೇ ಮೊದಲಾದ ಏಳು ರೂಪಗಳುಳ್ಳವನೂ, ಮಹತ್ತತ್ವ ಅಹಂಕಾರಾದಿಗಳಿಂದ ಕೂಡಿರುವ ಷೋಡಶಾಂಗನೂ ಪ್ರಕೃತಿ ಸ್ವರೂಪನೂ ಆಗಿ ಅಷ್ಟಮೂರ್ತಿ ಸ್ವರೂಪನೂ ಆಗಿರುವನು.

ಅಷ್ಟಮೂರ್ತಿ ಸ್ವರೂಪನಾದ ಆ ಶಿವನ ಆಜ್ಞೆಯಿಂದಲೇ ಭೂಮಿಯು ನಿಂತಿರುವುದು. ಪರ್ವತಗಳು ಸ್ಥಿರವಾಗಿ ಇರುವವು. ಸಮುದ್ರವು ನೀರನ್ನು ಅವನ ಆಜ್ಞೆಯಿಂದಲೇ ಹೊತ್ತಿರುವುದು. ಆಕಾಶದಲ್ಲಿ ನಕ್ಷತ್ರ, ಚಂದ್ರಾದಿಗಳು ಅವನ ಅಪ್ಪಣೆಯಿಂದಲೇ ಪ್ರಕಾಶಿಸುತ್ತಿರುವವು. ಇಂದ್ರನೇ ಮೊದಲಾದ ದೇವತೆಗಳೂ, ವೈಮಾನಿಕರಾಗಿರತಕ್ಕವರೂ, ಜಲಚರಪ್ರಾಣಿಗಳೂ ಶಿವನ ಆಜ್ಞೆಯಿಂದಲೇ ಜೀವಿಸಿರುವುವು. ತನ್ನ ಚಿನ್ಹೆಗಳನ್ನು ಮರೆಸಿಕೊಂಡು ಬಂದಿರುವ ಯಕ್ಷರೂಪನಾದ ಈಶ್ವರನನ್ನು ಇಂದ್ರನೇ ಮೊದಲಾದ ದೇವತೆಗಳು ನೋಡಿ ಈ ಯಕ್ಷನು ಇಲ್ಲಿಗೆ ಏಕೆ ಬಂದನು? ಎಂದು ತಿಳಿಯದೆ ಅವನ ಎದುರಿಗೆ ಹೋಗಿ ತಮ್ಮ ತಮ್ಮ ಶಕ್ತಿಯ ಅಲ್ಪತ್ವವನ್ನು ತಿಳಿದುಕೊಂಡರು.

ಆ ಯಕ್ಷರೂಪಿಯಾದ ಈಶ್ವರನ ಎದುರಿನಲ್ಲಿ ಅಗ್ನಿಯು ಒಂದು ಹುಲ್ಲು ಕಡ್ಡಿಯನ್ನೂ ಸಹ ಸುಡಲಾರದೇ ಹೋದನು. ವಾಯುವು ಆ ಒಂದು ಹುಲ್ಲು ಕಡ್ಡಿಯನ್ನೂ ಕೂಡ ಅಲುಗಾಡಿಸಲಾರದೇ ಹೋದನು. ಈ ರೀತಿಯಾಗಿ ಆ ದೇವತೆಗಳೆಲ್ಲರೂ ತಮ್ಮ ತಮ್ಮ ಶಕ್ತಿಯ ವಿಷಯದಲ್ಲಿದ್ದ ಹೆಮ್ಮೆಯನ್ನು ಕಳೆದುಕೊಂಡವರಾದರೂ ಅನಂತರ ದೇವತೆಗಳೊಡಗೂಡಿದ ಇಂದ್ರನು ಎಲ್ಲ ಉತ್ಕರ್ಷಕ್ಕೂ ಕಾರಣನಾದ ದೇವತೆಗಳಿಗೆಲ್ಲರಿಗೂ ಅಧಿಪತಿಯಾದ ಯಕ್ಷರೂಪವನ್ನು ಧರಿಸಿಕೊಂಡಿರುವ ಈಶ್ವರನನ್ನು ಕುರಿತು ಕುತೂಹಲವುಳ್ಳವನಾಗಿ ನೀನು ಯಾರು? ಎಂದು ಕೇಳಿದನು.

ಆಗ ಯಕ್ಷನು ತತ್ಕಣದಲ್ಲಿಯೇ ಅದೃಶ್ಯನಾದನು. ಅನಂತರ ಹಿಮವಂತನ ಮಗಳಾದ ಶುಭವಾದ ಮಾತುಗಳನ್ನಾಡುವ, ಜನ್ಮರಹಿತಳಾದ, ಉಮಾ ಎಂದು ಪ್ರಸಿದ್ಧಳಾದ ಪಾರ್ವತಿಯು ಮಂಗಳಕರವಾದ ಆಭರಣಗಳಿಂದ ಪ್ರಕಾಶಿಸುತ್ತಾ ಅಲ್ಲಿ ಪ್ರತ್ಯಕ್ಷಳಾದಳು. ಇಂದ್ರನೇ ಮೊದಲಾದ ದೇವತೆಗಳು ಬಹುವಾಗಿ ಪ್ರಕಾಶಿಸುತ್ತಿರುವ ಹಿಮವಂತನ ಮಗಳಾದ ಉತ್ಪತ್ತಿರಹಿತಳಾದ ಪಾರ್ವತಿಯನ್ನು ಕುರಿತು ''ಅತ್ಯಂತ ಪ್ರಕಾಶಮಾನಳಾದ ಓಂ ಅಂಬಿಕೆಯೆ, ಇಲ್ಲಿ ಕಾಣಿಸಿಕೊಂಡಿದ್ದ ಯಕ್ಷನು ಯಾರು? ಅವರ ವಿಷಯವೇನು?'' ಎಂದು ಕೇಳಿದರು. ಆ ಯಕ್ಷನ ವಿಷಯವನ್ನು ಕೇಳಲು, ಪಾರ್ವತಿಯು ''ಆ ಯಕ್ಷನು ಅಗೋಚರನಾದ ಶಿವನೆಂದು'' ತಿಳಿಯ ಹೇಳಿದಳು. ಆಗ ದೇವೇಂದ್ರನಿಂದ ಒಡಗೂಡಿದ ದೇವತೆಗಳೆಲ್ಲರೂ ಮಂದಗಮನೆಯಾದ, ಉತ್ಪತ್ತಿರಹಿತಳಾದ, ಕೆಂಪು, ಬಿಳುಪು, ಕಪ್ಪು ಈ ವರ್ಣಗಳಿಂದ ಪಕಾಶಿಸುತ್ತಿರುವ ಪಾರ್ವತಿಯನ್ನು ನಮಸ್ಕರಿಸಿದರು. ಸಕಲದೇವತೆಗಳಿಂದ ಗೌರವಿಸಲ್ಪಟ್ಟ ಸುರಾಸುರರಿಗೆ ಪ್ರವೃತ್ತಿರೂಪಳಾಗಿರುವ,

ಪಾರ್ವತಿಯು "ನಾನೂ ಮೊದಲು ಪ್ರಕೃತಿರೂಪಳಾಗಿದ್ದು. ಪುರುಷರೂಪನಾದ ಯಕ್ಷರೂಪಿಯಾದ ಈಶ್ವರನ ಅಪ್ಪಣೆಯನ್ನು ಪಾಲಿಸುವವಳಾಗಿರುವೆನು." ಎಂದು ಹೇಳಿದಳು. ಆದುದರಿಂದ ಉತ್ಪತ್ತಿರಹಿತನಾದ ಆ ಪರಮೇಶ್ವರನ ಅಪ್ಪಣೆಯಿಂದ ಬ್ರಹ್ಮನೂ, ಆ ಬ್ರಹ್ಮನಿಂದ ಬ್ರಹ್ಮಾಂಡವೂ, ಆ ಬ್ರಹ್ಮಾಂಡದಿಂದ ಜ್ಯೋತಿರ್ಗಣಗಳಿಂದ ಕೂಡಿರುವ ಲೋಕಗಳೂ ಹುಟ್ಟಿದುವು. ಆದುದರಿಂದ ಪೂರ್ವೋಕ್ತವಾದ ಎಲ್ಲ ಸಮೂಹವೂ ಶಿವಸ್ವರೂಪವೆಂದು ತಿಳಿಯತಕ್ಕದ್ದು.

*ಲಿಂಗ ಮಹಾಪುರಾಣದ ಪೂರ್ವಾರ್ಧದ ಭಾರತವರ್ಷದ ಅರ್ಥ, ಬ್ರಹ್ಮಾಂಡದ ವಿವರಗಳ ನಿರೂಪಣೆ ಎಂಬ ಐವತ್ತಾರನೆಯ ಅಧ್ಯಾಯ ಮುಗಿದುದು*

—o—

## ಜ್ಯೋತಿರ್ಮಂಡಲದ ವಿವರಣ

ಅಧ್ಯಾಯ - ೫೭

**ಸೂತ :-** ಗ್ರಹಗಳ ಗತಿನ್ನು ತಿಳಿಯುವದಕ್ಕೋಸ್ಕರ ದೇವತೆಗಳ ಸ್ಥಾನಗಳನ್ನು ಗುರುತಿಸಿ ನೋಡಬೇಕು. ಅನಂತರ ಬ್ರಹ್ಮಾಂಡದಲ್ಲಿಯ ಆ ಜ್ಯೋತಿರ್ಗಣಗಳ ಗತಿಯನ್ನು ಸಂಕ್ಷೇಪವಾಗಿ ತಿಳಿಯಬಹುದು. ಮೇರುಪರ್ವತದ ಪೂರ್ವದಿಕ್ಕಿನಲ್ಲಿರುವ ಮಾನಸಪರ್ವತದ ಮೇಲ್ಭಾಗದಲ್ಲಿ ಮಹೇಂದ್ರನ ಪುರಿಯಾದ ಅಮರಾವತಿಯೂ, ಮೇರುಪರ್ವತದ ದಕ್ಷಿಣದಿಕ್ಕಿನಲ್ಲಿ ಸೂರ್ಯಪುತ್ರನಾದ ಯಮನಪುರಿಯಾದ ಸಂಯಮನೀ ಎಂಬುದೂ, ಅದರ ನೈಋತ್ಯದಿಕ್ಕಿನಲ್ಲಿ ವರುಣಪಟ್ಟಣವಾದ ಸುಖಾ ಎಂಬುದೂ, ಮತ್ತು ಉತ್ತರ ದಿಕ್ಕಿನಲ್ಲಿ ಬುಧನಪಟ್ಟಣವಾದ ವಿಭಾ ಎಂಬುದೂ ಇರುವವು. ಆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಆಯಾ ದಿಕ್ಪಾಲಕರಾದ ದೇವತೆಗಳು ವಾಸಮಾಡುತ್ತಿರುವರು. ಲೋಕಪಾಲಸ್ಥಾನದ ಮೇಲ್ಭಾಗದಲ್ಲಿ ದಕ್ಷಿಣಾಯನದಲ್ಲಿ ದಕ್ಷಿಣದಿಕ್ಕಿನಲ್ಲಿ ಸಂಚರಿಸುತ್ತಿರುವ ಸೂರ್ಯನ ಗಮನವನ್ನು ತಿಳಿಯಬೇಕು. ಸೂರ್ಯನು ದಕ್ಷಿಣಾಯನದಲ್ಲಿ ಬಿಟ್ಟ ಬಾಣದಂತೆ ಬಹುವೇಗವಾಗಿ ಓಡುತ್ತಾ ಜ್ಯೋತಿರ್ಮಂಡಲದಲ್ಲಿ ಸುತ್ತುತ್ತಾ ಯಾವಾಗಲೂ ಸಂಚರಿಸುತ್ತಿರುವನು.

ಯಾವಾಗ ಪ್ರಭುವಾದ ಸೂರ್ಯನು ಇಂದ್ರನ ಪಟ್ಟಣವಾದ ಅಮರಾವತಿಯ ಒಳಕ್ಕೆ ಪ್ರವೇಶಿಸುವನೋ ಆಗ ಸೂರ್ಯನ ಉದಯವು ಕಾಣಿಸಲ್ಪಡುತ್ತದೆ. ಸೂರ್ಯನು ಅಮರಾವತಿಯಿಂದ ಸಂಯಮನೀ ಎಂಬ ಯಮನಪಟ್ಟಣದ ಮೂಲಕವಾಗಿ ಸಂಚರಿಸುವನೆಂದು ತಾತ್ಪರ್ಯವು. ಆ ಸೂರ್ಯನೇ ವರುಣನ ಪಟ್ಟಣವಾದ ಸುಖಾ ಎಂಬುದರಲ್ಲಿ ಪ್ರಾತಃಕಾಲದಲ್ಲಿ ಕಾಣಿಸಿಕೊಳ್ಳುವನು. ಪುನಃ ವಿಶ್ವವೆಲ್ಲವನ್ನೂ ನೋಡುವ ವಿಶ್ವವ್ಯಾಪಿಯಾದ ಸೂರ್ಯನು, ವಿಭಾ ಎಂಬ ಬುಧನ ಪಟ್ಟಣದಲ್ಲಿ ಅಸ್ತನಾಗುತ್ತಾನೆ. ಅನಂತರ ವರುಣನ ಪಟ್ಟಣವಾದ ಸುಖಾ ಎಂಬುದರ ಮೂಲಕವಾಗಿಯೂ, ಬುಧನ ಪಟ್ಟಣವಾದ ವಿಭಾ ಎಂಬುದರ ಮೂಲಕವಾಗಿಯೂ ಮುಂದಕ್ಕೆ ಸಂಚರಿಸುವನು.

ಪೃಥ್ವಿಯ ನೀರನ್ನೆಲ್ಲವನ್ನೂ ಅಪಹರಿಸುವ ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಹೀರಿಕೊಳ್ಳುವನು. ಅದೆಲ್ಲವನ್ನೂ ಮಳೆಯ ರೂಪದಲ್ಲಿ ಕೊಡುವನು. ಸೂರ್ಯನು ಹೇಗೆ

ಅವರಾವತಿಯನ್ನೂ, ಸಂಯಮನೀ ಎಂಬ ಯಮನ ಪಟ್ಟಣವನ್ನೂ, ಸುಖಾ ಎಂಬ ವರುಣನ ಪಟ್ಟಣವನ್ನೂ, ವಿಭಾ ಎಂಬ ಬುಧನ ಪಟ್ಟಣವನ್ನೂ ಪ್ರವೇಶಿಸುವನೆಂಬ ವಿಷಯವು ಹೇಳಲ್ಪಟ್ಟಿರುವದು. ಯಾವಾಗ ಆಗ್ನೇಯ ದಿಕ್ಕಿನಲ್ಲಿ ಅಪರಾಹ್ನವೂ, ನೈಋತ್ಯದಿಕ್ಕಿನಲ್ಲಿ ಪೂರ್ವಾಹ್ಣವೂ, ಆಗುವುದೋ ಆವಾಗ ವಾಯವ್ಯಭಾಗದಲ್ಲಿ ಭಯಂಕರವಾದ ಅಪರರಾತ್ರಿಯೂ, ಈಶಾನ್ಯದಲ್ಲಿ ಪೂರ್ವರಾತ್ರಿಯೂ ಆಗುವುದು. ಈ ರೀತಿಯಾಗಿ ಎಲ್ಲ ಕಡೆಯಲ್ಲಿಯೂ ಸೂರ್ಯನ ಗಮನವಿರುವುದು. ಈ ರೀತಿಯಾಗಿ ಆಕಾಶಮಧ್ಯದಲ್ಲಿ ಸೂರ್ಯನು ಯಾವಾಗ ಸಂಚರಿಸುವನೋ ಆಗ ಭೂಮಿಯಲ್ಲಿ ಮೂವತ್ತನೆಯ ಅಂಶವನ್ನು ಒಂದು ಮುಹೂರ್ತದಲ್ಲಿ ಸಂಚರಿಸುವನು.

ಒಂದು ಮುಹೂರ್ತಕಾಲದಲ್ಲಿ ಇಷ್ಟು ಸಂಖ್ಯೆಯ ಯೋಜನವನ್ನು ಸೂರ್ಯನು ಸಂಚರಿಸುವನೆಂದು ತಿಳಿಯತಕ್ಕದ್ದು. ಮುವತ್ತೊಂದುನೂರುಸಹಸ್ರವು ಸಂಪೂರ್ಣವಾಗಿಯೂ ಮತ್ತು ಐವತ್ತುಸಹಸ್ರವು ಅಧಿಕವಾಗಿಯೂ, ಆ ಸಂಖ್ಯೆಯು ಇರುವುದು. ಮೇಲೆ ಹೇಳಿದಷ್ಟು ಸಂಖ್ಯೆಯ ಯೋಜನವು ಮಹಾತ್ಮನಾದ ಭಾಸ್ಕರನ ಗಮನದ ವೇಗವಾಗಿರುವುದು. ಈ ರೀತಿಯಾದ ಗಮನದಿಂದ ದಕ್ಷಿಣ ದಿಕ್ಕಿನಲ್ಲಿ ಸಂಚರಿಸುವನು. ಉತ್ತರಾಯಣದಲ್ಲಿ ಉತ್ತರ ದಿಕ್ಕಿನಲ್ಲಿ ಗಮನದ ಸಂಖ್ಯೆಯನ್ನು ಕೇಳಬೇಕು. ದಕ್ಷಿಣಾಯನದಲ್ಲಿ ಸೂರ್ಯನು ಆಕಾಶದ ಮಧ್ಯದಲ್ಲಿ ಸಂಚರಿಸುವನು. ಮಾನಸಪರ್ವತದ ಉತ್ತರ ಕಡೆಯಲ್ಲಿ ಪೂರ್ಣವಾದ ನೂರೆಂಬತ್ತು ಮಂಡಲಗಳಿವೆ. ಆ ಮಂಡಲಗಳ ಹೊರಗೂ, ಒಳಗೂ ಪ್ರಚಂಡವಾದ ತೇಜಸ್ಸುಳ್ಳ ವ್ಯಾಪಕನಾದ ಸೂರ್ಯನು ಉತ್ತರಾಯಣ ದಕ್ಷಿಣಾಯನದಲ್ಲಿ ಸೂರ್ಯನು ಸಂಚರಿಸುವನು. ಆ ಮಂಡಲಗಳಿಗಿಂತಲೂ ಚಿಕ್ಕದಾದ ಭೂಮಿಯನ್ನು ಸೂರ್ಯನು ಸ್ವಲ್ಪಕಾಲದಲ್ಲಿಯೇ ಸಂಚರಿಸುವನು. ದಕ್ಷಿಣಾಯನದಲ್ಲಿ ಹನ್ನೆರಡು ಮುಹೂರ್ತಗಳಲ್ಲಿ ಜಾಗ್ರತೆಯಾಗಿ ಸಂಚರಿಸುವನು.

ದಕ್ಷಿಣಾಯನದಲ್ಲಿ ಸೂರ್ಯನು ಪೂರ್ಣ ಹಗಲಿನಲ್ಲಿ ಹದಿಮೂರುವರೆ ನಕ್ಷತ್ರಗಳನ್ನು ಸಂಚರಿಸುವನು. ರಾತ್ರಿಯಲ್ಲಿ ಹದಿಮೂರುವರೆ ನಕ್ಷತ್ರಗಳನ್ನು ಹದಿನೆಂಟು ಮುಹೂರ್ತಗಳಲ್ಲಿ ಸಂಚರಿಸುವನು. ಕುಂಬಾರನ ಚಕ್ರದ ಮಧ್ಯಭಾಗವು ಎಷ್ಟು ನಿದಾನವಾಗಿ ಚಲಿಸುವುದೋ ಹಾಗೆಯೇ ಸೂರ್ಯನು ಉತ್ತರಾಯಣದಲ್ಲಿ ನಿದಾನವಾಗಿ ಸಂಚರಿಸುವನು. ಚಿಕ್ಕ ಮಂಡಲವಾದ ಭೂಮಂಡಲವನ್ನು ಉತ್ತರಾಯಣದಲ್ಲಿ ದೀರ್ಘಕಾಲದಲ್ಲಿ ಸಂಚರಿಸುವನು. ಆ ಸೂರ್ಯನು ತನ್ನ ರಥದಲ್ಲಿ ಕುಳಿತು ದ್ವಾದಶಾದಿತ್ಯರಿಂದಲೂ, ಸಪ್ತಋಷಿಗಳಿಂದಲೂ, ಗಂಧರ್ವರಿಂದಲೂ ಸರ್ಪಗಳಿಂದಲೂ, ರಾಕ್ಷಸರುಗಳಿಂದಲೂ ಕೂಡಿ ಪ್ರಕಾಶಿಸುತ್ತಾ ಚಲಿಸುವನು. ಮುಂದುಗಡೆಯಲ್ಲಿಯೂ, ಹಿಂದುಗಡೆಯಲ್ಲಿಯೂ, ಕೆಳಭಾಗದಲ್ಲಿಯೂ, ಮೇಲ್ಭಾಗದಲ್ಲಿಯೂ, ತನ್ನ ಕಿರಣಗಳನ್ನು ಪ್ರಸರಿಸಿ, ನೀರುಗಳಿಂದಲೂ, ಮುನಿಗಳಿಂದಲೂ ಬಿಡಲ್ಪಟ್ಟವನಾಗಿ ಅನುತ್ತಮವಾದ ಬ್ರಹ್ಮನ ಸಂಬಂಧಿಯಾದ ಸಭೆಯನ್ನು ಹೊಂದಿ, ಸಂಧ್ಯಾಕಾಲದಲ್ಲಿ ಎದುರಿಸ ಬಂದ ರಾಕ್ಷಸರನ್ನೆಲ್ಲರನ್ನೂ ಕೊಂದು, ಬ್ರಾಹ್ಮಣರೊಡನೆ ಕೂಡಿ ಸಂಚರಿಸುವನು.

ಉತ್ತರಾಯಣದ ಕೊನೆಯಲ್ಲಿ ಹಗಲು ಹದಿನೆಂಟು ಮುಹೂರ್ತವಿರುವುದು. ಆಗ ಸೂರ್ಯನು ಸೌಮ್ಯವಾಗಿ ಸಂಚರಿಸುವನು. ಉತ್ತರಾಯಣದಲ್ಲಿ ಸೂರ್ಯನು ರಾತ್ರಿ ಸಮಯದಲ್ಲಿ ಹದಿಮೂರುವರೆ ನಕ್ಷತ್ರಗಳನ್ನೂ, ಇನ್ನುಳಿದ ಹದಿಮೂರುವರೆ ನಕ್ಷತ್ರಗಳನ್ನು ಹಗಲಿನಲ್ಲಿ ಹದಿನೆಂಟು ಮುಹೂರ್ತಗಳಲ್ಲಿಯೂ ಮಧ್ಯಭಾಗವು ಹೇಗೆ ನಿಧಾನವಾಗಿ ತಿರುಗುವುದೋ ಹಾಗೆ ನಿಧಾನವಾಗಿ ಚಕ್ರದ ಮಧ್ಯಭಾಗದಲ್ಲಿರುವ ಮಣ್ಣಿನಂತೆ ಆಕಾಶದ ಮಧ್ಯದಲ್ಲಿ ಸಂಚರಿಸುವನು. ಮೂವತ್ತು ಮುಹೂರ್ತಕ್ಕೆ ಒಂದು ದಿನವೆಂದು ಪ್ರಾಚೀನ ಜ್ಞಾನಿಗಳು ಹೇಳುವರು. ಎರಡು ದಿಕ್ಕುಗಳ ಮಧ್ಯೇ ತಿರುಗುತ್ತಾ ಹೇಗೆ ಕುಂಬಾರನ ಚಕ್ರದ ಮಧ್ಯಭಾಗವು ಇದ್ದಲ್ಲಿಯೇ ಇರುವುದೋ ಹಾಗೆ ಗ್ರಹಾಧಿಪತಿಯಾದ ಸೂರ್ಯನೂ ಉತ್ತಾನಪಾದನ ಮಗನಾದ ಧ್ರುವನೂ ತಾನು ಇದ್ದಲ್ಲಿಯೇ ಇದ್ದು ಗ್ರಹಗಳೊಡನೆ ಸುತ್ತುವನು.

ಧ್ರುವ ನಕ್ಷತ್ರ ಮಾರ್ಗದಲ್ಲಿರುವ ಋಷಿರೂಪವಾದ ನಕ್ಷತ್ರ ಮಂಡಲವು ಧ್ರುವನ ಇಚ್ಛೆಯಿಂದ ಸಂಚರಿಸುವುದು. ವಾಯುವಿನಿಂದೊಡಗೂಡಿದ ಸೂರ್ಯನು ತನ್ನ ಕಿರಣಗಳಿಂದ ಎಲ್ಲ ಕಡೆಯಲ್ಲಿರುವ ನೀರನ್ನು ಸ್ವೀಕರಿಸುವನು. ಮಹಾವಿಷ್ಣುವಿನ ಅನುಗ್ರಹದಿಂದ ತಂದೆಯಾದ ಉತ್ತಾನಪಾದರಾಯನ ದೆಸೆಯಿಂದ ಧ್ರುವನು ಧ್ರುವತ್ವವನ್ನು ಹೊಂದಿದನು. ಸೂರ್ಯನಿಂದ ತೆಗೆದುಕೊಳ್ಳಲ್ಪಟ್ಟ ನೀರು ಚಂದ್ರನಲ್ಲಿ ಹೋಗಿ ಸೇರುತ್ತದೆ. ಆ ಚಂದ್ರನ ದೆಸೆಯಿಂದ ಆ ನೀರು ಮೋಡಗಳಲ್ಲಿ ಸೇರುತ್ತವೆ. ಅನಂತರ ವಾಯುವಿನಿಂದ ಹೊಡೆಯಲ್ಪಟ್ಟ ಮೇಘಗಳಿಂದ ಆ ನೀರು ಭೂಮಿಗೆ ಸುರಿಯುತ್ತದೆ. ಸೂರ್ಯನು ಪ್ರಪಂಚವನ್ನು ತನ್ನ ಕಿರಣಗಳಿಂದ ಪ್ರಕಾಶಿಸುತ್ತಿರುವನು. ಆದುದರಿಂದ ಸೂರ್ಯನಿಗೆ ಭಾಸ್ಕರನೆಂದು ಹೆಸರು ಬಂದಿದೆ 'ಭಾ' ಎಂದರೆ ಪ್ರಕಾಶವನ್ನು ಕರ ಎಂದರೆ ಉಂಟು ಮಾಡುವವನು. ಆದುದರಿಂದ ಭಾಸ್ಕರನೆಂದು ಪದವ್ಯುತ್ಪತ್ತಿಯು. ನೀರಿಗೆ ನಾಶವಿಲ್ಲವು. ತತ್ಪೂರ್ವವಾದ ಜಲವೇ ಮೇಲಕ್ಕೂ ಕೆಳಕ್ಕೂ ಪರಿವರ್ತನೆಯಾಗುತ್ತದೆ. ಸಮಸ್ತಪ್ರಾಣಿಗಳಿಗೂ ಒಳ್ಳೆಯದಾಗಲೆಂದು ಈಶ್ವರನು ಸೂರ್ಯನಿಗೆ ಈ ರೀತಿಯಾದ ಗಮನವನ್ನು ನಿರ್ಮಿಸಿರುವನು. ಹಗಲು ರಾತ್ರಿ ರೂಪವಾದ ಕಾಲದಿಂದ ಜನರ ಆಚಾರವ್ಯವಹಾರಗಳೆಲ್ಲವೂ ನಡೆಯುತ್ತಿರುವುದರಿಂದ ಒಳ್ಳೆಯದಾಗುತ್ತಿರುವುದು. ಭೂಃ, ಭುವಃ, ಸ್ವಃ, ಇವೆಲ್ಲವೂ, ಅನ್ನವೂ, ಅಮೃತವೂ, ಪ್ರಾಣಿಗಳೂ, ಜಗತ್ತೂ, ಪ್ರಾಣಿಗಳೂ, ಚತುರ್ದಶ ಪ್ರಪಂಚಗಳೂ ಇವೆಲ್ಲವೂ ನೀರಿನ ರೂಪಗಳು, ಹೆಚ್ಚಿಗೇ ಹೇಳುವುದರಿಂದೇನು? ಈ ಚರಾಚರಾತ್ಮಕವಾದ ಪ್ರಪಂಚವೇ ನೀರಿನ ರೂಪವು. ಈ ರೀತಿಯಾಗಿ ಪ್ರಪಂಚಕ್ಕೆ ಅಧಿಪತಿಯಾದ ಈಶ್ವರನು ವ್ಯವಸ್ಥೆ ಮಾಡಿರುವನು. ನೀರಿಲ್ಲದಿರುವ ಜಾಗವು ಯಾವುದೂ ಇಲ್ಲವು. ಎಲ್ಲ ಪ್ರಪಂಚದಲ್ಲೂ ವ್ಯಾಪಕವಾದ ನೀರಿಗೆ ಈಶ್ವರನೇ ಅಧಿಪತಿಯು. ಆದುದರಿಂದ ಈ ಪ್ರಪಂಚವೆಲ್ಲವೂ ಈಶ್ವರನ ಅಧೀನವಾಗಿರುವದು. ವ್ಯಾಪಕವಾದ ನೀರಿನಿಂದಲೇ ಈಶ್ವರನಾದ ವಿಷ್ಣುವಿಗೆ ನಾರಾಯಣನೆಂಬ ಹೆಸರು ಬಂದಿರುವುದು. ನರ ಎಂದರೆ ನೀರು ಎಂದರ್ಥವು. ಆಯನ ಎಂದರೆ ಸ್ಥಾನವೆಂದರ್ಥ. ನೀರೆ ಸ್ಥಾನವಾಗಿ ಉಳ್ಳವನು ನಾರಾಯಣನು. ಪ್ರಪಂಚಕ್ಕೆ ವಾಸಸ್ಥಾನವು ವಿಷ್ಣುವು. ಆ ವಿಷ್ಣುವಿಗೆ ವಾಸಸ್ಥಾನವಾದುದು ನೀರು. ಆದುದರಿಂದ ನೀರೇ

ಸರ್ವವ್ಯಾಪಕವಾದುದು. ಅಂಥ ವ್ಯಾಪಕವಾದ ನೀರಿಗೆ ಈಶ್ವರನು ಅಧಿಪತಿಯಾಗಿರುವುದರಿಂದ ಅವನು ಸರ್ವೇಶ್ವರನೆಂದು ತಾತ್ಪರ್ಯವು. ಚರಾಚರ ಪ್ರಪಂಚದಲ್ಲಿ ಉರಿಯುವಿಕೆಯಿಂದ ಪೃಥಿವೀ ಸಂಬಂಧದಿಂದ ಮೇಲಕ್ಕೆದ್ದು ಆಕಾಶದಲ್ಲಿ ಸೇರಿದ ಹೊಗೆ ಎಲ್ಲವೂ ವಾಯುವಿನಿಂದ ಒಟ್ಟುಗೂಡಿಸಲ್ಪಟ್ಟು ಮೇಘಗಳಾಗಿರುವುವು.

ಹೊಗೆ, ಅಗ್ನಿ, ಗಾಳಿ ಇವುಗಳ ಪರಸ್ಪರ ಸಂಯೋಗವೇ ಮೇಘವು. ಆ ಮೇಘವು ನೀರನ್ನು ಸುರಿಸುತ್ತದೆ. ಆ ಮೇಘಕ್ಕೆ ಇಂದ್ರನೇ ಅಧಿಪತಿಯು. ಯಜ್ಞ ಧೂಮದಿಂದ ಉಂಟಾದ ಮೇಘವು ತ್ರೈವರ್ಣಿಕರಿಗೆ ಹಿತವನ್ನುಂಟುಮಾಡುವುದು. ಕಾಡು ಕಿಚ್ಚಿನಿಂದುಂಟಾದ ಮೇಘವು ಕಾಡುಗಳಿಗೆ ಮಳೆಯನ್ನು ಸುರಿಸುವುದರ ಮೂಲಕ ಹಿತವನ್ನುಂಟು ಮಾಡುವುದು. ಶವವನ್ನು ಸುಟ್ಟಿದ್ದರಿಂದುಂಟಾದ ಧೂಮದಿಂದ ಹುಟ್ಟಿದ ಮೇಘವು ಅಶುಭವನ್ನುಂಟುಮಾಡುವದು ಹಿಂಸೆಯಿಂದುಂಟಾದ ಹೊಗೆಯಿಂದ ಹುಟ್ಟಿದ ಮೇಘವು ಪ್ರಾಣಿಗಳ ನಾಶಕ್ಕೆ ಕಾರಣವಾಗುವದು.

ಈ ರೀತಿಯಾದ ಧೂಮ ವಿಶೇಷಗಳಿಂದ ಲೋಕಗಳಿಗೆ ಹಿತವುಂಟಾಗುತ್ತದೆ. ಲೋಕಗಳಿಗೆ ಅಹಿತವಾಗುವ ಹಿಂಸೆಯಿಂದುಂಟಾದ ಧೂಮವನ್ನು ಮನುಷ್ಯನು ತಡೆಯಬೇಕು. ಹಿಂಸೆಯಿಂದುಂಟಾದ ಧೂಮವನ್ನು ಬ್ರಾಹ್ಮಣನಾದವನು ತಡೆಯಬೇಕು. ಹಾಗೆ ತಡೆಯದಿದ್ದರೆ ಆ ಧೂಮವು ಪ್ರಪಂಚದ ನಾಶಕ್ಕೆ ಕಾರಣವಾಗುವುದು. ನೀರು ಮೇಘಗಳಲ್ಲಿ ಆರು ತಿಂಗಳವರೆಗೂ ನಿಂತಿರುವುದು. ಅದನ್ನು ಆ ಮೇಘಗಳು ವಾಯುವಿನಿಂದ ದೇವನ ಅಪ್ಪಣೆಯಂತೆ ಲೋಕಹಿತಕ್ಕಾಗಿ ಸುರಿಸುವವು.

ಆ ಮೇಘಗಳಲ್ಲಿ ಹುಟ್ಟಿದ ಗುಡುಗು ಸಿಡಿಲು ಮುಂತಾದ ಘರ್ಜನೆಯು ವಾಯುವಿನ ಸಂಬಂಧವಾದುದು. ಮಿಂಚು ಮುಂತಾದವುಗಳು ಅಗ್ನಿಯ ಸಂಬಂಧವಾದವು. ಮೇಘಗಳ ಉತ್ಪತ್ತಿಯು ಈ ರೀತಿಯಾಗಿ ವಾಯು, ಧೂಮ, ಅಗ್ನಿ ಇವು ಮೂರರಿಂದ ಆಗುವುದು. ಯಾವಾಗಲೂ ಕೆಳಕ್ಕೆ ಬೀಳುವುದಿಲ್ಲವಾದುದರಿಂದ ಮೋಡಕ್ಕೆ ಅಭ್ರವೆಂತಲೂ ಹೆಸರು ಬಂದಿದೆ. ಈ ಮೇಘಗಳು ಕಟ್ಟಿಗೆಯಿಂದುಂಟಾದ ಅಗ್ನಿಯಿಂದ ಹುಟ್ಟಿದವುಗಳೆಂದೂ ಬ್ರಹ್ಮನಿಂದ ಹುಟ್ಟಿದವುಗಳೆಂದೂ, ಮೇರುವಿನ ರೆಕ್ಕೆಯಿಂದ ಹುಟ್ಟಿದವುಗಳೆಂದೂ ಮೂರು ವಿಧವಾಗಿರುವುವು.

ತುಪ್ಪವನ್ನು ಕಟ್ಟಿಗೆಗಳೊಡನೆ ಬೆರೆಸಿ ಅದಕ್ಕೆ ಅಗ್ನಿಯ ಸಂಯೋಗವಾದಾಗ ಉಂಟಾದ ಧೂಮದಿಂದ ಹುಟ್ಟಿದ ಮೇಘವು ಕಾಷ್ಠಮೇಘವು. ಕಟ್ಟಿಗೆಯಿಂದುಂಟಾದ ಮೇಘವು ಎರಡನೆಯದಾದ ವೈರಿಂಚಮೇಘವು. ಬ್ರಹ್ಮನಿಂದ ಹುಟ್ಟಿದ ಮೇಘವು ಬ್ರಹ್ಮನ ಉಚ್ಛ್ವಾಸ ವಾಯುವಿನಿಂದ ಹುಟ್ಟಿದುದು. ಮೂರನೆಯದಾದ ಪಕ್ಷಮೇಘವು ರೆಕ್ಕೆಯಿಂದುಂಟಾದ ಮೇಘವು. ದೇವೇಂದ್ರನು ಪರ್ವತಗಳ ರೆಕ್ಕೆಗಳನ್ನು ಕಡಿದಾಗ ಅವುಗಳಿಂದ ಉಂಟಾದವು ಪಕ್ಷ ಮೇಘಗಳು. ವಹ್ನಿ ಸಂಬಂಧವಾದ ಮೇಘಗಳು ಆವಹವೆಂಬ ವಾಯುವಿನ ನೇಮಿಯಲ್ಲಿರುವವು. ಅವು ಶುಭವಾದವುಗಳು. ಪ್ರವಹವೆಂಬ ಎರಡನೆಯ ವಾಯುವಿನ ಸ್ಕಂಧದಲ್ಲಿರುವವುಗಳು ಬ್ರಹ್ಮನ ಉಚ್ಛ್ವಾಸಗಳಿಂದ ಹುಟ್ಟಿದ ಮೇಘಗಳು. ಆ ಪ್ರವಹವಾಯುವಿನ ಸ್ಕಂಧದ ಮೇಲಿರುವ ರೆಕ್ಕೆಗಳಿಂದ ಉತ್ಪನ್ನವಾದ ಪುಷ್ಕರಾದಿ ಮೇಘಗಳು ಮಳೆಯನ್ನು ವಿಶೇಷವಾಗಿ ಸುರಿಸುವವು.

ಹಿಂದೆ ಹೇಳಿದ ಮೂರು ವಿಧವಾದ ಮೇಘಗಳು ಕೆಲವು ಶಬ್ದ ಮಾಡದೇ ಇರುವವುಗಳಾಗಿಯೂ, ಕೆಲವು ಗರ್ಜಿಸುವವುಗಳಾಗಿಯೂ, ಕೆಲವು ಕೆಟ್ಟ ಫಲ ಸೂಚನೆಯುಳ್ಳವುಗಳಾಗಿಯೂ ಇರುವುವು. ಆಗ್ನೇಯ ಮೇಘಗಳು ಶೀತವಾದ ಗಾಳಿಯೊಡನೆ ಬಹಳ ಹೊತ್ತಿನವರೆಗೂ ಸೋನೆಮಳೆಯನ್ನು ಸುರಿಸುವವು ಶಕ್ತಿಹೀನವಾದ ವೈರಿಂಚ್ಯ ಮೇಘಗಳು ಮಿಂಚು ಮುಂತಾದ ವಿದ್ಯುತ್ತಿನ ಸಂಬಂಧವಿಲ್ಲದೇ ಭೂಮಿಯ ಮೇಲೆ ಒಂದು ಹರಿದಾರಿ ದೂರದಲ್ಲಿ ಮಾತ್ರ ಮಳೆಯನ್ನು ಸುರಿಸುವವು. ಬೆಟ್ಟಗಳಲ್ಲಿ ಸಂಚರಿಸುತ್ತಿರುವ ಶಾಶ್ವತವಾದ ಬ್ರಹ್ಮನ ವಿಶ್ವಾಸದಿಂದ ಹುಟ್ಟಿದ ಮೇಘಗಳು ಅರ್ಧ ಹರಿದಾರಿಯ ದೂರದಲ್ಲಿ ಮಳೆಯನ್ನು ಸುರಿಸುವವು. ಮಿಂಚು, ಗುಡುಗು ಮುಂತಾದವುಗಳಿಂದ ಕೂಡಿದ್ದರೆ ಭೂಮಿಯ ಮೇಲೆ ಒಂದು ಯೋಜನದವರೆಗೂ, ಬಹುವಾಗಿ ಮಳೆಯನ್ನು ಸ್ಮರಿಸುವವು. ಆಗ್ನೇಯ ಮತ್ತು ಶ್ವಾಸಜನ್ಯವಾದ ಮೇಘಗಳು ಮಳೆಯನ್ನು ಸುರಿಸುವವು ಮೂರು ವಿಧವಾಗಿರುವವು.

ಪಕ್ಷಜಗಳಾದ ಮೇಘಗಳಲ್ಲಿ ಪಕ್ಷಜವೆಂಬ ಹೆಸರುಳ್ಳ ಮೇಘಗಳು ದೊಡ್ಡ ಪರ್ವತಗಳಿಗಿಂತಲೂ ದೊಡ್ಡದಾಗಿರುವುವು. ಮತ್ತು ಇವು ಪ್ರಳಯಕಾಲದಲ್ಲಿ ಮಳೆಯನ್ನು ಸುರಿಸುವವು. ಶಾರದ ಎಂಬ ಹೆಸರುಳ್ಳ ಮೇಘಗಳು ರಾತ್ರಿ ವೇಳೆಯಲ್ಲಿ ಲೋಕಕ್ಕೆ ಕೆಡುಕನ್ನು ಮಾಡುತ್ತಾ ಮಳೆಯನ್ನು ಸುರಿಸುತ್ತವೆ. ಪುಷ್ಕರವೇ ಮೊದಲಾದ ಹೆಸರುಗಳುಳ್ಳ ಮೇಘಗಳು ಮಳೆಯನ್ನು ಸುರಿಸಿ ಸಮಸ್ತ ಪ್ರಪಂಚವನ್ನು ಜಲಮಯವನ್ನಾಗಿ ಮಾಡುತ್ತವೆ. ಅವೇ ಸಮುದ್ರ ಎನಿಸಿಕೊಂಡಿರುವವು. ಆಗ್ನೇಯ, ಶ್ವಾಸಜ ಮತ್ತು ಪಕ್ಷಜಗಳಾದ ಮೇಘಗಳು ಅಭಿವೃದ್ಧಿಹೊಂದಲು ಹೊಗೆಯೇ ಯಾವಾಗಲೂ ಕಾರಣವು. ಮಿಂಚಿನಿಂದ ಕೂಡಿ ಕೊಂಡಿರತಕ್ಕ ಪುಂಡವೆಂಬ ದೇಶದಲ್ಲಿ ಬಿದ್ದಂಥ ಮೋಡಗಳ ನೀರು ಮಂಜಿನಂತಿರುವುದು. ಗಂಗಾನದಿಯ ನೀರಿನಿಂದ ಉತ್ಪನ್ನವಾದ ಮೇಘಗಳಿಗೆ ಗಾಂಗ ಎಂದು ಹೆಸರು. ಪರಾವಹವೆಂಬ ಹೆಸರುಳ್ಳ ವಾಯುವಿನಿಂದ ಬೇರೆ ಮಾಡಲ್ಪಟ್ಟ ಪರ್ವತ, ನದಿ, ದಿಗ್ಗಜಗಳು, ಮೇಘ ಇವುಗಳ ನೀರನ್ನು ಮೇಘದೊಡನೆ ಸೇರಿಸಿಕೊಂಡು ಪರ್ವತದಿಂದ ಪರ್ವತಕ್ಕೆ ಸಂಚರಿಸುತ್ತಾ ಇರುವ ಪರಾವಹವೆಂಬ ವಾಯುವು ಹಿಮಾಲಯ ಪರ್ವತಕ್ಕೆ ತೆಗೆದುಕೊಂಡು ಬರುವುದು. ಈ ವಾಯುವು ಹಿಮಾಲಯ ಪರ್ವತವನ್ನು ದಾಟಿ, ಬಹಳ ನೀರುಳ್ಳದ್ದಾಗಿ ಸಮುದ್ರಮಧ್ಯದಲ್ಲಿರುವ ದೇಶಗಳ ಬೆಳವಣಿಗೆಗಾಗಿ ಭಾರತ ಭೂಮಿಗೆ ಬರುತ್ತದೆ.

ಸೂರ್ಯನು ಮಹಾತೇಜಸ್ವಿ, ಮೇಘಗಳಾಗಲು ಕಾರಣನು. ಜಗತ್ತಿಗೆ ಕಣ್ಣಿನಂತಿರುವವನು ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವನು. ಅವನೂ ನಮ್ಮನ್ನೆಲ್ಲರನ್ನೂ ರಕ್ಷಿಸುವನು. ಸಾಕ್ಷಾತ್ಪರಶಿವನೂ ಆಗಿರುವನು ಅವನೇ. ತೇಜೋರೂಪನೂ, ಓಜೋ ರೂಪನೂ ಆಗಿರುವನು. ತಾನೇ ಬಲ ಕೀರ್ತಿ ಸ್ವರೂಪನೂ ಆಗಿರುವನು. ಅವನೇ ಕಣ್ಣು, ಕಿವಿ, ಮನಸ್ಸು, ಸಾವು, ಆತ್ಮನು, ಯಜ್ಞ, ಆಗ್ನೇಯಾದಿ ನಾಲ್ಕು ದಿಕ್ಕುಗಳು ವಿವಿಧದಿಕ್ಕುಗಳ ಮತ್ತು ಪೂರ್ವಾದಿ ನಾಲ್ಕು ದಿಕ್ಕುಗಳು ಇವುಗಳ ಸ್ವರೂಪನು. ಆ ಸೂರ್ಯನು ಸತ್ಯ ಸ್ವರೂಪನೂ ಖ್ಯಾತ ಸ್ವರೂಪನೂ, ವಾಯು ಸ್ವರೂಪನೂ, ಆಕಾಶ ಸ್ವರೂಪನೂ, ಗ್ರಹ ಸ್ವರೂಪನೂ, ಪ್ರಪಂಚವನ್ನು ಪಾಲಿಸತಕ್ಕ ವಿಷ್ಣು ಸ್ವರೂಪನೂ, ಬ್ರಹ್ಮ ಸ್ವರೂಪನೂ, ಮಹೇಶ್ವರನಾದ

ಸರ್ವವ್ಯಾಪಕವಾದುದು. ಅಂಥ ವ್ಯಾಪಕವಾದ ನೀರಿಗೆ ಈಶ್ವರನು ಅಧಿಪತಿಯಾಗಿರುವುದರಿಂದ ಅವನು ಸರ್ವೇಶ್ವರನೆಂದು ತಾತ್ಪರ್ಯವು. ಚರಾಚರ ಪ್ರಪಂಚದಲ್ಲಿ ಉರಿಯುವಿಕೆಯಿಂದ ಪೃಥಿವೀ ಸಂಬಂಧದಿಂದ ಮೇಲಕ್ಕೆದ್ದು ಆಕಾಶದಲ್ಲಿ ಸೇರಿದ ಹೊಗೆ ಎಲ್ಲವೂ ವಾಯುವಿನಿಂದ ಒಟ್ಟುಗೂಡಿಸಲ್ಪಟ್ಟು ಮೇಘಗಳಾಗಿರುವುವು.

ಹೊಗೆ, ಅಗ್ನಿ, ಗಾಳಿ ಇವುಗಳ ಪರಸ್ಪರ ಸಂಯೋಗವೇ ಮೇಘವು. ಆ ಮೇಘವು ನೀರನ್ನು ಸುರಿಸುತ್ತದೆ. ಆ ಮೇಘಕ್ಕೆ ಇಂದ್ರನೇ ಅಧಿಪತಿಯು. ಯಜ್ಞ ಧೂಮದಿಂದ ಉಂಟಾದ ಮೇಘವು ತ್ರೈವರ್ಣಿಕರಿಗೆ ಹಿತವನ್ನುಂಟುಮಾಡುವುದು. ಕಾಡು ಕಿಚ್ಚಿನಿಂದುಂಟಾದ ಮೇಘವು ಕಾಡುಗಳಿಗೆ ಮಳೆಯನ್ನು ಸುರಿಸುವುದರ ಮೂಲಕ ಹಿತವನ್ನುಂಟು ಮಾಡುವುದು. ಶವವನ್ನು ಸುಟ್ಟಿದ್ದರಿಂದುಂಟಾದ ಧೂಮದಿಂದ ಹುಟ್ಟಿದ ಮೇಘವು ಅಶುಭವನ್ನುಂಟುಮಾಡುವದು ಹಿಂಸೆಯಿಂದುಂಟಾದ ಹೊಗೆಯಿಂದ ಹುಟ್ಟಿದ ಮೇಘವು ಪ್ರಾಣಿಗಳ ನಾಶಕ್ಕೆ ಕಾರಣವಾಗುವದು.

ಈ ರೀತಿಯಾದ ಧೂಮ ವಿಶೇಷಗಳಿಂದ ಲೋಕಗಳಿಗೆ ಹಿತವುಂಟಾಗುತ್ತದೆ. ಲೋಕಗಳಿಗೆ ಅಹಿತವಾಗುವ ಹಿಂಸೆಯಿಂದುಂಟಾದ ಧೂಮವನ್ನು ಮನುಷ್ಯನು ತಡೆಯಬೇಕು. ಹಿಂಸೆಯಿಂದುಂಟಾದ ಧೂಮವನ್ನು ಬ್ರಾಹ್ಮಣನಾದವನು ತಡೆಯಬೇಕು. ಹಾಗೆ ತಡೆಯದಿದ್ದರೆ ಆ ಧೂಮವು ಪ್ರಪಂಚದ ನಾಶಕ್ಕೆ ಕಾರಣವಾಗುವುದು. ನೀರು ಮೇಘಗಳಲ್ಲಿ ಆರು ತಿಂಗಳವರೆಗೂ ನಿಂತಿರುವುದು. ಅದನ್ನು ಆ ಮೇಘಗಳು ವಾಯುವಿನಿಂದ ದೇವನ ಅಪ್ಪಣೆಯಂತೆ ಲೋಕಹಿತಕ್ಕಾಗಿ ಸುರಿಸುವವು.

ಆ ಮೇಘಗಳಲ್ಲಿ ಹುಟ್ಟಿದ ಗುಡುಗು ಸಿಡಿಲು ಮುಂತಾದ ಘರ್ಜನೆಯು ವಾಯುವಿನ ಸಂಬಂಧವಾದುದು. ಮಿಂಚು ಮುಂತಾದವುಗಳು ಅಗ್ನಿಯ ಸಂಬಂಧವಾದವು. ಮೇಘಗಳ ಉತ್ಪತ್ತಿಯು ಈ ರೀತಿಯಾಗಿ ವಾಯು, ಧೂಮ, ಅಗ್ನಿ ಇವು ಮೂರರಿಂದ ಆಗುವುದು. ಯಾವಾಗಲೂ ಕೆಳಕ್ಕೆ ಬೀಳುವುದಿಲ್ಲವಾದುದರಿಂದ ಮೋಡಕ್ಕೆ ಅಭ್ರವೆಂತಲೂ ಹೆಸರು ಬಂದಿದೆ. ಈ ಮೇಘಗಳು ಕಟ್ಟಿಗೆಯಿಂದುಂಟಾದ ಅಗ್ನಿಯಿಂದ ಹುಟ್ಟಿದವುಗಳೆಂದೂ ಬ್ರಹ್ಮನಿಂದ ಹುಟ್ಟಿದವುಗಳೆಂದೂ, ಮೇರುವಿನ ರೆಕ್ಕೆಯಿಂದ ಹುಟ್ಟಿದವುಗಳೆಂದೂ ಮೂರು ವಿಧವಾಗಿರುವುವು.

ತುಪ್ಪವನ್ನು ಕಟ್ಟಿಗೆಗಳೊಡನೆ ಬೆರೆಸಿ ಅದಕ್ಕೆ ಅಗ್ನಿಯ ಸಂಯೋಗವಾದಾಗ ಉಂಟಾದ ಧೂಮದಿಂದ ಹುಟ್ಟಿದ ಮೇಘವು ಕಾಷ್ಠಮೇಘವು. ಕಟ್ಟಿಗೆಯಿಂದುಂಟಾದ ಮೇಘವು ಎರಡನೆಯದಾದ ವೈರಿಂಚಮೇಘವು. ಬ್ರಹ್ಮನಿಂದ ಹುಟ್ಟಿದ ಮೇಘವು ಬ್ರಹ್ಮನ ಉಚ್ಛ್ವಾಸ ವಾಯುವಿನಿಂದ ಹುಟ್ಟಿದುದು. ಮೂರನೆಯದಾದ ಪಕ್ಷಮೇಘವು ರೆಕ್ಕೆಯಿಂದುಂಟಾದ ಮೇಘವು. ದೇವೇಂದ್ರನು ಪರ್ವತಗಳ ರೆಕ್ಕೆಗಳನ್ನು ಕಡಿದಾಗ ಅವುಗಳಿಂದ ಉಂಟಾದವು ಪಕ್ಷ ಮೇಘಗಳು. ವಹ್ನಿ ಸಂಬಂಧವಾದ ಮೇಘಗಳು ಆವಹವೆಂಬ ವಾಯುವಿನ ನೇಮಿಯಲ್ಲಿರುವವು. ಅವು ಶುಭವಾದವುಗಳು. ಪ್ರವಹವೆಂಬ ಎರಡನೆಯ ವಾಯುವಿನ ಸ್ಕಂಧದಲ್ಲಿರುವವುಗಳು ಬ್ರಹ್ಮನ ಉಚ್ಛ್ವಾಸಗಳಿಂದ ಹುಟ್ಟಿದ ಮೇಘಗಳು. ಆ ಪ್ರವಹವಾಯುವಿನ ಸ್ಕಂಧದ ಮೇಲಿರುವ ರೆಕ್ಕೆಗಳಿಂದ ಉತ್ಪನ್ನವಾದ ಪುಷ್ಕರಾದಿ ಮೇಘಗಳು ಮಳೆಯನ್ನು ವಿಶೇಷವಾಗಿ ಸುರಿಸುವವು.

ಹಿಂದೆ ಹೇಳಿದ ಮೂರು ವಿಧವಾದ ಮೇಘಗಳು ಕೆಲವು ಶಬ್ದ ಮಾಡದೇ ಇರುವವುಗಳಾಗಿಯೂ, ಕೆಲವು ಗರ್ಜಿಸುವವುಗಳಾಗಿಯೂ, ಕೆಲವು ಕೆಟ್ಟ ಫಲ ಸೂಚನೆಯುಳ್ಳವುಗಳಾಗಿಯೂ ಇರುವುವು. ಆಗ್ನೇಯ ಮೇಘಗಳು ಶೀತವಾದ ಗಾಳಿಯೊಡನೆ ಬಹಳ ಹೊತ್ತಿನವರೆಗೂ ಸೋನೆಮಳೆಯನ್ನು ಸುರಿಸುವವು ಶಕ್ತಿಹೀನವಾದ ವೈರಿಂಚ್ಯ ಮೇಘಗಳು ಮಿಂಚು ಮುಂತಾದ ವಿದ್ಯುತ್ತಿನ ಸಂಬಂಧವಿಲ್ಲದೇ ಭೂಮಿಯ ಮೇಲೆ ಒಂದು ಹರಿದಾರಿ ದೂರದಲ್ಲಿ ಮಾತ್ರ ಮಳೆಯನ್ನು ಸುರಿಸುವವು. ಬೆಟ್ಟಗಳಲ್ಲಿ ಸಂಚರಿಸುತ್ತಿರುವ ಶಾಶ್ವತವಾದ ಬ್ರಹ್ಮನ ವಿಶ್ವಾಸದಿಂದ ಹುಟ್ಟಿದ ಮೇಘಗಳು ಅರ್ಧ ಹರಿದಾರಿಯ ದೂರದಲ್ಲಿ ಮಳೆಯನ್ನು ಸುರಿಸುವವು. ಮಿಂಚು, ಗುಡುಗು ಮುಂತಾದವುಗಳಿಂದ ಕೂಡಿದ್ದರೆ ಭೂಮಿಯ ಮೇಲೆ ಒಂದು ಯೋಜನದವರೆಗೂ, ಬಹುವಾಗಿ ಮಳೆಯನ್ನು ಸ್ಮರಿಸುವವು. ಆಗ್ನೇಯ ಮತ್ತು ಶ್ವಾಸಜನ್ಯವಾದ ಮೇಘಗಳು ಮಳೆಯನ್ನು ಸುರಿಸುವವು ಮೂರು ವಿಧವಾಗಿರುವವು.

ಪಕ್ಷಜಗಳಾದ ಮೇಘಗಳಲ್ಲಿ ಪಕ್ಷಜವೆಂಬ ಹೆಸರುಳ್ಳ ಮೇಘಗಳು ದೊಡ್ಡ ಪರ್ವತಗಳಿಗಿಂತಲೂ ದೊಡ್ಡದಾಗಿರುವುವು. ಮತ್ತು ಇವು ಪ್ರಳಯಕಾಲದಲ್ಲಿ ಮಳೆಯನ್ನು ಸುರಿಸುವವು. ಶಾರದ ಎಂಬ ಹೆಸರುಳ್ಳ ಮೇಘಗಳು ರಾತ್ರಿ ವೇಳೆಯಲ್ಲಿ ಲೋಕಕ್ಕೆ ಕೆಡುಕನ್ನು ಮಾಡುತ್ತಾ ಮಳೆಯನ್ನು ಸುರಿಸುತ್ತವೆ. ಪುಷ್ಕರವೇ ಮೊದಲಾದ ಹೆಸರುಗಳುಳ್ಳ ಮೇಘಗಳು ಮಳೆಯನ್ನು ಸುರಿಸಿ ಸಮಸ್ತ ಪ್ರಪಂಚವನ್ನು ಜಲಮಯವನ್ನಾಗಿ ಮಾಡುತ್ತವೆ. ಅವೇ ಸಮುದ್ರ ಎನಿಸಿಕೊಂಡಿರುವವು. ಆಗ್ನೇಯ, ಶ್ವಾಸಜ ಮತ್ತು ಪಕ್ಷಜಗಳಾದ ಮೇಘಗಳು ಅಭಿವೃದ್ಧಿಹೊಂದಲು ಹೊಗೆಯೇ ಯಾವಾಗಲೂ ಕಾರಣವು. ಮಿಂಚಿನಿಂದ ಕೂಡಿ ಕೊಂಡಿರತಕ್ಕ ಪುಂಡವೆಂಬ ದೇಶದಲ್ಲಿ ಬಿದ್ದಂಥ ಮೋಡಗಳ ನೀರು ಮಂಜಿನಂತಿರುವುದು. ಗಂಗಾನದಿಯ ನೀರಿನಿಂದ ಉತ್ಪನ್ನವಾದ ಮೇಘಗಳಿಗೆ ಗಾಂಗ ಎಂದು ಹೆಸರು. ಪರಾವಹವೆಂಬ ಹೆಸರುಳ್ಳ ವಾಯುವಿನಿಂದ ಬೇರೆ ಮಾಡಲ್ಪಟ್ಟ ಪರ್ವತ, ನದಿ, ದಿಗ್ಗಜಗಳು, ಮೇಘ ಇವುಗಳ ನೀರನ್ನು ಮೇಘದೊಡನೆ ಸೇರಿಸಿಕೊಂಡು ಪರ್ವತದಿಂದ ಪರ್ವತಕ್ಕೆ ಸಂಚರಿಸುತ್ತಾ ಇರುವ ಪರಾವಹವೆಂಬ ವಾಯುವು ಹಿಮಾಲಯ ಪರ್ವತಕ್ಕೆ ತೆಗೆದುಕೊಂಡು ಬರುವುದು. ಈ ವಾಯುವು ಹಿಮಾಲಯ ಪರ್ವತವನ್ನು ದಾಟಿ, ಬಹಳ ನೀರುಳ್ಳದ್ದಾಗಿ ಸಮುದ್ರಮಧ್ಯದಲ್ಲಿರುವ ದೇಶಗಳ ಬೆಳವಣಿಗೆಗಾಗಿ ಭಾರತ ಭೂಮಿಗೆ ಬರುತ್ತದೆ.

ಸೂರ್ಯನು ಮಹಾತೇಜಸ್ವಿ, ಮೇಘಗಳಾಗಲು ಕಾರಣನು. ಜಗತ್ತಿಗೆ ಕಣ್ಣಿನಂತಿರುವನು ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವನು. ಅವನೂ ನಮ್ಮನ್ನೆಲ್ಲರನ್ನೂ ರಕ್ಷಿಸುವನು. ಸಾಕ್ಷಾತ್ಪರಶಿವನೂ ಆಗಿರುವನು ಅವನೇ. ತೇಜೋರೂಪನೂ, ಓಜೋ ರೂಪನೂ ಆಗಿರುವನು. ತಾನೇ ಬಲ ಕೀರ್ತಿ ಸ್ವರೂಪನೂ ಆಗಿರುವನು. ಅವನೇ ಕಣ್ಣು, ಕಿವಿ, ಮನಸ್ಸು, ಸಾವು, ಆತ್ಮನು, ಯಜ್ಞ, ಆಗ್ನೇಯಾದಿ ನಾಲ್ಕು ದಿಕ್ಕುಗಳು ವಿವಿಧದಿಕ್ಕುಗಳ ಮತ್ತು ಪೂರ್ವಾದಿ ನಾಲ್ಕು ದಿಕ್ಕುಗಳು ಇವುಗಳ ಸ್ವರೂಪನು. ಆ ಸೂರ್ಯನು ಸತ್ಯ ಸ್ವರೂಪನೂ ಖ್ಯಾತ ಸ್ವರೂಪನೂ, ವಾಯು ಸ್ವರೂಪನೂ, ಆಕಾಶ ಸ್ವರೂಪನೂ, ಗ್ರಹ ಸ್ವರೂಪನೂ, ಪ್ರಪಂಚವನ್ನು ಪಾಲಿಸತಕ್ಕ ವಿಷ್ಣು ಸ್ವರೂಪನೂ, ಬ್ರಹ್ಮ ಸ್ವರೂಪನೂ, ಮಹೇಶ್ವರನಾದ

ರುದ್ರನ ಸ್ವರೂಪನೂ ಆಗಿರುವನು ಅವನು ಸಾವಿರ ಕಿರಣಗಳುಳ್ಳವನೂ, ಕಾಂತಿಯುಕ್ತನೂ, ಎಂಟುಕೈಗಳುಳ್ಳವನೂ, ಮಂಗಳಕರನೂ, ಅರ್ಧನಾರೀಶ್ವರನೂ ಮೂರುಕಣ್ಣುಳ್ಳವನೂ, ಆದ ಮಹೇಶ್ವರ ಸ್ವರೂಪನೂ ಆಗಿರುವನು. ದೇವತೆಗಳಿಗೆಲ್ಲರಿಗೂ ಅವನೇ ಒಡೆಯನು. ಈ ಸೂರ್ಯನ ಅನುಗ್ರಹದಿಂದಲೇ ನಾನಾ ವಿಧವಾಗಿ ಮಳೆಯುಂಟಾಗುವುದು. ಇವನು ತನ್ನ ಕಿರಣಗಳಿಂದ ಸ್ವೀಕರಿಸಿದ ನೀರಿನ ಸಾವಿರದಷ್ಟು ಮಳೆಯನ್ನು ಸುರಿಸುವನು. ಈ ಸೂರ್ಯನ ದೆಸೆಯಿಂದ ನೀರಿನ ನಾಶವಾಗಲೀ, ಅಭಿವೃದ್ಧಿಯಾಗಲೀ ಉಂಟಾಗುವುದಿಲ್ಲ. ಧ್ರುವಮಂಡಲದಲ್ಲಿ ಸಂಚರಿಸುವ ವಾಯುವು ಮಳೆಯನ್ನು ನಿಲ್ಲಿಸುತ್ತದೆ. ಮೇಘವು ಮೊದಲು ಸೂರ್ಯಗ್ರಹದಿಂದ ಹೊರಟು ನಕ್ಷತ್ರ ಮಂಡಲದಲ್ಲೆಲ್ಲಾ ಸಂಚರಿಸಿ ಮಳೆಯನ್ನು ಸುರಿಸುತ್ತದೆ. ಮಳೆ ಎಲ್ಲವು ಮುಗಿದ ಮೇಲೆ, ಮೇಘವು ಧ್ರುವ ಮಂಡಲದ ಮಾರ್ಗವಾಗಿ ಸೂರ್ಯನನ್ನು ಸೇರುತ್ತದೆ.

*ಲಿಂಗ ಮಹಾಪುರಾಣದ ಪೂರ್ವಾರ್ಧದ ಜ್ಯೋತಿರ್ಮಂಡಲದಲ್ಲಿ*
*ಸೂರ್ಯಗತಿಯ ವಿವರಣೆ ಎಂಬ ಐವತ್ತನಾಲ್ಕನೆಯ ಅಧ್ಯಾಯ ಮುಗಿದುದು*



## ಜ್ಯೋತಿಶ್ಚಕ್ರದಲ್ಲಿ ಸೂರ್ಯರಥ ಗಮನ

ಅಧ್ಯಾಯ - ೫೫

**ಸೂತ** :- ಬ್ರಹ್ಮನಿಂದ ಪ್ರಯೋಜನಕ್ಕನುಗುಣವಾಗಿ ಈ ಸೂರ್ಯನ ರಥವು ಸಂವತ್ಸರದ ಅವಯವಗಳಿಂದ ನಿರ್ಮಿತವಾಗಿರುವುದು. ಸೂರ್ಯನ ರಥವು ಮೂರು ಕುಂಭಗಳುಳ್ಳದ್ದು ಐದು ಆರೇಕಾಲಿನಪಟ್ಟಿಗಳಿಂದ ಕೂಡಿದುದು. ಚಿನ್ನದಿಂದ ನಿರ್ಮಿತವಾದುದು. ಸಮಸ್ತ ದೇವತೆಗಳಿಗೂ ಆವಾಸ ಸ್ಥಾನವಾಗಿರುವುದು. ಈ ರಥವು ಒಂಬತ್ತು ಯೋಜನದಷ್ಟು ಸುತ್ತಳತೆಯುಳ್ಳದ್ದಾಗಿರುವುದು. ಈ ರೀತಿ ಉದ್ದ ಮತ್ತು ಅಗಲದಲ್ಲಿ ರಥವು ಎರಡರಷ್ಟಿದ್ದರೂ ಕೂಡ ಅದರ ಕೆಳಭಾಗವು ಮಾತ್ರ ಒಂದು ನೇಗಿಲಿನ ಈಚಿನ ಉದ್ದದಷ್ಟು ಮಾತ್ರ ಇರುವುದು. ಚಕ್ರವಿರುವ ಸಮೀಪದಲ್ಲಿ ವೇದಗಳಿಂದಮಾಡಲ್ಪಟ್ಟ ಅಂತರಿಕ್ಷವೆಲ್ಲಾ ಸಂಚಾರಮಾಡುವಂತಹ ಏಳು ಕುದುರೆಗಳಿಂದ ಕೂಡಿದುದಾಗಿರುವುದು. ಆ ಏಳುಕುದುರೆಗಳ ಹೆಸರುಗಳನ್ನು ಗಾಯತ್ರಿ, ಬಹತೀ, ಉಷ್ಣಿಕ್, ಜಗತೀ, ತ್ರಿಷ್ಟುಪ್, ಪಂಜ್ತಿ ಎಂಬುದಾಗಿ ವಿಷ್ಣು ಪುರಾಣದಲ್ಲಿ ಹೇಳಲಾಗಿದೆ. ಆ ಅಶ್ವಗಳು ಚಕ್ರದ ಪಾರ್ಶ್ವಭಾಗದಲ್ಲಿ ಕಟ್ಟಲ್ಪಟ್ಟಿರುವುವು. ರಥದ ಅಚ್ಚು ಧ್ರುವನಲ್ಲಿ ಸಂಬಂಧವಾಗಿರುವುದು. ರಥವು ಕುದುರೆಗಳಿಂದಲೂ, ಚಕ್ರಗಳಿಂದಲೂ ಕೂಡಿ ಸುತ್ತುವುದು. ಅಚ್ಚಿನಿಂದ ಕೂಡಿದ ಧ್ರುವವೂ ಸುತ್ತುವುದು. ಅದರ ಅಚ್ಚು ಏರುಮರದ ಸಹಾಯದಿಂದ ಒಂದು ಚಕ್ರದೊಡನೆ ಕೂಡಿಕೊಂಡು ತಿರುಗುವುದು ನಿಖಿಲ ನಕ್ಷತ್ರಮಂಡಲದ ಚಲನ ವಲನಗಳಿಗೂ ಕಾರಣವಾದ ಆ ಏರುಮರುವು ಆ ವಾಯುವಿನ ಅಲೆಗಳ ಸಹಾಯದಿಂದ ತಿರುಗುವುದು. ಆ ರಥಕ್ಕೆ ನೊಗಕ್ಕೂ ಮತ್ತು ಅಚ್ಚಿನ ತುದಿಗೂ ಕಟ್ಟಿದಂಥ ಎರಡು ಹಗ್ಗಗಳಿವೆ. ನೊಗಕ್ಕೂ ಅಚ್ಚಿಗೂ ಕೂಡಿಕೊಂಡಿರುವ ಹಗ್ಗಗಳಿಂದ ಕೂಡಿರುವ ಸೂರ್ಯನ ರಥವು ಏರುಮರದಿಂದ ಕೂಡಿ ಸುತ್ತುವುದು.

ಅಂತರಿಕ್ಷದಲ್ಲಿ ಸಂಚಾರಮಾಡುವ ರಥದ ಸುತ್ತುವಿಕೆಯ ಕಾರಣದಿಂದ ಮಂಡಲಗಳು ನಿರ್ಮಿತವಾಗುತ್ತವೆ. ಹಗ್ಗಕ್ಕೆ ಸಂಬಂಧಿಸಿದಂಥ ಆ ನೊಗವೂ, ಅಚ್ಚಿನ ತುದಿಯೂ ಸೂರ್ಯನ ರಥದ ಬಲಭಾಗದಲ್ಲಿ ಏರುಮರದಿಂದ ಕೂಡಿದವುಗಳಾಗಿವೆ. ಸಾರಥಿಯಾದ ಅರುಣನಿಂದಲೂ ಚಕ್ರಗಳಿಂದಲೂ, ಕುದುರೆಗಳಿಂದಲೂ ಕೂಡಿದ ಆ ಎರಡೂ ಹಗ್ಗಗಳೂ ತಿರುಗುತ್ತಿರುವ ಏರುಮರವನ್ನುನುಸರಿಸಿ ತಿರುಗುತ್ತವೆ. ವಾಯುವಿನ ಅಲೆಯ ರೂಪವಾಗಿರುವ ಈ ಸೂರ್ಯನ ರಥದ ನೊಗವೂ, ಮತ್ತು ಅಚ್ಚೂ ಕೂಡ ಗೂಟದಲ್ಲಿ ಕಟ್ಟಿದ ಹಗ್ಗವು ಸುತ್ತುವಂತೆ ಎಲ್ಲ ದಿಕ್ಕುಗಳನ್ನೂ ಸುತ್ತುವುದು.

ಹೀಗೆ ಸುತ್ತುತ್ತಿರುವ ಆ ಸೂರ್ಯನ ಕಿರಣಗಳು ಉತ್ತರಾಯಣದಲ್ಲಿ ಮಂಡಲಾಕಾರವಾಗಿ ಅಭಿವೃದ್ಧಿಯನ್ನು ಹೊಂದುತ್ತವೆ. ದಕ್ಷಿಣಾಯನದಲ್ಲಿ ಆ ಮಂಡಲದ ಆಕಾರವು ಕಡಿಮೆಯಾಗುತ್ತದೆ. ಯಾವಾಗ ಆ ಕಿರಣಗಳು ಧ್ರುವಮಂಡಲದ ಆಕರ್ಷಣೆ--ಗೊಳಗಾಗುವವೊ ಆಗ ಸೂರ್ಯನು ಎಲ್ಲ ಮಂಡಲಗಳಲ್ಲಿಯೂ ಸಂಚರಿಸುತ್ತಾನೆ. ಏರುಮರದಿಂದ ಬೇರೆ ಬೇರೆ ಕಡೆಗೆ ಹೊರಟಿರುವ ಹಗ್ಗಗಳಿಗೂ ಮತ್ತು ಎರಡು ಕಡೆಗಳಲ್ಲಿರುವ ದಿಕ್ಕುಗಳಿಗೂ ಮಧ್ಯಭಾಗದಲ್ಲಿ ಎಂಬತ್ತು ಸಾವಿರ ಮಂಡಲದ ಅಂತರ ವಿರುವುದು. ಅವುಗಳ ಸಹಾಯದಿಂದ ಸೂರ್ಯನು ತನ್ನ ವೇಗದಿಂದ ಎಲ್ಲ ಮಂಡಲಗಳನ್ನೂ ಜಾಗ್ರತೆಯಾಗಿ ದಾಟುತ್ತ ಮಂಡಲಗಳನ್ನೆಲ್ಲವನ್ನೂ ಸಂಚರಿಸುವನು. ದೇವತೆಗಳೂ ಮತ್ತು ಋಷಿಗಳೆಲ್ಲರೂ ಸೇರಿ ಹಗಲೂ, ರಾತ್ರಿಯೂ ಎಡಬಿಡದೇ ಯಾವಾಗಲೂ ಭಗವಂತನಾದಂಥ ಸಾಕ್ಷಾದೀಶ್ವರಸ್ವರೂಪನಾದಂಥ ಸೂರ್ಯನನ್ನು ಪೂಜೆ ಮಾಡುತ್ತಾರೆ.

ಆ ಸೂರ್ಯನರಥವು ಮೂವತ್ತುಮೂರುಕೋಟಿದೇವತೆಗಳಿಂದಲೂ, ದ್ವಾದಶಾದಿತ್ಯರಿಂದಲೂ, ಸಪ್ತಋಷಿಗಳಿಂದಲೂ, ಗಂಧರ್ವರಿಂದಲೂ, ಅಪ್ಸರೆಯರಿಂದಲೂ, ಉತ್ತಮವಾದ ಸರ್ಪಗಳಿಂದಲೂ ಮತ್ತು ರಾಕ್ಷಸರಿಂದಲೂ ಕೂಡಿರುವುದು. ಇವರೆಲ್ಲರೂ ಸೂರ್ಯನ ರಥದಲ್ಲಿ ಅವನ ಸಂಗಡ ಎರಡೆರಡು ತಿಂಗಳು ಕ್ರಮವಾಗಿ ವಾಸ ಮಾಡುತ್ತಾ ತಮ್ಮತಮ್ಮ ಕಾಂತಿಯಿಂದ ಮಂಗಳಕರನಾದ ಸೂರ್ಯನನ್ನು ಸಂತೋಷಪಡಿಸುತ್ತಾರೆ. ಸಪ್ತಋಷಿಗಳು ಸೂರ್ಯನನ್ನು ತಮ್ಮ ಕೌಶಲ್ಯದಿಂದ ರಚಿಸಿದ ಮಾತುಗಳಿಂದ ಸ್ತೋತ್ರಮಾಡುತ್ತಾರೆ. ಗಂಧರ್ವರೂ, ಅಪ್ಸರರೂ ಕೂಡ ನಾಟ್ಯದಿಂದಲೂ ಗಾನ ಮಾಡುವುದರಿಂದಲೂ ಸೂರ್ಯನನ್ನು ಪೂಜಿಸುತ್ತಾರೆ.

ಯಕ್ಷರೂ, ಭೂತಗಳೂ, ಆ ಸೂರ್ಯನ ರಥದ ಹಗ್ಗಗಳನ್ನು ಹಿಡಿದುಕೊಳ್ಳುವರು. ಸರ್ಪಗಳು ಸೂರ್ಯನನ್ನು ಹೊರುತ್ತವೆ. ರಾಕ್ಷಸರು ಸೂರ್ಯನನ್ನು ಅನುಸರಿಸಿ ಸಂಚರಿಸುವರು. ವಾಲಖಿಲ್ಯರೆಂಬ ಹೆಸರುಳ್ಳ ಋಷಿಗಳು ಸೂರ್ಯನ ಸಂಗಡ ಎರಡು ತಿಂಗಳಕಾಲ ವಾಸಮಾಡುತ್ತಾ ಸೂರ್ಯನ ಹುಟ್ಟುವಿಕೆಯಿಂದ ಅಸ್ತಮನ ಕಾಲದವರೆಗೆ ಇದ್ದು ಅಸ್ತಾಚಲ ಪರ್ವತಕ್ಕೆ ಸೂರ್ಯನನ್ನು ಒಯ್ಯುತ್ತಾರೆ.

ಮನುಜರಿಗೆ ಸಂಬಂಧಿಸಿದ ವರ್ಷಗಳಲ್ಲಿ ಮಧು, ಮಾಧವ, ಶಕ, ಶುಚಿ, ನಭ, ನಭಸ್ಯ, ಇಷ, ಓಜ, ಸಹ, ಸಹಸ್ಯ, ತಪಸ್ಯ, ತಪ ಎಂಬ ಹೆಸರುಳ್ಳ ಹನ್ನೆರಡು ತಿಂಗಳುಗಳಿವೆ. ವಸಂತ, ಗ್ರೀಷ್ಮ, ವರ್ಷ, ಶರತ್ ಹೇಮಂತ, ಶಿಶಿರ ಎಂಬ ಹೆಸರುಳ್ಳಂಥ ಶುಭಕರವಾದ ಆರು ಋತುಗಳಿವೆ. ಧಾತಾ ಆರ್ಯಮ, ಮಿತ್ರ, ವರುಣ, ಇಂದ್ರ ವಿವಸ್ವಾನ, ಪೂಷಾ, ಪರ್ಜನ್ಯ, ಅಂಶು,

ಭಗ, ತ್ವಷ್ಟಾ, ವಿಷ್ಣು ಎಂಬ ಹೆಸರುಳ್ಳ ದ್ವಾದಶಾದಿತ್ಯರು ಇದ್ದಾರೆ. ಋಷಿಗಳಲ್ಲಿ ಪುಲಸ್ತ್ಯ, ಪುಲಹ, ಅತ್ರಿ, ವಸಿಷ್ಠ, ಅಂಗಿರಸ, ಭೃಗು, ಬುದ್ಧಿವಂತರಲ್ಲಿ ಶ್ರೇಷ್ಠನಾದ ಭಾರದ್ವಜ ಗೌತಮ ಕಶ್ಯಪ, ಕೃತ, ಜಮದಗ್ನಿ, ಕೌಶಿಕರೆಂಬ ಹೆಸರುಳ್ಳ ಹನ್ನೆರಡು ಜನರಿದ್ದಾರೆ. ವಾಸುಕಿ, ಕಂಕಣೀಕರ, ತಕ್ಷಕ, ನಾಗ, ಏಲಾಪುತ್ರ, ಶಂಖಪಾಲ, ಐರಾವತ, ಧನಂಜಯ, ಮಹಾಪದ್ಮ, ಕರ್ಕೋಟಕ, ಕಂಬಲ, ಅಶ್ವತರ ಎಂಬ ಹೆಸರುಳ್ಳ ಹನ್ನೆರಡು ಸರ್ಪಗಳಿವೆ. ತುಂಬುರು, ನಾರದ, ಹಾಹಾ, ಹೂಹೂ, ವಿಶ್ವಾವಸು, ಅನುತ್ತಮ, ಉಗ್ರಸೇನ, ಸುರುಚಿ, ಪರಾವಸು, ಚಿತ್ರಸೇನ, ಊರ್ಣಾಯು, ಧೃತರಾಷ್ಟ್ರ ಎಂಬ ಮಹಾತೇಜಸ್ವಿಗಳಾದ ಹನ್ನೆರಡು ಮಂದಿ ಗಂಧರ್ವರಿರುವರು. ಸೂರ್ಯನಂತೆಯೇ ತೇಜಸ್ಸುಳ್ಳ, ಸೂರ್ಯವರ್ಚಾದೇವಿ, ಕೃತಸ್ಥಲಾ, ಮನೋಹರವಾದ ಮುಖವುಳ್ಳ ಶುಭಾನನಾ, ಶುಭಶ್ರೋಣಿ, ಪುಂಜಿಕಸ್ಥಲಾ, ಘೃತಾಚೀ, ವಿಶ್ವಾಚೀ, ಊರ್ವಶೀ, ಪೂರ್ವಚಿತ್ತಿ, ಪ್ರಸಿದ್ಧಳಾದ ತಿಲೋತ್ತಮಾ, ಕಮಲದಂತೆ ಮುಖವುಳ್ಳ ರಂಭಾ ಎಂಬ ಹನ್ನೆರಡು ಜನ ಅಪ್ಸರೆಯರೂ ಇರುವರು. ಇವರಂತೇಯೇ ಗ್ರಾಮಣಿಗಳಲ್ಲಿ ಶುಭಪ್ರದ ರಥಕೃತ್, ರಥೌಜಾ, ರಥಚಿತ್ರ, ಸುಬಾಹು, ರಥಸ್ವನ, ವರುಣ, ಸುಕ್ಷೇಣ, ಮಂಗಳಕರನಾದ ಸೇನಜಿತ್, ತಾರ್ಕ್ಷ್ಯ, ಅರಿಷ್ಟನೇಮಿ, ಕ್ಷತಜಿತ್ ಸತ್ಯಜಿತ್ ಎಂಬ ಹೆಸರುಳ್ಳ ಹನ್ನೆರಡು ಜನಗಳಿರುವರು.

ರಾಕ್ಷಸರುಗಳಲ್ಲಿ ಹೇತಿ, ಪ್ರಹೇತಿ, ಪೌರುಷೀಯ, ವಧ, ಸರ್ಪ, ವ್ಯಾಘ್ರ, ಆಪ, ವಾತ, ವಿದ್ಯುತ್, ದಿವಾಕರ ಬ್ರಹ್ಮೋಪೇತ, ಯಜ್ಞೋಪೇತರೆಂಬ ಹೆಸರುಳ್ಳ ಹನ್ನೆರಡು ಮಂದಿ ಇರುವರು. ಈ ಮೇಲೆ ಹೇಳಿದ ದೇವತೆಗಳಾದಿಯಾಗಿ ಎಲ್ಲರೂ ಕ್ರಮಕ್ರಮವಾಗಿ ಸೂರ್ಯನೊಡನೆ ವಾಸವಾಗಿರುವರು. ಈ ರೀತಿಯಾಗಿ ಪ್ರತ್ಯೇಕವಾಗಿರುವ ಹನ್ನೆರಡ-ರಂತೆಯೇ ಇರುವ ಏಳು ಗುಂಪಿನದೇವತೆಗಳೂ, ಸ್ಥಾನಾಭಿಮಾನದೇವತೆಗಳು ಬ್ರಹ್ಮನಿಂದ ಮೊದಲ್ಗೊಂಡು ವಿಷ್ಣುವಿನವರೆಗೆ ಇರುವ ದೇವತೆಗಳು ಹನ್ನೆರಡು ಮಂದಿ ಇರುವರು. ಮೇಲೆ ಹೇಳಿದ ಧಾತ್ರಾದಿಯಾಗಿ ವಿಷ್ಣು ಪರ್ಯಂತರಾದ ದ್ವಾದಶಾದಿತ್ಯರು ಪರಮ ತೇಜೋರಾಶಿಯಾದ ಸೂರ್ಯನನ್ನು ತಮ್ಮ ತಮ್ಮ ಕಾಂತಿಯಿಂದ ಇನ್ನೂ ಉಜ್ವಲವಾಗುವಂತೆ ಮಾಡುತ್ತಾರೆ. ಪುಲಸ್ತ್ಯನೇ ಮೊದಲಾದ ಕೌಶಿಕನವರೆಗೆ ಇರುವ ಹನ್ನೆರಡು ಜನ ಋಷಿಗಳು ಯಥಾಕ್ರಮವಾಗಿ ಹನ್ನೆರಡು ಸ್ತೋತ್ರಗಳಿಂದ ಸೂರ್ಯನನ್ನು ಸ್ತುತಿ ಮಾಡುತ್ತಾರೆ.

ಸರ್ಪಗಳಲ್ಲಿ ವಾಸುಕಿಯೇ ಮೊದಲುಗೊಂಡು ಅಶ್ವತರನವರೆಗಿರುವ ಹನ್ನೆರಡು ಸರ್ಪಗಳೂ ದೇವದೇವನಾದ ಆದಿತ್ಯನನ್ನುಯಥಾಕ್ರಮವಾಗಿ ಹೊರುತ್ತವೆ. ತುಂಬುರರೇ ಮೊದಲಾದ ಸೂರ್ಯವರ್ಚನವರೆಗಿರುವ ಹನ್ನೆರಡು ಜನ ಉತ್ತಮರಾದ ಗಂಧರ್ವರುಗಳು ಸೂರ್ಯನನ್ನು ಗಾನಗಳಿಂದ ಸೇವೆಮಾಡುತ್ತಾರೆ. ಕೃತಸ್ಥಲಾ ಮೊದಲಾದ ರಂಭಾನವರೆಗೂ ಇರುವ ಹನ್ನೆರಡುಜನ ಮಹಾಸುಂದರಿಯರಾದ ಅಪ್ಸರೆಯರು ಯಥಾಕ್ರಮವಾಗಿ ಮೃದಂಗವಾದನ, ನರ್ತನದಿಂದ ಸೂರ್ಯನ ಸೇವೆಯನ್ನು ಮಾಡುತ್ತಾರೆ. ರಥಕೃತ್ ಎಂಬವನಿಂದ ಮೊದಲುಗೊಂಡು ಸತ್ಯಜಿತ್. ಎಂಬುವವನವರೆಗಿರುವ ಗ್ರಾಮಣಿಗಳು ಯಥಾಕ್ರಮವಾಗಿ ಸೂರ್ಯನ ರಶ್ಮಿಯನ್ನು ಹಿಡಿದುಕೊಳ್ಳುತ್ತಾರೆ. ಹೇತಿ ಎಂಬವನಿಂದ ಮೊದಲುಗೊಂಡು ಯಜ್ಞೋಪೇತನವರೆಗಿರುವ ಹನ್ನೆರಡುಜನ ರಾಕ್ಷಸರು ಯಥಾಕ್ರಮವಾಗಿ ಆಯುಧಗಳನ್ನು ಹಿಡಿದುಕೊಡು ಸೂರ್ಯನ ಜೊತೆಯಲ್ಲಿ ಹೋಗುತ್ತಾರೆ.

ಮಧು, ಮತ್ತು ಮಾಧವ ಈ ಎರಡು ಮಾಸಗಳಲ್ಲಿ ಸೂರ್ಯನ ಸಂಗಡ ದ್ವಾದಶಾದಿತ್ಯದಲ್ಲಿ ಧಾತಾ, ಅರ್ಯಮಾ ಎಂಬಿಬ್ಬರೂ; ಮುನಿಗಳಲ್ಲಿ ಪುಲಸ್ತ್ಯ ಪುಲಹ ಎಂಬಿಬ್ಬರೂ; ಗಾನಮಾಡುವದರಲ್ಲಿ ಸಮರ್ಥರಾದ ತುಂಬರುನಾರದ ಎಂಬಿಬ್ಬರು ಗಂಧರ್ವರ ಪಕ್ಷವಾಗಿಯೂ; ಅಪ್ಸರೆಯರಲ್ಲಿ ಕೃತಸ್ಥಲಾ, ಪುಂಜಿಕಸ್ಥಲಾ ಎಂಬಿಬ್ಬರೂ; ಗ್ರಾಮಣಿಗಳಲ್ಲಿ ರಥಕೃತ್, ರಥೋಜಾ ಎಂಬಿಬ್ಬರೂ, ರಾಕ್ಷಸರಲ್ಲಿ ಹೇತಿ, ಪ್ರಹೇತಿ ಎಂಬಿಬ್ಬರೂ ವಾಸಮಾಡುವರು, ಗ್ರೀಷ್ಮ ಋತುವಿನ ಮಾಸಗಳಾದ ಶುಚಿ ಮತ್ತು ಶುಕ್ರ ಇವರಿಬ್ಬರೂ ಆದಿತ್ಯರಲ್ಲಿ ಮಿತ್ರ, ವರುಣ ಎಂಬಿಬ್ಬರೂ; ಋಷಿಗಳಲ್ಲಿ ಅತ್ರಿ, ವಶಿಷ್ಠ ಎಂಬಿಬ್ಬರೂ; ಸರ್ಪಗಳಲ್ಲಿ ತಕ್ಷ, ನಾಗ ಎಂಬಿಬ್ಬರೂ; ಅಪ್ಸರೆಯರಲ್ಲಿ ಮೇನಕಾ, ಸಹಜನ್ಯಾ ಎಂಬಿಬ್ಬರೂ; ಗ್ರಾಮಣಿಗಳಲ್ಲಿ ಸುಬಾಹು; ರಥಚಿತ್ರ ಎಂಬಿಬ್ಬರೂ; ರಾಕ್ಷಸರಲ್ಲಿ ಪೌರುಷೇಯ, ವಧ ಎಂಬಿಬ್ಬರೂ. ಸೂರ್ಯನ ಸಂಗಡ ವಾಸಮಾಡುವರು.

ನಭ, ನಭಸ್ಯ ಈ ಎರಡು ಮಾಸಗಳಲ್ಲಿ ಆದಿತ್ಯರಲ್ಲಿ ಇಂದ್ರ, ವಿವಸ್ವಾನ್ ಎಂಬಿಬ್ಬರೂ; ಋಷಿಗಳಲ್ಲಿ ಅಂಗಿರಸ, ಭೃಗು, ಎಂಬಿಬ್ಬರೂ; ಋಷಿಗಳಲ್ಲಿ ಅಂಗಿರಸ, ಭೃಗು ಎಂಬಿಬ್ಬರೂ; ಸರ್ಪಗಳಲ್ಲಿ ಏಲಾಪತ್ರ. ಶಂಖಪಾಲ ಎಂಬಿಬ್ಬರೂ ಗಂಧರ್ವರಲ್ಲಿ ವಿಶ್ವಾವನು, ಉಗ್ರಸೇನ ಎಂಬಿಬ್ಬರೂ; ಗ್ರಾಮಣಿಗಳಲ್ಲಿ ವರುಣ, ರಥಸ್ವನ ಎಂಬಿಬ್ಬರೂ; ಅಪ್ಸರೆಯರಲ್ಲಿ ಪ್ರಖ್ಯಾತೆಯರಾದ ಪ್ರಮ್ಲೋಚಾ, ಅನುಮ್ಲೋಚಾ ಎಂಬಿಬ್ಬರೂ; ರಾಕ್ಷಸರಲ್ಲಿ ಸರ್ಪ, ವ್ಯಾಘ್ರ ಎಂಬಿಬ್ಬರೂ ಸೂರ್ಯನ ಸಂಗಡ ವಾಸಮಾಡುವರು. ಕಾರ್ತಿಕ, ಆಶ್ವಯುಜ ಈ ಎರಡು ಮಾಸಗಳಲ್ಲಿ ಆದಿತ್ಯರಲ್ಲಿ ಪರ್ಜನ್ಯ, ಪೂಷಾ ಎಂಬಿಬ್ಬರೂ; ಋಷಿಗಳಲ್ಲಿ ಭಾರದ್ವಾಜ, ಗೌತಮ ಎಂಬಿಬ್ಬರೂ; ಸರ್ಪಗಳಲ್ಲಿ ಐರಾವತ, ಧನಂಜಯ ಎಂಬಿಬ್ಬರೂ ಗಂಧರ್ವರುಗಳಲ್ಲಿ ಸುರುಚಿ, ಪರಾವಸು ಎಂಬಿಬ್ಬರೂ; ಅಪ್ಸರೆಯರಲ್ಲಿ ಶ್ರೇಷ್ಠರಾದ ಘತಾಚೀ, ಸರ್ವಾಂಗ ಸುಂದರಿಯಾದ ವಿಶ್ವಾಚೀ ಎಂಬಿಬ್ಬರೂ; ಗ್ರಾಮಣಿಗಳಲ್ಲಿ ಸುರ್ಷಿ ಸೇನಜಿತ್ ಎಂಬಿಬ್ಬರೂ; ರಾಕ್ಷಸರಲ್ಲಿ ಆಪ ವಾತ ಎಂಬಿಬ್ಬರೂ ಸೂರ್ಯನ ಸಂಗಡ ವಾಸಮಾಡುವರು. ಹೇಮಂತ ಋತುವಿನ ಮಾಸಗಳಾದ ಮಾರ್ಗಶಿರ, ಪುಷ್ಯ ಈ ಎರಡು ಮಾಸಗಳಲ್ಲಿ ಆದಿತ್ಯರಲ್ಲಿ ಅಂಶು, ಭಗ ಎಂಬಿಬ್ಬರೂ; ಋಷಿಗಳಲ್ಲಿ ಕಶ್ಯಪ, ಕೃತು ಎಂಬಿಬ್ಬರೂ; ಸರ್ಪಗಳಲ್ಲಿ ಮಹಾಪದ್ಮ ಕಾರ್ಕೋಟಕ ಎಂಬಿಬ್ಬರೂ; ಗಂಧರ್ವರಲ್ಲಿ ಚಿತ್ರಸೇನ, ಊರ್ಣಾಯು ಎಂಬಿಬ್ಬರೂ; ಅಪ್ಸರೆಯರಲ್ಲಿ ಊರ್ವಶೀ, ಪೂರ್ವಚಿತ್ತಿ ಎಂಬಿಬ್ಬರೂ; ಗ್ರಾಮಣಿಗಳಲ್ಲಿ ತಾರ್ಕ್ಷ್ಯ, ಅರಿಷ್ಟನೇಮಿ ಎಂಬಿಬ್ಬರೂ; ರಾಕ್ಷಸರಲ್ಲಿ ವಿದ್ಯುತ್, ದಿವಾಕರ ಎಂಬಿಬ್ಬರೂ; ಋಷಿಗಳಲ್ಲಿ ಜಮದಗ್ನಿ, ವಿಶ್ವಾಮಿತ್ರ ಎಂಬಿಬ್ಬರೂ; ಸರ್ಪಗಳಲ್ಲಿ ಕಂಬಲ ಅಶ್ವತರ ಎಂಬಿಬ್ಬರೂ; ಗಂಧರ್ವರುಗಳಲ್ಲಿ ಧೃತರಾಷ್ಟ್ರ ಸೂರ್ಯವರ್ಚ ಎಂಬಿಬ್ಬರೂ; ಅಪ್ಸರೆಯರಲ್ಲಿ ತಿಲೋತ್ತಮೆ ಸುಂದರಿಯಾದ ರಂಭಾ ಎಂಬಿಬ್ಬರೂ; ಗ್ರಾಮಣಿಗಳಲ್ಲಿ ಲೋಕ ಪ್ರಖ್ಯಾತರಾದ ರಥಜಿತ್, ಸತ್ಯಜಿತ್ ಎಂಬಿಬ್ಬರೂ; ರಾಕ್ಷಸರಲ್ಲಿ ಬ್ರಹ್ಮೋಪೇತ, ಯಜ್ಞೋಪೇತ ಎಂಬಿಬ್ಬರೂ ಸೂರ್ಯನ ಸಂಗಡ ವಾಸಮಾಡುವರು.

ಈ ಮೇಲೆ ಹೇಳಿದ ದೇವತೆಗಳೆಲ್ಲರೂ ಯಥಾಕ್ರಮವಾಗಿ ಸೂರ್ಯನ ಸಂಗಡ ಎರಡೆರಡು ತಿಂಗಳು ವಾಸಮಾಡುವರು. ಪ್ರತಿಯೊಂದು ಗುಂಪಿನಲ್ಲೂ ಹನ್ನೆರಡರಂತಿರುವ ಏಳು ಗುಂಪಿನವರು ಸ್ಥಾನಾಭಿಮಾನಿ ದೇವತೆಗಳು. ಮೇಲೆ ಹೇಳಿದ

ಹನ್ನೆರಡು ಜನ ಆದಿತ್ಯರೂ ತಮ್ಮ ತಮ್ಮ ತೇಜಸ್ಸಿನಿಂದ ಸೂರ್ಯನ ತೇಜಸ್ಸನ್ನು ಅಭಿವೃದ್ಧಿ ಪಡಿಸುತ್ತಾರೆ. ಋಷಿಗಳು ತಮ್ಮ ತಮ್ಮ ಪ್ರತಿಭೆಯಿಂದ ನಿರ್ಮಿಸಿದ ಸ್ತೋತ್ರಗಳಿಂದ ಸೂರ್ಯನನ್ನು ಸ್ತುತಿಸುತ್ತಾರೆ. ಗಂಧರ್ವರು ತಮ್ಮ ನರ್ತನಗಳಿಂದಲೂ, ಅಪ್ಸರೆಯರು ನರ್ತನ ಮತ್ತು ಗಾನಗಳಿಂದಲೂ ಸೂರ್ಯನನ್ನು ಸೇವಿಸುತ್ತಾರೆ. ಗ್ರಾಮಣಿ,ಯಕ್ಷ, ಭೂತಗಳು ಸೂರ್ಯನ ರಥದಹಗ್ಗಗಳನ್ನು ಹಿಡಿದುಕೊಳ್ಳುತ್ತಾರೆ. ಸರ್ಪಗಳು ಸೂರ್ಯನನ್ನು ವಹಿಸುತ್ತವೆ. ರಾಕ್ಷಸರು ಸೂರ್ಯನನ್ನು ಅನುಸರಿಸುತ್ತಾರೆ. ವಾಲಾಖಿಲ್ಯರೆಂಬ ಋಷಿಗಳು ಉದಯಕಾಲದಿಂದ ಸೂರ್ಯನನ್ನು ಅಸ್ತಾಚಲ ಪರ್ವತಕ್ಕೆ ಕರೆದೊಯ್ಯುವರು. ಈ ದೇವತೆಗಳ ತೇಜಸ್ಸಿಗೂ ತಪಸ್ಸಿಗೂ, ಯೋಗಕ್ಕೂ, ಮಂತ್ರಕ್ಕೂ, ಧರ್ಮಕ್ಕೂ, ಬಲಕ್ಕೂ ಅನುಗುಣವಾಗಿ ಸೂರ್ಯನು ಪ್ರಕಾಶಿಸುತ್ತಾನೆ. ಈ ದೇವತೆಗಳ ವೃದ್ಧಿಯು ಸೂರ್ಯನ ತೇಜಸ್ಸಿನಿಂದಾಗುವುದಾದ ಕಾರಣ ಇವರು ಎರಡೆರಡು ತಿಂಗಳು ಸೂರ್ಯನ ಸಂಗಡ ವಾಸಮಾಡುವರು.

ಋಷಿಗಳು, ದೇವತೆಗಳು, ಗಂಧರ್ವರು, ಸರ್ಪಗಳು, ಅಪ್ಸರಸ್ಸುಗಳು, ಗ್ರಾಮಾಧಿ ದೇವತೆಗಳು, ಯಕ್ಷರು, ರಾಕ್ಷಸರು, ಇವರೇ ಮುಖ್ಯವಾಗಿ ಜಗತ್ತನ್ನು ಸುಡುವರು ಮತ್ತು ಮಳೆಯಿಂದ ತೋಯಿಸುವರು. ಇವರು ಪ್ರಪಂಚಕ್ಕೆ ಪ್ರಕಾಶವನ್ನೀಯುವರು. ಗಾಳಿಯು ಯಥೇಚ್ಛವಾಗಿ ಬೀಸುವ ಹಾಗೆ ಮಾಡುವರು ಮತ್ತು ಸೃಷ್ಟಿಯನ್ನೂ ಮಾಡುವರು ಅಲ್ಲದೆ ಇವರು ಪ್ರಾಣಿಗಳಿಗೆ ಕೆಟ್ಟಫಲಗಳನ್ನು ನಿವಾರಣೆಮಾಡುವವರೂ ಕೊಡುವವರೂ ಮತ್ತು ಸೃಷ್ಟಿಯನ್ನೂ ಮಾಡುವವರು ಅಲ್ಲದೆ ಇವರು ದುಷ್ಟರಿಗೆ ಅಮಂಗಳವನ್ನುಂಟು ಮಾಡುವವರೂ ಆಗಿದ್ದಾರೆ. ಇವರು ಸತ್ಪುರುಷರಿಗೂ ಕೆಟ್ಟದ್ದು ಸಂಭವಿಸುವದಾದರೆ ಅದನ್ನೂ ನಿವಾರಣೆಮಾಡುವರು. ಇವರೆಲ್ಲರೂ ದಿವ್ಯವಾದ ಸ್ವೇಚ್ಛೆಯಾಗಿ ಹಾರುವ, ವಾಯುವೇಗವುಳ್ಳ ವಿಮಾನಗಳಲ್ಲಿ ಕೂತು ಹಗಲನ್ನೂ ಹಿಂಬಾಲಿಸುವವರಾಗಿ ಸೂರ್ಯನ ಜೊತೆಯಲ್ಲಿಯೇ ಸುತ್ತುತ್ತಾರೆ. ಇವರು ಮನ್ವಂತರ ಕಳೆಯುವವರೆಗೂ ಮಳೆಗರೆಯುತ್ತಲೂ, ಸುಡುತ್ತಲೂ, ಸಂತೋಷಪಡಿಸುತ್ತಲೂ ಎಲ್ಲಾ ಪ್ರಾಣಿಗಳನ್ನು ಕಾಪಾಡುತ್ತಾರೆ. ಮನ್ವಂತರಗಳಲ್ಲಿ ಕಳೆದು ಹೋದ ಈಗಿರುವ, ಮುಂದೆ ಬರುವ ಇವರು ಅನೇಕ ಸ್ಥಾನಗಳಿಗೆ ಅಭಿಮಾನ ದೇವತೆಗಳಾಗಿದ್ದು ಪ್ರತ್ಯೇಕವಾದ ಸ್ಥಾನಗಳನ್ನೂ ಹೊಂದಿರುತ್ತಾರೆ. ಇವರು ಏಳುಮಂದಿ ಒಟ್ಟಾಗಿ ಹದಿನಾಲ್ಕು ಗುಂಪುಗಳು ಸೂರ್ಯನಲ್ಲಿ ವಾಸಮಾಡುತ್ತಾರೆಂದು ತಿಳಿಯಬೇಕು. ಬೇರೆ ಬೇರೆ ಮನ್ವಂತರಗಳಲ್ಲಿ ಹದಿನಾಲ್ಕು ಗುಂಪುಗಳೆಲ್ಲವೂ ಇರುತ್ತವೆ. ಈ ದೇವತೆಗಳು ಕ್ರಮವಾಗಿ ಎರಡೆರಡು ತಿಂಗಳು ಸೂರ್ಯನಲ್ಲಿ ವಾಸಮಾಡುತ್ತಾರೆ. ಈ ಸ್ಥಾನಗಳಿಗೆ ಅಭಿಮಾನಿಗಳಾದ ದೇವತೆಗಳ ಎಂಬತ್ತು ನಾಲ್ಕು ಗುಂಪುಗಳಿವೆ ಹೀಗೆ ಸೂರ್ಯನು ಹಸುರು ಬಣ್ಣದ ನಾಶವಿಲ್ಲದ ಕುದುರೆಗಳಿಂದ ಕೂಡಿದ ಒಂದೇ ಚಕ್ರವುಳ್ಳ ರಥದಲ್ಲಿ ಸಂಚರಿಸುತ್ತಾನೆ. ಇವನು ಹಗಲುರಾತ್ರಿ ಈ ರಥದಲ್ಲಿ ಸಂಚರಿಸುವವನಾಗಿ ಏಳು ದ್ವೀಪಗಳು ಮತ್ತು ಏಳು ಸಮುದ್ರಗಳುಳ್ಳ ಭೂಮಿಯನ್ನು ಅಂತರಿಕ್ಷದಲ್ಲಿ ಸುತ್ತುತ್ತಾನೆ.

*ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಜ್ಯೋತಿಚಕ್ರದಲ್ಲಿ ಸೂರ್ಯರಥದ ಗಮನ ಪ್ರಕಾರದ ನಿರ್ಣಯ ಎಂಬ ಐವತ್ತೈದನೆಯ ಅಧ್ಯಾಯ ಮುಗಿದುದು*

# ಚಂದ್ರಮಂಡಲ ವರ್ಣನೆ

## ಅಧ್ಯಾಯ - ೫೬

**ಸೂತ :-** ಚಂದ್ರನು ತನ್ನ ಮಾರ್ಗದಲ್ಲಿರುವ ನಕ್ಷತ್ರಗಳ ಮೂಲಕ ಕ್ರಮವಾಗಿ ಸಂಚರಿಸುತ್ತಾನೆ. ಅವನ ರಥವು ಮೂರು ಚಕ್ರವುಳ್ಳದ್ದಾಗಿಯೂ ಮತ್ತು ಎರಡು ಕಡೆಯೂ ಕುದುರೆಯುಳ್ಳದ್ದಾಗಿಯೂ ಇದೆ. ನೂರು ಪಟ್ಟಿಗಳಿಂದಲೂ, ಮೂರು ಚಕ್ರಗಳಿಂದಲೂ ಕೂಡಿರುವ ಮತ್ತು ಶುಭವಾದ ಮನೋವೇಗವುಳ್ಳ ಸಣ್ಣಾಗಿಲ್ಲದ ಮತ್ತು ಸ್ವರ್ಗೀಯವಾದ ಮತ್ತು ಪರಸ್ಪರ ಸಂಬಂಧವಿಲ್ಲದ ಹತ್ತು ಶ್ರೇಷ್ಠವಾದ ಕುದುರೆಗಳಿಂದ ಕೂಡಿದ ರಥದಲ್ಲಿ ಚಂದ್ರನು, ದೇವತೆಗಳು ಮತ್ತು ಪಿತೃದೇವತೆಗಳ ಜೊತೆಯಲ್ಲಿ ಹೋಗುತ್ತಾನೆ. ಚಂದ್ರನು ಜಲಪೂರ್ಣವಾದ ಶುಭ್ರವಾದ ಕಿರಣಗಳಿಂದ ಪ್ರಕಾಶಮಾನನಾಗಿರುವನು. ಶುಕ್ಲಪಕ್ಷದ ಮೊದಲು ದಿನ ಸೂರ್ಯನು ಮುಂಭಾಗದ ಮಾರ್ಗದಲ್ಲಿ ಸಂಚರಿಸುತ್ತಾನೆ. ದಿನ ಕಳೆದ ಹಾಗೆಲ್ಲಾ ಶುಕ್ಲ ಪಕ್ಷದ ಕೊನೆಯ ದಿನದ ಹೊತ್ತಿಗೆ ಚಂದ್ರನು ಕಲಾಪರಿಪೂರ್ಣನಾಗುತ್ತಾನೆ.

ಅಮಾವಾಸ್ಯೆಯವರೆಗೂ ಹದಿನೈದು ದಿನಗಳೂ ಪ್ರತಿನಿತ್ಯದಲ್ಲಿಯೂ ದೇವತೆಗಳಿಂದ ಪಾನಮಾಡಲ್ಪಟ್ಟು ಕ್ಷಯಿಸಿದ ಚಂದ್ರನ ಪ್ರತಿಯೊಂದು ಭಾಗವನ್ನೂ ಕ್ರಮಕ್ರಮವಾಗಿ ಸೂರ್ಯನು ತನ್ನ **"ಸುಷುಮ್ನಾ"** ಎಂಬ ಹೆಸರಿನ ಕಿರಣದಿಂದ ಪೂರ್ಣಮಾಡುವನು. ಈ ರೀತಿಯಾಗಿ ಸೂರ್ಯನ ತೇಜಸ್ಸಿನಿಂದ ಚಂದ್ರನ ಶರೀರವು ಪುಷ್ಟವಾಗುತ್ತದೆ. ಚಂದ್ರನು ಪೂರ್ಣಮಾದಿನ ಪೂರ್ಣಮಂಡಲನಾಗಿ ಶುಭ್ರವಾಗಿ ಕಾಣಿಸುತ್ತಾನೆ. ಹೀಗೆ ದಿನಗಳು ಕಳೆದಂತೆ ಶುಕ್ಲ ಪಕ್ಷದಲ್ಲಿ ಚಂದ್ರನು ವೃದ್ಧಿಯನ್ನು ಹೊಂದುತ್ತಾನೆ. ಅನಂತರ ಬಿದಿಗೆಯಿಂದ ಹಿಡಿದು ಕೃಷ್ಣಪಕ್ಷದ ಚತುರ್ದಶಿಯವರೆಗೂ, ದೇವತೆಗಳು ಜಲಪೂರ್ಣವಾದ ಚಂದ್ರನ ಸಂಬಂಧವಾದ, ಮಧುರವಾದ, ಶುದ್ಧವಾದ ಅಮೃತವನ್ನು ಕುಡಿಯುತ್ತಾರೆ. ಸೂರ್ಯನ ತೇಜಸ್ಸಿನಿಂದ ಅರ್ಧ ತಿಂಗಳವರೆಗೆ ಶೇಖರಿಸಲ್ಪಟ್ಟ ಚಂದ್ರ ಸಂಬಂಧವಾದ ಅಮೃತವನ್ನು ಪಾನಮಾಡಲು ಎಲ್ಲಾ ದೇವತೆಗಳೂ ಪಿತೃದೇವತೆಗಳೊಂದಿಗೂ, ಋಷಿಗಳೊಂದಿಗೂ, ಪೌರ್ಣಮಾಸಿಯ ಒಂದೇ ರಾತ್ರಿಯಲ್ಲಿ ಚಂದ್ರನನ್ನು ಸೇವಿಸುತ್ತಾರೆ.

ಕೃಷ್ಣ ಪಕ್ಷದ ಮೊದಲನೆಯ ದಿನ ಸೂರ್ಯಾಭಿಮುಖನಾದ ಚಂದ್ರನ ಒಳಗೆ ಕುಡಿಯಲ್ಪಡುವ ಕಲೆಗಳು ಕ್ರಮವಾಗಿ ನಾಶಹೊಂದುತ್ತವೆ. ಮೂರು ಸಾವಿರದ ಮುನ್ನೂರು ಮತ್ತು ಮುವ್ವತ್ಮೂರು ಹಾಗೆಯೇ ಮುವ್ವತ್ಮೂರು ಸಾವಿರ ಸಂಖ್ಯೆಯುಳ್ಳ ದೇವತೆಗಳೂ, ಚಂದ್ರಕಲೆಗಳನ್ನು ಪಾನಮಾಡುತ್ತಾರೆ. ಹೀಗೆ ಅರ್ಧ ತಿಂಗಳವರೆಗೂ ಕ್ರಮವಾಗಿ ಚಂದ್ರಕಲೆಗಳನ್ನು ಪಾನಮಾಡಿ ದೇವತೆಗಳು ಅಮಾವಾಸ್ಯೆಯ ದಿನ ಹೊರಟು ಹೋಗುತ್ತಾರೆ. ಪಿತೃದೇವತೆಗಳು ಅಮಾವಾಸ್ಯೆಯ ದಿನ ಚಂದ್ರನನ್ನು ಸೇವಿಸುತ್ತಾರೆ. ಅನಂತರ ಕಲಾ ರೂಪವಾದ ಒಂದು ಹದಿನೈದನೆಯ ಭಾಗವು ಉಳಿದಿರಲು ಪಿತೃದೇವತೆಗಳು ಮಧ್ಯಾಹ್ನದಲ್ಲಿ ಆ ಕೀಳಾದ ಭಾಗವನ್ನು ಸೇವಿಸುತ್ತಾರೆ. ಅವರು

ಉಳಿದಿರುವ ಆ ಕಲೆಗಳನ್ನು ಎರಡು ಘಳಿಗೆ ಕಾಲದವರೆಗೆ ಪಾನಮಾಡುತ್ತಾರೆ. ಆ ಅಮೃತವು ಅಮಾವಾಸ್ಯೆಯಲ್ಲಿ ಕಿರಣಗಳಿಂದ ಹೊರಟು ಹೋಗುತ್ತದೆ.

ಒಂದು ತಿಂಗಳವರೆಗೂ ತೃಪ್ತಿಯುಂಟಾಗುವಂತೆ ಮುಂದಾಗಿಯೇ ಚೆನ್ನಾಗಿ ಅಮೃತಪಾನಮಾಡಿ ಅವರು ಹೊರಟು ಹೋಗುತ್ತಾರೆ. ಹದಿನೈದನೆಯ ದಿನ ಪಿತೃದೇವತೆಗಳು ಪಾನಮಾಡುವ ಕಲೆಯು ಕ್ಷಯಿಸುವುದಕ್ಕಿಂತ ಮುಂಚೆ ಚಂದ್ರನ ಹದಿನೈದನೆಯ ಭಾಗದ ಕಲೆಯಾಗಿರುವುದು. ಅನಂತರ ಅಮವಾಸ್ಯೆಯಲ್ಲಿ ಆ ಕಲೆಯು ಒಳಗೆ ಪುನಃ ಪೂರ್ಣವಾಗುವುದು. ಪಕ್ಷದ ಮೊದಲನೆಯ ದಿನವಾದ ಪಾಡ್ಯದಲ್ಲಿ ಹದಿನಾರನೆಯ ಕಲೆಯ ವೃದ್ಧಿ ಕ್ಷಯಗಳು ಹೇಳಲಾಗಿವೆ. ಹೀಗೆ ಶುಕ್ಲ ಪಕ್ಷದಲ್ಲಿ ಚಂದ್ರನ ಕಲಾಭಿವೃದ್ಧಿಯ ಸೂರ್ಯನಿಂದ ಉಂಟಾಗುವುದು.

*ಲಿಂಗಮಹಾಪುರಾಣದ ಪೂರ್ವಾರ್ಧದ ಚಂದ್ರಮಂಡಲದ ವಿಶೇಷಗಳ ವರ್ಣನೆ ಎಂಬ ಐವತ್ತಾರನೆಯ ಅಧ್ಯಾಯ ಮುಗಿದುದು*



## ಜ್ಯೋತಿಶ್ಚಕ್ರದಲ್ಲಿ ಗ್ರಹಗಳ ಚಲನ ವಿಚಾರ — ಅಧ್ಯಾಯ - ೫೭

**ಸೂತ** :- ಚಂದ್ರನ ಮಗನಾದ ಬುಧನ ರಥವು ಕಾಂತಿಯುಕ್ತವಾಗಿದೆ. ಮತ್ತು ಹೊಂಬಣ್ಣವುಳ್ಳ ಎಂಟು ಕುದುರೆಗಳಿಂದ ಕೂಡಿ ನೀರು ಮತ್ತು ತೇಜ ಇವುಗಳಿಂದ ಪೂರ್ಣವಾಗಿದೆ. ಅಸುರರಿಗೆ ಗುರುವೂ ಪ್ರತಿಭಾವಂತನೂ ಆದ ಆ ಶುಕ್ರನ ರಥವು ಅನೇಕಬಣ್ಣ ಉಳ್ಳದ್ದಾದ ಸಣ್ಣಗಿಲ್ಲದ ಮತ್ತು ಭೂಮಿಯಿಂದ ಪೂರ್ಣವಾದ ಹತ್ತು ಕುದುರೆಗಳಿಂದ ಕೂಡಿದೆ. ಮಂಗಳನ ರಥವು ಚಿನ್ನದಿಂದ ನಿರ್ಮಿಸಲ್ಪಟ್ಟು ಎಂಟು ಕುದುರೆಗಳುಳ್ಳದ್ದಾಗಿ, ಪ್ರಕಾಶಮಾನವಾಗಿದೆ. ಗುರುವಿನ ರಥವೂ, ಚಿನ್ನದಿಂದ ಮಾಡಲ್ಪಟ್ಟು ಎಂಟು ಕುದುರೆಗಳುಳ್ಳದ್ದಾಗಿದೆ. ಶನಿಯ ರಥವು ಕಬ್ಬಿಣದಿಂದ ನಿರ್ಮಿಸಲ್ಪಟ್ಟು ಜಲಪೂರ್ಣವಾಗಿ ಕಪ್ಪಗಿರುವ ಹತ್ತು ಕುದುರೆಗಳಿಂದ ಕೂಡಿದ್ದಾಗಿದೆ. ಸೂರ್ಯನ ಶತ್ರುವಾದ ರಾಹುವಿನ ರಥವಾದರೋ ಶನಿಯರಥದಂತೆ ಎಂಟು ಕುದುರೆಗಳಿಂದ ಕೂಡಿದೆ ಎಂದು ಹೇಳಲ್ಪಟ್ಟಿದೆ.

ವಾಯುರೂಪವಾದ ಕಿರಣಗಳಿಂದ ಎಲ್ಲಾ ಗ್ರಹಗಳೂ ಸ್ಥಿರವಾಗಿ ಮಾಡಲ್ಪಡುತ್ತವೆ. ಸೂರ್ಯನಿಂದ ತಿರುಗಿಸಲ್ಪಡುವ ಈ ಗ್ರಹಗಳು ಒಂದು ವ್ಯವಸ್ಥೆಯಿಂದ ಅವನನ್ನು ಸುತ್ತುತ್ತಾ ಹೋಗುತ್ತಿರುತ್ತವೆ. ಎಷ್ಟು ನಕ್ಷತ್ರಗಳು ಇವೆಯೋ ಅಷ್ಟು ಸೂರ್ಯ ಕಿರಣಗಳು ಇವೆ. ಸ್ಥಿರವಾಗಿಮಾಡಲ್ಪಟ್ಟ ಈ ನಕ್ಷತ್ರಗಳೆಲ್ಲವೂ ಸುತ್ತುತ್ತಾ ಅವನನ್ನು ತಿರುಗಿಸುತ್ತವೆ. ಇವುಗಳು ವಾಯು ರೂಪವಾದ ಚಕ್ರದಿಂದ ತಿರುಗಿ ಪ್ರೇರೇಪಿಸಲ್ಪಟ್ಟು ಕೊಳ್ಳಿಯಂತೆ ದುಂಡಗೆ ಚಲಿಸುತ್ತವೆ. ಇವು ತೇಜಸ್ಸನ್ನು ಬೀರುವುದರಿಂದ ''ಪ್ರವಹ'' ಎಂದು ಹೇಳಲ್ಪಡುತ್ತದೆ. ನಕ್ಷತ್ರಗಳೂ, ಸೂರ್ಯನೂ, ಗ್ರಹಗಳೂ ಮತ್ತು ಇತರ ನಕ್ಷತ್ರಗಳೊಡನೆ ಇವೆಲ್ಲಾ ಗ್ರಹಗಳೂ ಊರ್ಧ್ವಮುಖವಾಗಿಯೂ ಮತ್ತು ಅಭಿಮುಖವಾಗಿಯೂ ಚಕ್ರದ ಆಕಾರದಲ್ಲಿ ಆಕಾಶದಲ್ಲಿ ಇವೆ. ಅವುಗಳು ಸ್ಥಿರವಾಗಿಯೇ ಇವೆ. ಇವುಗಳು ಸ್ವಾಮಿಯಾದ ಸೂರ್ಯನನ್ನು ಸಂದರ್ಶಿಸಲು ಆಕಾಶದಲ್ಲಿ ತಪ್ಪದೇ ಹೋಗುತ್ತವೆ.

ಸೂರ್ಯನ ಮಧ್ಯಭಾಗವು ಒಂಬತ್ತು ಸಾವಿರ ಯೋಜನದಷ್ಟು ದೀರ್ಘವಾಗಿರುವುದು. ಸೂರ್ಯಮಂಡಲದ ಅಳತೆಯಂತೆ ಲೆಕ್ಕಹಾಕಿದರೆ ಸೂರ್ಯನು ಅದಕ್ಕಿಂತ ಮೂರರಷ್ಟಿರುವನು. ಸೂರ್ಯನ ವಿಸ್ತಾರಕ್ಕಿಂತಲೂ ಚಂದ್ರನ ವಿಸ್ತಾರವು ಎರಡರಷ್ಟಿದೆ. ಅವರಿಬ್ಬರಿಗೆ ಸಮನಾಗಿ ರಾಹುವು ಅವರ ಕೆಳಗಡೆಗೆ ಸಂಚರಿಸುತ್ತಾನೆ.

ರಾಹುವಿನ ಮೂರನೆಯ ದೊಡ್ಡದಾದ ಸ್ಥಾನವು ಭೂಮಿಯ ನೆರಳನ್ನು ತೆಗೆದುಕೊಂಡು ನಿರ್ಮಾಣಮಾಡಲ್ಪಟ್ಟಿದೆ. ಮಧ್ಯಭಾಗದ ಮತ್ತು ಮಂಡಲದ ಮತ್ತು ಯೋಜನದ ಲೆಕ್ಕದಂತೆ ಶುಕ್ರನ ವಿಸ್ತಾರವು ಚಂದ್ರನ ಹದಿನಾರನೆಯ ಒಂದು ಭಾಗವಾಗಿ ರಚಿಸಲ್ಪಟ್ಟಿದೆ. ಶುಕ್ರನಿಗಿಂತ ಕಾಲುಭಾಗ ಅಳತೆಯುಳ್ಳವನು ಗುರು ಎಂಬುದಾಗಿ ತಿಳಿಯಬೇಕು. ಗುರುವು ವಿಸ್ತಾರದಲ್ಲಿ ಮತ್ತು ಮಂಡಲದ ಅಳತೆಗೆ ಸರಿಯಾಗಿ ಕಾಲುಭಾಗ ಕಡಿಮೆಯಾಗಿರುವವನೆಂದು ತಿಳಿಯಬೇಕು. ತಾರೆಗಳೂ ಮತ್ತು ನಕ್ಷತ್ರಗಳು ಮುಂತಾದ ಆಕಾರವುಳ್ಳ ವಸ್ತುಗಳು ಅವುಗಳ ವಿಸ್ತಾರ ಮತ್ತು ಮಂಡಲದ ಅಳತೆಗೆ ಅನುಸಾರವಾಗಿ ಬುಧನಿಗೆ ಸಮಾನವಾದವು ಮತ್ತು ಚಂದ್ರನ ಸಂಬಂಧವುಳ್ಳವೂ ಆಗಿವೆ.

ಈ ತಾರೆಗಳು ಮತ್ತು ನಕ್ಷತ್ರಗಳು ತಮ್ಮತಮ್ಮಲ್ಲಿಯೇ ಅವುಗಳ ಅಳತೆಗೆ ಅನುಸಾರವಾಗಿ ನೂರು ಐದು, ನಾಲ್ಕು ಮೂರು ಮತ್ತು ಎರಡು ಯೋಜನದಷ್ಟು ಕಡಿಮೆಯಾಗಿರುವುವು. ಎಲ್ಲಕ್ಕಿಂತಲೂ ತಾರಾಮಂಡಲವು ಚಿಕ್ಕದು. ಅದು ಎರಡು ಯೋಜನದಷ್ಟು ವಿಸ್ತಾರವುಳ್ಳದ್ದು. ಅವುಗಳಿಗಿಂತ ಚಿಕ್ಕದಾದುದು ಯಾವುದೂ ಇಲ್ಲ. ಅವುಗಳ ಮೇಲುಭಾಗದಲ್ಲಿ ಶನಿ, ಗುರು ಮತ್ತು ಮಂಗಳನೆಂಬ ಮೂರು ಗ್ರಹಗಳು ಬಹುದೂರ ಚಲಿಸುವುವು. ಅವುಗಳ ಕೆಳಗೆ ನಾಲ್ಕು ಮಹಾಗ್ರಹಗಳಾದ ಸೂರ್ಯ, ಚಂದ್ರ, ಬುಧ, ಮತ್ತು ಶುಕ್ರ ಗ್ರಹಗಳು ಜಾಗ್ರತೆಯಾಗಿ ಚಲಿಸುತ್ತವೆ.

ಎಷ್ಟು ನಕ್ಷತ್ರಗಳುಂಟೋ ಅಷ್ಟು ಕೋಟಿ ತಾರೆಗಳಿವೆ. ನಕ್ಷತ್ರಗಳ ಮಾರ್ಗದಲ್ಲಿ ಸ್ಥಿರವಾದ ಒಂದು ನಿಯಮದಿಂದ ಇವು ವ್ಯವಸ್ಥೆ ಮಾಡಲ್ಪಟ್ಟಿವೆ. ಏಳು ಕುದುರೆಗಳುಳ್ಳ ಸೂರ್ಯನಂತೆ, ಚಂದ್ರನು ನೀಚೋಚ್ಚಭಾವವನ್ನು ಕ್ರಮವಾಗಿ ಹೊಂದಿರುವನು. ಚಂದ್ರನು ಉತ್ತರಾಯಣ ಮಾರ್ಗದಲ್ಲಿರುವಾಗ ಪೂರ್ಣಿಮಾದಿನದಲ್ಲಿ ಹೆಚ್ಚು ಸ್ಪಷ್ಟವಲ್ಲದ ಕಿರಣಗಳಿಂದ ಜಾಗ್ರತೆಯಾಗಿ ಕಾಣಿಸಿಕೊಳ್ಳುತ್ತಾನೆ. ದಕ್ಷಿಣ ಮಾರ್ಗದಲ್ಲಿರುವಾಗ ಕೆಳಗಿನಮಾರ್ಗವನ್ನು ಆಶ್ರಯಿಸಿರುತ್ತಾನೆ. ಆವಾಗ ಪೂರ್ಣಿಮಾ ಅಮಾವಾಸ್ಯೆಗಳ ಕಾಲದಲ್ಲಿ ಭೂಮಿಯ ರೇಖೆಯಿಂದ ಆವರಿಸಲ್ಪಟ್ಟು ಕಾಲಕ್ಕೆ ಅನುಸರಿಸಿ ಜಾಗ್ರತೆ ಕಾಣಿಸಿ ಅಸ್ತವಾಗುತ್ತಾನೆ. ಆದ್ದರಿಂದ ಅಮಾವಾಸ್ಯೆಯಲ್ಲಿ ಚಂದ್ರನು ಉತ್ತರ ಮಾರ್ಗದಲ್ಲಿ ಕಾಣಲ್ಪಡುವನು. ಸೂರ್ಯನ ಕಿರಣಗಳ ತೇಜಸ್ಸಿನ ವ್ಯಾಪನೆಯಿಂದ ತನ್ನ ಪ್ರಕಾಶವು ಮುಚ್ಚಿ ದಕ್ಷಿಣ ಮಾರ್ಗದಲ್ಲಿ ಕ್ಲಿಪ್ತವಾಗಿ ಕಾಣುವುದೇ ಇಲ್ಲ.

ವಿಷುವತ್ಸಂಕ್ರಾಂತಿಯ ಕಾಲದಲ್ಲಿ ಸೂರ್ಯಚಂದ್ರರು ಏಕಕಾಲದಲ್ಲಿ ಉದಯ ಮತ್ತು ಅಸ್ತಮವುಳ್ಳವರಾಗಿರುತ್ತಾರೆ. ಪೌರ್ಣಿಮೆ ಮತ್ತು ಅಮಾವಾಸ್ಯೆಗಳಲ್ಲಿ ಇವರು ಉತ್ತರಮಾರ್ಗದಲ್ಲಿ ಭಿನ್ನಕಾಲದಲ್ಲಿ ಉದಯ ಮತ್ತು ಅಸ್ತವುಳ್ಳವರಾಗಿಯೂ ತೇಜಸ್ಸಿನ ಚಕ್ರವನ್ನು ಅನುಸರಿಸುವವರಾಗಿಯೂ ಇರುವರು. ಸೂರ್ಯನು ದಕ್ಷಿಣ ಮಾರ್ಗದಲ್ಲಿರುವಾಗ ಎಲ್ಲಾ ಗ್ರಹಗಳ ಕೆಳಗಡೆ ಅವನು ಚಲಿಸುತ್ತಾನೆ. ಚಂದ್ರನು ತನ್ನ

ಮಂಡಲವನ್ನು ವಿಸ್ತಾರಮಾಡಿಕೊಂಡು ಅವನ ಮೇಲುಭಾಗದಲ್ಲಿ ಸಂಚರಿಸುತ್ತಾನೆ. ನಕ್ಷತ್ರಮಂಡಲವೆಲ್ಲವೂ ಚಂದ್ರನ ಮೇಲುಭಾಗದಲ್ಲಿ ಚಲಿಸುತ್ತದೆ. ನಕ್ಷತ್ರಗಳ ಮೇಲೆ ಬುಧನೂ ಅವನ ಮೇಲೆ ಶುಕ್ರನೂ, ಅವನ ಮೇಲೆ ಮಂಗಳನೂ, ಅವನ ಮೇಲೆ ಗುರುವೂ, ಅವನ ಮೇಲೆ ಶನಿಯೂ, ಅವನ ಮೇಲೆ ಸಪ್ತರ್ಷಿಗಳ ಮಂಡಲವೂ, ಅವರ ಮೇಲೆ ಧ್ರುವನೂ ಕ್ರಮವಾಗಿ ಇರುತ್ತಾರೆ.

ಇಂಥಹ ಶ್ರೇಷ್ಠವಾದ ವಿಷ್ಣುಲೋಕವನ್ನು ತಿಳಿದು ಪಾಪಗಳಿಂದ ಬಿಡುಗಡೆಯನ್ನು ಹೊಂದಬೇಕು. ಎರಡು ಲಕ್ಷಯೋಜನದ ವಿಸ್ತಾರದಲ್ಲಿ ಕ್ರಮವಾಗಿ ಗ್ರಹ, ನಕ್ಷತ್ರ, ಮತ್ತು ತಾರೆಗಳ ಮೇಲುಗಡೆ ತಮ್ಮ ದಿವ್ಯವಾದ ತೇಜಸ್ಸಿನಿಂದ ಗ್ರಹಗಳೂ ಮತ್ತು ಸೂರ್ಯ ಚಂದ್ರರೂ ಬೆಳಗುತ್ತಿದ್ದಾರೆ. ಗ್ರಹ, ನಕ್ಷತ್ರ ಮತ್ತು ಸೂರ್ಯರು ಋಜುವಾದ ಮಾರ್ಗದಲ್ಲಿ ರಾತ್ರಿ ಹಗಲು ನಕ್ಷತ್ರ ಸಂಬಂಧವನ್ನು ಹೊಂದುತ್ತಾರೆ. ಇವುಗಳು ಸೇರಿದಾಗಲೂ, ಪ್ರತ್ಯೇಕವಾದಾಗಲೂ ಪ್ರಜೆಗಳು ಏಕಕಾಲದಲ್ಲಿ ನೋಡುತ್ತಾರೆ. ಋತುಗಳು ಆರು ಎಂದು ಹೇಳಲ್ಪಟ್ಟಿದೆ. ಅವು ಐದು ಬಗೆಯಾಗಿ ವರ್ಷವೇ ಮುಂತಾದ ಭೇದದಿಂದ ಸುತ್ತುತ್ತವೆ. ಈ ಗ್ರಹವೇ ಮುಂತಾದವು ಅನ್ಯೋನ್ಯವಾಗಿ ಆಕರ್ಷಿಸುತ್ತಿದ್ದು ಅನ್ಯೋನ್ಯವಾಗಿ ಸೇರಿಕೊಂಡಿರುತ್ತವೆ. ವಿದ್ವಾಂಸರು ಇವುಗಳ ಸಂಬಂಧವನ್ನು ಒಂದೊಂದಕ್ಕೆ ಬೇರೆಯಾದಂತೆ ತಿಳಿಯಬೇಕು. ರುದ್ರನಿಂದ ಷಣ್ಮುಖನು ಹೇಗೋ ಹಾಗೆ ಬ್ರಹ್ಮನಿಂದ ಸೂರ್ಯನು ಗ್ರಹಗಳಿಗೆ ಅಧಿಪತಿಯಾಗಿ ಪಟ್ಟಾಭಿಷೇಕಮಾಡಿಸಲ್ಪಟ್ಟಿದ್ದಾನೆ. ಆದ್ದರಿಂದ ಬ್ರಹ್ಮನ ಪೂಜೆಯನ್ನು ಮಾಡಬೇಕು. ಸೂರ್ಯಗ್ರಹದಿಂದ ಪೀಡೆ ಸಂಭವಿಸಿದರೆ ಸತ್ಪುರುಷರು ತಮ್ಮ ಕಾರ್ಯಸಿದ್ಧಿಗೋಸ್ಕರ ಶಾಸ್ತ್ರೋಕ್ತವಾದ ರೀತಿಯಲ್ಲಿ ಗ್ರಹಗಳ ಪೂಜೆಯನ್ನು ಹೋಮವನ್ನು ಅಗ್ನಿಯಲ್ಲಿ ಮಾಡಬೇಕು.

*ಲಿಂಗಮಹಾಪುರಾಣದ ಪೂರ್ವಾರ್ಧದ ಜ್ಯೋತಿಶ್ಚಕ್ರದಲ್ಲಿ ಗ್ರಹಗಳಚಲನ ವಿಚಾರವೆಂಬ ಐವತ್ತೇಳನೆಯ ಅಧ್ಯಾಯ ಮುಗಿದುದು*



## ಸೂರ್ಯಾಭಿಷೇಕ ವಿಚಾರ

**ಅಧ್ಯಾಯ - ೫೮**

**ಸೂತ :-** ಪೂಜ್ಯನಾದ ಮತ್ತು ಪ್ರಜೆಗಳೆಲ್ಲರಿಗೂ ಅಧಿಪತಿಯಾದ ಬ್ರಹ್ಮನು ಸೂರ್ಯನನ್ನು ಗ್ರಹಗಳ ಅಧಿಪತಿಯನ್ನಾಗಿಯೂ, ಹಾಗೆಯೇ ನಕ್ಷತ್ರಗಳಿಗೆ ಮತ್ತು ವನಸ್ಪತಿಗಳಿಗೆ ಚಂದ್ರನನ್ನು ಅಧಿಪತಿಯನ್ನಾಗಿಯೂ, ನೀರಿಗೆ ವರುಣದೇವತೆಯನ್ನೂ, ಐಶ್ವರ್ಯಕ್ಕೆ ಯಕ್ಷಶ್ರೇಷ್ಠನಾದ ಕುಬೇರನನ್ನು, ಆದಿತ್ಯದೇವತೆಗಳಿಗೆ ವಿಷ್ಣುವನ್ನೂ, ದ್ರವ್ಯಗಳಿಗೆ ಅಗ್ನಿಯನ್ನು, ಪ್ರಜಾಪತಿದೇವತೆಗಳಿಗೆ ದಕ್ಷನನ್ನೂ, ದೇವತೆಗಳಿಗೆ ಇಂದ್ರನನ್ನೂ, ದೈತ್ಯರೂ ಮತು ದಾನವರೆಂಬ ರಾಕ್ಷಸರಿಗೆ ದೈತ್ಯಶ್ರೇಷ್ಠನಾದ ಪ್ರಹ್ಲಾದನನ್ನೂ, ಪಿತೃದೇವತೆಗಳಿಗೆ ಯಮಧರ್ಮ ರಾಜನನ್ನೂ, ರಾಕ್ಷಸರಿಗೆ ನಿಋತಿ ಎಂಬುವನನ್ನು, ಪಶುಗಳಿಗೂ ಮತ್ತು ಭೂತಗಳಿಗೂ ರುದ್ರನನ್ನೂ, ನಂದಿಗಳಿಗೆ ಗಣಪತಿಯನ್ನೂ, ವೀರರಿಗೂ ಮತ್ತು ಪಿಶಾಚಿಗಳಿಗೂ ಭಯಂಕರನಾದ ವೀರಭದ್ರನನ್ನೂ, ಮಾತೃದೇವತೆಗಳಿಗೆ ಎಲ್ಲ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ

ಚಾಮುಂಡಾಂಬಿಕೆಯನ್ನೂ, ರುದ್ರದೇವತೆಗಳಿಗೆ ದೇವತೆಗಳಿಗೆಲ್ಲರಿಗೂ ಒಡೆಯನಾದ ಈಶ್ವರನನ್ನೂ, ವಿಘ್ನಗಳಿಗೆ ಶಿವಪುತ್ರನೂ ಗಜಮುಖನೂ ದೇವನೂ ಆದ ಗಣಪತಿಯನ್ನೂ, ಸ್ತ್ರೀಯರಿಗೆ ಪಾರ್ವತೀದೇವಿಯನ್ನೂ, ಮಾತೃಗಳಿಗೆ ಸರಸ್ವತಿಯನ್ನೂ, ಕಪಟವುಳ್ಳವರಿಗೆ ವಿಷ್ಣುವನ್ನೂ, ಪ್ರಪಂಚಕ್ಕೆ ತನ್ನನ್ನೂ ಪರ್ವತಗಳಿಗೆ ಹಿಮವತ್ಪರ್ವತವನ್ನೂ, ನದಿಗಳಿಗೆ ಗಂಗೆಯನ್ನು ಎಲ್ಲಾ ಸಮುದ್ರಗಳಿಗೂ ಸಾಗರವನ್ನೂ, ಗಿಡಮರಗಳಿಗೆಲ್ಲದಕ್ಕೂ ಅಶ್ವತ್ಥ ಮತ್ತು ಆಲದ ಮರಗಳನ್ನೂ ಅಧಿಪತಿಗಳನ್ನಾಗಿ ಪಟ್ಟಾಭಿಷೇಕ ಮಾಡಿರುವನು.

ಬ್ರಹ್ಮನು ಗಂಧರ್ವರು, ವಿದ್ಯಾಧರರು, ಮತ್ತು ಕಿನ್ನರರೆಂಬ ದೇವತೆಗಳ ಗುಂಪುಗಳಿಗೆ ಚಿತ್ರರಥನನ್ನೂ, ಹೆಚ್ಚು ಬಲಶಾಲಿಯಾದ ವಾಸುಕಿಯನ್ನು ಸರ್ಪಗಳಿಗೆ ಅಧಿಪತಿಯನ್ನಾಗಿಯೂ ಮಾಡಿದನು. ಬ್ರಹ್ಮನು ಹೆಚ್ಚು ಬಲವುಳ್ಳ ಗಜಶ್ರೇಷ್ಠವಾದ ಐರಾವತವನ್ನು ದಿಗ್ಗಜಗಳಿಗೆ ಅಧಿಪತಿಯನ್ನಾಗಿಯೂ, ಪಕ್ಷಿಗಳಿಗೆ ಗರುಡನನ್ನೂ, ಕುದುರೆಗಳಿಗೆ ಉಚ್ಚೈಃಶ್ರವಸ್ಸನ್ನೂ ಅಧಿಪತಿಯನ್ನಾಗಿ ಮಾಡಿದನು. ಬ್ರಹ್ಮನು ಮೃಗಗಳಿಗೆ ಅಧಿಪತಿಯನ್ನಾಗಿ ಶರಭವೆಂಬ ಎಂಟುಕಾಲುಳ್ಳ ಮೃಗವನ್ನೂ, ಸೇನಾಧಿಪತಿಗಳಿಗೆ ಪ್ರಮಾಣಗಳಿಗೆ ಸಿಕ್ಕದ ಷಣ್ಮುಖನನ್ನೂ, ಶ್ರುತಿಸ್ಮೃತಿಗಳಿಗೆ ಈಶ್ವರಾವತಾರನಾದ ನಕುಲೀಶನನ್ನೂ ಅಧಿಪತಿಯನ್ನಾಗಿ ಮಾಡಿದನು. ಅವನು ಪೂರ್ವ ಮೊದಲಾದ ದಿಕ್ಕುಗಳ ಕ್ರಮಕ್ಕನುಸಾರವಾಗಿ ಸುಧರ್ಮನನ್ನು ಶಂಖಪದನನ್ನೂ, ಕೇತುಮಂತನನ್ನು ಮತ್ತು ಹೇಮರೋಮನನ್ನು ಅಧಿಪತಿಯನ್ನಾಗಿ ನಿಯಮಿಸಿದನು.

ಅವನು ಎಲ್ಲ ವಸ್ತುಗಳಿಗೂ ಅಧಿಪತಿಯಾದ, ಪ್ರಪಂಚದಲ್ಲೆಲ್ಲ ಬಹು ದೊಡ್ಡ ವಸ್ತುವಾದ ನಾಲ್ಕು ರೂಪಗಳಲ್ಲಿಯೂ ಸುಖವನ್ನುಂಟುಮಾಡುವ ಸರ್ವವನ್ನು ತಿಳಿದಿರುವ ಮತ್ತು ಧರ್ಮವನ್ನೇ ಧ್ವಜವನ್ನಾಗಿ ಮಾಡಿಕೊಂಡಿರುವ ಮಹೇಶ್ವರನನ್ನು ಅಧಿಪತಿಯನ್ನಾಗಿ ಮಾಡಿದನು. ಬ್ರಹ್ಮನು ಪೂಜ್ಯನಾದ ಈಶ್ವರನ ಅನುಗ್ರಹದಿಂದಲೇ ಹಿಂದೆ ಹೇಳಿದವರಿಗೆಲ್ಲರಿಗೂ ಕ್ರಮವಾಗಿ ಆಯಾಸ್ಥಾನಗಳಲ್ಲಿ ಪಟ್ಟಾಭಿಷೇಕ ಮಾಡಿದನು. ಈ ರೀತಿಯಾಗಿ ಹಿಂದೆ ಪಟ್ಟಾಭಿಷೇಕಮಾಡಿ ಪುಣ್ಯಸ್ವರೂಪನಾದ ಮತ್ತು ಪ್ರಪಂಚಕ್ಕೆ ಒಡೆಯನಾದ ಬ್ರಹ್ಮನು ಇವರೆಲ್ಲರಿಗೂ ಒಟ್ಟಿಗೆ ಪಟ್ಟಾಭಿಷೇಕ ಮಾಡಿದನೆಂಬ ವಿಚಾರವನ್ನು ವಿಸ್ತರಿಸಿ ಹೇಳಲಾಗಿದೆ.

*ಲಿಂಗ ಮಹಾಪುರಾಣದ ಪೂರ್ವಾರ್ಧದ ಸೂರ್ಯನೇ ಮೊದಲಾದವರ ಅಭಿಷೇಕ ವಿಚಾರ ಎಂಬ ಐವತ್ತೆಂಟನೆಯ ಅಧ್ಯಾಯ ಮುಗಿದುದು*

—o—

## ಜ್ಯೋತಿರ್ಮಂಡಲದಲ್ಲಿ ಸೂರ್ಯಕಿರಣಗಳ ವಿವರಣ

**ಅಧ್ಯಾಯ - ೫೯**

**ಸೂತ:-** ಸೂರ್ಯಚಂದ್ರರೇ ಮೊದಲಾದ ಗ್ರಹಗಳು ದೇವತೆಗಳಿಗೆ ಆಶ್ರಯ ಸ್ಥಾನವಾಗಿರುತ್ತವೆ. ಅನಂತರ ಅಗ್ನಿಗೆ ಮೂರು ವಿಧವಾದ ಉತ್ಪತ್ತಿ ಇರುತ್ತದೆ. ಈಶ್ವರನು ಪ್ರಪಂಚದ ಸೃಷ್ಟಿಯ ಪ್ರಾರಂಭದಲ್ಲಿ ಭೂಮಿಯನ್ನೂ, ನೀರನ್ನೂ ಆಶ್ರಯಿಸಿದವನಾಗಿ ಅಗ್ನಿಯನ್ನು ಸೃಷ್ಟಿಮಾಡಿ, ಭೂಮಿ ಮತ್ತು ನೀರನ್ನು ನಾಶಮಾಡಿ ಬೆಳಕಿಗೋಸ್ಕರ ಆ ಅಗ್ನಿಯನ್ನು ಮೂರು ವಿಧವಾಗಿ ವಿಭಾಗ ಮಾಡಿದನು. ಈ ಲೋಕದಲ್ಲಿ ಭೂಮಿಗೆ ಸಂಬಂಧಪಟ್ಟ ಅಗ್ನಿಯು 'ಪಾರ್ಥಿವ' ಅಗ್ನಿಯೆಂದು ಹೇಳಲ್ಪಡುತ್ತದೆ. ಸೂರ್ಯನಿಂದ ಜ್ವಲಿಸಲ್ಪಡುವ ಅಗ್ನಿಯು 'ಶುಚಿ' ಅಗ್ನಿಯೆಂದು ಕರೆಯಲ್ಪಡುತ್ತದೆ. ಅವುಗಳ ಮಧ್ಯೆ ನೀರಿನಿಂದ ಹುಟ್ಟಿದ ಅಗ್ನಿಯನ್ನು 'ವೈದ್ಯುತ' ಎನ್ನುವರು. ವೈದ್ಯುತ, ಜಾಠರ, ಸೌರ ಎಂದು ಈ ಅಗ್ನಿಗಳೊಳಗೆ ಮೂರು ಬಗೆಯು ಇದೆ. ಇದರಿಂದ ನೀರನ್ನು ಪಾನಮಾಡಿ ವಿಶ್ವವ್ಯಾಪಿಯಾದ ಸೂರ್ಯನು ಕಿರಣಗಳಿಂದ ಜ್ವಲಿಸುತ್ತಾನೆ. ನೀರಿನಿಂದಲೇ ಹುಟ್ಟಿದ ಅಗ್ನಿಯು ನೀರಿನಲ್ಲೇ ಸೇರಿಕೊಂಡಿರಲಾಗಿದೆ. ನೀರಿನಿಂದ ನಾಶವಾಗುವುದಿಲ್ಲ. ಮನುಷ್ಯರ ಜಠರದಲ್ಲಿರುವ ಅಗ್ನಿಯು ನೀರಿನಿಂದ ನಾಶವಾಗಲಾರದು. ಭೂಮಿಗೆ ಸಂಬಂಧ ಪಟ್ಟ ಆದರೆ ಪ್ರಕಾಶವಿಲ್ಲದ ಅಗ್ನಿಯು ''ಜಠರಾಗ್ನಿ'ಯಾಗಿರುವುದು.

ಸೂರ್ಯನು ಅಸ್ತಮಿಸಲು ಇವನ ಮಂಡಲವು ಬೆಳ್ಳಗೂ ಸುಡುವ ಶಕ್ತಿ ಇಲ್ಲದ್ದೂ ಆಗುತ್ತದೆ. ಇವನ ಕಾಲುಭಾಗ ತೇಜಸ್ಸು ರಾತ್ರಿಯಲ್ಲಿ ಅಗ್ನಿಯನ್ನು ಸೇರುತ್ತದೆ. ಆದ್ದರಿಂದ ಬಹುದೂರಪ್ರಕಾಶವನ್ನು ಬೀರುತ್ತದೆ. ಪುನಃಸೂರ್ಯನು ಉದಯಿಸುವಾಗ ಅಗ್ನಿಯ ಶಾಖ ಸ್ವಭಾವವು ಸೂರ್ಯನನ್ನು ಸೇರುತ್ತದೆ. ಭೂಮಿಗೆ ಸಂಬಂಧಪಟ್ಟ ಅಗ್ನಿಗೆ ಕಾಲುಭಾಗ ಶಾಖವು ಸೇರಿರುವುದರಿಂದ ಅಗ್ನಿ ಸುಡಬಲ್ಲದು. ಸೂರ್ಯನ ಮತ್ತು ಅಗ್ನಿಗೆ ಸಂಬಂಧಪಟ್ಟ ತೇಜಸ್ಸು, ಪ್ರಕಾಶ ಮತ್ತು ಸುಡುವ ಸ್ವಭಾವ ಉಳ್ಳದ್ದಾಗಿದೆ. ಭೂಮಿಯ ಉತ್ತರಾರ್ಧದಲ್ಲಿ ಸೂರ್ಯನು ಮತ್ತು ದಕ್ಷಿಣಾರ್ಧದಲ್ಲಿ ಅಗ್ನಿಯೂ ಪರಸ್ಪರ ತೇಜಸ್ಸಿನಿಂದ ಸೇರುವುದರಿಂದ ಎರಡೂ ಪ್ರಕಾಶಮಾನವಾಗಿವೆ. ಸೂರ್ಯನು ಪುನಃ ಹುಟ್ಟುತ್ತಾನೆ. ಪುನಃ ನೀರನ್ನು ಸೇರುತ್ತಾನೆ. ಆದ್ದರಿಂದ ಹಗಲೂ ರಾತ್ರಿ ಸೂರ್ಯನ ತೇಜಸ್ಸಿನ ಸೇರುವಿಕೆಯಿಂದ ನೀರು ಕೆಂಪಗಿರುತ್ತದೆ. ಪುನಃ ಸೂರ್ಯನು ಅಸ್ತಮಿಸುತ್ತಾನೆ. ಹಗಲಲ್ಲಿ ನೀರನ್ನು ಸೇರುತ್ತಾನೆ. ಆದ್ದರಿಂದ ಹಲವು ವೇಳೆ ನೀರು ಬೆಳ್ಳಗೂ ಮತ್ತು ಪ್ರಕಾಶಮಾನವಾಗಿಯೂ ಇರುತ್ತದೆ. ಈ ರೀತಿಯಲ್ಲಿ ಕ್ರಮವಾಗಿ ಭೂಮಿಯು ದಕ್ಷಿಣೋತ್ತರ ಅರ್ಧಭಾಗದಲ್ಲಿ ನಿತ್ಯವೂ ಉದಯಾಸ್ತಮಯ ಕಾಲಗಳಲ್ಲಿ ಹಗಲು ರಾತ್ರಿ ಸೂರ್ಯನು ನೀರನ್ನು ಪ್ರವೇಶಿಸುತ್ತಾನೆ. ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಪಾನಮಾಡಿ ಭೂಸಂಬಂಧವಾದ ಅಗ್ನಿಯಿಂದ ಮಿಶ್ರವಾಗಿರುವುದರಿಂದ'ಶುಚಿ' ಎಂದು ಕರೆಯಲ್ಪಡುತ್ತಾನೆ.

ಸಾವಿರಾರು ಕಿರಣಗಳುಳ್ಳ ಸೂರ್ಯ ಮಂಡಲವು ದುಂಡಗಿರುವ ಗಡಿಗೆಗೆ ಸಮಾನವಾದದ್ದೆಂದು ಹೇಳಲ್ಪಟ್ಟಿದೆ. ಅವನು ತನ್ನ ಸುತ್ತಲೂ ಸಾವಿರಾರು ಕಿರಣಗಳಿಂದ

ನದಿಗಳ ಮತ್ತು ಸಮುದ್ರಗಳ ಬಾವಿಗಳ ಮತ್ತು ಹರಿಯುವ ಜಲಪೂರ್ಣವಾದ ಹೊಳೆಗಳ ನಿಂತಿರುವ ಕೆರೆ ಕಟ್ಟೆ ಮೊದಲಾದವುಗಳಿಂದ ನೀರನ್ನು ತೆಗೆದು ಕೊಳ್ಳುತ್ತಾನೆ. ಅವನ ಸಾವಿರಾರು ಕಿರಣಗಳು ತಣ್ಣಗಿರುವ ಮತ್ತು ಬೆಚ್ಚಗಿರುವ ಮಳೆಯನ್ನು ಸುರಿಸುತ್ತವೆ. ಆ ನೂರಾರು ನಾಡಿಗಳು ಅಥವಾ ಕಿರಣಗಳು ವಿಚಿತ್ರವಾದ ಸ್ವರೂಪವುಳ್ಳವು ಮತ್ತು ಮಳೆಗರೆಯುವಂಥವುಗಳು ಆಗಿವೆ. ಹೀಗೆ ಮಳೆಗರೆಯುವ ಕಿರಣಗಳು ಭಜನ, ಮಾಲ್ಯ, ಕೇತನ, ಪತನ ಮತ್ತು ಅಮೃತ ಎಂದು ಬೇರೆ ಬೇರೆಯಾಗಿ ಕರೆಯಲ್ಪಡುತ್ತವೆ. ಹಿಮವುಳ್ಳ ಕಿರಣಗಳು ಮುನ್ನೂರು ಬೇರೆಯೇ ಇರುತ್ತವೆ. ಇವುಗಳು ಹಿಮವನ್ನು ಸುರಿಸುವವು. ಅವುಗಳಿಗೆ ಶೇಷ, ಮೇಘ, ವಾತ್ಸ್ಯ, ಹ್ಲಾದಿನೀ ಎಂದು ಬೇರೆ ಬೇರೆ ಹೆಸರುಗಳು ಇರುತ್ತವೆ. ಹಿಮವನ್ನು ಸುರಿಸುವ ಕಿರಣಗಳು ಚಂದ್ರಾಭಾ, ಪೀತಾಭಾ, ಶುಕ್ಲ, ಕುರುಭ, ಗೌ, ವಿಶ್ವಭೃತ್ ಎಂದು ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುತ್ತವೆ. ಶುಕ್ಲ ಎಂಬ ಹೆಸರುಳ್ಳ ಕಿರಣಗಳು ಬಿಸಿಲನ್ನುಂಟು ಮಾಡುತ್ತವೆ. ಚಂದ್ರಸೂರ್ಯಸ್ವರೂಪನಾದ ಈಶ್ವರನು ಮನುಷ್ಯರನ್ನೂ, ಪಿತೃದೇವತೆಗಳನ್ನೂ ಪೋಷಿಸುತ್ತಾನೆ. ಮನುಷ್ಯರನ್ನು ಗಿಡಮೂಲಿಕೆಗಳಿಂದಲೂ, 'ಸ್ವಧೆ' ಎಂಬ ಮಂತ್ರ ದ್ರವ್ಯದಿಂದ ಪಿತೃದೇವತೆಗಳನ್ನೂ, ಅಮೃತದಿಂದ ದೇವತೆಗಳನ್ನೂ ಹೀಗೆ ಮೂರು ವಿಧಾನಗಳಿಂದ ಅವರಿಗೆ ತೃಪ್ತಿಯನ್ನುಂಟು ಮಾಡುತ್ತಾನೆ. ಅವನು ವಸಂತಕಾಲದಲ್ಲಿಯೂ ಮತ್ತು ಬೇಸಗೆಯ ಕಾಲದಲ್ಲಿಯೂ ಮುನ್ನೂರು ಕಿರಣಗಳಿಂದ ಜ್ವಲಿಸುತ್ತಾನೆ. ಮಳೆಗರೆಯುತ್ತಾನೆ. ಅವನು ಹೇಮಂತ ಮತ್ತು ಶಿಶಿರ ಋತುವಿನಲ್ಲಿ ಮುನ್ನೂರು, ಕಿರಣಗಳಿಂದ ಹಿಮವನ್ನು ಸುರಿಸುತ್ತಾನೆ. ಇವನು ಬೇರೆ ಬೇರೆ ಕಾಲಗಳಲ್ಲಿ ಇಂದ್ರ, ಧಾತೃ, ಭಗ, ಪೂಷನ್, ಮಿತ್ರ, ವರುಣ, ಆರ್ಯಮನ್ ಎಂಬ ಹೆಸರುಗಳಿಂದ ಕರೆಯಲ್ಪಡುತ್ತಾನೆ.

ಅಲ್ಲದೆ ಇವನನ್ನು ಅಂಶು, ವಿವಸ್ವಾನ್, ತ್ವಷ್ಟೃ, ಪರ್ಜನ್ಯ, ವಿಷ್ಣು ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಮಾಘಮಾಸದಲ್ಲಿ ವರುಣನೆಂಬುದಾಗಿಯೂ, ಫಾಲ್ಗುನಮಾಸದಲ್ಲಿ ಸೂರ್ಯನೆಂದೂ, ಜ್ಯೇಷ್ಠಮಾಸದಲ್ಲಿ ಇಂದ್ರನೆಂದೂ, ಆಷಾಢ ಮಾಸದಲ್ಲಿ ಆರ್ಯಮನ್ ಎಂದೂ ಶ್ರಾವಣ ಮಾಸದಲ್ಲಿ ವಿವಸ್ವಾನ್ ಎಂದೂ, ಭಾದ್ರಪದ ಮಾಸದಲ್ಲಿ ಭಗ ಎಂದೂ, ಆಶ್ವಯುಜ ಮಾಸದಲ್ಲಿ ಪರ್ಜನ್ಯ ಎಂದೂ, ಕಾರ್ತಿಕ ಮಾಸದಲ್ಲಿ ತ್ವಷ್ಟೃ ಎಂದೂ ಇವನಿಗೆ ಬೇರೆ ಬೇರೆ ಹೆಸರುಗಳಿವೆ. ಅಲ್ಲದೆ ಮಾರ್ಗಶೀರ್ಷ ಮಾಸದಲ್ಲಿ ಮಿತ್ರನೆಂದೂ, ಪುಷ್ಯಮಾಸದಲ್ಲಿ ಸನಾತನನಾದ ವಿಷ್ಣು ಎಂದೂ ಕರೆಯಲ್ಪಡುತ್ತಾನೆ. ವರುಣನು ಐದು ಸಾವಿರ ಕಿರಣಗಳಿಂದಲೂ, ಪೂಷನ್ ಆರುಸಾವಿರ ಕಿರಣಗಳಿಂದಲೂ, ಅಂಶುವು ಏಳು ಸಾವಿರ ಕಿರಣಗಳಿಂದಲೂ, ಧಾತೃವು ಎಂಟು ಸಾವಿರ ಕಿರಣಗಳಿಂದಲೂ, ಶತಕ್ರತುವು ಒಂಬತ್ತು ಸಾವಿರ ಕಿರಣಗಳಿಂದಲೂ ಪ್ರಕಾಶಿಸುತ್ತಾರೆ.

ವಿವಸ್ವಾನ್ ಹತ್ತುಸಾವಿರ ಕಿರಣಗಳಿಂದಲೂ ಭಗನು ಹನ್ನೊಂದು ಸಾವಿರ ಕಿರಣಗಳಿಂದಲೂ, ಮಿತ್ರನು ಏಳು ಸಾವಿರ ಕಿರಣಗಳಿಂದಲೂ, ತ್ವಷ್ಟೃವು ಎಂಟು ಸಾವಿರ ಕಿರಣಗಳಿಂದಲೂ, ಆರ್ಯಮನ್ ಹತ್ತು ಸಾವಿರ ಕಿರಣಗಳಿಂದಲೂ, ಪರ್ಜನ್ಯನು ಒಂಬತ್ತು ಸಾವಿರ ಕಿರಣಗಳಿಂದಲೂ, ವಿಷ್ಣುವು ಆರುಸಾವಿರ ಕಿರಣಗಳಿಂದಲೂ, ಬೆಳಗುತ್ತಾ ಭೂಮಿಗೆ ಶಾಖವನ್ನುಂಟುಮಾಡುತ್ತಾರೆ. ಸೂರ್ಯನು ವಸಂತಮಾಸದಲ್ಲಿ ಹೊಂಬಣ್ಣ ಉಳ್ಳವನೂ, ಬೇಸಿಗೆಯಲ್ಲಿ ಚಿನ್ನದಬಣ್ಣ ಉಳ್ಳವನೂ, ಮಳೆಗಾಲದಲ್ಲಿ ಬೆಳ್ಳಗೂ,

ಶರತ್ಕಾಲದಲ್ಲಿ ಮಾಸಿದ ಬಿಳುಪುಳ್ಳವನೂ, ಹೇಮಂತ ಋತುವಿನಲ್ಲಿ ಸ್ವಲ್ಪ ಕೆಂಪಾಗಿಯೂ ಶಿಶಿರ ಋತುವಿನಲ್ಲಿ ಕೆಂಪಾಗಿಯೂ, ಇರುತ್ತಾನೆ. ಸೂರ್ಯನ ನಾನಾ ವರ್ಣದ ವಿಷಯವು ಈ ರೀತಿಯಾಗಿದೆ. ಸೂರ್ಯನು ಮನುಷ್ಯರ ಮೂಲಕ ಗಿಡಮೂಲಿಕೆಗಳಿಂದಲೂ, ಪಿತೃದೇವತೆಗಳ ಮೂಲಕ 'ಸ್ವಧಾ' ಎಂಬ ಮಂತ್ರ ದ್ರವ್ಯಗಳಿಂದಲೂ, ದೇವತೆಗಳ ಮೂಲಕ ಅಮೃತದಿಂದಲೂ, ಶಕ್ತಿಯನ್ನು ಪಡೆಯುತ್ತಾನೆ. ಅನಂತರ ಅದೇ ತನ್ನ ಶಕ್ತಿಯನ್ನು ಆ ಮೂರು ಜನಗಳಿಗೂ ವಿನಿಯೋಗಿಸುತ್ತಾನೆ.

ಹೀಗೆ ಲೋಕೋಪಯೋಗಿಯಾದ ಸೂರ್ಯ ಸಂಬಂಧವಾದ ಸಾವಿರಾರು ಕಿರಣಗಳು ನೀರನ್ನೂ, ಶೈತ್ಯವನ್ನೂ, ಬಿಸಿಯನ್ನೂ, ಕೊಡವುದಾಗಿ ಲೋಕದಲ್ಲಿ ಬೇರೆ ಬೇರೆ ಸ್ವರೂಪವನ್ನು ತಾಳುತ್ತವೆ. ಈ ರೀತಿಯಾಗಿ ಶುಭವಾದ ಸೂರ್ಯನೆಂಬ ಹೆಸರುಳ್ಳ ತೇಜೋಮಂಡಲವು ನಕ್ಷತ್ರಗಳು ಗ್ರಹಗಳು ಮತ್ತು ಚಂದ್ರ ಇವರಿಗೆ ಆಶ್ರಯ ಭೂತವಾದುದು. ಈ ಚಂದ್ರ, ನಕ್ಷತ್ರ ಮತ್ತು ಗ್ರಹಗಳು ಸೂರ್ಯನಿಂದಲೇ ಹುಟ್ಟಿದುವು. ಈ ಸೂರ್ಯಭಗವಂತನು ಈಶ್ವರನ ಬಲಗಣ್ಣಾಗಿಯೂ ಚಂದ್ರನು ಎಡಗಣ್ಣಾಗಿಯೂ ಇರುತ್ತಾರೆ. ಏಕೆಂದರೆ ಲೋಕದ ಪ್ರಜೆಗಳಿಗೆಲ್ಲರಿಗೂ ಪ್ರಕಾಶವನ್ನು ಬೀರಿ ಇವರು ದಾರಿ ತೋರಿಸುವುದರಿಂದ ಈಶ್ವರನ ಕಣ್ಣುಗಳೇ ಆಗಿದ್ದಾರೆ.

*ಲಿಂಗ ಮಹಾಪುರಾಣದ ಪೂರ್ವಾರ್ಧದ ಜ್ಯೋತಿರ್ಮಂಡಲದಲ್ಲಿ*
*ಸೂರ್ಯನ ಕಿರಣಗಳ ವಿವರಣೆ ಎಂಬ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು*



## ಸೂರ್ಯಕಿರಣಗಳ ಸ್ವರೂಪದ ವಿವರಣೆ

## ಅಧ್ಯಾಯ - ೬೦

**ಸೂತ :-** ಚಂದ್ರ ಸೂರ್ಯರನ್ನು ಬಿಟ್ಟು ಉಳಿದ ಐದು ಗ್ರಹಗಳೂ ವೈಭವವುಳ್ಳವೂ, ಸ್ವೇಚ್ಛೆಯಿಂದ ಸಂಚರಿಸುವಂಥವೂಗಳೂ ಆಗಿವೆ. ಅಗ್ನಿಯು ಆದಿತ್ಯನೆಂಬುದಾಗಿಯೂ, ಚಂದ್ರನು ಉದರಸ್ವರೂಪನೆಂದೂ ಶಾಸ್ತ್ರದಲ್ಲಿ ಹೇಳಲಾಗಿದೆ. ಅಂಗಾರಕಗ್ರಹವು ದೇವತೆಗಳಿಗೆ ಸೇನಾಧಿಪತಿಯಾದ ಷಣ್ಮುಖ ಸ್ವಾಮಿಕವಾಗಿರುವುದು. ಬುಧಗ್ರಹವನ್ನು ಸ್ವಾಮಿಯಾದ ನಾರಾಯಣನೆಂದು ಕರೆಯುತ್ತಾರೆ. ಮೆಲ್ಲಗೆ ಚಲಿಸುವ ದೊಡ್ಡ ಗ್ರಹವಾದ ಶನಿಗ್ರಹವು ಸರ್ವಲೋಕಕ್ಕೆ ಸ್ವಾಮಿಯಾದ ಸಾಕ್ಷಾತ್ ಯಮಧರ್ಮನೇ ಆಗಿರುವದು. ದೊಡ್ಡ ಗ್ರಹಗಳಾದ ದೇವತೆಗಳಿಗೂ, ರಾಕ್ಷಸರಿಗೂ ಗುರುಗಳಾದ ಗುರು, ಶುಕ್ರರು ಬ್ರಹ್ಮನ ಮಕ್ಕಳಾಗಿರುವರು. ಈ ಮೂರುಲೋಕವು ಸೂರ್ಯನ ಆಶ್ರಯದಲ್ಲಿಯೇ ಇದೆ. ಈ ಸೂರ್ಯಭಗವಂತನಿಂದಲೇ ದೇವತೆಗಳೂ ರಾಕ್ಷಸರೂ ಮತ್ತು ಮನುಷ್ಯರೇ ಮೊದಲಾದವರಿಂದ ಕೂಡಿದ ಈ ಜಗತ್ತು ಉಂಟಾಗಿದೆ. ರುದ್ರ, ಇಂದ್ರ, ಉಪೇಂದ್ರ, ಬ್ರಾಹ್ಮಣ, ಅಗ್ನಿ ಮತ್ತು ದೇವತೆಗಳೇ ಮೊದಲಾದ ತೇಜಸ್ವಿಗಳಾದವರಿಗೂ, ಎಲ್ಲ ಲೋಕದಲ್ಲಿಯೂ ಪ್ರಕಾಶಿಸುವ ತೇಜಸ್ಸಿಗೂ ಈ ಸೂರ್ಯನೇ ಮೂಲಕಾರಣನು. ಸರ್ವಸ್ವರೂಪನೂ, ಎಲ್ಲ ಲೋಕಕ್ಕೂ ಅಧಿಪತಿಯೂ ಆದ ಪರಮೇಶ್ವರನೂ ಈ ಸೂರ್ಯನೇ ಆಗಿರುವನು. ಅವನು ಈ ಮೂರು ಲೋಕಕ್ಕೂ ಅಧಿಪತಿಯೂ, ಮೂಲಭೂತವಾದ ಪರಮದೇವತೆಯೂ ಆಗಿದ್ದಾನೆ.

ಇವನಿಂದಲೇ ಸಮಸ್ತ ಜಗತ್ತು ಹುಟ್ಟಿ ಅವನಲ್ಲಿಯೇ ಕೊನೆಗೆ ನಾಶವನ್ನು ಹೊಂದುತ್ತದೆ.

ಪ್ರಪಂಚದ ಉತ್ಪತ್ತಿಲಯಗಳು ಸೂರ್ಯನಿಂದಲೇ ಉಂಟಾದವು. ಸೂರ್ಯನಲ್ಲಿ ಕ್ಷಣಗಳೂ, ಮುಹೂರ್ತಗಳೂ, ದಿವಸಗಳೂ ರಾತ್ರಿಗಳೂ, ಪಕ್ಷಗಳೂ, ಸಮಸ್ತಗಳೂ ಪುನಃ ಪುನಃ, ನಾಶಹೊಂದಿ ಹುಟ್ಟುತ್ತಿರುತ್ತವೆ. ಅಲ್ಲದೆ ಇವನಲ್ಲಿಯೇ ಮಾಸಗಳೂ, ವರ್ಷಗಳೂ, ಋತುಗಳೂ ಮತ್ತು ಯುಗಗಳೂ ಪುನಃ, ಪುನಃ ನಾಶವಾಗಿ ಉತ್ಪತ್ತಿಯಾಗುತ್ತವೆ. ಆದ್ದರಿಂದ ಸೂರ್ಯನಿಲ್ಲದಿದ್ದರೆ ಕಾಲವನ್ನು ನಿರ್ಣಯಿಸಲಿಕ್ಕೆ ಆಗುತ್ತಲಿರಲಿಲ್ಲ. ಕಾಲದ ಲೆಕ್ಕವಿಲ್ಲದಿದ್ದರೆ ಯಾವುದೊಂದು ವ್ಯವಸ್ಥೆಯಾಗಲಿ, ವ್ರತಾಚರಣೆಯಾಗಲಿ, ಸಂಧ್ಯಾವಂದನಾದಿಕರ್ಮಗಳಾಗಲೀ ಅಥವಾ ಋತುಗಳನ್ನು ವಿಭಾಗ ಮಾಡುವದಾಗಲಿ ಒಂದು ಸಂಭವಿಸುತ್ತಿರಲಿಲ್ಲ. ಇವನಿಲ್ಲದೇ ಹೂವಾಗಲೀ ಗಿಡಗಳಾಗಲೀ ಹಣ್ಣಾಗಲಿ ಆಗುತ್ತಲಿರಲಿಲ್ಲ. ಈ ಸೂರ್ಯಭಗವಂತನು ಕಾಲ ಸ್ವರೂಪನೂ, ಅಗ್ನಿಸ್ವರೂಪನೂ ಮತ್ತು ಲೋಕಾಧಿಪತಿಯೂ ಆಗಿದ್ದಾನೆ. ಸ್ಥಾವರ ಜಂಗಮಾತ್ಮಕವಾದ ಸಕಲ ಜಗತ್ತನ್ನೂ ಇವನು ಸುಡುತ್ತಾನೆ. ಇವನು ಎಲ್ಲಾ ಲೋಕಗಳ ಸಮಸ್ತವಾದ ತೇಜಸ್ಸಿನ ರಾಶಿಯೇ ಆಗಿದ್ದಾನೆ. ಪ್ರಕಾಶಮಾನವಾದ ದೀಪವು ಮನೆಯ ಮಧ್ಯಭಾಗದಲ್ಲಿ ತೂಗು ಹಾಕಲ್ಪಟ್ಟರೆ ಅದು ಹೇಗೆ ಪಕ್ಕಕ್ಕೂ, ಮೇಲಕ್ಕೂ ಕೆಳಗಡೆಯೂ ಕತ್ತಲೆಯನ್ನು ನಿವಾರಣೆಮಾಡಬಲ್ಲದೋ ಹಾಗೆ ಉತ್ತಮವಾದ ಮಾರ್ಗದಲ್ಲಿದ್ದು ಸೂರ್ಯನು ರಾತ್ರಿ ಹಗಲುಗಳಿಂದ ಕೂಡಿದ ಈ ಜಗತ್ತಿನ ಕತ್ತಲನ್ನು ಹೋಗಲಾಡಿಸುತ್ತಾನೆ. ಮತ್ತು ಸಾವಿರಾರು ಕಿರಣಗಳುಳ್ಳ ಗ್ರಹಗಳಿಗೆ ಪತಿಯಾದ ಮತ್ತು ಜಗತ್ತಿಗೆ ಸ್ವಾಮಿಯಾದ ಸೂರ್ಯನು ತನ್ನ ಕಿರಣಗಳಿಂದ ಎಲ್ಲಾ ಕಡೆಯಲ್ಲಿಯೂ ಪ್ರಕಾಶವನ್ನು ಬೀರುತ್ತಾನೆ.

ಸೂರ್ಯನ ಸಾವಿರಾರು ಕಿರಣಗಳ ಜೊತೆಗೆ ಇನ್ನೇಳು ಶ್ರೇಷ್ಠವಾದ ಕಿರಣಗಳಿವೆ. ಇವು ಕಿರಣಗಳನ್ನು ಉತ್ಪತ್ತಿಮಾಡಬಲ್ಲವು. ಈ ಏಳು ಶ್ರೇಷ್ಠ ಕಿರಣಗಳು ಸುಷುಮ್ನಾ, ಹರಿಕೇಶ, ವಿಶ್ವಕರ್ಮ, ವಿಶ್ವವೃತ, ಸನ್ನದ್ಧ, ಸರ್ವಾವಸು, ಸ್ವರಾಟ್ ಎಂದು ಕರೆಯಲ್ಪಡುತ್ತವೆ. ಸುಷುಮ್ನ ಎಂಬ ಕಿರಣವು ಚಂದ್ರರೂಪವಾದ ದಕ್ಷಿಣ ರಾಶಿಯನ್ನು ಪ್ರಕಾಶಪಡಿಸುತ್ತದೆ. ಸುಷುಮ್ನೆ ಎಂಬ ಕಿರಣವು ಮಧ್ಯದಲ್ಲಿ ಕೆಳಗೆ ಮೇಲೆ ಬೆಳಕನ್ನು ಕೊಡುವುದೆಂದು ಹೇಳಲ್ಪಟ್ಟಿದೆ. ಹರಿಕೇಶ ಎಂಬುದು ಮುಂದುಗಡೆ ನಕ್ಷತ್ರಗಳಿಗೆ ಪ್ರಕಾಶವನ್ನುಂಟು ಮಾಡುತ್ತದೆ. ವಿಶ್ವಕರ್ಮಾ ಎಂಬ ಕಿರಣವು ದಕ್ಷಿಣಭಾಗದಲ್ಲಿ ಬುಧಗ್ರಹವನ್ನು ಪ್ರಕಾಶಪಡಿಸುತ್ತದೆ. ವಿಶ್ವವೃತ ಎಂಬ ಕಿರಣವು ಶುಕ್ರಗ್ರಹವನ್ನು ಪ್ರಕಾಶಪಡಿಸುತ್ತದೆ. ಸನ್ನದ್ಧ ಎಂಬ ಕಿರಣವು ಲೋಹಿತವನ್ನು ಪ್ರಕಾಶಪಡಿಸುತ್ತದೆ. ಆರನೆಯದಾದ ಸರ್ವಾವಸು ಎಂಬ ಕಿರಣವು ಗುರುವನ್ನು ಪ್ರಕಾಶಪಡಿಸುತ್ತದೆ. ಹೀಗೆ ಸೂರ್ಯನ ತೇಜಸ್ಸಿನಿಂದ ನಕ್ಷತ್ರಗಳು, ಗ್ರಹಗಳು ಮತ್ತು ತಾರೆಗಳು ಆಕಾಶದಲ್ಲಿ ಬೆಳಗುತ್ತವೆ. ಈ ಜಗತ್ತಿನಲ್ಲಿ ಇವುಗಳಿಗೆ ನಾಶವಿಲ್ಲದೆ ಇರುವದರಿಂದ ಇವಕ್ಕೆ ನಕ್ಷತ್ರ ಎಂಬ ಹೆಸರು ಕೊಡಲ್ಪಟ್ಟಿದೆ.

*ಲಿಂಗ ಮಹಾಪುರಾಣದ ಪೂರ್ವಾರ್ಧದ ಜ್ಯೋತಿರ್ಮಂಡಲದಲ್ಲಿ ಸೂರ್ಯನ ಕಿರಣಗಳ ಸ್ವರೂಪದ ವಿವರಣೆ ಎಂಬ ಅರವತ್ತನೆಯ ಅಧ್ಯಾಯವು ಮುಗಿದುದು*

—o—

ಗ್ರಹಸಂಖ್ಯಾ ವರ್ಣನೆ

ಅಧ್ಯಾಯ - ೬೧

**ಸೂತ** :- ರಾತ್ರಿಯ ವೇಳೆಯಲ್ಲಿ ಕಾಣುವ ಎಲ್ಲಾ ತೇಜಸ್ಥಾನಗಳನ್ನು ಸೂರ್ಯನು ತನ್ನ ಕಿರಣಗಳಿಂದ ಪ್ರಕಾಶಿಸುತ್ತಾನೆ. ಆ ನಕ್ಷತ್ರ, ತಾರೆ ಮೊದಲಾದ ಸ್ಥಾನಗಳನ್ನು ತನ್ನ ಕಡೆಗೆ ಆಕರ್ಷಿಸುತ್ತಾನೆ. ಈ ನಕ್ಷತ್ರಸ್ಥಾನಗಳು ಪುಣ್ಯಮಾಡಿದವರ ಪುಣ್ಯದಿಂದ ಹೊಂದಲ್ಪಡುತ್ತವೆ. ಮತ್ತು ಅವರನ್ನು ಉದ್ಧಾರಮಾಡುತ್ತವೆ. ಅವು ಬೆಳ್ಳಗಿವೆ. ಆದ್ದರಿಂದ ಅವುಗಳಿಗೆ ತಾರೆಗಳೆಂದು ಹೆಸರು ಇರುತ್ತದೆ. ಭೂಮಿಯಲ್ಲಿರುವ ದೇವ ಗುಣವುಳ್ಳ ಜನರನ್ನೂ ಮತ್ತು ರಾತ್ರಿಯಲ್ಲಿ ಕಾಣುವ ಭೂ, ಸ್ವರ್ಗಲೋಕಗಳ ನಕ್ಷತ್ರಗಳನ್ನೂ ತನ್ನ ಕಡೆಗೆ ಸೆಳೆಯುವದರಿಂದಲೂ ಮತ್ತು ತಮಸ್ಸನ್ನು ನಾಶಮಾಡಿ ತೇಜಸ್ಸನ್ನು ಹೀರುವುದರಿಂದಲೂ ಸೂರ್ಯನಿಗೆ "**ಆದಿತ್ಯ**" ಎಂದು ಹೆಸರು ಇರುವುದು. ಪವಿತ್ರ ಎಂಬ ಶಬ್ದದ ಮೂಲಭೂತವಾದ ಧಾತುವು ಪ್ರಸವಿಸು ಎಂಬ ಅರ್ಥವನ್ನು ಕೊಡುತ್ತದೆ. ತೇಜಸ್ಸನ್ನು ಮತ್ತು ನೀರನ್ನು ಧಾರಾಕಾರವಾಗಿ ಬಿಡುವುದರಿಂದ ಇವನಿಗೆ ಪವಿತ್ರ ಎಂಬ ಹೆಸರು ಬಂದಿದೆ.

ಚಂದ್ರ ಎಂಬ ಶಬ್ದದ ಮೂಲಭೂತವಾದ ಧಾತುವಿನ ಅರ್ಥವು ಸಂತೋಷಪಡಿಸುವುದು. ಎಂದಿದ್ದರೂ ಅದರಲ್ಲಿ ಬಿಳಿಯವರ್ಣ ಮತ್ತು ಅಮೃತ ಮುಂತಾದ ಅನೇಕ ಅರ್ಥವೂ ಸೇರಿಕೊಂಡಿದೆ. ಆಕಾಶದಲ್ಲಿ ತೇಜೋಮಯವೂ ಜಲಮಯವೂ ಆಗಿ ಗಡಿಗೆಯಂತೆ ದುಂಡಾಗಿ ಬೆಳಗುತ್ತಿರುವ ದಿವ್ಯವಾದ ಸೂರ್ಯಚಂದ್ರ ಮಂಡಲಗಳು ಬೆಳ್ಳಗೂ ನಿರ್ಮಲವಾಗಿ ಮಂಗಳಕರಗಳಾಗಿವೆ. ಇವುಗಳಲ್ಲಿ ಚಂದ್ರ ಮಂಡಲವು ಗಡ್ಡೆಯಾದ ಜಲಪೂರ್ಣವಾಗಿರುವುದೆಂದೂ, ವಿಶೇಷ ತೇಜಸ್ಸಿನಿಂದ ಪೂರ್ಣವಾದದ್ದು ಸೂರ್ಯಮಂಡಲವೆಂದೂ ತಿಳಿಯಬೇಕು. ಎಲ್ಲಾ ದೇವತೆಗಳೂ ಸ್ವಾಯಂಭುವಾದಿ ಮನ್ವಂತರಗಳಲ್ಲಿ ನಕ್ಷತ್ರ, ಸೂರ್ಯನೇ ಮೊದಲಾದ ಈ ಗ್ರಹಗಳಲ್ಲಿ ಬಹಳಕಾಲ ವಾಸಮಾಡುತ್ತಾರೆ. ಆಯಾಯಾ ಗ್ರಹಗಳಿಗೆ ಅವುಗಳೇ ಮನೆಯಾಗಿವೆ. ಆದ್ದರಿಂದಲೇ ಗ್ರಹಗಳೆಂಬ ಹೆಸರು ಅವುಗಳಿಗೆ ಬಂದಿದೆ. ಸೂರ್ಯನು ತನ್ನದೇ ಆದ ಸೌರಸ್ಥಾನವನ್ನೂ, ಚಂದ್ರನು ಅವನ ಸೌಮ್ಯಸ್ಥಾನವನ್ನೂ ಶುಕ್ರನು ಶೌಕ್ರ ಸ್ಥಾನವನ್ನೂ, ಹದಿನಾರು ಕಿರಣಗಳುಳ್ಳ ತೇಜಸ್ವಿಯಾದ ಗುರುವು ಬೃಹತ್‌ಸ್ಥಾನವನ್ನೂ ಮಂಗಳನು ಲೋಹಿತಸ್ಥಾನವನ್ನೂ, ಆಶ್ರಯಿಸಿದ್ದಾರೆ. ಹೀಗೆಯೇ ಶನಿಯು ಶನಿಸ್ಥಾನವನ್ನೂ ಆಶ್ರಯಿಸಿದ್ದಾನೆ. ಪುಣ್ಯಶಾಲಿಗಳಾದವರ ತೇಜಸ್ಸು ನಾಶವಿಲ್ಲದ ಈ ನಕ್ಷತ್ರಗಳನ್ನು ಸೇರಿ ಅವುಗಳಲ್ಲೇ ಇರುತ್ತವೆ.

ಈ ಗ್ರಹಗಳು ಬ್ರಹ್ಮನಿಂದಲೇ ಮನ್ವಂತರದ ಆದಿಯಲ್ಲಿ ನಿರ್ಮಿಸಲ್ಪಟ್ಟವು. ಇವುಗಳು ಕಲ್ಪಾಂತರದವರಿಗೂ ಸ್ಥಿರವಾಗಿರುತ್ತವೆ. ಎಲ್ಲಾ ಮನ್ವಂತರಗಳಲ್ಲಿಯೂ ಇವು ದೇವತೆಗಳಿಗೆ ವಾಸಸ್ಥಾನವಾಗಿವೆ. ಹಿಂದೆ ಇದ್ದ, ಈಗ ಇರುವ ಮುಂದೆ ಬರುವ ದೇವತೆಗಳಿಗೆ ಈ ರೀತಿಯಾಗಿ ತ್ರಿಕಾಲದಲ್ಲಿಯೂ ಅವು ಆಶ್ರಯ ಸ್ಥಾನಗಳಾಗಿವೆ.

ಈ ಮನ್ವಂತರದಲ್ಲಿಯೂ ಗ್ರಹಗಳು ದೇವತಾ ಸ್ಥಾನಗಳಾಗಿಯೇ ಇವೆ. ಆದಿತಿಯ ಮಗನಾದ ವಿವಸ್ವಂತನಾದ ಎಂದರೆ ರಶ್ಮಿಗಳುಳ್ಳ ಸೂರ್ಯನು ಈ ವೈವಸ್ವತ ಮನ್ವಂತರದಲ್ಲಿ ಸೂರ್ಯನಾಗಿರುತ್ತಾನೆ. ಕಾಂತಿಯುಳ್ಳ ಋಷಿಯ ಮಗನಾದ ಚಂದ್ರನು 'ವಸು' ಎಂದು ಕರೆಯಲ್ಪಡುತ್ತಾನೆ. ಅಸುರರಿಗೆ ಯಾಗಮಾಡಿಸುವ ಪುರೋಹಿತನಾದ ಭಾರ್ಗವನು 'ಶುಕ್ರನೆಂದು ಕರೆಯಲ್ಪಡುತ್ತಾನೆ. ವಿಶೇಷಪ್ರಕಾಶವುಳ್ಳ ಅಂಗಿರಸನ ಮಗನಾದ ಗುರುವು ದೇವತೆಗಳಿಗೆ ಗುರುವಾಗಿದ್ದಾನೆ. ಮನೋಹರನಾದ ಬುಧನು ಋಷಿಯ ಮಗನಾಗಿದ್ದಾನೆ. ಒಳ್ಳೆಯ ರೂಪವಿಲ್ಲದ ಶನಿಯು ವಿವಸ್ವಂತನ ಹೆಂಡತಿಯಾದ ಸಂಜ್ಞಾದೇವಿಯ ಮಗನು. ಆದರೆ ಪ್ರಕಾಶಮಾನನಾದ ಅಗ್ನಿಯು ರುದ್ರಪತ್ನಿಯಾದ ವಿಕೇಶಿಯಲ್ಲಿ ಹುಟ್ಟಿದನು. ಇವನೇ ಕುಮಾರನಾದ ಅಂಗಾರಕನು. ನಕ್ಷತ್ರಗಳು ಮತ್ತು ತಾರೆಗಳು **'ದಾಕ್ಷಾಯಣಿ'** ಎಂದೂ ಹೆಸರಾಗಿವೆ ಜಗತ್ತಿಗೆ ಸಂತಾಪವನ್ನುಂಟುಮಾಡುವ ರಾಹುವು ಸಿಂಹಿಕಾದೇವಿಯ ಮಗನಾಗಿದ್ದಾನೆ.

ಚಂದ್ರ, ನಕ್ಷತ್ರಗಳು, ಗ್ರಹಗಳು, ಮತ್ತು ಸೂರ್ಯನೂ ಅಭಿಮಾನಿ ದೇವತೆಗಳಾಗಿದ್ದಾರೆ. ಇವರಿಗೆ ಆಯಾಯ ಸ್ಥಾನಗಳುಂಟು ಸಾವಿರಾರು ಕಿರಣಗಳುಳ್ಳ ಸೂರ್ಯನಿಗೆ ಪ್ರಕಾಶಮಾನವಾದ ಸೌರಸ್ಥಾನವಿದೆ. ಚಂದ್ರನಿಗೆ ಜಲರೂಪವಾದ ಶುಭವಾದ ಸ್ಥಾನವಿದೆ. ಬುಧನ ಪ್ರಕಾಶಮಾನವಾದ ಮನೆಯು ಜಲಪೂರ್ಣವಾಗಿಯೂ, ನೀಲಿ ಬಣ್ಣವುಳ್ಳದ್ದಾಗಿಯೂ, ಮನೋಹರವಾಗಿಯೂ ಇರುತ್ತದೆ. ಶುಕ್ರಸ್ಥಾನವು ಕೂಡ ಜಲಪೂರ್ಣವಾಗಿಯೂ ಶುಭವಾಗಿಯೂ, ಹದಿನಾರು ಕಿರಣಗಳ ಪ್ರಕಾಶದಿಂದ ಕೂಡಿದ್ದಾಗಿಯೂ ಇರುತ್ತದೆ. ಮಂಗಳನಸ್ಥಾನವು ಒಂಬತ್ತು ಕಿರಣಗಳಿಂದ ಪ್ರಕಾಶ ಮಾನವಾಗಿಯೂ, ಕೆಂಪಾಗಿಯೂ, ಶ್ರೇಷ್ಠವಾಗಿಯೂ ಇರುವುದು. ಗುರುವಿನಸ್ಥಾನವು ದೊಡ್ಡದಾಗಿಯೂ ಹದಿನಾರು ಕಿರಣಗಳಿಂದ ಬೆಳಗುತ್ತಲೂ, ಹಳದಿಯ ಬಣ್ಣವಾಗಿಯೂ ಇರುವುದು. ಶನಿಯ ಮನೆಯು ಎಂಟು ಕಿರಣಗಳುಳ್ಳದ್ದಾಗಿಯೂ ಕಪ್ಪಾಗಿಯೂ ಇರುವದು. ರಾಹುವಿನ ಕತ್ತಲಾದ ಸ್ಥಾನವು ಲೋಕಕ್ಕೆ ಸಂಕಟವನ್ನೂ ಪ್ರಾಣಿಗಳಿಗೆ ಸಂತಾಪವನ್ನೂ ಕೊಡುವಂಥವುದಾಗಿದೆ. ತಾರೆಗಳೆಲ್ಲವೂ ಪುಣ್ಯವಂತರಿಗೆ ಆಶ್ರಯಗಳಾಗಿಯೂ, ಬೆಳ್ಳಗೂ, ಇಂದು ಕಿರಣದಿಂದ ಬೆಳಗುತ್ತಲೂ ಪವಿತ್ರವಾದವು ಗಳಾಗಿವೆ. ಇವು ಸೂರ್ಯಕಿರಣಗಳ ಸಂಬಂಧದಿಂದ ಪ್ರಕಾಶಮಾನವಾಗಿಯೂ ಇರುತ್ತವೆ.

ಸೂರ್ಯನ ಮಂಡಲದ ವ್ಯಾಸವು ಒಂಬತ್ತುಸಾವಿರ ಯೋಜನ ವಿಸ್ತಾರವುಳ್ಳದಾಗಿದೆ. ಮಂಡಲದ ಪರಿಧಿಯು ಅಳತೆಯಲ್ಲಿ ವ್ಯಾಸದ ಮೂರರಷ್ಟು ಹೆಚ್ಚಾಗಿರುತ್ತದೆ. ಸೂರ್ಯನ ವಿಸ್ತಾರಕ್ಕಿಂತಲೂ ಚಂದ್ರನ ವಿಸ್ತಾರವು ಇಮ್ಮಡಿಯಾಗಿರುವುದೆಂದು ಹೇಳಲ್ಪಟ್ಟಿವೆ. ಅವರಿಬ್ಬರಿಗೂ ಒಟ್ಟು ವಿಸ್ತಾರದಲ್ಲಿ ಸಮನಾಗಿ ರಾಹುವು ಕೆಳಗಡೆ ಚಲಿಸುತ್ತಾನೆ. ಮಂಡಲಾಕಾರವಾಗಿರುವ ಭೂಮಿಯ ನೆರಳನ್ನು ತೆಗೆದುಕೊಂಡು ರಾಹುವಿನ ಸ್ಥಾನವು ನಿರ್ಮಾಣಮಾಡಲ್ಪಟ್ಟಿದೆ. ಅದು ಬಹು ದೊಡ್ಡದಾಗಿ ಕತ್ತಲೆಯಿಂದ ತುಂಬಿದೆ. ಸೂರ್ಯನಿಂದ ತೇಜಸ್ಸು ಪೌರ್ಣಿಮೆಗಳಲ್ಲಿ ಚಂದ್ರನನ್ನು ಸೇರುತ್ತದೆ. ಪುನಃ ಸೂರ್ಯನನ್ನೇ ಚಂದ್ರನಿಂದ ಹಿಂತಿರುಗಿ ಬಂದು ಪರ್ವ ದಿನಗಳಲ್ಲಿ ಸೇರುತ್ತದೆ. ಆಕಾಶದಲ್ಲಿರುವ ಸೂರ್ಯನನ್ನು ಪೇರಿಸೋಣದರಿಂದ ರಾಹುವಿಗೆ **''ಸ್ವರ್ಭಾನು''** ಎಂಬ

ಹೆಸರು ಬಂದಿದೆ. ಚಂದ್ರನ ಹದಿನಾರನೆಯ ಒಂದು ಭಾಗದಷ್ಟು ವಿಸ್ತಾರವು ಶುಕ್ರನಿಗಿದೆ. ಗುರುವಿನ ಮಧ್ಯಭಾಗ ವ್ಯಾಸ ಮತ್ತು ಮಂಡಲ ಪರಿಧಿಗಳ ಯೋಜನವನ್ನು ಲೆಕ್ಕ ಹಾಕಿದರೆ ಅವನು ಶುಕ್ರನಿಗಿಂತಲೂ ಕಾಲುಭಾಗ ಕಡಿಮೆಯಾಗಿರುವನೆಂದು ಗೊತ್ತಾಗುವದು. ಮಂಡಲದ ವಿಸ್ತಾರವನ್ನು ಲೆಕ್ಕಹಾಕಿದರೆ ಮಂಗಳ ಮತ್ತು ಗುರುಗಳು ಗುರುವಿಗಿಂತ ಕಾಲುಭಾಗ ಕಡಿಮೆಯಾಗಿ ಇರುವವರೂ, ಇವರುಗಳಿಗಿಂತ ಬುಧನು ಕಾಲುಭಾಗ ಕಡಿಮೆ ಇರುವವನೂ ಎಂಬುದು ತಿಳಿಯುತ್ತದೆ. ಆಕಾರವುಳ್ಳ ತಾರೆಗಳು, ನಕ್ಷತ್ರಗಳು ಮುಂತಾದವುಗಳು ಒಟ್ಟು ಕೂಡಿ ಬುಧನ ಮಂಡಲದ ವಿಸ್ತಾರಕ್ಕೆ ಸಮವಾಗುವುವು.

ತಾರೆಗಳು ಮತ್ತು ನಕ್ಷತ್ರಗಳು ಇವೆಲ್ಲವೂ ಚಂದ್ರನ ಸಂಬಂಧವುಳ್ಳವುಗಳು ಆಗಿರುತ್ತವೆ. ಈ ತಾರೆಗಳು ಮತ್ತು ನಕ್ಷತ್ರಗಳು ತಂತಮ್ಮಲ್ಲಿಯೇ ನೂರು, ಐದು, ನಾಲ್ಕು ಮತ್ತು ಮೂರು ಯೋಜನಗಳಷ್ಟು ವಿಸ್ತಾರದಲ್ಲಿ ಕಡಿಮೆಯಾಗಿವೆ. ಎಲ್ಲದಕ್ಕಿಂತಲೂ ಕಡಿಮೆ ವಿಸ್ತಾರವುಳ್ಳದ್ದು ಅವುಗಳಲ್ಲಿ ಅರ್ಧಯೋಜನ ವಿಸ್ತಾರವುಳ್ಳವುಗಳಾಗಿವೆ. ಅವಕ್ಕಿಂತ ಕಡಿಮೆ ವಿಸ್ತಾರಗಳುಳ್ಳವು ಎಲ್ಲವು ಇವುಗಳ ಮೇಲೆ ಬಹು ದೂರ ಚಲಿಸುವ ಮೂರು ಗ್ರಹಗಳಿವೆ. ಈ ಗ್ರಹಗಳು ಸೂರ್ಯ, ಗುರು ಮತ್ತು ಮಂಗಳಗಳಾಗಿವೆ.

ಈ ನಕ್ಷತ್ರಗಳಿಂದಲೇ ಎಲ್ಲಾ ಗ್ರಹಗಳೂ ಹುಟ್ಟಿವೆ. 'ವಿವಸ್ವಾನ್' ಎಂದು ಕರೆಯಲ್ಪಡುವ ಸೂರ್ಯನು ಅದಿತಿಯ ಮಗನು. ಗ್ರಹಗಳಲ್ಲೆಲ್ಲಾ ಮೊದಲನೆಯ ಗ್ರಹವಾದ ಸೂರ್ಯಗ್ರಹವು ವಿಶಾಖಾ ನಕ್ಷತ್ರಗಳಲ್ಲಿ ಹುಟ್ಟಿದ್ದು. ಎಂದೂ ಕಾಂತಿಯುಕ್ತನಾದ ಚಂದ್ರನು ಧರ್ಮನ ಮಗನು ಆಗಿರುವನು. ತಾರೆಗಳಲ್ಲಿಯೂ, ಗ್ರಹಗಳಲ್ಲಿಯೂ ಶ್ರೇಷ್ಠನಾದ, ಜಗತ್ತಿಗೆ ಗುರುವಾದ ಹತ್ತು ಹನ್ನೆರಡು ಕಿರಣಗಳಿಂದ ಪ್ರಕಾಶಿಸುವ ಗುರುವು ತಿಷ್ಯವೆಂಬ ನಕ್ಷತ್ರ ಸ್ಥಾನದಲ್ಲಿ ಹುಟ್ಟಿದವನೂ ಅಂಗಿರಸನ ಮಗನೂ ಆಗಿರುವನು. ಇವನು ಪೂರ್ವಾ ಫಾಲ್ಗುನೀ ನಕ್ಷತ್ರದಲ್ಲಿ ಹುಟ್ಟಿದವನು, ಬ್ರಹ್ಮನ ಮಗನಾದ ಮಂಗಳನೂ, ಒಂಬತ್ತು ಕಿರಣಗಳುಳ್ಳವನೂ, ಕೆಂಪುವರ್ಣವುಳ್ಳವನೂ ಆಗಿರುವನು. ಇವನು ಪೂರ್ವಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನಾಗಿರುವನು. ಏಳು ಕಿರಣಗಳುಳ್ಳ ಸೂರ್ಯನ ಮಗನಾದ ಶನಿಯು ರೇವತಿ ನಕ್ಷತ್ರದಲ್ಲಿ ಹುಟ್ಟಿದನು.

ಐದು ಕಿರಣಗಳುಳ್ಳ ಸೋಮನ ಮಗನಾದ ಬುಧನು ಧನಿಷ್ಠಾ ನಕ್ಷತ್ರದಲ್ಲಿ ಹುಟ್ಟಿದವನು. ಕತ್ತಲೆತುಂಬಿರುವ ಯಮನಮಗನಾದ ಮತ್ತು ಪ್ರಪಂಚಕ್ಕೆ ನಾಶವನ್ನುಂಟು ಮಾಡುವ, ಕಿಡಿಗಳನ್ನು ಕಾರುವ ಕೇತುವು ಎಲ್ಲವನ್ನೂ ನುಂಗುವ ಶಕ್ತಿಯುಳ್ಳವನೂ, ದೊಡ್ಡಗ್ರಹವೂ ಆಗಿದ್ದಾನೆ. ಇವನು ಆಶ್ಲೇಷಾ ನಕ್ಷತ್ರದಲ್ಲಿ ಹುಟ್ಟಿದವನು. ಹೀಗೆಯೇ ಇವರ ಹೆಸರಿನಲ್ಲೇ ದಾಕ್ಷಾಯಣೀ ಗ್ರಹಗಳು ಉತ್ಪನ್ನವಾಗಿವೆ. ಕತ್ತಲಿನಿಂದ ತುಂಬಿರುವ ವೀರ್ಯವಂತನಾದ ರಾಹುವು ಸ್ವಭಾವವಾಗಿ ಕಪ್ಪಾದ ಮಂಡಲವುಳ್ಳವನಾಗಿದ್ದಾನೆ. ಇವನು ಚಂದ್ರಸೂರ್ಯರಿಗೆ ತೊಂದರೆ ಕೊಡುವವನೂ ಭರಣಿ ನಕ್ಷತ್ರದಲ್ಲಿ ಹುಟ್ಟಿದವನೂ ಆಗಿದ್ದಾನೆ. ತಾರೆಗಳನ್ನು ಮತ್ತು ಶುಕ್ರನೇ ಮೊದಲಾದ ಗ್ರಹಗಳ ವಿಷಯಗಳನ್ನೂ ಚೆನ್ನಾಗಿ ತಿಳಿದಿರಬೇಕು. ಏಕೆಂದರೆ ಹುಟ್ಟುವಕಾಲದ ನಕ್ಷತ್ರವೇ ಮೊದಲಾದ ಗ್ರಹಗಳಿಂದ ಪೀಡೆಯುಂಟಾದಾಗ ಇವುಗಳು ಪ್ರತಿಕೂಲಗಳಾಗಿರುತ್ತವೆ. ಈ ಗ್ರಹಗಳ ವಿಷಯವನ್ನು

ತಿಳಿದಿದ್ದರೆ. ಗ್ರಹಗಳಿಂದುಂಟಾದ ತೊಂದರೆಯನ್ನು ಪರಿಹಾರ ಮಾಡಿಕೊಳ್ಳಬಹುದು. ಎಲ್ಲಾ ಗ್ರಹಗಳಿಗೂ ಸೂರ್ಯನೇ ಮೊದಲನೆಯವನೆಂದು ಹೇಳಲ್ಪಟ್ಟಿದೆ.

ತಾರೆಗಳಿಗೂ ಮತ್ತು ಗ್ರಹಗಳಿಗೂ ಶುಕ್ರನು, ಕತ್ತಲೆಯಿಂದ ತುಂಬಿದ ಗ್ರಹಗಳಿಗೆ ರಾಹುಕೇತುಗಳು, ನಾಲ್ಕುದಿಕ್ಕಿನಲ್ಲಿಯೂ ಹರಡಿರುವ ನಕ್ಷತ್ರಗಳಿಗೆ ಧ್ರುವ ನಕ್ಷತ್ರವೂ, ಮೊದಲನೆಯದಾಗಿದೆ. ನಕ್ಷತ್ರಗಳಿಗೆ ಧನಿಷ್ಠಾ ನಕ್ಷತ್ರವೂ, ಅಯನಗಳಿಗೆ ಉತ್ತರಾಯಣವೂ, ಐದು ವರ್ಷಗಳಿಗೆ ಸಂವತ್ಸರವೇ ಮೊದಲನೆಯದಾಗಿರುತ್ತದೆ. ಋತುಗಳಲ್ಲಿ ಶಿಶಿರ ಋತುವೂ, ಮಾಸಗಳಲ್ಲಿ ಮಾಘಮಾಸವೂ, ಪಕ್ಷಗಳಲ್ಲಿ ಪಾಡ್ಯವೂ, ರಾತ್ರಿ ಹಗಲು ಎರಡರಲ್ಲಿ ಹಗಲೂ, ಮುಹೂರ್ತಗಳಲ್ಲಿ ರುದ್ರದೇವತೆಯುಳ್ಳ ರುದ್ರ ಮುಹೂರ್ತವೂ ಮೊದಲನೆಯದಾಗಿದೆ.

ಕಾಲವಿಷಯವನ್ನು ಚೆನ್ನಾಗಿ ಅರಿತಿರುವ ಜ್ಞಾನಿಗಳು ಕಾಲವನ್ನು ಕ್ಷಣ ನಿಮಿಷ ಮುಂತಾಗಿ ವಿಭಾಗ ಮಾಡಿದ್ದಾರೆ. ಧನಿಷ್ಠಾ ನಕ್ಷತ್ರವೇ ಮೊದಲುಗೊಂಡು ಶ್ರವಣ ನಕ್ಷತ್ರವೇ ಕೊನೆಯಾಗಿರುವ ಐದುನಕ್ಷತ್ರ ಕಾಲವನ್ನು ವೃಷ್ಟಿಗರ್ಭಸೃಷ್ಟಿ ಕಾಲವೆಂದು ನಿರ್ಧರಿಸುತ್ತಾರೆ. ಸೂರ್ಯನ ಚಲನ ವಿಶೇಷದಿಂದ ರಾತ್ರಿಯೂ ಹಗಲೂ ಚಕ್ರಾಕಾರವಾಗಿ ಸುತ್ತುತ್ತವೆ. ಆದ್ದರಿಂದಲೇ ಸೂರ್ಯನು ಕಾಲವ್ಯವಸ್ಥೆಯನ್ನುಂಟುಮಾಡುವವನೂ ಹಗಲನ್ನುಂಟುಮಾಡುವ ವ್ಯಾಪಕನಾದ ನಿಯಾಮಕನೂ ಆಗಿದ್ದಾನೆ. ನಾಲ್ಕು ವಿಧವಾದ ಮೂಲಭೂತಗಳಿಗೂ ಪ್ರೇರಕನಾಗಿಯೂ, ಅವುಗಳನ್ನು ಹಿಂತಿರುಗಿಸುವವನೂ, ಅವುಗಳಿಗೆ ಸ್ವಾಮಿಯೂ ಆದ ರುದ್ರ ಭಗವಂತನೇ ಸೂರ್ಯನ ಚಲನೆಗೂ ಪ್ರೇರಕನಾಗಿದ್ದಾನೆ. ಹೀಗೆ ನಕ್ಷತ್ರಗಳ ಚಲನವಲನಗಳಾಗುತ್ತವೆ. ಎಂದು ನಿಶ್ಚಯಿಸಿದೆ. ನಕ್ಷತ್ರಗಳ ಈ ರಚನೆಯು ಈಶ್ವರನಿಂದಲೇ ಪ್ರಪಂಚದ ಉಪಯೋಗಕ್ಕಾಗಿ ಮಾಡಲ್ಪಟ್ಟಿದೆ. ಮೊಟ್ಟಮೊದಲು ಭಗವಂತನಿಂದಲೇ ಇದು ವಿಚಾರಪೂರ್ವಕವಾಗಿ ರಚಿಸಲ್ಪಟ್ಟಿತು. ಎಲ್ಲಾ ನಕ್ಷತ್ರಗಳಿಗೂ ಭಗವಂತನೇ ಆಶ್ರಯನಾಗಿಯೂ ಅಭಿಮಾನಿ ದೇವತೆಯೂ ಆಗಿರುತ್ತಾನೆ.

ಒಂದೇ ಆದ ಪ್ರಕೃತಿಯು ಈ ನಕ್ಷತ್ರ ರೂಪದಿಂದ ವಿಕಾರವನ್ನು ಹೊಂದಿದೆ. ಮನುಷ್ಯನ ಚರ್ಮಚಕ್ಷುಸ್ಸಿನಿಂದ ನಕ್ಷತ್ರಗಳ ಚಲನವಲನಗಳನ್ನು ಹೀಗೆಯೇ ಸರಿ ಎಂದು ನಿರ್ಣಯಿಸಲು ಆಗುವುದಿಲ್ಲ. ಆದಕ್ಕಾಗಿ ವಿದ್ವಾಂಸನಾದವನು ಶಾಸ್ತ್ರದ ಸಹಾಯ, ಪ್ರತ್ಯಕ್ಷ ಊಹೆಗಳಿಂದಲೂ, ಸರಿಯಾದ ಕಾರಣಗಳಿಂದಲೂ ಚೆನ್ನಾಗಿ ವಿಮರ್ಶೆಮಾಡಿ ಅನಂತರ ಈ ವಿಷಯವನ್ನು ನಂಬಬೇಕು. ಕಣ್ಣು, ಶಾಸ್ತ್ರ, ನೀರು, ಬರೆವಣಿಗೆ, ಗಣಿತ ಇವು ಐದೂ ನಕ್ಷತ್ರ ಪ್ರಮಾಣಗಳನ್ನು ಗೊತ್ತು ಮಾಡುವ ವಿಚಾರದಲ್ಲಿ ಸಹಾಯಕಗಳಾಗಿವೆ.

*ಲಿಂಗ ಮಹಾಪುರಾಣದ ಪೂರ್ವಾರ್ಧದ ಗ್ರಹ ಸಂಖ್ಯಾವರ್ಣನೆ ಎಂಬ*
*ಅರವತ್ತೊಂದನೆಯ ಅಧ್ಯಾಯ ಮುಗಿದುದು*

—o—

## ಧ್ರುವ ಸಂಸ್ಥಾನ ವರ್ಣನೆ

ಅಧ್ಯಾಯ - ೬೨

**ಋಷಿಗಳು :-** ಉತ್ತಾನಪಾದನ ಮಗನಾದ ಧ್ರುವರಾಜನು ಮುಗಿಲು ಮಂಟಪದಲ್ಲಿಯ ಗ್ರಹಮಂಡಲಕ್ಕೆಲ್ಲ ಅಧಿಪತಿಯೂ ಆದ. ಆಧಾರನೂ ಆದ. ಭಗವಭಕ್ತರಲ್ಲಿ ಶ್ರೇಷ್ಠನಾದ ಆ ಧ್ರುವನು ಇಂತಹ ಅತ್ಯುತ್ತಮ ಸ್ಥಾನವನ್ನು ಹೇಗೆ ಪಡೆದ? ಇದನ್ನು ನಮಗೆ ತಿಳಿಸಿರಿ.

**ಸೂತ :-** ವೈಷ್ಣವೋತ್ತಮರೆ, ಮುನಿ ಮಹರ್ಷಿಗಳಲ್ಲೆಲ್ಲ ಮಹನೀಯನೂ, ಮಾನನೀಯನೂ ಆದ ಮಾರ್ಕಂಡೇಯನು ಶಾಸ್ತ್ರಗಳಲ್ಲಿ ಪಂಡಿತ. ಹಿಂದೊಮ್ಮೆ ನಾನು ಇದೇ ವಿಷಯವಾಗಿ ಮಾರ್ಕಂಡೇಯನನ್ನು ಕೇಳಿದ್ದೆ. ಧ್ರುವಚರಿತ್ರೆಯನ್ನು ತಿಳಿದುಕೊಳ್ಳುವ ಕುತೂಹಲವುಳ್ಳ ನನಗೆ ಮಾರ್ಕಂಡೇಯರು ನನಗೆ ವಿವರಿಸಿದ್ದನ್ನು ನಿಮಗೆ ವಿವರಿಸಿ ಹೇಳುತ್ತೇನೆ ಕೇಳಿರಿ.

**ಮಾರ್ಕಂಡೇಯ :-** ಪೂರ್ವಕಾಲದಲ್ಲಿ ಉತ್ತಾನಪಾದ ಎಂಬ ಹೆಸರಿನ ಮಹಾರಾಜನು ಭೂಮಂಡಲವನ್ನು ಆಳುತ್ತಿದ್ದನು. ಅವನು ಮಹಾತೇಜಸ್ವಿ, ಶಾಸ್ತ್ರಗಳಲ್ಲಿಯೂ ಅವನು ಪರಿಣತಪ್ರಜ್ಞನಾಗಿದ್ದನು. ಅವನಿಗೆ ಇಬ್ಬರು ಮಡದಿಯರು. ಸುನೀತಿ ಹಿರಿಯ ಹೆಂಡತಿ. ಸುರುಚಿ ದ್ವಿತೀಯ ಪತ್ನಿ, ಬುದ್ಧಿವಂತಳೂ, ಧರ್ಮಜ್ಞಳೂ ಆದ ಸುನೀತೆಗೆ ಧ್ರುವ ಎಂಬ ಹೆಸರಿನ ಒಬ್ಬ ಮಗನಿದ್ದನು. ಅವನು ಏಳು ವರ್ಷದವನಿದ್ದಾಗ ಪ್ರೀತಿಯಿಂದ ತಂದೆಯಾದ ಉತ್ತಾನಪಾದನ ತೊಡೆಯ ಮೇಲೆ ಕುಳಿತುಕೊಂಡನು. ಅದನ್ನು ಕಂಡ ಸುರುಚಿಯು ಕೋಪದಿಂದ ಕೆಂಡ ಮಂಡಲವಾದಳು. ಪತಿಯ ಉತ್ಸಂಗಾಂಗಣದಲ್ಲಿ ಕುಳಿತುಕೊಂಡ ಧ್ರುವನನ್ನು ಕೆಳಗೆ ನೂಕಿದಳು. ಆ ಸ್ಥಾನದಲ್ಲಿ ತನ್ನ ಮಗನಾದ ಉತ್ತಮನನ್ನು ಕೂಡಿಸಿದಳು. ಇದರಿಂದ ಕುಮಾರನಿಗೆ ಬಹಳ ಕೆಡುಕೆನಿಸಿತು. ಅವನು ಅಳುತ್ತ ನೇರವಾಗಿ ತನ್ನ ತಾಯಿಯ ಬಳಿಗೆ ಬಂದನು. ಮಗನ ಬಾಯಿಂದ ಸವತಿ ಸುರಿಚಿಯ ದುರ್ವತನೆಯನ್ನು ಕೇಳಿದ ಆ ಸುನೀತಿಯು ಖೇದ ವಿಷಾದದಿಂದೊಡಗೂಡಿ ಹೇಳಿದಳು.

**ಸುನೀತೆ :-** ಪುತ್ರನೇ, ನನ್ನ ಸವತಿಯಾದ ಸುರುಚಿಯು ಮಹಾರಾಜರಿಗೆ ಅಚ್ಚು ಮೆಚ್ಚಿನ ಪ್ರೀತಿಯ ಮಡದಿ. ಆದುದರಿಂದ ಅವಳ ಮಗನಾದ ಉತ್ತಮನು ಮಹಾರಾಜನಿಗೆ ಅತ್ಯಂತ ಪ್ರೀತ್ಯಾಸ್ಪದ, ನೀನು ದುರ್ದೈವದಿಂದ ದುರದುಷ್ಟಶಾಲಿಯಾದ ದುರ್ದೈವಿ ನಿನ್ನತಾಯಿಯಾದ ನನ್ನಿಂದ ಉತ್ಪನ್ನನಾಗಿರುವೆ. ಆದುದರಿಂದ ನೀನು ಕೂಡ ನನ್ನಂತೆ ದುರದೃಷ್ಟಶಾಲಿಯೇ. ನೀನು ನನ್ನ ಪತಿಯ ಔರಸಪುತ್ರನಾದರೂ ನಿನ್ನ ತಂದೆಯ ಉತ್ಸಂಗಾಸನವು ದೊರೆಯಲಾರದು. ವ್ಯರ್ಥವಾಗಿ ಏಕೆ ಶೋಕಮಾಡುವೆ? ನೀನು ಸಂಕಟಪಟ್ಟರೆ ನನಗೆ ಭಯಂಕರ ಸಂಕಟವಾಗುವದು. ನೀನು ಆ ದುಃಖವನ್ನು ಬಿಟ್ಟು ಬಿಡು. ನಿನ್ನ ಆತ್ಮಶಕ್ತಿಯಿಂದ ಪರಮಾತ್ಮನನ್ನು ಕಂಡು ಅವನ ದಯೆಯಿಂದ ಅಚಲವಾದ ಸ್ಥಾನವನ್ನು ಹೊಂದು.'' ತಾಯಿಯ ಮಾತು ಆ ಕಂದಮ್ಮನ ಮನಸ್ಸಿನ ಮೇಲೆ ಗಾಢವಾದ ಪರಿಣಾಮವನ್ನುಂಟುಮಾಡಿತು. ಕೂಡಲೇ ಅವನು ಅರಣ್ಯಕ್ಕೆ ತೆರಳಿದನು. ದಾರಿಯಲ್ಲಿ ಸುದೈವದಿಂದ ಅವನಿಗೆ ಮಹಾ ಮಹರ್ಷಿ ವಿಶ್ವಾಮಿತ್ರರು ಭೇಟಿಯಾದರು. ಅವರಿಗೆ ಶಾಸ್ತ್ರೋಕ್ತವಾಗಿ ನಮಸ್ಕಾರಮಾಡಿ ಬಾಲಭಕ್ತನಾದ ಧ್ರುವ ಅವರಿಗೆ ಕೈ ಮುಗಿದು ಕೇಳಿದ.

**ಧ್ರುವ :-** ಪೂಜ್ಯರಾದ ಮಹರ್ಷಿಗಳೆ, ನಾನು ನನ್ನ ತಂದೆಯ ತೊಡೆಯ ಮೇಲೆ ಕುಳಿತಿದ್ದೆ. ಅದನ್ನು ಸಹಿಸದ ನನ್ನ ಚಿಕ್ಕ ತಾಯಿಯು ನನ್ನನ್ನು ಕೆಳಗೆ ನೂಕಿದಳು. ಆದರೂ ನಾನು ಅವಳಿಗೆ ಪ್ರತಿ ಮಾತನಾಡಲಿಲ್ಲ. ಅವಳನ್ನು ದೂಷಿಸಲೂ ಇಲ್ಲ. ನೇರವಾಗಿ ನನ್ನ ಹಡೆದ ತಾಯಿಯ ಬಳಿಗೆ ಬಂದೆ. ಅವಳೆದುರು ನನಗಾದ ಅವಮಾನವನ್ನು ಹೇಳಿದೆ. ನನ್ನ ದುಃಖವನ್ನು ತೋಡಿಕೊಂಡೆ. ಆಗ ನನ್ನ ತಾಯಿಯಾದ ಸುನೀತೆಯು ನನ್ನನ್ನು ಸಂತೈಸಿ, ''ಕಂದನೆ, ನೀನು ದುಃಖಪಡಬೇಡ. ನೀನು ನಿನ್ನ ಪ್ರಯತ್ನ ಹಾಗೂ ದೇವತಾ ಅನುಗ್ರಹದಿಂದ ಅತ್ಯುತ್ತಮವಾದ ಸ್ಥಾನವನ್ನು ಹೊಂದಲು ಅರ್ಹನಾಗಿರುವೆ.'' ಎಂದು ಹೇಳಿ ನನ್ನನ್ನು ಆಶೀರ್ವದಿಸಿದಳು. ನನ್ನ ಸುದೈವದಿಂದ ದಾರಿಯಲ್ಲಿಯೇ ನನಗೆ ಸರಿಯಾದ ದಾರಿತೋರುವ ತಮ್ಮಂತಹ ಪುಣ್ಯಪುರುಷರ ದರ್ಶನವಾಯಿತು. ಆದುದರಿಂದ ತಾವು ನಮಗೆ ಅತ್ಯುತ್ತಮವಾದ ಸ್ಥಾನಮಾನಗಳನ್ನು ಹೊಂದುವ ಉಪಾಯವನ್ನು ಹೇಳಿರಿ.'' ಎಂದು ಬೇಡಿಕೊಂಡನು. ಆ ಬಾಲಕನಾದ ರಾಜಕುಮಾರನ ಬಿನ್ನಹವನ್ನು ಮನ್ನಿಸಿ ವಿಶ್ವಾಮಿತ್ರರು ಹೇಳಿದರು.

**ವಿಶ್ವಾಮಿತ್ರ :-** ರಾಜಕುಮಾರ, ಪರಶಿವನ ದಕ್ಷಿಣಭಾಗದಿಂದ ಜನಿಸಿದ ನಾರಾಯಣನು ಸಕಲ ಕಷ್ಟಗಳನ್ನು ಪರಿಹಾರಮಾಡುವ ಏಕೈಕ ದೇವತೆಯಾಗಿದ್ದಾನೆ. ನೀನು ಅವನನ್ನು ಭಜಿಸು. ಅವನನ್ನು ಕುರಿತೇ ತಪಸ್ಸು ಮಾಡು. ಅವನ ದಯೆಯಿಂದಲೇ ನೀನು ಸರ್ವಸನ್ನುತವಾದ ಅತಿ ಉನ್ನತಸ್ಥಾನವನ್ನೂ ಮಾನವನ್ನೂ ಪಡೆಯುವೆ. ನೀನು ಮಂತ್ರವನ್ನು ಜಪಿಸಿ ಇಂದ್ರಿಯಗಳನ್ನು ನಿಗ್ರಹಿಸಿ ಭಗವಂತನನ್ನೇ ನಂಬಿ. **''ಓಂ ನಮೋಸ್ತು ವಾಸುದೇವಾಯ''** ಎಂಬ ದಿವ್ಯವಾದ ಮಂತ್ರವನ್ನು ಜಪಿಸಿ ಹೋಮಗಳನ್ನುಮಾಡು. ಶ್ರೀಮನ್ನಾರಾಯಣನ ಸುಪ್ರಸಾದಕ್ಕೆ ಈ ವಾಸುದೇವ ಮಂತ್ರವು ಕಾರಣವಾಗಿ ಸಕಲೇಷ್ಟಗಳನ್ನು ಕೊಡುವ ಶ್ರೇಷ್ಠ ಮಂತ್ರವಾಗಿದೆ. ಮಹಾಮಹರ್ಷಿಗಳಾದ ವಿಶ್ವಾಮಿತ್ರರು ಹೇಳಿದಂತೆ ಧ್ರುವಕುಮಾರನು ವಾಸುದೇವಮಂತ್ರದ ಜಪತಪೋನುಷ್ಠಾನವನ್ನು ಪ್ರಾರಂಭಿಸಿದನು. ಹಸಿವು, ನೀರಡಿಕೆ, ನಿದ್ರೆ, ವಿಶ್ರಾಂತಿ, ವಿರಾಮ ಎನ್ನುವದನ್ನೆಲ್ಲ ತೊರೆದನು. ಇಂದ್ರಿಯಗಳನ್ನೆಲ್ಲ ವಶದಲ್ಲಿಟ್ಟುಕೊಂಡು ಮನಸ್ಸನ್ನು ಶ್ರೀಮನ್ನಾರಾಯಣನಲ್ಲಿಯೇ ಇರಿಸಿದ್ದನು. ಒಂದು ವರ್ಷದವರೆಗೆ ನಿರಾಹಾರನಾಗಿ ಮಂತ್ರಗಳನ್ನು ಜಪಿಸುತ್ತಿದ್ದ ಧ್ರುವರಾಜನಿಗೆ ಬಂದ ವಿಘ್ನವಿಡ್ಡೂರಗಳಿಗೆ ಲೆಕ್ಕವಿಲ್ಲ. ಹೆಜ್ಜೆಹೆಜ್ಜೆಗೆ ಬೇತಾಳಗಳು, ಪದೇಪದೇಕ್ರೂರ ರಾಕ್ಷಸರು. ಕಂಡಲ್ಲೆಲ್ಲ ಹುಲಿ ಸಿಂಹ ಮೊದಲಾದ ಶ್ವಾಪದಗಳು, ಅವೆಲ್ಲವೂ ಧ್ರುವನನ್ನು ಹೆದರಿಸಿ ಬೆದರಿಸಲು ಪ್ರಯತ್ನಿಸಿದವು. ಅದು ಯಾವುದಕ್ಕೂ ಹೆದರದೇ ಏನು ಮಾಡಿದರೂ ಬೆದರದೆ ಧ್ಯಾನೈಕತಾನಲೀನಮಾನಸನಾಗಿ ಕುಳಿತುಕೊಂಡು ವಾಸುದೇವ ಮಂತ್ರವನ್ನು ಜಪಿಸಿದ. ಶ್ರೀಮನ್ನಾರಾಯಣನನ್ನು ಕುರಿತು ಏಕಾಗ್ರ ಚಿತ್ತದಿಂದ ತಪಿಸಿದ.

ಹೀಗೆ ಯಾವುದಕ್ಕೂ ಜಗ್ಗದೇ ಎಂದಿಗೂ ಕುಗ್ಗದೇ ವಾಸುದೇವನನ್ನು ಧ್ಯಾನಿಸುತ್ತಲಿರುವ ಧ್ರುವನ ಎದುರಿಗೆ ಒಂದು ಪಿಶಾಚಿಯು ಬಂದಿತು. ದುರ್ಬುದ್ಧಿಯ ಕುಹಕಿಯಾದ ಆ ಪಿಶಾಚಿಯು ಧ್ರುವನ ತಾಯಿಯಾದ ಸುನೀತೆಯ ರೂಪದಲ್ಲಿಯೇ ಸಾಕ್ಷಾತ್ತಾಗಿ ಎದುರಿಗೆ ಬಂದಿತು ಮತ್ತು ಹೇಳಿತು.

**ಪಿಶಾಚಿ :-** ಧ್ರುವ, ನಾನು ನಿನ್ನ ತಾಯಿ ಸುನೀತಿ. ಈಗ ನನಗೆ ಇರುವವನು ನೀನು ಒಬ್ಬನೇ ಗಂಡು ಮಗು. ಮನೆಯಲ್ಲಿ ನನ್ನನ್ನು ಒಬ್ಬಳನ್ನೇ ಬಿಟ್ಟು ಈ ಕಗ್ಗಾಡಿನಲ್ಲಿ ಬಂದು ಕೂಡುವದು, ಘೋರವಾದ ತಪಸ್ಸನ್ನು ಮಾಡುವದು, ಏನಿದು ? ನೀನು ಇಷ್ಟು ಕಷ್ಟಪಡುವದೇ? ವಿಚಾರಿಸು. ನನ್ನನ್ನು ಮನೆಯಲ್ಲಿ ಅನಾಥಳನ್ನಾಗಿ ಮಾಡಿ ನೀನು ಇಲ್ಲಿ ಬಂದು ತಪಸ್ಸು ಮಾಡಿದರೆ ದೇವರು ಮೆಚ್ಚುವನೇ? ಈಗ ನೀನು ನಮ್ಮ ಮನೆಗೆ ನಡೆ.

ಹೀಗೆ ಮಾಯಾ ಪಿಶಾಚಿಯು ಸುನೀತಿ ವೇಷದಿಂದ ಪರಿಪರಿಯ ಯುಕ್ತಿಉಕ್ತಿಗಳಿಂದ ಧ್ರುವನನ್ನು ತಪೋನುಷ್ಠಾನದಿಂದ ಪರಾವರ್ತಗೊಳಿಸಲು ಪ್ರಯತ್ನಿಸಿತು. ಆದರೆ ಆ ರಾಜಕುಮಾರನು ಆದಾವುದರ ಕಡೆಗೂ ಲಕ್ಷ್ಯವೀಯಲಿಲ್ಲ. ತನ್ನ ತಪಸ್ಸಮಾಧಿಯಲ್ಲಿ ನಿಶ್ಚಲವಾದ ಮನಸ್ಸಿನಿಂದ ಕುಳಿತುಕೊಂಡು ಅವನು ಅಖಂಡವಾಗಿ ಹರಿಯಧ್ಯಾನವನ್ನು ಮನಸಾವಚಸಾ ಮಾಡುತ್ತಲೇ ಇದ್ದನು.

ಆಗ ಅವನ ತಪಶ್ಚರ್ಯೆಗೆ ವಿಘ್ನಗಳನ್ನು ಒಡ್ಡುವ ಎಲ್ಲ ವಸ್ತುಗಳೂ ಕಣ್ಮರೆಯಾದವು. ಅವನ ಈ ಏಕಾಗ್ರಚಿತ್ತದ ತೀಕ್ಷ್ಣಾತೀತೀಕ್ಷ್ಣವಾದ ತೀವ್ರ ತಪೋನುಷ್ಠಾನಕ್ಕೆ ಪ್ರೀತನಾದ ಭಗವಾನ್ ನಾರಾಯಣನು ಸಕಲದೇವತೆಗಳೊಂದಿಗೆ ಕೂಡಿಕೊಂಡು ಗರುಡಾರೂಢನಾಗಿ ಅವನ ತಪೋಭೂಮಿಗೆ ದಯಮಾಡಿಸಿದನು.

ಶ್ರೀ ಹರಿಯ ತೇಜಃಪ್ರಕರ್ಷದಿಂದ ಧರ್ಷಿತಾಕರ್ಷಿತನೂ ಪರಮ ಹರ್ಷಿತನೂ ಆದ ಧ್ರುವನು ಆ ವಿಷ್ಣುವನ್ನು ಕಣ್ಣುಗಳಿಂದ ಕುಡಿದು ಬಿಡುವನೊ ಎಂಬಂತೆ ನೋಡುತ್ತ ಬಾಯಿಯಿಂದ ವಾಸುದೇವಮಂತ್ರವನ್ನು ಜಪಿಸುತ್ತ ನಿಂತುಕೊಂಡನು. ಸಂತೋಷಾತಿಶಯದಿಂದ ರುದ್ಧಕಂಠನಾದ ಅವನ ಬಾಯಿಯಿಂದ ಶಬ್ದಗಳೇ ಹೊರಡಲಿಲ್ಲ. ಆಗ ಆ ವಾಸುದೇವನು ತನ್ನ ಕೈಯ್ಯಲ್ಲಿರುವ ಶಂಖದ ತುದಿಯಿಂದ ಧ್ರುವನ ಮುಖವನ್ನು ಸ್ಪರ್ಶ ಮಾಡಿಸಿದನು. ನಾರಾಯಣನ ಕರಕಮಲದಲ್ಲಿರುವ ಶಂಖ ಸ್ಪರ್ಶಮಾತ್ರದಿಂದ ತಕ್ಷಣದಲ್ಲಿ ಜ್ಞಾನೋದಯವಾಯಿತು. ಕೈ ಮುಗಿದು ಅವನು

**''ಪ್ರಸೀದ ದೇವದೇವೇಶ ಶಂಖಚಕ್ರಗದಾಧರ ।**
**ಲೋಕಾತ್ಮನ್‌ವೇದ ಗುಹ್ಯಾತ್ಮನ್ ತ್ವಾಂ ಪ್ರಪನ್ನೋಽಸ್ಮಿ ಕೇಶವ ॥**

**ನ ವಿದುಸ್ತ್ವಾಂ ಮಹಾತ್ಮಾನಂ ಸನಕಾದ್ಯಾ ಮಹರ್ಷಯಃ ।**
**ತತ್‌ಕಥಂ ತ್ವಾಂ ಅಹಂ ವಿದ್ಯಾಂ ನಮಸ್ತೇ ಭುವನೇಶ್ವರ ॥''**

ಶಂಖಚಕ್ರಗದಾಧಾರಿಯಾದ ದೇವಶ್ರೇಷ್ಠರಿಗೆ ಅಧಿಪತಿಯಾದ ನಾರಾಯಣನೇ ಪ್ರಸನ್ನನಾಗು. ಪ್ರಪಂಚ ಸ್ವರೂಪನೂ ವೇದಗಳಿಂದ ತಿಳಿಯಲ್ಪಡುವವನೂ ಆದ ಕೇಶವನೇ. ನಿನಗೆ ಶರಣಾಗತನಾಗಿರುವೆ. ಸನಕಾದಿಮಹರ್ಷಿಗಳೂ ಸಹ ನಿನ್ನ ಸ್ವರೂಪವನ್ನು ತಿಳಿಯಲಾರರು. ಹೀಗಿರುವಾಗ ನಾನು ಹೇಗೆ ತಿಳಿಯಬಲ್ಲೆ? ಓ ಲೋಕಾಧಿಪತಿಯೇ ನಿನಗೆ ನಮಸ್ಕಾರವು.''

ಧ್ರುವ ಬಾಲಕನ ಈ ಸ್ತೋತ್ರದಿಂದ ಪ್ರಸನ್ನನಾದ ಪರಮಾತ್ಮನು ಅವನಿಗೆ ಹೇಳಿದನು ''ವತ್ಸ ಧ್ರುವ, ಇಲ್ಲಿ ಬಾ. ನೀನು ನಿನ್ನ ಹೆಸರಿಗೆ ತಕ್ಕಂತೆ ಅಂತರಿಕ್ಷ

ಲೋಕದಲ್ಲಿ ಧ್ರುವಸ್ಥಾನದಲ್ಲಿದ್ದು ನಕ್ಷತ್ರಗಳ ಅಗ್ರಸ್ಥಾನದಲ್ಲಿ ವಿರಾಜಿಸು. ನೀನು ನಿನ್ನ ಹೆತ್ತ ತಾಯಿಯೊಡನೆ ಜ್ಯೋತಿರ್ಮಂಡಲವನ್ನು ಬೆಳಗುತ್ತ ಇರು. ಇದು ಶ್ರೇಷ್ಠವಾದ, ಅಚಲವಾದ, ಮಂಗಳಕರವಾದ ನನ್ನ ಸ್ಥಾನವೇ ಆಗಿರುತ್ತದೆ. ಪೂರ್ವಕಾಲದಲ್ಲಿ ನಾನು ಜಗದೊಡೆಯನಾದ ಆ ಪರಮೇಶ್ವರನನ್ನು ಭಜಿಸಿ ತಪಿಸಿ ಈ ಸ್ಥಾನವನ್ನು ನಾನು ಸಂಪಾದಿಸಿದ್ದೇನೆ. ವಾಸುದೇವಮಂತ್ರವನ್ನು ಅತ್ಯಂತ ಭಕ್ತಿಯಿಂದ ಜಪಿಸುವವರಿಗೆ ಮಾತ್ರ ಇಂಥಹ ಅಚಲವಾದ ಧ್ರುವಸ್ಥಾನವು ಲಭ್ಯವಾಗುತ್ತದೆ.'' ಅನಂತರ ದೇವತೆಗಳೂ, ಗಂಧರ್ವರೂ ಸಿದ್ಧರೂ, ಋಷಿಗಳೂ ಇವರೆಲ್ಲರೂ ಕೂಡಿ ಧ್ರುವರಾಜನನ್ನು ಅವನ ತಾಯಿಯೊಂದಿಗೆ ಆ ಧ್ರುವ ಸ್ಥಾನದಲ್ಲಿ ಪ್ರತಿಷ್ಠಿಸಿದರು.

*ಲಿಂಗಮಹಾಪುರಾಣದಲ್ಲಿ ಪೂರ್ವಾರ್ಧದ ಭುವನಕೋಶದಲ್ಲಿ ಧ್ರುವಸಂಸ್ಥಾನ ವರ್ಣನೆ ಎಂಬ ಅರವತ್ತೆರಡನೆಯ ಅಧ್ಯಾಯ ಮುಗಿದುದು*



## ದೇವಾದಿ ಸೃಷ್ಟಿಯ ವಿವರಣೆ

**ಅಧ್ಯಾಯ - ೬೩**

**ಋಷಿಗಳು :-** ಸೂತಾಚಾರ್ಯರೆ, ತಾವು ಈಗ ನಮಗೆ ದೇವತೆಗಳ, ದೈತ್ಯರ ಹಾಗೂ ಗಂಧರ್ವರ, ಸರ್ಪಗಳ ಮತ್ತು ರಾಕ್ಷಸರ ಉತ್ಪತ್ತಿಯನ್ನು ಕ್ರಮವಾಗಿ ದಯವಿಟ್ಟು ಹೇಳಿರಿ.

**ಸೂತ :-** ಸೃಷ್ಟಿಯ ಪ್ರಾರಂಭಕಾಲದಲ್ಲಿ ಬ್ರಹ್ಮಾದಿಗಳು ಕೇವಲ ಸಂಕಲ್ಪ ಮಾತ್ರದಿಂದಲೂ ಮತ್ತು ಸ್ಪರ್ಶನ ದರ್ಶನಗಳಿಂದಲೂ ಸೃಷ್ಟಿಮಾಡುತ್ತಿದ್ದರು. ಆನಂತರ ದಕ್ಷ ಪ್ರಜಾಪತಿಯಿಂದ ಸ್ತ್ರೀ ಪುರುಷ ಸಂಯೋಗ ರೂಪವಾದ ಮೈಥುನದಿಂದ ಸೃಷ್ಟಿಯು ಮುಂದುವರೆದಿದೆ. ಆ ದಕ್ಷಬ್ರಹ್ಮನು ಸೂತಿ ಎಂಬ ತನ್ನ ಮಡದಿಯೊಡನೆ ಮೈಥುನಕಾರ್ಯವನ್ನು ನಡೆಸಿದನು. ದಕ್ಷನಿಗೆ ಸೂತಿಯಿಂದ ಐದು ಸಾವಿರ ಮಕ್ಕಳು ಹುಟ್ಟಿದರು. ಆ ಪಂಚ ಸಹಸ್ರಪುತ್ರರು ತಂದೆಯ ಅಪ್ಪಣೆಯಂತೆ ಸೃಷ್ಟಿಯನ್ನು ಬೆಳೆಸಲು ಪ್ರವೃತ್ತರಾದರು. ಆಗ ದೇವರ್ಷಿ ನಾರದರು ಬಂದು ಹೇಳಿದಂತೆ. ಭಾಗವತದಲ್ಲಿ ''ದೇವರ ಸಾಕ್ಷಾತ್ಕಾರದಿಂದ ಲಿಂಗಭಂಗಮಾಡಿಕೊಂಡು ಮೋಕ್ಷ ಹೊಂದಬೇಕು.'' ಎಂಬ ಭಾವವನ್ನು ದಕ್ಷಕುಮಾರರಿಗೆ ಬಿಂಬಿಸಿ ಹೇಳಿದರು. ನಾರದರು ಹೇಳಿದ ಭೂಮಿ ಎಂದರೆ ಲಿಂಗ ಶರೀರ. ಮನುಷ್ಯರಿಗೆ ಅಥವಾ ಪ್ರಾಣಿಗಳಿಗೆ ಸ್ವರೂಪ ಶರೀರ, ಲಿಂಗ ದೇಹ, ಅನಿರುದ್ಧ ದೇಹ, ಸ್ಥೂಲ ದೇಹ ಎಂದು ನಾಲ್ಕು ಬಗೆಯ ಶರೀರಗಳು ಇರುತ್ತವೆ. ಆತ್ಮ ಶರೀರದ ಮೇಲಿನ ಲಿಂಗಶರೀರವೇ ಭೂಮಿ ಎನಿಸುವುದು. ಭೂಮಿಯ ಮೇಲೆ ಬಗೆ ಬಗೆಯ ಗಿಡ, ಬಳ್ಳಿಗಳು ಬೆಳೆಯುವಂತೆ ಈ ಲಿಂಗ ಶರೀರದ ಮೇಲೆ ನರ, ಪಶು, ಪಕ್ಷಿ ಮುಂತಾದ ದೇಹಗಳು ಜೀವನಿಗೆ ಬೆಳೆಯುವವು. ಈ ಲಿಂಗ ಶರೀರವು ಹರಿಯ ಪ್ರಸಾದದಿಂದ ಮಾತ್ರ ನಾಶವಾಗಿ ಮೋಕ್ಷ ದೊರೆಯುವದು. ಈ ಹರಿಪ್ರಸಾದವು ನಿಯತ ಗುರುಗಳ ಮುಖಾಂತರ ಬಿಂಬಾಪರೋಕ್ಷವಾದಾಗ ಮಾತ್ರ ದೊರಕುವದು.

ನಾರದರ ಮಾತಿನಂತೆ ಆ ದಕ್ಷಕುಮಾರರೆಲ್ಲರೂ ನಿಯತ ಗುರುವನ್ನು ಹುಡುಕಲು ದಿಕ್ಕುದಿಕ್ಕುಗಳಿಗೆ ಹೊರಟು ಹೋದರು. ಸಮುದ್ರದಿಂದ ನದಿಗಳು ಎಂದೂ ತಿರುಗಿ

ಬಾರದಂತೆ ಅವರು ಈವರೆಗೂ ತಿರುಗಿಬರಲೇ ಇಲ್ಲ. ಹೀಗೆ. ಬಿಂಬಾ ಪರೋಕ್ಷ ಮಾಡಿಸುವ ಗುರುವು ಹಾಗೂ ಮೋಕ್ಷವನ್ನು ನೀಡುವ ಹರಿ ಇವರಿಬ್ಬರನ್ನು ಹುಡುಕಲು ಹೊರಟ ಹರ್ಯಶ್ವರು ಎಂಬ ದಕ್ಷಪ್ರಜಾಪತಿಯ ಮಕ್ಕಳು ಮರಳಿ ಬಾರದಿದ್ದಾಗ ದಕ್ಷನು ಮತ್ತೆ ತನ್ನ ಸೂತಿ ಎಂಬ ಸತಿಯಲ್ಲಿ ಒಂದು ಸಾವಿರ ಮಕ್ಕಳನ್ನು ಪಡೆದನು. ಅವರಿಗೆ 'ಶಬಲರು' ಎಂಬ ಹೆಸರು ಬಂದಿತು. ನಾರದರು ಈ ಶಬಲರೆಂಬ ಅವರೆಲ್ಲರನ್ನು ಭೂಮಿಯ ಪ್ರಮಾಣವನ್ನು ತಿಳಿದುಕೊಂಡು ಬನ್ನಿರಿ ಎಂದು ಹೇಳಿ ತತ್ವಾನ್ವೇಷಣೆಗೆ ಕಳುಹಿಸಿ ಕೊಟ್ಟರು.

ಹೀಗೆ ದಕ್ಷಪ್ರಜಾಪತಿಯ ಹರ್ಯಶ್ವರು ಎಂಬ ಹೆಸರಿನ ಐದು ಸಾವಿರ ಮಕ್ಕಳೂ, ಶಬಲರೆಂಬ ಒಂದು ಸಾವಿರ ಮಕ್ಕಳೂ ಸೃಷ್ಟಿ ಕಾರ್ಯವನ್ನು ಮಾಡದೇ ಆತ್ಮತತ್ವವನ್ನು ಅನ್ವೇಷಣೆಮಾಡಲು ಹೊರಟು ಹೋದ ಬಳಿಕ ದಕ್ಷಪ್ರಜಾಪತಿಯು ವೈರಿಣಿ ಎಂಬ ಹೆಂಡತಿಯಲ್ಲಿ ಅರವತ್ತು ಹೆಣ್ಣು ಮಕ್ಕಳನ್ನು ಪಡೆದನು. ಧರ್ಮನಿಗೆ ಹತ್ತು ಹೆಣ್ಣು ಮಕ್ಕಳನ್ನೂ ಕಶ್ಯಪನಿಗೆ ಹದಿಮೂರು ಮಕ್ಕಳನ್ನೂ, ಇಪ್ಪತ್ತೇಳು ಮಕ್ಕಳನ್ನು ಸೋಮನಿಗೂ, ಅರಿಷ್ಟನೇಮಿಗೆ ನಾಲ್ವರನ್ನೂ, ಭಾರ್ಗವನಿಗೆ ಇಬ್ಬರನ್ನೂ, ಬುದ್ಧಿಶಾಲಿಯಾದ ಕೃಶಾಶ್ವನಿಗೆ ಇಬ್ಬರನ್ನೂ, ಅಂಗಿರಸ್ಸಿಗೆ ಇಬ್ಬರನ್ನೂ ಕೊಟ್ಟನು. ಆ ಧರ್ಮಪತ್ನಿಯರ ಹೆಸರುಗಳೆಂದರೆ ಮರುತ್ವತಿ, ವಸೂ, ಯಾಮಿ, ಲಂಬಾ, ಭಾನು, ಅರುಂಧತೀ ಎಂದಾಗಿರುತ್ತವೆ. ಮತ್ತು ಸಂಕಲ್ಪಾ ಮುಹೂರ್ತಾಸಾಧ್ಯಾ, ವಿಶ್ವಾ, ಭಾಮಿನೀ ಎಂದು ಇನ್ನು ಕೆಲವರು ಧರ್ಮಪತ್ನಿಯರ ಹೆಸರುಗಳಾಗಿವೆ. ವಿಶ್ವೆಯು ವಿಶ್ವೇದೇವರೆಂಬ ಮಕ್ಕಳನ್ನು, ಸಾಧ್ಯೆಯು ಸಾಧ್ಯರೆಂಬ ಮಕ್ಕಳನ್ನೂ ಪಡೆದಳು. ಮರುತ್ವತಿಗೆ ಮರುತ್ತುಗಳೂ, ವಸೂ ಎಂಬುವವಳಲ್ಲಿ ವಸುಗಳೆಂಬ ಮಕ್ಕಳೂ, ಭಾನು ಎಂಬುವಳಿಗೆ ಭಾನುಗಳೆಂಬ ಮಕ್ಕಳೂ, ಮುಹೂರ್ತಾಳಿಗೆ ಮುಹೂರ್ತಗಳೆಂಬ ಮಕ್ಕಳೂ, ಲಂಬೆಗೆ ಘೋಷ ಎಂಬ ಮಕ್ಕಳೂ, ನಾಗೆಗೆ ನಾಗವೀಥಿ ಎಂಬ ಮಗನೂ, ಸಂಕಲ್ಪೆಗೆ ಸಂಕಲ್ಪನೂ ಕ್ರಮವಾಗಿ ಹುಟ್ಟಿದರು. ತೇಜಸ್ವಿಗಳಾದ ವಸುಗಳು ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡಿರುವರು. ಪ್ರಪಂಚಕ್ಕೆ ಸೌಖ್ಯವನ್ನುಂಟು ಮಾಡುವ ಈ ವಸುಗಳು ಆಪ, ಧ್ರುವ, ಸೋಮ, ಧರ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಎಂಬುದಾಗಿ ಎಂಟಿವೆ. ಇವರಲ್ಲದೇ ರುದ್ರರು, ಅಜ, ಏಕಪಾತ್, ಅಹಿರ್ಬುಧ್ನ್ಯ, ವಿರೂಪಾಕ್ಷ, ಭೈರವ, ಹರ, ಬಹುರೂಪ, ತ್ರ್ಯಂಬಕ, ಸುರೇಶ್ವರ, ಸಾವಿತ್ರ, ಜಯಂತ, ಪಿನಾಕೀ, ಅಪರಾಜಿತ ಎಂಬ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಇವರೆಲ್ಲರೂ ಗಣಗಳಿಗೆ ಅಧಿಪತಿಗಳಾದ ಹನ್ನೊಂದು ರುದ್ರರು.

ಕಾಶ್ಯಪನ ಪತ್ನಿಯರು ಅದಿತಿ, ದಿತಿ, ಅರಿಷ್ಟಾ, ಸುರಸಾ, ಮುನಿ, ಸುರಭಿ, ವಿನತಾ, ತಾಮ್ರಾ, ಮತ್ತು ಕೋಪವುಳ್ಳ ಇಲಾ, ಕದ್ರೂ, ತ್ವಿಷಾ, ದನು ಎಂದು ಹೆಸರುಳ್ಳವರಾಗಿದ್ದಾರೆ. ಇವರ ಮಕ್ಕಳ ಪೈಕಿ ಮನ್ವಂತರದ ಆದಿಯಲ್ಲಿ ಕಶ್ಯಪರಿಂದ ಹುಟ್ಟಿದ ದೇವತೆಗಳೂ, ವೈವಸ್ವತ ಮನ್ವಂತರದಲ್ಲಿ ಹುಟ್ಟಿದ ದೇವತೆಗಳೂ, ಹನ್ನೆರಡು ಆದಿತ್ಯರಾಗಿದ್ದಾರೆ. ಇವರಲ್ಲದೆ ಇಂದ್ರ, ಧಾತೃ, ಭಗ, ತ್ವಷ್ಟಾ, ಮಿತ್ರ, ವರುಣ, ಆರ್ಯಮನ್, ಎಂಬುವವರು ಬೇರೆ ಹನ್ನೆರಡು ಆದಿತ್ಯರಾಗಿದ್ದಾರೆ. ಈ ಆದಿತ್ಯರಲ್ಲಿ ವಿವಸ್ವಾನ್, ಸವಿತೃ, ಪೂಷನ್, ಅಂಶುಮಾನ್, ವಿಷ್ಣು ಎಂಬ ಸಾವಿರಾರು ಕಿರಣಗಳುಳ್ಳ ಸೂರ್ಯರೂ ಸೇರಿ ಒಟ್ಟು ಹನ್ನೆರಡು ಜನ ಆದಿತ್ಯರಾಗುತ್ತಾರೆ.

ಕಶ್ಯಪನಿಂದ ದಿತಿಯು ಹಿರಣ್ಯಕಶಿಪು, ಹಿರಣ್ಯಾಕ್ಷರೆಂಬ ಇಬ್ಬರು ಮಕ್ಕಳನ್ನು ಪಡೆದಳು. ಕಶ್ಯಪನಿಂದ ದನುವು, ಬಲದಿಂದ ಗರ್ವಿತರಾದ ನೂರು ಮಕ್ಕಳನ್ನು ಪಡೆದಳು. ಅವರಲ್ಲಿ ವಿಪ್ರಚಿತ್ತಿ ಎಂಬವವನು ಮುಖ್ಯನಾದವನು. ತಾಮ್ರಾಳೆಂಬುವಳು ಶುಕೀ, ಶ್ಯೇನಿ, ಭಾಸೀ, ಸುಗ್ರೀವೀ, ಗೃಧ್ರಿಕಾ, ಶುಚೀ ಎಂಬ ಆರು ಹೆಣ್ಣು ಮಕ್ಕಳನ್ನು ಹೆತ್ತಳು, ಶುಕಿಯು ಗಿಣಿಗಳನ್ನೂ ಗೂಬೆಗಳನ್ನು, ಧರ್ಮಾರ್ಥವಾಗಿ ಹೆತ್ತಳು. ಶ್ಯೇನಿಯು ಗಿಡಗಗಳನ್ನೂ, ಭಾಸಿಯು ಜಿಂಕೆಗಳನ್ನು ಹೆತ್ತಳು, ಗೃಧ್ರಿಯು ಹದ್ದುಗಳನ್ನೂ, ಪಾರಿವಾಳಗಳನ್ನು, ಶುಚಿಯು ಹಂಸ ಮತ್ತು ಬಕವೆಂಬ ನೀರು ಹಕ್ಕಿಗಳನ್ನೂ ಪ್ರಸವಿಸಿದಳು. ಸುಗ್ರೀವಿಯು ಆಡು, ಕುದುರೆ, ಮೇಕೆ, ಒಂಟೆ, ಕತ್ತೆಗಳನ್ನು ಹೆತ್ತಳು. ಮಂಗಳ ಸ್ವರೂಪಳಾದ ವಿನತೆಯು ಕೆಂಪಗಿರುವ ಗರುಡನನ್ನು ಹೆತ್ತಳು.

ವಿನತೆಯು ಸೌದಾಮಿನಿ ಎಂಬ ಎಲ್ಲಾ ಪ್ರಪಂಚಕ್ಕೂ ಭಯವನ್ನುಂಟುಮಾಡುವ ಹೆಣ್ಣು ಮಗಳನ್ನೂ ಹೆತ್ತಳು. ಸುರಸೆಗೆ ಸಾವಿರ ಹಾವುಗಳು ಹುಟ್ಟಿದವು. ಪತಿವ್ರತೆಯಾದ ಕದ್ರುವು ಸಾವಿರ ಹೆಡೆಗಳುಳ್ಳ ಸಾವಿರ ಹಾವುಗಳನ್ನು ಹಡೆದಳು. ಅವುಗಳಲ್ಲಿ ಅತ್ಯಂತ ಶ್ರೇಷ್ಠಗಳೂ ಬಹು ಮುಖ್ಯವಾದವೂ ಆದ ಸರ್ಪಗಳು ಇಪ್ಪತ್ತಾರು. ಶ್ರೇಷ್ಠ ವಾಸುಕಿ, ಕರ್ಕೋಟ, ಶಂಖ, ಐರಾವತ, ಕಂಬಲ, ಧನಂಜಯ. ಮಹಾನೀಲ, ಪದ್ಮ, ಅಶ್ವತರ, ತಕ್ಷಕ, ಏಲಾಪುತ್ರ, ಮಹಾಪದ್ಮ, ಧೃತರಾಷ್ಟ್ರ, ಬಲಾಹಕ, ಶಂಖಲೋಮಾ, ನಹುಷ, ವಾಮನ, ಫಣಿತ, ಕಪಿಲ, ದುರ್ಮುಖ, ಪತಂಜಲಿ, ಇವೇ ಇಪ್ಪತ್ತಾರು ಮುಖ್ಯವಾದ ಸರ್ಪಗಳು. ಕ್ರೋಧವಶಾ ಎಂಬುವವಳು ಮಹಾ ಕಪಟಿಗಳಾದ ರಾಕ್ಷಸರ ಸಮೂಹವನ್ನು ಹೆತ್ತಳು. ವರಾಂಗನೆಯು ರುದ್ರರ ಸಮೂಹವನ್ನು ಹೆತ್ತಳು.

ಕಶ್ಯಪನ ಸಂಬಂಧದಿಂದ ಸುರಭಿಯು ಎತ್ತುಗಳನ್ನು ಮತ್ತು ಎಮ್ಮೆಗಳನ್ನೂ ಪ್ರಸವಿಸಿದಳು. ಮುನಿ ಎಂಬುವಳು ಋಷಿಗಳ ಸಮೂಹವನ್ನು ಮತ್ತು ಅಪ್ಸರಸ್ಸುಗಳ ಗುಂಪನ್ನೂ ಪ್ರಸವಿಸಿದಳು. ಅರಿಷ್ಟಾ ಎಂಬುವಳು ಅನೇಕ ಕಿನ್ನರರೆಂಬ ದೇವತೆಗಳಲ್ಲಿನ ಪ್ರಭೇದವನ್ನು, ಗಂಧರ್ವರನ್ನೂ ಪ್ರಸವಿಸಿದಳು. ಇಲಾ ಎಂಬುವಳು ಹುಲ್ಲು, ಮರ, ಬಳ್ಳಿ ಪೊದರುಗಳನ್ನು ಪ್ರಸವಿಸಿದಳು. ತ್ವಿಷಾ ಎಂಬುವಳು ಕೋಟ್ಯಂತರ ರಾಕ್ಷಸರನ್ನು ಹೆತ್ತಳು. ಹೀಗೆ ಮಹಾತ್ಮನಾದ ಕಶ್ಯಪನು ಬಹಳಷ್ಟು ಸಂತಾನವನ್ನು ಪಡೆದನು. ಈ ಸಂತಾನವೆಲ್ಲವೂ ಲೋಕದಲ್ಲಿ ಸ್ಥಾವರಜಂಗಮ ರೂಪದಲ್ಲಿರಲು ಇವರೆಲ್ಲರೂ ಅಲ್ಲಲ್ಲಿ ಇಡಲ್ಪಟ್ಟರು. ಬ್ರಹ್ಮನು ಇವರಲ್ಲಿ ಮುಖ್ಯರಾದವರನ್ನು ಕೆಲವು ಸ್ಥಾನಗಳಿಗೆ ಅಧಿಪತಿಗಳನ್ನಾಗಿ ಮಾಡಿದನು. ಅನಂತರದಲ್ಲಿ ಬ್ರಹ್ಮನು ವೈವಸ್ವತ ಮನುವನ್ನು ಮನುಷ್ಯರಿಗೆ ಅಧಿಪತಿಯನ್ನಾಗಿ ಮಾಡಿದನು. ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ ಕೆಲವರು ಬ್ರಹ್ಮನಿಂದ ಅಧಿಪತಿಗಳಾಗಿ ದ್ವೀಪಗಳುಳ್ಳ ಪರ್ವತಗಳಿಂದ ಕೂಡಿದ ಈ ಭೂಮಿಯನ್ನು ಹಿಂದೆ ಬ್ರಹ್ಮನಿಂದ ಉಪದೇಶಮಾಡಲ್ಪಟ್ಟಂತೆಯೇ ಈಗಲೂ ಧರ್ಮದಿಂದ ಕಾಪಾಡುತ್ತಾರೆ.

ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ ಯಾರು ಬ್ರಹ್ಮನಿಂದ ಅಭಿಷೇಕ ಮಾಡಲ್ಪಟ್ಟರೋ ಅವರೇ ಪುನಃ ಅಭಿಷೇಕಮಾಡಲ್ಪಡುತ್ತಾರೆ. ಮತ್ತು ಅವರೇ ಮನುಗಳಾಗುತ್ತಾರೆ. ಹೀಗೆ ಮನ್ವಂತರಗಳು ಕಳೆಯಲು ಈ ದೊರೆಗಳು

ನಿವೃತ್ತರಾಗುತ್ತಾರೆ. ಮುಂದಿನ ಮನ್ವಂತರಗಳಲ್ಲಿ ಹೊರಟು ಹೋದವರು ಮತ್ತೆ ಮುಂದೆ ಬರುವವರು ಎಂದು ಎರಡು ವಿಧವಾದ ಮನುಗಳಿರುವರು. ಪುನಃ ಕಶ್ಯಪನು ಗೋತ್ರ ಸಂತಾನವನ್ನು ಅಪೇಕ್ಷಿಸುವವನಾಗಿ ವಂಶಾಭಿವೃದ್ಧಿಯಾಗುವ ಮಕ್ಕಳಾಗಲೆಂದು ಆಲೋಚಿಸಿ ಪುನಃ ತಪಸ್ಸನ್ನು ಆಚರಿಸಿದನು.

ಹೀಗೆ ಧ್ಯಾನಮಾಡುತ್ತಿರುವ ಮಹಾತ್ಮನಾದ ಕಶ್ಯಪನಿಗೆ ಬ್ರಹ್ಮನ ಅನುಗ್ರಹದಿಂದ ಆ ಮೇಲೆ ಬಹಳ ತೇಜಸ್ವಿಗಳಾದ ಇಬ್ಬರು ಮಕ್ಕಳಾದರು ಆ ತೇಜಸ್ವಿಗಳಾದ ಕಶ್ಯಪನ ಮಕ್ಕಳು ವತ್ತರ. ಅಸಿತ ಎಂದು ಕರೆಯಲ್ಪಟ್ಟರು. ಅವರು ಬ್ರಹ್ಮಜ್ಞಾನಿಗಳೆಂದು ಪ್ರಸಿದ್ಧರಾದರು. ಅವರಲ್ಲಿ ಬಹಳ ಕೀರ್ತಿವಂತನಾದ ರೈಭ್ಯ, ನೈಧ್ರುವ ಎಂಬ ಮಕ್ಕಳು ವತ್ತರನಿಗೆ ಹುಟ್ಟಿದರು. ರೈಭ್ಯನಿಗೆ ರೈಭ್ಯರೆಂಬ ಮಕ್ಕಳಾದರು. ನೈದ್ರುವನಿಗೆ ಚ್ಯವನನ ಮಗಳಲ್ಲಿ ಸುಮೇಧಾ ಎಂಬುವನು ಹುಟ್ಟಿದನು. ನೈಧ್ರುವನ ಹೆಂಡತಿಯು "ಕುಂಡಪಾಯಿ" ಎಂಬ ಮಕ್ಕಳಿಗೆ ತಾಯಿಯಾದಳು. ಆತನಿಗೆ ಏಕಪರ್ಣಾ ಎಂಬುವಳಲ್ಲಿ ಬ್ರಹ್ಮಿಷ್ಠನು ಹುಟ್ಟಿದನು. ಮಹಾ ತೇಜಸ್ವಿಯೂ, ಮಹನೀಯನೂ ಆದ ದೇವಲನು ಶಾಂಡಿಲ್ಯರುಗಳಲ್ಲಿ ಶ್ರೇಷ್ಠನು. ಹೀಗೆ ಶಾಂಡಿಲ್ಯ, ನೈಧ್ರುವ ಮತ್ತು ರೈಭ್ಯ ಎಂಬ ಮೂರು ಗೋತ್ರಗಳೂ ಕಶ್ಯಪನಿಂದ ಹುಟ್ಟಿದವು.

ಪ್ರಭುಗಳಾದ ಹನ್ನೊಂದು ಜನ ಮನುಗಳು ನಾಲ್ಕುಯುಗಗಳಲ್ಲಿ ಆಗಿ ಹೋದರು. ಆಗ ದ್ವಾಪರಯುಗವು ಪ್ರಾಪ್ತವಾಗಿರಲು ಮನುಪುತ್ರನಾದ ನರಿಷ್ಯಂತನಿಗೆ ದಮ ಎಂಬ ಮಗನಾದನು. ದಮನ ದಾಯಾದಿಯು ತೃಣಬಿಂದುವಾಗಿದ್ದಾನೆ. ತ್ರೇತಾಯುಗದ ಪ್ರಾರಂಭದಲ್ಲಿ ಮೂರನೆಯ ಭಾಗದಲ್ಲಿ ಇವನು ರಾಜನಾದನು. ಅವನಿಗೆ ಬಹಳ ರೂಪವತಿಯಾದ ಇಲವಿಲಾ ಎಂಬ ಮಗಳು ಹುಟ್ಟಿದಳು. ಆ ರಾಜರ್ಷಿಯು ಪುಲಸ್ತ್ಯನಿಗೆ ಆ ಹೆಣ್ಣು ಮಗಳನ್ನು ಕೊಟ್ಟನು. ಪುಲಸ್ತ್ಯರಿಂದ ಇಲವಿಲಾಳಿಗೆ ಐರವಲ ಎಂಬ ಮಗನು ಜನಿಸಿದನು. ಆ ರಾಜರ್ಷಿಯಾದ ಐರವಿಲನು ಅವಳಲ್ಲಿ 'ವಿಶ್ವವಸ್' ಎಂಬ ಕುಮಾರನನ್ನು ಪಡೆದನು. ಅವನ ನಾಲ್ಕುಪತ್ನಿಯರೂ ಪೌಲಸ್ತ್ಯ ವಂಶವನ್ನುವೃದ್ಧಿಮಾಡುವವರಾಗಿದ್ದರು. ದೇವವರ್ಣಿನೀ ಎಂಬ ಮಂಗಳ ಸ್ವರೂಪಳಾದ ಮಗಳು ಬೃಹಸ್ಪತಿಯಿಂದ ಹುಟ್ಟಿದಳು ಮಾಲ್ಯವಂತನಿಗೆ ಪುಷ್ಪೋತ್ಕಟಾ ಬಲಾಕಾ ಎಂಬ ಇಬ್ಬರು ಹೆಣ್ಣು ಮಕ್ಕಳು ಹುಟ್ಟಿದರು. ಮಾಲಿಯು ಅವರಲ್ಲಿ 'ಕೈಕಸಿ' ಎಂಬ ಮಗಳನ್ನು ಪಡೆದನು. ದೇವ ವರ್ಣನಿಯು ಅವನಿಂದಲೇ ವೈಶ್ರವಣ ಎಂಬ ಹಿರಿಯ ಮಗನನ್ನು ಪಡೆದಳು.

ಕೈಕಸಿಯು ರಾಕ್ಷಸರಿಗೆ ಒಡೆಯನಾದ ರಾವಣನನ್ನೂ ಕುಂಭಕರ್ಣನನ್ನೂ, ಶೂರ್ಪನಖಿಯನ್ನೂ ಮತ್ತು ಬುದ್ಧಿಶಾಲಿಯಾದ ವಿಭೀಷಣನನ್ನೂ ಹೆತ್ತಳು. ಪುಷ್ಪೋತ್ಕಟಿಯು ಅವನ ಸಂಬಂಧದಿಂದ ಮಹೋದರನನ್ನೂ, ಪ್ರಹಸ್ತನನ್ನೂ ಮಹಾ ಪಾರ್ಶ್ವನನ್ನೂ ಮತ್ತು ಖರನನ್ನೂ ಹೆತ್ತಳು. ಬಲಾ ಎಂಬವಳು ಕುಂಭೀನಸಿ ಮತ್ತು ಮೌಲಿಕಾ ಎಂಬ ಹೆಣ್ಣು ಮಕ್ಕಳನ್ನೂ ತ್ರಿಶಿರಸ್ಸು, ದೂಷಣ. ವಿದ್ಯುಜ್ಜಿಹ್ವ ಎಂಬ ರಾಕ್ಷಸರನ್ನು ಪ್ರಸವಿಸಿದಳು. ಹೀಗೆ ಪುಲಸ್ತ್ಯವಂಶದಲ್ಲಿ ಒಂಬತ್ತೂ ರಾಕ್ಷಸರೂ ಬಹಳ ಕ್ರೂರವಾದ ಕೆಲಸಗಳನ್ನುಮಾಡುತ್ತಿದ್ದರು. ಪುಲಸ್ತ್ಯನ ಮಕ್ಕಳು ಯಾವಾಗಲೂ

ಮೃಗಗಳು, ಹುಲಿಗಳು, ಸಿಂಹಗಳು, ಭೂತಗಳು, ಪಿಶಾಚಿಗಳು, ಸರ್ಪಗಳು, ಹಂದಿಗಳು, ಆನೆಗಳು, ಕೋತಿಗಳು ಕಿನ್ನರರೆಂಬ ದೇವತೆಗಳು ಮತ್ತು ಕಿಂಪುರುಷರೆಂಬ ದೇವತೆಗಳು ಇವುಗಳ ಜೊತೆಯಲ್ಲಿಯೇ ಇರುತ್ತಿದ್ದರು. ವೈವಸ್ವತ ಮನ್ವಂತರದಲ್ಲಿ ಕ್ರತು ಎಂಬುವವನಿಗೆ ಮಕ್ಕಳಾಗಲಿಲ್ಲ. ಅತ್ರಿಗೆ ಸುಂದರಿಯರಾಗಿಯೂ, ಪತಿವ್ರತೆಯರಾಗಿಯೂ ಇದ್ದ ಹತ್ತು ಮಂದಿ ಹೆಂಡತಿಯರಿದ್ದರು. ಭದ್ರಾಶ್ವನಿಗೆ ಘೃತಾಚಿ ಎಂಬ ಅಪ್ಸರಸ್ಸಿನಲ್ಲಿ ಹತ್ತು ಗಂಡು ಮಕ್ಕಳೂ ಮತ್ತು ಭದ್ರಾ-ಮುದ್ರಾ, ಜಲದಾ, ಮಂದಾ, ಆನಂದಾ, ಬಲಾಬಲಾ, ಯಾಚಗೋಪಾ, ಬಲಾ, ತಾಮರಸಾ, ವರಕ್ರೀಡಾ ಎಂಬ ಹತ್ತು ಹೆಣ್ಣುಮಕ್ಕಳು ಇದ್ದರು.

ಅತ್ರಿ ಮಹರ್ಷಿ ವಂಶದಲ್ಲಿ ಹುಟ್ಟಿದ ಈ ಕನ್ಯೆಯರುಗಳಿಗೆ ಪ್ರಭಾಕರ ಎಂದರೆ ಸೂರ್ಯನು ಪತಿಯು. ಸೂರ್ಯನು ರಾಹುವಿನಿಂದ ಮುಚ್ಚಲ್ಪಟ್ಟ ಆಕಾಶದಿಂದ ಭೂಮಿಗೆ ಬೀಳಲು ಈ ಲೋಕವೆಲ್ಲವೂ ಕತ್ತಲೆಯಿಂದ ಆವರಿಸಲ್ಪಟ್ಟಿತು. ಆಗ ಬ್ರಹ್ಮರ್ಷಿಗಳಾದ ಅತ್ರಿಗಳು ಅನುಗ್ರಹಗೈದು ಬೆಳಕನ್ನು ಕೊಡುವ ಸೂರ್ಯನಿಗೆ ಕ್ಷೇಮ ಉಂಟಾಗಲಿ'' ಎಂದು ಹರಸಿದರು. ಅವರ ಆಶೀರ್ವಾದದಿಂದ ಸೂರ್ಯನು ಭೂಮಿಗೆ ಬೀಳಲಿಲ್ಲ. ಅತ್ರಿ ಮಹರ್ಷಿಗಳು ವರಕೊಟ್ಟು 'ಪ್ರಭಾಕರನಾಗು' ಎಂಬ ಆಶೀರ್ವಾದ ಮಾಡಿ ಬೆಳಕನ್ನುಂಟುಮಾಡಿದುದರಿಂದ ಸೂರ್ಯನು ಪ್ರಭಾಕರನಾದನು. ಅತ್ರಿ ಮಹರ್ಷಿಯು ಭದ್ರೆ ಎಂಬುವಳಲ್ಲಿ ಕೀರ್ತಿವಂತನಾದ 'ಸೋಮ' ಎಂಬ ಮಗನನ್ನೂ ಪುನಃ ಅವಳಲ್ಲಿಯೇ ಇನ್ನೂ ಕೆಲವು ಮಕ್ಕಳನ್ನೂ ಪಡೆದನು. ಇವರು ವೇದಪಾರಂಗತರೂ, ಋಷಿಗಳೂ ಮಂಗಳಸ್ವರೂಪರೂ ಆದ ಆತ್ರೇಯರೆಂದು ಪ್ರಖ್ಯಾತರಾದರು. ಇವರಿಗೆ ಬ್ರಹ್ಮಜ್ಞಾನಿಗಳೂ ಮತ್ತು ಬಹಳ ತೇಜಸ್ವಿಗಳೂ, ಜಗತ್ತಿನಲ್ಲಿ ಕೀರ್ತಿವಂತರೂ ಆದ ದತ್ತ ಎಂಬ ಶ್ರೇಷ್ಠನಾದ ಹಿರಿಯ ಮಗನೂ ದುರ್ವಾಸ ಎಂಬ ಅವನ ತಮ್ಮನೂ ಅಮಲಾ ಎಂಬ ಹೆಣ್ಣುಮಗಳೂ ಉತ್ಪನ್ನರಾದರು.

ಮಹಾತ್ಮನಾದ ಅತ್ರಿ ವಂಶದ ನಾಲ್ಕು ಗುಂಪುಗಳು ಕಾಶ್ಯಪ, ನಾರದ, ಪರ್ವತ ಮತ್ತು ಅನುದ್ಧತ ಎಂದು ಪ್ರಸಿದ್ಧವಾಗಿವೆ. ಅರುಂಧತಿಯ ಮನಸ್ಸಿನಿಂದಲೇ ಇವರು ಸೃಷ್ಟಿ ಮಾಡಲ್ಪಟ್ಟರು. ನಾರದನು ವಸಿಷ್ಠನಿಗೆ ಅರುಂಧತಿಯನ್ನು ಕೊಟ್ಟು ವಿವಾಹವನ್ನು ಮಾಡಿದನು. ಬಹಳ ತೇಜಸ್ವಿಯಾದ ನಾರದನು ಹಿಂದೆ ದಕ್ಷಶಾಪದಿಂದ ಭಯಂಕರವಾದ ತಾರಕಾಸುರನಿಗೂ, ದೇವತೆಗಳಿಗೂ ಉಂಟಾದ ದೇವಾಸುರ ಯುದ್ಧದ ಕಾಲದಲ್ಲಿ ಮೇಲ್ಮುಖವಾದ ರೇತಸ್ಸುಳ್ಳವನಾಗಿದ್ದನು. ಆಗ ಭಯಂಕರವಾದ ರೀತಿಯಲ್ಲಿ ಲೋಕದಲ್ಲಿ ಮಳೆಯೇ ಇಲ್ಲದಿರಲು ಲೋಕೇಶ್ವರರೊಡನೆ ವಸಿಷ್ಠನು ತನ್ನ ತಪಸ್ಸಿನಿಂದ ಲೋಕವನ್ನು ಕಾಪಾಡಿದನು. ಆಗ ವಸಿಷ್ಠಮಹರ್ಷಿಯು ಬಹಳ ಕೃಪೆಯಿಂದ ಕೂಡಿದವನಾಗಿ ಅನ್ನ ನೀರುಗಳಿಂದಲೂ, ಸಸ್ಯಗಳಿಂದಲೂ, ಗೆಡ್ಡೆಗೆಣಸುಗಳಿಂದಲೂ, ಮೂಲಿಕೆಗಳಿಂದಲೂ ಲೋಕವನ್ನು ಬದುಕಿಸಿದನು.

ವಸಿಷ್ಠ ಮಹರ್ಷಿಯು ಅರುಂಧತಿಯಲ್ಲಿ ನೂರು ಮಕ್ಕಳನ್ನು ಪಡೆದನು. ಕಾಳಿಯು ವಸಿಷ್ಠನ ಪುತ್ರಶ್ರೇಷ್ಠನಾದ ಶಕ್ತಿಯೂ ರಾಕ್ಷಸರ ರಕ್ತದಿಂದ ನುಂಗಲ್ಪಟ್ಟಿರುವುದನ್ನು

ಕಂಡಳು. ಆಗ ಅವಳು ಪರಾಶರ ಮಹರ್ಷಿಗಳ ಮೂಲಕ ಮಹಾಮಹಿಮರಾದ ವ್ಯಾಸಮಹರ್ಷಿಗಳನ್ನು ಸೃಜಿಸಿದಳು. ವ್ಯಾಸಮಹರ್ಷಿಗಳು ''ಅರಿಣೀ' ಎಂಬುವಳಲ್ಲಿ ಅಗ್ನಿಮಥನಕ್ಕಾಗಿ ಉಪಯೋಗಿಸುವ ಮರದಲ್ಲಿ ಶುಕಮಹರ್ಷಿಯನ್ನು ಪಡೆದರು. ಶುಕಮಹರ್ಷಿಗಳು ಉಪಮನ್ಯು, ಪೀವರ್ಯ, ಅಣುಹನ ಪತ್ನಿಯೂ ಬ್ರಹ್ಮದತ್ತನ ತಾಯಿಯೂ ಆದ ಕೀರ್ತಿಮೂರ್ತಿ (ಕೃತ್ವಿ) ಎಂಬ ಮಕ್ಕಳನ್ನು ಪಡೆದರು. ಶುಕಮಹರ್ಷಿಗೆ ಪೀವರಿಯಲ್ಲಿ ಭೂರಿಶ್ರವಸ್ಸು ಪ್ರಭು, ಶಂಭು, ಕೃಷ್ಣ, ಐದನೆಯವನಾದ ಗೌರ ಎಂಬ ಗಂಡು ಮಕ್ಕಳೂ ಕೀರ್ತಿ ಮೂರ್ತಿ, ಯೋಗಮಾತಾ, ಧೃತವ್ರತಾ ಎಂಬ ಹೆಣ್ಣು ಮಕ್ಕಳೂ ಆದರು. ಇವರು ಪರಾಶರ ಮಹರ್ಷಿಗಳ ಗುಂಪಿನವರು. ನೀಲ, ಬಾದರಿಕ, ಶ್ವೇತ, ಕೃಷ್ಣ, ಗೌರ, ಶಾಮ, ಧೂಮ್ರ, ಅರುಣ ಎಂಬುವವರೂ ಪರಾಶರರಿಗೆ ಸಂಬಂಧಪಟ್ಟವರು. ಇವರೇ ಮಹಾತ್ಮರಾದ ಪರಾಶರರಿಗೆ ಸಂಬಂಧ ಪಟ್ಟ ಎಂಟು ಗೋತ್ರಗಳ ಗುಂಪುಗಳಿಗೆ ಪ್ರವರ್ತಕರಾದರು.

ವಸಿಷ್ಠರಿಂದ ಘೃತಾಚೀ ಎಂಬ ಅಪ್ಸರೆಯಲ್ಲಿ 'ಕಪಿಂಜಲ್ಯ' ಎಂಬ ಮಗನು ಹುಟ್ಟಿದನು. ತ್ರಿಮೂರ್ತಿ ಎಂದು ಪ್ರಸಿದ್ಧನಾಗಿರುವವನೇ ಇಂದ್ರಪ್ರಮಿತಿ. ಆ ತ್ರಿಮೂರ್ತಿಗೆ ಪೃಥುವಿನ ಮಗಳಲ್ಲಿ ವಸುವು ಹುಟ್ಟಿದನು. ಅವನಿಗೆ ಉಪಮನ್ಯುವು ಮಗನಾಗಿ ಹುಟ್ಟಿದನು. ಉಪಮನ್ಯುವಿನ ಮಕ್ಕಳು ಅನೇಕರು. ಮಿತ್ರಾವರುಣರಾದ ವಸಿಷ್ಠರಿಂದ ಉತ್ಪನ್ನರಾದ ಕೌಂಡಿನ್ಯರೆಂಬ ಹೆಸರುಳ್ಳ ವಾಸಿಷ್ಠರು ಅನೇಕ ಮಂದಿ ಒಂದೇ ಋಷಿಯಿಂದ ಹುಟ್ಟಿದವರೆಂದು ಪ್ರಸಿದ್ಧರಾಗಿದ್ದಾರೆ. ಮಹಾತ್ಮರಾದ ವಸಿಷ್ಠರಿಗೆ ಸಂಬಂಧಪಟ್ಟ ಇವೇ ಹತ್ತು ಗುಂಪುಗಳಾಗಿರುತ್ತವೆ.

ಈ ರೀತಿಯಾಗಿ ಬ್ರಹ್ಮನ ಮನಸ್ಸಿನಿಂದ ಹುಟ್ಟಿದ ಮಹಾ ಭಾಗ್ಯಶಾಲಿಗಳೂ ಮತ್ತು ಅಧಿಪತಿಗಳೂ ಆದ ಮಕ್ಕಳು ಮತ್ತು ಅವರ ವಂಶವೂ ಹೇಳಲ್ಪಟ್ಟಿದೆ. ಇವರಿಂದ ಮೂರುಲೋಕವನ್ನೂ ಕಾಪಾಡುವುದರಲ್ಲಿ ಸಮರ್ಥರಾದ ದೇವತೆಗಳೂ, ಋಷಿಗಳೂ ಮುಂತಾದವರು ದೇವರ್ಷಿಗಳ ವಂಶದಲ್ಲಿ ಹುಟ್ಟಿದರು. ಇವರಿಗೆ ನೂರಾರು, ಸಹಸ್ರಾರು ಮಂದಿಮಕ್ಕಳೂ ಮೊಮ್ಮಕ್ಕಳೂ ಹುಟ್ಟಿದರು. ಸೂರ್ಯನ ಕಿರಣದಂತೆ ಈ ಮಕ್ಕಳುಗಳಿಂದ ಮೂರು ಲೋಕವೂ ವ್ಯಾಪಿಸಲ್ಪಟ್ಟಿದೆ.

*ಲಿಂಗಮಹಾಪುರಾಣದ ಪೂರ್ವಾರ್ಧದ ದೇವಾದಿಗಳ ಸೃಷ್ಟಿಯ ವಿವರಣೆ ಎಂಬ ಆರವತ್ತೂರನೆಯ ಅಧ್ಯಾಯ ಮುಗಿದುದು*

—o—

**ಋಷಿಗಳು** :- ವಾಗ್ಮಿಗಳಲ್ಲಿ ಶ್ರೇಷ್ಠರಾದ ಸೂತರೆ, ರಾಕ್ಷಸನು ತನ್ನ ಸಹೋದರರನ್ನು ಕೂಡಿಕೊಂಡು ವಸಿಷ್ಠರ ಮಗನಾದ ಶಕ್ತಿಮುನಿಯನ್ನು ಹೇಗೆ ಕೊಂದು ತಿಂದನು? ಅದನ್ನು ನಮಗೆ ನಿರೂಪಿಸಿರಿ.

**ಸೂತ** :- ಪೂರ್ವ ಕಾಲದಲ್ಲಿ ರುಧಿರ ಎಂಬ ರಾಕ್ಷಸನು ಬಂಧುಗಳೊಂದಿಗೆ ವಸಿಷ್ಠ ಪುತ್ರನಾದ ಶಕ್ತಿಯನ್ನು ಭಕ್ಷಣಮಾಡಿದನು. ವಸಿಷ್ಠರ ಶಿಷ್ಯನಾದ ಕಲ್ಮಾಷಪಾದನನ್ನು ಮಹಾರಾಜನನ್ನಾಗಿ ನೇಮಿಸಿದ ಬಳಿಕ ಅವನು ಒಂದು ದೊಡ್ಡ ಯಜ್ಞ ಸಮಾರಂಭವನ್ನು ಮಾಡತೊಡಗಿದನು. ಆ ಯಜ್ಞಕ್ಕೆ ತನ್ನ ಎಲ್ಲ ತಮ್ಮಂದಿರನ್ನು ಕೂಡಿಕೊಂಡು ವಸಿಷ್ಠಪುತ್ರರಾದ ಶಕ್ತಿಮುನಿಗಳು ಬಂದಿದ್ದರು. ವಿಶ್ವಾಮಿತ್ರರು ರುಧಿರ ರಾಕ್ಷಸನಿಗೆ ಸಹೋದರಸಹಿತನಾದ ಶಕ್ತಿಮುನಿಯನ್ನು ಭಕ್ಷಿಸಲು ಹೇಳಿದರು. ವಿಶ್ವಾಮಿತ್ರರ ಪ್ರೇರಣಾನುಸಾರವಾಗಿ ಆ ರುಧಿರರಕ್ಕಸನು ಬಂಧುಬಾಂಧವರ ವೃಂದದಿಂದ ಸಹಿತನಾದ ಶಕ್ತಿ ಮಹರ್ಷಿಯನ್ನು ತಿಂದು ಹಾಕಿದನು. ಈ ಸಮಾಚಾರವು ಮಹಾಪ್ರಭಾವಶಾಲಿಗಳೂ, ಧರ್ಮಶಾಸ್ತ್ರದ ಮರ್ಮವನ್ನು ಚೆನ್ನಾಗಿ ಅರಿತವರೂ ಆದ ವಸಿಷ್ಠರಿಗೂ ಹಾಗೂ ಅವರ ಧರ್ಮಪತ್ನಿಯಾದ ಅರುಂಧತಿಗೂ ತಿಳಿದು ಬಹಳ ದುಃಖವಾಯಿತು. ಸಹಿಸಲು ಅಶಕ್ಯವಾದ ಪುತ್ರಮರಣದ ಶೋಕದಿಂದ ಅವರಿಬ್ಬರೂ ವೃದ್ಧರಾದ ದಂಪತಿಗಳು ದುಃಖಾತಿರೇಕದಿಂದ ನೆಲಕ್ಕೆ ಬಿದ್ದರು. 'ಅಯ್ಯೋ ಮಗನೇ ಪುತ್ರ' ಎಂದು ಶೋಕಮಾಡುತ್ತ ನೆಲಕ್ಕೆ ಬಿದ್ದರು. ಮಹಾತ್ಮರಾದ ವಸಿಷ್ಠ ಮಹರ್ಷಿಗಳಿಗೆ ತಮ್ಮ ನೂರಾರು ಜನ ಮಕ್ಕಳು ಶಕ್ತಿಮುನಿ ಸಹಿತವಾಗಿ ಮರಣ ಹೊಂದಿದ ಸುದ್ದಿಯನ್ನು ಕೇಳಿ ತಮ್ಮ ಕುಲವೇ ನಷ್ಟವಾಯಿತೆಂದು ಅವರಿಗೆ ಅನಿಸಿತು. ತಮ್ಮ ನೂರಾರು ಜನ ಮಕ್ಕಳನ್ನು ಅವರಲ್ಲಿಯೂ ಹಿರಿಯನಾದ ಶಕ್ತಿ ಮುನಿಯನ್ನು ನೆನೆನೆನೆದು ಅವರು ಬಹಳೇ ದುಃಖಪಟ್ಟರು. ಆ ಪುತ್ರ ಶೋಕವನ್ನು ಸಹಿಸುವದು ಅವರಿಗೆ ಅಶಕ್ಯವಾಯಿತು. ಆಗ ಅವರು ತಾವು ಕೂಡ ಮರಣಹೊಂದಿ ಇಹಲೋಕದ ತಮ್ಮ ಜೀವನ ಯಾತ್ರೆಯನ್ನು ಕೊನೆಗಾಣಿಸಬೇಕೆಂದು ಇಚ್ಛೆಪಟ್ಟರು. ವಸಿಷ್ಠರು ಪರಮಜ್ಞಾನಿಗಳು. ದೇಹ ಅಶಾಶ್ವತ, ಆತ್ಮನಿತ್ಯ. ಎಂದು ಅವರು ತಿಳಿದಿದ್ದರೂ ಪುತ್ರ ಮರಣದ ವಿಚಿತ್ರವಾದ ದುಃಖವನ್ನು ಅನುಭವಿಸುವದು ತಮ್ಮಿಂದ ಸಾಧ್ಯವಿಲ್ಲ ಎನಿಸಿತು. ಆಗ ಅವರು ತಮ್ಮ ಮೆಚ್ಚಿನ ಮಡದಿಯಾದ ಅರುಂಧತಿದೇವಿಯೊಂದಿಗೆ ತಾವಿದ್ದ ಪರ್ವತದ ಕಟ್ಟಕಡೆಯ ತುಟ್ಟತುದಿಯನ್ನು ಏರಿದರು. ಹಾಗೂ ಶೋಕೋದ್ರೇಕದಿಂದ ಮಡದಿ ಅರುಂಧತಿಯೊಂದಿಗೆ ಪರ್ವತದ ತುಟ್ಟತುದಿಯಿಂದ ಕೆಳಗೆ ಬಿದ್ದುಬಿಟ್ಟರು. ಉತ್ತುಂಗವಾದ ಗಿರಿಶೃಂಗದಿಂದ ಸತಂಪಾತಾಳದಂತಿರುವ ಭೂಪೃಷ್ಠದಲ್ಲಿ ಬೀಳುತ್ತಲಿರುವ ಆ ಮುನಿದಂಪತಿಗಳನ್ನು ಭೂದೇವಿಯು ಕಮಲ ಕೋಮಲವಾದ ತನ್ನ ಕೈಗಳಿಂದ ಮೃದುವಾಗಿ ಪೆಟ್ಟಾಗದಂತೆ ತಡೆದು ಹಿಡಿದಳು. ಆಗ ವಸಿಷ್ಠರ ಸೊಸೆಯೂ, ಶಕ್ತಿಮುನಿಯ ಮಡದಿಯೂ ಆದ ಅದೃಶ್ಯಂತಿಯು ಮಾವ ವಸಿಷ್ಠ ಮುನಿಯನ್ನು ಕುರಿತು ಮಾತನಾಡಿದಳು.

**ಅದೃಶ್ಯಂತಿ :-** ಪೂಜ್ಯರಾದ ವಸಿಷ್ಠ ಮಹಾಮುನಿಗಳೇ, ನಿಮ್ಮ ಈ ದೇಹವು ಪರಮ ಪವಿತ್ರ. ಇಂಥ ಪುಣ್ಯ ಶರೀರವನ್ನು ದಯವಿಟ್ಟು ಉಳಿಸಿಕೊಳ್ಳಿರಿ. ಏಕೆಂದರೆ ನೀವು ನಿಮ್ಮ ಮೊಮ್ಮಗನನ್ನು ನೋಡಬೇಕು. ಶಕ್ತಿಋಷಿಯು ನನ್ನ ಗರ್ಭದಲ್ಲಿ ಇರಿಸಿದ ಭ್ರೂಣವು ಬೇಗನೆ ಭೂಮಿಯಲ್ಲಿ ಜನಿಸಲಿರುವದು. ಆ ನಿಮ್ಮ ಮೊಮ್ಮಗನನ್ನು ನೀವು ಅವಶ್ಯವಾಗಿ ನೋಡಲೇಬೇಕು. ಶಕ್ತಿಮುನಿಯಿಂದ ನನ್ನ ಗರ್ಭದಲ್ಲಿ ಇರಿಸಲ್ಪಟ್ಟ ಆ ಶಿಶುವು ನನ್ನ ಉದರದ ಹೊದರಿನಲ್ಲಿಯೇ ಸುರಕ್ಷಿತವಾಗಿದೆ. ಆ ಭ್ರೂಣವು ಮಹಾತ್ಮರಾದ ಶಕ್ತಿಮಹರ್ಷಿಗಳ ವೀರ್ಯದಿಂದ ಉತ್ಪನ್ನವಾಗಿದೆ. ಆದುದರಿಂದ ಆ ನನ್ನ ಕಂದನಿಗೆ ಸಕಲ ವಿಧವಾದ ಸಿದ್ಧಿಗಳನ್ನು ಪಡೆಯುವ ಶಕ್ತಿ ಇರುತ್ತದೆ. ಇಂಥಹ ನಿಮ್ಮ ಮೊಮ್ಮಗನನ್ನು ನೋಡಿ ಆನಂದಪಡಲು ಆ ನಿಮ್ಮ ವಂಶದ ಕುಡಿಯನ್ನು ಬ್ರಹ್ಮತೇಜದಿಂದ ಕೂಡಿ ಬೆಳಗುವಂತೆ ಮಾಡಲು ನೀವು ಅವಶ್ಯವಾಗಿ ಬದುಕಿ ಇರಲೇಬೇಕು.''

ಹೀಗೆ ಹೇಳಿದ ನಂತರ ಧರ್ಮವನ್ನರಿತ, ಕಮಲಲೋಚನೆಯಾದ ಅವರ ಸೊಸೆಯು ವಸಿಷ್ಠರಿಗೆ ನಮಸ್ಕರಿಸಿ, ಅವರನ್ನು ತನ್ನ ಕೈಗಳಿಂದ ಎಬ್ಬಿಸಿ, ಅವರ ಕಣ್ಣೀರನ್ನು ನೀರಿನಿಂದ ಒರೆಸಿದಳು. ವಸಿಷ್ಠರು ಸೊಸೆಯ ಮಾತನ್ನು ಕೇಳಿ ಮೂರ್ಛೆಯಿಂದ ಎಚ್ಚೆತ್ತು ಭೂಮಿಯಿಂದೆದ್ದರು. ಆಗ ಅವರು ಅರುಂಧತಿಯನ್ನು ಆಲಿಂಗಿಸಿ ಸಮಾಧಾನಗೊಳಿಸಿದರು. ಆದರೂ ಅರುಂಧತಿಯು ಬಹಳ ದುಃಖದಿಂದ ಭೂಮಿಯ ಮೇಲೆ ಪುನಃ ಬಿದ್ದು ಬಿಟ್ಟಳು. ಮುನಿ ಶ್ರೇಷ್ಠರಾದ ವಸಿಷ್ಠರು ದುಃಖದಿಂದ ಅಳುತ್ತಿರುವ ಅರುಂಧತಿಯನ್ನು ಕೈಗಳಿಂದ ಸವರಿ ಪುತ್ರಪ್ರೇಮದಿಂದ ಅವಳೊಂದಿಗೆ ಪುನಃ ಇವರೂ ಅತ್ತರು. ಅನಂತರ ವಿಷ್ಣುವಿನ ನಾಭಿಕಮಲದಲ್ಲಿ ಬ್ರಹ್ಮನು ಹೇಗೋ ಹಾಗೆ ಗರ್ಭದೊಳಗೆ ಕುಮಾರನು ಸುಖವಾಗಿರಲು ಒಂದು ಋಙ್ಮಂತ್ರವನ್ನು ಹೇಳಿದರು. ವಸಿಷ್ಠರಿಗೆ ಆ ವೇದಮಂತ್ರ ಸೊಸೆ ಅದೃಶ್ಯಂತಿಯ ಗರ್ಭದಿಂದ ಕೇಳಿಸಿತು. ಆಗ ಪೂಜ್ಯರಾದ ವಸಿಷ್ಠರು ಆ ವೇದ ಮಂತ್ರವನ್ನು ಪ್ರೀತಿಯಿಂದ ಕೇಳಿ ಯಾರು ಹೀಗೆ ಹೇಳುತ್ತಿರುವರು? ಎಂದು ಸಾವಧಾನವಾಗಿ ಯೋಚಿಸಿದರು. ಆಗ ಆಕಾಶಮಧ್ಯದಲ್ಲಿ ನಿಂತುಕೊಂಡು. ಕಮಲದಂತೆ ಕಣ್ಣುಗಳುಳ್ಳ, ಜಗತ್ತಿನಲ್ಲೆಲ್ಲಾ ವ್ಯಾಪಿಸಿರುವ ಕರುಣೆಗೆ ನಿಧಿಯಾದ ಶ್ರೀಹರಿಯು ವಸಿಷ್ಠರನ್ನು ಕುರಿತು. ''ಎಲೈ ಪ್ರೀತಿಪಾತ್ರನಾದ ನನ್ನ ಮಗುವೇ, ಬ್ರಾಹ್ಮಣಶ್ರೇಷ್ಠನಾದ ಮಕ್ಕಳಲ್ಲಿ ವಾತ್ಸಲ್ಯವುಳ್ಳ ವಸಿಷ್ಠ ಮಹರ್ಷಿಯೇ, ನಿನ್ನ ಮೊಮ್ಮಗನ ಕಮಲದಂತಿರುವ ಮುಖದಿಂದಲೇ ಈ ವೇದಮಂತ್ರವು ಹೊರಟಿತು. ಶಕ್ತಿಯಿಂದ ಹುಟ್ಟಿದ ನಿನ್ನ ಮೊಮ್ಮಗನು ನನಗೆ ಸಮಾನನಾಗುವನು. ಆದುದರಿಂದ ಶಾಂತಿ ಹೊಂದು. ಎಲೈ ಬ್ರಹ್ಮನ ಮಕ್ಕಳಲ್ಲಿ ಅತ್ಯಂತ ಶ್ರೇಷ್ಠನಾದ ವಸಿಷ್ಠ ಮಹರ್ಷಿಯೇ, ದುಃಖವನ್ನು ಬಿಟ್ಟು ಏಳು'' ಎಂದು ಹೇಳಿದನು. ಮತ್ತು ''ಈ ಗರ್ಭದಲ್ಲಿರುವ ಮಗುವು ರುದ್ರನಿಗೆ ಭಕ್ತನು, ರುದ್ರನ ಪೂಜೆಯಲ್ಲಿ ಆಸಕ್ತಿಯುಳ್ಳವನು. ರುದ್ರದೇವನ ಮಹಿಮೆಯಿಂದಲೇ ನಿನ್ನ ಕುಲವನ್ನು ಉದ್ಧರಿಸುವನು'' ಹೀಗೆ ವಸಿಷ್ಠರಿಗೆ ಹೇಳಿ ಕರುಣಾಶಾಲಿಯಾದ ಪುರುಷಶ್ರೇಷ್ಠನಾದ ನಾರಾಯಣ ಪರಮಾತ್ಮನು ಅಲ್ಲಿಯೇ ಅಂತರ್ಧಾನವಾದನು.

ಅನಂತರ ವಸಿಷ್ಠರು ಭಗವಂತನ ಮಾತಿನಿಂದ ಸಮಾಧಾನ ಹೊಂದಿದರು. ತಮಗೆ ಸಾಂತ್ವನ ಪರ ಮಾತುಗಳನ್ನು ಹೇಳಿ ಅದೃಶ್ಯನಾದ ಆ ಪರಮಾತ್ಮನಿಗೆ ಹಿಂದಿನಿಂದಲೇ

ನಮಸ್ಕರಿಸಿದರು. ಅನಂತರ ತಮ್ಮ ಸೊಸೆಯಾದ ಅದೃಶ್ಯಂತಿಯ ಉದರವನ್ನು ವಾತ್ಸಲ್ಯದಿಂದ ಮುಟ್ಟಿದರು. ಆಗ ಅವರಿಗೆ ಮತ್ತೆ ಮಗನ ನೆನಪಾಗಿ ''ಹಾ ಪುತ್ರ, ವೃದ್ಧರಾದ ನಿನ್ನ ತಾಯಿತಂದೆಗಳನ್ನು ಬಿಟ್ಟು ಎಲ್ಲಿಗೆ ಹೋದೆ ? ನಿನ್ನನ್ನು ಬಿಟ್ಟು ನಾನು ಹೇಗೆ ಬದುಕಲಿ ?'' ಎಂದು ದುಃಖಾರ್ತರಾಗಿ ಶೋಕ ಮಾಡಿದರು. ಅದನ್ನು ನೋಡಿ ವಸಿಷ್ಠರು ಮತ್ತೆ ಮತ್ತೆ ಮೃತನಾದ ತಮ್ಮ ಪುತ್ರನನ್ನು ನೆನೆದು ''ವತ್ಸ, ಕುಲೋದ್ಧಾರಕನಾದ ನಿನ್ನ ಮಗನನ್ನು ನೀನು ನೋಡುವದಿಲ್ಲವೇ? ನೀನು ಮಗನನ್ನು ನೋಡಲು ಮರಳಿ ಬಾರದಿದ್ದರೆ ನಾನು ಕೂಡ ನಿನ್ನ ತಾಯಿಯೊಂದಿಗೆ ನೀನು ಇದ್ದಲ್ಲಿ ಬಂದು ಬಿಡುತ್ತೇನೆ,'' ಎಂದು ಹೇಳುತ್ತ ಹೇಳುತ್ತ ದಂಪತಿಗಳಿಬ್ಬರೂ ದೀನರಾಗಿ ರೋದಿಸಿದರು. ಅರುಂಧತಿ ದೇವಿಯು ತನ್ನ ನಾಭಿ ಪ್ರದೇಶವನ್ನು ಕೈಗಳಿಂದ ಹೊಡೆದು ಶೋಕಮಾಡಿದಳು. ಅತ್ತೆ ಮಾವಂದಿರ ಕರುಣವಿಲಾಪವನ್ನು ಕೇಳಿ ಸೊಸೆ ಅದೃಶ್ಯಂತಿಯ ಹೊಟ್ಟೆಯಲ್ಲಿ ದುಃಖಾಗ್ನಿಯು ಭುಗಿಲೆದ್ದಿತು. ಅವಳು ಶೋಕಾತಿರೇಕದಿಂದ ತನ್ನ ಹೊಟ್ಟೆಹೊಟ್ಟೆಬಡಿದುಕೊಂಡು ನೆಲದ ಮೇಲೆ ಬಿದ್ದು ವಿಲಾಪಿಸಿದಳು. ಆಗ ವಸಿಷ್ಠ ಆರುಂಧತಿ ಇಬ್ಬರೂ ಬಹಳ ಸಂಕಟಪಟ್ಟು ಭಯ ಭ್ರಾಂತರಾಗಿದ್ದರೂ ಸೊಸೆಗೆ ಸಮಾಧಾನದ ಮಾತುಗಳನ್ನು ಹೇಳಿದರು.

**ವಸಿಷ್ಠ, ಅರುಂಧತಿ :-** ''ವಿವೇಕಶಾಲಿನಿಯಾದ ಅದೃಶ್ಯಂತಿಯೇ, ಜನ್ಮಾಂತರದ ಪುಣ್ಯದಿಂದ ನನ್ನ ಮಗನಾದ ಶಕ್ತಿ ಮುನಿಯಿಂದ ನಿನ್ನ ಗರ್ಭದಲ್ಲಿ ನಮ್ಮ ಕುಲೋದ್ಧಾರಕನು ಒಡಮೂಡಿದ್ದಾನೆ. ನೀನು ದುಃಖಾತಿರೇಕದಿಂದ ಹೊಟ್ಟೆಹೊಟ್ಟೆಬಡಿದು ಕೊಂಡರೆ ಆ ನಮ್ಮ ಕುಲದ ಕುಡಿಯು ನಾಶವಾಗಿ ಬಿಡುತ್ತದೆ.'' ಹೀಗೆ ಹೇಳಿ ಅರುಂಧತಿಯು ಅದೃಶ್ಯಂತಿಯ ಬಳಿಗೆ ಬಂದು ಅವಳ ಕಣ್ಣೀರಿನ ಕೋಡಿಯನ್ನು ತೊಡೆದು ಹೇಳಿದಳು.

**ಅರುಂಧತಿ :-** ''ನನ್ನ ಪ್ರೀತಿಯ ಸೊಸೆ ಮುಗ್ಧೆ ! ನಿನ್ನ ಹೊಟ್ಟೆಯಲ್ಲಿ ಹುಟ್ಟಲಿರುವ ಶಕ್ತಿಯ ಮಗನ ಮುಖದರ್ಶನದ ಆನಂದವನ್ನು ಅನುಭವಿಸಲು ವಸಿಷ್ಠ ಮಹರ್ಷಿಗಳು ತಾವು ತಮ್ಮ ಮರಣದ ನಿರ್ಧಾರವನ್ನು ಕೈಬಿಟ್ಟು ಮರಳಿ ಮನೆಗೆ ಬಂದಿದ್ದಾರೆ. ಆ ಮೊಮ್ಮಗನ ಮುಖವನ್ನು ನೋಡಲು ವಸಿಷ್ಠರು ಆತುರರಾದರೆ ನಾನು ಕಾತರಳಾಗಿರುವೆನು. ದುಃಖೋದ್ವೇಗದಿಂದ ನೀನು ನಿನ್ನ ಉದರಕ್ಕೆ ತಾಡನ ಮಾಡಿದರೆ ಆ ನಮ್ಮ ವಂಶಾಂಕುರವು ಕಮರಿ ಹೋದೀತು. ಆದುದರಿಂದ ನೀನು ನಮ್ಮ ಕುಲದ ಕಲ್ಯಾಣಕ್ಕಾಗಿ ನಿನ್ನ ಗರ್ಭವನ್ನು ಚೆನ್ನಾಗಿ ಕಾಪಾಡು.''

ಅನಂತರ ವಸಿಷ್ಠರು ತಾವೂ ಕೂಡ ಸೊಸೆಗೆ ಕಳಕಳಿಯಿಂದ ''ವತ್ಸೆ, ನೀನು ನನ್ನ ಪುತ್ರ ಶಕ್ತಿಯಿಂದ ನಿನ್ನ ಉದರದಲ್ಲಿ ಆಹಿತವಾದ ನಮ್ಮ ಬ್ರಹ್ಮರ್ಷಿ ಕುಲದ ಕುಡಿಯನ್ನು ಕಾಳಜಿಯಿಂದ ಕಾಪಾಡಬೇಕು. ಅದರಂತೆ ಮುಪ್ಪಿನಿಂದ ಹಣ್ಣಾದ ನಮ್ಮಿಬ್ಬರನ್ನು ರಕ್ಷಿಸುವದು ನಿನ್ನದೇ ಹೊಣೆಯಾಗಿರುತ್ತದೆ. ಹೀಗೆ ನಿನ್ನ ಕಂದ ಹಾಗೂ ನಿನ್ನ ಪತಿಯ ತಂದೆ ತಾಯಂದಿರನ್ನು ಸಂರಕ್ಷಿಸುವ ಭಾರವು ನಿನ್ನ ಮೇಲೆಯೇ ಇರುತ್ತದೆ. ಆದುದರಿಂದ ನೀನು ಸರ್ವಥಾ ದೇಹತ್ಯಾಗವನ್ನುಮಾಡಬೇಡ. ನೀನು ನಿನ್ನ ದೇಹವನ್ನು ಪೋಷಣೆ ಮಾಡಿಕೊಂಡರೆ ನಿನ್ನ ಮಗ ಅತ್ತೆ ಮಾವ ಎಲ್ಲರ ಪೋಷಣತೋಷಣ ಮಾಡಿದಂತಾಗುವದು.

**ಅದೃಶ್ಯಂತಿ :-** ''ಪೂಜ್ಯರೆ, ಮಹಾ ಮಹರ್ಷಿಗಳಾದ ತಾವು ನನಗೋಸ್ಕರ ಮತ್ತು ನನ್ನ ಸತ್ಪುತ್ರನಿಗೋಸ್ಕರ ಬದುಕಿ ಉಳಿಯುವದಾದರೆ ಮನೆಯಲ್ಲಿಯೇ ಇರುವದಾದರೆ ನಾನು

ಕೂಡ ನನ್ನ ದೇಹವನ್ನು ಕಾಪಾಡಿಕೊಂಡು ನಮ್ಮ ವಂಶದ ನಂದಾದೀಪವನ್ನು ಎಂದೂ ನಂದದಂತೆ ನೋಡಿಕೊಳ್ಳುತ್ತೇನೆ. ಆದರೆ ಮುನಿ ವರ್ಯರೆ, ಪತಿಯು ಮರಣ ಹೊಂದಿದ ಬಳಿಕ ಅವರ ಪತ್ನಿಯಾದ ನಾನು ಬದುಕಿ ಉಳಿಯುವದು ಅಮಂಗಳಕರ ಎಂಬುದರಲ್ಲಿ ಸಂದೇಹವಿಲ್ಲ. ನನ್ನ ಇಡೀ ಜೀವನವನ್ನೇ ಬೆಂಕಿಯಲ್ಲಿ ಬೇಯಲು ಇಟ್ಟಂತೆ ಆಗಿದೆ. ನನ್ನ ದುಃಖವು ಸಹನಾತೀತ. ನನ್ನ ಚಿಂತೆಯ ವರ್ಣನಾತೀತ. ಯಾರೇ ರಕ್ಷಕರು ಇದ್ದರೂ ಪತಿವಿರಹಿತಳಾದ ಸತಿಯು ದೀನೆ, ದುಃಖಿತೆ. ಪೂಜ್ಯರೆ, ಶೋಕ ವಿಕಲಳೂ ದುಃಖತಪ್ತಳೂ ಆದ ನನ್ನನ್ನು ತಾವೇ ರಕ್ಷಿಸಬೇಕು. ಪತ್ನಿಯು ಪತಿಯ ಅರ್ಧಾಂಗಿ ಎಂದು ಬಲ್ಲವರು ಹೇಳುತ್ತಾರೆ. ಅದು ಸುಳ್ಳು. ಈಗ ನನ್ನ ಪತಿ ಮೃತನಾದರೂ ಪಾಪಿಯಾದ ನಾನು ಅಕ್ಷತಳಾಗಿ ಸುರಕ್ಷಿತಳಾಗಿ ಉಳಿದಿದ್ದೇನೆ. ಪೂಜ್ಯರೆ, ನನ್ನ ಹೃದಯ ಕಲ್ಲಿನಂತೆ ಕಠೋರ. ಪ್ರಾಣಕ್ಕೆ ಸಮಾನನಾದ ಪತಿಯನ್ನು ಕಳೆದುಕೊಂಡು ನಾನು ಇನ್ನೂ ಸಾಯದೇ ಉಸಿರಾಡುತ್ತ ಬದುಕಿದ್ದೇನೆ. ಹಿರಿಯರಾದ ತಾವು ವಂಶಾಭಿವೃದ್ಧಿಗಾಗಿ ನಮ್ಮ ಋಷಿಕುವರನ ಕಲ್ಯಾಣಕ್ಕಾಗಿ ನೀನು ಬದುಕಿ ಗರ್ಭವನ್ನು ಕಾಪಾಡು ಎಂದು ಹೇಳಿದ್ದರಿಂದ ಬದುಕಿ ಉಳಿದಿದ್ದೇನೆ. ಮಗುವನ್ನು ಬೆಳೆಸುತ್ತೇನೆ.'' ಆಗ ವಸಿಷ್ಠ ಮುನಿಗಳು ಸೊಸೆಯ ಆಶ್ವಾಸನೆಯನ್ನು ಕೇಳಿ ಸಮಾಧಾನದಿಂದ ತಮ್ಮ ಆಶ್ರಮಕ್ಕೆ ಮರಳಿದರು. ವಸಿಷ್ಠ, ಅರುಂಧತಿ, ಅದೃಶ್ಯಂತಿ ಮೂವರು ತಮ್ಮ ವಾಸಸ್ಥಾನಕ್ಕೆ ಮರಳಿದರು. ಪರಮಪತಿವ್ರತೆಯಾದ ಅದೃಶ್ಯಂತಿಯು ತಮ್ಮ ಋಷಿವಂಶದ ಉದ್ಧಾರಕ್ಕಾಗಿ ತಮ್ಮ ಗರ್ಭವನ್ನು ಎಚ್ಚರದಿಂದ ಕಾಪಾಡತೊಡಗಿದಳು.

ಅನಂತರ ಅದೃಶ್ಯಂತಿಗೆ ಒಂಬತ್ತು ತಿಂಗಳು ತುಂಬಿದವು. ಹತ್ತನೆಯ ತಿಂಗಳಲ್ಲಿ ಅವಳು ಒಳ್ಳೆಯ ಕಾಂತಿಯಿಂದ ಕಂಗೊಳಿಸುವ ಒಳ್ಳೆ ಶೂರನೂ, ಧೀರನೂ, ಧೀಮಂತನೂ ಆದ ಸತ್ಪುತ್ರನನ್ನು ಹೆತ್ತಳು. ಹಿಂದೆ ಅರುಂಧತಿಯು ವಸಿಷ್ಠರಿಂದ ಶಕ್ತಿಯನ್ನು ಪಡೆದಂತೆ ಈಗ ಅದೃಶ್ಯಂತಿಯು ಶಕ್ತಿಯಿಂದ ತನ್ನಲ್ಲಿ ಆಹಿತವಾದ ತೇಜಸ್ಸಿನಿಂದ ಓರ್ವ ಸತ್ಪುತ್ರನನ್ನು ಹೆತ್ತಳು. ಅದಿತಿ ದೇವಿಯು ಪೂರ್ವಕಾಲದಲ್ಲಿ ಮಹಾವಿಷ್ಣುವನ್ನೂ, ಸ್ವಾಹಾದೇವಿಯು ಷಣ್ಮುಖನನ್ನೂ, ಅರಣಿಯು ಅಗ್ನಿಯನ್ನೂ ಪ್ರಸವಿಸುವಂತೆ ಶಕ್ತಿ ಪತ್ನಿಯಾದ ಅದೃಶ್ಯಂತಿಯು ಪರಾಶರರನ್ನು ಪ್ರಸವಿಸಿದಳು. ನೆಲದ ಮೇಲೆ ಶಕ್ತಿಯ ಪುತ್ರನು ಜನ್ಮ ತಾಳಿದ ಕೂಡಲೇ ಶಕ್ತಿ ಮಹರ್ಷಿಯು ದುಃಖ ಮುಕ್ತನಾಗಿ ಪಿತೃದೇವತೆಗಳ ಸ್ಥಾನವನ್ನು ಅಲಂಕರಿಸಿದನು.

ವಸಿಷ್ಠರ ಮೊಮ್ಮಗನೂ, ಶಕ್ತಿ ಮುನಿಯ ಮಗನೂ ಆದ ಪರಾಶರನು ಜನ್ಮ ತಾಳಲು ಪಿತೃ ದೇವತೆಗಳು ಆನಂದದಿಂದ ಗಾನ ಮಾಡಿದರು. ಸ್ವರ್ಗಸ್ಥರಾದ ಅವರ ಕುಲದ ಹಿಂದಿನ ಪಿತೃಗಳೆಲ್ಲರೂ ಕುಣಿದಾಡಿದರು. ಬ್ರಹ್ಮಜ್ಞಾನಿಗಳಾದ ಋಷಿಗಳು ಮುನಿಗಳು ಭೂಮಿಯಲ್ಲಿ ಹರ್ಷೋದ್ರೇಕದಿಂದ ನಲಿದಾಡಿದರು. ಮೋಡಗಳ ಮಧ್ಯಭಾಗದಿಂದ ಸೂರ್ಯನು ಭುವನಮಂಡಲವನ್ನೆಲ್ಲ ಬೆಳಗುತ್ತ ಹೊರಬಂದಂತೆ ಅದೃಶ್ಯಂತಿಯ ಉದರದಿಂದ ಸಾಕ್ಷಾತ್ ಬ್ರಹ್ಮದೇವರೇ ಪರಾಶರ ರೂಪದಿಂದ ಅವತರಿಸಿದರು.

ಆಗ ಅದೃಶ್ಯಂತಿಗೆ ಪುತ್ರ ಜನ್ಮದಿಂದ ಪರಮಾನಂದವೂ, ಮೃತ ಪತಿಯ ನೆನಪು ಮರುಕಳಿಸಿದಾಗ ದುಃಖವೂ ಇದೇ ರೀತಿಯಾಗಿ ಅರುಂಧತಿಗೆ ಮೊಮ್ಮಗನ ಉದಯದಿಂದ ಆನಂದವೂ, ಮಗನ ಮರಣ ಸ್ಮೃತಿಯಿಂದ ದುಃಖವೂ ಆಗುತ್ತಿತ್ತು. ಕಾಂತಿ, ಶಾಂತಿ,

ತೇಜಸ್ಸುಗಳನ್ನು ಒಟ್ಟುಗೂಡಿಸಿ ಇಟ್ಟಂತಿರುವ ಮಗನ ಮುಖವನ್ನು ಕಂಡು ಆ ತಾಯಿಗೆ ಎಷ್ಟೇ ಸಂತೋಷವಾದರೂ ಇಂಥ ಪುತ್ರ ರತ್ನವನ್ನು ನೋಡಲು ಪತಿಯೇ ಇಲ್ಲವಲ್ಲ ಎಂದು ದುಃಖಿಸಿ ಬಿಕ್ಕಳಿಸಿ ಅತ್ತು ನೆಲಕ್ಕೆ ಬೀಳುತ್ತಿದ್ದಳು. ಆದರೆ ಸೂರ್ಯನಂತೆ ತೇಜಸ್ವಿಯೂ, ಚಂದ್ರನಂತೆ ಕಾಂತಿಮಂತನೂ, ಬುಧನಂತೆ ಬುದ್ಧಿವಂತನೂ ಆದ ತನ್ನ ಮಗ ಪರಾಶರನನ್ನು ದೇವತೆಗಳೂ, ದಾನವರೂ, ಮಾನವರೂ, ಮುನಿಮಹರ್ಷಿಗಳೂ, ಆದರಿಸಿ, ಗೌರವಿಸಿ ಸತ್ಕರಿಸುವುದನ್ನು ಕಂಡು ಒಂದು ಕ್ಷಣ ಹೊತ್ತು ಪತಿ ಮರಣದ ದುಃಖವನ್ನು ಮರೆತು ಸಂತೋಷಪಡುತ್ತಿದ್ದಳು. ಇಷ್ಟಾದರೂ ಅವಳಿಗೆ ಪುತ್ರ ದರ್ಶನದ ಸಂತೋಷವು ಪರಾಕಾಷ್ಠೆಗೆ ತಲುಪಿದಾಗಲೂ ಪಕ್ಕನೆ ಅವಳಿಗೆ ಗಂಡನ ನೆನಪು ಬಂದು ಬಿಡುತ್ತಿತ್ತು. ಆಗ ಅವಳು ಕಣ್ಣಿಗೆ ಕಾಣದೆ ಸತ್ತು ಹೋಗಿದ್ದರೂ ತನ್ನ ಹೃದಯದ ಸಂಪುಟದಲ್ಲಿ ಅಚ್ಚಳಿಯದೇ ಅಚ್ಚೊತ್ತಿದಂತೆ ನಿಂತುಕೊಂಡ ಪತಿಯನ್ನು ಕುರಿತು ಮತ್ತೆ ಹಲುಬುತ್ತಿದ್ದಳು. ''ಪ್ರಭು, ದೀನ ದೀನಳಾದ ಈ ನಿಮ್ಮ ನೆಚ್ಚಿನ ಮಡದಿಯನ್ನು ದುಃಖದ ಕಾಡಿನಲ್ಲಿ ಬಿಟ್ಟು ಎಲ್ಲಿಗೆ ಹೋಗಿದ್ದಿರಿ? ಮರಿಸೂರ್ಯನಂತಿರುವ ಈ ನಿಮ್ಮ ಮಗನನ್ನು ಒಮ್ಮೆಯಾದರೂ ಕಣ್ಣು ತೆರೆದು ನೋಡಿರಿ, ಪರಮೇಶ್ವರನು ತನ್ನ ಪರಿವಾರದೊಂದಿಗೆ ಷಣ್ಮುಖನನ್ನು ನೋಡಿ ಸಂತೋಷಪಟ್ಟಂತೆ ನೀವು ನಿಮ್ಮ ಬ್ರಹ್ಮತೇಜೋಭಾಸುರನಾದ ಮಗನನ್ನು ನೋಡಿ ಸಂತೋಷಪಡಿರಿ.'' ಹೀಗೆ ಮತ್ತೆ ಮತ್ತೆ ಅತ್ತು ಗೋಗರೆದು ಸಂಕಟಪಡುತ್ತಿರುವ ಸೊಸೆಯನ್ನು ವಸಿಷ್ಠರು ಪರಿಪರಿಯಿಂದ ಸಂತೈಸಿ ತಿಳಿಹೇಳಿ ಸಮಾಧಾನ ಪಡಿಸಿದರು. ಸತ್ಕುಲ ಪ್ರಸೂತಳಾದ ಅದೃಶ್ಯಂತಿಯು ಮಹಾನುಭಾವನಾದ ತನ್ನ ಮಾವನಾದ ವಸಿಷ್ಠರ ಮಾತಿನಿಂದ ಶಾಂತಳೂ, ಸಮಾಹಿತ ಚಿತ್ತಳೂ ಆಗಿ ತನ್ನ ಮಗ ಪರಾಶರನನ್ನು ಪ್ರೀತಿಯಿಂದ ಸಂರಕ್ಷಿಸಿದಳು. ಅವಳ ಮಗ ತುಸು ದೊಡ್ಡವನಾದ ಬಳಿಕ ತನ್ನ ತಾಯಿಯು ಯಾವ ಆಭರಣ ಅಲಂಕಾರಗಳನ್ನೂ ತೊಡದೆ ಆಗಾಗ ಕಣ್ಣೀರಿನ ಕೋಡಿಯನ್ನು ಹರಿಸುತ್ತಿರುವದನ್ನು ಕಂಡು ತಾಯಿಯನ್ನು ಕೇಳಿದನು.

ಪರಾಶರ :- ''ತಾಯಿ, ನಿನ್ನ ಈ ಪವಿತ್ರವಾದ ದೇಹವು ಆಭರಣವಿಲ್ಲದೆ ಚಂದ್ರನಿಲ್ಲದ ರಾತ್ರಿಯಂತೆ ಶೋಭಿಸುವುದಿಲ್ಲ. ಹೀಗೆ ನೀನು ವಸ್ತ್ರ, ಒಡವೆ, ಅಲಂಕಾರಗಳನ್ನು ತ್ಯಜಿಸಲು ಕಾರಣವೇನು? ಪತಿ ಇಲ್ಲದ ಸತಿಯಂತೆ ನೀನು ವಸ್ತ್ರ ಒಡವೆ ಯಾವುದನ್ನು ಧರಿಸದೆ ಇರುವದಕ್ಕೆ ಕಾರಣವೇನು?

ಮುದ್ದು ಮಗನ ಮುಗ್ಧಮಾತುಗಳನ್ನೂ, ಮಾರ್ಮಿಕ ಪ್ರಶ್ನೆಗಳನ್ನೂ ಕೇಳಿ ಅದೃಶ್ಯಂತಿಯು ಯಾವ ಮಾತನ್ನೂ ಆಡಲಿಲ್ಲ. ಆಗ ಪರಾಶರನು ತನ್ನ ತಾಯಿ ಅದೃಶ್ಯಂತಿಯನ್ನು ಗಟ್ಟಿಯಾಗಿ ಹಿಡಿದು ದಿಟ್ಟತನದಿಂದ ''ತಾಯಿ, ಮಹಾತೇಜಸ್ವಿಯಾದ ನನ್ನ ತಂದೆಯು ಎಲ್ಲಿ? ಅದನ್ನು ನೀನು ನನಗೆ ಈಗಲೇ ಹೇಳಬೇಕು,'' ಎಂದು ಪಟ್ಟು ಹಿಡಿದು ಕೇಳಿದನು. ಆಗ ಅದೃಶ್ಯಂತಿಯು ಬಿಕ್ಕಿಸಿ ಬಿಕ್ಕಿಸಿ ಅತ್ತು ಕೊನೆಗೆ ''ಮಗು ನಿನ್ನ ತಂದೆಯು ರಾಕ್ಷಸರಿಂದ ಭಕ್ಷಿಸಲ್ಪಟ್ಟ'' ಎಂದು ಸಂಕಟದಿಂದ ಹೇಳಿ ದುಃಖದಿಂದ ನೆಲದ ಮೇಲೆ ಬಿದ್ದು ಬಿಟ್ಟಳು. ಮಗುವಿನ ಈ ಮಾರ್ಮಿಕ ಪ್ರಶ್ನೆಯಿಂದ ಅರುಂಧತಿ ವಸಿಷ್ಠರು ಶೋಕವಿಕಲರಾಗಿ ದುಃಖದಗ್ಧರಾಗಿ ನೆಲದ ಮೇಲೆ ಉರುಳಿದರು. ಹೀಗೆ ತನ್ನ ತಾಯಿ ಹಾಗೂ ಅಜ್ಜ ಅಜ್ಜಿಯರ ದುಃಖಾಂತ ಪ್ರಸಂಗವನ್ನು ನೋಡಿ ಪರಾಶರನು ಮುಂದೆ ಬಂದು ಧೈರ್ಯದಿಂದ ಹೇಳಿದನು.

**ಪರಾಶರ :-** "ತಾಯಿ, ಎಲ್ಲ ದೇವತೆಗಳಿಗೂ ಅಧೀಶ್ವರನಾದ ಆ ಮಹೇಶ್ವರನನ್ನು ನಾನು ಪೂಜಿಸುತ್ತೇನೆ. ಅವನನ್ನು ಕುರಿತು ಉಗ್ರ ತಪೋನುಷ್ಠಾನವನ್ನು ಮಾಡುತ್ತೇನೆ. ಅವನ ದಯೆಯಿಂದ ಕ್ಷಣಮಾತ್ರದಲ್ಲಿ ನಾನು ನಿನಗೆ ತಂದೆಯನ್ನು ತಂದು ತೋರಿಸುತ್ತೇನೆ." ಎಂದು ಹೇಳಿದನು. ಆಗ ಅದೃಶ್ಯಂತಿಯ ಮಗನ ಮಾತು ನಿಜವೆಂದು ನಂಬಿ "ಪುತ್ರನೇ, ನೀನು ಪರಮೇಶ್ವರನನ್ನು ಪೂಜಿಸಿ ಹಾಗೆಯೇ ಮಾಡು" ಎಂದು ಹೇಳಿದಳು. ತಾಯಿಯ ಮಾತಿನಿಂದ ಉತ್ಸಾಹಿತನಾದ ಪರಾಶರನು ತನ್ನ ಅಜ್ಜ ಅಜ್ಜಿಯರಿಗೂ ಕೇಳುವಂತೆ ಗಟ್ಟಿಯಾಗಿ ಹೇಳಿದನು. "ನನ್ನ ತಂದೆಯನ್ನು ಕೊಂದ ರಾಕ್ಷಸರನ್ನೆಲ್ಲ ಕ್ಷಣಮಾತ್ರದಲ್ಲಿ ಸಂಹರಿಸುತ್ತೇನೆ. ಸ್ಥಾವರ ಜಂಗಮಾತ್ಮಕವಾದ ಎಲ್ಲ ಲೋಕಗಳನ್ನು ಸುಟ್ಟುಹಾಕುತ್ತೇನೆ." ಎಂದು ಬಾಲ್ಯ ಸಹಜವಾದ ಅವನ ಕೋಪೋದ್ರಿಕ್ತ ನುಡಿಗಳನ್ನು ಕೇಳಿ ವಸಿಷ್ಠರು ಶಾಂತ ಸೌಮ್ಯ ಸ್ವರದಲ್ಲಿ ಮೊಮ್ಮಗನನ್ನು ಸಂತೈಸುತ್ತ ಹೇಳಿದರು.

**ವಸಿಷ್ಠ :-** "ವತ್ಸ, ನಿನ್ನ ಸಂಕಲ್ಪವೇನೋ ಶ್ಲಾಘ್ಯ. ಆದರೆ, ಅದು ಯೋಗ್ಯವಲ್ಲ. ಸ್ಥಾವರ ಜಂಗಮಾತ್ಮಕವಾದ ಲೋಕವನ್ನೆಲ್ಲ ನಾಶಮಾಡುವ ನಿನ್ನ ಸಂಕಲ್ಪವಂತೂ ಅಶ್ಲಾಘ್ಯ ಮತ್ತು ಅಯೋಗ್ಯ ಎರಡೂ ಆಗಿದೆ. ಮೂರು ಲೋಕಗಳನ್ನು ನಾಶಮಾಡುವ ನಿನ್ನ ನಿರ್ಧಾರ ಸರಿಯಾದುದಲ್ಲ. ಮೂರು ಲೋಕವು ನಿನಗೇನು ತಪ್ಪು ಮಾಡಿದೆ? ನಿನ್ನ ತಂದೆಯನ್ನು ಕೊಂದ ರಾಕ್ಷಸರ ನಾಶಕ್ಕಾಗಿ ನೀನು ಪರಮೇಶ್ವರನ ಪೂಜೆಯನ್ನು ಮಾಡು" ವಸಿಷ್ಠರ ಅಪ್ಪಣೆಯ ಪ್ರಕಾರ ಶಕ್ತಿಯ ಮಗನಾದ ಪರಾಶರನು ರಾಕ್ಷಸರ ನಾಶಕ್ಕೆ ಮಾತ್ರ ಸಂಕಲ್ಪ ಮಾಡಿದನು.

ಪರಾಶರನು ವಸಿಷ್ಠರನ್ನೂ ಅರುಂಧತಿಯನ್ನೂ ನಮಸ್ಕರಿಸಿ ಋಷಿಶ್ರೇಷ್ಠನಾದ ವಸಿಷ್ಠರ ಸಮೀಪದಲ್ಲಿ ಮಣ್ಣಿನಿಂದ ತಾತ್ಕಾಲಿಕವಾದ ಪಾರ್ಥಿವ ಲಿಂಗವನ್ನು ಸ್ಥಾಪಿಸಿದನು. ಮಹೇಶ್ವರ ಸಂಬಂಧಿಯಾದ ಪವಿತ್ರವಾದ ಶಿವಸೂಕ್ತದಿಂದ ರುದ್ರನನ್ನುಮಾಡಿ ಶಿವಪೂಜೆಯನ್ನು ಪ್ರಾರಂಭಿಸಿದನು. ಅವನು ನೀಲರುದ್ರ ಮುಂತಾದ ಶಿವ ಪ್ರಕಾಶಕವಾದ ಮಂತ್ರವನ್ನೂ ವಾಮೀಯ, ಪವಮಾನ ಮುಂತಾದ ಪೂಜ್ಯವಾದ ರುದ್ರ ಸೂಕ್ತಗಳನ್ನೂ ಭಕ್ತಿ ಪುರಸ್ಸರವಾಗಿ ಜಪಿಸಿ ಪೂಜಿಸಿದನು.

ಪರಾಶರನು ಅಥರ್ವವೇದದ ಶಿರಸ್ಸಾದ ಲಿಂಗಸೂಕ್ತವನ್ನು ಹೇಳಿ ಸ್ವಾಮಿಯಾದ ರುದ್ರನನ್ನು ಜಪಿಸಿ ಎರಡು ವಿಧವಾದ ಅರ್ಘ್ಯವನ್ನು ಕೊಟ್ಟು ಭಗವಂತನನ್ನು ಶಾಸ್ತ್ರೋಕ್ತಕ್ರಮದಲ್ಲಿ ಪೂಜಿಸಿದನು. ಅವನು ಭಗವಂತನನ್ನು ಕುರಿತು. "ಓ ಸ್ವಾಮಿಯೇ, ನನ್ನ ತಂದೆಯನ್ನು ರಾಕ್ಷಸನಾದ ರುಧಿರನು ತಿಂದು ಹಾಕಿದನು. ಬಹಳ ತೇಜಸ್ವಿಯಾದ ತಂದೆಯೊಡನೆ ಅವನ ತಮ್ಮಂದಿರೂ ತಿಂದು ಹಾಕಲ್ಪಟ್ಟರು. ನಮ್ಮ ತಂದೆಯನ್ನು ಅವನ ತಮ್ಮಂದಿರೊಂದಿಗೆ ನೋಡಲು ನನಗೆ ಆಸೆ ಇದೆ." ಹೀಗೆ ಹೇಳಿ ಭಗವಂತನನ್ನು ಪುನಃ ಪುನಃ ನಮಸ್ಕಾರ ಮಾಡಿದನು. ಪರಾಶರನು 'ಭಗವನ್ ರುದ್ರ ರುದ್ರ' ಎಂದು ಸ್ವಾಮಿಯನ್ನು ಪೂಜಿಸುತ್ತಾ ತಂದೆಯನ್ನು ನೆನೆದು ಅಳುತ್ತಾ ಭೂಮಿಯ ಮೇಲೆ ಬಿದ್ದನು. ಸ್ವಾಮಿಯಾದ ಶಿವನು ಇವನನ್ನು ನೋಡಿ ತನ್ನ ಪತ್ನಿಯಾದ ಪಾರ್ವತಿಯೊಂದಿಗೆ ಹೀಗೆ ಹೇಳಿದನು.

**ಶಿವ :-** ''ಮಹಾಭಾಗ್ಯಶಾಲಿನಿಯಾದ ಉಮಾದೇವಿಯೇ, ದುಃಖದಿಂದ ಕಣ್ಣೀರಿಡುತ್ತಿರುವ ಮತ್ತು ನನ್ನ ಪೂಜೆ ಮತ್ತು ಜಪಗಳಲ್ಲಿ ಆಸಕ್ತನಾದ ಈ ಹುಡುಗನನ್ನು ನೋಡು.'' ಆಗ ಪಾರ್ವತಿಯು ಸಂಕಟ ಪಡುತ್ತಿರುವ ಮತ್ತು ಕಣ್ಣೀರಿಡುತ್ತಿರು ಪರಾಶರನನ್ನು ನೋಡಿ ಹೀಗೆಂದಳು.

**ಪಾರ್ವತಿ :-** ಶಿವನೆ, ಈ ಬಾಲನ ಇಷ್ಟಾರ್ಥಗಳನ್ನೆಲ್ಲವನ್ನೂ ದಯವಿಟ್ಟು ಸಲ್ಲಿಸಿ ಇವನಿಗೆ ಅನುಗ್ರಹವನ್ನು ಕರುಣೆಯಿಂದಮಾಡಿರಿ.'' ಶಿವನು ತನ್ನ ಪ್ರಿಯಪತ್ನಿಯ ಮಾತನ್ನು ಕೇಳಿ 'ಹಾಗೆಯೇ ಆಗಲಿ' ಎಂದು ತನ್ನ ಸ್ವರೂಪವನ್ನು ನೋಡಲು ಬೇಕಾದ ದಿವ್ಯ ದೃಷ್ಟಿಯನ್ನು ಬಾಲಕನಿಗೆ ಕೊಡುವೆನೆಂದು ಹೇಳಿ, ಪರಮೇಶ್ವರನು ಬ್ರಹ್ಮಾ, ವಿಷ್ಣು, ರುದ್ರರೇ ಮೊದಲಾದ ದೇವತೆಗಳೊಡನೆ ಪರಾಶರನಿಗೆ ದರ್ಶನವನ್ನು ಕೊಟ್ಟನು.

ಶ್ರೀ ಪರಮೇಶ್ವರನ ದರ್ಶನವನ್ನು ಪಡೆದು ಬಾಲಕನು ಸಂತೋಷಗೊಂಡು ಶಿವನ ಪಾದಗಳಿಗೆ ನಮಸ್ಕಾರಮಾಡಿದನು. ಪಾರ್ವತಿ, ನಂದೀಶ್ವರ ಇವರ ಚರಣಗಳಿಗೆ ಎರಗಿ ತನ್ನ ಜೀವಿತವು ಸಾರ್ಥಕವಾಯಿತೆಂದು ಬ್ರಹ್ಮನೇ ಮೊದಲಾದ ದೇವತೆಗಳನ್ನು ಕುರಿತು ಹೇಳಿದನು. ಪರಮೇಶ್ವರನ ದರ್ಶನವಾದುದರಿಂದ ದೇವದಾನವರಿಗಿಂತಲೂ ತಾನು ಶ್ರೇಷ್ಠನಾದವನೆಂದು ಭಾವಿಸಿದನು. ಕ್ಷಣಮಾತ್ರದಲ್ಲಿಯೇ ಪರಾಶರನು ತನ್ನ ತಂದೆಯನ್ನೂ ಅವನ ತಮ್ಮಂದಿರನ್ನೂ ಆಕಾಶದಲ್ಲಿದ್ದುದನ್ನು ಕಂಡನು. ಸೂರ್ಯಮಂಡಲಕ್ಕೆ ಸಮಾನವಾಗಿ ವಿಸ್ತಾರವಾಗಿಯೂ ಪ್ರಕಾಶಮಾನವಾಗಿಯೂ ಇದ್ದ ವಿಮಾನದಲ್ಲಿ ತಂದೆಯನ್ನೂ ಅವನ ತಮ್ಮಂದಿರೊಡನೆ ಇದ್ದುದನ್ನು ಕಂಡು ನಮಸ್ಕಾರ ಮಾಡಿ ಸಂತೋಷಪಟ್ಟನು. ಆಗ ಧರ್ಮವೇ ಧ್ವಜವಾಗಿ ಉಳ್ಳ ಸ್ವಾಮಿಯೂ, ಪತ್ನಿ ಸಮೇತನೂ, ಗಣಾಧಿಪತಿಗಳಿಂದ ಕೂಡಿದವನೂ ಆದ ಪರಮೇಶ್ವರನು ಪುತ್ರನನ್ನು ನೋಡಬೇಕೆಂಬ ಕುತೂಹಲವುಳ್ಳ ವಸಿಷ್ಠರ ಮಗನಾದ ಶಕ್ತಿಯನ್ನು ಕುರಿತು ಇಂತೆಂದನು.

**ಪರಮೇಶ್ವರ :-** ''ಶಕ್ತಿಯೆ ನಿನ್ನ ಆನಂದಬಾಷ್ಪವನ್ನು ಸುರಿಸುತ್ತಿರುವ ನಿನ್ನ ಮಗನಾದ ಪರಾಶರನನ್ನೂ ನಿನ್ನ ಪತ್ನಿಯಾದ ಅದೃಶ್ಯಂತಿಯನ್ನೂ, ನಿನ್ನ ತಂದೆಯಾದ ವಸಿಷ್ಠನನ್ನೂ, ಸಾಕ್ಷಾದ್ದೇವತೆಗೆ ಸಮಳಾದ ಮಹಾಭಾಗ್ಯಶಾಲಿನಿಯಾದ ಅರುಂಧತಿ ದೇವಿಯನ್ನೂ ನೋಡು. ಶಕ್ತಿಯೆ ನಿನ್ನ ತಂದೆ ತಾಯಿಯರನ್ನು ನಮಸ್ಕರಿಸು'' ಎಂದನು. ಆಗ ಶಕ್ತಿಯು ಪರಮೇಶ್ವರನನ್ನೂ ಪಾರ್ವತಿಯನ್ನೂ ಶ್ರೇಷ್ಠನಾದ ವಸಿಷ್ಠರನ್ನೂ, ಮಂಗಳಕರಳೂ, ಮಹಾಪತಿವ್ರತೆಯೂ ಆದ ತಾಯಿಗೂ ನಮಸ್ಕರಿಸಿ ತನ್ನ ಮಗನಾದ ಪರಾಶರನನ್ನು ಕುರಿತು ಇಂತೆಂದನು.

**ಶಕ್ತಿ ಮುನಿ:-** ಮಹಾತೇಜಸ್ವಿಯಾದ, ಬ್ರಾಹ್ಮಣಶ್ರೇಷ್ಠನಾದ, ಮಗನಾದ ಪರಾಶರನೆ, ಮಹಾತ್ಮನಾದ ನೀನು ಗರ್ಭದಲ್ಲಿರುವಾಗಲೇ ನಾನು ರಕ್ಷಿಸಲ್ಪಟ್ಟೆನು. ಈಶ್ವರಾಜ್ಞೆಯಿಂದ ಅಣಿಮಾದಿಮಹಾಪ್ರಭಾವ ಶಾಲಿಯಾದ ಗುಣಗಳಿಂದ ಕೂಡಿದ ನಿನ್ನನ್ನು ನಾನು ನೋಡಿದ ಹಾಗಾಯಿತು. ನನ್ನ ತಾಯಿ ತಂದೆಗಳಾದ ವಸಿಷ್ಠ ಅರುಂಧತಿಯರನ್ನೂ, ನನ್ನ ಪತ್ನಿಯಾದ ಅದೃಶ್ಯಂತಿಯನ್ನೂ ನೀನು ಹೀಗೆಯೇ ರಕ್ಷಿಸಬೇಕು. ನನ್ನ ವಂಶೋದ್ಧಾರವೇ ನಿನ್ನಿಂದಾಯಿತು. ಪುತ್ರರಿಂದಲೇ ತಂದೆಯು ಪ್ರಪಂಚದಲ್ಲಿ ಸರ್ವಶ್ರೇಷ್ಠನಾಗುವನು ಎಂಬ ಸತ್ಪುರುಷರ ಮಾತು ಈಗ ನಿಜವಾಯಿತು. ಜಗತ್ತಿಗೆ ಸ್ವಾಮಿಯಾದ ಈಶ್ವರನನ್ನು ಕುರಿತು ಬೇಕಾದ ವರವನ್ನು ಬೇಡು. ನಾನಿನ್ನು ಪರಮೇಶ್ವರನನ್ನು ವಂದಿಸಿ ತೆರಳುವೆನು.'' ಈ ರೀತಿಯಾಗಿ ಶಕ್ತಿ ಮುನಿಯು ಮಗನಿಗೆ ಹೇಳಿ ಶಿವನನ್ನು ನಮಸ್ಕರಿಸಿದನು. ತನ್ನ

ಹೆಂಡತಿಯನ್ನು ಆ ಸಭೆಯಲ್ಲಿ ನೋಡಿ ಹೊರಟು ಹೋದನು. ಶಕ್ತಿಪುತ್ರನಾದ ಪರಾಶರನು ತಂದೆಯು ಪ್ರಯಾಣ ಮಾಡಿದ ಬಳಿಕ ಶಂಕರನನ್ನು ಪೂಜಿಸಿ ಚಂದ್ರಶೇಖರನಾದ ಪರಮೇಶ್ವರನನ್ನು ಮೆಚ್ಚಿಸುವ ಮಾತುಗಳಿಂದ ಸ್ತೋತ್ರಮಾಡಿದನು. ಪ್ರೀತನಾದ ಪರಮೇಶ್ವರನು ಪರಾಶರನಿಗೆ ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನನಾದನು. ಪಾರ್ವತೀ ಸಮೇತನಾದ ಪರಮೇಶ್ವರನು ತೆರಳಲು ಮಂತ್ರಜ್ಞನಾದ ಪರಾಶರನು ಮಂತ್ರೋಚ್ಚಾರಣೆಮಾಡಿ ಪರಮೇಶ್ವರನನ್ನು ನಮಸ್ಕರಿಸಿ ರಾಕ್ಷಸರ ಕುಲವನ್ನೆಲ್ಲವನ್ನೂ ರಾಕ್ಷಸ ಸಂಹಾರ ಎಂಬ ಹಸಿತ್ರದಿಂದ ನಿಮಿಷ ಮಾತ್ರದಲ್ಲಿಯೇ ಸುಟ್ಟು ಹಾಕಲು ಉದ್ಯುಕ್ತನಾದನು. ಆಗ ವಸಿಷ್ಠರು ಅವನಿಗೆ ಹೇಳಿದರು.

**ವಸಿಷ್ಠ** :- ಪರಾಶರನೇ, ಕೋಪವು ಸಾಕು. ಕೋಪವನ್ನು ಬಿಟ್ಟುಬಿಡು. ನಿಮ್ಮ ತಂದೆಗೆ ರಾಕ್ಷಸರು ತಪ್ಪನ್ನು ಮಾಡಿದರು. ಈ ರೀತಿಯಲ್ಲಿ ಅವನ ಹಣೆಯಲ್ಲಿ ಬರೆದಿತ್ತು. ಬುದ್ಧಿವಂತರು ಕೋಪಿಸುವುದಿಲ್ಲ. ಕೇವಲ ಮೂಢರೇ ಕೋಪಿಸಿಕೊಳ್ಳುವರು. ಮನುಷ್ಯರು ತಮ್ಮ ಪೂರ್ವಾರ್ಜಿತವಾದ ಕರ್ಮ ಸಮೂಹದ ಫಲವನ್ನು ಒಂದಲ್ಲೊಂದು ರೀತಿಯಲ್ಲಿ ಅನುಭವಿಸಲೇಬೇಕು. ಕೋಪವು ಕೀರ್ತಿಯನ್ನೂ ತಪಸ್ಸನ್ನೂ ಹಾಳುಮಾಡುತ್ತದೆ. ಆದ್ದರಿಂದ ತಪ್ಪಿತಸ್ಥರಲ್ಲದ ರಾಕ್ಷಸರನ್ನು ನಾಶಮಾಡುವುದನ್ನು ನಿಲ್ಲಿಸು. ಈ ರಾಕ್ಷಸ ನಾಶರೂಪವಾದ ಯಾಗವನ್ನು ಕೊನೆಗಾಣಿಸು. ಸತ್ಪುರುಷರು ಯಾವಾಗಲೂ ಶಾಂತಿಗುಣವುಳ್ಳವರಾಗಿರುತ್ತಾರೆ.''

ವಸಿಷ್ಠರ ಈ ಮಾತಗಳನ್ನು ಕೇಳಿದ ಪರಾಶರನು ರಾಕ್ಷಸರ ನಾಶಕಾರಣವಾದ ಯಾಗವನ್ನು ಕೊನೆಗಾಣಿಸಿದನು. ವಸಿಷ್ಠರು ಇದರಿಂದ ಸಂತುಷ್ಟರಾದರು. ಆಗ ಬ್ರಹ್ಮನ ಮಗನಾದ ಪುಲಸ್ತ್ಯನು ಆ ಯಾಗಶಾಲೆಗೆ ಬಂದನು. ವಸಿಷ್ಠರು ಅರ್ಘ್ಯ ಮತ್ತು ಆಸನಗಳನ್ನು ಕೊಟ್ಟು ಪುಲಸ್ತ್ಯರನ್ನು ಸತ್ಕರಿಸಿದರು. ಪುಲಸ್ತ್ಯರು ಪರಾಶರನನ್ನು ಕುರಿತು ಇಂತೆಂದರು.

**ಪುಲಸ್ತ್ಯ** :- ''ರಾಕ್ಷಸರಲ್ಲಿ ಬಹಳ ದ್ವೇಷವಿದ್ದರೂ ಗುರುಗಳಾದ ವಸಿಷ್ಠರ ಅಪ್ಪಣೆಯನ್ನು ನೀನು ಮೀರಲಿಲ್ಲ. ಆದ್ದರಿಂದ ನೀನು ಸಕಲಶಾಸ್ತ್ರ ಪಾರಂಗತನಾಗುವೆ. ಬಹಳ ಕೋಪವಿದ್ದರೂ ರಾಕ್ಷಸ ವಂಶವನ್ನು ನಾಶಮಾಡದೇ ಇರುವದರಿಂದ ಈ ಮಹಾಫಲವು ನಿನಗೆ ಪ್ರಾಪ್ತವಾಗುವುದು. ನಿನಗೆ ಇನ್ನೂ ಒಂದು ವರವನ್ನು ಕೊಡುವೆನು. ಪುರಾಣಗಳೆಂಬ ಶ್ರೇಷ್ಠವಾದ ಗ್ರಂಥಗಳನ್ನು ಬರೆಯುವ ಭಾಗ್ಯವೂ ನಿನಗೆ ಲಭಿಸುವುದು. ನಿನಗೆ ದೇವತೆಗಳ ರಹಸ್ಯವೆಲ್ಲವೂ ತಿಳಿಯುವುದು. ಒಳ್ಳೆಯಕರ್ಮಗಳನ್ನು ಮಾಡುವ ವಿಷಯದಲ್ಲಿಯೂ ಮತ್ತು ಅಶುದ್ಧವಾದ ಕರ್ಮಗಳನ್ನು ಬಿಡುವ ವಿಷಯದಲ್ಲಿಯೂ ನಿನಗೆ ನಿಷ್ಕೃಷ್ಟವಾದ ಜ್ಞಾನವು ನನ್ನ ಅನುಗ್ರಹದಿಂದ ತಪ್ಪದೇ ಉಂಟಾಗುವುದು.'' ವಸಿಷ್ಠ ಮಹರ್ಷಿಗಳೂ ಸಹ ಪುಲಸ್ತ್ಯರು ಹೇಳಿದ ಹಾಗೆಯೇ ಹೇಳಿ ಪರಾಶರನಿಗೆ ಅನುಗ್ರಹಿಸಿದರು. ಪುಲಸ್ತ್ಯ ಹಾಗೂ ವಸಿಷ್ಠರ ಅನುಗ್ರಹದಿಂದ ಪರಾಶರನು ವಿಷ್ಣು ಸಂಬಂಧವಾದ ಪುರಾಣಗಳನ್ನು ರಚನೆ ಮಾಡಿದನು. ಈ ಸಾತ್ವಿಕ ರಾಜಸ ತಾಮಸ ಎಂಬ ಮೂರು ವಿಧವಾದ ಪುರಾಣಗಳು ಸರ್ವಸಿದ್ಧಿಯನ್ನುಂಟು ಮಾಡುವವುಗಳಾಗಿಯೂ, ಜ್ಞಾನರಾಶಿಯಿಂದಲೂ ಪ್ರಕಾಶಿಸುತ್ತವೆ. ಪುರಾಣಗಳಲ್ಲಿ ನಾಲ್ಕನೆಯ ಭಾಗವೂ ವೇದಾರ್ಥಗಳನ್ನೊಳಗೊಂಡದ್ದೂ, ಆರುಸಹಸ್ರ ಶ್ಲೋಕವುಳ್ಳದ್ದೂ ಆದ ಪುರಾಣಭಾಗವನ್ನು ಪರಾಶರನು ರಚಿಸಿದನು.

*ಲಿಂಗಮಹಾಪುರಾಣ ಪೂರ್ವಾರ್ಧದ ವಸಿಷ್ಠರವಂಶವಿಚಾರ*
*ಎಂಬ ಅರವತ್ತನಾಲ್ಕನೆಯ ಅಧ್ಯಾಯ ಮುಗಿದುದು*

**ಋಷಿಗಳು :-** ವಂಶಗಳನ್ನು ತಿಳಿದಿರುವವರಲ್ಲಿ ಶ್ರೇಷ್ಠನಾದ ಸೂತ ಮಹರ್ಷಿಯೆ, ರೋಮಾಂಚನವನ್ನುಂಟುಮಾಡುವ ಸೂರ್ಯನ ವಂಶವನ್ನೂ ಚಂದ್ರನ ವಂಶವನ್ನೂ ಸಂಕ್ಷೇಪವಾಗಿ ತಿಳಿಸಬೇಕು.

**ಸೂತ :-** ಕಶ್ಯಪರ ಧರ್ಮಪತ್ನಿಯಾದ ಅದಿತಿಯು, ಆದಿತ್ಯನೆಂಬ ಮಗನನ್ನು ಪಡೆದಳು. ಆ ಆದಿತ್ಯನಿಗೆ 'ಸಂಜ್ಞಾ' ಎಂಬ ಮುಖ್ಯಪತ್ನಿಯೂ, ರಾಜ್ಞೀ, ಪ್ರಭಾ, ಛಾಯೆ ಎಂದು ಮೂರು ಜನ ಬೇರೆ ಹೆಂಡತಿಯರೂ ಇದ್ದರು. ತ್ವಷ್ಟ್ರುವಿನ ಮಗಳಾದ ಸಂಜ್ಞಾ ಎಂಬುವವಳು ಸೂರ್ಯನಿಂದ ಶ್ರೇಷ್ಠನಾದ ಮನುವೆಂಬ ಮಗನನ್ನು ಪಡೆದಳು. ರಾಜ್ಞಿಯು ಯಮನನ್ನೂ, ಯಮುನೆಯನ್ನೂ ಪಡೆದಳು. ಪ್ರಭೆಯು ರೈವತನನ್ನು ಪಡೆದಳು. ಛಾಯೆಯು ಪ್ರಭಾತನನ್ನು ಪಡೆದಳು. ಸಂಜ್ಞೆಯು ಸೂರ್ಯನಿಂದ ಸಾವರ್ಣಿ ಎಂಬುವವನ್ನೂ ಪಡೆದಳು. ಅನಂತರ ಅವಳು ಶನಿಯನ್ನೂ, ತಪತಿಯನ್ನೂ, ವಿಷ್ಟಿ ಎಂಬವಳನ್ನೂ ಕ್ರಮವಾಗಿ ಪಡೆದಳು. ಛಾಯೆಯು ತನ್ನ ಮಗನಿಗಿಂತಲೂ ಮನುವಿನಲ್ಲಿ ವಿಶೇಷವಾದ ಪ್ರೀತಿಯನ್ನು ತೋರಿಸಿದಳು. ಮೊದಲನೆಯ ಮನುವು ಇದನ್ನು ಕಂಡು ಸಹಿಸಲಿಲ್ಲ. ಯಮನು ಕೋಪದಿಂದ ಕಿಡಿಕಿಡಿಯಾದನು. ಅವನು ತನ್ನ ಬಲಗಾಲಿನಿಂದ ಅವಳನ್ನು ಹೊಡೆದನು. ಯಮನಿಂದ ಹೊಡೆಯಲ್ಪಟ್ಟ ಛಾಯೆಯು ಬಹಳ ಸಂಕಟಪಟ್ಟಳು. ಛಾಯೆಯ ಶಾಪದಿಂದ ಯಮನ ಒಂದು ಉತ್ತಮವಾದ ಕಾಲು ಯಾವಾಗಲೂ ರಸಿಕೆಯನ್ನು ಜಿನಗತಕ್ಕದ್ದಾಗಿಯೂ, ಕೊಳೆತು ಕೆಟ್ಟರಕ್ತದಿಂದ ಪೂರ್ಣವಾಗಿಯೂ, ಕ್ರಿಮಿಗಳು ಯಾವಾಗಲೂ ವಾಸಮಾಡುವ ಹಾಗೂ ಆಯಿತು. ಆದ್ದರಿಂದ ಯಮನು ಗೋಕರ್ಣಕ್ಕೆ ಬಂದು ಇನ್ನೂರು ವರ್ಷಗಳ ಕಾಲ ಗಾಳಿಯನ್ನು ಮಾತ್ರ ಸೇವಿಸುತ್ತ ಮಹಾದೇವನನ್ನು ಆರಾಧಿಸಿದನು. ಈಶ್ವರನ ಅನುಗ್ರಹದಿಂದ ಇವನು ಉತ್ತಮನಾದ ಲೋಕಪಾಲನಾದನು. ಇವನು ಪಿತೃದೇವತೆಗಳಿಗೆ ಅಧಿಪತಿಯೂ ಆದನು. ಛಾಯಾ ಶಾಪದಿಂದಲೂ ಬಿಡುಗಡೆ ಹೊಂದಿದನು.

ಪರಮೇಶ್ವರನಾದ ಶಿವನ ಪ್ರಸಾದದಿಂದ ತ್ವಾಷ್ಟ್ರಿಯು ತೇಜಸ್ವಿಯಾದ ಸೂರ್ಯನಪ್ರಭೆಯನ್ನು ಸಹಿಸಲಾರದೆ ತನ್ನ ದೇಹದಿಂದ ಛಾಯಾ ಎಂಬುವಳನ್ನು ಸೃಜಿಸಿದಳು. ತಾನು ಬಡವಾಗ್ನಿಯ ರೂಪವನ್ನು ತಾಳಿ ತಪಸ್ಸನ್ನು ಆಚರಿಸಿದಳು. ಛಾಯಾ ಪತಿಯಾದ ಸೂರ್ಯನು ಕೆಲವು ಕಾಲದ ಮೇಲೆ ಸಂಜ್ಞೆಯು ತಪಸ್ಸನ್ನು ಮಾಡುತ್ತಿರುವುದನ್ನು ತಿಳಿದು ಕುದುರೆಯ ರೂಪದಿಂದ ಬಡಬಾಗ್ನಿಯೊಡನೆ ಪ್ರವೇಶಿಸಿದನು. ಆಗ ತ್ವಷ್ಟುವಿನ ಮಗಳಾದ ಬಡವಾ ರೂಪದಿಂದಿದ್ದ ಸಂಜ್ಞೆಯು ಸೂರ್ಯನಿಂದ ವೈದ್ಯಶ್ರೇಷ್ಠರಾದ ಅಶ್ವಿನೀ ಕುಮಾರರನ್ನು ಪಡೆದಳು. ಆಗ ಸಂಜ್ಞೆಯ ತಂದೆಯೂ, ಮಹಾತ್ಮನೂ ಆದ ತ್ವಷ್ಟುವು ಸೂರ್ಯಮಂಡಲವನ್ನು ರಾಟಿಯಲ್ಲಿಟ್ಟು ತಿರುಗಿಸಿ ತೇಜಸ್ಸನ್ನು ಕಡಿಮೆಮಾಡಿ ಚಕ್ರವನ್ನು ನಿರ್ಮಾಣಮಾಡಿದನು. ರುದ್ರನ

ಅನುಗ್ರಹದಿಂದ ಈ ಮಂಗಳಕರವಾದ ವಿಷ್ಣುಚಕ್ರವು ಸೃಷ್ಟಿಯಾಯಿತು. ಕಾಲಾಗ್ನಿಗೆ ಸಮಾನವಾದ ಸುದರ್ಶನಚಕ್ರವನ್ನು ಪೂಜ್ಯನಾದ ಶ್ರೀಕೃಷ್ಣನು ಹೊಂದಿದನು. ಮೊದಲನೆಯ ಮನುವಿಗೆ ತಂದೆಗೆ ಸಮಾನರಾದ ಒಂಬತ್ತು ಮಕ್ಕಳಾದರು. ಇಕ್ಷ್ವಾಕು, ನಭಗ, ಧೃಷ್ಣು, ಶರ್ಯಾತಿ, ನರಿಷ್ಯಂತ, ನಾಭಾಗ, ಅರಿಷ್ಟ, ಕರೂಷ, ಪೃಷಧ್ರ ಎಂಬುವವರೇ ಮನುವಿನ ಆ ಒಂಬತ್ತು ಮಕ್ಕಳು. ಹಿರಿಯಳೂ, ಶ್ರೇಷ್ಠಳೂ ಆಗಿದ್ದ ಇಲಾ ಎಂಬುವವಳು ಶಿಷ್ಠರ ಪ್ರಸಾದದಿಂದ ಪುರುಷ ಭಾವವನ್ನು ಹೊಂದಿದಳು. ಇಲೆಯು ವಸಿಷ್ಠರ ಅನುಗ್ರಹದಿಂದ ಪುರುಷಭಾವವನ್ನು ಹೊಂದಿ ಸುದ್ಯುಮ್ನ ಎಂದು ಪ್ರಸಿದ್ಧಿ ಪಡೆದು ಮಿತ್ರಾ ವರುಣರ ಅನುಗ್ರಹದಿಂದ ಮಕ್ಕಳನ್ನು ಪಡೆದಳು.

ಈಶ್ವರನ ಆಜ್ಞೆಯಿಂದ ಸುದ್ಯುಮ್ನನು ಶರವಣ ಎಂಬ ಕಾಡನ್ನು ಪ್ರವೇಶಿಸಿ ಸ್ತ್ರೀ ಭಾವವನ್ನು ವಂಶಾಭಿವೃದ್ಧಿಗಾಗಿ ಹೊಂದಿದನು. ಇಕ್ಷ್ವಾಕುವು ಅಶ್ವಮೇಧಯಾಗವನ್ನು ಮಾಡಿದ್ದರಿಂದ ಇಲೆಯು ಕಿಂಪುರುಷ ಎಂಬ ದೇವತೆಯಾದನು. ಇಲೆಯು ಕಿಂಪುರುಷನಾಗಿರುವಾಗ ಸುದ್ಯುಮ್ನ ಎನಿಸಿಕೊಳ್ಳುತ್ತಾನೆ. ಈ ಸುದ್ಯುಮ್ನನು ಒಂದು ತಿಂಗಳು ಶೂರನೂ ಗಂಡಸನೂ ಆಗಿಯೂ ಮತ್ತು ಒಂದು ತಿಂಗಳು ಹೆಂಗಸಾಗುತ್ತಾ ಇದ್ದನು. ಈ ಇಲೆಯು ಚಂದ್ರನ ಮಗನಾದ ಬುಧನ ಮನೆಯನ್ನು ಹೊಕ್ಕಳು. ಅಲ್ಲಿ ಇವಳು ಅವನ ವೈವಾಹಿಕ ಸಂಬಂಧಮಾಡಿದಳು. ಈ ಬುಧ ಮತ್ತು ಇಲಾ ಇವರ ಸಂಬಂಧದಿಂದ ಪುರೂರವಸ್ಸು ಹುಟ್ಟಿದನು. ಪುರೂರವಸ್ಸು ಸೋಮವಂಶದಲ್ಲಿ ಹುಟ್ಟಿದವರಲ್ಲಿ ಶ್ರೇಷ್ಠನೂ, ಮಹಾಮೇಧಾವಿಯೂ, ಈಶ್ವರಾರಾಧಕನೂ ಶೂರನೂ ಆಗಿದ್ದನು. ಸುದ್ಯುಮ್ನನಿಗೆ ಮೂರು ಜನ ಮಕ್ಕಳಿದ್ದರು. ಉತ್ಕಲ, ಗಯ, ವಿನತ ಎಂಬುವವರೇ ಆ ಮಕ್ಕಳು. ಉತ್ಕಲನು ಉತ್ಕಲದೇಶಕ್ಕೆ ಅಧಿಪತಿಯಾಗಿಯೂ, ವಿನತಾಶ್ವನು ಪಶ್ಚಿಮ ದೇಶಕ್ಕೆ ಅಧಿಪತಿಯಾಗಿಯೂ, ಗಯನು ಗಯಾ ಎಂಬ ದೇಶಕ್ಕೆ ಅಧಿಪತಿಯಾಗಿಯೂ ಇದ್ದರು. ಇಕ್ಷ್ವಾಕು ವಂಶದ ಜ್ಯೇಷ್ಠಪುತ್ರನು ಮಧ್ಯದೇಶಕ್ಕೆ ಅಧಿಪತಿಯಾಗಿದ್ದನು. ಇಲ್ಲಿ ದೇವತೆಗಳೂ ಪಿತೃದೇವತೆಗಳೂ ಯಾವಾಗಲೂ ನೆಲೆಸಿ ಇರುತ್ತಿದ್ದರು. ಸುದ್ಯುಮ್ನನು ಸ್ತ್ರೀಭಾವನ್ನು ಹೊಂದಿದ್ದುದರಿಂದ ಅವನಿಗೆ ರಾಜ್ಯ ಭಾಗವಿರಲಿಲ್ಲ. ಆದರೆ ವಸಿಷ್ಠನ ಮಾತಿನ ಮೇಲೆ ತೇಜಸ್ವಿಯಾದ ಸುದ್ಯುಮ್ನನು ಪ್ರತಿಷ್ಠಾನ ಪುರದಲ್ಲಿದ್ದನು. ಮಹಾತ್ಮನೂ, ಧಾರ್ಮಿಕನೂ ಆದ ಸುದ್ಯುಮ್ನನು ತಾನು ವಾಸವಾಗಿದ್ದ ಪ್ರತಿಷ್ಠಾನ ರಾಜ್ಯವನ್ನು ಪುರೂರವಸ್ಸಿಗೆ ಕೊಟ್ಟನು.

ಸ್ತ್ರೀಪುರುಷ ಇಬ್ಬರ ಲಕ್ಷಣಗಳಿಂದಲೂ ಕೂಡಿದ ಮನುವಂಶ ಶ್ರೇಷ್ಠನೂ, ಮಹಾಪುಣ್ಯಶಾಲಿಯೂ ಧಾರ್ಮಿಕನೂ ಆದ ''ವಿಕುಕ್ಷಿ'' ಎಂಬ ಇಕ್ಷ್ವಾಕುವಿನ ಮಗನು ಶೂರನಾಗಿದ್ದನು. ವಿಕುಕ್ಷಿಯು ನೂರುಮಕ್ಕಳುಳ್ಳ ಅವನ ತಂದೆಗೆ ಹಿರಿಯ ಮಗನಾಗಿದ್ದನು. ಈ ವಿಕುಕ್ಷಿಗೆ ಹದಿನೈದು ಜನ ಮಕ್ಕಳಿದ್ದರು. ಎಲ್ಲರಿಗೂ ಹಿರಿಯನು ಕಕುತ್ಸ್ಥನೆಂಬುವವನು. ಆತನಿಂದ ಸುಯೋಧನನು ಹುಟ್ಟಿದನು. ವಿಕುಕ್ಷಿಯಿಂದ ಪೃಥುವೂ, ಅವನಿಂದ ವಿಶ್ವಕನೆಂಬ ಪೃಥುಪುತ್ರನೂ ಹುಟ್ಟಿದರು. ವಿಶ್ವಕನಿಗೆ ಆರ್ದ್ರಕನೆಂಬ ಮಗನೂ, ಆರ್ದ್ರಕನಿಗೆ ಯುವನಾಶ್ವನೆಂಬ ಮಗನೂ ಇದ್ದರು. ಅವನಿಂದ ಮಹಾತೇಜಸ್ವಿಯಾದ ಶಾಬಸ್ತಿಯೂ, ಅವನಿಂದ ವಂಶಕನೂ ಹುಟ್ಟಿದರು. ಶಾಬಸ್ತಿಯು ಗೌಡದೇಶದಲ್ಲಿ ಶಾಬಸ್ತಿ ಎಂಬ ನಗರವನ್ನು ಕಟ್ಟಿದನು. ವಂಶಕನಿಗೆ ಬೃಹದಶ್ವನೆಂಬ ಮಗನಿದ್ದನು. ಬೃಹದಶ್ವನಿಗೆ ಕುವಲಾಶ್ವನು ಮಗನು. ಕುವಲಾಶ್ವನು ಧುಂಧು ಎಂಬ

ಬಲಿಷ್ಠನಾದ ಶತ್ರುವನ್ನು ಸಂಹಾರಮಾಡಿ ಧುಂಧುಮಾರ ಎಂದು ಪ್ರಸಿದ್ಧನಾದನು. ಧುಂಧುಮಾರನಿಗೆ ಮೂರು ಲೋಕದಲ್ಲಿಯೂ ಪ್ರಸಿದ್ಧರಾದ ಮೂರುಜನ ಮಕ್ಕಳಿದ್ದರು. ದೃಢಾಶ್ವ, ಚಂಡಾಶ್ವ ಮತ್ತು ಕಪಿಲಾಶ್ವ ಎಂಬುವವರೇ ಆ ಮೂರು ಮಕ್ಕಳು. ದೃಢಾಶ್ವನಿಗೆ ಪ್ರಮೋದನೆಂಬ ಮಗನೂ, ಪ್ರಮೋದನಿಗೆ ಹರ್ಯಶ್ವನೂ, ಹರ್ಯಶ್ವನಿಗೆ ನಿಕುಂಭನೂ, ನಿಕುಂಭನಿಗೆ ಸಂಹತಾಶ್ವನೂ ಮಕ್ಕಳಾಗಿದ್ದರು.

ಸಂಹತಾಶ್ವನಿಗೆ ಕೃಶಾಶ್ವ ಮತ್ತು ರಣಾಶ್ವ ಎಂಬಿಬ್ಬರು ಮಕ್ಕಳಿದ್ದರು. ರಣಾಶ್ವನಿಗೆ ಯುವನಾಶ್ವನೂ, ಯುವನಾಶ್ವನಿಗೆ ಮಾಂಧಾತೃವೂ ಮಕ್ಕಳಾಗಿದ್ದರು. ಮಾಂಧಾತೃವಿಗೆ ಪುರುಕುತ್ಸನೂ, ಶೂರನಾದ ಅಂಬರೀಷನೂ ಮತ್ತು ಪುಣ್ಯಶಾಲಿಯಾದ ಮುಚುಕುಂದನೂ ಮೂವರು ಮಕ್ಕಳಾಗಿ ಮೂರು ಲೋಕದಲ್ಲಿಯೂ ಪ್ರಸಿದ್ಧರಾಗಿದ್ದರು. ಇನ್ನೊಬ್ಬ ಯುವನಾಶ್ವನೆಂಬ ಅಂಬರೀಷನ ಜ್ಞಾತಿ ಇದ್ದನು. ಯುವನಾಶ್ವನಿಗೆ ಹರಿತನೆಂಬ ಮಗನೂ, ಇವನ ವಂಶದವರಿಗೆ ಹಾರೀತಕರೆಂದೂ ಹೆಸರು ಇರುವದು. ಇವರು ಅಂಗಿರಸ ಋಷಿಯ ಗೋತ್ರದ ಮತ್ತು ಕ್ಷತ್ರಿಯ ವಂಶದಿಂದ ಬಂದ ದ್ವಿಜರು. ಇವರಲ್ಲಿ ಕಳ್ಳರಿಗೆ ಭಯಂಕರನಾದ್ದರಿಂದ ತ್ರಸದ್ದಸ್ಯು ಎಂಬುವನು ಬಹಳ ಕೀರ್ತಿವಂತನಾಗಿಯೂ, ಪುರುಕುತ್ಸನ ದಾಯಾದಿಯಾಗಿಯೂ ಇದ್ದನು. ತ್ರಸದ್ದಸ್ಯುವಿಗೆ ನರ್ಮದೆ ಎಂಬುವಳಲ್ಲಿ ಸಂಭೂತಿ ಎಂಬ ಮಗನು ಹುಟ್ಟಿದನು. ಸಂಭೂತಿಗೆ ವಿಷ್ಣುವೃದ್ಧನೆಂಬುವವನು ಮಗನು. ಇವನ ವಂಶಸ್ಥರು ವಿಷ್ಣುವೃದ್ಧರೆಂದು ಕರೆಯಲ್ಪಡುತ್ತಾರೆ. ಇವರೂ ಕ್ಷತ್ರಿಯ ವಂಶದಿಂದ ಬಂದವರೂ, ಅಂಗೀರಸಗೋತ್ರದ ಬ್ರಾಹ್ಮಣರೂ ಆಗಿದ್ದರು. ಸಂಭೂತಿಯು ಅನರಣ್ಯನೆಂಬ ಮತ್ತೊಬ್ಬ ಮಗನನ್ನೂ ಪಡೆದನು. ರಾವಣನು ಮೂರು ಲೋಕವನ್ನೂ ಜಯಿಸುವ ಕಾಲದಲ್ಲಿ ಈ ಅನರಣ್ಯನು ಅವನಿಂದ ನಾಶಮಾಡಲ್ಪಟ್ಟನು. ಅನರಣ್ಯನಿಗೆ ಬೃಹದಶ್ವನೆಂಬ ಮಗನೂ, ಬೃಹದಶ್ವನಿಗೆ ಹರ್ಯಶ್ವನೆಂಬ ಮಗನೂ ಇದ್ದರು.

ಹರ್ಯಶ್ವನಿಗೆ ದೃಷದ್ವತೀ ಎಂಬುವಳಲ್ಲಿ ವಸುಮನಾ ಎಂಬ ರಾಜಕುಮಾರನು ಹುಟ್ಟಿದನು. ವಸುಮನನ ಕುಮಾರನಾದ ತ್ರಿಧನ್ವನೆಂಬುವವನು ಜಗತ್ತಿನಲ್ಲಿ ಶಿವಭಕ್ತನೆಂದು ಪ್ರಸಿದ್ಧನಾಗಿದ್ದನು. ತ್ರಿಧನ್ವನು ಬ್ರಹ್ಮನ ಮಗನಾದ ದಂಡಿಯ ಶಿಷ್ಯನಾಗಿ ಇವನ ಅನುಗ್ರಹದಿಂದ ಮತ್ತು ಅಪ್ಪಣೆಯಂತೆ ಸಾವಿರ ಅಶ್ವಮೇಧಯಾಗ ಮಾಡಿ ಫಲವನ್ನು ಹೊಂದಿದನು. ಈಶ್ವರ ಭಕ್ತನೂ ಮತ್ತು ತೇಜಸ್ವಿಯೂ ಆದ ತ್ರಿಧನ್ವನು ಹೆಚ್ಚಾದ ಐಶ್ವರ್ಯವನ್ನು ಗಳಿಸಿ ಅದರ ಮೂಲಕ ಅಶ್ವಮೇಧಯಾಗ ಮಾಡಲು ಇಚ್ಛೆಯುಳ್ಳವನಾಗಿದ್ದನು. ಆದರೆ ಅವನ ಹತ್ತಿರ ಅದಕ್ಕೆ ಬೇಕಾಗುವಷ್ಟು ಹಣವಿರಲಿಲ್ಲ. ಆಗ ಧರ್ಮಾತ್ಮನಾದ ಇವನು ಸ್ವಕಾರ್ಯ ಸಿದ್ಧಿಗಾಗಿ ದಂಡಿಯೆಂಬ ಬ್ರಾಹ್ಮಣನನ್ನು ಆಶ್ರಯಿಸಿದನು. ಬ್ರಾಹ್ಮಣ ಶ್ರೇಷ್ಠನಾದ ದಂಡಿಯು ಹಿಂದೆ ತನಗೆ ಬ್ರಹ್ಮನಿಂದ ಹೇಳಲ್ಪಟ್ಟಿದ್ದ ರುದ್ರನ ಸಾವಿರ ನಾಮಗಳನ್ನು ಜ್ಞಾಪಿಸಿ ಸ್ತೋತ್ರಮಾಡಿ ಶಿವನ ಗಣಗಳಿಗೆ ಪತಿಯಾದನು. ಹಿಂದೆ ಜಪಿಸಿ ತ್ರಿಧನ್ವನೂ, ಶಿವಗಣಗಳಿಗೆ ಪತಿಯಾಗುವ ಯೋಗವನ್ನು ಸಂಪಾದಿಸಿದನು.

**ಋಷಿಗಳು** :- ದಂಡಿ ಮಹಾಬ್ರಾಹ್ಮಣರಿಂದ ಹೇಳಲ್ಪಟ್ಟ ರುದ್ರಸಹಸ್ರನಾಮವು ಯಾವುದು? ಸರ್ವವೇದದ ಸಾರಭೂತವಾದ ಮಂಗಳಕಾರವಾದ ರುದ್ರನಾಮ ಸಹಸ್ರವನ್ನು ಹೇಳಬೇಕು.

**ಸೂತ** :- ಎಲ್ಲಾ ಪ್ರಪಂಚಕ್ಕೂ ಆತ್ಮಸ್ವರೂಪನಾದ ಬಹಳ ಪ್ರಕಾಶಮಾನನಾದ ಪರಶಿವನ ಅಷ್ಟೋತ್ತರ ಸಹಸ್ರನಾಮವು ಹೀಗಿರುವದು.

**ಸರ್ವಭೂತಾತ್ಮಭೂತಸ್ಯ ಹರಸ್ಯಾಮಿತ ತೇಜಸಃ ।**
**ಅಷ್ಟೋತ್ತರ ಸಹಸ್ರಂ ತು ನಾಮ್ನಾಂ ಶ್ರುಣುತ ಸುವ್ರತಾಃ ॥**

ಯದಜಪ್ತಾತು ಮುನಿಶ್ರೇಷ್ಠಾ ಗಾಣಪತ್ಯಮವಪುವನ್ ।
ಓಂ ಸ್ಥಿರಃ ಸ್ಥಾಣುಃ ಪ್ರಭುರ್ಭಾನುಃ ಪ್ರವರೋ ವರದೋ ವರಃ ॥

ಸರ್ವಾತ್ಮಾ ಸರ್ವ ವಿಖ್ಯಾತಃ ಸರ್ವಃ ಸರ್ವಕರೋ ಭವಃ ।
ಜಟೀ ದಂಡೀ ಶಿಖಂಡೀ ಚ ಸರ್ವಗಃ ಸರ್ವಭಾವನಃ ॥

ಹರಿಶ್ಚ ಹರಿಣಾಕ್ಷಶ್ಚ ಸರ್ವಭೂತ ಹರಃ ಸ್ಮೃತಃ ।
ಪ್ರವೃತ್ತಿಶ್ಚ ನಿವೃತ್ತಿಶ್ಚ ಶಾಂತಾತ್ಮಾ ಶಾಶ್ವತೋ ಧ್ರುವಃ ॥

ಸ್ಮಶಾನವಾಸೀ ಭಗವಾನ್ ಖಚರೋ ಗೋಚರೋಽರ್ದನಃ ।
ಅಭಿವಾದ್ಯೋ ಮಹಾಕರ್ಮಾ ತಪಸ್ವೀ ಭೂತಧಾರಣಃ ॥

ಉನ್ಮತ್ತವೇಷಃ ಪ್ರಚ್ಛನ್ನಃ ಸರ್ವಲೋಕಃಪ್ರಜಾಪತಿಃ ।
ಮಹಾರೂಪೋ ಮಹಾಕಾಯಃ ಸರ್ವರೂಪೋ ಮಹಾಯಶಾಃ ॥

ಮಹಾತ್ಮಾ ಸರ್ವಭೂತಶ್ಚ ವಿರೂಪೋ ವಾಮನೋ ನರಃ ।
ಲೋಕಪಾಲೋಽಂತರ್ಹಿತಾತ್ಮಾ ಪ್ರಸಾದೋಽಭಯದೋ ವಿಭುಃ ॥

ಪವಿತ್ರಶ್ಚ ಮಹಾಂಶ್ಚೈವ ನಿಯತೋ ನಿಯತಾಶ್ರಯಃ ।
ಸ್ವಯಂಭೂಃ ಸರ್ವಕರ್ಮಾ ಚ ಆದಿರಾದಿಕರೋ ನಿಧಿಃ ॥

ಸಹಸ್ರಾಕ್ಷೋ ವಿಶಾಲಾಕ್ಷಃ ಸೋಮೋ ನಕ್ಷತ್ರ ಸಾಧಕಃ ।
ಚಂದ್ರಃ ಸೂರ್ಯಃ ಶನಿಃ ಕೇತುಃ ಗ್ರಹೋ ಗ್ರಹ ಪತಿರ್ಮತಃ ॥

ರಾಜಾ ರಾಜ್ಯೋದಯಃ ಕರ್ತಾ ಮೃಗಬಾಣಾರ್ಪಣೋ ಘನಃ ।
ಮಹಾತಪಾ ದೀರ್ಘತಪಾ ಅದೃಶ್ಯೋ ಧನ ಸಾಧಕಃ ॥

ಸಂವತ್ಸರಃ ಕೃತೋ ಮಂತ್ರಃ ಪ್ರಾಣಾಯಾಮಃ ಪರಂತಪಃ ।
ಯೋಗೀ ಯೋಗೋ ಮಹಾಬೀಜೋ ಮಹಾರೇತಾ ಮಹಾಬಲಃ॥

ಸುವರ್ಣರೇತಾಃ ಸರ್ವಜ್ಞಃ ಸುಬೀಜೋ ವೃಷವಾಹನಃ ।
ದಶಬಾಹು ಸ್ತ್ವನಿಮಿಷೋ ನೀಲಕಂಠ ಉಮಾಪತಿಃ ॥

ವಿಶ್ವರೂಪಃ ಸ್ವಯಂಶ್ರೇಷ್ಠೋ ಬಲವೀರೋ ಬಲಾಗ್ರಣೀಃ ।
ಗಣಕರ್ತಾ ಗಣಪತಿರ್ದಿಗ್ವಾಸಾಃ ಕಾಮ್ಯ ಏವ ಚ ॥

ಮಂತ್ರವಿತ್ಪರಮೋ ಮಂತ್ರಃ ಸರ್ವಭಾವಕರೋ ಹರಃ ।
ಕಮಂಡಲು ಧರೋ ಧನ್ವೀ ಬಾಣಹಸ್ತಃ ಕಪಾಲವಾನ್ ॥

ಶರೀ ಶತಘ್ನೀ ಖಡ್ಗೀಚ ಪಟ್ಟಿಶೀ ಚಾಯುಧೀ ಮಹಾನ್ ।
ಅಜಶ್ಚ ಮೃಗರೂಪಶ್ಚ ತೇಜಸ್ತೇಜಸ್ಕರೋ ವಿಧಿಃ ॥

ಉಷ್ಣೀಷೀ ಚ ಸುವಕ್ತ್ರಶ್ಚ ಉದಗ್ರೋ ವಿನತ ಸ್ತಥಾ ।
ದೀರ್ಘಶ್ಚ ಹರಿಕೇಶಶ್ಚ ಸುತೀರ್ಥಃ ಕೃಷ್ಣ ಏವ ಚ ॥

ಶೃಗಾಲರೂಪಃ ಸರ್ವಾರ್ಥೋ ಮುಂಡಃ ಸರ್ವಶುಭಂ ಕರಃ ।
ಸಿಂಹ ಶಾರ್ದೂಲ ರೂಪಶ್ಚ ಗಂಧಕಾರೀ ಕಪರ್ದ್ಯಪಿ ॥

ಊರ್ಧ್ವರೇತೋಽರ್ಧ್ವಲಿಂಗೀ ಚ ಊರ್ಧ್ವಶಾಯೀ ನಭಸ್ತಲಃ ।
ತ್ರಿಜಟೀ ಕೃತ್ತಿ ವಾಸಾಶ್ಚ ರುದ್ರಃ ಸೇನಾಪತಿರ್ವಿಭುಃ ॥

ಅಹೋರಾತ್ರಂ ಚ ನಕ್ತಂ ಚ ತಿಗ್ಮಮನ್ಯುಃ ಸುವರ್ಚಸಃ ।
ಗಜಹಾ ದೈತ್ಯಹಾ ಕಾಲೋ ಲೋಕಧಾತಾ ಗುಣಾಕರಃ ॥

ಸಿಂಹ ಶಾರ್ದೂಲ ರೂಪಾಣಾಮಾರ್ದ್ರ ಚರ್ಮಾಂಬರಂ ಧರಃ ।
ಕಾಲಯೋಗೀ ಮಹಾನಾದಃ ಸರ್ವಾವಾಸಶ್ಚತುಷ್ಪಥಃ ॥

ನಿಶಾಚರಃ ಪ್ರೇತಚಾರೀ ಸರ್ವದರ್ಶೀ ಮಹೇಶ್ವರಃ ।
ಬಹುಭೂತೋ ಬಹುಧನಃ ಸರ್ವಸಾರೋಽಮೃತೇಶ್ವರಃ ॥

ನೃತ್ಯಪ್ರಿಯೋ ನಿತ್ಯನೃತ್ಯೋ ನರ್ತನಃ ಸರ್ವಸಾಧಕಃ ।
ಸಕಾರ್ಮುಕೋ ಮಹಾಬಾಹುರ್ಮಹಾಘೋರೋ ಮಹಾತಪಾಃ ॥

ಮಹಾಶರೋ ಮಹಾಪಾಶೋ ನಿತ್ಯೋ ಗಿರಿಚರೋ ಮತಃ ।
ಸಹಸ್ರಹಸ್ತೋ ವಿಜಯೋ ವ್ಯವಸಾಯೋಹ್ಯನಿಂದಿತಃ ॥

ಅಮರ್ಷಣೋಽಮರ್ಷಣಾತ್ಮಾ ಯಜ್ಞಹಾ ಕಾಮನಾಶನಃ ।
ದಕ್ಷಹಾ ಪರಿಚಾರಿ ಚ ಪ್ರಸೋಮಧ್ಯಮಸ್ತಥಾ ॥

ತೇಜೋಽಪಹಾರೀ ಬಲವಾನ್ವಿದಿತೋಽಭ್ಯುದಿತೋಽ ಬಹುಃ ।
ಗಂಭೀರ ರೋಷೋ ಯೋಗಾತ್ಮಾ ಯಜ್ಞಹಾ ಕಾಮನಾಶನಃ ॥

ಗಂಭೀರ ಘೋಷೋ ಗಂಭೀರೋ ಗಂಭೀರ ಬಲವಾಹನಃ ।
ನ್ಯಗ್ರೋಧ ರೂಪೋ ನ್ಯಗ್ರೋಧೋ ವಿಶ್ವಕರ್ಮಾಚ ವಿಶ್ವಭುಕ್ ॥

ತೀಕ್ಷ್ಣೋಪಾಯಶ್ಚ ಹರ್ಯಶ್ವಃ ಸಹಾಯಃ ಕರ್ಮಕಾಲವಿತ್ ।
ವಿಷ್ಣುಃ ಪ್ರಸಾದಿತೋ ಯಜ್ಞಃ ಸಮುದ್ರೋ ಬಡವಾ ಮುಖಃ ॥

ಹುತಾಶನಸಹಾಯಶ್ಚ ಪ್ರಶಾಂತಾತ್ಮಾ ಹುತಾಶನಃ ।
ಉಗ್ರತೇಜಾ ಮಹಾತೇಜಾ ಜಯೋ ವಿಜಯಕಾಲವಿತ್ ॥

ಜ್ಯೋತಿಷಾಮಯನಂ ಸಿದ್ಧಿಃ ಸಂಧಿರ್ವಿಗ್ರಹ ಏವ ಚ ।
ಖಡ್ಗೀ ಶಂಖೀ ಜಟೀ ಜ್ವಾಲೀ ಖಚರೋ ದ್ಯುಚರೋ ಬಲೀ ॥

ವೈಣವೀ ಪಣವೀ ಕಾಲಃ ಕಾಲಕಂಠಃ ಕಟಂಕಟಃ ।
ನಕ್ಷತ್ರ ವಿಗ್ರಹೋ ಭಾವೋ ನಿರ್ಭಾವಃ ಸರ್ವತೋ ಮುಖಃ ॥

ವಿಮೋಚನಶ್ಚ (ಸ್ತು) ಶರಣೋ ಹಿರಣ್ಯ ಕವಚೋದ್ಭವಃ ।
ಮೇಖಲಾಕೃತಿರೂಪಶ್ಚ ಜಲಾಚಾರಃ ಸ್ತುತಸ್ತಥಾ ॥

ವೀಣೀ ಚ ಪಣವೀ ತಾಲೀ ನಾಲೀ ಕಲಿಕಟು ಸ್ತಥಾ ।
ಸರ್ವತೂರ್ಯ ನಿನಾದೀ ಚ ಸರ್ವವ್ಯಾಪ್ಯ ಪರಿಗ್ರಹಃ ॥

ವ್ಯಾಲರೂಪೀ ಬಿಲಾವಾಸೀ ಗುಹಾವಾಸೀ ತರಂಗವಿತ್।
ವೃಕ್ಷಃ ಶ್ರೀ ಮಾಲಕರ್ಮಾ ಚ ಸರ್ವಬಂಧ ವಿಮೋಚನಃ ॥

ಬಂಧನಸ್ತು ಸುರೇಂದ್ರಾಣಾಂ ಯುಧಿ ಶತ್ರುವಿನಾಶನಃ ।
ಸಖಾ ಪ್ರವಾಸೋ ದುರ್ವಾಪಃ ಸರ್ವಸಾಧು ನಿಷೇವಿತಃ ॥

ಪ್ರಸ್ಕಂದೋಽಪ್ಯವಿಭಾವ್ಯಶ್ಚಽತುಲ್ಯೋ ಯಜ್ಞವಿಭಾಗವಿತ್ ।
ಸರ್ವವಾಸಃ ಸರ್ವಚಾರೀ ದುರ್ವಾಸಾ ವಾಸವೋ ಮತಃ ॥

ಹೈಮೋ ಹೇಮಕರೋ ಯಜ್ಞಃ ಸರ್ವಧಾರೀ ಧರೋತ್ತಮಃ ।
ಆಕಾಶೋ ನಿರ್ವಿರೂಪಶ್ಚ ವಿವಾಸಾ ಉರಗಃ ಖಗಃ ॥

ಭಿಕ್ಷುಶ್ಚ ಭಿಕ್ಷುರೂಪಶ್ಚ ರೌದ್ರರೂಪಃ ಸುರೂಪವಾನ್ ।
ವಸುರೇತಾಃ ಸುವರ್ಚಸ್ವೀ ವಸುವೇಗೋ ಮಹಾಬಲಃ ॥

ಮನೋವೇಗೋ ನಿಶಾಚಾರಃ ಸರ್ವಲೋಕ ಶುಭಪ್ರದಃ ।
ಸರ್ವವಾಸೀ ತ್ರಯೀವಾಸೀ ಉಪದೇಶಕರೋ ಧರಃ ॥

ಮುನಿರಾತ್ಮಾ ಮುನಿರ್ಲೋಕಃ ಸಭಾಗ್ಯಶ್ಚ ಸಹಸ್ರ ಭುಕ್ ।
ಪಕ್ಷೀ ಚ ಪಕ್ಷರೂಪಶ್ಚ ಅತಿದೀಪ್ತೋ ನಿಶಾಕರಃ ॥

ಸಮೀರೋ ದಮನಾಕಾರೋ ಹ್ಯರ್ಥೋ ಹ್ಯರ್ಥಕರೋ ವಶಃ ।
ವಾಸುದೇವಶ್ಚ ದೇವಶ್ಚ ವಾಮದೇವಶ್ಚ ವಾಮನಃ ॥

ಸಿದ್ಧಿಯೋಗಾಪಹಾರೀ ಚ ಸಿದ್ಧಃ ಸರ್ವಾರ್ಥ ಸಾಧಕಃ ।
ಅಕ್ಷುಣ್ಣಃ ಕ್ಷುಣ್ಣ ರೂಪಶ್ಚ ವೃಷಣೋ ಮೃದುರವ್ಯಯಃ ॥

ಮಹಾಸೇನೋ ವಿಶಾಖಶ್ಚ ಷಷ್ಟಿಭಾಗೋ ಗವಾಂ ಪತಿಃ ।
ಚಕ್ರಹಸ್ತಸ್ತು ವಿಷ್ಟಂಭೀ ಮೂಲಸ್ತಂಭನ ಏವ ಚ ॥

ಋತುಃ ಋತುಕರಸ್ತಾಲೋ ಮಧುರ್ಮಧುಕರೋ ವರಃ ।
ವಾನಸ್ಪತ್ಯೋ ವಾಜಸನೋ ನಿತ್ಯಮಾಶ್ರಮ ಪೂಜಿತಃ ॥

ಬ್ರಹ್ಮಚಾರೀ ಲೋಕಚಾರೀ ಸರ್ವಚಾರೀ ಸುಚಾರ ವಿತ್ ।
ಈಶಾನ ಈಶ್ವರಃ ಕಾಲೋ ನಿಶಾಚಾರೀ ಹ್ಯನೇಕ ದೃಕ್ ॥

ನಿಮಿತ್ತಸ್ಥೋ ನಿಮಿತ್ತಂ ಚ ನಂದಿರ್ನಂದಿಕರೋ ಹರಃ ।
ನಂದೀಶ್ವರಃ ಸುನಂದೀ ಚ ನಂದನೋ ವಿಷಮರ್ದನಃ ॥

ಭಗಹಾರೀ ನಿಯಂತಾ ಚ ಕಾಲೋ ಲೋಕ ಪಿತಾಮಹಃ ।
ಚತುರ್ಮುಖೋ ಮಹಾಲಿಂಗಶ್ಚಾರುಲಿಂಗಸ್ತಥೈವ ಚ ॥

ಲಿಂಗಾಧ್ಯಕ್ಷಃ ಸುರಾಧ್ಯಕ್ಷಃ ಕಾಲಾಧ್ಯಕ್ಷೋ ಯುಗಾವಹಃ ।
ಬೀಜಾಧ್ಯಕ್ಷೋ ಬೀಜಕರ್ತಾ ಅಧ್ಯಾತ್ಮಾನುಗತೋ ಬಲಃ ॥

ಇತಿಹಾಸಶ್ಚ ಕಲ್ಪಶ್ಚ ದಮನೋ ಜಗದೀಶ್ವರಃ ।
ದಂಭೋ ದಂಭಕರೋ ದಾತಾ ವಂಶೋ ವಂಶಕರಃ ಕಲಿಃ ॥

ಲೋಕಕರ್ತಾ ಪಶುಪತಿರ್ಮಹಾಕರ್ತಾ ಹ್ಯಧೋಕ್ಷಜಃ ।
ಅಕ್ಷರಂ ಪರಮಂ ಬ್ರಹ್ಮ ಬಲವಾನ್ ಶುಕ್ರ ಏವ ಚ ॥

ನಿತ್ಯೋಹ್ಯನೀಶಃ ಶುದ್ಧಾತ್ಮಾ ಶುದ್ಧೋಽಮಾನೋ ಗತಿರ್ಹವಿಃ ।
ಪ್ರಾಸಾದಸ್ತು ಬಲೋ ದರ್ಪೋ ದರ್ಪಣೋ ಹವ್ಯಮಿಂದ್ರಜಿತ್ ॥

ವೇದಕಾರಃ ಸೂತ್ರಕಾರೋ ವಿದ್ವಾಂಶ್ಚ ಪರಮರ್ದನಃ ।
ಮಹಾಮೇಘ ನಿವಾಸೀ ಚ ಮಹಾಘೋರೋ ವಶೀಕರಃ ॥

ಅಗ್ನಿಜ್ವಾಲೋ ಮಹಾಜ್ವಾಲಃ ಪರಿಧೂಮ್ರಾಽವೃತೋ ರವಿಃ ।
ಧಿಷಣಃ ಶಂಕರೋ ನಿತ್ಯೋ ವರ್ಚಸ್ವೀ ಧೂಮ್ರ ಲೋಚನಃ ॥

ನೀಲಸ್ತಥಾಂಗಲುಪ್ತಶ್ಚ ಶೋಭನೋ ನರ ವಿಗ್ರಹಃ ।
ಸ್ವಸ್ತಿಸ್ವಸ್ತಿಸ್ವಭಾವಶ್ಚ ಭೋಗೀಭೋಗ ಕರೋ ಲಘುಃ ॥

ಉತ್ಸಂಗಶ್ಚ ಮಹಾಂಗಶ್ಚ ಮಹಾಗರ್ಭಃ ಪ್ರತಾಪವಾನ್ ।
ಕೃಷ್ಣವರ್ಣಃ ಸುವರ್ಣಶ್ಚ ಇಂದ್ರಿಯಃ ಸರ್ವವರ್ಣಿಕಃ ॥

ಮಹಾಪಾದೋ ಮಹಾಹಸ್ತೋ ಮಹಾಕಾಯೋ ಮಹಾಯಶಾಃ ।
ಮಹಾಮೂರ್ಧಾ ಮಹಾಮಾತ್ರೋ ಮಹಾಮಿತ್ರೋ ನಗಾಲಯಃ॥

ಮಹಾಸ್ಕಂಧೋ ಮಹಾಕರ್ಣೋ ಮಹೋಷ್ಠಶ್ಚ ಮಹಾಹನುಃ ।
ಮಹಾನಾಸೋ ಮಹಾಕಂಠೋ ಮಹಾಗ್ರೀವಃ ಶ್ಮಶಾನ್‌ವಾನ್ ॥

ಮಹಾಬಲೋ ಮಹಾತೇಜಾ ಹ್ಯಂತರಾತ್ಮಾ ಮೃಗಾಲಯಃ ।
ಲಂಬಿತೋಷ್ಠಶ್ಚ ನಿಷ್ಠಶ್ಚ ಮಹಾಮಾಯಃ ಪಯೋನಿಧಿಃ ॥

ಮಹಾದಂತೋ ಮಹಾದಂಷ್ಟ್ರೋ ಮಹಾಜಿಹ್ವೋ ಮಹಾಮುಖಃ ।
ಮಹಾನಖೋ ಮಹಾರೋಮಾ ಮಹಾಕೇಶೋ ಮಹಾಜಟಃ ॥

ಅಸಪತ್ನಃ ಪ್ರಸಾದಶ್ಚ ಪ್ರತ್ಯಯೋ ಗೀತಸಾಧಕಃ ।
ಪ್ರಸ್ವೇದನೋಽಸ್ವಹೇನಶ್ಚ ಆದಿಕಶ್ಚ ಮಹಾಮುನಿಃ ॥

ವೃಷಕೋ ವೃಷಕೇತುಶ್ಚ ಅನಲೋ ವಾಯುವಾಹನಃ ।
ಮಂಡಲೀ ಮೇರುವಾಸಶ್ಚ ದೇವವಾಹನ ಏವಚ ॥

ಅಥರ್ವ ಶೀರ್ಷಃ ಸಾಮಸ್ಯ ಋಕ್ಸಹಸ್ರೋರ್ಜಿತೇಕ್ಷಣಃ ।
ಯಜುಃಪಾದಭುಜೋ ಗುಹ್ಯಃ ಪ್ರಕಾಶಾಜಾಸ್ತಥೈವ ಚ ॥

ಅಮೋಘಾರ್ಥಃ ಪ್ರಸಾದಶ್ಚ ಅಂತರ್ಭಾವ್ಯಃ ಸುದರ್ಶನಃ ।
ಉಪಹಾರಃ ಪ್ರಿಯಃ ಸರ್ವಃ ಕನಕಃ ಕಾಂಚನಸ್ಥಿತಃ ॥

ನಾಭಿರ್ನಂದಿಕರೋ ಹರ್ಮ್ಯಃ ಪುಷ್ಕರಃ ಸ್ಥಪತಿಃ ಸ್ಥಿತಿಃ ।
ಸರ್ವಶಾಸ್ತ್ರೋ ಧನಶ್ಚಾದ್ಯೋ ಯಜ್ಞೋ ಯಜ್ಞಾಸಮಾಹಿತಃ॥

ನಗೋ ನೀಲೋ ಕವಿಃ ಕಾಲೋ ಮಕರಃ ಕಾಲಪೂಜಿತಃ ।
ಸಗಣೋ ಗಣಕಾರಶ್ಚ ಭೂತಭಾವನ ಸಾರಥಿಃ ॥

ಭಸ್ಮಶಾಯೀ ಭಸ್ಮಗೋಪ್ತಾ ಭಸ್ಮಭೂತ ತನುರ್ಗಣಃ ।
ಆಗಮಶ್ಚ ವಿಲೋಪಶ್ಚ ಮಹಾತ್ಮಾ ಸರ್ವಪೂಜಿತಃ ॥

ಶುಕ್ಲ ಸ್ತ್ರೀರೂಪ ಸಂಪನ್ನಃ ಶುಚಿರ್ಭೂತ ನಿಷೇವಿತಃ ।
ಆಶ್ರಮಸ್ಥಃ ಕಪಾಲಸ್ಥೋ ವಿಶ್ವಕರ್ಮಾ ಪತಿರ್ವಿರಾಟ್ ॥

ವಿಶಾಲಶಾಖಸ್ತಾಮ್ರೋಷ್ಠೋ ಹ್ಯಂಬುಜಾಲಃ ಸುನಿಶ್ಚಿತಃ ।
ಕಪಿಲಃ ಕಲಶಃ ಸ್ಥೂಲಃ ಆಯುಧಶ್ಚೈವ ರೋಮಶಃ ॥

ಗಂಧರ್ವೋ ಹ್ಯದಿತಿಸ್ತಾರ್ಕ್ಷ್ಯೋಹ್ಯ ವಿಜ್ಞೇಯಃ ಸುಶಾರದಃ ।
ಪರಶ್ವಧಾಯುಧೋ ದೇವೋ ಹ್ಯರ್ಥಕಾರೀ ಸುಬಾಂಧವ ಃ ॥

ತುಂಬ ವೀಣೋ ಮಹಾಕೋಪ ಊರ್ಧ್ವರೇತಾ ಜಲೇ ಶಯಃ ।
ಉಗ್ರೋ ವಂಶಕರೋ ವಂಶೋ ವಂಶವಾದೀ ಹ್ಯ ನಿಂದಿತಃ ॥

ಸರ್ವಾಂಗರೂಪೀ ಮಾಯಾವೀ ಸುಹೃದೋಹ್ಯನಿಲೋ ಬಲಃ ।
ಬಂಧನೋ ಬಂಧ ಕರ್ತಾ ಚ ಸುಬಂಧನವಿಮೋಚನಃ ॥

ರಾಕ್ಷಸಘ್ನೋಽಥ ಕಾಮಾರಿರ್ಮಹಾದಂಷ್ಟ್ರೋ ಮಹಾಯುಧಃ ।
ಲಂಬಿತೋ ಲಂಬಿತೋಷ್ಠಶ್ಚ ಲಂಬಹಸ್ತೋ ವರಪ್ರದಃ ॥

ಬಾಹುಸ್ತ್ವನಿಂದಿತಃ ಸರ್ವಃ ಶಂಕರೋಽಥಾಪ್ಯಕೋಪನಃ ।
ಅಮರೇಶೋ ಮಹಾಘೋರೋ ವಿಶ್ವೇದೇವಃ ಸುರಾರಿಹಾ ॥

ಅಹಿರ್ಬುಧ್ನ್ಯೋ ನಿಋತಿಶ್ಚ ಚೇಕಿತಾನೋ ಹಲೀ ತಥಾ ।
ಅಜೈಕಪಾಚ್ಚ ಕಾಪಾಲೀ ಶಂಕುಮಾರೋ ಮಹಾಗಿರಿಃ ॥

ಧನ್ವಂತರಿರ್ಧೂಮ ಕೇತುಃ ಸೂರ್ಯೋ ವೈಶ್ರವಣ ಸ್ತಥಾ ।
ಧಾತಾ ವಿಷ್ಣುಶ್ಚ ಶಕ್ರಶ್ಚ ಮಿತ್ರಸ್ತ್ವಷ್ಟಾಧರೋ ಧ್ರುವಃ ॥

ಪ್ರಭಾಸಃ ಸರ್ವತೋ ವಾಯುರರ್ಯಮಾ ಸವಿತಾ ರವಿಃ ।
ಧೃತಿಶ್ಚೈವ ವಿಧಾತಾ ಚ ಮಾಂಧಾತಾ ಭೂತ ಭಾವನಃ ॥

ನೀರಸ್ತೀರ್ಥಶ್ಚ ಭೀಮಶ್ಚ ಸರ್ವಕರ್ಮಾ ಗುಣೋದ್ವಹಃ ।
ಪದ್ಮಗರ್ಭೋ ಮಹಾಗರ್ಭಶ್ಚಂದ್ರವಕ್ತ್ರೋ ನಭೋಽನಘಃ ॥

ಬಲಾವಾಂಶ್ಚೋಪಶಾಂತಶ್ಚ ಪುರಾಣಃ ಪುಣ್ಯಕೃತ್ತಮಃ ।
ಕ್ರೂರಕರ್ತಾ ಕ್ರೂರವಾಸೀ ತನುರಾತ್ಮಾ ಮಹೌಷಧಃ ॥

ಸರ್ವಾಶಯಃ ಸರ್ವಚಾರೀ ಪ್ರಾಣೇಶಃ ಪ್ರಾಣಿನಾಂ ಪತಿಃ ।
ದೇವದೇವಃ ಸುಖೋತ್ಸಿಕ್ತಃ ಸದಸತ್ಸರ್ವ ರತ್ನವಿತ್ ॥

ಕೈಲಾಸಸ್ಥೋ ಗುಹಾವಾಸೀ ಹಿಮವದ್ಗಿರಿ ಸಂಶ್ರಯಃ ।
ಕುಲಹಾರೀ ಕುಲಾಕರ್ತಾ ಬಹುವಿತ್ತೋ ಬಹುಪ್ರಜಃ ॥

ಪ್ರಾಣೇಶೋ ಬಂಧಕೀ ವೃಕ್ಷೋ ನಕುಲಶ್ಚಾದ್ರಿಕ ಸ್ತಥಾ ।
ಹ್ರಸ್ವಗ್ರೀವೋ ಮಹಾಜಾನುರಲೋಲಶ್ಚ ಮಹೌಷಧಿಃ ॥

ಸಿದ್ಧಾಂತಕಾರೀ ಸಿದ್ಧಾರ್ಥಶ್ಛಂದೋ ವ್ಯಾಕರಣೋದ್ಭವಃ ।
ಸಿಂಹನಾದಃ ಸಿಂಹದಂಷ್ಟ್ರಃ ಸಿಂಹಾಸ್ಯಃ ಸಿಂಹವಾಹನಃ ॥

ಪ್ರಭಾವಾತ್ಮಾ ಜಗತ್ಕಾಲಃ ಕಾಲಃ ಕಂಪೀ ತರುಸ್ತನುಃ ।
ಸಾರಂಗೋ ಭೂತಚಕ್ರಾಂಕಃ ಕೇತುಮಾಲೀ ಸುವೇಧಕಃ ॥

ಭೂತಾಲಯೋ ಭೂತಪತಿರಹೋರಾತ್ರೋ ಮಲೋಽಮಲಃ ।
ವಸುಭೃತ್ಸರ್ವ ಭೂತಾತ್ಮಾ ನಿಶ್ಚಲಃ ಸುವಿದುರ್ಬುಧಃ ॥

ಅಸುಹೃತ್ಸರ್ವಭೂತಾನಾಂ ನಿಶ್ಚಲಶ್ಚಲವಿದ್ಬುಧಃ ।
ಅಮೋಘಃ ಸಂಯಮೋ ಹೃಷ್ಟೋ ಭೋಜನಃ ಪ್ರಾಣಧಾರಣಃ ॥

ಧೃತಿಮಾನ್ಮತಿಮಾಂಸ್ತ್ರ್ಯಕ್ಷಃ ಸುಕೃತಸ್ತು ಯುಧಾಂ ಪತಿಃ ।
ಗೋಪಾಲೋ ಗೋಪತಿರ್ಗ್ರಾಮೋ ಗೋಚರ್ಮವಸನೋ ಹರಃ॥

ಹಿರಣ್ಯಬಾಹುಶ್ಚ ತಥಾ ಗುಹಾವಾಸಃ ಪ್ರವೇಶನಃ ।
ಮಹಾಮನಾ ಮಹಾಕಾಮೋ ಚಿತ್ತಕಾಮೋ ಜಿತೇಂದ್ರಿಯಃ ॥

ಗಾಂಧಾರಶ್ಚ ಸುರಾಪಶ್ಚ ತಾಪಕರ್ಮರತೋ ಹಿತಃ ।
ಮಹಾಭೂತೋ ಭೂತವೃತೋ ಹ್ಯಪ್ಸರೋಗಣಸೇವಿತಃ ॥

ಮಹಾಕೇತುರ್ಧರಾಧಾತಾ ನೈಕತಾನರತಃ ಸ್ವರಃ ।
ಅವೇದನೀಯ ಆವೇದ್ಯಃ ಸರ್ವಗಶ್ಚ ಸುಖಾವಹಃ ॥

ತಾರಣಶ್ಚ ರಣೋ ಧಾತಾ ಪರಿಧಾ ಪರಿಪೂಜಿತಃ ।
ಸಂಯೋಗೀ ವರ್ಧನೋ ವೃದ್ಧೋ ಗಣಿಕೋಽಥ ಗಣಾಧಿಪಃ ॥

ನಿತ್ಯೋ ಧಾತಾ ಸಹಾಯಶ್ಚ ದೇವಾಸುರಪತಿಃ ಪತಿಃ ।
ಯುಕ್ತಶ್ಚ ಯುಕ್ತಬಾಹುಶ್ಚ ಸುದೇವೋಽಪಿ ಸುಪರ್ವಣಃ ॥

ಆಷಾಢಶ್ಚ ಸುಷಾಢಶ್ಚ ಸ್ಕಂಧದೋ ಹರಿತೋ ಹರಃ ।
ವಪುರಾವರ್ತ ಮನೋಽನ್ಯೋವಪುಃ ಶ್ರೇಷ್ಠೋ ಮಹಾವಪುಃ ॥

ಶಿರೋ ವಿಮರ್ಶನಃ ಸರ್ವಲಕ್ಷ್ಯಲಕ್ಷಣ ಭೂಷಿತಃ ।
ಅಕ್ಷಯೋ ರಥಗೀತಶ್ಚ ಸರ್ವಭೋಗೀ ಮಹಾಬಲಃ ॥

ಸಾಮ್ನಾಯೋಽಥ ಮಹಾಮ್ನಾಯ ಸ್ತೀರ್ಥದೇವೋ ಮಹಾಯಶಾಃ ।
ನಿರ್ಜೀವೋ ಜೀವನೋ ಮಂತ್ರಃ ಸುಭಗೋ ಬಹು ಕರ್ಕಶಃ ॥

ರತ್ನಭೂತೋಽಥ ರತ್ನಾಂಗಃ ಮಹಾರ್ಣವ ನಿಪಾತವಿತ್ ।
ಮೂಲಂ ವಿಶಾಲೋಹ್ಯಮೃತಂ ವ್ಯಕ್ತಾವ್ಯಕ್ತಸ್ತಪೋ ನಿಧಿಃ ॥

ಆರೋಹಣೋಽಧಿರೋಹಶ್ಚ ಶೂಲಧಾರೀ ಮಹಾತಪಾಃ ।
ಮಹಾಕಂಠೋ ಮಹಾಯೋಗೀ ಯುಗೋ ಯುಗಕರೋ ಹರಿಃ ॥

ಯುಗರೂಪೋ ಮಹಾರೂಪೋ ವಹನೋ ಗಹನೋ ನಗಃ ।
ನ್ಯಾಯೋ ನಿರ್ವಾಪಣೋಽಪಾದಃ ಪಂಡಿತೋ ಹ್ಯಚಲೋಪಮಃ ॥

ಬಹುಮಾಲೋ ಮಹಾಮಾಲಃ ಶಿಪಿವಿಷ್ಟಃ ಸುಲೋಚನಃ ।
ವಿಸ್ತಾರೋ ಲವಣಃ ಕೂಪಃ ಕುಸುಮಾಂಗಃ ಫಲೋದಯಃ ॥

ಋಷಭೋ ಭಂಗೋ ಹ್ಯಭಂಗಶ್ಚ ಮಣಿಬಿಂಬ ಜಟಾಧರಃ ।
ಇಂದುರ್ವಿಸರ್ಗಃ ಸುಮುಖಃ ಶೂರಃ ಸರ್ವಾಯುಧಃ ಸಹಃ ॥

ನಿವೇದನಃ ಸುಧಾಜಾತಃ ಸ್ವರ್ಗದ್ವಾರೋ ಮಹಾಧನುಃ ।
ಗಿರಾವಾಸೋ ವಿಸರ್ಗಶ್ಚ ಸರ್ವಲಕ್ಷಣ ಲಕ್ಷವಿತ್ ॥

ಗಂಧಮಾಲೀ ಚ ಭಗವಾನನಂತಃ ಸರ್ವಲಕ್ಷಣಃ ।
ಸಂತಾನೋ ಬಹುಲೋ ಬಾಹುಃ ಸಕಲಃ ಸರ್ವಪಾವನಃ ॥

ಕರಸ್ಥಾಲೀ ಕಪಾಲೀ ಚ ಊರ್ಧ್ವಸಂಹನನೋ ಯುವಾ ।
ಯಂತ್ರ ತಂತ್ರ ಸುವಿಖ್ಯಾತೋ ಲೋಕಃ ಸರ್ವಾಶ್ರಯೋ ಮೃದುಃ ॥

ಮುಂಡೋ ವಿರೂಪೋ ವಿಕೃತೋ ದಂಡೀ ಕುಂಡೀ ವಿಕುರ್ವಣಃ ।
ವಾರ್ಯಕ್ಷಃ ಕಕುಭೋ ವಜ್ರೀ ದೀಪ್ತತೇಜಾಃ ಸಹಸ್ರಪಾತ್ ॥

ಸಹಸ್ರಮೂರ್ಧಾ ದೇವೇಂದ್ರಃ ಸರ್ವದೇವಮಯೋ ಗುರುಃ ।
ಸಹಸ್ರಬಾಹುಃ ಸರ್ವಾಂಗಃ ಶರಣ್ಯಃ ಸರ್ವಲೋಕಕೃತ್ ॥

ಪವಿತ್ರಂ ತ್ರಿಮಧುರ್ಮಂತ್ರಃ ಕನಿಷ್ಠಃ ಕೃಷ್ಣಪಿಂಗಲಃ ।
ಬ್ರಹ್ಮದಂಡವಿನಿರ್ಮಾತಾ ಶತಘ್ನಃ ಶತಪಾಶಧೃಕ್ ॥

ಕಲಾ ಕಾಷ್ಠಾ ಲವೋ ಮಾತ್ರಾ ಮುಹೂರ್ತೋಽಹಃ ಕ್ಷಪಾ ಕ್ಷಣಃ।
ವಿಶ್ವಕ್ಷೇತ್ರ ಪ್ರದೋ ಬೀಜಂ ಲಿಂಗಮಾದ್ಯಸ್ತು ನಿರ್ಮುಖಃ ॥

ಸದಸದ್ವ್ಯಕ್ತಮವ್ಯಕ್ತಂ ಪಿತಾ ಮಾತಾ ಪಿತಾಮಹಃ ।
ಸ್ವರ್ಗದ್ವಾರಂ ಮೋಕ್ಷದ್ವಾರಂ ಪ್ರಜಾದ್ವಾರಂ ತ್ರಿವಿಷ್ಟಪಃ ॥

ನಿರ್ವಾಣಂ ಹೃದಯಶ್ಚೈವ ಬ್ರಹ್ಮಲೋಕಃ ಪರಾಗತಿಃ ।
ದೇವಾಽಸುರವಿನಿರ್ಮಾತಾ ದೇವಾಽಸುರಪರಾಯಣಃ ॥

ದೇವಾಽಸುರಗುರುರ್ದೇವೋ ದೇವಾಽಸುರನಮಸ್ಕೃತಃ ।
ದೇವಾಽಸುರಮಹಾಮಾತ್ರೋ ದೇವಾಽಸುರಗಣಾಶ್ರಯಃ ॥

ದೇವಾಸುರಗಣಾಧ್ಯಕ್ಷೋ ದೇವಾಸುರಗಣಾಗ್ರಣೀಃ ।
ದೇವಾಧಿದೇವೋ ದೇವರ್ಷಿರ್ದೇವಾಸುರವರ ಪ್ರದಃ ॥

ದೇವಾಽಸುರೇಶ್ವರೋ ವಿಷ್ಣುರ್ದೇವಾಽಸುರ ಮಹೇಶ್ವರಃ ।
ಸರ್ವದೇವಮಯೋಽಚಿಂತ್ಯೋ ದೇವತಾತ್ಮಾ ಸ್ವಯಂ ಭವಃ ॥

ಉದ್ಗತಸ್ತ್ರಿಕ್ರಮೋ ವೈದ್ಯೋ ವರದೋಽವರಜೋಽಂಽಬರಃ ।
ಇಜ್ಯೋ ಹಸ್ತೀ ತಥಾ ವ್ಯಾಘ್ರೋ ದೇವಸಿಂಹೋ ಮಹರ್ಷಭಃ ॥

ವಿಬುಧಾಗ್ರ್ಯಃ ಸುರಃ ಶ್ರೇಷ್ಠಃ ಸ್ವರ್ಗದೇವ ವ್ರತೋತ್ತಮಃ ।
ಸಂಯುಕ್ತಃ ಶೋಭನೋ ವಕ್ತಾ ಆಶಾನಾಂ ಪ್ರಭವೋಽವ್ಯಯಃ ॥

ಗುರುಃ ಕಾಂತೋ ನಿಜಃ ಸರ್ಗಃ ಪವಿತ್ರಃ ಸರ್ವವಾಹನಃ ।
ಶೃಂಗೀ ಶೃಂಗಪ್ರಿಯೋ ಬಭ್ರೂ ರಾಜರಾಜೋ ನಿರಾಮಯಃ ॥

ಅಭಿರಾಮಃ ಸುಶರಣೋ ನಿರಾಮಃ ಸರ್ವಸಾಧನಃ ।
ಲಲಾಟಾಕ್ಷೋ ವಿಶ್ವದೇಹೋ ಹರಣೋ ಬ್ರಹ್ಮ ವರ್ಚಸಃ ॥

ಸ್ಥಾವರಾಣಾಂ ಪತಿಶ್ಚೈವ ನಿಯತೇಂದ್ರಿಯ ವರ್ತನಃ ।
ಸಿದ್ಧಾರ್ಥಃ ಸರ್ವ ಭೂತಾರ್ಥೋಽಚಿಂತ್ಯಃ ಸತ್ಯಃ ಶುಚಿವ್ರತಃ ॥

ವ್ರತಾಧಿಪಃ ಪರಂ ಬ್ರಹ್ಮ ಮುಕ್ತಾನಾಂ ಪರಮಾಗತಿಃ ।
ವಿಮುಕ್ತೋ ಮುಕ್ತಕೇಶಶ್ಚ ಶ್ರೀಮಾನ್ ಶ್ರೀ ವರ್ಧನೋ ಜಗತ್॥

ಯಥಾ ಪ್ರಧಾನಂ ಭಗವಾನಿತಿ ಭಕ್ತ್ಯಾ ಸ್ತುತೋ ಮಯಾ ।
ಭಕ್ತಿಮೇವಂ ಪುರಸ್ಕೃತ್ಯ ಮಯಾ ಯಜ್ಞಪತಿರ್ವಿಭುಃ ॥

ತತೋ ಹ್ಯನುಜ್ಞಾಂ ಪ್ರಾಪ್ಯೈವಂ ಸುತೋ ಭಕ್ತ ಮತಾಂಗತಿಃ ।
ತಸ್ಮಾಲ್ಲಬ್ಧ್ವಾ ಸ್ತವಂ ಶಂಭೋ ರ್ನೃಪಸ್ತ್ರೈಲೋಕ್ಯ ವಿಶ್ರುತಃ ॥

ಅಶ್ವಮೇಧ ಸಹಸ್ರಸ್ಯ ಫಲಂ ಪ್ರಾಪ್ಯ ಮಹಾಯಶಾಃ ।
ಗಣಾಧಿಪತ್ಯಂ ಸಂಪ್ರಾಪ್ತ ಸ್ತಂಡಿನಸ್ತೇಜಸಾ ಪ್ರಭೋಃ ॥

ಯಃ ಪಠೇಚ್ಛೃಣುಯಾದ್ವಾಽಪಿ ಶ್ರಾವಯೇದ್ಬ್ರಾಹ್ಮಣಾನಪಿ ।
ಅಶ್ವಮೇಧ ಸಹಸ್ರಸ್ಯ ಫಲಂ ಪ್ರಾಪ್ನೋತಿ ವೈ ದ್ವಿಜಃ ॥

ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।
ಶರಣಾಗತಿ ಕಾಲೇ ಚ ಮಿತ್ರವಿಶ್ವಾಸ ಘಾತಕಃ ॥

ಮಾತೃಹಾ ಪಿತೃಹಾ ಚೈವ ವೀರಹಾ ಭ್ರೂಣಹಾ ತಥಾ ।
ಸಂವತ್ಸರಂ ಕ್ರಮಾಜ್ಜಪ್ತ್ವಾ ತ್ರಿಸಂಧ್ಯಂ ಶಂಕರಾಶ್ರಮೇ ॥
ದೇವಮಿಷ್ಟ್ವಾ ತ್ರಿಸಂಧ್ಯಂ ಚ ಸರ್ವಪಾಪೈಃ ಪ್ರಮುಚ್ಯತೇ ।

*ಇತಿ ಲಿಂಗಮಹಾಪುರಾಣ ಪೂರ್ವಾರ್ಧದ ರುದ್ರಸಹಸ್ರನಾಮಕಥನ ಎಂಬ ಅರವತ್ತೈದನೆಯ ಅಧ್ಯಾಯ ಮುಗಿದುದು.*

—o—

## ವಸಿಷ್ಠರ ವಂಶವಿಚಾರ

ಅಧ್ಯಾಯ - ೬೬

**ಸೂತ :-** ತಂಡಿ ಮಹರ್ಷಿಗಳ ಅನುಗ್ರಹದಿಂದಲೂ, ಶಿವಾನುಗ್ರಹದಿಂದಲೂ ತ್ರಿಧನ್ವ ದೊರೆಯು ಪ್ರಯತ್ನಪೂರ್ವಕವಾಗಿ ಸಾವಿರ ಅಶ್ವಮೇಧಯಾಗದ ಫಲವನ್ನು ಹೊಂದಿದನು. ಅವನು ಗಣಗಳಿಗೆ ಅಧಿಪತಿಯೂ ಎಲ್ಲಾ ದೇವತೆಗಳಿಂದ ನಮಸ್ಕರಿಸಲ್ಪಟ್ಟವನೂ, ಆದನು. ತ್ರಿಧನ್ವ ದೊರೆಗೆ ವಿದ್ವಾಂಸನಾದ ತ್ರಯ್ಯಾರುಣ ಎಂಬ ರಾಜಕುಮಾರನಿದ್ದನು. ತ್ರಯ್ಯಾರುಣನಿಗೆ ಬಲಿಷ್ಠನಾದ ಸತ್ಯವ್ರತನೆಂಬ ಕುಮಾರನಿದ್ದನು. ಸತ್ಯವ್ರತನು ಬಹಳ ತೇಜಸ್ವಿಯಾದ ವಿದರ್ಭದೇಶದ ದೊರೆಯ ಪತ್ನಿಯನ್ನು ಅಪಹರಿಸಿದನು. ಸತ್ಯವ್ರತನು ವಿದರ್ಭದೇಶದ ರಾಜನ ಪತ್ನಿಯನ್ನು ಇನ್ನೂ ಪಾಣಿಗ್ರಹಣ ವಾಗುವುದಕ್ಕಿಂತ ಮುಂಚೆಯೇ ಅಪಹರಿಸಿದನು. ತ್ರಯ್ಯಾರುಣ ರಾಜನು ಇಂಥಾ ಅಧರ್ಮದ ಕೆಲಸಮಾಡಿದ ಸತ್ಯವ್ರತನನ್ನು ತ್ಯಾಗ ಮಾಡಿದನು. ಹೀಗೆ ತ್ಯಾಗಮಾಡಲ್ಪಟ್ಟ ಸತ್ಯವ್ರತನು ತನ್ನ ತಂದೆಯನ್ನು ಕುರಿತು ''ನಾನು ಎಲ್ಲಿಗೆ ಹೋಗಲಿ?'' ಎಂದು ಕೇಳಿದನು. ತ್ರಯ್ಯಾರುಣನು ಅದಕ್ಕೆ ''ಚಂಡಾಲರೊಂದಿಗೆ ವಾಸಮಾಡು'' ಎಂದು ಸತ್ಯವ್ರತನಿಗೆ ಹೇಳಿದನು. ಹೀಗೆ ತಂದೆಯಿಂದ ಕಳುಹಿಸಲ್ಪಟ್ಟ ಸತ್ಯವ್ರತನು ತಂದೆಯ ಮಾತಿನಂತೆ ಪಟ್ಟಣದಿಂದ ಹೊರಗೆ ಹೊರಟು ಹೋದನು. ಅನಂತರ ಬುದ್ಧಿವಂತನೂ, ವೀರ್ಯವಂತನೂ ಆದ ಸತ್ಯವ್ರತನು ಚಂಡಾಲರ ಮನೆಯ ಸಮೀಪದಲ್ಲಿ ವಾಸಮಾಡಲು ಪ್ರಾರಂಭಿಸಿದನು. ಇವನ ತಂದೆಯಾದ ತ್ರಯ್ಯಾರುಣನು ಕಾಡಿಗೆ ಹೊರಟುಹೋದನು. ಹೀಗೆ ತಂದೆಯಿಂದ ಕಳುಹಿಸಲ್ಪಟ್ಟ ಸತ್ಯವ್ರತನು ಚಂಡಾಲರ ಜೊತೆಯಲ್ಲಿರುತ್ತಾ ವೀರ್ಯವಂತನಾಗಿಯೂ ತ್ರಿಶಂಕು ಎಂದು ಮೂರು ಲೋಕದಲ್ಲಿಯೂ ಪ್ರಸಿದ್ಧನಾಗಿಯೂ ಇದ್ದನು. ಹಿಂದೆ ಸತ್ಯವ್ರತನಿಗೆ ಪುಣ್ಯಾತ್ಮನಾದ ತ್ರಿಶಂಕುಸ್ಥಾನ ಲಭಿಸಲು ವಸಿಷ್ಠ ಮಹರ್ಷಿಗಳ ಕೋಪವೇ ಕಾರಣವು. ಮಹಾತೇಜಸ್ವಿಯಾದ ವಿಶ್ವಾಮಿತ್ರನು ತ್ರಿಶಂಕುವಿಗೆ ವರವನ್ನು ಕೊಟ್ಟು ಅವನ ತಂದೆಯ ಸ್ಥಾನದಲ್ಲಿ ಪಟ್ಟಾಭಿಷೇಕಮಾಡಿಸಿ ಅವನ ಕಡೆಯಿಂದ ಯಾಗಮಾಡಿಸಿದನು. ಆಗ ವಿಶ್ವಾಮಿತ್ರರು ಸ್ವರ್ಗದ ದೇವತೆಗಳೂ ವಸಿಷ್ಠರೂ ನೋಡುತ್ತಿರಲು ತ್ರಿಶಂಕುವನ್ನು ಇಹಲೋಕದ ಶರೀರದಲ್ಲಿಯೇ ಸ್ವರ್ಗಕ್ಕೇರಿಸಿದರು. ಅವನಿಗೆ ಕೇಕಯವಂಶದ ಸತ್ಯವ್ರತಾ ಎಂಬ ಹೆಸರಿನ ಪತ್ನಿಯಿದ್ದಳು.

ಸತ್ಯವ್ರತೆಯು ಶುದ್ಧ ಸ್ವಭಾವದ ಹರಿಶ್ಚಂದ್ರನನ್ನು ಪ್ರಸವಿಸಿದಳು. ಪರಾಕ್ರಮಶಾಲಿಯಾದ ರೋಹಿತ ಎಂಬುವವನು ಹರಿಶ್ಚಂದ್ರನ ಮಗನು. ಹರಿತನು ರೋಹಿತನ ಮಗನು. ಹರಿತನ ಮಗನು ಧುಂಧುವು. ಧುಂಧುವಿಗೆ ವಿಜಯ, ಸುತೇಜ ಎಂಬಿಬ್ಬರು ಮಕ್ಕಳಾದರು. ಕ್ಷತ್ರಿಯ ವಂಶವೆಲ್ಲವನ್ನೂ ಜಯಿಸಿದ್ದರಿಂದಲೇ ವಿಜಯ ಎಂಬ ಹೆಸರು ಅವನಿಗೆ ಬಂದಿತು. ವಿಜಯನ ಮಗನು ರುಚಕನು. ಅವನು ಧರ್ಮಾತ್ಮನಾಗಿದ್ದನು. ವೃಕ ಎಂಬುವವನು ರುಚಕನ ಮಗನು. ವೃಕನಿಂದ ಬಾಹುವಿನ ಜನನವಾಯಿತು. ಬಾಹುವಿಗೆ ಪರಮ ಧರ್ಮಿಷ್ಠನಾದ ಸಗರನೆಂಬ ಮಗನಾದನು.

ಸಗರನಿಗೆ ಪ್ರಭಾ, ಭಾನುಮತೀ ಎಂಬಿಬ್ಬರು ಪತ್ನಿಯರಿದ್ದರು. ಇವರಿಬ್ಬರೂ ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ಬಡವಾಗ್ನಿಯನ್ನು ಪೂಜಿಸಿದರು.

ಬಡವಾಗ್ನಿಯು ಸಂತುಷ್ಟನಾಗಿ ಅವರಿಗೆ ಬೇಕಾದ ಶ್ರೇಷ್ಠವಾದ ವರಗಳನ್ನು ಕೊಟ್ಟನು. ಅವನು ಅವರಲ್ಲಿ ಒಬ್ಬಳು ಅರವತ್ತು ಸಾವಿರ ಮಕ್ಕಳನ್ನೂ ಇನ್ನೊಬ್ಬಳು ಒಬ್ಬ ಮಗನನ್ನೂ ಪಡೆಯಬೇಕೆಂದು ವರವನ್ನು ನೀಡಿದನು. ವಂಶೋದ್ಧಾರಕರಾದ ಅನೇಕ ಮಂದಿ ಮಕ್ಕಳನ್ನು ಪ್ರಭೆಯು ಹೆತ್ತಳು. ಭಾನುಮತಿಯು ಅಸಮಂಜಸನೆಂಬ ಒಬ್ಬ ಮಗನನ್ನು ಮಾತ್ರ ಪ್ರಸವಿಸಿದಳು. ಪ್ರಭೆಯು ಅರವತ್ತುಸಾವಿರ ಮಕ್ಕಳನ್ನು ಪಡೆದಳು. ಈ ಮಕ್ಕಳು ಭೂಮಿಯನ್ನು ಅಗೆಯುತ್ತಾ ವಿಷ್ಣುವಿನ ಹುಂಕಾರವೆಂಬ ಬಾಣದಿಂದ ಸುಡಲ್ಪಟ್ಟರು. ಅಸಮಂಜಸನ ಮಗನು ''ಅಂಶುಮಾನ್'' ಎಂದು ಪ್ರಸಿದ್ಧನಾಗಿದ್ದನು. ಅವನ ಮಗನು ದಿಲೀಪನು. ದಿಲೀಪನ ಮಗನು ಭಗೀರಥನು. ಈ ಭಗೀರಥನೇ ತಪಸ್ಸುಮಾಡಿ ಗಂಗಾನದಿಯನ್ನು ಭೂಮಿಗೆ ತಂದವನು. ಭಗೀರಥನಿಗೆ ಶ್ರುತ ಎಂಬ ಮಗನಾದನು. ಶ್ರುತನ ಜ್ಞಾತಿಯಾದ ನಾಭಾಗನು ಈಶ್ವರ ಭಕ್ತನಾಗಿಯೂ, ಪರಾಕ್ರಮಶಾಲಿಯಾಗಿಯೂ ಇದ್ದನು. ಅವನ ಮಗನು ಅಂಬರೀಷನು. ಅವನಿಗೆ ಸಿಂಧುದ್ವೀಪನೆಂಬ ಮಗನಾದನು.

ನಾಭಾಗನೂ ಅಂಬರೀಷನೂ ದೊರೆಗಳಾಗಿದ್ದಾಗ ಅವರ ದೇಶದಲ್ಲಿ ಯಾವ ವಿಧವಾದ ತಾಪತ್ರಯಗಳೂ ಸ್ವಲ್ಪವೂ ಇರಲಿಲ್ಲ. ಅಂಬರೀಷನ ಮಗನು ಅಯುತಾಯುಸ್ಸು. ಅವನ ಮಗನು ಕೀರ್ತಿವಂತನೂ, ಪರಾಕ್ರಮ ಶಾಲಿಯೂ ಆದ ಋತುಪರ್ಣನು. ಬಲಿಷ್ಠನೂ, ನಳನ ಸ್ನೇಹಿತನೂ ಆದ ಋತುಪರ್ಣನು ಕುಶಲನಾಗಿ ಪಗಡೆಯಾಡುವುದರಲ್ಲಿ ನಿಪುಣನಾಗಿದ್ದನು. ಧೃಡವಾದ ಮನಸ್ಸುಳ್ಳ ನಳರು ಪುರಾಣಗಳಲ್ಲಿ ಇಬ್ಬರು ಪ್ರಸಿದ್ಧರಾಗಿದ್ದಾರೆ. ಇಬ್ಬರು ಪುರಾಣ ಪ್ರಸಿದ್ಧರಾದ ನಳರಲ್ಲಿ ಒಬ್ಬನು ವೀರಸೇನನ ಮಗನು, ಮತ್ತೊಬ್ಬನು ಇಕ್ಷ್ವಾಕು ವಂಶದಲ್ಲಿ ಹುಟ್ಟಿದವನು. ಜನಗಳ ರಕ್ಷಕನಾಗಿಯೂ, ಚಕ್ರವರ್ತಿಯಾಗಿಯೂ ಇದ್ದ ಸುದಾಸನೆಂಬುವವನು ಋತುಪರ್ಣನ ಮಗನು. ಸುದಾಸನು ಇಂದ್ರನಿಗೆ ಸಮಾನವಾದ ವೈಭವದಿಂದ ಆಳಿದನು. ಸುದಾಸನ ಮಗನು ಸೌದಾಸನೆಂದು ಹೇಳಲಾಗಿದೆ.

ಸೌದಾಸನೇ ಕಲ್ಮಾಷಪಾದ ಎಂಬ ಹೆಸರಿನಿಂದ ಸ್ನೇಹಪರನಾದ ರಾಜನಾಗಿದ್ದನು. ಮಹಾತೇಜಸ್ವಿಗಳಾದ ವಸಿಷ್ಠರ ಅನುಗ್ರಹದಿಂದ ಕಲ್ಮಾಷಪಾದನಿಗೆ ಇಕ್ಷ್ವಾಕು ವಂಶೋದ್ಧಾರಕನಾದ ಅಶ್ಮಕ ಎಂಬ ಮಗನು ಜನಿಸಿದನು. ಅಶ್ಮಕನಿಗೆ ಉತ್ತರಾ ಎಂಬ ಸ್ತ್ರೀಯ ಸಂಬಂಧದಿಂದ ಮೂಲಕ ಎಂಬುವನು ಹುಟ್ಟಿದನು. ಮೂಲಕನು ಪರಶುರಾಮನ ಭಯದಿಂದ ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟವನಾಗಿ ಶ್ರೇಷ್ಠನಾದ ನಾರೀಕವಚದ ಸಂಬಂಧದಿಂದ ತನ್ನನ್ನು ರಕ್ಷಿಸಿಕೊಂಡನು. ಮೂಲಕನಿಗೆ ಧರ್ಮಾತ್ಮನಾದ ಶತರಥ ಎಂಬ ಮಗನಾದನು. ಶತರಥನಿಗೆ ಇಲವಿಲ ಎಂಬ ರಾಜಕುಮಾರನಾದನು. ಇಲವಿಲನಿಗೆ ಶ್ರೀಮಂತನೂ ಪರಾಕ್ರಮಶಾಲಿಯೂ ಆದ ವಿಶ್ವಸಹ ಎಂಬ ಮಗನಾದನು. ವಿಶ್ವಸಹನಿಗೂ, ಪಿತೃಕನ್ಯೆಗೂ ವಿವಾಹವಾಯಿತು.

ದಿಲೀಪನ ಮಗನು ಖಟ್ವಾಂಗನೆಂದು ಪ್ರಸಿದ್ಧನಾಗಿದ್ದನು. ಖಟ್ವಾಂಗನು ಸ್ವರ್ಗದಿಂದ ಭೂಮಿಯಲ್ಲಿ ಇಳಿದು ಕ್ಷಣಕಾಲ ಜೀವನವನ್ನು ಹೊಂದಿದ್ದನು. ಅವನಿಂದ ಮೂರು

ಅಗ್ನಿಗಳೂ, ಲೋಕಗಳೂ ಬುದ್ಧಿಯಿಂದಲೂ ಸತ್ಯದಿಂದಲೂ ಜಯಿಸಲ್ಪಟ್ಟವು. ಖಟ್ವಾಂಗನ ಮಗನು ದೀರ್ಘಬಾಹುವು. ದೀರ್ಘಬಾಹುವಿನಿಂದ ರಘುವು ಉತ್ಪನ್ನನಾದನು. ಅಜನು ರಘುವಿನ ಮಗನು. ಅಜನಿಂದ ಶೂರನಾದ ದಶರಥನು ಹುಟ್ಟಿದನು. ಇವನೂ ಶ್ರೀಮಂತನೂ ಇಕ್ಷ್ವಾಕು ವಂಶೋದ್ಧಾರಕನೂ ಆಗಿದ್ದನು.

ದಶರಥನಿಗೆ ರಾಮನೆಂಬ ಧರ್ಮಜ್ಞನೂ, ವೀರನೂ, ಪ್ರಪಂಚ ಪ್ರಸಿದ್ಧನೂ ಆದ ಮಗನಿದ್ದನು. ಅಲ್ಲದೇ ದಶರಥನಿಗೆ ವೀರರಾದ ಭರತ, ಲಕ್ಷ್ಮಣ ಮತ್ತು ಶತ್ರುಘ್ನರೆಂಬ ಮಕ್ಕಳೂ ಇದ್ದರು. ಅವರುಗಳಲ್ಲಿ ರಾಮನು ಶ್ರೇಷ್ಠನಾಗಿಯೂ ಬಹಳ ಪರಾಕ್ರಮಶಾಲಿಯೂ ಆಗಿದ್ದನು. ಅವನು ರಾವಣನನ್ನು ಯುದ್ಧದಲ್ಲಿ ಸಂಹಾರ ಮಾಡಿದನು. ಯಾಗಗಳನ್ನು ಮಾಡಿದನು. ಈ ರೀತಿಯಲ್ಲಿ ಅವನು ಹತ್ತು ಸಾವಿರ ವರ್ಷಗಳು ರಾಜ್ಯಭಾರಮಾಡಿದನು. ರಾಮನ ಮಗನು ಕುಶನೆಂದು ಬಹಳ ಪ್ರಸಿದ್ಧನಾಗಿದ್ದನು. ರಾಮನಿಗೆ ಲವ ಕುಶ ಎಂಬ ಮಕ್ಕಳಿದ್ದರು.

ಕುಶನಿಗೆ ಅತಿಥಿ ಎಂಬ ಮಗನಿದ್ದನು. ನಿಷಧನು ಅತಿಥಿಯ ಮಗನು. ನಿಷಧನಿಗೆ ನಲನು ಮಗನು. ನಲನಿಂದ ನಭಸ್ಸು ಎಂಬವನು ಹುಟ್ಟಿದನು. ನಭಸ್ಸಿಗೆ ಪುಂಡರೀಕನೆಂಬ ಮಗನಾದನು. ಪುಂಡರೀಕನಿಗೆ ಕ್ಷೇಮಧನ್ವಾ ಎಂಬ ಮಗನಾದನು. ಕ್ಷೇಮಧನ್ವನ ಮಗನು ವೀರನು. ವೀರನಿಗೆ ಅಹೀನರನು ಮಗನು. ಅಹೀನರನಿಗೆ ಸಹಸ್ರಾಕ್ಷನೆಂಬ ಮಗನಾದನು. ಸಹಸ್ರಾಕ್ಷನಿಗೆ ಮಂಗಳಕರನೂ, ಚಂದ್ರನಂತೆ ಕಾಂತಿಯುಕ್ತನೂ ಆದ ತಾರಾಪೀಡನೆಂಬ ಮಗನಾದನು ತಾರಾಪೀಡನ ಮಗನು ಚಂದ್ರಗಿರಿಯು. ಚಂದ್ರಗಿರಿಯ ಮಗನು ಭಾನುಚಂದ್ರನು. ಭಾನುಚಂದ್ರನಿಗೆ ಶ್ರುತಾಯು ಎಂಬ ಮಗನು ಹುಟ್ಟಿದನು. ಶುತ್ರಾಯುವಿನ ಮಗನು ಬೃಹದ್ಬಲನಾಗಿರುವನು ಸುಭದ್ರೆಯ ಮಗನಾದ ಅಭಿಮನ್ಯುವಿನಿಂದ ಈ ಬೃಹದ್ಬಲನು ಭಾರತಯುದ್ಧದಲ್ಲಿ ಸೋಲಿಸಲ್ಪಟ್ಟನು. ಈ ಎಲ್ಲ ದೊರೆಗಳೂ ಪಶುಪತಿಯಾದ ಪರಮೇಶ್ವರನ ಜ್ಞಾನವನ್ನು ಚೆನ್ನಾಗಿ ಪಡೆದು ಅವನನ್ನು ಯಾಗಗಳಿಂದ ಪೂಜಿಸಿ, ಮಹನೀಯರಾಗಿದ್ದು ಸ್ವರ್ಗಸ್ಥರಾದರು. ಕೆಲವರು ಯೋಗಾಭ್ಯಾಸಮಾಡಿ ಆತ್ಮ ಸಾಕ್ಷಾತ್ಕಾರವನ್ನೂ ಮುಕ್ತಿಯನ್ನೂ ಪಡೆದರು. ನೃಗನೆಂಬ ದೊರೆಯು ಮಾತ್ರ ಬ್ರಾಹ್ಮಣನ ಶಾಪದಿಂದ ಹೆಂಟೆಗೊದ್ದನಾದನು. ಇವನಿಗೆ ಧೃಷ್ಟ ಮುಂತಾದ ನಾಲ್ಕು ಜನ ಮಕ್ಕಳಿದ್ದರು ಅವರಲ್ಲಿ ಮೂವರು ಮಕ್ಕಳು, ಧೃಷ್ಟಕೇತು, ಯಮಬಾಲ, ರಣಧೃಷ್ಟ ಎಂಬುವವರು ಬಹಳ ಧಾರ್ಮಿಕರಾಗಿದ್ದರು. ಆನರ್ತ ಎಂದು ಹೆಸರು ಪಡೆದಿದ್ದ ಶರ್ಯಾತಿಗೆ ಸುಕನ್ಯೆ ಎಂಬ ಹೆಣ್ಣು ಮಗಳಿದ್ದಳು. ಆನರ್ತನ ಮಗ ರೋಚಮಾನನೆಂಬುವನು ಪರಾಕ್ರಮಶಾಲಿಯಾಗಿದ್ದನು. ರೋಚಮಾನನಿಗೆ ರೇವನೆಂಬ ಮಗನಾದನು. ರೇವನಿಗೆ ರೈವತನೆಂಬ ಮಗನಾದನು. ಅವನ ನೂರು ಮಕ್ಕಳುಗಳಲ್ಲಿ ಹಿರಿಯವನಾದ ಕಕುದ್ಮೀ ಎಂಬ ಮಗನು ಇದ್ದನು.

ಕಕುದ್ಮಿಯ ಮಗಳಾದ ರೇವತಿಯು ಬಲರಾಮನ ಪತ್ನಿಯೆಂದು ಪ್ರಸಿದ್ಧಳಾಗಿದ್ದಳು. ಅವಳಿಗೆ ನರಿಷ್ಯಂತನೆಂಬ ಜಿತೇಂದ್ರಿಯನೂ ಶೂರನೂ ಆದ ಮಗನಿದ್ದನು. ಅಂಬರೀಷನು ವಿಷ್ಣು ಭಕ್ತನಾಗಿಯೂ ಪರಾಕ್ರಮಶಾಲಿಯಾಗಿಯೂ ಇದ್ದನು. ಇವನು ನಾಭಾಗನ

ಮಗನು. ಶ್ರೀಮಂತನಾಗಿಯೂ ಎಲ್ಲಾ ಧರ್ಮಗಳನ್ನು ಅರಿತವನೂ ಆದ ಋತನು ಅಂಬರೀಷನ ಮಗನು. ಋತನ ಮಗನು ಧರ್ಮಿಷ್ಠನಾಗಿರುತ್ತಾ ಪೃಷಿತ ಎಂದು ಹೆಸರು ಪಡೆದಿದ್ದನು. ಇವನೇ ಇನ್ನೊಬ್ಬ ಕರೂಷನು. ಕರೂಷನ ಮಕ್ಕಳು ಕಾರೂಷ ಎಂದು ಬಹಳ ಪ್ರಸಿದ್ಧರಾಗಿದ್ದರು. ಚ್ಯವನ ಮಹರ್ಷಿಗಳ ಹಸುವಿಗೆ ಹಿಂಸೆಮಾಡಿ ಪೃಷಿತನು ಅವರ ಶಾಪಕ್ಕೆ ಗುರಿಯಾದನು. ಅವರ ಶಾಪದಿಂದ ಶೂದ್ರನಾದನೆಂದು ಪ್ರಸಿದ್ಧಿಯಿದೆ. ದಿಷ್ಟ ಎಂಬವನ ಮಗನು ನಾಭಾಗ. ಈ ನಾಭಾಗನಿಗೆ ಭಲಂದನ ಎಂಬ ಕುಮಾರನಿದ್ದನು. ಭಲಂದನನಿಗೆ ಅಜವಾಹನ ಎಂಬ ರಾಜಕುಮಾರನು ಪ್ರಸಿದ್ಧನಾಗಿದ್ದನು. ಐಲನ ವಂಶದ ರಾಜರಲ್ಲಿ ಪುರೂರವನೆಂಬ ಈಶ್ವರ ಭಕ್ತನೂ, ಶೂರನೂ ಆದ ದೊರೆಯು ನಿಷ್ಕಂಟಕವಾಗಿ ರಾಜ್ಯವಾಳುತ್ತಿದ್ದನು. ಈ ದೊರೆಯು ಮುನಿಗಳ ವಾಸಸ್ಥಾನವಾದ ಉತ್ತರ ದೇಶದಲ್ಲಿರುವ ಪುಣ್ಯಭೂಮಿಯಾದ ಪ್ರಯಾಗಕ್ಷೇತ್ರದಲ್ಲಿ ಪ್ರತಿಷ್ಠಾನ ಎಂದು ಪ್ರಸಿದ್ಧವಾದ ನಗರಕ್ಕೆ ಅಧಿಪತಿಯಾಗಿದ್ದನು. ಇವನ ಮಕ್ಕಳು ಬಹಳ ತೇಜಸ್ವಿಗಳು, ಈಶ್ವರ ಭಕ್ತರು, ಮಹಾಶೂರರೂ, ಗಂಧರ್ವಲೋಕದಲ್ಲಿ ಬಹಳ ಹೆಸರುವಾಸಗಳಾಗಿಯೂ ಇದ್ದರು.

ಪುರೂರವನಿಗೆ ಊರ್ವಶಿಯಲ್ಲಿ ಆಯು, ಮಾಯು ಅಮಾಯು, ವಿಶ್ವಾಯು, ಶ್ರುತಾಯು, ಶತಾಯು ಎಂಬ ಹೆಸರುಳ್ಳ ದಿವ್ಯವಾದ ಮಕ್ಕಳಾದರು. ಬಹಳ ತೇಜಸ್ವಿಯಾದ ಆಯುಸ್ಸಿಗೆ ಸ್ವರ್ಭಾನುವಿನ ಮಗಳಾದ ಪ್ರಭೆ ಎಂಬುವಳಲ್ಲಿ ವೀರರಾದ ಐದು ಜನ ಮಕ್ಕಳು ಉತ್ಪನ್ನರಾದರು. ಇವರ ಪೈಕಿ ಧರ್ಮವನ್ನರಿತವನೂ, ಲೋಕಪ್ರಸಿದ್ಧನೂ ಆದ ನಹುಷನು ಮೊದಲನೆಯವನು. ನಹುಷನಿಗೆ ಇಂದ್ರನಿಗೆ ಸಮಾನವಾದ ತೇಜಸ್ಸುಳ್ಳ ಆರುಜನ ಪುತ್ರರಿದ್ದರು. ಮಹಾ ತೇಜಸ್ವಿಗಳಾದ ಈ ಮಕ್ಕಳು ಪಿತೃಕನ್ಯೆಯಾದ ವಿರಜಾ ಎಂಬುವವಳಲ್ಲಿ ಹುಟ್ಟಿದರು. ಇವರಿಗೆ ಹೆಸರುಗಳು ಕ್ರಮವಾಗಿ ಯತಿ, ಯಯಾತಿ, ಸಂಯಾತಿ, ಆಯಾತಿ, ಅಂಧಕ, ವಿಯಾತಿ ಎಂದಾಗಿರುತ್ತದೆ. ಇವರೆಲ್ಲರೂ ಬಹಳ ಪ್ರಸಿದ್ಧರಾಗಿದ್ದರು. ಇವರಲ್ಲಿ ಯತಿಯೇ ಹಿರಿಯ ಮಗನು. ಯಯಾತಿಯು ಎರಡನೆಯವನು.

ಹಿರಿಯವನಾದ ಯತಿಯು ಮೋಕ್ಷಾಭಿಲಾಷೆಯುಳ್ಳವನಾಗಿ ಬ್ರಹ್ಮನಲ್ಲಿ ಐಕ್ಯವಾದನು. ಉಳಿದವರಲ್ಲಿ ಯಯಾತಿಯು ಉಳಿದ ತಮ್ಮಂದಿರಿಗಿಂತ ಬಹಳ ಶೂರನಾಗಿದ್ದನು. ಇವನು ಶುಕ್ರನ ಮಗಳಾದ ದೇವಯಾನಿಯನ್ನು ಮದುವೆಯಾದನು. ಯಯಾತಿಯು ವೃಷಪರ್ವನ ಮಗಳಾದ ಅಸುರಕುಲೋತ್ಪನ್ನಳಾದ ಶರ್ಮಿಷ್ಠಾ ಎಂಬ ಕನ್ಯೆಯನ್ನೂ ಮದುವೆಯಾದನು. ದೇವಯಾನಿಯು ಯದು, ತುರ್ವಸು ಎಂಬಿಬ್ಬರು ಮಕ್ಕಳನ್ನು ಹೆತ್ತಳು. ಈ ಇಬ್ಬರು ಮಕ್ಕಳೂ ಒಳ್ಳೆಯ ಕೆಲಸಮಾಡುತ್ತಲೂ ವಿದ್ಯಾಪಾರಂಗತರಾಗಿಯೂ ಜನರ ಪ್ರಶಂಸೆಗೆ ಪಾತ್ರರಾಗಿಯೂ ಇದ್ದರು.

ವೃಷಪರ್ವನ ಮಗಳಾದ ಶರ್ಮಿಷ್ಠೆಯು ದ್ರುಹ್ಯು ಅನು, ಪೂರು ಎಂಬವರನ್ನು ಹೆತ್ತಳು. ಶುಕ್ರನು ತನ್ನ ಅಳಿಯನಾದ ಯಯಾತಿಗೆ ಒಂದು ರಥವನ್ನು ಕೊಟ್ಟನು ಬ್ರಾಹ್ಮಣ ಶ್ರೇಷ್ಠನಾದ ಯಯಾತಿಯು ಈ ರಥ ಪ್ರಾಪ್ತಿಯಿಂದ ಸಂತೋಷಪಟ್ಟನು. ಈ ರಥವು ಸ್ವರ್ಗೀಯವಾಗಿ ಸುವಾಸನೆಯುಳ್ಳದ್ದಾಗಿಯೂ, ಸುವರ್ಣಮಯವೂ ಆಗಿ ಅಕ್ಷಯಬಾಣ

ಬತ್ತಳಿಕೆಗಳಿಂದ ಕೂಡಿದುದಾಗಿಯೂ ಪ್ರಕಾಶಿಸುತ್ತಿತ್ತು. ಯಯಾತಿಯು ತನ್ನ ಪತ್ನಿಯೊಡನೆ ಮನೋವೇಗವುಳ್ಳ ಕುದುರೆಗಳಿಂದ ಕೂಡಿದ ಈ ರಥವನ್ನು ಏರಿ ಅದರ ಸಹಾಯದಿಂದ ಕೇವಲ ಆರು ತಿಂಗಳೊಳಗಾಗಿಯೇ ಭೂಮಿಯನ್ನೆಲ್ಲವನ್ನೂ ಜಯಿಸಿದನು. ಈ ರಥದ ಸಹಾಯದಿಂದ ಯಯಾತಿಯು ಯುದ್ಧದಲ್ಲಿ ದೇವತೆಗಳು, ರಾಕ್ಷಸರು, ಮನುಷ್ಯರು ಇವರು ಯಾರಿಂದಲೂ ಸೋಲಿಸಲ್ಪಡಲಿಲ್ಲ. ಯಯಾತಿಯು ಈಶಭಕ್ತನೂ ಪುಣ್ಯವಂತನೂ, ಧರ್ಮಾತ್ಮನೂ, ಯೋಗ್ಯನೂ ಆಗಿದ್ದನು. ಇವನು ಅನೇಕ ಯಾಗಗಳನ್ನು ಮಾಡುವವನೂ, ಕೋಪವಿಲ್ಲದವನೂ ಎಲ್ಲಾ ಪ್ರಾಣಿಗಳಲ್ಲಿಯು ಕನಿಕರವುಳ್ಳವನೂ ಆಗಿದ್ದನು. ಈ ರಥವು ಎಲ್ಲಾ ಕುರುವಂಶದ ದೊರೆಗಳ ಹತ್ತಿರ ಬಹಳ ಕಾಲದವರೆಗೆ ಉತ್ತಮವಾಗಿತ್ತು. ಕೌರವರ ಗುಂಪಿನವನಾದ ಜನಮೇಜಯ, ಪುರುವಂಶದ ದೊರೆಯಾದ ಪರಿಕ್ಷಿತ, ಇವರ ಕಾಲದವರೆಗೂ ಈ ರಥವು ಒಂದೇ ಸಮನಾಗಿತ್ತು.

ಆದರೆ ಜನಮೇಜಯನ ಕಾಲದಲ್ಲಿ ಗರ್ಗಮಹರ್ಷಿಯ ಶಾಪದಿಂದ ಈ ರಥವು ಕೈ ಬಿಟ್ಟು ಹೋಯಿತು. ಜನಮೇಜಯ ದೊರೆಯು ಗರ್ಗಮಹರ್ಷಿಯ ಮಗನಾದ ಅಕ್ರೂರನೆಂಬ ಬಾಲಕನನ್ನು ಹಿಂಸೆಮಾಡಿ ಬ್ರಹ್ಮಹತ್ಯಾಮಹಾಪಾಪವನ್ನು ಹೊಂದಿದನು. ಮೈಯ್ಯಲ್ಲೆಲ್ಲ ರಕ್ತದ ವಾಸನೆ ಹರಡಿರುವ ರಾಜನಾದ ಜನಮೇಜಯನು ತನ್ನ ಪ್ರಜೆಗಳಿಂದ ಬಿಡಲ್ಪಟ್ಟು ಎಲ್ಲಾ ಕಡೆಯಲ್ಲೂ ದುಃಖಕ್ಕೆ ಒಳಗಾದನು. ದುಃಖದಿಂದ ಬಹಳ ಕಷ್ಟಪಟ್ಟು ಜನಮೇಜಯನು ದಿಕ್ಕುತೋಚದವನಾದನು.

ಆಗ ಜನಮೇಜನಯನು ಸಂಕಟಪಡುತ್ತಾ ಶೌನಕ ಮಹರ್ಷಿಗಳಿಗೆ ಶರಣು ಹೋದನು. ಈ ಶೌನಕಮಹರ್ಷಿಗಳು ಇಂದ್ರೇತಿ ಎಂದು ಪ್ರಸಿದ್ಧರಾಗಿ ಮಹಾತ್ಮರಾಗಿದ್ದರು. ಇಂದ್ರೇತಿ ಋಷಿಗಳು ಜನಮೇಜಯನು ತನ್ನ ಪಾಪ ಪರಿಹಾರಕ್ಕಾಗಿ ಅಶ್ವಮೇಧ ಯಾಗಮಾಡುವಂತೆ ಹೇಳಿದರು. ಆ ಯಾಗಮಾಡಿದ್ದರಿಂದ ಜನಮೇಜಯನು ರಕ್ತದ ವಾಸನೆಯಿಂದ ಬಿಡಲ್ಪಟ್ಟವನಾಗಿ ಪಾಪರಹಿತನೂ, ಕೀರ್ತಿಶಾಲಿಯೂ ಆದನು. ಯಜ್ಞದೀಕ್ಷಾ ವಿಸರ್ಜನ ಅವಭೃಥಸ್ನಾನದ ಕಾಲದಲ್ಲಿ ದಿವ್ಯವಾದ, ಮಂಗಳಕರವಾದ ಹಿಂದೆ ಕಳೆದು ಹೋಗಿದ್ದ ರಥವು ಪುನಃ ಪ್ರಾಪ್ತವಾಯಿತು. ಈ ರಥವು ಕೌರವರ ವಂಶದಿಂದ ನಷ್ಟವಾಗಿ ಚೇದಿ ದೇಶದ ದೊರೆಯಾದ ವಸುವಿಗೆ ಸಿಕ್ಕಿತು. ಶಕ್ರನು ಸಂತೋಷದಿಂದ ಈ ದೊಡ್ಡ ರಥವನ್ನು ವಸುವಿಗೆ ಕೊಟ್ಟನು. ಭೀಮನು ಜರಾಸಂಧನನ್ನು ಕೊಂದು ಈ ಶ್ರೇಷ್ಠವಾದ ರಥವನ್ನು ಕಸಿದುಕೊಂಡು ಬಹಳ ಪ್ರೀತಿಯಿಂದ ಕೃಷ್ಣನಿಗೆ ಕೊಟ್ಟನು. ನಹುಷನ ಮಗನಾದ ಯಯಾತಿ ರಾಜನು ತನ್ನ ಮಗನಾದ ಪುರುವಿನಿಂದ ಸಹಾಯಪಡೆದು ಪುರುವನ್ನೆ ರಾಜ್ಯದ ದೊರೆಯನ್ನಾಗಿ ಪಟ್ಟಾಭಿಷೇಕಮಾಡಲು ಇಷ್ಟಪಟ್ಟನು. ಆವನ ದೇಶದ ಬ್ರಾಹ್ಮಣರೇ ಮೊದಲಾದ ಸಕಲ ಪಂಗಡದವರೂ, ಸೇರಿ ಶುಕ್ರನ ಮೊಮ್ಮಗನೂ, ದೇವಯಾನಿಯ ಮಗನೂ ಆದ ಹಿರಿಯನಾದ ಯದುವು ಇರಲು ಕಿರಿಯವನಾದ ಪುರುವು ರಾಜ್ಯಕ್ಕೆ ಅಧಿಪತಿಯಾಗಲು ಯೋಗ್ಯನಾಗುವನೇ? ಎಂದು ಬಿನ್ನೈಸಿದರು.

*ಲಿಂಗಮಹಾಪುರಾಣ ಪೂರ್ವಾರ್ಧದ ವಸಿಷ್ಠರವಂಶ ವಿಚಾರ*
*ಎಂಬ ಆರವತ್ತಾರನೆಯ ಅಧ್ಯಾಯ ಮುಗಿದುದು*

—o—

## ಸೋಮವಂಶದ ಯಯಾತಿಯ ಚರಿತ್ರೆ



**ಯಯಾತಿ** :- ಬ್ರಾಹ್ಮಣರೇ ಮೊದಲಾದ ಸಕಲ ಪಂಗಡದವರೇ, ನಾನು ಹಿರಿಯ ಮಗನಿಗೆ ರಾಜ್ಯವನ್ನು ಏಕೆ ಕೊಡುವುದಿಲ್ಲ? ಎಂಬ ವಿಷಯವನ್ನು ಕೇಳಿರಿ, ನನ್ನ ಹಿರಿಯ ಮಗನಾದ ಯದುವು ನನ್ನ ಅಪ್ಪಣೆಯನ್ನು ಮೀರಿದನು. ಅವನು ನನಗೆ ವಿರುದ್ಧವಾಗಿ ನಡೆಯುವವನು. ಸತ್ಪುರುಷರು ಇಂಥಾಮಕ್ಕಳನ್ನು ಪುತ್ರರೆಂದೇ ಕರೆಯಲಾರರು. ತಂದೆತಾಯಿಗಳ ಮಾತನ್ನು ಕೇಳುವವನೇ ಪುತ್ರನೆಂದು ಸತ್ಪುರುಷರ ಅಭಿಪ್ರಾಯ. ಮಗನು ಹೇಗೆ ನಡೆದುಕೊಳ್ಳಬೇಕೋ ಹಾಗೆ ನಡೆಯುವವನೇ ಮಗನೆಂದು ಸತ್ಪುರುಷರು ಹೇಳುತ್ತಾರೆ. ನನ್ನ ಮಕ್ಕಳಾದ ಯದು, ತುರ್ವಸು ದ್ರುಹ್ಯ, ಅನು ಎಂಬ ನಾಲ್ಕು ಮಂದಿಯೂ ನನ್ನ ಮಾತನ್ನು ತಿರಸ್ಕರಿಸಿದರು. ಆದರೆ ಪುರುವು ನನ್ನ ಮಾತನ್ನು ನಡೆಸಿ ಗೌರವಿಸಿದನು. ಆದ್ದರಿಂದ ಅವನು ಬಹುಮಾನ ಯೋಗ್ಯನು. ಕಿರಿಯವನಾದ ಪುರುವು ನನ್ನ ಮಾತಿನಂತೆ ನನ್ನ ಮುಪ್ಪನ್ನು ತಾನು ಹೊಂದಿ ಅವನ ಯೌವ್ವನವನ್ನು ನನಗೆ ಕೊಟ್ಟನು. ಮಗಳಾದ ದೇವಯಾನಿಯ ಮೇಲಿನ ವ್ಯಾಮೋಹದಿಂದ ಶುಕ್ರನು ನನಗೆ ಒಂದು ವರವನ್ನು ಕೊಟ್ಟಿದ್ದನು. ಅದರ ಪ್ರಕಾರ ನನ್ನ ಮುಪ್ಪನ್ನು ನಾನು ಇಷ್ಟಪಟ್ಟರೆ ನನ್ನ ಮಕ್ಕಳಲ್ಲೊಬ್ಬರಿಗೆ ಬದಲಾಯಿಸಿಕೊಳ್ಳಬಲ್ಲೆ. ಅಲ್ಲದೆ ಕವಿಪುತ್ರನಾದ ಶುಕ್ರನಿಂದ ನಿನ್ನ ಮಕ್ಕಳಲ್ಲಿ ಯಾರು ನಿನ್ನ ಆಜ್ಞೆಯನ್ನು ಅನುಸರಿಸುವರೋ ಅವರು ರಾಜ್ಯಭಾರ ಮಾಡಲಿ ಎಂಬುದಾಗಿ ನನಗೆ ವರವು ಕೊಡಲ್ಪಟ್ಟಿತು. ಆದುದರಿಂದ ನೀವೂ ಕೂಡ ಈ ಪುರುವಿಗೆ ರಾಜ್ಯಾಭಿಷೇಕ ಮಾಡಲು ಸಮ್ಮತಿಸಿರಿ. ಎಂದು ಹೇಳಿದನು.

**ಪ್ರಜೆಗಳು**:-ಪ್ರಭುಗಳೇ, ಯಾವನು ಗುಣಾಢ್ಯನಾಗಿಯೂ ತಾಯಿ, ತಂದೆಗಳಿಗೆ ಸಂತೋಷ ವನ್ನುಂಟುಮಾಡುವವನಾಗಿಯೂ ಇರುವನೋ ಅಂಥಾ ಮಗನೇ ಚಿಕ್ಕವನಾದರೂ ರಾಜ್ಯಾಭಿಷೇಕಕ್ಕೆ ಅರ್ಹನು. ಪುರುವು ನಿಮ್ಮ ಮಾತನ್ನು ನಡೆಸಿರುವುದರಿಂದಲೂ ಶುಕ್ರನ ವರವನ್ನು ಮೀರಲು ಅಸಾಧ್ಯವಾಗಿರುವುದರಿಂದಲೂ ಅವನೇ ಈ ರಾಜ್ಯಕ್ಕೆ ಅರ್ಹನು.

**ಸೂತ** :- ಈ ರೀತಿಯಾಗಿ ಸಂತೋಷಗೊಂಡ ಪ್ರಜೆಗಳು ಒಪ್ಪಲು ಯಯಾತಿಯು ತನ್ನ ಸುಪುತ್ರನಾದ ಪುರುವನ್ನು ರಾಜ್ಯಭಿಷೇಕಮಾಡಿದನು. ಈಶಾನ್ಯ ದಿಕ್ಕಿನಲ್ಲಿ ತುರ್ವಸು ಎಂಬ ಮಗನನ್ನು ಮೇಲ್ವಿಚಾರಣೆಗೆ ನಿಯಮಿಸಿದನು. ಪಶ್ಚಿಮ ದಿಕ್ಕಿನಲ್ಲಿಯೂ, ಉತ್ತರದಿಕ್ಕಿನಲ್ಲಿಯೂ ದ್ರುಹ್ಯು, ಅನು ಎಂಬ ಕುಮಾರರನ್ನು ಕ್ರಮವಾಗಿ ನಿಯಮಿಸಿದನು. ಆ ಮೇಲೆ ಯಯಾತಿಯು ಸಮುದ್ರದಿಂದ ಸುತ್ತುವರಿಯಲ್ಪಟ್ಟ ಏಳುದ್ವೀಪಗಳುಳ್ಳ ಭೂಮಂಡಲವನ್ನು ಗೆದ್ದು ಬಹು ದೊಡ್ಡದಾದ ಆ ರಾಜ್ಯವನ್ನು ಮೂರು ಭಾಗವಾಗಿಮಾಡಿ ಆ ಮಕ್ಕಳಿಗೆಲ್ಲರಿಗೂ ಹಂಚಿದನು. ಯಯಾತಿಯು ತನ್ನ ರಾಜ್ಯವೆಲ್ಲವನ್ನೂ ಅನುಭವಿಸಿ ಮಕ್ಕಳಿಗೆ ಹಂಚಿ ಬಹಳ ಸಂತೋಷಪಟ್ಟನು. ತನ್ನ ಭಾರವೆಲ್ಲವನ್ನೂ ಮಕ್ಕಳಿಗೆ ಹಂಚಿದ್ದರಿಂದ ಅವನಿಗೆ ಬಹಳ ಸಂತೋಷವಾಯಿತು. ಅಷ್ಟು ರಾಜ್ಯದ ವೈಭವ ಪ್ರಪಂಚದ

ಸುಖ ಭೋಗಗಳೆಲ್ಲವನ್ನೂ ಅನುಭವಿಸಿ ಕೊನೆಗೆ ಯಯಾತಿ ಮಹಾರಾಜನು ಹೀಗೆ ಹೇಳಿದನು. ಆಮೆಯು ತನ್ನ ಅವಯವಗಳನ್ನು ಮುದುರಿಕೊಳ್ಳುವಂತೆ ಯಾವ ಮನುಷ್ಯನು ತನ್ನ ಆಸೆಗಳೆಲ್ಲವನ್ನೂ ಕಡಿಮೆ ಮಾಡಿಕೊಳ್ಳುವನೋ ಅವನೇ ನಿಜವಾದ ಮನುಷ್ಯನು. ಹಾಗಲ್ಲದೇ ತನ್ನ ಆಶೆಗಳಿಂದ ಪ್ರೇರಿತನಾಗಿ ಕರ್ಮಮಾಡಿ ಎಷ್ಟು ಲಾಭಗಳನ್ನು ಹೊಂದಿದರೂ ಅವನ ಜೀವನ ಸಾರ್ಥಕವಾದಂತಾಗುವುದಿಲ್ಲ. ಏಕೆಂದರೆ ಬಯಕೆಯಿಂದ ಎಷ್ಟು ಸುಖಗಳನ್ನನುಭವಿಸಿದರೂ ಬಯಕೆಗಳ ಶಮನವು ಆಗುವುದೇ ಇಲ್ಲ.

ಹವಿಸ್ಸು ಹಾಕುತ್ತಿದ್ದಷ್ಟೂ ಬೆಂಕಿಯು ಹೆಚ್ಚಾಗಿ ಜ್ವಲಿಸುವಂತೆ ಕಾಮಗಳನ್ನು ಅನುಭವಿಸಿದಷ್ಟು ಅವು ಇನ್ನೂ ಹೆಚ್ಚಾಗುತ್ತವೆ. ಈ ಪ್ರಪಂಚದಲ್ಲಿರುವ ಎಲ್ಲಾ ದುಡ್ಡು, ಧನ, ವಸ್ತು ವಾಹನ ಮುಂತಾದವುಗಳು ಎಲ್ಲಾ ಸ್ತ್ರೀಯರೂ ಒಬ್ಬನಿಗೇ ದೊರಕಿದರೂ ಅವನ ಬಯಕೆಗಳಿಗೆ ತೃಪ್ತಿ ದೊರೆಯುವುದಿಲ್ಲ. ಎಂದು ಚೆನ್ನಾಗಿ ಅರಿತು ಮನುಷ್ಯನು ಶಾಂತಿಯನ್ನು ಹೊಂದಬೇಕು. ಯಾವ ಮನುಷ್ಯನು ಎಲ್ಲಾ ಪ್ರಾಣಿಗಳ ವಿಷಯಗಳಲ್ಲಿಯೂ ಕೆಲಸದಲ್ಲಾಗಲೀ, ಮಾತಿನಲ್ಲಾಗಲೀ, ಮನಸ್ಸಿನಲ್ಲಾಗಲೀ ಪಾಪಮಾಡಲು ಬಯಸುವದಿಲ್ಲವೋ ಅವನಿಗೆ ಬ್ರಹ್ಮಪ್ರಸಾದರೂಪವಾದ ಮೋಕ್ಷವು ಸಿಕ್ಕುವುದು. ಯಾವನು ಇನ್ನೊಬ್ಬರಿಗೆ ಹೆದರಿಕೆಆಗುವಂತೆ ನಡೆದುಕೊಳ್ಳುವುದಿಲ್ಲವೋ ಅಥವಾ ಯಾವನ ನಡೆವಳಿಕೆಗಳಿಂದ ಇತರರಿಗೆ ಭಯವಿಲ್ಲವೋ ಅಂಥವನು ಮೋಕ್ಷ ಪಡೆಯಲು ಅರ್ಹನು.

ಯಾವನು ಇನ್ನೊಬ್ಬರನ್ನು ನಿಂದಿಸುವುದಿಲ್ಲವೋ ಅಥವಾ ದ್ವೇಷಿಸುವುದಿಲ್ಲವೋ ಅವನು ಮೋಕ್ಷಕ್ಕೆ ಯೋಗ್ಯನು. ಕೆಟ್ಟವರು ಆಶೆಯನ್ನು ಬಿಡಲಾರರು. ಮುಪ್ಪು ಬಂದರೂ ಆಶೆಗೆ ಮಾತ್ರ ಮುಪ್ಪುಬರುವುದಿಲ್ಲ. ಪ್ರಾಣ ಹೋಗುವವರೆಗೆ ಮನುಷ್ಯರನ್ನು ಹಿಂಬಾಲಿಸಿರುವ ರೋಗವೇ ಆಶೆಯೆಂದು ತಿಳಿಯಬೇಕು. ಇಂಥಾ ಆಶೆಯನ್ನು ಬಿಟ್ಟಿರುವವನೇ ನಿಜವಾದ ಸುಖ ಪುರುಷನು. ಮನುಷ್ಯನಿಗೆ ಮುಪ್ಪು ಬಂದರೆ ಕೂದಲುಗಳೂ ನೆರೆಯಾಗುವುವು. ಹಲ್ಲುಗಳೂ ಬಿದ್ದು ಹೋಗುವುವು. ಆದರೆ ಆಶೆಮಾತ್ರ ಹಾಳಾಗುವುದೇ ಇಲ್ಲ. ಮನುಷ್ಯನಿಗೆ ಸಂಬಂಧಪಟ್ಟ ದೇಹದ ಭಾಗಗಳೆಲ್ಲವೂ ತಾವಾಗಿಯೇ ಜೀರ್ಣವಾಗುವುವು. ಆಶೆಯು ಮಾತ್ರ ಹಾಗಾಗದು.

ಮನುಷ್ಯನಿಗೆ ಬದುಕಬೇಕೆಂಬ ಇಚ್ಛೆಯೂ ದುಡ್ಡಿನ ಆಶೆಯೂ ಮುಪ್ಪು ಬಂದರೂ ನಷ್ಟವಾಗುವುದಿಲ್ಲ. ಆಶೆಗಳನ್ನು ತೊರೆಯುವುದರಿಂದ ಉಂಟಾಗುವ ಸುಖದ ಹದಿನಾರನೆಯ ಒಂದು ಭಾಗದಷ್ಟು ಸುಖವೂ, ಎಲ್ಲಾ ಕಾಮಸುಖಗಳನ್ನು ಅನುಭವಿಸಿದರೂ ಎಂಥಾ ಸ್ವರ್ಗ ಸೌಖ್ಯವನ್ನನುಭವಿಸಿದರೂ ಬರಲಾರದೆಂಬುದು ಖಂಡಿತ.'' ಹೀಗೆ ಹೇಳಿ ಯಯಾತಿ ರಾಜನು ತನ್ನ ಪತ್ನಿಯೊಂದಿಗೆ ಅರಣ್ಯಕ್ಕೆ ಹೊರಟು ಹೋದನು. ಮಹಾಕೀರ್ತಿಮಂತನಾದ ಯಯಾತಿಯು ಭೃಗುಪರ್ವತದ ಶಿಖರದಲ್ಲಿ ಉಪವಾಸವ್ರತವನ್ನು ತಪಸ್ಸನ್ನುಮಾಡಿ ಕೈಗೊಂಡು ಅದರ ಫಲವಾಗಿ ತನ್ನ ಪತ್ನಿಯೊಡನೆ ಸ್ವರ್ಗವನ್ನು ಹೊಂದಿದನು. ದೇವತೆಗಳೂ, ಋಷಿಗಳೂ, ಇವರೆಲ್ಲರಿಂದಲೂ ಪೂಜಿಸಲ್ಪಟ್ಟ ಐದು ವಂಶಗಳು ಅವನಿಗೆ ಸಂಬಂಧಪಟ್ಟವು. ಈ ವಂಶಗಳು ಬಹಳ ಪುಣ್ಯದಾಯಕಗಳು. ಸೂರ್ಯನ ಕಿರಣಗಳಂತೆಯೇ ಈ ಸಕಲ ಪ್ರಪಂಚವೂ

ಈ ವಂಶಗಳಿಂದ ವ್ಯಾಪಿಸಲ್ಪಟ್ಟಿವೆ. ಈ ಪುಣ್ಯಕರವಾದ ಯಯಾತಿ ಚರಿತ್ರೆಯನ್ನು ಯಾವನು ಓದುತ್ತಾನೋ ಅಥವಾ ಕೇಳುತ್ತಾನೋ ಅವನು ಧನಿಕನಾಗಿಯೂ, ಸಂತಾನವುಳ್ಳವನಾಗಿಯೂ, ದೀರ್ಘಾಯುಸ್ಸುಳ್ಳವನಾಗಿಯೂ, ಕೀರ್ತಿವಂತನಾಗಿಯೂ ಬಾಳುವನು. ಅಂತಹ ಮನುಷ್ಯನು ಸಕಲ ಪಾಪಗಳಿಂದಲೂ ನಿವಾರಣೆಯನ್ನು ಹೊಂದಿ ಶಿವಲೋಕದಲ್ಲಿ ಬೆಳಗುವನು.

*ಲಿಂಗಮಹಾಪುರಾಣ ಪೂರ್ವಾರ್ಧದ ಸೋಮವಂಶದ ಯಯಾತಿ ಚರಿತ್ರೆಯ ವಿವರಣೆ ಎಂಬ ಅರುವತ್ತೇಳನೆಯ ಅಧ್ಯಾಯ ಮುಗಿದುದು*



## ಪೂರ್ವಾರ್ಧವಂಶಗಳ ವಿವರಣೆ

**ಅಧ್ಯಾಯ - ೬೮**

**ಸೂತ** :- ಎಲ್ಲರಿಗೂ ಹಿರಿಯವನಾದ ಬಹಳ ತೇಜಸ್ವಿಯಾದ ಯದುವಿಗೆ ದೇವ ಪುತ್ರರಿಗೆ ಸಮಾನರಾದ ಐವರು ಮಕ್ಕಳಿದ್ದರು. ಅವರಲ್ಲಿ ಸಹಸ್ರಜಿತ್ ಎಂಬುವವನು ಹಿರಿಯವನು. ಇವನು ಅಲ್ಲದೆ ಕ್ರೋಷ್ಟು, ನೀಲ, ಅಜ, ಲಘು ಎಂಬ ನಾಲ್ಕು ಮಕ್ಕಳು. ಸಹಸ್ರಜಿತುವಿಗೆ ''ಶತಜಿತ್'' ಎಂಬ ರಾಜಕುಮಾರನಿದ್ದನು. ಶತಜಿತುವಿಗೆ ಬಹಳ ಕೀರ್ತಿವಂತರಾದ ಮೂವರು ಮಕ್ಕಳಿದ್ದರು. ಹೈಹಯ, ಹಯ, ವೇಣುಹಯ ಎಂಬುವವರೇ ಈ ಮೂವರು ಮಕ್ಕಳು. ಹೈಹಯ ಎಂಬುವವನ ಜ್ಞಾತಿಯು ಧರ್ಮ ಎಂದು ಪ್ರಸಿದ್ಧನಾಗಿದ್ದನು. ಧರ್ಮನ ಮಗನು ಧರ್ಮನೇತ್ರನಾಗಿದ್ದನು. ಧರ್ಮನೇತ್ರನಿಗೆ ಕೀರ್ತಿಯೂ, ಕೀರ್ತಿಗೆ ಸಂಜಯನೂ ಮಕ್ಕಳಾಗಿದ್ದರು ಆ ಸಂಜಯನಿಗೆ ಮಹಿಷ್ಮಾನ್ ಎಂಬ ಧಾರ್ಮಿಕನಾದ ಮಗನಿದ್ದನು. ಆ ಮಹಿಷ್ಮಂತನಿಗೆ ಭದ್ರಶ್ರೇಣ್ಯ ಎಂಬ ಶೂರನಾದ ಕುಮಾರನಿದ್ದನು. ದುರ್ದಮನೆಂಬ ದೊರೆಯು ಭದ್ರಶ್ರೇಣ್ಯನ ಮಗನು. ದುರ್ದಮನಿಗೆ ಧನಿಕನೆಂಬ ಬುದ್ಧಿಶಾಲಿಯಾದ ಕುಮಾರನು ಹುಟ್ಟಿದನು. ಧನಿಕನಿಗೆ ಲೋಕದಲ್ಲಿ ಗೌರವಿಸಲ್ಪಟ್ಟ ನಾಲ್ಕು ಜನ ಮಕ್ಕಳಿದ್ದರು. ಕೃತವೀರ್ಯ, ಕೃತಾಗ್ನಿ, ಕೃತವರ್ಮ, ಕೃತೌಜಸ್ ಎಂಬುವರೇ ಆ ನಾಲ್ಕು ಮಕ್ಕಳು. ಕೃತವೀರ್ಯನಮಗನಾದ ಕಾರ್ತವೀರ್ಯಾರ್ಜುನನು ಏಳುದ್ವೀಪಕ್ಕೂ ದೊರೆಯಾಗಿಯೂ ಸಾವಿರ ತೋಳುಗಳಿಂದಲೂ ಪ್ರಕಾಶಿಸುತ್ತಿದ್ದನು.

ಕಾರ್ತವೀರ್ಯಾರ್ಜುನನಿಗೆ ನಾರಾಯಣ ಸ್ವರೂಪಿಯಾದ ಪರಶುರಾಮನು ಮೃತ್ಯುವಾದನು. ಕಾರ್ತವೀರರ್ಯಾರ್ಜುನನಿಗೆ ನೂರು ಜನ ಮಕ್ಕಳಿದ್ದರು. ಅವರಲ್ಲಿ ಐದು ಜನರು ಮಹಾರಥ ಎಂಬ ದೊಡ್ಡ ಬಿರುದಿಗೆ ಪಾತ್ರರಾಗಿ ಯುದ್ಧದಲ್ಲಿ ಬಹು ಗಟ್ಟಿಗರಾಗಿದ್ದರು. ಶೂರ, ಶೂರಸೇನ, ಧೃಷ್ಟ, ಕೃಷ್ಣ, ಜಯಧ್ವಜ ಎಂಬ ಆ ಐದು ಮಂದಿ ಮಕ್ಕಳೂ ಅಸ್ತ್ರ ವಿದ್ಯೆಯಲ್ಲಿ ಗಟ್ಟಿಗರಾಗಿಯೂ, ಶೂರರಾಗಿಯೂ, ಧಾರ್ಮಿಕರಾಗಿಯೂ ನಿರಂಕುಶಪ್ರಭುಗಳಾಗಿಯೂ ಇದ್ದರು. ಜಯಧ್ವಜನು ಆವಂತಿದೇಶಕ್ಕೆ ಅಧಿಪತಿಯಾಗಿದ್ದನು. ಮಹಾ ಬಲಿಷ್ಠನಾದ ತಾಲಜಂಘನು ಜಯಧ್ವಜನ ಮಗನು.

ತಾಲಜಂಘನಿಗೆ ನೂರು ಜನ ಕಾಲಜಂಘರೆಂದು ಪ್ರಸಿದ್ಧರಾಗಿದ್ದ ಮಕ್ಕಳಿದ್ದರು. ಇವರುಗಳಲ್ಲಿ ಹಿರಿಯ ಮಗನಾದ ವೀತಿಹೋತ್ರನು ಬಹಳ ಪರಾಕ್ರಮಶಾಲಿಯಾಗಿ

ಪುಣ್ಯಕರ್ಮ ಮಾಡುವವನಾಗಿ ಇದ್ದನು. ವೃಷನೇ ಮೊದಲಾದ ಇತರ ಮಕ್ಕಳೂ ಬಹಳ ಒಳ್ಳೆಯ ಕೆಲಸಮಾಡುತ್ತಾ ಇದ್ದರು. ಅವರಲ್ಲಿ ವೃಷನು ವಂಶೋದ್ಧಾರಕನು. ಅವನ ಮಗನು ಮಧುವು. ಮಧುವಿಗೆ ನೂರು ಜನ ಮಕ್ಕಳಿದ್ದರು. ವೃಷ್ಣಿ ಎಂಬುವವನು ಅವರಲ್ಲಿ ವಂಶೋದ್ಧಾರಕನು. ವೃಷ್ಣಿಯ ಮಕ್ಕಳುಗಳೆಲ್ಲರೂ ವೃಷ್ಣಿಗಳೆಂದೂ, ಮಧುವಿನ ಮಕ್ಕಳೆಲ್ಲಾ ಮಾಧವರೆಂದೂ ಕರೆಯಲ್ಪಡುವರು. ಯದುವಂಶದವರಿಗೆ ಯಾದವರೆಂದು ಹೆಸರು.

ಹೈಹಯನಿಗೆ ಸಂಬಂಧಪಟ್ಟ ಐದು ಗುಂಪುಗಳಿವೆ. ವೀತಿಹೋತ್ರ, ಹರ್ಯಾತ, ಭೋಜ, ಆವಂತಿ, ಶೂರಸೇನ, ತಾಲಜಂಘ, ಶೂರ, ಶೂರಸೇನ, ವೃಷ, ಕೃಷ್ಣ, ಜಯಧ್ವಜ, ಇವೆಲ್ಲವೂ ಹೈಹಯರ ಶ್ರೇಷ್ಠವಾದ ಗುಂಪುಗಳೆಂದು ಅರಿಯಬೇಕು. ಮಹಾತ್ಮರಾದ ಶೂರಸೇನರ ದೇಶಗಳು ಶೂರ, ಶೂರವೀರ, ಶೂರಸೇನ ಎಂಬುವೆಲ್ಲವೂ ಶೂರಸೇನ ದೇಶಗಳೆಂದು ಪ್ರಸಿದ್ಧವಾಗಿವೆ. ಅನರ್ತ ಎಂದು ಪ್ರಸಿದ್ಧನಾದ ಮಗನು ವೀತಿಹೋತ್ರನಿಂದ ಉತ್ಪನ್ನನಾದನು. ಶತ್ರುನಾಶಕನಾದ ಕೃಷ್ಣನ ಮಗನಾದ ದುರ್ಜಯನು ಪ್ರಸಿದ್ಧನಾಗಿದ್ದನು. ರಾಜರ್ಷಿಯಾದ ಕ್ರೋಷ್ಟುವಿನ ವಂಶದಲ್ಲೇ ವೃಷ್ಣಿಕುಲಕ್ಕೆ ತಿಲಕ ಪ್ರಾಯನಾದ ವಿಷ್ಣುವು ಹುಟ್ಟಿದನು.

ಕ್ರೋಷ್ಟುವಿಗೆ ವೃಜಿನೀವಾನ್ ಎಂಬ ಬಹಳ ಕೀರ್ತಿಮಂತನಾದ ಮಗನಿದ್ದನು. ಅವನಿಗೆ ಸ್ವಾತಿ ಎಂಬ ಮಗನಿದ್ದನು. ಅವನ ಮಗನು ಕುಶಂಕುವು. ಬಹಳ ಬಲಿಷ್ಠನಾದ ಕುಶಂಕುವು ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ಬ್ರಾಹ್ಮಣರುಗಳಿಗೆ ಸಂತೋಷ ಪಡಿಸುವ ಅನೇಕ ವಿಧವಾದ ದಕ್ಷಿಣೆಗಳನ್ನು ಕೊಟ್ಟು ದೊಡ್ಡ ದೊಡ್ಡ ಯಾಗಗಳನ್ನು ನಡೆಸಿದನು. ಕುಶಂಕುವಿಗೆ ಪುಣ್ಯಶಾಲಿಯಾದ ಚಿತ್ರರಥನೆಂಬ ಮಗನಾದನು. ಚಿತ್ರರಥನ ಮಗನಾದ ಶಶಬಿಂದುವೂ ಕೂಡ ಬಹಳ ಶೂರನಾಗಿಯೂ ಹೆಚ್ಚು ದಕ್ಷಿಣೆಗಳನ್ನು ಕೊಟ್ಟು ಯಾಗಮಾಡಿದವನಾಗಿಯೂ ಹೆಸರುವಾಸಿಯಾದ ದೊರೆಯಾಗಿದ್ದನು. ಇವನು ಚಕ್ರವರ್ತಿಯಾಗಿಯೂ ಬಹಳ ಪರಾಕ್ರಮಶಾಲಿಯಾಗಿ ಅನೇಕ ಮಕ್ಕಳೊಂದಿಗೆ ಬಾಳಿದನು. ಇವನು ಬಹಳೇ ಯಾಗಗಳನ್ನು ಮಾಡಿದ್ದರಿಂದ ಒಂದುನೂರುಸಾವಿರ ಮಕ್ಕಳಾದರೆಂದು ಪ್ರಸಿದ್ಧಿಯಿದೆ. ಇವರಲ್ಲಿ ಅನಂತ ಎಂಬುವವನು ಅತ್ಯಂತ ಶ್ರೇಷ್ಠನಾಗಿದ್ದನು. ಅನಂತನ ಮಗನು ಯಜ್ಞನು, ಯಜ್ಞನ ಮಗನು ಧೃತಿಯು. ಧೃತಿಯ ಮಗನು ಉಶನಸ್ಸು. ಉಶನಸ್ಸಿನ ಮಗನು ಬಹಳ ಧಾರ್ಮಿಕರಲ್ಲಿ ಶ್ರೇಷ್ಠನಾಗಿಯೂ ಅಶ್ವಮೇಧ. ಮುಂತಾದ ನೂರು ಯಾಗಗಳನ್ನು ಮಾಡಿದವನಾಗಿಯೂ ಇದ್ದನು. ಇವನು ಸೀತೇಷು ಎಂದು ಪ್ರಸಿದ್ಧನಾದ ರಾಜನಾಗಿದ್ದನು.

ಸೀತೇಷುವಿನ ಮಗನು ಮರುತ. ಇವನು ರಾಜರ್ಷಿಯಾಗಿಯೂ ವಂಶೋದ್ಧಾರಕನಾಗಿಯೂ ಇದ್ದನು. ಮರುತನ ಮಗನು ವೀರನಾಗಿಯೂ ಕಂಬಲ ಬರ್ಹಿ ಎಂದು ಪ್ರಸಿದ್ಧನಾಗಿಯೂ ಇದ್ದನು. ಕಂಬಲ ಬರ್ಹಿಸ್ಸಿನ ಮಗನು ವಿದ್ವಾಂಸನಾದ ರುಕ್ಮಕವಚನು. ಇವನು ಯುದ್ಧ ಕವಚಗಳನ್ನು ಧರಿಸಿ ಬಹಳ ಗಟ್ಟಿಗರಾದ ಭಟರನ್ನು ಯುದ್ಧದಲ್ಲಿ ನಾಶಮಾಡಿ ಬೇಕಾದಷ್ಟು ಹಣವನ್ನು ಸಂಪಾದಿಸಿದನು. ಧಾರ್ಮಿಕನಾದ ಇವನು ಅಶ್ವಮೇಧ ಯಾಗ ಮಾಡಿ ಋತ್ವಿಕ್ಕುಗಳಿಗೆ ಬೇಕಾದ ಹಾಗೆ ಭೂಮಿಯನ್ನು ದಾನ

ಮಾಡಿದನು. ರುಕ್ಮ ಕವಚನಿಗೆ ಶತ್ರುನಾಶಕರಾದ, ಬಹಳ ಪರಾಕ್ರಮ ಶಾಲಿಗಳಾದ ಐದು ಜನ ಮಕ್ಕಳಿದ್ದರು. ರುಕ್ಮೇಷು, ಪೃಥುರುಕ್ಮ, ಜ್ಯಾಮಘ, ಪರಿಘ, ಹರಿ ಎಂಬುವವರೇ ಆ ಐದು ಜನ ಮಕ್ಕಳು. ಇವರ ಪೈಕಿ ಪರಿಘನನ್ನೂ ಹರಿಯನ್ನೂ ರುಕ್ಮಕವಚನು ಶತ್ರುಗಳನ್ನಡಗಿಸುವುದಕ್ಕಾಗಿ ವಿದೇಹದೇಶದಲ್ಲಿಟ್ಟನು. ಮೊದಲನೆಯವನಾದ ರುಕ್ಮೇಷುವು ದೊರೆಯಾದನು. ಪೃಥುರುಕ್ಮನು ಅವನನ್ನು ಅನುಸರಿಸಿಕೊಂಡಿದ್ದನು. ಆದರೆ ಜ್ಯಾಮಘ ಎಂಬ ದೊರೆಯು ಮಾತ್ರ ವಿರಕ್ತನಾಗಿ ಆಶ್ರಮವಾಸಿಯಾದನು.

ಜ್ಯಾಮಘನು ಶಾಂತಿಯುಕ್ತವಾದ ಮನಸ್ಸಿನಿಂದ ವನದಲ್ಲಿ ಸಂನ್ಯಾಸಿಯಾಗಿದ್ದರೂ, ಬ್ರಾಹ್ಮಣರ ಆಜ್ಞಾನುಸಾರವಾಗಿ ಪುನಃ ಧನುಸ್ಸನ್ನು ಹಿಡಿದು ರಥದ ಮೇಲೆ ಕೂತು ಬೇರೆ ದೇಶಕ್ಕೆ ಹೋದನು. ಇವನು ತನ್ನ ಪತ್ನಿಯೊಡನೆ ಇನ್ನಾರನ್ನೂ ಜೊತೆಯಲ್ಲಿ ಕರೆದುಕೊಳ್ಳದೇ ನಿರ್ಜನವಾದ ನರ್ಮದಾನದಿಯ ದಡದಲ್ಲಿದ್ದ ಋಕ್ಷವಂತ ಎಂಬ ಪರ್ವತವನ್ನು ಪ್ರವೇಶಿಸಿ ಅಲ್ಲಿ ವಾಸಮಾಡಿಕೊಂಡಿದ್ದನು. ಜ್ಯಾಮಘನ ಪತ್ನಿಯು ಶೈಬ್ಯಾ. ಅವಳು ಘೋರವಾದ ತಪಸ್ಸನ್ನುಮಾಡಿ ಪುತ್ರನನ್ನು ಪಡೆದಳು. ವೃದ್ಧಳೂ ಸುಂದರಳೂ ಆದ ಶೈಬ್ಯೆಯು ವಿದರ್ಭನೆಂಬ ಮಗನನ್ನು ಹೆತ್ತಳು.

ವಿದರ್ಭರಾಜನಿಗೆ ವಿದ್ವಾಂಸರಾದ ಕ್ರಥ, ಕೌಶಿಕ ರೋಮಪಾದ ಎಂಬ ಮಕ್ಕಳಿದ್ದರು. ರೋಮಪಾದನಿಗೆ ಬಭ್ರು ಎಂಬ ಮಗನಿದ್ದನು. ಬಭ್ರುವಿಗೆ ಸಧೃತಿ ಎಂಬ ಮಗನಿದ್ದನು. ಸಧೃತಿಗೆ ಪರಮ ಧರ್ಮಿಷ್ಠನೂ ವಿದ್ವಾಂಸನೂ ಆದ ಚೈದ್ಯ ಎಂಬ ಮಗನು ಹುಟ್ಟಿದನು. ವಿದರ್ಭನ ಮಗನಾದ ಕ್ರಥನಿಗೆ ಕುಂತಿ ಎಂಬ ಮಗನು ಇದ್ದನು. ಕುಂತಿಗೆ ವೃತನೂ, ವೃತನಿಗೆ ರಣಧೃಷ್ಟನೂ ಪುತ್ರರು ಆದರು. ರಣಧೃಷ್ಟನಿಗೆ ನಿಧೃತಿಯೂ, ನಿಧೃತಿಗೆ ದಶಾರ್ಹನೆಂಬ ದೊಡ್ಡ ಶತ್ರುಗಳನ್ನು ಜಯಿಸಬಲ್ಲ ಮಗನಾದನು. ದಶಾರ್ಹನಿಗೆ ಜೀಮೂತ ಎಂಬ ಮಗನೂ, ಜೀಮೂತನಿಗೆ ವಿಕೃತಿಯೂ, ವಿಕೃತಿಗೆ ಭೀಮರಥನೂ ಮಕ್ಕಳಾದರು.

ಭೀಮರಥನಿಗೆ ನವರಥನೆಂಬ ಮಗನಾದನು. ಇವನು ದಾನಧರ್ಮ ಮಾಡುವುದರಲ್ಲಿ ಆಸಕ್ತನಾಗಿಯೂ ಸದಾ ಸತ್ಯವನ್ನೇ ನುಡಿಯುತ್ತಿರುವವನಾಗಿದ್ದನು. ಇವನಿಗೆ ಧೃಡರಥ ಎಂಬ ಮಗನಾದನು. ಇವನ ಮಗ ಶಕುನಿಯು. ಶಕುನಿಯಿಂದ ಕರಂಬನೂ, ಕರಂಬನಿಂದ ದೇವರಾತನೂ, ದೇವರಾತನಿಂದ ಬಹಳ ಕೀರ್ತಿವಂತನಾದ ದೇವರಾತಿಯೂ ಹುಟ್ಟಿದರು. ಇವನು ದೇವಕ್ಷತ್ರ ಎಂದು ಬೇರೆ ಹೆಸರನ್ನು ಪಡೆದು ದೇವತೆಗಳಿಗೆ ಸಮನಾಗಿದ್ದನು. ದೇವಕ್ಷತ್ರನಿಗೆ ಶ್ರೀಮಂತನಾದ ಮಧು ಎಂಬ ಮಗನಿದ್ದನು. ಮಧುವು ವಂಶೋದ್ಧಾರಕನಾಗಿದ್ದನು. ಮಧುವಿಗೆ ಕುರುವಂಶ ಎಂಬ ಮಗನಾದನು. ಕುರುವಂಶನಿಗೆ ಅನುವೂ, ಅನುವಿಗೆ ಪುರುತ್ವಂತನೂ, ಪುರುತ್ವಂತನಿಗೆ ವಿದರ್ಭದೇಶದಲ್ಲಿ ಹುಟ್ಟಿದ ಭದ್ರವತೀ ಎಂಬುವವಳಲ್ಲಿ ಅಂಶುವೂ ಹುಟ್ಟಿದರು. ಅಂಶುವಿನಿಂದ ಸತ್ವನೂ, ಸತ್ವನಿಂದ ಸಾತ್ವತನೂ ಹುಟ್ಟಿದನು.

*ಲಿಂಗಮಹಾಪುರಾಣ ಪೂರ್ವಾರ್ಧದ ವಂಶಗಳ ವಿವರಣೆ*
*ಎಂಬ ಅರುವತ್ತೆಂಟನೆಯ ಅಧ್ಯಾಯ ಮುಗಿದುದು*

—o—

**ಸೂತ** :- ಸತ್ಯವಂತನಾದ ಸಾತ್ವತನು ನಾಲ್ಕುಜನ ಮಕ್ಕಳನ್ನು ಪಡೆದನು. ಪ್ರಕಾಶಮಾನನಾದ ಭಜನ, ದಿವ್ಯನಾದ ದೇವಾವೃಧ ದೊರೆ, ಮಹಾ ಪುಣ್ಯವಂತನಾದ ಅಂಧಕ, ಯದುವಂಶ ಶ್ರೇಷ್ಠನಾದ ವೃಷ್ಣಿ, ಇವರೇ ಆ ನಾಲ್ಕುಜನಮಕ್ಕಳು. ಪ್ರಕಾಶಮಾನನಾದ ಭಜನನಿಂದ ಸೃಂಜಯ್ಯೆಯಲ್ಲಿ ಅಯುತಾಯುತ, ಶತಾಯು ಎಂಬ ಮಕ್ಕಳು ಹುಟ್ಟಿದರು. ದೇವಾವೃಧ ದೊರೆಯು ಬಹಳ ತಪಸ್ಸನ್ನುಮಾಡಿದನು. ಇವನು ತಪಸ್ಸು ಮಾಡಲು ಕಾರಣ ಸಕಲ ಗುಣಗಳಿಂದ ಕೂಡಿದ ಮಗನು ತನಗೆ ಜನಿಸಲಿ ಎಂದಾಗಿತ್ತು. ಅದರ ಪರಿಣಾಮವಾಗಿ ಇವನಿಗೆ ಬಭ್ರುವೆಂಬ ಕುಮಾರನು ಜನಿಸಿದನು. ಈ ವಂಶವನ್ನು ಚೆನ್ನಾಗಿ ಅರಿತವಳು ಗಾಯತ್ರಿಯು. ದೇವಾವೃಧ ಮತ್ತು ಬಭ್ರು ದೊರೆಗಳು ಪ್ರಜೆಗಳ ಪ್ರೀತಿಗೆ ಪಾತ್ರರಾಗಿದ್ದರು. ಇವರಿಂದ ಲಕ್ಷೋಪಲಕ್ಷ ಜನರು ಸ್ವರ್ಗವನ್ನು ಹೊಂದಿದರು. ಬ್ರಹ್ಮಣ್ಯನೆಂಬುವನು ದಾನದಲ್ಲಿ ಆಸಕ್ತಿಯುಳ್ಳವನಾಗಿದ್ದು ವ್ರತಗಳನ್ನು ಶ್ರದ್ಧೆಯಿಂದ ಮಾಡುತ್ತಿದ್ದನು. ಬ್ರಹ್ಮಣ್ಯನು ಕೀರ್ತಿವಂತನಾಗಿ ಸಾತ್ವಕವಂಶದಲ್ಲಿ ಹುಟ್ಟಿದವರಲ್ಲಿ ಮಹಾರಥ ಎಂದು ಹೆಸರು ಪಡೆದಿದ್ದನು. ಇವನ ವಂಶದಲ್ಲಿ ಹುಟ್ಟಿದವರಲ್ಲಿ 'ಭೋಜ' ಎಂಬುವವರು ದೇವತೆಗಳಿಗೆ ಸಮಾನರಾಗಿದ್ದರು. ವೃಷ್ಣಿಯ ಪತ್ನಿಯರಾದ ಗಾಂಧಾರೀ, ಮಾದ್ರಿ ಎಂಬುವವರು ಇವರ ವಂಶದಲ್ಲಿಯೇ ಹುಟ್ಟಿದವರು. ಸುಮಿತ್ರಾ ಎಂಬುವವನನ್ನು ಗಾಂಧಾರಿಯು ಹೆತ್ತಳು. ಮಾದ್ರಿಯು ಮಿತ್ರನಂದನನ್ನು ಪಡೆದಳು. ಅಲ್ಲದೇ ದೇವಮೀಢುಷ ಎಂಬ ಮಗನನ್ನೂ, ಅನಮಿತ್ರ, ಶಿನಿ ಎಂಬ ಮಕ್ಕಳನ್ನೂ ಪಡೆದಳು. ಅನಮಿತ್ರ ಮತ್ತು ಶಿನಿ ಎಂಬುವವರು ಪುರುಷ ಶ್ರೇಷ್ಠರಾಗಿದ್ದರು.

ನಿಘ್ನನು ಅನಮಿತ್ರನ ಮಗನು. ನಿಘ್ನನಿಗೆ ಪುಣ್ಯಶಾಲಿಯಾದ ಪ್ರಸೇನ, ಸತ್ರಾಜಿತ್ ಎಂಬಿಬ್ಬರು ಮಕ್ಕಳಾದರು ಸತ್ರಾಜಿತನಿಗೆ ಸೂರ್ಯನು ಪ್ರಾಣಕ್ಕೆ ಸಮಾನನಾದ ಸ್ನೇಹಿತನಾಗಿದ್ದನು. ಸೂರ್ಯನಿಂದ ಸ್ಯಮಂತಕ ಎಂಬ ಮಣಿಯು ಅವನಿಗೆ ಕೊಡಲ್ಪಟ್ಟಿತು. ಭೂಮಿಯಲ್ಲಿ ಸ್ಯಮಂತಕಮಣಿಯು ಪ್ರತಿದಿನ ನೂರುಮಣಭಂಗಾರಕೊಡುತ್ತಿತ್ತು. ಪ್ರಸೇನಜಿತ್‌ನು ಆ ಸ್ಯಮಂತಕಮಣಿಯನ್ನು ತೆಗೆದುಕೊಂಡು ಬೇಟೆಗಾಗಿ ಹೊರಟನು. ಬೇಟೆಯಾಡುವ ಕಾಲದಲ್ಲಿ ಪ್ರಸೇನಜಿತ್‌ನು ಸಹಾಯಕರು ಯಾರೂ ಇಲ್ಲದೆ ಬಹಳ ಭಯಂಕರವಾದ ಸಿಂಹದ ಬಾಯಿಗೆ ತುತ್ತಾದನು. ಅನಂತರ ವೃಷ್ಣಿ ಕುಮಾರರಲ್ಲಿ ಕಿರಿಯವನಾದ ಶಿನಿಯಿಂದ ಸತ್ಯಕ ಎಂಬ ಸತ್ಯವಂತನೂ, ಸತ್ಯವಾಗಿ ಕೆಲಸ ಮಾಡುವವನೂ ಆದ ಪುತ್ರನು ಜನಿಸಿದನು. ಸತ್ಯಕನ ಮಗನು ಸಾತ್ಯಕಿಯು. ಶೂರನಾದ ಯುಯುಧಾನನು ಶಿನಿಯ ಮೊಮ್ಮಗನು. ಯುಯುಧಾನನಿಗೆ 'ಕುಣಿ' ಎಂಬ ಮಗನಾದನು. ಕುಣಿಗೆ ಯುಗಂಧರನು ಮಗನು. ಇವರೆಲ್ಲರೂ ಶಿನಿಯ ವಂಶದವರೆಂದು ಕರೆಯುವರು. ಮಾದ್ರಿಯ ಮಗ ದೇವಮೀಢುಷನ, ಮಗನಾದ ಯುಧಾಜಿತ್ ಎಂಬುವವನು ವೃಷ್ಣಿವಂಶದಲ್ಲಿ ಹುಟ್ಟಿ ಶ್ವಫಲ್ಕ ಎಂದು ಹೆಸರು ಪಡೆದು ಮೂರು ಲೋಕಕ್ಕೂ ಸೌಖ್ಯವನ್ನುಂಟು ಮಾಡುವವನಾಗಿದ್ದನು. ಇವನ ರಾಜ್ಯದಲ್ಲಿ ರೋಗದ ಭಯವಿರಲಿಲ್ಲ.

ಶ್ವಫಲ್ಕನಿಗೆ ಕಾಶಿರಾಜನು ತನ್ನ ಮಗಳಾದ ಗಾಂದಿನೀ ಎಂಬುವಳನ್ನು ಕೊಟ್ಟನು. ಕಾಶಿರಾಜನ ಪತ್ನಿಯು ಗರ್ಭಧರಿಸಿ ಬಹಳ ವರ್ಷಗಳಾಗಿದ್ದರೂ ಗಾಂದಿನಿಯು ಹಡಿಯಲೇ ಇಲ್ಲ. ಆಗ ಕಾಶಿರಾಜನು ಪತ್ನಿಯ ಗರ್ಭವನ್ನು ಕುರಿತು ''ಜಾಗ್ರತೆಯಾಗಿ ಜನಿಸು. ಏಕೆ ಇಷ್ಟು ತಡ ಮಾಡುತ್ತಿದ್ದೀಯೆ?'' ಎಂದನು. ಗರ್ಭದಲ್ಲಿರುವಾಗಲೇ ಗಾಂದಿನಿಯು ತಂದೆಯನ್ನು ಕುರಿತು ಹೇಳುತ್ತಾಳೆ.

**ಗಾಂದಿನೀ** :- ತಂದೆಯೇ, ಪ್ರತಿದಿನವೂ ತಪ್ಪದೇ ಮೂರು ವರ್ಷಗಳಕಾಲ ನೀನು ಬ್ರಾಹ್ಮಣನಿಗೆ ಒಂದು ಹಸುವನ್ನು ದಾನಮಾಡುತ್ತಾ ಬಂದರೆ ನಾನು ನಮ್ಮ ತಾಯಿಯ ಉದರದಿಂದ ಹೊರಗೆ ಬರುವೆನು.

**ಸೂತ** :- ಗಾಂದಿನಿಯ ಮಾತಿನಂತೆ ಆಕೆಯ ತಂದೆಯು ಹಾಗೆಯೇ ಆಗಲೆಂದು ಅವಳ ಇಷ್ಟಾರ್ಥವನ್ನು ನೆರವೇರಿಸಿದನು. ಶ್ವಫಲ್ಕನಿಗೆ ದಾತೃವೂ, ಶೂರನೂ, ಯಾಗಮಾಡುವವನೂ, ಶಾಸ್ತ್ರಜ್ಞನೂ, ಅತಿಥಿಗಳಿಗೆ ಬೇಕಾದವನೂ, ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಡುವವನೂ ಆದ ಅಕ್ರೂರ ಎಂಬ ಮಗನು ಗಾಂದಿನಿಯಲ್ಲಿ ಹುಟ್ಟಿದನು. ಅಕ್ರೂರನು ಶೈವರತ್ನಾ ಎಂಬ ಕನ್ಯೆಯನ್ನು ಮದುವೆಯಾದನು. ಇವನು ರತಾಳಲ್ಲಿ ಉಪಮನ್ಯು, ಮಾರ್ಗವೃತ, ಜನಮೇಜಯ ಎಂಬ ಮಕ್ಕಳನ್ನು ಪಡೆದನು. ಅಕ್ರೂರನಿಗೆ ಇವರಲ್ಲದೆ ಗಿರಿರಕ್ಷ, ಉಪೇಕ್ಷ, ಶತ್ರುಘ್ನ, ಧರ್ಮಭೃತ್, ದೃಷ್ಟಧರ್ಮ, ಗೋಧನ, ಅವರ, ಆವಾಹ, ಪ್ರತಿವಾಹ, ದೇವವಾನ್, ಉಪದೇವ ಎಂಬ ಮಕ್ಕಳೂ, ಸುದಾರಾ ಎಂಬ ಶ್ರೇಷ್ಠಳಾದ ಮಗಳೂ ಹುಟ್ಟಿದರು. ಚಿತ್ರಕನು ಸುಮಿತ್ರನೆಂಬುವವನ ಮಗ. ಚಿತ್ರಕನಿಗೆ ವಿಪೃಥು, ಪೃಥು, ಅಶ್ವಗ್ರೀವ, ಸುಬಾಹು, ಸುಧಾಸೂಕ, ಗವೇಕ್ಷಣ, ಅರಿಷ್ಟನೇಮಿ, ಅಶ್ವ, ಧರ್ಮ, ಧರ್ಮಭೃತ್, ಸುಭೂಮಿ, ಬಹುಭೂಮಿ ಎಂಬ ಗಂಡು ಮಕ್ಕಳೂ ಶ್ರವಿಷ್ಠಾ, ಶ್ರವಣಾ ಎಂಬ ಹೆಣ್ಣು ಮಕ್ಕಳೂ ಆದರು. ಕಾಶಿರಾಜನ ಪುತ್ರಿಯು ಅಂಧಕನಿಂದ ಕುಕುರ, ಭಜಮಾನ, ಶುಚಿ, ಕಂಬಲಬರ್ಹಿಸ್ ಎಂಬ ನಾಲ್ಕು ಜನ ಮಕ್ಕಳನ್ನು ಪಡೆದಳು.

ಕುಕುರನ ಮಗನು ವೃಷ್ಣಿಯು. ವೃಷ್ಣಿಯ ಮಗನು ಶೂರನು. ಶೂರನ ಮಗನು ಬಹಳ ಬಲಿಷ್ಠನಾದ ಕಪೋತರೋಮ. ಅವನ ಮಗನು ವಿಲೋಮಕ. ವಿಲೋಮಕನ ಮಗನು ವಿದ್ವಾಂಸನೂ, ತುಂಬುರು ಎಂಬ ಗಂಧರ್ವನಿಗೆ ಸ್ನೇಹಿತನೂ ಆದ ನಲ ಎಂಬುವವನು. ಇವನು ಚಂದನ, ಆನಕದುಂದುಭಿ ಎಂಬ ಹೆಸರುಗಳಿಂದಲೂ, ಪ್ರಸಿದ್ಧನಾಗಿದ್ದನು. ನಲನಿಂದ ಅಭಿಜಿತ್ ಎಂಬುವವನು ಹುಟ್ಟಿದನು. ಅಭಿಜಿತನಿಂದ ಪುನರ್ವಸು ಎಂಬುವವನು ಹುಟ್ಟಿದನು. ಪುನರ್ವಸು ದೊರೆಯು ಮಕ್ಕಳಾಗಲೆಂಬ ಅಭಿಲಾಷೆಯಿಂದ ಅಶ್ವಮೇಧಯಾಗವನ್ನು ಮಾಡಿದನು. ಅಶ್ವಮೇಧ ಯಾಗ ಮಾಡುವಾಗ ಅತಿರಾತ್ರದ ಯಾಗ ಶಾಲೆಯ ಸಭಾ ಮಧ್ಯದಿಂದ ಆವಿರ್ಭವಿಸಿದ ಅಭಿಜಿತ್ತಿನ ಮಗನಾದ ಪುನರ್ವಸುವು ಆಹುಕ, ಆಹುಕೀ ಎಂಬ ಇಬ್ಬರು ಕೀರ್ತಿಶಾಲಿಗಳಾದ ಮಕ್ಕಳನ್ನು ಪಡೆದನು. ಆಹುಕನಿಂದ ಕಾಶಿರಾಜನ ಪುತ್ರಿಯಲ್ಲಿ ದೇವತೆಗಳಿಗೆ ಸಮಾನರಾದ ದೇವಕ ಮತ್ತು ಉಗ್ರಸೇನ ಎಂಬಿಬ್ಬರು ಮಕ್ಕಳು ಹುಟ್ಟಿದರು. ದೇವಕನಿಗೆ ದೇವತೆಗಳಿಗೆ ಸಮನಾದ ದೇವವಾನ್, ಉಪದೇವ, ಸುದೇವ, ದೇವರಕ್ಷಿತ ಎಂಬ ಮಕ್ಕಳು ಹುಟ್ಟಿದರು.

ಅವರಿಗೆ ಏಳು ಮಂದಿ ತಂಗಿಯರಿದ್ದರು. ಅವರು ಇವರನ್ನು ವಸುದೇವನಿಗೆ ವಿವಾಹವಿಧಿಯಿಂದ ಪ್ರದಾನಮಾಡಿದರು. ವೃಷದೇವಾ, ಉಪದೇವಾ, ದೇವರಕ್ಷಿತಾ ದೇವಕನ ಪುತ್ರಿಯರು ಇವರಲ್ಲಿ ಶ್ರೀದೇವಾ, ಶಾಂತಿದೇವಾ, ಸಹದೇವಾ, ದೇವಕೀ ಎಲ್ಲರೂ ದೇವಕಿಯು ಎಲ್ಲರಿಗೂ ಹಿರಿಯಳು ಆಗಿದ್ದಳು. ಕಂಸನು ಇವರಿಗೆಲ್ಲರಿಗೂ ಅಣ್ಣನು. ಹೀಗೆ ಒಂಬತ್ತು ಮಂದಿ ಹೆಣ್ಣುಮಕ್ಕಳು ಉಗ್ರಸೇನನಿಗಿದ್ದರು. ಇವರಲ್ಲಿ ವಸುದೇವನ ಪತ್ನಿಯೂ ದೇವಕನ ಮಗಳೂ ಆದ ದೇವಕಿಯ ಮಕ್ಕಳು ಮೊಮ್ಮಕ್ಕಳು ಸಾವಿರಾರು ಮಂದಿಯಾದರು. ದೇವಕಿಯು ಮಹಾ ಪತಿವ್ರತೆಯಾಗಿದ್ದಳು. ಆನಕದುಂದುಭಿಯ ಮತ್ತೊಬ್ಬ ಪತ್ನಿಯು ಬಹಳ ಪುಣ್ಯಶಾಲಿಯಾದ ರೋಹಿಣಿಯಾಗಿದ್ದಳು. ಬಾಹ್ಲೀಕ ಎಂಬವನ ಮಗಳಾದ ಪೌರವಿಯು ದೇವತೆಗಳಿಗೂ ಪೂಜ್ಯಳಾಗಿದ್ದಳು. ಬಲರಾಮನನ್ನು ರೋಹಿಣಿಯು ಹೆತ್ತಳು. ಕಂಸನ ಭಯದಿಂದ ಈ ಮಗುವು ದೇವಕಿಯ ಗರ್ಭದಲ್ಲಿರುವಾಗಲೇ ರೋಹಿಣಿಯ ಗರ್ಭಕ್ಕೆ ವರ್ಗಾಯಿಸಲ್ಪಟ್ಟಿತು. ಇದಕ್ಕೆ ಮುಂಚೆಯೇ ಅತ್ಯಂತ ಸುಂದರರಾದ ವಸುದೇವನ ಆರು ಶಿಶುಗಳು ಕಂಸನಿಂದ ವಧಿಸಲ್ಪಟ್ಟವು. ಆದ್ದರಿಂದಲೇ ದೇವಕಿಯ ಗರ್ಭದಲ್ಲಿದ್ದ ಬಲರಾಮನು ರೋಹಿಣಿಯ ಮೂಲಕ ಪ್ರಸವಿಸಲ್ಪಟ್ಟನು. ಅನಂತರ ವಸುದೇವನು ದೇವಕಿಯಲ್ಲಿ ಕೃಷ್ಣನನ್ನು ಪಡೆದನು. ಕೃಷ್ಣನು ಪರಮಾತ್ಮ ಸ್ವರೂಪಿಯೂ, ಜಗತ್ಪತಿಯೂ ಆಗಿರುವನು. ಆದಿಶೇಷನು ನೇಗಿಲವೇ ಆಯುಧವುಳ್ಳ ಬಲರಾಮನಾಗಿರುವನು. ಭೃಗು ಮಹರ್ಷಿಗಳ ಶಾಪದ ನೆಪದಿಂದ ಭಗವಂತನೇ ಮನುಷ್ಯ ಶರೀರಧಾರಿಯಾಗಿ ವಸುದೇವ ಮತ್ತು ದೇವಕಿಯರಿಂದ ಜನಿಸಿದನು. ದೇವ ದೇವನಾದ ಭಗವಂತನ ಅಪ್ಪಣೆಯಂತೆ ಉಮಾದೇವಿಯ ದೇಹದಿಂದ ಹೊರಟ ಯೋಗ ನಿದ್ರಾರೂಪಿಣಿಯಾದ ದುರ್ಗಿಯೇ ಯಶೋದೆಯ ಮಗಳಾಗಿ ಹುಟ್ಟಿದಳು. ಎಲ್ಲಾ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ಆ ಶಕ್ತಿಯೇ ಪ್ರಕೃತಿಯು. ಧರ್ಮ ಮೋಕ್ಷಗಳನ್ನು ಕೊಡುವ ಭಗವಂತನಾದ ಶ್ರೀ ಕೃಷ್ಣನೇ ಪುರುಷನು. ಆಗ ವಸುದೇವನು ತನ್ನ ಮಗನಾದ ವಿಶಾಲವಾದ ಕಣ್ಣುಳ್ಳ, ಕೌಸ್ತುಭಮಣಿಯನ್ನು ಧರಿಸಿರುವ, ಶಂಖಚಕ್ರಗದಾಧಾರಿ ಯಾದ ಕೃಷ್ಣನನ್ನು ರಕ್ಷಿಸಲು ಗೋಕುಲದಲ್ಲಿದ್ದ ಯಶೋದೆಗೆ ಕೊಟ್ಟು ಅವಳು ಕನ್ಯೆಯನ್ನು ತೆಗೆದುಕೊಂಡು ಬಂದ ಶ್ರೀ ಕೃಷ್ಣ ಬಲರಾಮರನ್ನು ನಂದಗೋಪ ಮತ್ತು ಯಶೋದೆಯರಿಗೆ ಗುಟ್ಟಾಗಿ ಸಲಹಲು ಕೊಟ್ಟನು. ದೇವಕಿಯ ಎಂಟನೆಯ ಶಿಶುವು ಹೆಣ್ಣಾಗಿದ್ದರೂ ಅದು ತನಗೆ ಮೃತ್ಯುಪ್ರಾಯವೇ ಎಂದು ತಿಳಿದು ಕಂಸನು ಅದನ್ನು ಸಂಹರಿಸಲು ಉಪಕ್ರಮಿಸಿದನು. ಆಗ ಆ ಕೂಸು ನಿನಗೆ ಮೃತ್ಯುವು ಸಮೀಪಿಸಿದೆ ಎಂಬ ಸಂದೇಶವನ್ನು ನೀಡಿತು. ಶ್ರೀ ಕೃಷ್ಣನನ್ನು ಸಂಹರಿಸಲು ಕಂಸನು ಎಷ್ಟೇ ಉಪಾಯ ಮಾಡಿದರೂ ಅವನಿಂದ ಸಾಧ್ಯವಾಗಲಿಲ್ಲ. ಕೊನೆಯಲ್ಲಿ ಕಂಸನು ಶ್ರೀ ಕೃಷ್ಣನಿಂದ ಸಂಹರಿಸಲ್ಪಟ್ಟನು.

ಕೃಷ್ಣನ ಮಕ್ಕಳು ಶಕ್ತಿಯಲ್ಲಿ ಕೃಷ್ಣನಿಗೆ ಸಮಾನರಾಗಿದ್ದರು. ಕೃಷ್ಣನಿಗೆ ಹದಿನಾರು ಸಾವಿರದನೂರೆಂಟುಪತ್ನಿಯರಿದ್ದರು. ಕೃಷ್ಣನಿಗೆ ಅತ್ಯಂತ ಪ್ರಿಯಳಾದ ಪತ್ನಿ ರುಕ್ಮಿಣಿಯಾಗಿದ್ದಳು. ಶಿವನನ್ನು ಪೂಜಿಸಿ ಶ್ರೀ ಕೃಷ್ಣನು ರುಕ್ಮಿಣಿಯಿಂದ ಚಾರುದೇಷ್ಣ, ಸುಚಾರು, ಚಾರುವೇಷ, ಯಶೋಧರ ಎಂಬ ಮಕ್ಕಳನ್ನು ಪಡೆದನು. ಶಿವಪೂಜೆಯಿಂದ

ಚಾರುಶ್ರವ, ಚಾರುಯಶ, ಪ್ರದ್ಯುಮ್ನ, ಸಾಂಬ ಎಂಬ ಮಕ್ಕಳು ಕೃಷ್ಣನಿಗೆ ಉತ್ಪನ್ನರಾದರು. ಜಾಂಬುವತಿಯಿಂದ ಮಕ್ಕಳನ್ನು ಪಡೆಯಲು ಶ್ರೀ ಕೃಷ್ಣನು ವ್ಯಾಘ್ರಪಾದ ಮಹರ್ಷಿಯ ಆಶ್ರಮವನ್ನು ತಪಸ್ಸು ಮಾಡುವ ಉದ್ದೇಶದಿಂದ ಸೇರಿದನು. ಕೃಷ್ಣನು ಅಂಗಿರ ಮಹರ್ಷಿಗಳ ದರ್ಶನವನ್ನುಪಡೆದು ಅವರ ಅಪ್ಪಣೆಯಂತೆ 'ಪಾಶುಪತ' ಎಂಬ ಯೋಗಾಭ್ಯಾಸವನ್ನು ಕೈಗೊಂಡನು. ಕೃಷ್ಣನ ತಪಸ್ಸಿನಿಂದ ರುದ್ರನು ಸಂತುಷ್ಟನಾಗಿ ಅವನಿಗೆ ಅನೇಕ ವರಗಳನ್ನು ನೀಡಿದನು. ಇದರಿಂದ ಕೃಷ್ಣನಿಗೆ ಜಾಂಬವತಿಯಲ್ಲಿ ಸಾಂಬ ಎಂಬ ಮಗನು ಹುಟ್ಟಿದನು. ಶ್ರೀ ಕೃಷ್ಣನು ರುದ್ರನ ಶಾಪಕ್ಕೆ ತುತ್ತಾದ ಬಾಣಾಸುರನ ಸಾವಿರ ತೋಳುಗಳನ್ನು ಕತ್ತರಿಸಿದನು. ಶ್ರೀ ಕೃಷ್ಣನು ಬಲರಾಮನ ಸಹಾಯದಿಂದ ಯುದ್ಧಮಾಡಿ ರಾಕ್ಷಸರ ಮತ್ತು ಕೆಟ್ಟ ದೊರೆಗಳ ಸಂಹಾರಮಾಡಿದನು. ಕೃಷ್ಣನು ನರಕಾಸುರನ ಸಂಹಾರ ಮಾಡಿದನು. ಬ್ರಾಹ್ಮಣರ ಶಾಪಕ್ಕೆ ತುತ್ತಾದ ವಂಶವೆಲ್ಲವನ್ನೂ ಉಪಸಂಹರಿಸಿ ಅವರಿಗೆ ಮೋಕ್ಷ ಉಂಟಾಗುವಂತೆ ಮಾಡಿದನು. ಬಹಳ ಕಾಲ ಪ್ರಭಾಸ ಕ್ಷೇತ್ರದಲ್ಲಿ ವಾಸ ಮಾಡಿದನು. ನೂರಾರು ವರ್ಷಗಳಕಾಲ ದ್ವಾರಕಾಪಟ್ಟಣದಲ್ಲಿ ವಾಸಿಸುತ್ತಿದ್ದ ಶ್ರೀ ಕೃಷ್ಣನು ವಿಶ್ವಾಮಿತ್ರ, ಕಣ್ವ, ನಾರದ, ದುರ್ವಾಸ ಮುಂತಾದ ಋಷಿಗಳ ಅಭಿಪ್ರಾಯದಂತೆ ತನಗೆ ಯಾವುದೋ ಒಂದು ಶಾಪವಿದೆ ಎಂದು ನೆಪಮಾಡಿಕೊಂಡು ಯಾವನೋ ಒಬ್ಬ ಬೇಡರವನ ಜರಕ ಎಂಬ ಅಸ್ತ್ರಕ್ಕೆ ಸಿಕ್ಕಿಬಿದ್ದವನಂತೆ ನಟಿಸಿ ಆ ಬೇಡರವನನ್ನು ಅನುಗ್ರಹಿಸಿ ಮಾನವ ದೇಹವನ್ನು ತ್ಯಜಿಸಿ ಸ್ವರ್ಗವನ್ನು ಸೇರಿದನು.

ಅಷ್ಟಾವಕ್ರನ ಶಾಪದಿಂದಲೂ, ಕೃಷ್ಣನ ಮಾಯಾಶಕ್ತಿಯಿಂದಲೂ ಕೃಷ್ಣನ ಪತ್ನಿಯರೆಲ್ಲರೂ ಕಳ್ಳರಿಂದ ಅಪಹರಿಸಲ್ಪಟ್ಟರು. ಬಲರಾಮನೂ ಕೂಡ ತನ್ನ ಮನುಷ್ಯ ಶರೀರವನ್ನು ಬಿಟ್ಟು ಆದಿಶೇಷನಾದನು. ರುಕ್ಮಿಣಿಯೇ ಮೊದಲಾದ ಪಟ್ಟ ಮಹಿಷಿಯರೂ ಕೃಷ್ಣನ ಚಿತಾಧಿರೋಹಣವನ್ನು ಮಾಡಿದರು. ಬಲರಾಮನ ಚಿತಾಧಿ ರೋಹಣವನ್ನು ರೇವತಿಯೂ ಮಾಡಿದಳು. ಕೃಷ್ಣನು ಶರೀರ ತ್ಯಾಗಮಾಡಲು ಬ್ರಾಹ್ಮಣರೆಲ್ಲರೂ ಅಗ್ನಿಪ್ರವೇಶ ಮಾಡಿದರು. ಅವನ ಸ್ತ್ರೀಯರು ಅವನ ಮಾರ್ಗವನ್ನೇ ಹಿಡಿದರು. ಬಹಳ ಪರಾಕ್ರಮಶಾಲಿಯಾದ ಅರ್ಜುನನು ಕೃಷ್ಣನ ಮತ್ತು ಇತರ ಯಾದವರ ಮತ್ತು ಬಲರಾಮನ ಪ್ರೇತಕರ್ಮಗಳನ್ನೂ ಮಾಡಿ ಅವರ ತೃಪ್ತ್ಯರ್ಥವಾಗಿ ಗೆಡ್ಡೆ, ಗೆಣಸು ಮುಂತಾದ ಫಲಗಳಿಂದ ಬಲಿಯನ್ನು ಕೊಟ್ಟನು. ದೇಶದಲ್ಲಿ ದ್ರವ್ಯಗಳೇನೂ ಇಲ್ಲದೇ ಅರ್ಜುನನೂ ಸಹ ತನ್ನ ಅಣ್ಣ ತಮ್ಮಂದಿರೊಂದಿಗೆ ಸ್ವರ್ಗವನ್ನು ಸೇರಿದನು. ಈ ರೀತಿಯಾಗಿ ಮಹಾನುಭಾವನಾದ ಶ್ರೀಕೃಷ್ಣನ ಜನ್ಮ ವೃತ್ತಾಂತವು ಇರುತ್ತದೆ. ಶ್ರೀ ಕೃಷ್ಣ ಪರಮಾತ್ಮನು ತನ್ನ ಇಚ್ಛೆಯಿಂದಲೇ ಈ ರೀತಿಯಾಗಿ ಹುಟ್ಟಿ ತನ್ನ ಅವತಾರಕಾರ್ಯವನ್ನು ಮಾಡಿ ತನ್ನ ಶರೀರವನ್ನು ತ್ಯಾಗಮಾಡಿದನು. ಈ ಚರಿತ್ರೆಯನ್ನು ಓದಿದವರಿಗೆ, ಕೇಳಿದವರಿಗೆ, ಬ್ರಾಹ್ಮಣ ಮುಂತಾದವರಿಗೆ ಹೇಳಿದವರಿಗೆ ವೈಷ್ಣವ ಲೋಕ ಪ್ರಾಪ್ತಿಯಾಗುತ್ತದೆ.

*ಲಿಂಗಮಹಾಪುರಾಣ ಪೂರ್ವಾರ್ಧದ ಸೋಮವಂಶದಚರಿತ್ರೆಯ ವಿವರಣೆ*
*ಎಂಬ ಅರವತ್ತೊಂಬತ್ತನೆಯ ಅಧ್ಯಾಯ ಮುಗಿದುದು*

*ಲಿಂಗ ಮಹಾಪುರಾಣ ಪೂರ್ವಾರ್ಧ ಸಮಾಪ್ತವಾದುದು*

# ಲಿಂಗಮಹಾಪುರಾಣ

## ಉತ್ತರ ಭಾಗ

### ಕೌಶಿಕ ಭಕ್ತನ ಚರಿತ್ರ ಮತ್ತು ನಾರದರ ತಪಸ್ಸಮಾಧಿ

ಅಧ್ಯಾಯ - ೧

**ಋಷಿಗಳು ಅಂದದ್ದು :-**

**ಕೃಷ್ಣಸ್ತುಷ್ಯತಿ ಕೇನೇಹ ಸರ್ವದೇವೇಶ್ವರೇಶ್ವರಃ ।**
**ವಕ್ತುಮರ್ಹಸಿ ಚಾಸ್ಮಾಕಂ ಸೂತ ಸರ್ವಾರ್ಥವಿದ್ವವಾನ್ ॥**

ಸೂತರೆ, ನೀವು ಎಲ್ಲವನ್ನು ಬಲ್ಲವರು. ಶ್ರೀ ಕೃಷ್ಣನು ಯಾವುದರಿಂದ ಸಂತುಷ್ಟನಾಗುತ್ತಾನೆ? ಅವನನ್ನು ಮೆಚ್ಚಿಸುವ ಧರ್ಮೋಪಾಯ ಯಾವುದು? ಇದನ್ನೆಲ್ಲ ನಮಗೆ ತಿಳಿ ಹೇಳಿರಿ. ಸೂತಾಚಾರ್ಯರೆ, ನೀವು ಎಲ್ಲ ವಿಷಯಗಳನ್ನು ಚೆನ್ನಾಗಿ ಬಲ್ಲವರಲ್ಲವೆ!

**ಸೂತ :-** ವಿಪ್ರೋತ್ತಮರೆ, ಪೂರ್ವಕಾಲದಲ್ಲಿ ಅಂಬರೀಷ ಮಹಾರಾಜನು ಮಹಾ ತೇಜಸ್ವಿಗಳಾದ ಮಾರ್ಕಂಡೇಯ ಮಹಾ ಮುನಿಗಳಿಗೆ ನೀವು ಕೇಳಿದ ಇದೇ ಪ್ರಶ್ನೆಯನ್ನೇ ಮಾಡಿದ್ದನು. ಅವನ ಪ್ರಶ್ನೆಗೆ ಉತ್ತರ ರೂಪವಾಗಿ ಮುನಿ ಪುಂಗವರಾದ ಮಾರ್ಕಂಡೇಯ ಮಹರ್ಷಿಗಳು ಹೇಳಿದ್ದನ್ನು ನಾನು ನಿಮಗೆ ನಿರೂಪಿಸುತ್ತೇನೆ. ನೀವು ಕೇಳಿರಿ.

**ಅಂಬರೀಷ :-** ''ಮಹಾಬುದ್ಧಿವಂತರಾದ ಮಾರ್ಕಂಡೇಯ ಮುನಿಗಳೆ, ಚಿರಂಜೀವಿಗಳಾದ ನೀವು ಸರ್ವಧರ್ಮಗಳಲ್ಲಿ ಪಾರಂಗತರಾಗಿರುವಿರಿ. ಎಲ್ಲ ಪುರಾಣಗಳ ಅರ್ಥವನ್ನು ಚೆನ್ನಾಗಿ ಅರಿತಿರುವಿರಿ. ಮಹರ್ಷಿಗಳೆ, ನಾರಾಯಣ ಧರ್ಮಗಳೆಲ್ಲವು ದಿವ್ಯವಾಗಿರುತ್ತವೆ. ಅವುಗಳಲ್ಲಿ ಭಕ್ತರಿಗೆ ಆಚರಿಸಲು ಯೋಗ್ಯವಾದ ಹಾಗೂ ಉತ್ತಮವಾದ ಧರ್ಮವು ಯಾವುದು? ಎನ್ನುವದನ್ನು ನನಗೆ ತಿಳಿಸಿರಿ.'' ಅಂಬರೀಷ ಮಹಾರಾಜನ ಈ ಮಾತನ್ನು ಕೇಳಿ ಮಾರ್ಕಂಡೇಯ ಮಹಾಮುನಿಗಳಿಗೆ ಶ್ರೀ ಕೃಷ್ಣನಲ್ಲಿ ಭಕ್ತಿಉದ್ರಿಕ್ತವಾಯಿತು. ಕೂಡಲೆ ಅವರು ಎದ್ದು ನಿಂತರು. ಕೈ ಮುಗಿದರು. ಶ್ರೀಮನ್ನಾರಾಯಣನ ಅವತಾರ ಸ್ವರೂಪನಾದ ಮತ್ತು ನಾಶರಹಿತನಾದ ಯಾವ ಗುಣಗಳಿಗೂ ಚ್ಯುತಿ ಇಲ್ಲದ ದೇವೋತ್ತಮನಾದ ಕೃಷ್ಣನನ್ನು ಸ್ಮರಣೆಮಾಡಿ ನುಡಿದರು.

**ಮಾರ್ಕಂಡೇಯ :-** ಮಹಾರಾಜ, ನಾರಾಯಣನ ಪುಣ್ಯಕರವಾದ ಸ್ಮರಣ, ಪೂಜೆ ಹಾಗೂ ಭಕ್ತಿ ಪೂರ್ವಕವಾದ ನಮಸ್ಕಾರ ಇವೆಲ್ಲವು ನಾರಾಯಣ ಧರ್ಮ ಎನಿಸುತ್ತವೆ. ಈ ಭಗವಂತನ ನೆನಹು, ಅರ್ಚನ, ಪ್ರಣಾಮ, ಜಪ ಎಲ್ಲವು ಅಶ್ವಮೇಧ ಯಜ್ಞಕ್ಕೆ ಸಮಾನವಾಗಿರುತ್ತವೆ. ಜನಾರ್ದನ ಎಂಬ ಹೆಸರುಳ್ಳ ನಾರಾಯಣ ರೂಪಿಯಾದ ಆ ಪರಮಾತ್ಮನು ಎಲ್ಲರಲ್ಲಿಯೂ ಶ್ರೇಷ್ಠನಾಗಿ ಪುರುಷೋತ್ತಮ ಎನಿಸಿದ್ದಾನೆ. ಅವನು ರೂಪಿಸಿದ ಧರ್ಮವನ್ನು ಬ್ರಹ್ಮನು ಹಾಗೂ ಉಳಿದ ದೇವತೆಗಳು ಆಶ್ರಯಿಸಿ ಆಚರಿಸಿಯೇ

ಮೋಕ್ಷವನ್ನು ಹೊಂದಿದ್ದಾರೆ. ಅಂಥಹ ನಾರಾಯಣೋಕ್ತವಾದ ದಿವ್ಯ ಧರ್ಮವನ್ನೇ ನಾನು ತಿಳಿದದ್ದನ್ನು ಹಾಗೂ ಕಣ್ಣಿನಿಂದ ನೋಡಿದ್ದನ್ನು ನಿನಗೆ ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಕೌಶಿಕ ಎಂಬ ಬ್ರಾಹ್ಮಣನು ಇದ್ದನು. ಅವನು ವಾಸುದೇವನ ಅರ್ಥಾತ್ ನಾರಾಯಣನ ಪರಮಭಕ್ತ. ಅನುದಿನವೂ ಅನವರತವೂ ಸಾಮಗಾನದಿಂದ ಆ ಭಗವಂತನನ್ನು ಧ್ಯಾನಿಸುತ್ತಿದ್ದ. ಶ್ರೀಕೃಷ್ಣನ ಪರಮ ಪವಿತ್ರವಾದ ಉದಾರಚರಿತ್ರವನ್ನು ಕುಳಿತಾಗ, ನಿಂತಾಗ, ಊಟ ಮಾಡುವಾಗ, ಓಡಾಡುವಾಗ ಗಾಯನ ಮಾಡುತ್ತಲಿದ್ದ. ಅವನು ಯಾವದೇ ಕೆಲಸವನ್ನು ಮಾಡುತ್ತಲಿದ್ದರೂ ಮನಸ್ಸು ಮಾತ್ರ ಶ್ರೀಹರಿಯಲ್ಲಿಯೇ ಇರುತ್ತಲಿತ್ತು. ಶ್ರೀ ಹರಿಯ ಕ್ಷೇತ್ರಗಳು ಇದ್ದಲ್ಲಿ ಹೋಗಿ ಅವನು ಶ್ರೀಹರಿಯನ್ನು ಹೊಗಳಿಹಾಡುತ್ತಿದ್ದ. ಧ್ಯಾನಮಾಡುತ್ತಿದ್ದ. ಅವನ ಆ ಹರಿಧ್ಯಾನವು ಸರಿಯಾದ ತಾಳಲಯ ರಾಗಗಳಿಂದ ಕೂಡಿ ಸುಶ್ರಾವ್ಯವಾಗಿ ಇರುತ್ತಿತ್ತು.

ಸಂಗೀತದ ಆರೋಹಣ, ಅವರೋಹಣ, ಸ, ರಿ, ಗ, ಮ, ಪ, ದ, ನಿ, ಎಂಬ ಏಳು ಸ್ವರಗಳು, ಮೂರುಗ್ರಾಮಗಳು ಇವುಗಳಿಂದ ಅವನ ಧ್ಯಾನಗಾನವು ಕೂಡಿ ಉತ್ತಮವಾದ ಸಂಗೀತದ ಸ್ವರೂಪವನ್ನು ಪಡೆದಿರುತ್ತಿತ್ತು. ಬೃಹದ್ರಥಂತರಾದಿ ಸಾಮ ಶ್ರುತಿಗಳಿಂದ ಆ ಭಗವಂತನನ್ನು ಸಂಗೀತದ ಹೃದಯಂಗಮವಾದ ಮಧುರ ರೀತಿಯಿಂದ ಅವನು ಸ್ತೋತ್ರಮಾಡುತ್ತಿದ್ದ. ಈ ಸಂಗೀತದ ಮುಖಾಂತರವಾಗಿಯೇ ಅವನು ಅನನ್ಯ ಭಕ್ತಿ ಎಂಬ ಸಾಧನಾಯೋಗವನ್ನು ಹೊಂದಿ ಧ್ಯಾನ ಗಾನಗಳಲ್ಲಿ ಏಕತಾನ ಲೀನಮಾನಸನಾಗಿ ಭಗವಂತನ ಸ್ವರ ಸೇವೆಯನ್ನು ಭಕ್ತಿ ಪಾರವಶ್ಯದಿಂದ ಮಾಡುತ್ತಲಿದ್ದ. ಕೇವಲ ಭಿಕ್ಷಾನ್ನಮಾತ್ರದಿಂದ ತನ್ನ ಉದರ ಪೂರಣವನ್ನು ಮಾಡಿಕೊಂಡು ಅವನು ಆ ವಿಷ್ಣು ದೇವಾಲಯದಲ್ಲಿಯೇ ವಾಸಮಾಡಿಕೊಂಡಿದ್ದನು.

ಹೀಗೆ ನಿಸ್ಪೃಹ ವೃತ್ತಿಯಿಂದ ಹೊಟ್ಟೆಗಾಗಿ ಯಾರನ್ನು ಕಾಡದೆ, ಅನ್ನಕ್ಕಾಗಿ ಯಾರನ್ನು ಬೇಡದೆ ಕೇವಲ ಧ್ಯಾನಸ್ಥನಾಗಿ ವಿಷ್ಣುವಿನ ಮುಂದೆ ಕುಳಿತು ಗಾನಮಾಡುವ ವಿಷ್ಣು ಭಕ್ತನಾದ ಆ ಗಾನಯೋಗಿಯನ್ನು ನೋಡಿ 'ಪದ್ಮ' ಎಂಬ ಬ್ರಾಹ್ಮಣನಿಗೆ ಆಶ್ಚರ್ಯವಾಯಿತು. ಅವನ ಬಗ್ಗೆ ಅನುಕಂಪೆ ಅವನಲ್ಲಿ ಮೂಡಿತು. ಪದ್ಮ ಎಂಬ ಹೆಸರಿನಿಂದ ಪ್ರಖ್ಯಾತನಾದ ಆ ಬ್ರಾಹ್ಮಣನು ಆ ಧ್ಯಾನಯೋಗಿಗೆ ಮಡದಿ ಮಕ್ಕಳು ಎಲ್ಲರಿಗೂ ಸಾಕಾಗುವಷ್ಟು ಆಹಾರವನ್ನು ತಂದುಕೊಡತೊಡಗಿದ. ಬಿಸಿಬಿಸಿಯಾದ ತಾಜಾ ಅನ್ನವನ್ನು ಕುಟುಂಬ ಸಹಿತವಾಗಿ ಕೌಶಿಕ ಬ್ರಾಹ್ಮಣನು ಊಟಮಾಡಿ ಉತ್ಸಾಹದಿಂದ ಗಾಯನಮಾಡುತ್ತಿದ್ದ. ಆನಂದದಿಂದ ಗಾಯನಮಾಡುತ್ತಿದ್ದ. ಆ ಪದ್ಮ ನಾಮಕನಾದ ಬ್ರಾಹ್ಮಣನೂ ಕೂಡ ಕೌಶಿಕನೆಂಬ ಆ ಹರಿಭಕ್ತನ ಹರಿಧ್ಯಾನದ ಗಾನ ತಾನ ವಿತಾನಗಳನ್ನು ಆಲಿಸುತ್ತ ಭಕ್ತಿ ಪರವಶನಾಗಿ ಕುಳಿತು ಕೇಳುತ್ತಿದ್ದ.

ಹೀಗೆ ಕೆಲವು ಕಾಲ ಕಳೆಯಿತು. ಧ್ಯಾನಯೋಗಿ ಕೌಶಿಕನ ಗಾನಮಾಧುರ್ಯದ ಸಂಗೀತದ ಸೊಬಗಿನ ಕೀರ್ತಿ ಎಲ್ಲೆಡೆ ಪಸರಿಸಿತು. ಅನೇಕ ಶಿಷ್ಯರು ಅವನ ಬಳಿಗೆ ಬಂದು ಸೇರಿದರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯಕುಲದಲ್ಲಿ ಜನಿಸಿದ ಏಳು ಜನ ವಿದ್ವಾಂಸರು ಕೌಶಿಕನ ಶಿಷ್ಯತ್ವವನ್ನು ವಹಿಸಿದರು. ಅವರೆಲ್ಲರು ಪರಮ ಹರಿ ಭಕ್ತರು. ನಾರಾಯಣನನ್ನೆ ಪರಾತ್ಪರ ದೇವತೆ ಎಂದು

ನಂಬಿ ಅವನ ಉಪಾಸನೆಯನ್ನು ಮಾಡುವವರು. ಅವರು ಏಳು ಜನರು ಅಧ್ಯಯನಮಾಡಿ ಅಧ್ಯಾತ್ಮಜ್ಞಾನದ ಉಚ್ಚಮಟ್ಟವನ್ನು ಮುಟ್ಟಿ ಮಹಾಮನೀಷಿಗಳು ಎನಿಸಿದರು. ಪದ್ಮ ಬ್ರಾಹ್ಮಣನು ಆ ಏಳೂ ಜನ ಪಂಡಿತಶಿಷ್ಯರಿಗೂ ಕೂಡ ಆ ಕೌಶಿಕ ಬ್ರಾಹ್ಮಣನೊಂದಿಗೆ ಪರ್ಯಾಪ್ತವಾಗಿ ಆಹಾರವನ್ನು ಕೊಟ್ಟು ಉಪಚರಿಸುತ್ತಿದ್ದನು. ಇದರಿಂದ ಕೌಶಿಕನಿಗೆ ಬಹಳ ಸಂತೋಷವಾಯಿತು. ಪದ್ಮ ಬ್ರಾಹ್ಮಣನು ತಂದು ಕೊಟ್ಟ ಅನ್ನಆಹಾರಾದಿಗಳನ್ನು ತನ್ನ ಕುಟುಂಬ ಹಾಗೂ ಶಿಷ್ಯರೊಂದಿಗೆ ಆನಂದದಿಂದ ಸೇವಿಸಿ ಎಲ್ಲರಿಂದ ಕೂಡಿಕೊಂಡು ಭಗವಂತನ ಭಜನ ಪೂಜನಾದಿಗಳನ್ನು ಮಾಡುತ್ತ ಅಲ್ಲಿಯೇ ವಾಸಮಾಡಿದನು.

ಅದೇ ವಿಷ್ಣು ದೇವಾಲಯದಲ್ಲಿ 'ಮಾಲವ' ಎಂಬ ವೈಶ್ಯನು ಪ್ರತಿ ದಿನವೂ ಸಂತೋಷದಿಂದ ಶ್ರೀಹರಿಗೆ ಬೆಳಿಗ್ಗೆ ಮಧ್ಯಾನ್ಹ ಸಾಯಂಕಾಲ ತ್ರಿಕಾಲದಲ್ಲಿಯೂ ನೀರಾಜನ ಮಂಗಳಾರತಿ, ದೀಪಾರತಿಗಳನ್ನು ಮಾಡುತ್ತ ದೀಪಸೇವೆಯನ್ನು ಮಾಡುತ್ತಿದ್ದನು. ಆ ಮಾಲವನಿಗೆ 'ಮಾಲವಿ' ಎಂಬ ಹೆಸರಿನ ಮಡದಿ ಇದ್ದಳು. ಅವಳು ಪರಮಪತಿವ್ರತೆ. ಅವಳು ಆ ವಿಶಾಲವಾದ ದೇವಾಲಯವನ್ನು ಪ್ರತಿದಿನವೂ ತಪ್ಪದೆ ಗುಡಿಸಿ ಗೋಮಯದಿಂದ ಸಾರಿಸುತ್ತಿದ್ದಳು. ಕೌಶಿಕ, ವತ್ಸ ಹಾಗೂ ಅವನ ಶಿಷ್ಯರು ಕೂಡಿ ಮಾಡುವ ಭಗವಂತನ ಧ್ಯಾನಗಾನಗಳನ್ನು ಕೇಳುತ್ತಲೇ ಅವಳು ಆ ವಿಶಾಲವಾದ ಹರಿಮಂದಿರದ ಮಾರ್ಜನ, ಗೋಮಯಲೇಪನ ನಿರ್ಮಲೀಕರಣ ಮುಂತಾದ ಸೇವೆಯನ್ನು ಗೈಯ್ಯುತ್ತಿದ್ದಳು.

ಮುಂದೆ ಒಂದು ದಿನ ಕೌಶಿಕನು ಮಾಡುವ ಶ್ರೀ ವಿಷ್ಣುವಿನ ಸಂಗೀತ ಸೇವೆಯ ಕೀರ್ತಿಯನ್ನು ಕೇಳಿ ಕುಶಸ್ಥಲದಿಂದ ಐವತ್ತು ಜನ ಶಿಷ್ಟ ಬ್ರಾಹ್ಮಣರು ಅಲ್ಲಿಗೆ ಬಂದರು. ಕೌಶಿಕನ ಭಕ್ತಿರಸದಿಂದ ಯುಕ್ತವಾದ ಧ್ಯಾನಗಾನವನ್ನು ಅವರೆಲ್ಲರು ಉತ್ಸುಕತೆಯಿಂದ ಕೇಳಿ ಅವರೂ ಕೂಡ ಈ ಗಾನಯೋಗದಲ್ಲಿ ಸಾಧನೆಮಾಡಿಕೊಂಡರು. ಶ್ರವಣ ಬಲದಿಂದಲೇ ಶ್ರೀಹರಿಯ ಧ್ಯಾನದ ಹಾಗೂ ಗಾನದ ಉಪಾಯದ ಮರ್ಮವನ್ನು ತಿಳಿದುಕೊಂಡು ಧ್ಯಾನ ಗಾನ ಜ್ಞಾನಗಳ ತತ್ವಾರ್ಥವನ್ನು ಚೆನ್ನಾಗಿ ಅರಿತು. ಬುದ್ಧಿವಂತರಾದ ಆ ಕುಶಸ್ಥಲದ ರಸಿಕ ಸಹೃದಯರು ಶ್ರವಣ ಮನನಾದಿಗಳನ್ನು ಮಾಡುತ್ತ ಅಲ್ಲಿಯೇ ವಾಸವನ್ನು ಮಾಡಿದರು. ಇದೇ ರೀತಿಯಾಗಿ ಕೌಶಿಕನ ಭಕ್ತಿಯುಕ್ತವಾದ ಸಂಗೀತದ ಸ್ವರ ಸಾಧನೆಯ ಕೀರ್ತಿಯು ದಿಗಂತದಲ್ಲೆಲ್ಲ ಹರಡಿತು.

ಆಗ ಒಂದು ದಿನ ಕೌಶಿಕನ ಧ್ಯಾನ ಗಾನಕೀರ್ತನೆಗಳ ಕೀರ್ತಿಯನ್ನು ಕೇಳಿ ಕಳಿಂಗದೇಶದ ದೊರೆಯು ಅಲ್ಲಿಗೆ ಬಂದನು. ಮತ್ತು ಕೌಶಿಕ ಬ್ರಾಹ್ಮಣನಿಗೆ, ''ಬ್ರಾಹ್ಮಣರೆ, ನೀವು ಬಹಳ ಮಧುರವಾಗಿ ಗಾಯನಮಾಡುತ್ತೀರಿ. ನೀವು ಇದೇ ನಿಮ್ಮ ಮಧುರಕಂಠದಿಂದ ನನ್ನನ್ನು ಸ್ತುತಿಸಿ ಹಾಡಿರಿ'' ಎಂದು ಬಿನ್ನವಿಸಿಕೊಂಡನು. ಮತ್ತು ಕುಶಸ್ಥಲದಿಂದ ಬಂದು ಕೌಶಿಕನ ಸಂಗೀತ ಕೀರ್ತನೆಗಳ ಗಾನಮಾಧುರ್ಯವನ್ನು ಭಕ್ತಿಯಿಂದ ಶ್ರವಣಮಾಡುತ್ತಿರುವ ಐವತ್ತು ಶ್ರಾವಕರಿಗೂ ಕೂಡ, ''ಭಾವುಕರಾದ ಶ್ರಾವಕರೆ, ಈ ಕೌಶಿಕ ಬ್ರಾಹ್ಮಣನು ತನ್ನ ಕುಟುಂಬ ಹಾಗೂ ಶಿಷ್ಯ ಪರಿವಾರದೊಂದಿಗೆ ಮಾಡುವ ನನ್ನ ಸ್ತೋತ್ರ ಗಾನವನ್ನು ಕೂಡ ಇದೇ ರೀತಿಯಾಗಿ ಲಕ್ಷ್ಯಕೊಟ್ಟು

ಭಕ್ತಿಯಿಂದ ಶ್ರವಣ ಮಾಡಿರಿ'' ಎಂದು ಹೇಳಿದನು. ಮಹಾರಾಜನ ಈ ಮಾತುಗಳನ್ನು ಕೇಳಿ ಕೌಶಿಕನು ಮೃದುವಾದ ಅಷ್ಟೇ ಸ್ಪಷ್ಟವಾದ ಮಾತಿನಿಂದ ನುಡಿದನು.

**ಕೌಶಿಕ :-**

**ನ ಜಿಹ್ವಾ ಮೇ ಮಹಾರಾಜನ್ ವಾಣೀ ಚ ಮಮ ಸರ್ವದಾ ।**
**ಹರೇರನ್ಯಮಪೀಂದ್ರಂ ವಾ ಸ್ತೌತಿ ನೈವ ಚ ವಕ್ಷ್ಯತಿ ॥**

ಮಹಾರಾಜ, ''ನನ್ನ ನಾಲಿಗೆಯು ಎಂದೂ ವಿಷ್ಣುವಿನ ಹೊರತು ಬೇರೆಯವರನ್ನು ಹೊಗಳುವದಿಲ್ಲ, ನನ್ನ ವಾಣಿಯಾದರೂ ಹರಿಯ ಹೊರತು ಹೆರವರಾರನ್ನೂ ಕುರಿತು ಹಾಡುವದಿಲ್ಲ. ಇಂದ್ರನನ್ನು ಕೂಡ ಆ ನನ್ನ ವಾಗಿಂದ್ರಿಯವು ಸ್ತೋತ್ರಮಾಡುವದಿಲ್ಲ. ಅವರ ಹೆಸರನ್ನು ಕೂಡ ನನ್ನ ನಾಲಿಗೆಯು ನುಡಿಯುವದಿಲ್ಲ.'' ಎಂದು ಹೇಳಿದನು. ಅದರಂತೆ ಕೌಶಿಕನ ವಾಸಿಷ್ಠ, ಗೌತಮ, ಹರಿ, ಸಾರಸ್ವತ, ಚಿತ್ತ, ಚಿತ್ರಮಾಲ್ಯ ಮತ್ತು ಶಿಶು ಎಂಬ ಏಳು ಜನ ಶಿಷ್ಯರು ಕೂಡ ಹೇಳಿದರು. ''ಹರಿಯ ಹೊರತು ಮತ್ತೆ ಯಾರನ್ನು ನಾವು ಎಂದೂ ಹೊಗಳಲಾರೆವು, ಹಾಡಲಾರೆವು, ಹೆಸರು ಕೂಡ ಹೇಳಲಾರೆವು'' ಎಂದು ನೇರವಾಗಿ, ನಿಷ್ಠೂರವಾಗಿ ಅಲ್ಲದಿದ್ದರೂ ಸ್ಪಷ್ಟವಾಗಿ ರಾಜನಿಗೆ ಹೇಳಿದರು.

ಕುಶಸ್ಥಲದಿಂದ ಬಂದ ಐವತ್ತು ಜನ ಶ್ರೋತ್ರಿಯರುಗಳನ್ನು ಕುರಿತು ರಾಜನು, ''ನನ್ನ ಸ್ತೋತ್ರಗಾನವನ್ನು ಆಲಿಸಿರಿ'' ಎಂದು ಹೇಳಿದ್ದನಷ್ಟೇ. ಅದಕ್ಕೆ ಆ ಭಾವುಕರಾದ ಶ್ರಾವಕರು ಮಹಾರಾಜನಿಗೆ ನೇರವಾಗಿ ನುಡಿದರು. ''ಮಹಾರಾಜ, ನಾವೆಲ್ಲರೂ ವಿಷ್ಣು ಭಕ್ತರು. ನಮ್ಮ ಕಿವಿಗಳು ಕೃಷ್ಣನ ಕೀರ್ತನೆಯನ್ನು ಮಾತ್ರ ಕೇಳುತ್ತವೆ. ಬೇರೆಯವರ ಸ್ತೋತ್ರ ಗಾಯನಗಳನ್ನು ಕೇಳುವುದಿಲ್ಲ'' ಎಂದು ಹೇಳಿದರು. ಅವರೆಲ್ಲರ ಈ ಮಾತುಗಳನ್ನು ಕೇಳಿ ಆ ಭೂಪನಿಗೆ ಬಹಳ ಕೋಪ ಬಂದಿತು. ಅವನು ತನ್ನ ಸೇವಕರನ್ನು ಕರೆದು ''ನೀವು ಈ ಎಲ್ಲ ಬ್ರಾಹ್ಮಣರ ಸುತ್ತಮುತ್ತಲು ನಿಂತುಕೊಂಡು ನನ್ನ ಕೀರ್ತಿಯನ್ನು ಹಾಡಿರಿ. ನನ್ನನ್ನು ಹೊಗಳಿರಿ. ನೀವು ಉಚ್ಚಕಂಠದಿಂದ ನನ್ನ ಸ್ತುತಿಪರವಾದ ಗಾನವನ್ನು ಮಾಡುತ್ತಿರುವಾಗ ಇವರು ನನ್ನ ಗಾನವನ್ನು ಕೇಳದೆ ಹೇಗೆ ಇರಬಲ್ಲರು ?'' ಎಂದು ಕಟ್ಟುನಿಟ್ಟಾಗಿ ಆಜ್ಞೆಯನ್ನು ಮಾಡಿದನು.

ಆಗ ರಾಜಸೇವಕರು ಹಾಗೂ ಅವರ ಎಲ್ಲ ಪರಿವಾರದವರು. ಆ ಬ್ರಾಹ್ಮಣರ ಸುತ್ತಮುತ್ತಲು ನಿಂತುಕೊಂಡು ರಾಜನ ಸ್ತೋತ್ರವನ್ನು ಗಾನರೂಪದಿಂದ ಹಾಡತೊಡಗಿದರು. ಮತ್ತು ಆ ರಾಜ ಸೇವಕರು ತಾವು ರಾಜನ ಸ್ತೋತ್ರವನ್ನು ಮಾಡುವಾಗ ಅದನ್ನು ಕೇಳದೇ ಯಾರೂ ಆಚೀಚೆ ಹೋಗಬಾರದೆಂದು ಅಲ್ಲಿಂದ ನಿರ್ಗಮನದ ಎಲ್ಲ ಮಾರ್ಗಗಳನ್ನು ಮುಚ್ಚಿ ಸುತ್ತಲು ನಿಂತು ಯಾರೂ ಹೊರಗೆ ಹೋಗದಂತೆ ಕಾಯತೊಡಗಿದರು. ಇದನ್ನು ನೋಡಿ ಕೌಶಿಕನಿಗೂ ಅವನ ಶಿಷ್ಯರಿಗೂ ಹಾಗೂ ಕೇಳಲು ಕುಳಿತುಕೊಂಡ ಕುಶಸ್ಥಲದ ಶ್ರಾವಕರಿಗೂ ಬಹಳ ದುಃಖವಾಯಿತು. ಅವರು ಆ ರಾಜನ ಸೇವಕರ ಬಾಯಿಯಿಂದ ತೂರಿ ಬರುವ ರಾಜನ ವರ್ಣನಾ ಪರವಾದ ಶಬ್ದಗಳನ್ನು ಗಾನದ ಅಕ್ಷರಗಳನ್ನು ಕೇಳಲಾರದೆ ಕೈಗಳಿಂದಲೂ ಕಲ್ಲುಕಟ್ಟಿಗೆಗಳ ತುಂಡು ತುಣುಕು ಬಿರಡೆಗಳಿಂದಲೂ ತಮ್ಮ ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡರು. ಮಹಾರಾಜನ

ಈ ಬಲಾತ್ಕಾರದ ಸ್ತೋತ್ರಗಾನವನ್ನು ತಮ್ಮೆಲ್ಲರಿಗೂ ಜುಲುಮೆಯಿಂದ ಕೇಳಿಸುತ್ತಿರುವ ರಾಜನ ಈ ಕುಕೃತ್ಯದಿಂದ ನೊಂದವರಾಗಿ ಮನಸ್ಸಿನಲ್ಲಿ ಬಹಳ ದುಃಖಪಟ್ಟರು. ಆಗ ರಾಜನ ಪರಿವಾರದವರು ಒತ್ತಾಯದಿಂದ ಅವರ ಬಾಯಿಂದ ಮಹಾರಾಜರ ಕೀರ್ತಿ ಗಾಯನವನ್ನು ಮಾಡಲು, ತಮ್ಮ ಬಾಯಿಂದ ಹಾಡಲು ಬಲವಂತ ಮಾಡತೊಡಗಿದಾಗ ಕೌಶಿಕ ಮೊದಲಾದ ವಿಷ್ಣುಭಕ್ತ ಬ್ರಾಹ್ಮಣರು ತಮ್ಮ ಕೈಯ್ಯಲ್ಲಿ ಸಿಕ್ಕ ಕಲ್ಲು ಕಟ್ಟಿಗೆಗಳಿಂದ ತಮ್ಮ ನಾಲಿಗೆಗಳನ್ನು ಕೊಯ್ದುಕೊಂಡರು. ರಾಜದೂತರು ಜುಲುಮೆಯಿಂದ ತಾವು ಮಾಡುವ ರಾಜಭಜನದಲ್ಲಿ ಬಲವಂತವಾಗಿ ಭಾಗವಹಿಸಲು ಎಳೆಯತೊಡಗಿದಾಗ ಅಲ್ಲಿದ್ದವರೆಲ್ಲರು ಕೌಶಿಕನನ್ನು ಅನುಸರಿಸಿ ತಮ್ಮ ನಾಲಿಗೆಯ ತುದಿಗಳನ್ನು ತಮ್ಮ ಕೈಯ್ಯ ಉಗುರುಗಳಿಂದಲೇ ಸೀಳಿಕೊಂಡರು. ಇದನ್ನು ನೋಡಿ ರಾಜನಿಗೆ ಭಯಂಕರ ಕೋಪಾಟೋಪ ಉಂಟಾಯಿತು. ಅವರೆಲ್ಲರನ್ನು ಅವನು ರಾಜ್ಯ ಬಿಟ್ಟು ಹೊರಗೆ ಹಾಕಿದ. ಇಷ್ಟಾದರೂ ಅವರಲ್ಲಿ ಯಾರೂ ಗಾನರೂಪದಿಂದ ತಾವು ಮಾಡುವ ಹರಿಯ ಧ್ಯಾನವನ್ನೂ ಹಾಡಿನ ರೂಪದಿಂದ ಮಾಡುವ ಭಗವಂತನ ಭಜನೆಯನ್ನೂ ಬಿಡಲಿಲ್ಲ. ರಾಜದೂತರು ಅವರ ಬಳಿಯಲ್ಲಿದ್ದ ಧನ ಧಾನ್ಯ, ಬಟ್ಟೆ ಬರೆ, ಪಾತ್ರೆ ಪರಡೆ ಎಲ್ಲವನ್ನೂ ಕಿತ್ತುಕೊಂಡಿದ್ದರು. ಭಕ್ತಹಸ್ತರಾದ ಅವರೆಲ್ಲರು ಅಲ್ಲಿಂದ ಉತ್ತರ ದಿಕ್ಕಿಗೆ ಹೊರಟು ಹೋದರು. ಅಲ್ಲಿ ಎಲ್ಲ ಕಡೆಗೂ ಹರಿಯ ಭಜನ, ಪೂಜನ, ಧ್ಯಾನ ಗಾನ ಮತ್ತು ಕೃಷ್ಣನ ಕೀರ್ತನೆಗಳ ಮುಖಾಂತರ ನಾಮ ಸಂಕೀರ್ತನವನ್ನು ಗೈಯುತ್ತ ತಾವು ಹೋದಲ್ಲೆಲ್ಲ ಹರಿ ಭಕ್ತಿಯನ್ನು ಧ್ಯಾನ ಯೋಗವನ್ನು ಪ್ರಸಾರ ಮಾಡಿದರು.

ಹೀಗೆ ತಮ್ಮ ಆಯುಷ್ಯ ಇರುವವರೆಗೂ ಶ್ರೀಹರಿಯನಾಮ ಸಂಕೀರ್ತನವನ್ನು ಮಾಡುತ್ತಲೇ ಆ ಎಲ್ಲ ಹರಿಭಕ್ತರು ಕಾಲೋಚಿತವಾದ ಮರಣವನ್ನು ಹೊಂದಿದರು. ಮರಣಾನಂತರ ಅವರೆಲ್ಲರು ಯಮಪಟ್ಟಣಕ್ಕೆ ಬಂದಾಗ ಯಮಧರ್ಮನಿಗೆ ಅವರಿಗೆ ಏನು ಮಾಡಬೇಕೆನ್ನುವದು ತಿಳಿಯದೆ ಸಂಭ್ರಾಂತನಾಗಿ ನಿಂತುಕೊಂಡನು. ಆಗ ಬ್ರಹ್ಮದೇವರು. ಇಂದ್ರಾದಿ ಲೋಕಪಾಲಕರನ್ನು ಕುರಿತು ಆಜ್ಞೆ ಮಾಡಿದರು.

**''ಚೇಷ್ಟಿತಂ ತತ್‌ಕ್ಷಣೇ ರಾರ್ಜಬ್ರಹ್ಮಾ ಪ್ರಾಹ ಸುರಾಧಿಪಾನ್ ।**
**ಕೌಶಿಕಾದೀನ್ ದ್ವಿಜಾನದ್ಯ ವಾಸಯಧ್ವಂ ಯಥಾ ಸುಖಂ ॥''**

ಇಂದ್ರಾದಿ ಲೋಕಪಾಲಕರೆ, ನೀವು ಶಾಶ್ವತವಾದ ದೇವತ್ವವನ್ನು ಬಯಸುತ್ತಿದ್ದರೆ ಮೊದಲು ಕೌಶಿಕ ಮೊದಲಾದ ಬ್ರಾಹ್ಮಣರನ್ನು ನಿಮ್ಮ ಲೋಕಕ್ಕೆ ಕರೆದು ತನ್ನಿರಿ. ಗಾನಯೋಗದಿಂದ ನಿತ್ಯವೂ ಶ್ರೀ ಹರಿಯ ಸಂಗೀತ ಸೇವೆಯನ್ನು ಕೀರ್ತನ ಪೂಜೆಯನ್ನು ಮಾಡುತ್ತಲಿರುವ ಆ ಬ್ರಾಹ್ಮಣರನ್ನು ಕರೆತಂದು ಅವರು ಸುಖವಾಗಿ ಇರುವಂತೆ ಮಾಡಿರಿ ಎಂದರೆ ನಿಮಗೆ ಎಲ್ಲ ರೀತಿಯಿಂದ ಕಲ್ಯಾಣವಾಗುವದು. ಎಂದು ಹೇಳಿದರು.

ಆಗ ಆ ದಿಕ್ಪಾಲಕರು ಧಾವಿಸಿ ಬಂದು ಕೌಶಿಕ ಬ್ರಾಹ್ಮಣನು ಎಲ್ಲಿದ್ದಾನೆ? ಮಾಲವನು ಎಲ್ಲಿ? ಮಾಲವಿಯು ಎಲ್ಲಿ? ಪದ್ಮಾಕ್ಷ ಬ್ರಾಹ್ಮಣನು ಎಲ್ಲಿ? ಎಂದು ಕೂಗುತ್ತ ಹುಡುಕುತ್ತ ಬಂದು ಅವರೆಲ್ಲರನ್ನು ಆದರದಿಂದ ಕರೆದುಕೊಂಡು ಆಕಾಶ ಮಾರ್ಗವಾಗಿ ಬ್ರಹ್ಮ ಲೋಕಕ್ಕೆ ತೆರಳಿದರು. ಆ ಬ್ರಹ್ಮಲೋಕದಲ್ಲಿ ಲೋಕ ಪಿತಾಮಹನಾದ ಚತುರ್ಮುಖನು ಆ ಕೌಶಿಕಾದಿ ಹರಿ ಭಕ್ತರನ್ನು ನೋಡಿ ಸಂತೋಷದಿಂದ ಸ್ವಾಗತಮಾಡಿ ಎದುರುಗೊಂಡು ಆಸನದಮೇಲೆಕೂಡಿಸಿ ಯಥೋಚಿತವಾಗಿ ಅವರನ್ನು ಗೌರವಿಸಿದನು.

ಬ್ರಹ್ಮದೇವರು ಮಾಡುವ ಈ ಅತಿಶಯವಾದ ಗೌರವವನ್ನು ಕಂಡು ದೇವತೆಗಳಲ್ಲಿ ಕೋಲಾಹಲ ಉಂಟಾಯಿತು.

''ಬ್ರಹ್ಮ ದೇವರು ನಮ್ಮ ಎಲ್ಲ ದೇವತೆಗಳಿಗಿಂತ ಶ್ರೇಷ್ಠರು ಜ್ಯೇಷ್ಠರು. ಎಷ್ಟಾದರೂ ಈ ಕೌಶಿಕಾದಿಗಳು ಹುಲುಮಾನವರು ಕ್ಷುಲ್ಲಕ ಜೀವಿಗಳು. ಬ್ರಹ್ಮದೇವರಂತಹ ಸುರೋತ್ತಮರು ಈ ಕೆಳಗಿನ ನರಮಾನುಷರಿಗೆ ಇಷ್ಟು ಅತ್ಯಧಿಕವಾದ ಗೌರವ ಸ್ಥಾನಮಾನಗಳನ್ನು ನೀಡುವದು ಉಚಿತವಲ್ಲ'' ಎಂದು ದೇವತೆಗಳಲ್ಲಿ ದೊಡ್ಡ ಗೊಂದಲವೇ ಎದ್ದಿತು. ಆಗ ಬ್ರಹ್ಮದೇವರು ಅವರೆಲ್ಲರನ್ನು ಕರೆದು ಕೊಂಡು ವಿಷ್ಣು ಲೋಕಕ್ಕೆ ಹೋದರು. ಆ ವಿಷ್ಣುಲೋಕದಲ್ಲಿ ಶ್ರೀಮನ್ನಾರಾಯಣನು ಶ್ವೇತದ್ವೀಪವಾಸಿಗಳಾದ ಜ್ಞಾನಯೋಗಿಗಳಿಂದ ಸೇವಿಸಲ್ಪಡುತ್ತಿದ್ದನು. ಅವರೆಲ್ಲರು ಜ್ಞಾನಯೋಗದಲ್ಲಿ ಸಿದ್ಧಪುರುಷರು. ಶ್ರೀಹರಿಯ ಅನನ್ಯಭಕ್ತರು. ನಾರಾಯಣನಂತೆಯೇ ಹೊಳೆ ಹೊಳೆಯುವ ನಾಲ್ಕು ಕೈಗಳಿಂದ ಶೋಭಿಸುತ್ತಿದ್ದರು. ಅವರ ಚತುರ್ಬಾಹುಗಳಲ್ಲಿ ಶಂಖ ಚಕ್ರ ಗದಾ ಪದ್ಮ ಮೊದಲಾದ ವಿಷ್ಣುವಿನ ಲಾಂಛನಗಳು ಹೊಳೆಯುತ್ತಿದ್ದವು. ಇಂತಹ ಎಂಬತ್ತೆಂಟು ಸಾವಿರ ಮಹಾಪುರುಷರು ಆ ಭಗವಂತನನ್ನು ಸೇವಿಸುತ್ತಿದ್ದರು. ಅದರಲ್ಲಿ ನಾನು (ಮಾರ್ಕಂಡೇಯ) ನಾರದ, ಸನಕ ಸನಂದನ ಆದಿಬಹ್ಮ, ಮಾನಸ ಪುತ್ರರು ಮತ್ತು ಅನೇಕ ದೇವತಾ ಸ್ತ್ರೀಯರು ಎಲ್ಲರು ಸೇರಿಕೊಂಡು ಭಗವಂತನ ಬಗೆಬಗೆಯ ಸೇವೆ, ಶುಶ್ರೂಷೆ, ಪರಿಚರ್ಯೆ, ಪೂಜೆ, ಸ್ತವನ, ಭಜನ, ಗಾನಗಳನ್ನುಮಾಡುತ್ತ ನಿಂತು ಕೊಂಡಿದ್ದೆವು. ಹೀಗೆ ಅಸಂಖ್ಯ ಭಕ್ತ, ಭಾವುಕ, ದೇವ, ಮುನಿ, ಮಹರ್ಷಿಗಳಿಂದ ಸೇವ್ಯಮಾನನಾದ ಆ ಭಗವಂತನು ಸಾವಿರ ಯೋಜನ ವಿಸ್ತಾರವಾದ ಸಹಸ್ರದ್ವಾರಗಳುಳ್ಳ ಶ್ರೇಷ್ಠ ವಿಮಾನದ ಮಧ್ಯಭಾಗದಲ್ಲಿ ಭದ್ರಪೀಠದಲ್ಲಿ ಮಂಡಿಸಿದನು. ಆಗ ಕೌಶಿಕಾದಿಗಳಿಂದ ಕೂಡಿಕೊಂಡು ಬಂದ ಬ್ರಹ್ಮದೇವನು ಆ ಪರಮಾತ್ಮನನ್ನು ನಮಸ್ಕರಿಸಿ ಹೊಗಳಿ ಕೈ ಮುಗಿದುಕೊಂಡು ನಿಂತುಕೊಂಡನು.

ಆಗ ಮಹಾಪ್ರಭು ನಾರಾಯಣನು ಆ ಕೌಶಿಕನನ್ನು ಸಂಬೋಧಿಸಿ ಬಹಳ ಪ್ರೀತಿಯಿಂದ ಕ್ರಮವಾಗಿ ಎಲ್ಲರ ಯೋಗಕ್ಷೇಮವನ್ನು ವಿಚಾರಿಸಿದನು. ಕೌಶಿಕನ ಮೇಲಿನ ಆ ಪರಮಾತ್ಮನ ವಾತ್ಸಲ್ಯಾತಿಶಯವನ್ನು ನೋಡಿ ಕಣ್ಣಾರೆ ಕಂಡು ದೇವತೆಗಳೆಲ್ಲರಿಗೂ ಅತ್ಯಾಶ್ಚರ್ಯವಾಯಿತು. ಅವರೆಲ್ಲರು ತುಂಬಿದ ಹೃದಯದಿಂದ ಉಚ್ಚಕಂಠದಿಂದ ಭಾವೋತ್ಕಂಠಿತರಾಗಿ ಭಕ್ತವತ್ಸಲನಾದ ಭಗವಂತನ ಜಯಘೋಷವನ್ನು ಮಾಡಿದರು. ಆಗ ಶ್ರೀಮನ್ನಾರಾಯಣನು ಆ ಪಿತಾಮಹನಾದ ಬ್ರಹ್ಮನನ್ನು ಕುರಿತು ಮಾತನಾಡಿದನು.

**ನಾರಾಯಣ :-** ''ಬ್ರಹ್ಮನೆ, ನಾನು ಹೇಳುವ ಮಾತನ್ನು ಸಾವಧಾನನಾಗಿ ಕೇಳು. ಈ ನನ್ನ ಭಕ್ತನಾದ ಕೌಶಿಕ ಬ್ರಾಹ್ಮಣನು ಹಾಗೂ ಇವನ ಅನುಯಾಯಿಗಳಾದ ಈ ಶಿಷ್ಯರು ಹಾಗೂ ಕುಶಸ್ಥಲದ ಬ್ರಾಹ್ಮಣರು ತಮ್ಮ ಹಾಗೂ ಜಗತ್ತಿನ ಹಿತಕ್ಕಾಗಿ ಗಾನ ಮಾರ್ಗದಿಂದ ಧ್ಯಾನಯೋಗದಲ್ಲಿ ಪ್ರವೃತ್ತರಾಗಿದ್ದಾರೆ. ಶಬ್ದಬ್ರಹ್ಮವನ್ನು ನಾದಬ್ರಹ್ಮದ ಮುಖಾಂತರ ಕಂಡರಿಸುವದೇ ಇವರ ಗುರಿ. ಪರಬ್ರಹ್ಮನಾದ ನಾನು ಈ ಸ್ವರಯೋಗದ ಸಾಧ್ಯ. ಆ ಸಾಧ್ಯ ಸಿದ್ಧಿಗೆ ಧ್ಯಾನರೂಪವಾದ ಸಂಗೀತವೇ ಮುಖ್ಯ ಸಾಧನ. ಅದಕ್ಕಾಗಿಯೇ ಅವರು ಶ್ರೀಹರಿಯ ಕೀರ್ತಿ ಕೀರ್ತನೆ ಹಾಗೂ ಅದರ ಶ್ರವಣ ಎಂಬ ಮಾರ್ಗವನ್ನು

ಆಯ್ದುಕೊಂಡು. ಪರಮಭಕ್ತಿಯಿಂದ ಅದರ ಸಾಧನವನ್ನು ಮಾಡಿಕೊಳ್ಳುತ್ತಲಿದ್ದಾರೆ. ಇವರು ತತ್ವಜ್ಞಾನದ ರಹಸ್ಯವನ್ನು ಯಥಾರ್ಥವಾಗಿ ಅರಿತವರು. ಆ ಮಾರ್ಗದಲ್ಲಿ ನುರಿತವರು. ಇವರೆಲ್ಲರು ಅನನ್ಯ ದೇವತಾಭಕ್ತರು. ಅವರು ಬೇರೆ ಯಾವ ದೇವರನ್ನೂ ಭಜಿಸುವದಿಲ್ಲ ಪೂಜಿಸುವದಿಲ್ಲ. ಸಿದ್ಧರು ಸಾಧ್ಯರು ಎಂಬ ದೇವತೆಗಳಿಗಾಗಲಿ ಇವರಿಗಾಗಲಿ ಬೇಕಾದಾಗ ನಿರಾತಂಕವಾಗಿ ಬೇಕಾದ ಲೋಕದಲ್ಲಿ ಹೋಗಲು ಬರಲು ಹಾಗೂ ನನ್ನ ಸಮೀಪದಲ್ಲಿಯೇ ಇರಲು ಮುಕ್ತ ದ್ವಾರ ಇರಲಿ.''

ಹೀಗೆ ಹೇಳಿ ಬ್ರಹ್ಮದೇವರಿಗೆ ಆಜ್ಞೆಮಾಡಿ ಶ್ರೀಮನ್ನಾರಾಯಣನು ಕೌಶಿಕನಿಗೆ ನೇರವಾಗಿ ಹೇಳಿದನು. ''ಮಹಾಬುದ್ಧಿವಂತನಾದ ಕೌಶಿಕ, ನೀನು ನನ್ನ ಆತ್ಮೀಯ ಭಕ್ತಿಗಣದ ಅಧಿಪತಿಯಾಗು. ನಿನ್ನ ಶಿಷ್ಯರನ್ನು ಕೂಡಿಕೊಂಡು ನನ್ನ ಸಮೀಪದಲ್ಲಿಯೇ ನೀನು ಇರು.'' ಹೀಗೆ ಕೌಶಿಕನಿಗೆ ತನ್ನ ಕೈಂಕರ್ಯವನ್ನು ಆಜ್ಞಾಪಿಸಿ ತನ್ನ ಹರಿಮಂದಿರದಲ್ಲಿ ನಿತ್ಯವೂ ದೀಪೋತ್ಸವ ಹಾಗೂ ಮಂದಿರದ ಮಾರ್ಜನ, ಲೇಪನ, ಸಾರಣೆಕಾರಣೆಗಳನ್ನು ಮಾಡುವ ವೈಶ್ಯದಂಪತಿಗಳನ್ನು ಕುರಿತು ಹರಸಿ ಸಂತೋಷದಿಂದ ನುಡಿದನು.

''ಮಾಲವ, ನೀನು ನಿನ್ನ ಮಡದಿಯಾದ ಮಾಲವಿ ಇಬ್ಬರು ನನ್ನ ಹರಿಮಂದಿರದಲ್ಲಿ ವಿಶೇಷ ಸೇವೆಯನ್ನುಮಾಡಿದ್ದಿರಿ. ದೇಹದಿಂದ ನನ್ನ ಸೇವೆಯನ್ನು ಮಾಡುತ್ತಲೆ ಭಕ್ತಿಯಿಂದ ಗಾನಶ್ರವಣವನ್ನೂ ಮಾಡುತ್ತಿದ್ದಿರಿ. ಆದ್ದರಿಂದ ಮಾಲವ ನೀನು ನಿನ್ನ ಧರ್ಮಪತ್ನಿಯಾದ ಮಾಲವಿಯೊಂದಿಗೆ ದೇವತಾರೂಪವನ್ನು ಪಡೆದುಕೊಂಡು ನನ್ನ ಗಾಯನವನ್ನು ಶ್ರವಣಮಾಡುತ್ತ ಇಲ್ಲಿಯೇ ಯಥೇಚ್ಛವಾಗಿ ಇದ್ದು ಬಿಡಿರಿ. ದೀರ್ಘಕಾಲದವರೆಗೆ ಆಯುಷ್ಮಂತರಾಗಿ, ಗಾನಯೋಗಿಗಳಾಗಿ ಶ್ರವಣ ಸಾಧನವನ್ನು ಮಾಡುತ್ತ ನನ್ನ ಸಮೀಪದಲ್ಲಿಯೇ ನನ್ನ ಲೋಕದಲ್ಲಿಯೇ ವಾಸವಾಗಿರಿ.''

ಅನಂತರ ಆ ಲಕ್ಷ್ಮೀಪತಿಯು 'ಪದ್ಮ' ಅಥವಾ 'ಪದ್ಮಾಕ್ಷ' ಎಂದು ಕರೆಯಲ್ಪಡುವ ಬ್ರಾಹ್ಮಣನನ್ನು ಕುರಿತು, ''ಪದ್ಮಾಕ್ಷ ನೀನು ಭೂಲೋಕದಲ್ಲಿ ಹರಿಮಂದಿರದಲ್ಲಿ ಧ್ಯಾನಗಾನನಿರತರಾದ ಈ ಕೌಶಿಕನಿಗೂ ಅವನ ಏಳು ಮಂದಿ ಶಿಷ್ಯಂದಿರಿಗೂ ಹಿಂದೆ ಅನ್ನದಾನವನ್ನು ನಿರ್ವ್ಯಾಜಬುದ್ಧಿಯಿಂದ, ನಿರಪೇಕ್ಷಭಾವನೆಯಿಂದ, ನಿಸ್ವಾರ್ಥ ಮನಸ್ಸಿನಿಂದ ತಪ್ಪದೇ ಮಾಡುತ್ತಲಿದ್ದಿ. ಹರಿ ಭಜನರತರಾದವರಿಗೆ ನಿರಂತರ ಅನ್ನದಾನಮಾಡಿದ ಮಹಾಪುಣ್ಯದಿಂದ ನೀನು ಇನ್ನು ಮುಂದೆ ಕುಬೇರನಾಗು. ಐಶ್ವರ್ಯಕ್ಕೆ ಅಧಿಪತಿಯಾಗು. ಯೋಗ್ಯರಿಗೆ ಧನವನ್ನು ನೀಡು. ಅರ್ಹರಾದವರಿಗೆ ಯಥೇಚ್ಛ ದಾನವನ್ನು ಮಾಡು. ಹೀಗೆ ಧನೇಶ್ವರನಾಗಿ ಕಾಲಕಾಲಕ್ಕೆ ನನ್ನನ್ನು ಬಂದು ಕಾಣು.'' ಹೀಗೆ ಹೇಳಿ ಶ್ರೀಹರಿಯು ಬ್ರಹ್ಮದೇವರನ್ನು ಕುರಿತು ನುಡಿದನು.

**ಮಹಾವಿಷ್ಣು :-** ಬ್ರಹ್ಮನೆ, ಕೌಶಿಕನು ಭೂಲೋಕದಲ್ಲಿ ಶಿಷ್ಯರೊಂದಿಗೆ ಒಡಗೂಡಿ ನನ್ನನ್ನು ಗಾಯನಮಾಡುತ್ತಲಿದ್ದನು. ನಾನು ಯೋಗನಿದ್ರೆಯಿಂದ ಎಚ್ಚೆತ್ತು ಇವನ ಸಂಗೀತಸೇವೆಯನ್ನು ಸ್ವೀಕರಿಸುತ್ತಿದ್ದೆ. ಕ್ರೂರನಾದ ಕಲಿಂಗ ರಾಜನನ್ನು ಹೊಗಳಿ ಹಾಡಲು ಸಮ್ಮತಿಸದೆ ಹರಿಯ ಹೊರತು ಬೇರೆಯವರನ್ನು ಹೊಗಳಬಾರದೆಂದು ತನ್ನ ನಾಲಿಗೆಯನ್ನೇ ಕತ್ತರಿಸಿಕೊಂಡನು. ಅಲ್ಲಿ ನೆರೆದ ಈ ಬ್ರಾಹ್ಮಣರು ಕೂಡ ನನ್ನ ಹೊರತು ರಾಜನ ಸ್ತೋತ್ರವನ್ನು ನಾವು ಸರ್ವಥಾ ಕೇಳಲಾರೆವೆಂದು ಧೃಡನಿರ್ಧಾರ ಮಾಡಿದರು.

ರಾಜ ಪರಿವಾರದವರು ರಾಜಸ್ತುತಿಯನ್ನು ಕೂಗಿ ಕೂಗಿ ಒತ್ತಾಯದಿಂದ ಕೇಳಿಸ ತೊಡಗಿದಾಗ ಒಬ್ಬರಿಗೊಬ್ಬರು ಕಿವಿಯಲ್ಲಿ ಕಲ್ಲು ಕಟ್ಟಿಗೆಗಳನ್ನು ತುರುಕಿಕೊಂಡು ಕರ್ಣ ಕುಹರವನ್ನು ಬಂದುಮಾಡಿದರು. ಆದುದರಿಂದಲೇ ಈ ಎಲ್ಲ ಭಕ್ತರು ದೇವತ್ವವನ್ನು ಹೊಂದಿ ನನ್ನ ಸಾನ್ನಿಧ್ಯವನ್ನು ಪಡೆದರು. ಅದರಂತೆ ವೈಶ್ಯನಾದ ಈ ಮಾಲವನು ತನ್ನ ಮಡದಿ ಮಾಲವಿಯೊಂದಿಗೆ ನನ್ನ ವಿಷ್ಣುದೇವಾಲಯವನ್ನು ನಿತ್ಯವೂ ಗುಡಿಸುತ್ತ, ಸಾರಿಸುತ್ತ, ರಂಗವಲ್ಲ್ಯಾದಿಗಳಿಂದ ಶೃಂಗರಿಸುತ್ತ ನನ್ನ ಧ್ಯಾನ ಗಾನವನ್ನು ತಪ್ಪದೇ ಶ್ರವಣಮಾಡುತ್ತಿದ್ದನು. ಆದುದರಿಂದಲೇ ಅವನು ನನ್ನ ಈ ಪರಬ್ರಹ್ಮ ಸಾಲೋಕ್ಯವನ್ನು ಹೊಂದಿದನು. ಅದರಂತೆಯೇ ಈ ಪದ್ಮಾಕ್ಷ ಬ್ರಾಹ್ಮಣನು ಶಿಷ್ಯಪರಿವಾರ ಸಮೇತನಾದ ಮಹಾತ್ಮನಾದ ಕೌಶಿಕನಿಗೆ ಅನ್ನದಾನವನ್ನು ಮಾಡಿ 'ಕುಬೇರ' ಎಂಬ ಧನೇಶ್ವರನಾಗಿದ್ದಾನೆ. ಮತ್ತು ನನ್ನ ದಿವ್ಯವಾದ ಸಾನ್ನಿಧ್ಯವನ್ನು ಕೂಡ ಪಡೆದಿದ್ದಾನೆ.'' ಎಂದು ನುಡಿದನು. ಹೀಗೆ ತನ್ನ ಎಲ್ಲ ಭಕ್ತರನ್ನು ಅನುಗ್ರಹಿಸಿ ಮಾತನಾಡಿ ಭಕ್ತವಾತ್ಸಲ್ಯವನ್ನು ತೋರುತ್ತಿರುವ ಆ ಶ್ರೀಮನ್ನಾರಾಯಣನನ್ನು ದೇವತೆಗಳ ಸಭೆಯಲ್ಲಿ ಎಲ್ಲರೂ ಪೂಜೆ ಮಾಡಿದರು.

ಆ ಕಾಲದಲ್ಲಿಯೆ ಭಗವಂತನಾದ ಆ ಪರಮಾತ್ಮನ ಪರಮ ಪ್ರೇಯಸಿಯಾದ ಮಹಾಲಕ್ಷ್ಮೀದೇವಿಯು ಅಲ್ಲಿಗೆ ಆಗಮಿಸಿದಳು. ಅವಳ ಸುತ್ತಲು ಮಧುರಕಂಠದಿಂದ ಇಂಪಾಗಿ ಗಾಯನವನ್ನುಮಾಡುವ ಮತ್ತು ತಂಬೂರಿಯ ತಂತಿಗಳನ್ನು ಮಧುರವಾಗಿ ಮೀಟಿ ನಾದ ತರಂಗಗಳನ್ನು ಹೊಮ್ಮಿಸುವ ಮತ್ತು ವಾದ್ಯವಿದ್ಯೆಗಳಲ್ಲಿ ವಿಶಾರದರಾದ ಭಕ್ತರು ಸ್ತೋತ್ರವನ್ನುಮಾಡುತ್ತಲಿದ್ದರು. ಬಗೆಬಗೆಯ ಆಭರಣಗಳನ್ನಿಟ್ಟುಕೊಂಡು ನಾನಾಬಗೆಯ ಅಲಂಕಾರಗಳಿಂದ ಅಲಂಕೃತಳಾಗಿ ಭಗವಂತನನ್ನು ಹಾಡಿಹೊಗಳುತ್ತಲಿರುವ ಆ ಶ್ರೀದೇವಿಯು ಸಾವಿರಾರು ಕೋಟಿ ಅಂಗನೆಯರಿಂದ ಒಡಗೂಡಿ ಅಲ್ಲಿಗೆ ಆಗಮಿಸಿದಳು. ಅದೇ ಕಾಲದಲ್ಲಿ ಮುನಿಶ್ರೇಷ್ಠನಾದ ತುಂಬುರುವು ಆ ವಿಭೂತನಾಗಿ ಅಲ್ಲಿಗೆ ಬಂದು ಲಕ್ಷ್ಮೀನಾರಾಯಣರ ಸಮೀಪದಲ್ಲಿ ಬಂದು ಕುಳಿತನು. ಅಲ್ಲಿದ್ದ ಆ ತುಂಬುರುವು ಸಮಯೋಚಿತವಾಗಿ ತಂಬೂರಿಯನ್ನು ಬಾರಿಸುತ್ತ ಮಧುರ ಕಂಠದಿಂದ ಆರೋಹಣ ಅವರೋಹಣಗಳಿಂದ ಕೂಡಿದ, ಮಧುರಪದಗಳಿಂದ ಇಂಪಾದ ಗಾಯನವನ್ನು ಸಂತೋಷದಿಂದ ಹಾಡಿದನು.

ಹೀಗೆ ಸಂಗೀತ ಸೇವೆಯನ್ನುಮಾಡಿದ ತುಂಬುರುವನ್ನು ಶ್ರೀಹರಿಯು ದೇವತಾ ಯೋಗ್ಯವಾದ ವಿವಿಧ ರತ್ನಾಭರಣಗಳನ್ನು ನೀಡಿ ದಿವ್ಯಮಾಲ್ಯಗಳನ್ನಿತ್ತು ಅನುಗ್ರಹಿಸಿದನು.

ಅಂಬರೀಷ ಮಹಾರಾಜನೆ, ಗಾಯಕನಾದ ತುಂಬುರುವಿಗೆ ಮಹಾವಿಷ್ಣುವು ಮಾಡಿದ ಈ ಸತ್ಕಾರವನ್ನು ನೋಡಿ ಈ ಎಲ್ಲರೂ ಆ ಗಾನ ಗಂಧರ್ವನನ್ನು ಹೊಗಳಿದರು. ಆದರೆ ದೇವಮುನಿ ನಾರದರಿಗೆ ಮಾತ್ರ ಇದರಿಂದ ಅಸಮಾಧಾನವಾಯಿತು. ಅಸೂಯೆಯೂ ಮನಸ್ಸಿನಲ್ಲಿ ಹುಟ್ಟಿತು. ಅವರು ತಮ್ಮ ಮನಸ್ಸಿನಲ್ಲಿಯೇ, ''ತುಂಬುರುವು ಸಾಕ್ಷಾತ್ ಆ ಲಕ್ಷ್ಮೀಪತಿಯಿಂದಲೇ ಘನ ಗೌರವವನ್ನು ಮಾನಮರ್ಯಾದೆಯನ್ನು ಹೊಂದಿದನು. ನನಗೆ ಆ ಭಾಗ್ಯ ಇಲ್ಲವಾಯಿತು. ನನಗೆ ಧಿಕ್ಕಾರವಿರಲಿ'' ಅಂದುಕೊಂಡು ಮತ್ತೆ ಬಹಳ ನೊಂದುಕೊಂಡು ''ಹೇಗಾದರೂ ಮಾಡಿ ನಾನು ಭಗವಂತನಿಂದ ತುಂಬುರುವಿನಂತೆ ವಿಶೇಷ ಅನುಗ್ರಹ ಹಾಗೂ ಮಾನ ಮನ್ನಣೆಗಳನ್ನು ಪಡೆಯಲೇ ಬೇಕು'' ಎಂದು ನಿರ್ಧರಿಸಿದರು.

ಆದರಂತೆ ವಿಷ್ಣುವಿನ ಧ್ಯಾನವನ್ನುಮಾಡುತ್ತ ಘೋರ ತಪಸ್ಸನ್ನು ಕೈಕೊಂಡರು. ಧ್ಯಾನಾರೂಢರಾದಾಗಲೂ ನಾರದರಿಗೆ ಭಗವಂತನು ತುಂಬುರುವಿಗೆ ಮಾಡಿದ ಮಾನಮನ್ನಣೆಗಳನ್ನು ನೆನೆದು ದುಃಖವಾಗಿ ಕಣ್ತುಂಬ ನೀರುಬರುತ್ತಿತ್ತು. ಆದರೂ ಮತ್ತೆ ಮನಸ್ಸನ್ನು ಬಿಗಿ ಹಿಡಿದು ಹರಿಯ ಪಾದಗಳಲ್ಲಿಯೇ ಚಿತ್ತವನ್ನಿಟ್ಟು ಏಕಾಗ್ರ ಮನಸ್ಸಿನಿಂದ ಒಂದು ಸಾವಿರ ವರುಷ ತಪಸ್ಸಮಾಧಿಯಲ್ಲಿ ಕುಳಿತು ಧ್ಯಾನ ಮಾಡಿದರು. ಅದನ್ನು ನೋಡಿ ಶ್ರೀ ಹರಿಯು ಏನು ಮಾಡಿದ ಎನ್ನುವದನ್ನು ಹೇಳುತ್ತೇನೆ ಕೇಳು.

*ಲಿಂಗಮಹಾಪುರಾಣ ಉತ್ತರ ಭಾಗದ ಕೌಶಿಕಭಕ್ತನಚರಿತ್ರ, ನಾರದರತಪಸ್ಸಮಾಧಿ ಎಂಬ ಮೊದಲನೆಯ ಅಧ್ಯಾಯ ಮುಗಿದುದು*

—o—

## ವಿಷ್ಣುಸೇವೆಯಿಂದ ದೊರಕುವ ಫಲ

ಅಧ್ಯಾಯ - ೨

**ಮಾರ್ಕಂಡೇಯ :-** ಅಂಬರೀಷ ಮಹಾರಾಜನೇ, ಸಂಗೀತಪ್ರಿಯನಾದ ಶ್ರೀಹರಿಯು ನಾರದರು ಮಾಡಿದ ಸಹಸ್ರ ವರುಷಾತ್ಮಕವಾದ ಗಾನಧ್ಯಾನರೂಪವಾದ ಸಂಗೀತಸಮಾಧಿಯಿಂದ ಪ್ರೀತನಾಗಿ ಪ್ರತ್ಯಕ್ಷನಾಗಿ ನಾರದರಿಗೂ ವಿಶೇಷವಾದ ಮಾನ ಮನ್ನಣೆಗಳನ್ನು ಪರಮಾನುಗ್ರಹವನ್ನು ಗೈದನು. ಗಾಯನದಿಂದಲೇ ತನ್ನ ಮಹಿಮೆಯನ್ನು ಹಾಡಿಹೊಗಳುತ್ತ ಮೂರುಲೋಕದ ಜೀವಿಗಳಿಗೆಲ್ಲ ಹರಿಭಕ್ತಿಯ ಮಹಿಮೆಯನ್ನು ಮನಗಾಣಿಸಬೇಕು. ಹೋದಲ್ಲೆಲ್ಲ ತನ್ನ ಸಂಗೀತ ಸೇವೆಯನ್ನು ಮಾಡಬೇಕು ಎಂದು ಆಜ್ಞೆ ಇತ್ತು ಅನುಗ್ರಹಿಸಿದನು. ಮತ್ತು ಪರಮ ದುರ್ಲಭವಾದ ದೇವರ್ಷಿಪದವನ್ನು ಇತ್ತು ತನ್ನ ಗಾನಧ್ಯಾನ ಪ್ರೇಮವನ್ನು ವ್ಯಕ್ತ ಪಡಿಸಿದನು. ಆದರಂತೆ ಗಾನಯೋಗಿಗಳಾದ ನಾರದ ತುಂಬುರರ ಸಮಾನವಾದ ಸ್ಥಾನವನ್ನು ಕೌಶಿಕನಿಗೂ ನೀಡಿ ತಾನು ಜ್ಞಾನ ಪೂರ್ವಕವಾದ 'ಸಂಗೀತ ಸೇವಾಸಾಧ್ಯ' ಎಂಬುದನ್ನು ಜಗತ್ತಿಗೆ ತೋರಿಸಿ ಕೊಟ್ಟನು.

**''ಗಾನೇನಾರಾಧಿತೋ ವಿಷ್ಣುಃ ಸತ್ಕೀರ್ತಿಂ ಜ್ಞಾನವರ್ಚಸೀ ।**
**ದದಾತಿ ತುಷ್ಟಿಂ ಸ್ಥಾನಂ ಚ ಯಥಾಽಸೌ ಕೌಶಿಕಸ್ಯ ವೈ ॥''**

ಶ್ರೀವಿಷ್ಣುವು ಗಾಯನದಿಂದ ಆರಾಧನೆಮಾಡಿದರೆ ಪ್ರೀತನಾಗುವನು. ಅವರಿಗೆ ದಿವ್ಯವಾದ ಜ್ಞಾನವನ್ನು ಕರುಣಿಸುವನು. ವರ್ಚಸ್ಸನ್ನು ಅನುಗ್ರಹಿಸುವನು. ಅವೆರಡರಿಂದ ಅವರ ಕೀರ್ತಿಯು ಬೆಳಗುವಂತೆಮಾಡುವನು. ಅವರಿಗೆ ನಿತ್ಯವು ಆನಂದವನ್ನುಉಂಟುಮಾಡಿ ಕೌಶಿಕನಿಗೆ ಕೊಟ್ಟಂತೆ ಯೋಗ್ಯವಾದಸ್ಥಾನ ಮಾನಗಳನ್ನುಕೊಟ್ಟು ಅನುಗ್ರಹಿಸುವನು. ಪದ್ಮಾಕ್ಷ ಮೊದಲಾದವರಿಗೂ ಗಾನಯೋಗಿಗಳಿಗೆ ಅವರು ಮಾಡುವ ಅನ್ನದಿಂದ ಪ್ರೀತನಾಗಿ ಅವರಿಗೆ ಸಿದ್ಧಿಪ್ರದನಾದನು. ಆದರಂತೆ ಮಹಾರಾಜ ನೀನಾದರೂ ಕೂಡ ವಿಷ್ಣುಕ್ಷೇತ್ರದಲ್ಲಿ ಹರಿ ಮಂದಿರಗಳಲ್ಲಿ ಸಂಗೀತಸೇವೆಯನ್ನು ನಡೆಸು, ಧ್ಯಾನಗಾನಗಳಿಂದ ಪೂಜಿಸು. ಹರಿಯನ್ನು ಹಾಡಿಹೊಗಳುವವರನ್ನು ಅನ್ನದಾನಗಳಿಂದ ಪೋಷಿಸಿ ಪ್ರೋತ್ಸಾಹಿಸು.

**"ಅರ್ಚನಂ ಗಾನನೃತ್ಯಾದ್ಯಂ ವಾದ್ಯೋತ್ಸವ ಸಮನ್ವಿತಂ ।**
**ಕರ್ತವ್ಯಂ ವಿಷ್ಣು ಭಕ್ತೈರ್ಹಿ ಪುರುಷೈರನಿಶಂ ನೃಪ ॥"**

ನಿಜವಾದ ವಿಷ್ಣುಭಕ್ತರಾದ ಪುರುಷರು ಯಾವಾಗಲು ತಂಬೂರಿ ಮೃದಂಗ ಮೊದಲಾದ ವಾದ್ಯಗಳೊಂದಿಗೆ ಪರಮಾತ್ಮನಿಗೆ ಗಾಯನಸೇವೆಯನ್ನು ನೃತ್ಯಸೇವೆಯನ್ನು ಮಾಡಬೇಕು. ಇದೇ ಹರಿಗೆ ಪ್ರಿಯವಾದ ಅರ್ಚನ ಎನಿಸುತ್ತದೆ. ಇದನ್ನು ಮಾನವರು ಯಾವಾಗಲೂ ಮಾಡಬೇಕು. ಹಾಗೂ ಹರಿಯ ಹಾಡುಗಳನ್ನು ನಿತ್ಯವು ಶ್ರವಣಮಾಡಬೇಕು. ಅದರಲ್ಲಿಯೂ ವಿಶೇಷವಾಗಿ ವಿಷ್ಣು ಮಂದಿರ ಎನಿಸಿದ ದೇವಾಲಯಗಳಲ್ಲಿ ತಾನು ಹಾಡಿ ಗಾನಮಾಡಿ ಮತ್ತೊಬ್ಬರಿಂದ ಹಾಡಿಸಬೇಕು. ಜನರಿಗೆಲ್ಲ ಅದನ್ನು ಕೇಳಿಸಬೇಕು. ವಿಷ್ಣುವಿನ ಚರಿತ್ರೆಗಳಿಗೆ ಸಂಬಂಧಿಸಿದ ಗಾಯನ ಹಾಗು ನೃತ್ಯಾದಿಗಳನ್ನು ಮಾಡಿಸುವದರಿಂದ ಪೂರ್ವಜನ್ಮದ ಸ್ಮರಣವು, ಒಳ್ಳೆಯ ಬುದ್ಧಿಪಾಟವವು ಲಭಿಸುವವು. ಮರಣಾನಂತರ ಕೊನೆಗೆ ವಿಷ್ಣುವಿನ ಸಾಯುಜ್ಯರೂಪವಾದ ಮೋಕ್ಷವು ಪ್ರಾಪ್ತವಾಗುವದು.

*ಲಿಂಗಮಹಾಪುರಾಣ ಉತ್ತರಭಾಗದ ಧ್ಯಾನಗಾನರೂಪವಾದ ವಿಷ್ಣುಸೇವೆಯಿಂದ ದೊರಕುವ ಫಲನಿರೂಪಣೆ ಎಂಬ ಎರಡನೆಯ ಅಧ್ಯಾಯ ಮುಗಿದುದು*



## ವೈಷ್ಣವಗೀತದ ಮಹಾಕಥನ

**ಅಧ್ಯಾಯ - ೩**

**ಅಂಬರೀಷ ಉವಾಚ**

**ಅಂಬರೀಷ:-** "ಮಹಾಮುನಿಗಳಾದ ಮಾರ್ಕಂಡೇಯರೇ, ನೀವು ಪ್ರಾಜ್ಞಪುಂಗವರು. ನಾರದರು ತುಂಬುರುವಿಗೆ ಶ್ರೀಹರಿಯು ಮಾಡಿದ ಸಮ್ಮಾನದಿಂದ ದುಮ್ಮಾನ ಹೊಂದಿ ತಪಸ್ಸನ್ನು ಮಾಡಿದರು. ಅದರಿಂದ ತಾವೂ ಕೂಡ ಶ್ರೀ ಹರಿಯಿಂದಲೇ ಮಾನ ಮನ್ನಣೆ ರೂಪವಾದ ಅನುಗ್ರಹವನ್ನು ಪಡೆದರು ಎಂದು ಹೇಳಿದಿರಿ. ನಾರದರಿಗೆ ಶ್ರೀಹರಿಯ ಪರಮಪ್ರೀತಿ ಸಂಪಾದಕವಾದ ಗಾನಯೋಗದ ಸಿದ್ಧಿಯು ಹೇಗೆ ಆಯಿತು ? ಯಾವ ಕಾಲದಲ್ಲಿ ಆಯಿತು? ಇದೆಲ್ಲವನ್ನು ನನಗೆ ತಿಳಿಸಿರಿ."

**ಮಾರ್ಕಂಡೇಯ :-** "ಮಹಾರಾಜ, ಅದನ್ನೆಲ್ಲ ನಾನು ನಾರದರ ಬಾಯಿಂದಲೇ ಕೇಳಿದ್ದೇನೆ. ಅವರೇ ನಮಗೆ ಸಾಕ್ಷಾತ್ತಾಗಿ ತಮ್ಮ, ಬಾಯಿಂದಲೇ ತಾವು ಮಾಡಿದ ಸಾಧನ ಮತ್ತು ಅದರಿಂದ ಪಡೆದ ಸಿದ್ಧಿಗಳನ್ನು ತಿಳಿಸಿದರು.

ತುಂಬುರುವಿಗೆ ವಿಷ್ಣುಲೋಕದಲ್ಲಿ ಆದ ಗೌರವವನ್ನು ನೆನೆದು ಸಂತಾಪಗೊಂಡ ನಾರದರು. ಒಂದು ಸಾವಿರ ದಿವ್ಯ ವರುಷಗಳವರೆಗೆ ಘೋರ ತಪಸ್ಸನ್ನು ಆಚರಿಸಿದರು. ಉಸಿರನ್ನು ಬಿಗಿಹಿಡಿದು ತಪದರಾಶಿಯೇ ಆಗಿ ಕುಳಿತು ಅವ್ಯಗ್ರಮನಸ್ಸಿನಿಂದ ಹರಿಯನ್ನು ನೆನೆಯುತ್ತ ಅತ್ಯುಗ್ರವಾದ ತಪೋನುಷ್ಠಾನವನ್ನು ನಾರದರು ಮಾಡಿದಾಗ ಆಕಾಶವಾಣಿಯಾಯಿತು. "ಮುನಿಶ್ರೇಷ್ಠನಾದ ನಾರದ, ನೀನು ಇಂಥಹ ದುಷ್ಕರವಾದ ತಪಸ್ಸನ್ನು ಏಕೆ ಮಾಡುತ್ತಿರುವೆ ? ನಿನಗೆ ಗಾಯನದಲ್ಲಿ ಅಷ್ಟು ತೀವ್ರವಾದ ಜಿಜ್ಞಾಸೆ

ಅಥವಾ ಆಸಕ್ತಿ ಇದ್ದರೆ ನೀನು ಮಾನಸೋತ್ತರ ಪರ್ವತಕ್ಕೆ ಹೋಗು. ಅಲ್ಲಿ ಒಂದು ಗುಹೆ ಇದೆ. ಅದು ಗಾನಬಂಧು ಎಂದು ಜಗತ್ತಿನಲ್ಲಿ ಪ್ರಸಿದ್ಧವಾಗಿದೆ. ನೀನು ಕೂಡಲೇ ಇಲ್ಲಿಂದ ಹೊರಡು. ಅಲ್ಲಿಗೆ ಹೋಗು. ಆ ಗಾನಬಂಧು ಗುಹೆಯನ್ನು ನೋಡು. ಅದರಿಂದ ಮುಂದೆ ನೀನು ಗಾನ ಪಂಡಿತನಾಗುವೆ.''

ನಾರದರು ವಾಗ್ಮಿಗಳಲ್ಲಿ ಶ್ರೇಷ್ಠರಾದವರು. ಮಹಾಪಂಡಿತರು. ಈ ಆಕಾಶವಾಣಿಯನ್ನು ಕೇಳಿ ಅವರಿಗೆ ಅತ್ಯಾಶ್ಚರ್ಯದ ಮೇಲೆ ಪರಮಾಶ್ಚರ್ಯವಾಯಿತು. ಕೂಡಲೇ ಅವರು ಎದ್ದು ಮಾನಸೋತ್ತರ ಶೈಲಕ್ಕೆ ತೆರಳಿದರು. ಆ ಬೆಟ್ಟದ ತುಟ್ಟತುದಿಯಲ್ಲಿ ಗಾನಬಂಧು ಗೂಗೆಯು ಕುಳಿತುಕೊಂಡಿತ್ತು. ಆ ಪಕ್ಷಿಯ ಸುತ್ತಲು ಗಂಧರ್ವರು, ಕಿನ್ನರರು, ಯಕ್ಷರು, ಅಪ್ಸರಾಂಗನೆಯರು ಕುಳಿತುಕೊಂಡಿದ್ದರು. ಅವರೆಲ್ಲರು ಸ್ವಾಭಾವಿಕವಾಗಿ ದೇವದತ್ತವಾದ ಮಧುರಕಂಠದಿಂದ ಸುಸ್ವರರಾಗಿದ್ದರು. ಅವರೆಲ್ಲರು ಆ ಪಕ್ಷಿಯಿಂದಲೇ ಗಾನವಿದ್ಯೆಯನ್ನು ಚೆನ್ನಾಗಿ ಕಲಿತು ಸಂಗೀತದಲ್ಲಿ ಪಾರಂಗತರಾಗಿದ್ದರು. ಶೈಲಾಂಚಲದಲ್ಲಿ ಗಂಧರ್ವಗಣದ ಮಧ್ಯದಲ್ಲಿ ಸುಖಾಸೀನವಾದ ಆ ಗಾನಬಂಧು ಉಲೂಕವು (ಗೂಗೆ) ನಾರದರನ್ನು ನೋಡಿ ಅವರಿಗೆ ವಿಧಿವತ್ತಾಗಿ ನಮಸ್ಕರಿಸಿ, ಸ್ವಾಗತ ನೀಡಿತು, ಪೂಜೆಮಾಡಿತು. ಹಾಗೂ ವಿನಯದಿಂದ ಕೇಳಿತು, ''ಪೂಜ್ಯರೆ, ಮಹಾನ್ ಮೇಧಾವಿಗಳಾದ ನೀವು ಇಲ್ಲಿಗೆ ಏಕೆ ದಯಮಾಡಿಸಿದಿರಿ? ನನ್ನಿಂದ ತಮಗೆ ಏನು ಕಾರ್ಯವಾಗಬೇಕು? ನಾನು ತಮಗಾಗಿ ಯಾವ ಕಾರ್ಯಮಾಡಲಿ ಅಪ್ಪಣೆ ನೀಡಿರಿ'' ಎಂದು ಕೇಳಿತು.

**ನಾರದ :-** ''ಅತ್ಯಂತ ಬುದ್ಧಿವಂತನಾದ ಉಲೂಕ ಜಾತಿಯ ಇಂದ್ರನಂತಿದ್ದ ಗಾನ ಬಂಧುವೆ, ಈ ಹಿಂದಿನ ಯುಗದಲ್ಲಿ ನಾನು ನಾರಾಯಣನ ಸಮೀಪದಲ್ಲಿಯೇ ಇದ್ದೆನು. ಲಕ್ಷ್ಮೀಸಹಿತನಾದ ನಾರಾಯಣನು ನನ್ನನ್ನು ದೂರ ಸರಿಸಿ ತುಂಬುರುವನ್ನು ಮುಂದೆ ಕರೆದನು. ಅವನ ಉತ್ತಮವಾದ ಗಾಯನವನ್ನು ಕೇಳಿದನು. ಅಲ್ಲಿ ಕುಳಿತ ಬ್ರಹ್ಮಾದಿ ಸರ್ವದೇವತೆಗಳು ತಮ್ಮ ತಮ್ಮ ಸ್ಥಾನದಲ್ಲಿ ಸ್ಥಿರವಾಗಿ ಆಸೀನರಾದರು. ಕೌಶಿಕ ಬ್ರಾಹ್ಮಣ ಮೊದಲಾದವರು ಗಾನಯೋಗದಿಂದ ಶ್ರೀಹರಿಯನ್ನು ಆರಾಧಿಸಿ ಒಂದೊಂದು ದೇವತಾಗಣಕ್ಕೆ ಅಧಿಪತಿಯಾದರು. ಈಗ ಆ ಭಗವದ್ದತ್ತವಾದ ಆ ಆಸ್ಥಾನಗಳಲ್ಲಿ ಸುಖವಾಗಿರುವರು. ಅದರಿಂದ ಅತ್ಯಂತ ದುಃಖಿತನಾದ ನಾನು ತಪಸ್ಸನ್ನು ಮಾಡಬೇಕೆಂದು ಇಲ್ಲಿಗೆ ಬಂದಿದ್ದೇನೆ. ವಿಷ್ಣುವಿನ ಮಹಿಮೆಯಿಂದ ಕೂಡಿದ ಗಾನಯೋಗಕ್ಕೆ ಸಮಾನವಾದದ್ದು ಜಗತ್ತಿನಲ್ಲಿ ಯಾವುದೂ ಇರುವದಿಲ್ಲ ಅದಕ್ಕಾಗಿ ನಾನು ಒಂದು ಸಾವಿರ ವರುಷ ಘೋರ ತಪಸ್ಸನ್ನುಮಾಡಿದೆ. ಆಗ ಆಕಾಶವಾಣಿಯಾಯಿತು. ''ಗಾನಬಂಧು ಉಲೂಕನ ಬಳಿಗೆ ಹೋಗು. ನಿನಗೆ ಗಾಯನದಲ್ಲಿ ನಿಜವಾದ ಆಸಕ್ತಿ, ಅನುರಕ್ತಿ ಇದ್ದರೆ ಅದರಲ್ಲಿ ಸಿದ್ಧಿ, ಪಾಂಡಿತ್ಯಗಳನ್ನು ಪಡೆಯಬೇಕೆಂದು ಅಪೇಕ್ಷೆ ಇದ್ದರೆ ನೀನು ಗಾನಬಂಧುವಿನ ಕಡೆಗೆ ಹೋಗು.'' ಆಕಾಶವಾಣಿಯ ಆ ಪ್ರೇರಣೆಯಿಂದ ನಾನು ನಿನ್ನ ಸಮೀಪಕ್ಕೆ ಬಂದಿದ್ದೇನೆ. ನಿನ್ನ ಶಿಷ್ಯನಾಗಿದ್ದೇನೆ. ನನ್ನನು ರಕ್ಷಿಸು. ನಾನು ಏನು ಮಾಡಬೇಕೆಂದು ಹೇಳು.

**ಗಾನ ಬಂಧು ಗೂಗೆ :-** ''ನಾರದ, ನನ್ನ ಕತೆ ಅತ್ಯಾಶ್ಚರ್ಯಕರ. ಅದರಂತೆಯೇ ಸರ್ವ ಪಾಪಹರ. ಪೂರ್ವಕಾಲದಲ್ಲಿ ಒಬ್ಬ ರಾಜನು ಇದ್ದನು. ಅವನ ಹೆಸರು ಭುವನೇಶ. ಅವನು ಸ್ವಭಾವದಿಂದ ಅತ್ಯಂತ ಧಾರ್ಮಿಕ. ಅವನು ಸಾವಿರ ಅಶ್ವಮೇಧಯಾಗಗಳನ್ನು

ನಡೆಸಿದ. ಅಷ್ಟೇ ವಾಜಪೇಯಯಾಗಗಳನ್ನು ಮಾಡಿದ. ಅವನು ಕೋಟಿಕೋಟಿ ಸಂಖ್ಯೆಯಲ್ಲಿ ಗೋದಾನ ಮಾಡಿದ. ಅವನು ಮಾಡಿದ ಸುವರ್ಣದಾನಕ್ಕಂತೂ ಸಂಖ್ಯೆಯೇ ಇಲ್ಲ. ಬಟ್ಟೆ, ರಥ, ಆನೆ, ಕನ್ಯಾದಾನಗಳನ್ನು ಅವನು ಲೆಕ್ಕವಿಲ್ಲದಷ್ಟುಮಾಡಿದ. ಬ್ರಾಹ್ಮಣರಿಗೆ ಭೂದಾನವನ್ನು ವಿಶೇಷವಾಗಿ ಮಾಡಿ ರಾಜ್ಯವನ್ನು ಆಳುತ್ತಿದ್ದ.

ಆದರೆ ಆ ಮಹಾರಾಜನು ತನ್ನ ರಾಜ್ಯದಲ್ಲಿ ಒಂದು ಸುಗ್ರೀವಾಜ್ಞೆಯನ್ನು ಹೊರಡಿಸಿದ. ''ಈ ರಾಷ್ಟ್ರದಲ್ಲಿ ಯಾರೂ ಶ್ರೀಹರಿಯನ್ನು ಕುರಿತು ಹಾಡು ಹಾಡಬಾರದು. ಗಾನಸೇವೆಯನ್ನು ಮಾಡಬಾರದು. ಯಾರಾದರು ಎಲ್ಲಿಯಾದರು ಎಂದಾದರು ಗಾನ, ಭಜನೆ, ಸಂಗೀತಸೇವೆ ಮಾಡಿದ್ದಾದರೆ ಅವರಿಗೆ ಮರಣದಂಡನೆ. ಯಾರೂ ಯಾವದೇ ದೇವತೆಯನ್ನು ಕುರಿತು ಗಾನಮಾಡಿ ಹಾಡಿ ಹೊಗಳಿ ಸೇವೆ ಮಾಡಕೂಡದು. ದೇವರನ್ನು ಹಾಡಿ ಹೊಗಳಬೇಕೆಂದು ಬಯಸುವವರು ವೇದ ಮಂತ್ರಗಳಿಂದಲೇ ಹಾಡಬೇಕು. ಬರಿಗಾಯನದಿಂದ ಅಲ್ಲ. ಬೇಕಾದರೆ ವೇದಾ ಅನಧಿಕಾರಿಗಳಾದ ಸ್ತ್ರೀಯರು ಬೇಕಾದಷ್ಟು ಹಾಡಲಿ. ವೇದೋಚ್ಚಾರಣೆಗೆ ಅನರ್ಹರಾದರು ಸೂತರು, ಮಾಗಧರು, ಬಂದಿಗಳು, ವೈತಾಲಿಕರು ವೇದಬಿಟ್ಟು ಸಂಗೀತವನ್ನು ಹೇಳಲಿ. ವೇದಾಧಿಕಾರಿಗಳು ಮಾತ್ರ ಯಾರೂ ಹಾಡುಹಾಡಬಾರದು. ರಾಗಮಾಡಬಾರದು.''

ಆ ಅರಸನ ಊರಿನ ಸಮೀಪದಲ್ಲಿ 'ಹರಿಮಿತ್ರ' ಎಂಬ ಹೆಸರಿನ ಒಬ್ಬ ಬ್ರಾಹ್ಮಣನು ಇದ್ದ. ಅವನು ಪರಮವಿಷ್ಣುಭಕ್ತ. ಅವನಿಗೆ ಮೋಹ ಮಾತ್ಸರ್ಯ ಎಂಬ ಯಾವ ದುರ್ಗುಣಗಳೂ ಇರಲಿಲ್ಲ. ಅವನು ನದೀ ತೀರಕ್ಕೆ ಹೋಗಿ ಮಹಾವಿಷ್ಣುವಿನ ಒಳ್ಳೆಯ ಪ್ರತಿಮೆಯನ್ನು ಇಟ್ಟು ಪೂಜಿಸುತ್ತಿದ್ದ. ಭಕ್ಷ್ಯ ಭೋಜ್ಯ ನೈವೇದ್ಯ ತೋರಿಸುತ್ತಿದ್ದ. ಅನಂತರ ಪೂಜೆಮಾಡಿ ನಮಸ್ಕರಿಸುತ್ತಿದ್ದ. ಇದಾದ ನಂತರ ಉಚ್ಚಕಂಠದಿಂದ ಭಗವಂತನಲ್ಲಿಯೇ ಮನಸ್ಸನ್ನು ಇಟ್ಟು ಸಂಗೀತದಿಂದ ವಿಷ್ಣುವಿನ ಭಜನೆಯನ್ನು ಮಾಡುತ್ತಿದ್ದ. ತಾಳಬದ್ಧವಾಗಿದ್ದಿತು ಅವನ ಸಂಗೀತ ಸೇವೆ. ಉಚಿತವಾದ ಲಯಗತಿಯಲ್ಲಿ ಅವನ ಸಂಗೀತಸ್ವರವು ವಿಕಸ್ವರವಾಗಿ ಭಕ್ತಿರಸ ಪರಿಪೂರಿತವಾಗಿರುತ್ತಿತ್ತು.

ಪ್ರತಿದಿನವು ಅವನು ಹೀಗೆ ಸಂಗೀತ ಅರ್ಚನೆಯನ್ನು ಮಾಡುತ್ತಲೇ ಇದ್ದ. ಒಂದು ದಿನ ರಾಜದೂತರು ಅಲ್ಲಿಗೆ ಬಂದರು. ಅವರಿಗೆ ರಾಜನ ಅಪ್ಪಣೆಯಾಗಿದ್ದಿತು. ಪೂಜೆಯ ಸಾಮಗ್ರಿಗಳನ್ನೆಲ್ಲ ಅತ್ತಿತ್ತ ಈಡಾಡಿದರು. ಆ ಬ್ರಾಹ್ಮಣನನ್ನು ಹಿಡಿದು ರಾಜನ ಮುಂದೆ ತಂದು ನಿಲ್ಲಿಸಿದರು. ರಾಜಾಜ್ಞೆಯನ್ನು ಧಿಕ್ಕರಿಸಿ ಸಂಗೀತದಿಂದ ದೇವರ ಸೇವೆಯನ್ನು ಮಾಡುವ ಅವನ ವೃತ್ತಾಂತವನ್ನೆಲ್ಲ ತಿಳಿಸಿದರು.

ಅದನ್ನು ಕೇಳಿದ ರಾಜನು ಆ ಬ್ರಾಹ್ಮಣನಿಗೆ ಚೆನ್ನಾಗಿ ಬೈದನು. ಅವನ ತಾಳ ತಂಬೂರಿ ಮೊದಲಾದ ಸ್ವತ್ತು ಅವನ ಸರ್ವಸ್ವವನ್ನು ಕಸಿದನು. ತನ್ನ ರಾಜ್ಯದಿಂದ ಅವನನ್ನು ಹೊರದೂಡಿದನು. ಅವನು ದಿನಾಲು ಪೂಜಿಸುವ ವಿಷ್ಣುವಿನ ಪ್ರತಿಮೆಯನ್ನು ಮ್ಲೇಂಛರು ಕಿತ್ತುಕೊಂಡು ಹೋದರು.

ಈ ಮಹದಪಚಾರದಿಂದ ರಾಜನು ಮರಣಹೊಂದಿದನು. ಪರಲೋಕದಲ್ಲಿ ಅವನು ಹಸಿವೆಯಿಂದ ಕಸಿವಿಸಿಗೊಂಡು ಬಳಲಿ ಸಂಕಟದಿಂದ ಯಮಧರ್ಮನನ್ನು ಕೇಳಿದನು.

"ಪ್ರಭುವೆ, ನಾನು ನನ್ನ ಪುಣ್ಯದಿಂದ ಸ್ವರ್ಗಲೋಕಕ್ಕೆ ಬಂದಿದ್ದೇನೆ. ಆದರೆ ಈ ಲೋಕದಲ್ಲಿ ಹಸಿವೆ ನನ್ನನ್ನು ಕಂಗೆಡಿಸುತ್ತಲಿದೆ. ಬಾಯಾರಿಕೆಯಿಂದ ಬಳಲುತ್ತಿದ್ದೇನೆ. ಇದಕ್ಕೆ ಕಾರಣವೇನು ? ನಾನು ಯಾವ ಪಾಪವನ್ನು ಮಾಡಿದ್ದೆ ? ಈಗ ಅದನ್ನು ಹೋಗಲಾಡಿಸಿಕೊಳ್ಳಲು ನಾನು ಏನು ಮಾಡಲಿ ?" ಎಂದು ಕೇಳಿದನು.

**ಯಮ :-** ರಾಜನೆ, ನೀನು ನಿನ್ನ ರಾಜ್ಯದಲ್ಲಿ "ವೇದಾಧಿಕಾರಿಗಳಾದ ಯಾರೂ ಹರಿಕೀರ್ತನೆಯನ್ನು ಮಾಡಬಾರದು. ಹಾಡುಹಾಡಬಾರದು" ಎಂದು ಘೋರ ಆಜ್ಞೆಯನ್ನು ಹೊರಡಿಸಿದೆ. ಸಂಗೀತದಿಂದಲೇ ಶ್ರೀಹರಿಯ ಸೇವೆಮಾಡುವ ಹರಿಮಿತ್ರನನ್ನು ಕರೆಸಿ ಅವನ ಸರ್ವಸ್ವವನ್ನೂ ಕಿತ್ತುಕೊಂಡೆ. ನಿನ್ನ ಸೇವಕರು ಅವನ ಪೂಜೋಪಕರಣಗಳನ್ನೆಲ್ಲ ನಾಶಮಾಡಿದರು. ನೀನು ಬೇಕಾದಷ್ಟು ದಾನಧರ್ಮಗಳನ್ನು ಆಗ ಮಾಡಿದ್ದೆ. ಅನೇಕ ಪುಣ್ಯ ಕರ್ಮಗಳಿಂದ ಒಳ್ಳೊಳ್ಳೆ ದಿವ್ಯಲೋಕಗಳನ್ನು ಸಂಪಾದಿಸಿದ್ದೆ. ಆದರೆ ನೀನು ಮಾಡಿದ ಸಂಗೀತ ಸೇವೆಯ ಪ್ರತಿಬಂಧ ಮತ್ತು ಹರಿಮಿತ್ರ ಬ್ರಾಹ್ಮಣ ದ್ರೋಹದಿಂದಾಗಿ ನೀನು ಪುಣ್ಯ ಕರ್ಮಗಳಿಂದ ಸಂಪಾದಿಸಿದ ಸಕಲ ದಿವ್ಯಲೋಕಗಳು ನಷ್ಟವಾಗಿ ಹೋಗಿವೆ. ಈಗ ನೀನು ಪರ್ವತ ಕೋಟರಕ್ಕೆ ಹೋಗು. ನೀನು ಮರಣ ಹೊಂದುವಾಗ ನೀನು ಬಿಟ್ಟ ನಿನ್ನ ದೇಹವು ಇನ್ನೂ ಅಲ್ಲಿಯೇ ಇರುವದು. ನೀನು ಹಸಿವೆಯಿಂದ ಪೀಡಿತನಾಗಿ ಆ ನಿನ್ನ ದೇಹವನ್ನು ಅನುದಿನವೂ ತಿನ್ನುತ್ತ ಒಂದು ಮನ್ವಂತರ ಕಾಲ ಪರ್ಯಂತ ಮಹಾರಣ್ಯದಲ್ಲಿ ವಾಸಿಸು. ಅನಂತರದಲ್ಲಿ ನೀನು ಭೂಮಿಯಲ್ಲಿ ಹುಟ್ಟಿ ಕಾಲಾನುಗುಣವಾಗಿ ಜ್ಞಾನವನ್ನು ಪಡೆಯುವೆ" ಹೀಗೆ ಹೇಳಿ ಯಮಧರ್ಮನು ಅಂತರ್ಧಾನ ಹೊಂದಿದನು. ಅನಂತರ ಹರಿಮಿತ್ರನು ಗಣಾಧೀಶರಿಂದ ನೀಯಮಾನನಾಗಿ ವಿಷ್ಣುಲೋಕವನ್ನು ಕುರಿತು ಪ್ರಯಾಣಮಾಡಿದನು. ಆ ಗಣಾಧಿಪರನ್ನೆಲ್ಲ ತನ್ನೊಡನೆಯೆ ಹರಿಲೋಕಕ್ಕೆ ಕರೆದೊಯ್ದನು.

ಆ ಭುವನೇಶ ರಾಜನು ಈ ಪರ್ವತದ ಕೋಟರದಲ್ಲಿ ಪ್ರತಿದಿನವೂ ತನ್ನ ಶವವನ್ನೇ ಕಿತ್ತು ತಿನ್ನುತ್ತ ಹಸಿವು ಬಾಯಾರಿಕೆಯಿಂದ ಬಳಲಿದ್ದನು. ನಾನು ಅವನು ಇದ್ದಲ್ಲಿಯೇ ಹೋಗಿ ಅವನನ್ನು ನೋಡಿದೆನು. ಈ ತನ್ನೆಲ್ಲ ಇತಿವೃತ್ತವನ್ನು ಅವನೇ ಹೇಳಿದನು. ಅನಂತರದಲ್ಲಿ ನಾನು ಹರಿಮಿತ್ರನನ್ನು ಕಂಡು ಅವನ ಅಪ್ಪಣೆಯನ್ನು ಪಡೆಯಲು ಅವನು ಇದ್ದಲ್ಲಿಗೆ ಹೋದೆನು. ಇಂದ್ರದ್ಯುಮ್ನನ ಪ್ರಸಾದದ ಬಲದಿಂದ ನಾನು ದೀರ್ಘಾಯುಷಿಯಾಗಿ ಬದುಕಿದ್ದೇನೆ. ಸೂರ್ಯನಂತೆ ಕಾಂತಿಯಿಂದ ದೇದೀಪ್ಯಮಾನವಾದ ವಿಮಾನದಲ್ಲಿ ಹೋಗುತ್ತಿದ್ದ ಹರಿಮಿತ್ರನನ್ನು ನಾನು ಕಣ್ಣಾರೆ ಕಂಡೆ.

ಆ ಹರಿಮಿತ್ರನ ಐಶ್ವರ್ಯವನ್ನು ನೋಡಿ ನಾನೂ ಕೂಡ ಗಾನವಿದ್ಯೆಯನ್ನು ಕಲಿಯಬೇಕೆಂಬ ಇಚ್ಛೆ ನನ್ನಲ್ಲಿ ಮೂಡಿತು. ಅನಂತರ ನಾನು ಕಿನ್ನರರಿಂದ ಅರವತ್ತು ಸಾವಿರ ವರುಷಗಳವರೆಗೆ ಗಾಯನವಿದ್ಯೆಯನ್ನು ಕಲಿತೆನು. ಹಾಗೆ ಗಾನಮಾಡುತ್ತ ನಾನು ಇರುತ್ತಿರಲು ಈಗ ಹತ್ತು ಮನ್ವಂತರಗಳು ಕಳೆದು ಹೋದವು. ಅದರಿಂದ ನಾನು ಈಗ ಗಾನಾಚಾರ್ಯನೆ ಆಗಿದ್ದೇನೆ. ಅದರಿಂದ ಈಗ ನನ್ನ ಬಳಿಗೆ ಸಂಗೀತ ವಿದ್ಯೆಯನ್ನು ಕಲಿಯಲು ಗಂಧರ್ವರು, ಅಪ್ಸರೆಯರು, ಕಿನ್ನರರು ಕಲಿಯಲು ಬರುತ್ತಾರೆ.

"ನಾರದ, ನೀನೇನೊ ತಪೋನಿಧಿ. ಆದರೆ ವಿದ್ಯೆಯು ಬರಿ ತಪಸ್ಸಿನಿಂದ ಸಿದ್ಧಿಸುವಂತಹದು ಅಲ್ಲ. ಆದುದರಿಂದ ಶಾಸ್ತ್ರಪೂರ್ವಕವಾಗಿ ನೀನು ನನ್ನಿಂದ ಗಾನವಿದ್ಯೆಯನ್ನು ಕಲಿ."

ಹೀಗೆ ಹೇಳಿ ಆ ಗೂಗೆಯು ನಾರದರಿಗೆ ಶಿಕ್ಷಾ ಕ್ರಮದಂತೆ ಗಾನ ವಿದ್ಯೆಯನ್ನು ಕಲಿಸಿತು.

ಹೀಗೆ ವಿಧಿವತ್ತಾಗಿ ನಾರದರಿಗೆ ಸಂಗೀತವನ್ನು ಕಲಿಸಿ ಆ ಗಾನಬಂಧುವು ನಾರದರಿಗೆ ಹೇಳಿತು. "ನಾರದ, ಈ ಗಾನವಿದ್ಯೆಯಲ್ಲಿ ಮುಖ್ಯವಾದುದು ಲಜ್ಜಾಪರಿತ್ಯಾಗ, ಎಂದರೆ ನಾಚಿಕೆಯನ್ನು ಬಿಡುವದು. ಹಾಡುವವರು ನಾಚಿಕೊಳ್ಳಬಾರದು.

"ಸ್ತ್ರೀ ಸಂಗಮೇ ತಥಾ ಗೀತೇ ದ್ಯೂತೇ ವ್ಯಾಖ್ಯಾನಸಂಗಮೇ ।
ವ್ಯವಹಾರೇ ತಥಾಽಽಹಾರೇ ತ್ವರ್ಥಾನಾಂ ಚ ಸಮಾಗಮೇ ॥
ಆಯೇ ವ್ಯಯೇ ತಥಾ ನಿತ್ಯಂ ತ್ಯಕ್ತಲಜ್ಜಸ್ತು ವೈ ಭವೇತ್ ।"

ಸ್ತ್ರೀಯರ ಸಮಾಗಮ, ಗೀತಗಾನ ಎಂದರೆ ಹಾಡುಹಾಡುವದು, ಜೂಜಾಟ, ವ್ಯಾಖ್ಯಾನ, ಆಹಾರ, ವಿಹಾರ ಹಾಗೂ ದುಡ್ಡಿನ ವ್ಯವಹಾರ, ಆಯವ್ಯಯ ಇವುಗಳಲ್ಲಿ ಲಜ್ಜೆಯನ್ನು ಬಿಟ್ಟೆ ವ್ಯವಹರಿಸಬೇಕು. ನಾಚಿಕೆಯಿಂದ ಸಂಕೋಚಪಟ್ಟುಕೊಂಡು ಕೈಯಿಂದ ಮುಖ ಮುಚ್ಚಿಕೊಂಡು ಅಥವಾ ಬಾಯಿ ದೊಡ್ಡದಾಗಿ ತೆಗೆದು, ಮನಬಂದಂತೆ ಕೈಕಾಲುಗಳನ್ನು ಅಗಲಾಡಿಸಿ ಮೇಲೆ ಕೆಳಗೆ ನೋಡುತ್ತ ಗಾನ ಮಾಡಬಾರದು. ಹಸಿವೆಯಾದಾಗ, ಹೆದರಿದಾಗ, ಬಾಯಾರಿಕೆಯಿಂದ ಬಳಲಿದಾಗ ಹಾಡಬಾರದು." ಈ ರೀತಿಯಾಗಿ ಆ ಉಲೂಕವು ಹೇಳಿದ ಬಳಿಕ ನಾರದರು ಅದು ಹೇಳಿದ ಪ್ರಕಾರದಲ್ಲಿಯೇ ಒಂದು ಸಾವಿರ ವರುಷ ಸಂಗೀತದ ಅಭ್ಯಾಸ ಮಾಡಿದರು. ಅನಂತರ ಗೀತ ಪ್ರಸ್ತಾರಾದಿಗಳನ್ನು ತಿಳಿದುಕೊಂಡು, ವೀಣಾವಾದನದಲ್ಲಿಯೂ ಪಾರಂಗತರಾಗಿ, ಸಕಲಸ್ವರವಿಭಾಗಗಳನ್ನು ಸಂಗೀತದ ಲಕ್ಷೋಪಲಕ್ಷ ಭೇದ ಪ್ರಭೇದಗಳನ್ನೂ ಅರಿತು ಗಾನವಿದ್ಯಾಪ್ರವೀಣರಾದರು.

ಹೀಗೆ ನಾರದರು ಆ ಗೂಗೆಯನ್ನು ಗುರುವನ್ನಾಗಿ ಮಾಡಿಕೊಂಡು ಸಂಗೀತಸಾಗರದ ಆಳಅಗಲವನ್ನೆಲ್ಲ ತಿಳಿದು ಸಂಗೀತಶಾಸ್ತ್ರದಲ್ಲಿ ಮಹಾಪಂಡಿತರಾದರು. ಕೊನೆಯಲ್ಲಿ ಆ ನಾರದರು ಆ ತನ್ನ ಗೂಗೆ ಗುರುಗೆ ಕೈ ಮುಗಿದು ಕೇಳಿದರು.

**ನಾರದ** :- ಗಾನವಿದ್ಯೆಯಲ್ಲಿ ಘನಪಂಡಿತರು, ಕಾಗೆಗಳ ಜನ್ಮಶತ್ರುವು ಆದ ಉಲೂಕಾಚಾರ್ಯರೆ, ನಾನು ನಿಮ್ಮಿಂದ ಗಾನವಿದ್ಯೆಯಲ್ಲಿ ಪಾಂಡಿತ್ಯವನ್ನು ಪಡೆದೆ. ನಿಮಗೆ ನಾನು ಏನು ಹಿತವನ್ನು ಮಾಡಲಿ ಹೇಳಿರಿ.

**ಗಾನಬಂಧು** :- ಬ್ರಹ್ಮರ್ಷಿಯೆ, ಬ್ರಹ್ಮದೇವರ ಒಂದು ದಿನದಲ್ಲಿ ಹದಿನಾಲ್ಕು ಮನುಗಳು ತಿರುಗಿ ಹೋಗುತ್ತಾರೆ. ಅನಂತರ ಮೂರುಲೋಕಗಳ ಪ್ರಳಯವು ಸಂಭವಿಸುತ್ತದೆ. ಅಲ್ಲಿಯವರೆಗೆ ನನಗೆ ಆಯುಷ್ಯವಿರುತ್ತದೆ. ಆ ಕಾಲದವರೆಗೆ ಬದುಕಿ ಜೀವದಿಂದ ಉಳಿಯುವ ನನಗೆ ಸಂಪೂರ್ಣ ಆರೋಗ್ಯವು ಮತ್ತು ನನ್ನ ಮನಸ್ಸಿನ ಅಭೀಷ್ಟಸಿದ್ಧಿಯು ಆಗುವಂತೆಮಾಡಿರಿ. ಇದೆ ನನ್ನ ಗುರುದಕ್ಷಿಣೆ.

**ನಾರದ** :- "ಕಳೆದುಹೋದ ಕಲ್ಪದ ಸಂಬಂಧವು ಪ್ರಾಪ್ತವಾದರೆ ನೀನು ಮುಂದೆ ಗರುಡನಾಗುವೆ. ನಿನಗೆ ಮಂಗಳವಾಗಲಿ ನಾನು ಬರುವೆನು." ಎಂದು ಹೇಳಿ ನಾರದರು ಅಲ್ಲಿಂದ ಹೊರಟು ಶ್ವೇತದ್ವೀಪಕ್ಕೆ ಹೋದರು. ಅಲ್ಲಿ ಇರುವ ಶ್ರೀಹರಿಯನ್ನು ನಮಿಸಿ

ಒಳ್ಳೊಳ್ಳೆಹಾಡುಗಳನ್ನು ಹಾಡಿ ಗಾಯನಮಾಡಿದರು. ನಾರದರ ಆ ಸಂಗೀತವನ್ನು ಕೇಳಿದ ಶ್ರೀ ಹರಿಯು ನುಡಿದನು.

**ಶ್ರೀ ಹರಿ :-** ''ನಾರದ, ನೀನು ಇಷ್ಟು ಗಾಯನದ ಅಭ್ಯಾಸ ಮಾಡಿದರೂ ತುಂಬುರು ಗಂಧರ್ವನಿಗಿಂತ ನಿನ್ನ ಗಾನದಲ್ಲಿ ಮೇಲ್ಮೆ ಇಲ್ಲ. ಏನೂ ಅತಿಶಯವಿಲ್ಲ. ಇಷ್ಟು ದಿನ ಕಳೆದರೂ ನೀನು ತುಂಬುರುವಿಗೆ ಅಧಿಕನಾಗಲಿಲ್ಲ. ನೀನು ತುಂಬುರುನಿಗಿಂತಲೂ ಹೆಚ್ಚು ವಿದ್ಯಾಶಾಲಿಯಾಗಿ ಗಾನಶಾಸ್ತ್ರದ ಮರ್ಮಜ್ಞನಾಗಲು ನಾನು ಒಂದು ಉಪಾಯವನ್ನು ನಿನಗೆ ಹೇಳುತ್ತೇನೆ ಕೇಳು. ವೈವಸ್ವತ ಮನುವಿನ ಇಪ್ಪತ್ತೆಂಟನೆಯ ದ್ವಾಪರಯುಗದ ಅಂತಿಮಭಾಗದಲ್ಲಿ ನಾನು ಯದುವಂಶದಲ್ಲಿ ಅವತಾರಮಾಡುತ್ತೇನೆ. ದೇವಕೀ ವಸುದೇವರ ಪುತ್ರನಾಗಿ ಜನಿಸುವ ನನಗೆ 'ಕೃಷ್ಣ' ಎಂಬ ಹೆಸರು ಇರುತ್ತದೆ. ಆಗ ನೀನು ನನ್ನ ಬಳಿಗೆ ಬಂದು ಈ ವಿಷಯವನ್ನು ಜ್ಞಾಪಿಸು. ಆಗ ನಾನು ನಿನಗೆ ನಿಜವಾದ ಸಂಗೀತ ವಿದ್ಯೆಯನ್ನು ಕಲಿಸಿ ಅದರ ಮರ್ಮವನ್ನು ತಿಳಿಸುತ್ತೇನೆ. ತುಂಬುರುವಿಗೆ ಮಿಗಿಲಾಗಿ ನಿನ್ನನ್ನು ಸಂಗೀತ ವಿದ್ಯಾ ವಿಶಾರದನನ್ನಾಗಿ ಮಾಡುತ್ತೇನೆ. ಅಲ್ಲಿಯವರೆಗೆ ದೇವಕುಲದಲ್ಲಿಯೂ, ಗಂಧರ್ವರ ಜಾತಿಯಲ್ಲಿಯೂ ಹುಟ್ಟಿ ವಿಧಿವತ್ತಾಗಿ ಗಾನಯೋಗವನ್ನು ಕಲಿಯುತ್ತಿರು''. ಹೀಗೆ ಹೇಳಿ ಆ ದೇವೋತ್ತಮನು ಅಲ್ಲಿಯೇ ಅದೃಶ್ಯನಾದನು.

ಆಗ ನಾರದರು ಹೆಗಲಿನಲ್ಲಿ ತಂಬೂರಿಯನ್ನು ಹಾಕಿಕೊಂಡು ಭಗವಂತನನ್ನು ನೆನೆಯುತ್ತ ಹಾಡುತ್ತ ಎಲ್ಲ ಲೋಕಗಳಲ್ಲಿಯೂ ಸಂಚಾರಮಾಡಿದರು. ವರುಣ, ಇಂದ್ರ, ಯಮ, ಅಗ್ನಿ, ಕುಬೇರ, ವಾಯು ಹಾಗೂ ಶಿವ ಮೊದಲಾದವರು ನಡೆಸುವ ಸಭೆಗಳಿಗೆ ಹೋಗಿ ಚೆನ್ನಾಗಿ ವೀಣೆಯನ್ನು ನುಡಿಸುತ್ತ ಭಗವಂತನನ್ನು ಕುರಿತು ಹಾಡಿ ಆ ಎಲ್ಲ ದಿವ್ಯ ಸಭೆಗಳಲ್ಲಿ ಸಂಗೀತದ ಲಹರಿಗಳನ್ನು ತರಂಗಿಸಿದರು. ಆ ನಾರದರು ಬ್ರಹ್ಮಲೋಕಕ್ಕೆ ಹೋದರು. ಅಲ್ಲಿ ಗಾಂಧರ್ವವೇದದಲ್ಲಿ ಪರಿಣತರಾದ 'ಆಹಾ' 'ಊಹೂ' ಎಂಬ ಗಂಧರ್ವರಿದ್ದರು. ಅವರು ಗೀತದಲ್ಲಿದ್ದಂತೆ ವಾದ್ಯಗಳ ವಾದನದಲ್ಲಿಯೂ ಪಳಗಿದವರಾಗಿದ್ದರು. ಆ 'ಆಹಾ' 'ಊಹೂ' ಗಂಧರ್ವರೊಡನೆ ಸೇರಿ ನಾರದರು ಸತ್ಯಲೋಕದಲ್ಲಿ ಭಗವಂತನನ್ನು ಹಾಡಿ ಪಾಡಿ ಕೊಂಡಾಡಿದರು.

ಹೀಗೆ ಲೋಕ ಸಂಚಾರಮಾಡುತ್ತ ನಾರದರು ತುಂಬುರುನ ಮನೆಗೆ ಬಂದರು. ಆ ತುಂಬುರುನ ಮನೆಯಲ್ಲಿ ತಮ್ಮ ತಂಬೂರಿಯ ತಂತಿಯನ್ನು ಮೀಟುತ್ತ ಗಾಯನ ಮಾಡಿದರು. ಆ ತುಂಬುರನ ಮನೆಯಲ್ಲಿ ಷಡ್ಜಾದಿ ಏಳುಸ್ವರದೇವತೆಗಳನ್ನು ನಾರದರು ಪ್ರತ್ಯಕ್ಷವಾಗಿ ನೋಡಿದರು. ಆದರೆ ಎಷ್ಟು ಪ್ರಯತ್ನ ಮಾಡಿದರೂ ಅವರ ವೀಣೆಯ ತಂತಿಗಳಲ್ಲಿ ಆ ಸ್ವರ ದೇವತೆಗಳನ್ನು ಪಡೆಯಲು ಅವರಿಗೆ ಶಕ್ಯವಾಗಲಿಲ್ಲ. ಅವರನ್ನು ಪ್ರತ್ಯಕ್ಷವಾಗಿ ನೋಡಿದಂತೆ ವೀಣೆಯಲ್ಲಿ ನುಡಿಸಲು ಸಾಧ್ಯವಾಗಲಿಲ್ಲ. ಅನಂತರ ನಾರದರು ರೈವತ ಪಟ್ಟಣಕ್ಕೆ ಹೋದರು. ಅಲ್ಲಿ ಕೃಷ್ಣನನ್ನು ನೋಡಿ ನಮಸ್ಕಾರಮಾಡಿದರು. ಹಿಂದೆ ಶ್ವೇತದ್ವೀಪದಲ್ಲಿ ನಾರಾಯಣನು ಹೇಳಿದ ಉತ್ತಮವಾದ ಗಾನದ ವಿಷಯವನ್ನು ವಿಜ್ಞಾಪಿಸಿಕೊಂಡರು.

ಆಗ ಶ್ರೀ ಕೃಷ್ಣನು ನಕ್ಕು ತನ್ನ ಮೆಚ್ಚಿನ ಮಡದಿಯಾದ ಜಾಂಬವತಿಗೆ ''ಮಂಗಳಾಂಗಿಯೆ, ಈ ನಾರದನಿಗೆ ಸಂಗೀತವನ್ನು ಹೇಳಿಕೊಡು. ಅದರ ಜೊತೆಗೆ

ಸರಿಯಾಗಿ ವೀಣಾವಾದನದ ವಿದ್ಯೆಯನ್ನು ತಿಳಿಸಿಕೊಡು.'' ಎಂದು ಹೇಳಿದನು. ಅದರಂತೆ ನಾರದರಿಗೆ ವಿದ್ಯಾವತಿಯಾದ ಜಾಂಬವತಿದೇವಿಯು ಒಂದು ವರುಷದವರೆಗೆ ಗಾನವಿದ್ಯೆಯನ್ನು ಕಲಿಸಿದಳು. ಅನಂತರ ಮತ್ತೆ ಕೃಷ್ಣನ ಆಜ್ಞೆಯಂತೆ ಒಂದು ವರ್ಷ ಪರ್ಯಂತ ಸತ್ಯಭಾಮಾದೇವಿಯಿಂದ ಸಂಗೀತಶಾಸ್ತ್ರದ ಅಧ್ಯಯನಮಾಡಿದನು. ಅನಂತರ ಸಂಗೀತಶಾಸ್ತ್ರದ ಬಗ್ಗೆ ನಾರದರಿಗೆ ಹೆಚ್ಚು ಹೆಚ್ಚಾಗಿ ಹಸಿವು ಉಂಟಾಗಿ ರುಕ್ಮಿಣೀದೇವಿಯ ಮನೆಗೂಹೋದರು. ಅಲ್ಲಿಯೂ ವೀಣೆಯನ್ನು ನುಡಿಸುತ್ತ ನಾರದರು ಹಾಡಿದರು. ಅದನ್ನು ಕೇಳಿ ರುಕ್ಮಿಣಿಯ ಅಂತಃಪುರದ ಪರಿಚಾರಿಕೆಯರು ''ಮುನಿವರ್ಯರೆ, ನಿಮಗೆ ಇನ್ನೂ ಸರಿಯಾಗಿ ಸ್ವರಜ್ಞಾನವೇ ಆಗಿಲ್ಲ'' ಎಂದು ಹೇಳಿದರು. ಅನಂತರ ನಾರದರು ರುಕ್ಮಿಣೀದೇವಿಯಲ್ಲಿ ಮೂರು ಸಂವತ್ಸರ ಕಾಲ ಗಾನವಿದ್ಯೆಯನ್ನು ಅಧ್ಯಯನಮಾಡಿದರು. ಅವರ ಸಂಗೀತ ಸಾಧನೆಯ ಪರಿಣಾಮವಾಗಿ ಸಪ್ತಸ್ವರ ದೇವತೆಯರು ನಾರದರ ತಂಬೂರಿಯ ತಂತಿಗಳಲ್ಲಿ ಸರಿಯಾಗಿ ಸನ್ನಿಹಿತರಾದರು. ಬಳಿಕ ಸಾಕ್ಷಾತ್ ಶ್ರೀ ಕೃಷ್ಣನೆ ನಾರದರಿಗೆ ಗಾನವಿದ್ಯೆಯನ್ನು ಪ್ರೀತಿಯಿಂದ ಕಲಿಸಿದನು.

ಹೀಗೆ ನಾರದ ಮುನಿಯು ಜಾಂಬುವತಿ, ಸತ್ಯಭಾಮಾ, ರುಕ್ಮಿಣಿದೇವಿ, ಮೂವರಿಂದಲೂ ಗಾಯನವನ್ನು ಕಲಿತು ಕೊನೆಗೆ ಶ್ರೀ ಕೃಷ್ಣನಿಂದ ಪೂರ್ಣತೆಯನ್ನು ಪಡೆದರು. ಅದರಿಂದ ತುಂಬುರುರಿಗಿಂತ ಹೆಚ್ಚಾಗಿ ಪಾಂಡಿತ್ಯವನ್ನು ಪರಿಣತಿಯನ್ನು ಪಡೆದರು. ಸಂತೋಷದಿಂದ ಕೃಷ್ಣನಿಗೆ ನಮಸ್ಕಾರಮಾಡಿ ಆನಂದದಿಂದ ನರ್ತನ ಮಾಡಿದರು. ಆಗ ಕೃಷ್ಣನು ಅವರಿಗೆ, ''ನಾರದ, ನೀನು ಸಂಗೀತಶಾಸ್ತ್ರದ ಪ್ರಕಾರ ನನ್ನ ಸನ್ನಿಧಿಯಲ್ಲಿ ಗಾಯನಮಾಡು. ತುಂಬುರುನೊಡನೆ ನೀನು ಬೇಕಾದಲ್ಲಿ ಹಾಡುಗಳನ್ನು ಮಧುರಕಂಠದಿಂದ ಹಾಡು.'' ಹೀಗೆ ಕೃಷ್ಣನು ಅಪ್ಪಣೆ ಮಾಡಿದ ಬಳಿಕ ನಾರದರು ಆ ಮುಕುಂದನು ಮನೆಯಲ್ಲಿ ಮಹಾದೇವನ ಪೂಜೆ ಮಾಡುತ್ತಿರುವಾಗ ನಾರದರು ಕೃಷ್ಣ ರುಕ್ಮಿಣೀಸತ್ಯಭಾಮಾ ಜಾಂಬವತಿ ದೇವಿಯರ ಜೊತೆಗೆ ತಾನೂ ಹಾಡಿ ತನ್ನ ಕೈಂಕರ್ಯವನ್ನು ತೋರಿಸುತ್ತಿದ್ದರು. ಮುನಿವರ್ಯರೆ ನಾರದರ ಸಂಗೀತ ಶಿಕ್ಷಣದ ಕ್ರಮವನ್ನು ನಾನು ನಿನಗೆ ಈವರೆಗೆ ತಿಳಿಸಿದ್ದೇನೆ. ವಾಸುದೇವನನ್ನು ಕುರಿತು ಭಕ್ತಿಯಿಂದ ಹಾಡುವವನು ಹರಿಯ ಲೋಕವನ್ನೂ, ಹರನನ್ನುಕುರಿತು ಹಾಡುವವನು ಶಂಕರನ ಸಾಲೋಕ್ಯವನ್ನು ಹೊಂದುತ್ತಾನೆ. ಈ ಹರಿಹರರನ್ನು ಬಿಟ್ಟು ಬೇರೆ ದೇವತೆಗಳನ್ನು ಹೊಗಳಿ ಹಾಡಿದವನು ನರಕಕ್ಕೆಹೋಗುತ್ತಾನೆ.

*ಲಿಂಗಪುರಾಣ ಉತ್ತರಭಾಗದ ವೈಷ್ಣವಗೀತದ ಮಹಾಕಥನ*
*ಎಂಬ ಮೂರನೇ ಅಧ್ಯಾಯ ಮುಗಿದುದು*

—○—

## ಅಧ್ಯಾಯ - ೪

**ಋಷಿಗಳು** :- ''ಬುದ್ಧಿವಂತರಾದ ಸೂತರೆ, ನೀವು ವಾಸುದೇವನಲ್ಲಿ ಭಕ್ತಿ ಮಾಡುವವರು ವೈಷ್ಣವರು ಎಂದು ಹೇಳಿದಿರಿ. ಆ ವೈಷ್ಣವರ ಲಕ್ಷಣಗಳು ಏನು ? ಅಂಥಹ ಭಕ್ತರಿಗೆ ಭಗವಂತನು ಏನು ಅನುಗ್ರಹ ಮಾಡುತ್ತಾನೆ ? ಹೇಳಿರಿ.

**ಸೂತ** :- ಶೌನಕರೆ, ಇದೇ ಪ್ರಶ್ನೆಯನ್ನು ಅಂಬರೀಷ ಮಹಾರಾಜನು ಮಾರ್ಕಂಡೇಯರಿಗೆ ಮಾಡಿದ್ದನು. ಅದಕ್ಕೆ ಮಾರ್ಕಂಡೆಯರು ಕೊಟ್ಟ ಉತ್ತರವನ್ನೆ ನಾನು ನಿಮಗೆ ಹೇಳುತ್ತೇನೆ.

**ಮಾರ್ಕಂಡೇಯ** :- ವಿಷ್ಣು ಭಕ್ತರಾದವರು ಎಲ್ಲಿ ಇರುವರೊ ಅಲ್ಲಿ ಸ್ವಯಂ ನಾರಾಯಣನೆ ಇರುತ್ತಾನೆ. ಶ್ರೀ ಹರಿಯ ಗುಣಗಾಯನವನ್ನು ಕೇಳಿದಾಗ ಆನಂದದಿಂದ ಯಾರ ಮೈಮೇಲೆ ರೋಮಾಂಚನ ಉಂಟಾಗುವದೊ, ಕಂಗಳಲ್ಲಿ ಆನಂದಾಶ್ರು ಬರುವದೊ ಮತ್ತು ವೇದ ಶಾಸ್ತ್ರೋಕ್ತವಾದ ಧರ್ಮವನ್ನು ಆಚರಿಸುವವರನ್ನು ಕಂಡು ಯಾರಿಗೆ ಸಂತೋಷವಾಗುವದೋ ಅವರೇ ವೈಷ್ಣವ ಎನಿಸುವರು. ನಿಜವಾದ ವಿಷ್ಣು ಭಕ್ತನು ಮತ್ತೊಬ್ಬ ವೈಷ್ಣವನನ್ನು ಕಂಡರೆ ಅವನಿಗೆ ತಲೆಬಾಗಿ ನಮಸ್ಕರಿಸಬೇಕು. ಶ್ರೀಹರಿಗೆ ಅರ್ಪಿಸಿದ ಗಂಧ, ಹೂವು, ತುಳಸಿ ಮೊದಲಾದ ವಿಷ್ಣು ನೈರ್ಮಾಲ್ಯವನ್ನು ತಲೆಯಲ್ಲಿ ವೈಷ್ಣವನಾದವನು ಧರಿಸಬೇಕು. ವಿಷ್ಣುವಿನ ಮೂರ್ತಿಯನ್ನು ಭಕ್ತಿಯಿಂದ ಪೂಜಿಸಬೇಕು. ವಿಷ್ಣು ಭಕ್ತನಿಗೆ ಭೋಜನವನ್ನು ಯಥಾಶಕ್ತಿ ಮಾಡಿಸಿದವನು ಮಹಾಭಾಗವತ ಎನಿಸುವನು. ನಿಜವಾದ ನಾರಾಯಣನ ಭಕ್ತನಿಗೆ ಹಾಗೂ ವೇದಶಾಸ್ತ್ರ ವಿಶಾರದನಾದ ಭಕ್ತನಿಗೆ ನೀಡಿದ ಅನ್ನವು ನೇರವಾಗಿ ನಾರಾಯಣನ ಮುಖವನ್ನೇ ತಲುಪುವದು.

ಪಾಪರಹಿತರಾದ ವಿಷ್ಣು ಭಕ್ತರಾದ ಚ್ಯವನಮಹರ್ಷಿಯನ್ನು ನೋಡಿ ಯಮಧರ್ಮನು ಕೂಡ ಬದ್ಧಾಂಜಲಿ ಪುಟನಾಗಿ ಪ್ರಶಂಸೆ ಮಾಡಿದನು.

**ಅನ್ಯಭಕ್ತ ಸಹಸ್ರೇಭ್ಯೋ ವಿಷ್ಣುಭಕ್ತೋ ವಿಶಿಷ್ಯತೇ ।**
**ವಿಷ್ಣುಭಕ್ತ ಸಹಸ್ರೇಭ್ಯೋ ರುದ್ರಭಕ್ತೋ ವಿಶಿಷ್ಯತೇ ॥**

ಉಳಿದ ಸಾವಿರ ದೇವಭಕ್ತರಿಗಿಂತಲೂ ವಿಷ್ಣು ಭಕ್ತನು ಶ್ರೇಷ್ಠನಾದವನು. ಸಾವಿರ ವಿಷ್ಣು ಭಕ್ತರಿಗಿಂತಲೂ ರುದ್ರಭಕ್ತನು ಶ್ರೇಷ್ಠನು. ರುದ್ರಭಕ್ತನಿಗಿಂತಲೂ ಶ್ರೇಷ್ಠನಾದವನು ಈ ಲೋಕದಲ್ಲಿ ಯಾವನೊಬ್ಬನು ಇಲ್ಲವು. ಈ ವಿಷಯದಲ್ಲಿ ಸಂದೇಹವು ಸಲ್ಲದು.

ಆದುದರಿಂದ ಧರ್ಮ ಅರ್ಥ ಕಾಮ ಮೋಕ್ಷ ಎಂದು ನಾಲ್ಕು ವಿಧವಾದ ಪುರುಷಾರ್ಥಗಳನ್ನು ಪಡೆಯ ಬಯಸುವವರು ಅವಶ್ಯವಾಗಿ ವಿಷ್ಣು ಭಕ್ತರನ್ನು ರುದ್ರಭಕ್ತರನ್ನು ಪೂಜಿಸಬೇಕು.

*ಲಿಂಗಪುರಾಣ ಉತ್ತರಭಾಗದ ವಿಷ್ಣು ಭಕ್ತ ಕಥನ ಎಂಬ ನಾಲ್ಕನೇಯ ಅಧ್ಯಾಯ ಮುಗಿದುದು*

—○—

## ಶ್ರೀಮತಿ ಆಖ್ಯಾನ

**ಅಧ್ಯಾಯ - ೫**

**ಋಷಿಗಳು :-** ಸೂತರೆ, ಇಕ್ಷ್ವಾಕು ವಂಶದ ವಾಸುದೇವ ಭಕ್ತನಾದ ಅಂಬರೀಷನು ನಾರಾಯಣನ ಆಜ್ಞಾನುಸಾರವಾಗಿ ರಾಜ್ಯವನ್ನು ಆಳುತ್ತಿದ್ದ ಎಂದು ಕೇಳಿದ್ದೇವೆ. ಆ ಭಗವದ್ಭಕ್ತನ ಚರಿತ್ರೆಯನ್ನು ಹೇಳಿರಿ.

**ಸೂತರು :-** ಮುನಿಗಳೇ, ಇಕ್ಷ್ವಾಕುವಂಶದ ತ್ರಿಶಂಕುಮಹಾರಾಜನ ಧರ್ಮಪತ್ನಿಯು ಪರಮಪತಿವ್ರತೆ. ಅವಳು ಸರ್ವದಾ ಶುಚಿರ್ಭೂತಳಾಗಿ 'ಶೇಷಶಾಯಿಯಾದ ಮಹಾವಿಷ್ಣುವೇ ಬ್ರಹ್ಮಾಂಡರೂಪಿ ಕಮಲಕ್ಕೆ ಉದ್ಬೋಧಕನು. ಸತ್ವಗುಣದಿಂದ ಸರ್ವವ್ಯಾಪಿಯಾದ ಆ ಪರಮಾತ್ಮನು ರಜೋಗುಣದಿಂದ ಸೃಷ್ಟಿಮಾಡಿ ಬ್ರಹ್ಮನೆಂದೂ, ತಮೋಗುಣದಿಂದ ಸಂಹಾರಕನಾಗಿ ಕಾಲರುದ್ರನೆಂದೂ, ರಕ್ಷಣೆಮಾಡುವ ಅವನೇ ಸರ್ವದೇವೋತ್ತಮನೆಂದೂ, ತಿಳಿದು ತ್ರಿಕರಣಶುದ್ಧಿಪೂರ್ವಕವಾಗಿ ಪೂಜಿಸುತ್ತಿದ್ದಳು. ಆ ತ್ರಿಶಂಕುವಿನ ಮಡದಿಯ ಹೆಸರು ಪದ್ಮಾವತಿ. ಅವಳು ಮಹಾರಾಣಿಯಾಗಿದ್ದರೂ ದೇವತಾಕಾರ್ಯವನ್ನು ಬೇರೆಯವರಿಗೆ ಹೇಳದೆ ತಾನೇ ದೇವಮಂದಿರವನ್ನು ಗುಡಿಸಿ ಸಾರಿಸುತ್ತಿದ್ದಳು. ರಂಗವಲ್ಲಿಯಾದಿಗಳನ್ನು ಹಾಕಿ ಸಿಂಗರಿಸುತ್ತಿದ್ದಳು. ಪೂಜೆಗೆ ಹೂಗಳನ್ನು ತಂದು ಮಾಲೆಮಾಡಿ ತಾನೇ ಏರಿಸುತ್ತಿದ್ದಳು. ಗಂಧವನ್ನು ತಾನೇ ತೇಯ್ದು ತಾನೇ ಅಡಿಗೆಮಾಡಿ ನೈವೇದ್ಯ ಇಟ್ಟು ಅತ್ಯಂತ ಭಕ್ತಿಯಿಂದ ನಾರಾಯಣನ ಪೂಜೆಯನ್ನು ಮಾಡುತ್ತಿದ್ದಳು. ಹೀಗೆ ಹತ್ತು ಸಾವಿರ ವರುಷ ಗೋವಿಂದನನ್ನು ಗಂಧಪುಷ್ಪಾದಿಗಳಿಂದ ಪೂಜಿಸಿದಳು. ವಿಷ್ಣುಭಕ್ತರಿಗೆ ಹಣ್ಣು, ರನ್ನ, ಧನ, ಧಾನ್ಯ ಮುಂತಾದವುಗಳನ್ನು ಪ್ರತಿನಿತ್ಯ ಕೊಟ್ಟು ಸಂತೋಷಪಡಿಸುತ್ತಿದ್ದಳು.

ಒಂದು ಸಲ ಅವಳು ಏಕಾದಶಿ ಉಪವಾಸಮಾಡಿ ವಿಷ್ಣುವಿನ ಎದುರು ಮನೆಯಲ್ಲಿ ಪತಿಯೊಡನೆ ನಿದ್ರಿಸಿದಳು. ಆಗ ಸಾಕ್ಷಾತ್ ನಾರಾಯಣನು ಕನಸಿನಲ್ಲಿ ಬಂದು ಅವಳಿಗೆ ''ಮಂಗಳಾಂಗಿಯೆ, ನೀನು ನನ್ನಿಂದ ಏನು ವರವನ್ನು ಅಪೇಕ್ಷಿಸುವೆ ? ಹೇಳು'' ಎಂದು ಕೇಳಿದನು. ಆಗ ಅವಳು ಸ್ವಪ್ನದಲ್ಲಿಯೇ ಭಗವಂತನಿಗೆ ನನಗೆ ಸಾರ್ವಭೌಮನೂ ತೇಜಸ್ವಿಯೂ ಆದ ವಿಷ್ಣುಭಕ್ತ ಓರ್ವ ಪುತ್ರನನ್ನು ಕರುಣಿಸು'' ಎಂದು ಕೇಳಿಕೊಂಡಳು. ಆಗ ಶ್ರೀಹರಿಯು 'ತಥಾಸ್ತು' ಹಾಗೆಯೇ ಆಗಲಿ'' ಎಂದು ಅವಳಿಗೆ ಒಂದು ಫಲವನ್ನು ಕೊಟ್ಟನು.

ನಿದ್ದೆಯಿಂದ ಎಚ್ಚರಾದ ಆ ಪದ್ಮಾವತಿಯು ಶ್ರೀಹರಿಯು ತನಗೆ ಕೊಟ್ಟ ಫಲವನ್ನು ನೋಡಿ ಸಂತಸದಿಂದ ತನ್ನ ಪತಿಗೆ ಸ್ವಪ್ನ ಸಮಾಚಾರವನ್ನು ತಿಳಿಸಿದಳು. ದೇವದತ್ತವಾದ ಫಲವನ್ನೂ ತೋರಿಸಿದಳು. ಅವನ ಅಪ್ಪಣೆಯಂತೆ ಭಕ್ತಿಯಿಂದ ಆ ಫಲವನ್ನು ಭಕ್ಷಿಸಿದಳು. ಅದರಿಂದ ಅವಳಿಗೆ ಓರ್ವ ಸತ್ಪುತ್ರನು ಜನಿಸಿದನು. ಅವನಿಗೆ 'ಅಂಬರೀಷ' ಎಂದು ನಾಮಕರಣ ಮಾಡಲಾಯಿತು. ಚಕ್ರವರ್ತಿ ಲಕ್ಷಣದಿಂದ ಕೂಡಿದ ಆ ಮಗನಿಗೆ ಜಾತಕರ್ಮಾದಿ ಎಲ್ಲ ಸಂಸ್ಕಾರಗಳನ್ನು ಮಾಡಿದನು. ಅನಂತರ ಅವನ ತಂದೆಯು

ಪ್ರಬುದ್ಧನಾದ ಬಳಿಕ ಆ ಅಂಬರೀಷ ಕುಮಾರನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ಮಾಡಿ ಸಿಂಹಾಸನದ ಮೇಲೆ ಕೂಡಿಸಿ ತಾನು ತಪಸ್ಸಿಗಾಗಿ ಅರಣ್ಯಕ್ಕೆ ತೆರಳಿದನು.

ಅಂಬರೀಷ ಮಹಾರಾಜನು ಕೆಲವು ಕಾಲ ಧರ್ಮದಂತೆಯೇ ರಾಜ್ಯವನ್ನು ಆಳಿದನು. ಅನಂತರ ರಾಜ್ಯದ ಶಾಸನ ಭಾರವನ್ನೆಲ್ಲ ಯೋಗ್ಯರಾದ ಮಂತ್ರಿಯ ಮೇಲಿರಿಸಿ ತಾನೂ ಕೂಡ ಅರಣ್ಯಕ್ಕೆ ಹೋಗಿ ನಾರಾಯಣನನ್ನು ಉದ್ದೇಶಿಸಿ ಒಂದು ಸಾವಿರ ವರ್ಷದವರೆಗೆ ಘೋರವಾದ ತಪಸ್ಸನ್ನು ಆಚರಿಸಿದನು. ಬ್ರಹ್ಮ, ವಿಷ್ಣು, ಶಿವ ಎಂಬ ತ್ರಿಮೂರ್ತಿ ಸ್ವರೂಪಿಯಾಗಿ ಪೀತಾಂಬರವನ್ನು ಧರಿಸಿ 'ಶ್ರೀವತ್ಸ' ಎಂಬ ಲಾಂಛನಯುಕ್ತನಾದ ಶ್ರೀ ಮನ್ನಾರಾಯಣನು ಅಂಬರೀಷನ ತಪಸ್ಸಿಗೆ ಮೆಚ್ಚಿ ಗರುಡಾರೂಢನಾಗಿ ಅಲ್ಲಿಗೆ ಬಂದನು. ''ನಿನಗೆ ಬೇಕಾದ ವರವನ್ನು ಕೇಳಿಕೊ. ನಿನ್ನ ಅಭೀಷ್ಟವನ್ನು ನಾನು ಸಲ್ಲಿಸುತ್ತೇನೆ.'' ಆದರೆ ಶ್ರೀಹರಿಯು ಇಲ್ಲಿಗೆ ಬರುವಾಗ ಒಂದು ಚಮತ್ಕಾರ ಮಾಡಿದ್ದಾನೆ. ತನ್ನ ವಾಹನವಾದ ಗರುಡನನ್ನು ಐರಾವತದ ರೂಪದಿಂದ ಪರಿವರ್ತಿಸಿದನು. ತಾನು ಇಂದ್ರನ ರೂಪ ತಾಳಿಕೊಂಡು ಅದರ ಮೇಲೆ ಕುಳಿತು ''ನಿನಗೆ ಬೇಕಾದ ವರ ಬೇಡು' ಎಂದು ಅಂಬರೀಷನಿಗೆ ಹೇಳಿದನು.

**ಸ್ವಯಂ ಶಕ್ರ ಇವಾಸೀನಃ ತಮಾಹ ನೃಪಸತ್ತಮಂ ।**
**ಇಂದ್ರೋಽಹಮಸ್ಮಿ ಭದ್ರಂ ತೇ ಕಿಂ ದದಾಮಿ ವರಂ ಚ ತೇ ॥**

ವಿಷ್ಣುವಿನ ಈ ವೇಷಾಂತರದ ಆವಾಂತರವನ್ನು ತಿಳಿಯದ ಅಂಬರೀಷನು ಅಲ್ಲಿಗೆ ಬಂದವನು ತನ್ನೆದುರು ನಿಂದವನು ಸಾಕ್ಷಾತ್ ಇಂದ್ರನೆಂದೇ ತಿಳಿದನು. ಅವನಿಗೆ ಸ್ಪಷ್ಟವಾಗಿ ಹೇಳಿದನು.

**ಅಂಬರೀಷ** :- ದೇವೇಂದ್ರ, ನಾನು ನಿನ್ನನ್ನು ಕುರಿತು ತಪಸ್ಸನ್ನು ಮಾಡಿಲ್ಲ. ನಾನು ತಪಸ್ಸನ್ನು ಮಾಡಿದ್ದು ವಿಷ್ಣುವನ್ನು ಕುರಿತು. ನೀನು ಇಂದ್ರ. ನೀನು ಕೊಡುವದನ್ನು ನಾನು ತೆಗದುಕೊಳ್ಳುವದಿಲ್ಲ. ನೀನು ಬಂದದಾರಿಯಿಂದ ತಿರುಗಿ ಹೋಗು. ನಾನು ಶ್ರೀಹರಿಯನ್ನು ಕುರಿತೇ ತಪಸ್ಸುಮಾಡುತ್ತೇನೆ. ನೀನು ನನಗೆ ಬುದ್ಧಿಮೋಹವನ್ನುಂಟು ಮಾಡದೇ ಇಲ್ಲಿಂದ ಹೊರಟುಹೋಗು.'' ಅದನ್ನು ಕೇಳಿ ಸಂತುಷ್ಟನಾದ ಶ್ರೀ ಹರಿಯು ನಕ್ಕು ತನ್ನ ಸ್ವರೂಪವಾದ ಶಂಖ, ಚಕ್ರ, ಶಾರ್ಙ್ಗ, ಗದಾ ಮೊದಲಾದ ಆಯುಧಗಳನ್ನು ಕೈಯಲ್ಲಿ ಹಿಡಿದು ಗರುಡನ ಮೇಲೆ ಕುಳಿತು ತನ್ನ ನಿಜರೂಪವನ್ನು ತೋರಿಸಿದನು. ಪ್ರತ್ಯಕ್ಷನಾದ ಆ ಪರಮಾತ್ಮನನ್ನು ನೋಡಿ ಅಂಬರೀಷನು ಪರಮಾನಂದ ತುಂದಿಲನಾದನು. ಕೈ ಮುಗಿದು ಅವನನ್ನು ಭಕ್ತಿಯಿಂದ ಸ್ತೋತ್ರ ಮಾಡಿದನು.

**ಪ್ರಸೀದ ಲೋಕನಾಥೇಶ ಮಮ ನಾಥ ಜನಾರ್ದನ ।**
**ಕೃಷ್ಣ ವಿಷ್ಣೋ ಜಗನ್ನಾಥ ಸರ್ವಲೋಕನಮಸ್ಕೃತ ॥**
**ಜಯದೇವ ಜಗನ್ನಾಥ ಪಾಹಿ ಮಾಂ ಪುಷ್ಕರೇಕ್ಷಣ ।**
**ನಾನ್ಯಾಗತಿಸ್ತ್ವದನ್ಯಾ ಮೇ ತ್ವಮೇವ ಶರಣಂ ಮಮ ॥**

ಕೃಷ್ಣ, ವಿಷ್ಣು, ಜನಾರ್ದನ ಎಂಬ ಹೆಸರುಗಳಿಂದ ಕರೆಯಲ್ಪಡುವ ನೀನು, ಮಮಸ್ವಾಮಿ ಸರ್ವಜಗತ್ತಿಗೂ ಒಡೆಯನಾಗಿರುವೆ. ನೀನು ನನ್ನ ಮೇಲೆ ಪ್ರಸನ್ನನಾಗು.

ಎಲ್ಲ ಜನರಿಂದಲೂ ವಂದಿತನಾದ ನೀನೇ ನನಗೆ ನಾಥ. ಸರ್ವದಾ ಜಯಶೀಲನಾದ ಜಗನ್ನಾಥನೇ, ನಿನ್ನ ಕಮಲದಂತಿರುವ ಕಣ್ಣುಗಳಿಂದ ನನ್ನನ್ನು ನೋಡು. ನಿನ್ನ ಹೊರತು ನನಗೆ ಬೇರೆ ಗತಿ ಇಲ್ಲ. ನೀನೆ ನನಗೆ ರಕ್ಷಕ.

ಅಂಬರೀಷನ ಸ್ತೋತ್ರವನ್ನು ಕೇಳಿ ಭಗವಂತನು ಸಂಪ್ರೀತನಾದನು. ಅವನಿಗೆ ಹೇಳಿದ ''ಅಂಬರೀಷ, ನೀನು ನನ್ನ ನಿಜವಾದ ಭಕ್ತ. ನಿನಗೆ ಏನು ಬೇಕು ಹೇಳು. ನೀನು ಬೇಡಿದ್ದನ್ನೆಲ್ಲ ನೀಡುತ್ತೇನೆ.'' ಅದಕ್ಕಾಗಿಯೇ ನಾನು ಇಲ್ಲಿಗೆ ಬಂದಿದ್ದೇನೆ.

**ಅಂಬರೀಷ :-** ಲೋಕನಾಥನಾದ ಜನಾರ್ದನ, ನಾನು ವಾಸುದೇವನ ಭಕ್ತ. ಮಾತು, ದೇಹ, ಮನಸ್ಸು ಮೂರನ್ನು ಭಗವತ್ಪರವನ್ನಾಗಿ ಮಾಡಿ ನಾನು ಪೂರ್ಣ ನಿನ್ನವನಾಗಬೇಕು. ನಿನ್ನ ದಯೆಯಿಂದ ಈ ಜಗತ್ತನ್ನೆಲ್ಲ ವಿಷ್ಣುಭಕ್ತಿಯುಕ್ತವನ್ನಾಗಿ ಮಾಡಿ ಈ ಪ್ರಪಂಚ ವೆಲ್ಲವೂ ವೈಷ್ಣವ ಎನಿಸುವಂತೆ ಮಾಡುತ್ತೇನೆ. ಹೋಮ ಹವನಗಳಿಂದ ದೇವತೆಗಳನ್ನು ಸಂತೋಷ ಪಡಿಸುತ್ತೇನೆ. ಹರಿದ್ವೇಷಿಗಳನ್ನು ಸಂಹರಿಸಿ ವೈಷ್ಣವರನ್ನು ಪಾಲಿಸುತ್ತೇನೆ.

**ಶ್ರೀಮನ್ನಾರಾಯಣ :-** ''ಅಂಬರೀಷ, ನಿನ್ನ ಇಚ್ಛೆಯಂತೆ ಆಗಲಿ. ಪೂರ್ವಕಾಲದಲ್ಲಿ ರುದ್ರದೇವರ ಪ್ರಸಾದದಿಂದ ನನಗೆ ದುರ್ಲಭವಾದ ಒಂದು ಚಕ್ರವು ದೊರೆತಿದೆ. ಈ ಚಕ್ರವು ನಿನ್ನನ್ನು ಋಷಿಯ ಶಾಪ ಹಾಗೂ ವೈರಿಗಳ ದಾಳಿ, ರೋಗಗಳ ಉಪದ್ರವಗಳನ್ನು ನಾಶಮಾಡಿ ನಿನ್ನನ್ನು ರಕ್ಷಿಸುತ್ತದೆ.'' ಎಂದು ಹೇಳಿ ಶ್ರೀ ಹರಿಯು ಅಂತರ್ಧಾನವನ್ನು ಹೊಂದಿದನು.

ಅನಂತರ ಆ ಅಂಬರೀಷನು ತಪೋವನದಿಂದ ತನ್ನ ರಾಜಧಾನಿಯಾದ ಅಯೋಧ್ಯಾ ಪಟ್ಟಣಕ್ಕೆ ಬಂದನು. ಅವನು ನ್ಯಾಯದಿಂದ ರಾಜ್ಯ ಪರಿಪಾಲನೆಯನ್ನು ಮಾಡಿದನು. ಶ್ರೀಹರಿಯ ಏಕಾಂತ ಭಕ್ತನಾಗಿ ಭಗವದ್ಭಕ್ತರನ್ನು ಆನಂದದಿಂದ ಪಾಲನೆಮಾಡಿದನು. ನೂರು ಅಶ್ವಮೇಧಯಜ್ಞಗಳನ್ನು ನೂರು ವಾಜಪೇಯ ಯಾಗಗಳನ್ನು ಮಾಡಿ ಸಮುದ್ರ ಪರ್ಯಂತರವಾಗಿ ಇದ್ದ ಅಖಂಡ ಭೂಮಂಡಲವನ್ನೆಲ್ಲ ಧರ್ಮಮಾರ್ಗದಿಂದ ಆಳಿದನು. ಅವನ ಆಳಿಕೆಯ ಕಾಲದಲ್ಲಿ ಪ್ರತಿಯೊಬ್ಬರ ಮನೆಯಲ್ಲಿಯೂ ಹರಿಪೂಜೆ, ಹರಿಸ್ಮರಣ, ವೇದಾಧ್ಯಯನ, ಯಜ್ಞಯಾಗಗಳು ನಿರಂತರ ನಡೆಯುತ್ತಿದ್ದವು. ಆ ಮಹಾರಾಜನಿಗೆ ಪರಮಸುಂದರಿಯಾದ 'ಶ್ರೀಮತಿ' ಎಂಬ ಮಗಳು ಹುಟ್ಟಿದಳು. ಅವಳು ಪ್ರಬುದ್ಧಳಾದಳು. ತಾರುಣ್ಯಕ್ಕೆ ಅನುರೂಪವಾದ ಲಾವಣ್ಯವು ಅವಳ ಕಂಗಳಲ್ಲಿಯೂ ಅಂಗಾಂಗಗಳಲ್ಲಿಯೂ ಕಂಗೊಳಿಸತೊಡಗಿತು. ಆಗ ಅಂಬರೀಷನ ರಾಜ ಮಂದಿರಕ್ಕೆ, ನಾರದ, ಪರ್ವತ ಎಂಬ ಇಬ್ಬರು ಮುನಿಪುಂಗವರು ಆಗಮಿಸಿದರು. ಮಹಾರಾಜನು ಯಥೋಚಿತವಾಗಿ ಅವರಿಬ್ಬರಿಗೂ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು. ರಾಜನ ಸನಿಹದಲ್ಲಿ ಮೇಘಮಂಡಲದ ಮಧ್ಯದಲ್ಲಿ ವಿದ್ಯುತ್ತಿನಂತೆ ಮಿಂಚುವ ಮನಮೋಹಕಳಾದ ರಾಜಕನ್ಯೆಯನ್ನು ನೋಡಿ ನಾರದರು ಕೇಳಿದರು.

**ನಾರದ :-** ಮಹಾರಾಜ, ನಿನ್ನ ಬಳಿ ಇರುವ ಈ ಕನ್ಯೆಯು ಎಲ್ಲ ಲಕ್ಷಣಗಳಿಂದ ಶೋಭಿತಳಾಗಿದ್ದಾಳೆ. ದೇವಕನ್ಯೆಯಂತೆ ಹೊಳೆಯುತ್ತಾಳೆ. ಭಾಗ್ಯಶಾಲಿಯಾದ ಈ ಕನ್ಯೆಯು ಯಾರು ?

**ಮಹಾರಾಜ :-** ಪೂಜ್ಯರೆ, ಇವಳು ನನ್ನ ಮಗಳು. 'ಶ್ರೀಮತಿ' ಎಂದು ಇವಳ ಹೆಸರು. ಇವಳಿಗೆ ವಿವಾಹಸಮಯ ಪ್ರಾಪ್ತವಾಗಿದೆ. ನಾನು ವರಾನ್ವೇಷಣೆಯಲ್ಲಿ

ಇರುತ್ತೇನೆ. ಶ್ರೀಮತಿಯ ಅಪ್ರಾಕೃತವಾದ ಸೌಂದರ್ಯ ಕಳೆಕಾಂತಿಗಳನ್ನು ಕಂಡು ನಾರದ ಹಾಗು ಪರ್ವತ ಮುನಿ ಇಬ್ಬರಿಗೂ ಅವಳನ್ನು ಮದುವೆಯಾಗಬೇಕೆಂಬ ಅಪೇಕ್ಷೆ ಉಂಟಾಯಿತು. ಇಬ್ಬರು ಮಹಾರಾಜನನ್ನು ಏಕಾಂತದಲ್ಲಿ ಕರೆದು ತನಗೆ ಅವಳನ್ನು, ಮದುವೆ ಮಾಡಿಕೊಡು ಎಂದು ಕೇಳಿದರು.

''ತನ್ನ ಒಬ್ಬ ಮಗಳನ್ನು ಇಬ್ಬರೂ ಮುನಿವರ್ಯರು ಪ್ರೇಮಿಸಿ ಕೇಳುತ್ತಿರುವುದನ್ನು ನೋಡಿ ಅಂಬರೀಷನು ಭಯಭ್ರಾಂತನಾದನು. ಇಬ್ಬರೂ ಶಾಪಾನುಗ್ರಹ ಸಮರ್ಥರಾದ ಮುನಿ ಮುನಿಷಿಗಳು. ನಾನು ಕನ್ಯೆಯನ್ನು ಕೊಡುವುದಿಲ್ಲವೆಂದರೆ ಅವರಿಗೆ ಕೋಪ. ನನಗೆ ಮರುಕ್ಷಣದಲ್ಲಿಯೇ ಶಾಪ. ಅದಕ್ಕೆ ಏನು ಮಾಡಲಿ ? ಹೀಗೆ ಚಿಂತಾಕ್ರಾಂತನಾದ ಮಹಾರಾಜನು ಅವರಿಬ್ಬರಿಗೂ ಕೈ ಮುಗಿದು ಹೇಳಿದ, ''ಪೂಜ್ಯರೆ, ನೀವಿಬ್ಬರೂ ನನ್ನ ಮಗಳನ್ನು ಒಟ್ಟಿಗೆ ಕೇಳುವದಾದರೆ ನಾನು ಏನು ಮಾಡಲಿ ? ನನಗೆ ಈಗ ಒಂದೇ ಉಪಾಯ ತೋಚುತ್ತಿದೆ. ನನ್ನ ಮಗಳು ಸಂತೋಷದಿಂದ ಯಾರನ್ನು ವರಿಸುತ್ತಾಳೋ ಅವರಿಗೇ ಕೊಟ್ಟು ಮದುವೆ ಮಾಡುತ್ತೇನೆ'' ಎಂದು ಹೇಳಿದನು.

ರಾಜನ ಮಾತನ್ನು ಕೇಳಿ ಅವರಿಬ್ಬರೂ ಮುನಿಗಳು ಸಂತೋಷದಿಂದ ಅಲ್ಲಿಂದ ತೆರಳಿದರು. ಅನಂತರ ನಾರದರು ನೇರವಾಗಿ ವಿಷ್ಣುಲೋಕಕ್ಕೆ ಹೋದರು. ಅಲ್ಲಿ ಭಗವಂತನಿಗೆ ನಮಸ್ಕರಿಸಿ, ''ಭಗವನ್, ನಾನು ಪರ್ವತ ಇಬ್ಬರೂ ಅಯೋಧ್ಯೆಯ ಅರಸನಾದ ಅಂಬರೀಷ ಮಹಾರಾಜನ ಮಂದಿರಕ್ಕೆ ಹೋಗಿದ್ದೆವು. ಅವನ ಮಗಳಾದ ಶ್ರೀಮತಿಯ ಚೆಲುವುಚಾರಿಮೆಗಳನ್ನು ಕಂಡು ನಮ್ಮಿಬ್ಬರ ಮನಸ್ಸು ಮುಗ್ಧವಾಯಿತು. ನಾವಿಬ್ಬರು ಆ ಮಹಾರಾಜನಿಗೆ ''ನಿನ್ನ ಮಗಳನ್ನು ನನಗೆ ಮದುವೆ ಮಾಡಿಕೊಡು'' ಎಂದು ಕೇಳಿದೆವು. ಅದಕ್ಕೆ ಮಹಾರಾಜರು 'ನನ್ನ ಮಗಳು ಯಾರನ್ನು ವರಿಸುವಳೋ ಅವರಿಗೆ ಮದುವೆ ಮಾಡಿಕೊಡುವೆ' ಎಂದು ಹೇಳಿದ್ದಾನೆ. ನಾವಿಬ್ಬರು ಅವನಿಗೆ ನಾಳೆ ಬರುತ್ತೇವೆ ಎಂದು ಹೇಳಿದ್ದೇವೆ. ಈಗ ನೀನು ನಿನ್ನ ಭಕ್ತನಾದ ನನಗೆ ಒಂದು ಉಪಕಾರವನ್ನು ಮಾಡಬೇಕು. ಪರ್ವತ ಮುನಿಯು ನಾಳೆ ಅಂಬರೀಷ ರಾಜನ ಅಂತಃಪುರಕ್ಕೆ ಬಂದಾಗ ಅವನ ಮುಖವು ಕೋತಿಯಂತೆಕಾಣಬೇಕು'' ಎಂದು ಕೇಳಿದ.

ಅದಕ್ಕೆ ಶ್ರೀಮನ್ನಾರಾಯಣನು ನಕ್ಕು 'ಹಾಗೆಯೇ ಆಗಲಿ. ನೀನು ಹೇಳಿದಂತೆ ಮಾಡುತ್ತೇನೆ'' ಎಂದು ಹೇಳಿದನು. ಅದರಂತೆಯೇ ಇತ್ತ ಪರ್ವತಮುನಿಯು ಕೂಡ ಭಗವಂತನ ಬಳಿಗೆ ಹೋದನು. ಅವನು ಕೂಡ ಪರಮಾತ್ಮನಿಗೆ ಅಂಬರೀಷ ರಾಜನ ರಾಜಭವನದಲ್ಲಿ ನಡೆದ ಸಮಾಚಾರವನ್ನೆಲ್ಲ ತಿಳಿಸಿ ಹೇಳಿದನು. ಮತ್ತು ''ನಾರದರ ಮುಖವನ್ನು ಗೋಲಾಂಗೂಲ ಎಂಬ ಪ್ರಾಣಿಯ ಮುಖದಂತೆ ಮಾಡು'' ಎಂದು ಬಿನ್ನವಿಸಿದನು. ಪರಮಾತ್ಮನು ಅದಕ್ಕೂ ಸಮ್ಮತಿಸಿದನು. ಅನಂತರ ಇಬ್ಬರೂ ಮಹಾಮುನಿಗಳು ಅಂಬರೀಷನ ರಾಜಧಾನಿಗೆ ಬಂದರು.

ನಾರದ ಪರ್ವತ ಇಬ್ಬರೂ ಮುನಿಗಳು 'ನಾಳೆಬರುತ್ತೇವೆ' ಎಂದು ಹೇಳಿ ತನ್ನ ರಾಜಭವನದಿಂದ ಹೋದ ಬಳಿಕ ಮಹಾರಾಜನು ತನ್ನ ರಾಜಧಾನಿಯನ್ನು ತನ್ನ ಪುತ್ರಿಯ ಸ್ವಯಂವರಕ್ಕಾಗಿ ಶೃಂಗಾರಿತವನ್ನಾಗಿ ಮಾಡಿದನು. ತಳಿರು, ತೋರಣ, ಧ್ವಜ ಸ್ತಂಭಗಳಿಂದ ನಗರವನ್ನೆಲ್ಲ ಅಲಂಕರಿಸಿ ಧೂಪದೀಪಗಳಿಂದ ಸುವಾಸಿತವನ್ನಾಗಿ

ಮಾಡಿದನು. ನಾನಾ ವಿಧವಾದ ರತ್ನಗಳಿಂದಲೂ, ರತ್ನಖಚಿತವಾದ ಕಂಬಗಳಿಂದಲೂ, ಬಗೆಬಗೆಯಹೂಮಾಲೆಗಳಿಂದಲೂ ಸ್ವಯಂವರಮಂಟಪ ಶೋಭಾಯ ಮಾನವಾಗಿದ್ದಿತು. ಅತ್ಯುತ್ತಮವಾದ ರತ್ನಗಂಬಳಿಗಳಿಂದಲೂ, ಶ್ರೇಷ್ಠವಾದ ಬಂಗಾರದ ಭದ್ರಾಸನಗಳಿಂದಲೂ ಮಂಡಿತವಾದ ಆ ಸ್ವಯಂವರಸಭೆಯನ್ನು ಸರ್ವಾಭರಣಗಳಿಂದ ಭೂಷಿತಳಾಗಿ ಸಾಕ್ಷಾತ್ ಲಕ್ಷ್ಮಿಯಂತೆ ಶೋಭಿಸುವ ಮಗಳೊಡನೆ ಪ್ರವೇಶಿಸಿದನು. ಅನೇಕ ರಾಜಕುಮಾರರು ಆ ಸ್ವಯಂವರ ಮಂಟಪಕ್ಕೆ ಬಂದು ತಮ್ಮ ತಮ್ಮ ಆಸನಗಳಲ್ಲಿ ಆಸೀನರಾದರು. ಆಗ ಬ್ರಹ್ಮದೇವರ ಮಾನಸಪುತ್ರನಾದ ನಾರದನೂ, ಬ್ರಹ್ಮಜ್ಞಾನಿಯಾದ ಪರ್ವತ ಮುನಿಯೂ ಕನ್ಯಾಪೇಕ್ಷಿಗಳಾಗಿ ಅಲ್ಲಿಗೆ ಬಂದರು.

ಅವರಿಬ್ಬರನ್ನು ಸತ್ಕರಿಸಿ ಅಂಬರೀಷ ಮಹಾರಾಜನು ತನ್ನ ಮಗಳಿಗೆ. ''ಶುಭಾಂಗಿಯೆ ಈ ಇಬ್ಬರೂ ಮುನಿಗಳಲ್ಲಿ ನೀನು ಯಾರನ್ನು ಇಚ್ಛಿಸುವೆಯೊ ಅವರ ಕೊರಳಿಗೆ ಈ ಸ್ವಯಂವರಮಾಲೆಯನ್ನು ಹಾಕು'' ಎಂದು ಹೇಳಿದನು. ಆಗ ಶ್ರೀಮತಿಯು ದಿವ್ಯವಾದ ಸ್ವಯಂವರ ಮಾಲೆಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಅವರಿಬ್ಬರು ಕುಳಿತ ಸ್ಥಳಕ್ಕೆ ಬಂದಳು. ಅವಳು ಕಣ್ಣು ತೆರೆದು ನೋಡಿದಾಗ ನಾರದರು ಮರ್ಕಟದ ಮುಖದವರಾಗಿಯೂ. ಪರ್ವತನು ಗೋಲಾಂಗೂಲ ಮುಖದವರಾಗಿಯು ಕಂಡರು. ವಿಚಿತ್ರ ಆಕಾರದ ವಿದ್ರೂಪದಿಂದ ವಿಕಾರಮುಖವನ್ನು ಮಾಡಿಕೊಂಡು ಕುಳಿತ ಆ ಇಬ್ಬರನ್ನು ನೋಡಿ ಸ್ವಯಂವರ ಕನ್ಯೆಯಾದ ಶ್ರೀಮತಿಯು ಸಂಭ್ರಾಂತಳಾದಳು. ಗಾಳಿಗೆ ಸಿಕ್ಕ ಬಾಳೆಯಬಳ್ಳಿಯಂತೆ ನಡುಗತೊಡಗಿದಳು. ಆಗ ರಾಜನು, ''ಮಗಳೆ, ಹೀಗೇಕೆ ಸುಮ್ಮನೆ ನಿಂತುಕೊಂಡೆ? ಇವರಿಬ್ಬರಲ್ಲಿ ಯಾರಾದರೊಬ್ಬರಿಗೆ ನಿನ್ನ ಸ್ವಯಂವರ ಮಾಲೆಯನ್ನು ಹಾಕು.'' ಎಂದು ಹೇಳಿದನು.

**ಶ್ರೀಮತಿ :-** ''ತಂದೆಯೇ, ಇಲ್ಲಿ ನನ್ನ ಕಣ್ಣೆದುರು ಮನುಜರೂಪದ ಎರಡು ಮರ್ಕಟಗಳು ಮಾತ್ರ ಇರುತ್ತವೆ. ಇಲ್ಲಿ ನಾರದರು ಇಲ್ಲ. ಪರ್ವತ ಮುನಿಗಳು ಇಲ್ಲ. ಆದರೆ ಇವರಿಬ್ಬರ ಮಧ್ಯದಲ್ಲಿ ಹದಿನಾರು ವರುಷದ ಓರ್ವ ತರುಣನು ನಿಂತು ಕೊಂಡಿದ್ದಾನೆ. ಸರ್ವಾಭರಣಭೂಷಿತನಾದ ಅವನು 'ಅತಸೀ' ಕುಸುಮದಂತೆ ನೀಲಮೇಘ ಶ್ಯಾಮ ಸುಂದರ ವಿಗ್ರಹನಾಗಿದ್ದಾನೆ. ಅವನು ಉಟ್ಟದ್ದು ಬಂಗಾರದ ಅಂಚಿನ ಪೀತಾಂಬರ. ಅವನ ಕೈ ಕಮಲದಂತೆಯೇ ಇರುತ್ತದೆ. ಮುಖವು ಪದ್ಮದಂತೆ, ಕಣ್ಣು ಕನ್ನೈದಿಲೆಯಂತೆ. ಮಂದಹಾಸಯುಕ್ತನಾದ ಆ ಯುವಕನು ನನ್ನನ್ನು ನೋಡಿ ತನ್ನ ಬಲಗೈಯ್ಯನ್ನು ಚಾಚಿ ನಿಂತಿದ್ದಾನೆ.'' ಹೀಗೆ ನುಡಿದು ಸಂಭ್ರಾಂತ ಮನಸ್ಕಳಾಗಿ ನಡುಗುತ್ತ ನಿಂತ ತನ್ನ ಮಗಳನ್ನು ಕುರಿತು ರಾಜನು ಕೇಳಿದನು. ''ವತ್ಸೆ, ಏನು ಮಾಡುತ್ತಲಿರುವಿ?'' ಆ ಕನ್ಯೆಯ ಮಾತನ್ನು ಕೇಳಿ ನಾರದರಿಗೆ ಸಂಶಯ ಬಂದಿತು. ಅವರು ಕೇಳಿದರು.

**ನಾರದ:-** ಕನ್ನಿಕೆಯೆ, ನಮ್ಮಿಬ್ಬರ ಮಧ್ಯದಲ್ಲಿ ನಿನಗೆ ಕಾಣುತ್ತಿರುವ ಆ ತರುಣನಿಗೆ ಬಾಹುಗಳು ಎಷ್ಟು?

**ಶ್ರೀಮತಿ:-** ''ಅವನಿಗೆ ಎರಡು ಬಾಹುಗಳು ಇದ್ದದ್ದು ನನಗೆ ಕಾಣುತ್ತಿದೆ'' ಎಂದು ಮಂದಹಾಸ ಮಾಡುತ್ತ ಕನ್ಯೆಯು ಹೇಳಿದಳು.

**ಪರ್ವತ:-** ಕನ್ಯೆಯೆ, ಅವನ ಕೈಯಲ್ಲಿ ಏನು ಇದೆ ? ಮತ್ತು ಅವನ ವಕ್ಷಸ್ಥಲದಲ್ಲಿ ನಿನಗೆ ಏನು ಕಾಣುತ್ತಲಿದೆ ?

**ಶ್ರೀಮತಿ:-** ಆ ತರುಣನ ಎದೆಯಲ್ಲಿ ಹಾರವು, ಕೈಯಲ್ಲಿ ಬಿಲ್ಲು ಬಾಣಗಳಿರುತ್ತವೆ.

ಈ ಮಾತನ್ನು ಕೇಳಿ ಆ ಇಬ್ಬರೂ ಮುನಿವರರು. ''ಇದೇನು? ಯಾರದು ಈ ಮಾಯೆ? ಎಂದು ಚಿಂತಿಸತೊಡಗಿದರು. ''ಮಹಾಮಾಯಾವಿಯು ಮಹಾಕಳ್ಳನು ಆದ ಆ ವಿಷ್ಣುವೇ ಈ ಕನ್ಯೆಯನ್ನು ಅಪಹರಿಸಲಿಕ್ಕೆ ಬಂದಿರುತ್ತಾನೆ. ನನ್ನ ಮುಖವು ಕೋತಿಯ ಮುಖದಂತೆ ಏಕೆ ಆಯಿತು? ಎಂದು ನಾರದರು ಚಿಂತಾಕ್ರಾಂತರಾದರು. ಅದರಂತೆ ಪರ್ವತ ಮುನಿಯು ಕೂಡ 'ನನ್ನ ಮುಖವು ಒಮ್ಮೆಲೆ ವಾನರ ಮುಖವು ಹೇಗೆ ಆಯಿತು. ಎಂದು ಯೋಚಿಸತೊಡಗಿದರು.

ಆಗ ಅಂಬರೀಷ ಮಹಾರಾಜನು ಅವರಿಬ್ಬರಿಗೂ ನಮಸ್ಕರಿಸಿ. ''ಮುನಿಗಳೆ, ಬುದ್ಧಿ ವಿಮೋಹದಿಂದ ಇದೇಕೆ ನೀವು ವಿಪರೀತವನ್ನು ಮಾಡಿಕೊಂಡಿರುತ್ತೀರಿ? ಇನ್ನು ಮೇಲೆ ನೀವು ಕನ್ಯಾಪೇಕ್ಷೆಯನ್ನು ಬಿಟ್ಟು ಬಿಡಿ'' ಎಂದು ಹೇಳಿದನು.

**ಪರ್ವತ ನಾರದರು :-** ''ಮಹಾರಾಜನೆ, ನೀನೆ ಭ್ರಾಂತಿಯುಕ್ತನಾಗಿರುವೆ. ನಾವಿಬ್ಬರೂ ಖಂಡಿತವಾಗಿಯೂ ಭ್ರಾಂತರಲ್ಲ. ಈ ನಿನ್ನ ಮಗಳು ಕೂಡಲೆ ನಮ್ಮಿಬ್ಬರಲ್ಲಿ ಒಬ್ಬರನ್ನು ವರಿಸಲಿ.'' ಎಂದು ಹೇಳಿದರು. ಅನಂತರ ಕನ್ಯಾಮಣಿಯಾದ ಶ್ರೀಮತಿಯು ತನ್ನ ಇಷ್ಟದೇವರಿಗೆ ನಮಸ್ಕಾರ ಮಾಡಿ ಪರ್ವತ ಹಾಗೂ ನಾರದ ಮುನಿಗಳ ಮಧ್ಯದಲ್ಲಿ ನಿಂತಿರುವ ಸರ್ವಾಭರಣಗಳಿಂದ ಭೂಷಿತನಾದ, ಸ್ಫುರದ್ರೂಪಿಯಾದ ತರುಣನಿಗೆ ತನ್ನ ಸ್ವಯಂವರ ಮಾಲೆಯನ್ನು ಅರ್ಪಿಸಿದಳು. ಅನಂತರ ಕನ್ಯಾಮಣಿಯಾದ ಶ್ರೀಮತಿಯು ಅಲ್ಲಿಯೇ ಅಂತರ್ಧಾನವಾದಳು. ಯಾರ ಕಣ್ಣಿಗೂ ಕಾಣಲಿಲ್ಲ. ಆಗ ಎಲ್ಲ ಕಡೆಗೂ ಇದೇನು ವಿಚಿತ್ರ? ಎಂತಹ ಆಶ್ಚರ್ಯ! ಎಂಬ ಧ್ವನಿಯು ವ್ಯಾಪಿಸಿತು.

ಪುರುಷೋತ್ತಮನಾದ ಮಹಾವಿಷ್ಣುವು ಕುಮಾರಿ ರತ್ನಳಾದ ಶ್ರೀಮತಿಯು ಪರ್ವತ ನಾರದರ ಮಧ್ಯದಲ್ಲಿ ತಾನು ನಿಂತುಕೊಂಡಾಗ ಸ್ವಯಂವರಮಾಲೆಯನ್ನು ತನ್ನ ಕೊರಳಿಗೇ ಹಾಕಿದಕೂಡಲೇ ಅವಳನ್ನು ಕರೆದುಕೊಂಡು ತನ್ನ ವೈಕುಂಠಲೋಕಕ್ಕೆ ಹೋದನು. ಹಿಂದೆ ಆ ಶ್ರೀಮತಿಯು ಶ್ರೀಹರಿಯನ್ನೇ ಪತಿಯನ್ನಾಗಿ ಪಡೆಯಬೇಕೆಂದು ದೀರ್ಘಕಾಲ ತಪಸ್ಸನ್ನು ಮಾಡಿದ್ದಳು. ಸಾಕ್ಷಾತ್, ಶ್ರೀದೇವಿಯೇ ಈಗ ಶ್ರೀಮತಿಯಾಗಿ ಜನಿಸಿ ಬಂದಿದ್ದಳು. ಅಂತೆಯೇ ಆ ಶ್ರೀದೇವಿಯು ಈಗ ಅದೇ ಶ್ರೀಹರಿಯನ್ನು ಆರಿಸಿ ವರಿಸಿ ಮದುವೆಯಾಗಿ ಅವನ ಅರಸಿಯಾಗಿ ಅವನೊಡನೆ ವೈಕುಂಠಲೋಕಕ್ಕೆ ತೆರಳಿದಳು.

ಇದರಿಂದ ನಾರದ ಪರ್ವತ ಇಬ್ಬರಿಗೂ ಬಹಳ ದುಃಖವಾಯಿತು. ಅವರಿಬ್ಬರೂ ವೈಕುಂಠಕ್ಕೆ ಧಾವಿಸಿದರು. ಅವರಿಬ್ಬರು ಬರುವುದನ್ನು ಕಂಡು ವಿಷ್ಣುವು ಶ್ರೀಮತಿಗೆ ಮರೆಯಾಗಲು ಹೇಳಿದನು. ಅವನ ಆಜ್ಞೆಯಂತೆ ಶ್ರೀಮತಿಯು ನಗುತ್ತ ಮರೆಯಾದಳು. ಆಗ ನಾರದರು ಧಾವಿಸಿ ಬಂದು ಸಿಟ್ಟಿನಿಂದ ''ಗೋವಿಂದ ನೀನು ನಮ್ಮಿಬ್ಬರಿಗೂ ಮೋಸಪಡಿಸಿ ಆ ಕನ್ಯೆಯನ್ನು ನೀನೇ ಕರೆದುಕೊಂಡು ಬಂದೆ. ನೀನು ಕನ್ಯಾಪಹಾರಕ ನಾಗಿರುವೆ.'' ಎಂದು ನುಡಿದರು.

ನಾರದರ ಮಾತುಗಳನ್ನು ಕೇಳಿ ಹರಿಯು ಎರಡೂ ಕೈಗಳಿಂದ ತನ್ನ ಕಿವಿಯನ್ನು ಮುಚ್ಚಿಕೊಂಡನು. 'ನಾರದರೆ, ನೀವು ಏನು ಹೇಳುತ್ತಿರುವಿರಿ? ನಿಮ್ಮ ಮುನಿವೃತ್ತಿ ಏನು? ಅದಕ್ಕೆ ವಿರುದ್ಧವಾಗಿ ಈಗಿನ ನಿಮ್ಮ ಕಾಮುಕತೆ ಏನು?' ಎಂದು ಕೇಳಿದನು.

ಅದನ್ನು ಕೇಳಿ ನಾರದರು, ''ವಾಸುದೇವ, ನಾನು ಪರ್ವತ ಮುನಿಗೆ ವಾನರ ಮುಖವು ಆಗಲಿ ಎಂದು ನಿನ್ನನ್ನು ವಿಜ್ಞಾಪಿಸಿದ್ದೆ. ಅದರಂತೆ ಪರ್ವತ ಮುನಿಯು ಮರ್ಕಟ ಮುಖನಾದದ್ದೇನೋ ಸರಿ. ಆದರೆ ನನಗೆ ಗೋಲಾಂಗೂಲ ಹಸುವಿನ ಬಾಲದಂತೆ ಬಾಲವುಳ್ಳ ಒಂದು ಜಾತಿಯ ಕೋತಿ ಗೋಲಾಂಗೂಲದಂತೆ ಮುಖವು ಏಕೆ ಆಯಿತು? ಗೋಲಾಂಗೂಲವೆಂದರೆ ಹಸುವಿನ ಬಾಲದಂತೆ ಬಾಲವುಳ್ಳ ಒಂದು ವಾನರವಷ್ಟೆ! ನನ್ನ ಮುಖವೇಕೆ ಅಕಸ್ಮಾತ್ತಾಗಿ ಕಪಿ ಮುಖವಾಗಿ ನಾನು ಮರ್ಕಟ ಮನುಷ್ಯನಾಗಿ ಕಾಣುವಂತೆ ಏಕೆ ಆಯಿತು?'' ಎಂದು ಹರಿಯನ್ನು ಕೇಳಿದರು.

**ಶ್ರೀಹರಿ :-** ನಾರದರೆ, ನೀವು ಪರ್ವತನು ಪ್ಲವಗ ಮುಖನಾಗಲಿ ಎಂದು ಕೇಳಿದ್ದಿರಿ. ಅರ್ಥಾತ್ ಕಪಿ ಮುಖನಾಗಲಿ ಎಂದು ಕೇಳಿದ್ದಿರಿ. ಅದರಂತೆ ಅವನೂ ಕೂಡ ''ನಾರದರು ಗೋಲಾಂಗೂಲ ಎಂಬ ವಾನರ ವದನರಾಗಲಿ'' ಎಂದು ಕೇಳಿಕೊಂಡಿದ್ದ. ಅವನ ಬೇಡಿಕೆಯಂತೆ ನೀವು ಗೋಲಾಂಗೂಲ ಮುಖದವರಾಗಿರುತ್ತೀರಿ.

ಅನಂತರ ಕೆಲವು ನಿಮಿಷಗಳ ಬಳಿಕ ಪರ್ವತನೂ ಬಂದು ''ನನ್ನ ಮುಖವೇಕೆ ಕೋತಿ ಮುಖದಂತೆ ಮಾರ್ಪಾಟಾಗಿದೆ'' ಎಂದು ಪ್ರಶ್ನಿಸಿದ. ಅದಕ್ಕೆ ಶ್ರೀ ಹರಿಯು ''ನಾರದರು ಅಪೇಕ್ಷೆಪಟ್ಟಿದ್ದರಿಂದ ನೀನು ವಾನರ ವದನನಾಗಿರುವೆ'' ಎಂದು ಹೇಳಿದನು. ಅಲ್ಲಿಯೇ ಇದ್ದ ಅವರಿಬ್ಬರನ್ನು ಕುರಿತು, ''ಮುನಿಗಳೆ, ನಾನು ನಿಮಗೆ ಪ್ರಿಯವನ್ನೇ ಮಾಡಿದ್ದೇನೆ. ನಾನು ಸತ್ಯವನ್ನೇ ಹೇಳುತ್ತಿದ್ದೇನೆ'' ಎಂದು ಶ್ರೀಹರಿ ನುಡಿದನು.

**ನಾರದರು:-** ಹಾಗಾದರೆ ನಮ್ಮಿಬ್ಬರ ಮಧ್ಯದಲ್ಲಿ ಧನುಷ್ಪಾಣಿಯಾಗಿ ನಿಂತುಕೊಂಡ ಪದ್ಮಹೃದಯನೂ, ಪದ್ಮನಾಭನೂ, ಕಾಂತಿವಿಶಿಷ್ಟನೂ, ಸುಂದರವಾದ ಮೂಗು ಮುಖಗಳು ಉಳ್ಳವನೂ ಆದ ಆ ಮನುಷ್ಯನು ಯಾರು? ಬಿಲ್ಲು ಬಾಣ ಹಿಡಿದುಕೊಂಡು ಬಂದ ಅವನೇ ಅಲ್ಲವೆ ಆ ಕನ್ಯೆಯನ್ನು ಕದ್ದು ಒಯ್ದವನು ?

**ವಾಸುದೇವ:-** ಈ ದೇಶದಲ್ಲಿ ಅನೇಕ ಮಾಯಾವಿಗಳಿರುತ್ತಾರೆ. ಆ ಸ್ವಯಂವರ ಮಂಟಪದಲ್ಲಿ ನಮ್ಮಿಬ್ಬರ ಎದುರು ಬಂದು ನಿಂತ ಶ್ರೀಮತಿಯು ಮುಂದೆ ಕಾಣಲಿಲ್ಲ. ಅಲ್ಲಿ ಏನು ಮಾಯಾಮೋಸ ನಡೆಯಿತು? ಯಾರಿಗೆ ಗೊತ್ತು! ನಾನಂತು ಚತುರ್ಬಾಹು, ಚಕ್ರಪಾಣಿ ಎಂಬುದು ನಿಮಗೆ ತಿಳಿದೇ ಇದೆ. ನಿಮ್ಮಿಬ್ಬರ ನಡುವೆ ಬಂದು ನಿಂತ ಆ ಹದಿನಾರುವರ್ಷದ ತರುಣ ಎರಡು ಕೈಗಳುಳ್ಳವನು. ಮೇಲಾಗಿ ಅವನ ಕೈಯಲ್ಲಿ ಇದ್ದುದು ಚಕ್ರವಲ್ಲ. ಕೇವಲ ಬಿಲ್ಲು ಬಾಣ. ಅದರಿಂದ ಮಧ್ಯದಲ್ಲಿ ಬಂದು ನಿಂತು ಸದ್ದಿಲ್ಲದೆ ಆ ಮುದ್ದು ಹುಡುಗಿಯನ್ನು ಕದ್ದು ಒಯ್ದುವ ನಾನು ಅಲ್ಲ ಎಂಬುದು ನಿಮಗೆ ತಿಳಿದಿದೆಯಲ್ಲವೆ? ನಾನು ಅವಳನ್ನು ಅಪೇಕ್ಷಿಸಲೇ ಇಲ್ಲ.

**ಪರ್ವತ ನಾರದರು:-** ಸ್ವಾಮಿ, ಇದರಲ್ಲಿ ನಿನ್ನದೇನು ತಪ್ಪು? ಇದೆಲ್ಲವೂ ಆ ಅಂಬರೀಷ ಮಹಾರಾಜನದೇ ದುರ್ಬುದ್ಧಿಯ ದೌರಾತ್ಮ್ಯ. ಅವನೇ ಮಾಯೆಯಿಂದ

ಆ ಹುಡುಗಿ ಕಣ್ಣಿಗೆ ಕಾಣದಂತೆ ಮಾಡಿದ್ದಾನೆ.'' ಹೀಗೆ ಹೇಳಿ ಅವರಿಬ್ಬರು ಅವಸರದಿಂದ ವಿಷ್ಣು ಲೋಕದಿಂದ ಹೊರಟು ಭೂಲೋಕಕ್ಕೆ ಇಳಿದು ಅಂಬರೀಷ ಮಹೀಪಾಲನ ರಾಜಭವನಕ್ಕೆ ಬಂದರು. ಮತ್ತು ಕೋಪಾಟೋಪದಿಂದ ಆ ರಾಜನನ್ನು ಕುರಿತು ಕೋಪದಿಂದಲೇ ಮಾತನಾಡಿದರು.

**ಪರ್ವತ ನಾರದರು:-** ಮಹಾರಾಜ, ನಮ್ಮಿಬ್ಬರಿಗೂ ನೀನು 'ನಾಳೆ ಬನ್ನಿರಿ ಕನ್ಯೆಯನ್ನು ಕೊಡುತ್ತೇನೆ' ಎಂದು ಹೇಳಿದ್ದಿ. ಅದಕ್ಕಾಗಿ ಅಲ್ಲವೇ ನಾವಿಬ್ಬರು ನಿನ್ನಲ್ಲಿ ಬಂದದ್ದು. ನಮ್ಮನ್ನು ಯಾವ ಕಾರಣದಿಂದ ಆಹ್ವಾನಿಸಿದೆಯೋ ಆ ಉದ್ದೇಶವನ್ನು ಬಿಟ್ಟು ನಿನ್ನ ಮಗಳಾದ ಶ್ರೀಮತಿಯನ್ನು ಮಾಯೆಯಿಂದ ಬೇರೊಬ್ಬ ತರುಣನಿಗೆ ಮದುವೆ ಮಾಡಿಕೊಟ್ಟೆ. ಆ ಕಾರಣದಿಂದ ನೀನು ಅಜ್ಞಾನ ರೂಪವಾದ ತಮಸ್ಸಿನಿಂದ ಆವೃತನಾಗು. ನಿನ್ನ ಯಥಾರ್ಥ ಜ್ಞಾನವು ನಶಿಸಿ ಹೋಗಲಿ.''

ಹೀಗೆ ಇಬ್ಬರೂ ಮಹಾ ಮುನಿಗಳು ಕೂಡಿ ಮಹಾರಾಜನಿಗೆ ಶಾಪವನ್ನು ಕೊಟ್ಟ ಕೂಡಲೆ ಮಹಾರಾಜನನ್ನು ಆವರಿಸಲು ತಮೋ ರಾಶಿಯೇ ಎದ್ದಿತು. ಕೂಡಲೇ ಅವನನ್ನು ರಕ್ಷಿಸಲಿಕ್ಕಾಗಿ ವಿಷ್ಣುವಿನ ಸುದರ್ಶನಚಕ್ರವು ಅಲ್ಲಿಯೆ ಆಗಲೇ ಪ್ರಾದುರ್ಭೂತವಾಯಿತು. ವಿಷ್ಣುಚಕ್ರದಿಂದ ಉಪದ್ರುತವಾದ ಆ ತಮೋರಾಶಿಯು ಆ ಇಬ್ಬರು ಋಷಿಗಳ ಮೇಲೆಯೇ ಆವರಿಸಿ ಬಂದಿತು. ಅದರಿಂದ ಆ ಮಹಾಮುನಿಗಳೀರ್ವರ ಸರ್ವಾಂಗಗಳೂ ಸಂತ್ರಸ್ತವಾದವು. ಆ ತಮಸ್ತೋಮಕ್ಕೆ ಹೆದರಿ ಕಂಗಾಲಾಗಿ ಅವರಿಬ್ಬರು ಓಡತೊಡಗಿದರು. ಇವರನ್ನು ಬೆನ್ನು ಬಿಡದ ತಮೋರಾಶಿಯನ್ನು ನಾಶಪಡಿಸುಲಿಕ್ಕಾಗಿ ವಿಷ್ಣುಚಕ್ರವು ಬರುತ್ತಿರುವುದನ್ನು ನೋಡಿ ಲೋಕಾಲೋಕ ಪರ್ವತದ ಕಡೆಗೆ ರಭಸದಿಂದ ಓಟಕಿತ್ತಿದರು. ಶ್ರೀಮತಿ ಎಂಬ ಕನ್ಯೆಯನ್ನು ಅಪೇಕ್ಷಿಸಿದ್ದಕ್ಕೆ ನಮಗೆ ಒಳ್ಳೆಪ್ರಾಯಶ್ಚಿತ್ತವಾಯಿತೆಂದು ತಿಳಿದು 'ನಾರಾಯಣ ಗೋವಿಂದ ರಕ್ಷಿಸು ರಕ್ಷಿಸು' ಎಂದು ಒದರುತ್ತ ಹರಿಯನ್ನೇ ಕೂಗುತ್ತ ಕರೆಯುತ್ತ ವಿಷ್ಣುಲೋಕದವರೆಗೆ ಬಂದರು. ''ವಸುದೇವನ ಮಗನಾದ ಕಮಲದಂತೆ ಕಣ್ಣುಳ್ಳ ಜನಾರ್ದನನೆ, ನೀನು ನಮ್ಮನ್ನು ರಕ್ಷಿಸು. ಅನಾಥರಿಗೆ ನೀನೆ ನಾಥ.'' ಎಂದು ಮೊರೆ ಇಟ್ಟು ಭಗವಂತನಿಗೆ ಶರಣು ಹೋದರು. ಆಗ ಶ್ರೀಮನ್ನಾರಾಯಣನು. ''ಅಂಬರೀಷ ಹಾಗೂ ಈ ಪರ್ವತ ನಾರದರು ಮೂವರೂ ನನ್ನ ಭಕ್ತರು. ಇವರಾರಿಗೂ ತೊಂದರೆಯಾಗದಂತೆ ಮೂವರನ್ನು ಸುರಕ್ಷಿತವಾಗಿ ಕಾಪಾಡುವದು ನನ್ನ ಕರ್ತವ್ಯ'' ಎಂದು ಯೋಚಿಸಿ ತನ್ನ ಚಕ್ರವನ್ನು ಉಪಸಂಹಾರ ಮಾಡಿಕೊಂಡನು. ಮತ್ತು ಆ ತಮೋರಾಶಿಯನ್ನು ತನ್ನ ಹತ್ತಿರ ಕರೆದು ಹೇಳಿದನು.

**ಶ್ರೀಮನ್ನಾರಾಯಣ:-** ಋಷಿಶಾಪವು ನಿರರ್ಥಕವಾಗಬಾರದು. ಅದರಂತೆ ಅಂಬರೀಷ ಮಹಾರಾಜನಿಗೆ ಅವನ ರಕ್ಷಣಾರ್ಥವಾಗಿ ನಾನು ಕೊಟ್ಟ ಸುದರ್ಶನ ಚಕ್ರದ ರಕ್ಷಣ ಕಾರ್ಯವು ನಿರ್ವಿಘ್ನವಾಗಿ ನಡೆಯಬೇಕು. ಆದುದರಿಂದ ನೀನು ಆ ಇಬ್ಬರೂ ಋಷಿಗಳನ್ನು ಬಿಟ್ಟು ತೊಲಗು. ಅಂಬರೀಷನ ಮಗನಮರಿಮಗನಿಗೆ ಪರಮ ಧಾರ್ಮಿಕನೂ ಭಾಗ್ಯಶಾಲಿಯೂ ಆದ ದಶರಥ ಎಂಬ ಸುಪ್ರಸಿದ್ಧ ರಾಜನು ಹುಟ್ಟುತ್ತಾನೆ. ಆ ದಶರಥ ಮಹಾರಾಜನ ಹಿರಿಯ ಮಗನಾಗಿ ನಾನು ಅವತಾರ ಮಾಡುತ್ತೇನೆ. ನನ್ನ

ಬಲತೋಳು ಭರತನೆಂದೂ ಎಡತೋಳು ಶತ್ರುಘ್ನನೆಂದೂ, ಆದಿಶೇಷನು ಲಕ್ಷಣನೆಂದೂ ಆ ದಶರಥನಿಗೆ ಮಕ್ಕಳಾಗಿ ನನಗೆ ತಮ್ಮಂದಿರಾಗಿ ಹುಟ್ಟುತ್ತಾರೆ. ಆಗ ನೀನು ನನ್ನ ಬಳಿಗೆ ಬಾ. ಈಗ ನೀನು ಆ ರಾಜನನ್ನೂ, ಈ ಋಷಿಗಳನ್ನೂ ಬಿಟ್ಟು ತೊಲಗಿ ಹೋಗು.'' ಹೀಗೆ ಹರಿಯ ಆಜ್ಞೆಯಿಂದ ಅವರೆಲ್ಲರನ್ನು ಆ ತಮೋರಾಶಿಯೂ ಬಿಟ್ಟು ಹೋಯಿತು. ವಿಷ್ಣು ಚಕ್ರವೂ ಸ್ವಸ್ಥಾನಕ್ಕೆ ತೆರಳಿತು.

ಅನಂತರ ಭಯ ಬಾಧೆಯಿಂದ ಮುಕ್ತರಾಗಿ ಆ ಇಬ್ಬರು ಮುನಿವರ್ಯರು ಭಗವಂತನ ಪಾದಾರವಿಂದಗಳಿಗೆ ಮಣಿದು ಅಲ್ಲಿಂದ ಪ್ರಸ್ಥಾನಮಾಡಿದರು. ಅವರಿಬ್ಬರು ಒಬ್ಬರಿಗೊಬ್ಬರು ಮಾತನಾಡಿ ತಮ್ಮ ತಮ್ಮಲ್ಲಿಯೆ ಪ್ರತಿಜ್ಞೆ ಮಾಡಿಕೊಂಡರು. 'ನಾವು ಇನ್ನು ಮುಂದೆ ಬದುಕಿ ಇರುವವರೆಗೆ ಕನ್ಯೆಯನ್ನು ಬಯಸುವದಿಲ್ಲ. ಮದುವೆಯನ್ನು ಮಾಡಿಕೊಳ್ಳುವದಿಲ್ಲ. ಎಂದು ನಿರ್ಧರಿಸಿದರು. ಮೊದಲಿನಂತೆ ಶುದ್ಧಾಂತಃಕರಣವಾಗಿ ಯೋಗಾಭ್ಯಾಸ, ಧ್ಯಾನ, ಭಗವದ್ಗುಣಗಾನ, ತಪೋನುಷ್ಠಾನಗಳಲ್ಲಿ ತತ್ಪರರಾದರು. ಇತ್ತ ಅಂಬರೀಷ ಮಹಾರಾಜನಾದರೂ. ನ್ಯಾಯದಿಂದ ಭೂಮಿಯನ್ನು ರಕ್ಷಿಸಿದನು. ನೀತಿ, ಒಳ್ಳೆಯ ರೀತಿಯಿಂದ ಅಖಂಡ ಭೂಮಂಡಲದ ಶಾಸನವನ್ನುಮಾಡಿದನು. ಯಾವತ್‌ಜನ್ಮ ಅವನು ಮಾಡಿದ ಹಾಗೂ ತನ್ನ ಪ್ರಜೆಗಳಿಂದ ಮಾಡಿಸಿದ ಧರ್ಮಕಾರ್ಯ ಹಾಗೂ ಮಹಾವಿಷ್ಣುವಿನ ಸಂತತ ಆರಾಧನೆ, ಚಿರಂತರ ಉಪವಾಸಗಳ ಪುಣ್ಯದಿಂದ ಅವನು ಬದುಕಿ ಇರುವವರೆಗೂ ಶಾಂತಿಸಂತಸದಿಂದ ಇದ್ದು ಕೊನೆಗೆ ಮರಣಾನಂತರ ವಿಷ್ಣು ಲೋಕವನ್ನು ಹೊಂದಿದನು. ಅವನು ತನ್ನ ರಾಜಾಜ್ಞೆಯ ಪ್ರಭಾವದಿಂದ ಮಾಡಿ ಮಾಡಿಸಿದ ಧರ್ಮಕರ್ಮಾನುಷ್ಠಾನಗಳಿಂದ ಅವನ ಪ್ರಜೆಗಳೆಲ್ಲರೂ ವಿಷ್ಣುಲೋಕವನ್ನು ಕುರಿತು ಪ್ರಯಾಣ ಮಾಡಿದರು.

ಅಂಬರೀಷ, ಪರ್ವತ, ನಾರದರ ಗೌರವಕ್ಕೋಸ್ಕರ ಆ ಪರಮಾತ್ಮನು ದಶರಥ ಮಹಾರಾಜನ ಪುತ್ರನಾಗಿ 'ಶ್ರೀರಾಮ' ಎಂಬ ಹೆಸರಿನಿಂದ ಅವತಾರಮಾಡಿದನು. ಆದರೆ ಅವನಿಗೆ ಆತ್ಮಜ್ಞಾನವು ಸರಿಯಾಗಿ ಇರಲಿಲ್ಲ. ಭೃಗುವೆ ಮೊದಲಾದ ಮಹರ್ಷಿಗಳು ಬಂದು ವಿದ್ವಾಂಸರಾದವರು ಮಾಯೆಯನ್ನು ಪ್ರಯೋಗಿಸಬಾರದು. ಪರ್ವತ ಹಾಗೂ ನಾರದರು ವಿಷ್ಣುವು ಶ್ರೀಮತಿಯನ್ನು ಪಾಣಿಗ್ರಹಣಮಾಡಿದ್ದಾನೆ. ಎಂಬ ಸಿಟ್ಟಿನಿಂದ ಮಾಯೆಯನ್ನು ನಿರ್ಮಾಣ ಮಾಡಿದುದು ತಪ್ಪು ಎಂದು ಹೇಳಿದರು. ಬಹುಕಾಲದ ಅನಂತರ ಆ ಮಾಯೆಯನ್ನು ನಿವಾರಿಸಿಗೊಳ್ಳದ ಹರಿಯನ್ನು ಬಿಟ್ಟು ಅವರೀರ್ವರು ರುದ್ರ ಭಕ್ತರಾದರು. ಈ ಅಂಬರೀಷ ಮಾಹಾತ್ಮ್ಯವನ್ನು ಋಷಿಗಳೆ, ನಾನು ನಿಮಗೆ ಹೇಳಿದ್ದೇನೆ. ಇದನ್ನು ಹೇಳಿದವರು ಕೇಳಿದವರು ಮಾಯಾಬಂಧನದಿಂದ ಮುಕ್ತರಾಗಿ ರುದ್ರಲೋಕವನ್ನು ಹೊಂದುತ್ತಾರೆ.

*ಲಿಂಗ ಮಹಾಪುರಾಣ ಉತ್ತರಭಾಗದ*
*ಶ್ರೀಮತಿ ಆಖ್ಯಾನವೆಂಬ ಐದನೆಯ ಅಧ್ಯಾಯ ಮುಗಿದುದ*

—o—

## ಅಧ್ಯಾಯ - ೬

**ಶೌನಕಾದಿ ಋಷಿಗಳು :-** ಲೋಮಹರ್ಷಣ ಸೂತರೆ, ದೇವೋತ್ತಮನು. ಸರ್ವಜ್ಞನು ಆದ ಆ ಶ್ರೀಹರಿಯ ಮಾಯಾವಿತನವನ್ನು ನಿಮ್ಮಿಂದ ನಾವು ಕೇಳಿದೆವು. ಮಹಾ ಪ್ರಭುವಾದ ಆ ಮಹಾವಿಷ್ಣುವಿನಿಂದ ಜ್ಯೇಷ್ಠಾದೇವಿಯ ಉತ್ಪತ್ತಿಯು ಹೇಗೆ ಆಯಿತು ? ಹೇಳಿರಿ.

**ಲೋಮಹರ್ಷಣ :-** ಹುಟ್ಟು ಸಾವು ಇಲ್ಲದಿರುವ ಆ ಶ್ರೀಮನ್ನಾರಾಯಣನೇ ಈ ಜಗತ್ತಿನ ಸೃಷ್ಟಿಕರ್ತ. ಈ ಪ್ರಪಂಚವನ್ನು ಎರಡುಭಾಗವಾಗಿ ಮಾಡಿದ್ದಾನೆ. ಎಲ್ಲ ವೇದಗಳನ್ನು, ಸನಾತನ ಧರ್ಮಗಳನ್ನು, ಆ ಮಹಾಲಕ್ಷ್ಮಿಯನ್ನು ಒಂದು ಭಾಗವನ್ನಾಗಿ ಮಾಡಿದ್ದಾನೆ. ಆ ಲಕ್ಷ್ಮೀಗಿಂತ ಹಿರಿಯಳಾದ ಅಲಕ್ಷ್ಮೀ ಅಥವಾ ಅಶುಭಳಾದ ಜ್ಯೇಷ್ಠಾಲಕ್ಷ್ಮೀಯನ್ನೂ, ವೇದಬಾಹ್ಯರಾದ ನಾಸ್ತಿಕ ನರಾಧಮರವನ್ನೂ ಅಧರ್ಮವನ್ನೂ ಇನ್ನೊಂದು ಭಾಗಮಾಡಿದನು. ಮೊದಲು ಲಕ್ಷ್ಮಿಯನ್ನು ಸೃಷ್ಟಿಮಾಡಿ ಅನಂತರದಲ್ಲಿ ಪದ್ಮಾ ಎಂಬ ಹೆಸರಿನ ಮಹಾಲಕ್ಷ್ಮಿಯನ್ನು ಸೃಷ್ಟಿ ಮಾಡಿದನು. ದೇವದಾನವರು ಕೂಡಿ ಅಮೃತಮಂಥನಮಾಡುವಾಗ ವಿಷ್ಣುವು ಉತ್ಪನ್ನವಾದ ಅನಂತರ ಅಶುಭಕಾರಕಳಾದ ಆ ಅಲಕ್ಷ್ಮಿಯು ಅರ್ಥಾತ್ ಜ್ಯೇಷ್ಠಾದೇವಿಯು ಉತ್ಪನ್ನಳಾದಳು. ಲಕ್ಷ್ಮೀಗಿಂತ ಮೊದಲೇ ಅವಳು ಹುಟ್ಟಿದ್ದರಿಂದ ಜ್ಯೇಷ್ಠಲಕ್ಷ್ಮೀ ಎಂದು ಅವಳಿಗೆ ಹೆಸರು ಬಂದಿತು. ಅನಂತರ ಸ್ವಯಂಲಕ್ಷ್ಮೀದೇವಿಯು ಹುಟ್ಟಿ ಪದ್ಮನಯನನಾದ ಶ್ರೀಹರಿಯನ್ನು ವರಿಸಿ **'ಪದ್ಮಾ'** ಎಂದು ಹೆಸರಾದಳು.

ದುಃಸ್ಸಹ ಎಂಬ ಬ್ರಾಹ್ಮಣ ಋಷಿಯು ಆ ಅಶುಭೆ ಎನಿಸಿದ ಜ್ಯೇಷ್ಠಾಲಕ್ಷ್ಮೀಯನ್ನು ವಿವಾಹವಾದನು. ಸರ್ವರನ್ನು ಪ್ರೀತಿಪಡಿಸುವ ಆ ದುಃಸಹ ಋಷಿಯು ತನ್ನ ಮಡದಿಯಾದ ಜ್ಯೇಷ್ಠಾದೇವಿಯೊಡನೆ ಹರಿಹರರ ಪುಣ್ಯಕ್ಷೇತ್ರಗಳಲ್ಲಿ ಸಂಚಾರಮಾಡುತ್ತಿದ್ದನು. ಆದರೆ ಅಲ್ಲಿ ನಡೆಯುವ ವೇದಘೋಷ ಹೋಮಧೂಮ, ಹಾಗೂ ಭಸ್ಮಲೇಪಿತವಾದ ಭಕ್ತಬ್ರಾಹ್ಮಣರು ಇವರನ್ನೆಲ್ಲ ನೋಡಿ, ಅವರ ವೇದಘೋಷದ ಧ್ವನಿಯನ್ನುಕೇಳಿ ಜ್ಯೇಷ್ಠಾದೇವಿಯು ಭಯಭ್ರಾಂತಳಾಗುತ್ತಿದ್ದಳು. ಹರಿನಾಮ ಹರನಾಮ ವೇದಮಂತ್ರಗಳ ನಾದನಿನಾದಗಳು ಕಿವಿಗೆ ಬಿದ್ದಕೂಡಲೆ ಅವಳು ಉದ್ವಿಗ್ನಳಾಗಿ ತನ್ನ ಎರಡು ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಳ್ಳುತ್ತಿದ್ದಳು. ಕ್ಷೀರಸಾಗರಮಂಥನದಿಂದ ಮೊದಲು ಉಲ್ಬಣವಾದ ಕಾಲಕೂಟ ವಿಷ್ಣುವು ಹುಟ್ಟಿದ ಬಳಿಕ ಅಮೃತವು ಉತ್ಪನ್ನವಾಗುವ ಮೊದಲೇ ಮಧ್ಯದಲ್ಲಿ ಈ ಜ್ಯೇಷ್ಠಾದೇವಿಯು ಹುಟ್ಟಿದ್ದರಿಂದ ಅವಳಿಗೆ ಕಾಲಕೂಟದ ಘೋರ ಸ್ವಭಾವವೇ ಬಂದಿತ್ತು. ದುಃಸ್ಸಹ ಮುನಿಯು ಸಂಚಾರಮಾಡುವ ಪುಣ್ಯಕ್ಷೇತ್ರಗಳೆಲ್ಲೆಲ್ಲ ನಡೆಯುತ್ತಿರುವ ಜಪತಪಯಜ್ಞಯಾಗಗಳನ್ನು ಕಂಡು ವೇದಧ್ವನಿಯನ್ನು ಕೇಳಿ ಅವಳು ಜಿಗುಪ್ಸೆಗೊಳ್ಳುತ್ತಿದ್ದಳು. ಪತಿಯೊಡನೆ ಹೋದಲ್ಲೆಲ್ಲ ನಡೆಯುವ ಅಧ್ಯಯನ ಅಧ್ಯಾಪನ

ಪುಣ್ಯಕಾರ್ಯಗಳನ್ನು ನೋಡಿ ಅಸಹ್ಯ ಪಟ್ಟುಕೊಳ್ಳುವ ಆ ತನ್ನ ಕಾಲಕೂಟ ಸಹೋದರಿಯಾದ ಮಡದಿಯೊಡನೆ ಒಡಗೂಡಿ ತಾನು ಇನ್ನು ತಪಸ್ಸುಮಾಡುವದಿಲ್ಲ ಎಂದು ಆ ಮಹಾಮುನಿಯು ಪ್ರತಿಜ್ಞೆ ಮಾಡಿದನು. ಪರಮಶುದ್ಧ ಸಾತ್ವಿಕ ಹೃದಯದ ಆ ದುಃಸ್ಸಹ ಮಹರ್ಷಿಯು ಅಲ್ಲಿಗೆ ಆಕಸ್ಮಿಕವಾಗಿ ಬರುತ್ತಿರುವ ಮಾರ್ಕಂಡೇಯ ಮಹರ್ಷಿಗಳನ್ನು ನೋಡಿದನು. ಅವರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಕೈಮುಗಿದು ಕೇಳಿಕೊಂಡನು.

**ದುಸ್ಸಹ** :- ಪೂಜ್ಯರೇ, ಈ ನನ್ನ ಹೆಂಡತಿಯಾದ ಜ್ಯೇಷ್ಠಾದೇವಿಯು ನನಗಾಗಿ ನಿಲ್ಲುವದಿಲ್ಲ. ಮನಬಂದವರ ಮನೆಗೆ ಹೋಗುತ್ತಾಳೆ. ನಾನು ಈಗೇನು ಮಾಡಲಿ? ಇವಳನ್ನು ಕಟ್ಟಿಕೊಂಡು ನಾನು ಎಲ್ಲಿಗೆ ಹೋಗಲಿ? ಎಲ್ಲಿ ಹೋಗದೆ ಇರಲಿ? ನೀವೇ ಹೇಳಿರಿ. ಇವಳು ಏನಾದರೂ ನಾನಿದ್ದಲ್ಲಿ ಇರುವದಿಲ್ಲ.

**ಮಾರ್ಕಂಡೇಯ** :- ದುಃಸ್ಸಹ ಮುನಿಯೆ ಕೇಳು. ನಿನ್ನ ಮಡದಿಯಾದ ಈ ಜ್ಯೇಷ್ಠೆಯು ಅಮಂಗಳಯುಕ್ತಳು, ಅಕೀರ್ತಿಕರಳು, ಅಲಕ್ಷ್ಮೀಸ್ವರೂಪಳೂ ಆಗಿದ್ದಾಳೆ. ವೇದಮಾರ್ಗಾನುಸಾರಿಗಳಾದ ನಾರಾಯಣನ ಭಕ್ತರು, ಭಸ್ಮಧಾರಿಗಳಾದ ಶಿವಭಕ್ತರು ಎಲ್ಲಿ ಇರುವರೋ ಅಲ್ಲಿ ಇವಳು ಪ್ರವೇಶಿಸುವದಿಲ್ಲ. ನಾರಾಯಣ ಅಚ್ಯುತಾನಂತ ಗೋವಿಂದ ವಾಸುದೇವ ಜನಾರ್ದನ, ಎಂದಾಗಲಿ ಶಿವಾಯ ಶಂಕರಾಯ ನಮೋ ನಮಃ ಲಕ್ಷ್ಮೀಪತಯೇ ನಮಃ, ಪಾರ್ವತಿ ಪತಯೇ ನಮಃ, ನರಸಿಂಹವಾಮನ ಮಾಧವ ಶಂಕರತೇ ನಮೋನಮಃ, ಎಂದು ಯಾವ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಮೊದಲಾದವರು ಹೇಳುತ್ತಾರೋ ಅವರಿದ್ದಲ್ಲಿ ನಿನ್ನ ಮಡದಿಯು ಪ್ರವೇಶ ಮಾಡುವದಿಲ್ಲ. ನೀನು ಕೂಡ ಶ್ರೌತ ಸ್ಮಾರ್ತ ಕರ್ಮಾನುಷ್ಠಾನ ಮಾಡುವ ಭಗವದ್ಭಕ್ತರ ಮನೆಗೆ ಅವಳೊಡನೆ ಪ್ರವೇಶಮಾಡಬೇಡ. ಯಾರ ಮನೆಯಲ್ಲಿ ಅಗ್ನಿಹೋತ್ರ, ಲಿಂಗಪೂಜೆ, ವಾಸುದೇವ ಮೂರ್ತಿ, ಚಂಡಿಕಾ ವಿಗ್ರಹಗಳಿರುವವೊ ಅಂಥಮನೆಗಳಿಗೆ ನೀನು ಅವಳೊಡನೆ ಪ್ರವೇಶ ಮಾಡಬೇಡ. ಅಂಥಹ ಸ್ಥಳಗಳನ್ನು ಬಿಟ್ಟು ನೀನು ಬೇರೆ ಕಡೆಗೆ ಹೋಗು.

**ದುಸ್ಸಹ** :- ಪೂಜ್ಯರೆ, ಹಾಗಾದರೆ ನಾನು ಯಾರ ಮನೆಗೆ ಹೋಗಬೇಕು? ನಾನು ಭಯದಿಂದ ಮುಕ್ತನಾಗಿ ಯಾರ ಮನೆಗಳಿಗೆ ಪ್ರವೇಶ ಮಾಡಬೇಕು ತಿಳಿಸಿರಿ.

**ಮಾರ್ಕಂಡೆಯ** :- ಶ್ರೋತ್ರಿಯರಾದ ಬ್ರಾಹ್ಮಣರು, ಗೋವುಗಳು, ಎಲ್ಲಿ ಇಲ್ಲವೊ ಹರಿಹರರಪೂಜೆ ಎಲ್ಲಿ ನಡೆಯುವದಿಲ್ಲವೋ, ಎಲ್ಲಿ ವೇದಘೋಷ ಗುರುಪೂಜೆ, ಪಿತೃಕರ್ಮಗಳು ಇಲ್ಲವೊ ಅಂತಹ ದೇವಧರ್ಮ ದ್ರೋಹಿಗಳ ಮನೆಗೆ ನೀನು ಭಾರ್ಯಾ ಸಮೇತನಾಗಿ ಪ್ರವೇಶಿಸು. ಜಪ, ಹೋಮ, ಭಸ್ಮಧಾರಣ ಮೊದಲಾದವುಗಳು ಇಲ್ಲದ ದೇವತೆಗಳಪೂಜೆ, ಪಿತೃಗಳಶ್ರಾದ್ಧಗಳನ್ನು ಮಾಡದೆ ಇರುವ ನಾಸ್ತಿಕರ ಮನೆಗೆ ನಿರ್ಭಯನಾಗಿ ನೀನು ಪ್ರವೇಶಿಸು. ಯಾವ ಮನೆಯಲ್ಲಿ ದಂಪತಿಗಳು ಪಾಪಕರ್ಮಗಳನ್ನು ಮಾಡುತ್ತ ದಯಾಶೂನ್ಯರಾಗಿ ಪರಸ್ಪರ ನಿತ್ಯವೂ ಬಡಿದಾಡುತ್ತಲಿರುವರೋ ಅಂತಹ ಮನೆಗೆ ಪ್ರವೇಶಮಾಡಿರಿ. ಎಲ್ಲಿ ಮುಳ್ಳಿನ ಗಿಡಗಳು, ಅವರೆ ಬಳ್ಳಿ, ಮುತ್ತುಗ ವೃಕ್ಷ, ಎಕ್ಕದ ಗಿಡ, ಕೆಂಪು ದಾಸವಾಳ ಗಿಡ, ಕರವೀರ ಪುಷ್ಪ, ವಿಷ್ಣು ಕ್ರಾಂತಗಿಡ, ನಿಂಬವೃಕ್ಷ,

ಕದಲೀ ವೃಕ್ಷ, ತಾಲವೃಕ್ಷ, ಗೇರು ಮರ, ತಿತ್ತಿರಿಮರ ಎಲ್ಲಿರುತ್ತದೆಯೋ ಅಲ್ಲಿ ನೀನು ಭಾರ್ಯಾ ಸಮೇತನಾಗಿ ವಾಸಿಸಬೇಡ. ಮತ್ತು ಈಚಲ, ಮೊದಲಾದ ಅಶುಭಕಾರಕ ಗಿಡಬಳ್ಳಿಗಳಿರುವಲ್ಲಿ ನೀನು ಹೆಂಡತಿಯೊಡನೆ ಪ್ರವೇಶಿಸು.

ಯಾರ ಮನೆಯಲ್ಲಿ ಒಬ್ಬಳೇ ದಾಸಿಯೋ, ಮೂರು ಹಸುಗಳು, ಐದು ಎಮ್ಮೆಗಳು, ಆರು ಕುದುರೆಗಳು, ಏಳು ಆನೆಗಳು ಇರುವವೋ ಅಂಥಹ ಮನೆಗಳಲ್ಲಿ ನೀನು ಪತ್ನಿಯ ಸಮೇತನಾಗಿ ಪ್ರವೇಶಿಸು.

ಯಾವ ಮನೆಯಲ್ಲಿ ಕಾಳೀ ವಿಗ್ರಹವೂ, ಪ್ರೇತಸ್ವರೂಪರಾದ ಶಾಕಿನಿ, ಡಾಕಿನಿ ಮೊದಲಾದ ದೇವತೆಗಳೂ, ಭೈರವನೂ, ಕ್ಷಪಣಕ ಎಂದರೆ ದಿಗಂಬರ ಜೈನ, ಪ್ರತಿಗತಿ ಬುದ್ಧನ ಪ್ರತಿಬಿಂಬ ಇರುವವೊ ಮತ್ತು ವೇದ ನಿಂದಕರೂ, ಶಿವದ್ವೇಷಿಗಳೂ, ವಿಷ್ಣು ವಿರೋಧಿಗಳು ಇರುವರೋ ಅಂತಹ ಮನೆಗಳಲ್ಲಿ ನೀನು ಪತ್ನಿಯೊಂದಿಗೆ ಪ್ರವೇಶಿಸು.

ಸ್ನಾನ, ಸೌಭಾಗ್ಯದ್ರವ್ಯ, ಮಡಿ, ಮೈಲಿಗೆ ವಿಚಾರ ಇಲ್ಲದ ಹೆಂಗಸು ಇರುವಲ್ಲಿ ನೀನು ಪ್ರವೇಶಮಾಡು. ಸ್ನಾನ ಪೂಜೆ ಊಟ ಮಾಡುವಾಗ ಮೈ ಕೈ ಕಾಲುಗಳನ್ನು ತೊಳೆಯದಿರುವ, ಸಂಧ್ಯಾಕಾಲದಲ್ಲಿ ಊಟಮಾಡುವವರ, ಕುಡಿತದಲ್ಲಿ ಆಸಕ್ತರಾದವರ, ಮದ್ಯ, ಮಾಂಸ ಶೂದ್ರಾನ್ನಗಳನ್ನು ತಿನ್ನುವವರ, ಪರಸ್ತ್ರೀಲಂಪಟರ, ಹಗಲು ಸಂಧ್ಯಾಕಾಲದಲ್ಲಿ ಮೈಥುನಕ್ರಿಯೆಯನ್ನುಮಾಡುವವರ, ನಾಯಿ ಮೃಗಾದಿಗಳಂತೆ ಹಿಂಭಾಗದಿಂದ ಮೈಥುನವನ್ನು ಅಪೇಕ್ಷಿಸುವರೊ, ನೀರಿನಲ್ಲಿಯೂ ಯಾರು ಮೈಥುನಕ್ಕಾಗಿ ಪ್ರವರ್ತಿಸುವರೊ, ರಜಸ್ವಲೆಯಾದ ಸ್ತ್ರೀಯನ್ನು ಕನ್ಯೆಯನ್ನು ಯಾರು ಉಪಭೋಗಿಸುವರೊ, ಅನಂಗರಂಗಾದಿ ಗ್ರಂಥೋಕ್ತವಾದ ಔಷಧಿಗಳಿಂದ ಅಥವಾ ಉತ್ತೇಜಕವಾದ ಔಷಧಿಗಳನ್ನು ಸೇವಿಸಿ ಯಾರು ಸ್ತ್ರೀಗಮನ ಮಾಡುವರೋ ಅಂಥವರ ಮನೆಯನ್ನು ನೀನು ನಿನ್ನ ಮಡದಿಯಾದ ಜ್ಯೇಷ್ಠಾದೇವಿಯೊಂದಿಗೆ ಪ್ರವೇಶ ಮಾಡು.

ಈ ಪ್ರಕಾರವಾಗಿ ಭಾರ್ಯೆಯಿಂದ ಒಡಗೂಡಿದ ದುಃಸ್ಸಹಮುನಿಗೆ ಮಾರ್ಕಂಡೇಯ ಋಷಿಗಳು ಹೇಳಿ ಅಂತರ್ಧಾನವನ್ನು ಹೊಂದಿದರು. ಅನಂತರ ಆ ದುಃಸಹಮುನಿಯು ಮಾರ್ಕಂಡೇಯರ ಸಲಹೆಯಂತೆ ವಿಷ್ಣು, ವೈಷ್ಣವರ ನಿಂದೆಯಲ್ಲಿ ಆಸಕ್ತರಾದ ದುರ್ಜನರ ಮನೆಗಳಲ್ಲಿ ಜ್ಯೇಷ್ಠಾ ಎಂಬ ತಮ್ಮ ಜಾಯೆಯೊಂದಿಗೆ ಪ್ರವೇಶ ಮಾಡಿದನು. ಅಲ್ಲಿ ಹೋಗಿ ಅವನು ತನ್ನ ಮಡದಿಯನ್ನು ಕುರಿತು ''ಕೆರೆಗೂ ಆಶ್ರಮಕ್ಕೂ ಮಧ್ಯಭಾಗದಲ್ಲಿ ನೀನು ಕುಳಿತುಕೊ. ನಾನು ಪಾತಾಳಕ್ಕೆ ಹೋಗಿ ನಮಗೆ ವಾಸಿಸಲು ತಕ್ಕಸ್ಥಳ ಯಾವುದು ಎಂದು ನೋಡಿ ಬರುತ್ತೇನೆ'' ಎಂದು ಹೇಳಿದನು.

**ಜ್ಯೇಷ್ಠಾದೇವಿ :-** ಭಾಗ್ಯಶಾಲಿಯೇ, ನೀನು ಅತ್ತ ಕಡೆಗೆ ಹೋದಾಗ ನಾನು ಏನನ್ನು ಉಣ್ಣಲಿ? ನನಗೆ ಅನ್ನ ಕೊಡುವವರು ಯಾರು ?

**ದುಃಸ್ಸಹ :-** ಯಾವ ಹೆಂಗಸು ನಿನ್ನನ್ನು ಪುಷ್ಪ ಧೂಪಾದಿಗಳಿಂದ ಹಾಗೂ ಬಲಿ ಅನ್ನದಿಂದ ಪೂಜಿಸುವಳೊ ಅಂತಹ ಸ್ತ್ರೀಯು ವಾಸಿಸುವ ಮನೆಯನ್ನು ಪ್ರವೇಶಿಸಬೇಡ ಎಂದು ಹೇಳಿ ಆ ದುಸ್ಸಹ ಮುನಿಯು ಬಲಮಾರ್ಗದಿಂದ ಪಾತಾಳಲೋಕವನ್ನು

ಪ್ರವೇಶಿಸಿದನು. ಈಗಲೂ ಸಹ ಆ ಮುನಿಯು ಜಲಮಧ್ಯದಲ್ಲಿ ಮುಳುಗಿರುತ್ತಾನೆ. ಗ್ರಾಮ ಮತ್ತು ಪರ್ವತಗಳಿಂದ ಬೇರೆಯಾದ ಪ್ರದೇಶಗಳಲ್ಲಿ ಅಶುಭೆಯು ಯಾವಾಗಲು ಇರುತ್ತಾಳೆ.

ಅದೇ ಸಂದರ್ಭದಲ್ಲಿ ವಿಷ್ಣುವು ಲಕ್ಷ್ಮಿಯ ಜೊತೆಗೆ ಅಲ್ಲಿಗೆ ಬರುತ್ತಿರುವದನ್ನು ಜ್ಯೇಷ್ಠದೇವಿಯು ನೋಡಿದಳು. ಆಗ ಅಲಕ್ಷ್ಮೀಸ್ವರೂಪಳಾದ ಜ್ಯೇಷ್ಠೆಯೂ ವಿಷ್ಣುವನ್ನು ಕುರಿತು ಹೀಗೆ ಹೇಳಿದಳು.

**ಜ್ಯೇಷ್ಠಾದೇವಿ :-** ಸ್ವಾಮಿ ಮಹಾವಿಷ್ಣುವೆ, ನನ್ನ ಪತಿಯಾದ ದುಸ್ಸಹನು ನನ್ನನ್ನು ಇಲ್ಲಿಯೇ ಬಿಟ್ಟು ಪಾತಾಳವನ್ನು ಸೇರಿದನು. ನನಗೆ ದಿಕ್ಕು ಇಲ್ಲ. ನೀನೆ ನನಗೆ ಉಪಜೀವನಾರ್ಥವಾಗಿ ಒಂದು ವೃತ್ತಿಯನ್ನು ಅನುಗ್ರಹಿಸು.

**ವಿಷ್ಣು :-** ''ಶಿವ ಪಾರ್ವತಿಯರನ್ನೂ, ನನ್ನನ್ನೂ ನಮ್ಮಿಬ್ಬರ ಭಕ್ತರನ್ನೂ ನಿಂದೆ ಮಾಡುವವರ ಧನವೆಲ್ಲವೂ ನಿನ್ನದೇ ಆಗಿರುತ್ತದೆ. ಮಹಾದೇವರನ್ನು ನಿಂದೆಮಾಡಿ ವಿಷ್ಣುವನ್ನು ಪೂಜೆಮಾಡುವ ನನ್ನ ಭಕ್ತರೂ ಕೂಡ ಉಭಯ ದೇವತಾ ದ್ರೋಹಿಗಳೇ ಇದ್ದಂತೆ. ಅವರ ಧನವೂ ಕೂಡ ನಿನ್ನದೇ ಇದ್ದಂತೆ. ಮಹಾದೇವನ ಆಜ್ಞೆಯಿಂದಲೂ ಮತ್ತು ಅನುಗ್ರಹದಿಂದಲೂ ನಾನೂ ಹಾಗೂ ಬ್ರಹ್ಮದೇವನೂ ಸುಖವಾಗಿ ಇರುತ್ತೇನೆ. ಅಂತಹ ಮಹಾರುದ್ರದೇವರನ್ನು ನಿಂದಿಸಿ ನನ್ನನ್ನು ಪೂಜಿಸುವವರು ನನ್ನ ದ್ವೇಷಿಗಳೇ ಸರಿ. ನನ್ನ ಭಕ್ತರಾದರೂ ಅವರು ನನ್ನ ಭಕ್ತರಲ್ಲ. ಭಕ್ತರಂತಿರುತ್ತಾರೆ ಅಷ್ಟೇ. ಅಂಥವರ ಮನೆ ಮಠ, ದ್ರವ್ಯರಾಶಿ ಎಲ್ಲವೂ ನಿನಗೋಸ್ಕರವೇ ಇರುತ್ತವೆ.'' ಹೀಗೆ ಹೇಳಿದ ಅನಂತರ ಆ ಜನಾರ್ದನನು ಆ ಅಲಕ್ಷ್ಮೀಯನ್ನು ಬಿಟ್ಟು ತನ್ನ ಮಡದಿಯಾದ ಲಕ್ಷ್ಮೀಯೊಂದಿಗೆ ಕೂಡಿಕೊಂಡು. ಅಲಕ್ಷ್ಮೀಯ ನಾಶಕ್ಕೋಸ್ಕರ ರುದ್ರಜಪವನ್ನು ಮಾಡಿದನು. ಆದುದರಿಂದ ಮುನಿಗಳೇ, ಆ ಅಲಕ್ಷ್ಮೀಯ ನಿವಾರಣೆಗಾಗಿ ವಿಷ್ಣುಭಕ್ತರಾದವರು ನಿತ್ಯವೂ ಬಲಿಯನ್ನು ಕೊಡಬೇಕು. ಸ್ತ್ರೀಯರಾದವರು ನಾನಾ ಬಗೆಯ ಉಪಹಾರಗಳಿಂದ ಆ ಅಲಕ್ಷ್ಮೀಯನ್ನು ಪೂಜಿಸಬೇಕು.

*ಲಿಂಗಮಹಾಪುರಾಣ ಉತ್ತರಭಾಗದ*
*ಅಲಕ್ಷ್ಮೀ ವೃತ್ತಾಂತ ಕಥನವೆಂಬ ಆರನೆಯ ಅಧ್ಯಾಯ ಮುಗಿದುದು*



## ವಾಸುದೇವ ದ್ವಾದಶಾಕ್ಷರ ಮಂತ್ರ

ಅಧ್ಯಾಯ - ೭

**ಶೌನಕಾದಿ ಮುನಿಗಳು:-** ಸೂತರೆ, ಮಾನವರು ಯಾವ ನಾಮಮಂತ್ರಗಳ ಜಪದಿಂದ ಈ ಲೋಕದಲ್ಲಿ ಸಕಲ ವಿಧವಾದ ಭಯಾಪಾಯಗಳಿಂದ ಪಾರಾಗಿ ಪರಲೋಕದಲ್ಲಿ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ? ಅದನ್ನು ಹೇಳಿರಿ. ಮತ್ತು ಆ ಅಲಕ್ಷ್ಮೀಯನ್ನು ಬಿಟ್ಟು ಮಾನವನು ಶುಭಕರಲಾದ ಮಹಾಲಕ್ಷ್ಮೀಯನ್ನು ಯಾವ ಮಂತ್ರ ಜಪಗಳಿಂದ ಪಡೆಯುತ್ತಾನೆ? ಪ್ರಸನ್ನೀಕರಿಸಿಕೊಳ್ಳುತ್ತಾನೆ? ಎಂಬುದನ್ನು ತಿಳಿಸಿರಿ.

**ಸೂತರು :-** ಪೂರ್ವಕಾಲದಲ್ಲಿ ಮಹಾತ್ಮರಾದ ವಸಿಷ್ಠರನ್ನು ಕುರಿತು. ಬ್ರಹ್ಮದೇವರು ಸರ್ವಲೋಕಕ್ಕೂ ಹಿತವನ್ನುಂಟುಮಾಡುವದಕ್ಕಾಗಿ ಹೇಳಿದುದನ್ನು ನಾನು ನಿಮಗೆ ನಿರೂಪಿಸುತ್ತೇನೆ. ಕೇಳಿರಿ. ನನ್ನ ಮಾತನ್ನು ಶ್ರವಣ ಮಾಡುವದಕ್ಕಿಂತ ಮೊದಲು ದೇವ ದೇವೋತ್ತಮನಾದ ಸರ್ವ ಸ್ವಾಮೀಯೂ ಆದ ಆ ಮಹಾವಿಷ್ಣುವನ್ನು ನಮಸ್ಕಾರಮಾಡಬೇಕು. ನಾರಾಯಣ ಮಂತ್ರವನ್ನು ತಿಳುವಳಿಕೆಯುಳ್ಳ ಯಾವ ಮನುಷ್ಯನು ಭಕ್ತಿಯಿಂದ ಜಪಿಸುವನೋ ಅವನು ಪರಮಗತಿಯನ್ನು ಹೊಂದುತ್ತಾನೆ. ಈ ನಾರಾಯಣಮಂತ್ರವು ವೇದಾರ್ಥವನ್ನು ತಿಳಿದವರಿಗೆ ಮೋಕ್ಷದಾಯಕವಾಗಿರುತ್ತದೆ. ನಡೆಯುವಾಗ ನುಡಿಯುವಾಗ, ಮಲಗಿದಾಗ, ಉಣ್ಣುವಾಗ, ಕಣ್ಣುರೆಪ್ಪೆ ಮುಚ್ಚುವಾಗ ತೆರೆಯುವಾಗ ಕೂಡ ಈ ಮಂತ್ರಜಪಿಸುವವರಿಗೆ ಸದ್ಗತಿಯಾಗುವುದರಲ್ಲಿ ಸಂದೇಹವಿಲ್ಲ. ಊಟಮಾಡುವಾಗ **'ಓಂ ನಮೋ ನಾರಾಯಣಾಯ'** ಎಂಬ ಮಂತ್ರವನ್ನು ಉಚ್ಚರಿಸಿ ಯಾರು ಬಾಯಿಯಲ್ಲಿ ತುತ್ತುಇಡುತ್ತಾರೋ. ನೀರುಕುಡಿಯುವಾಗಲೂ, ಭಕ್ಷ್ಯಭೋಜ್ಯಗಳನ್ನು ತಿನ್ನುವಾಗಲೂ **'ನಮೋ ನಾರಾಯಣಾಯ,'** ಎಂಬ ಮಂತ್ರದಿಂದ ಅಭಿಮಂತ್ರಿಸಿ ಅನ್ನಪಾನಭೋಜನಾದಿಗಳನ್ನುಮಾಡುತ್ತಾರೋ ಅವರು ನಿಶ್ಚಿತವಾಗಿಯೂ ಮೋಕ್ಷಕ್ಕೆ ಅಧಿಕಾರಿಯಾಗುತ್ತಾನೆ. ಅವನ ಎಲ್ಲ ಪಾಪಗಳು ತಕ್ಷಣದಲ್ಲಿ ನಾಶಹೊಂದುತ್ತವೆ. ನಾರಾಯಣನ ನಾಮವನ್ನು ಶ್ರವಣಮಾಡುವ ಮಾತ್ರದಿಂದಲೇ ಅಲಕ್ಷ್ಮೀಯು ಕೂಡ ಅವನನ್ನು ಬಿಟ್ಟು ದೂರ ಹೋಗುತ್ತಾಳೆ. ಶ್ರೀಹರಿಯ ಪ್ರಿಯಪತ್ನಿಯಾದ ಮಹಾಲಕ್ಷ್ಮಿ ದೇವಿಯು ನಾರಾಯಣಮಂತ್ರ ಜಪಿಸುವವರ ಮನೆಯಲ್ಲಿಯೂ, ಆಸ್ತಿಪಾಸ್ತಿಗಳಲ್ಲಿಯೂ, ಶರೀರದಲ್ಲಿಯೂ ಕೂಡ ವಾಸಮಾಡುತ್ತಾಳೆ. ಈ ನಾರಾಯಣ ಮಹಾಮಂತ್ರವನ್ನು ಎಲ್ಲ ಕಾಲದಲ್ಲಿಯೂ ಜಪಿಸುವವರು ಇಷ್ಟ ಮಿತ್ರರೊಡನೆ ವಿಷ್ಣು ಲೋಕವನ್ನು ಸೇರುತ್ತಾರೆ. ಸಕಲಅಭೀಷ್ಟಗಳನ್ನು ಸಾಧಿಸಿ ಕೊಡುವ ಈ ನಾರಾಯಣ ದ್ವಾದಶಾಕ್ಷರ ಮಂತ್ರವನ್ನು ಒಬ್ಬ ಮುನಿಯು ಪೂರ್ವಕಾಲದಲ್ಲಿ ಅಭ್ಯಾಸಮಾಡಿದನು. ಅದರ ಜಪ ತಪಸ್ಸನ್ನು ಮಾಡಿ ಹೇಗೊ ಒಬ್ಬ ಪುತ್ರನನ್ನು ಪತ್ನಿಯಲ್ಲಿ ಪಡೆದನು. ಅವನಿಗೆ ವಿಹಿತವಾದ ನಾಮಕರಣ, ಜಾತಕರಣ, ಚೌಲ, ಉಪನಯನ ಮೊದಲಾದ ವೇದೋಕ್ತವಾದ ಎಲ್ಲ ಸಂಸ್ಕಾರಗಳನ್ನು ವಿಧಿವತ್ತಾಗಿ ಮಾಡಿದನು. ಉಪನೀತನಾದ ತನ್ನ ಮಗನಿಗೆ ತಂದೆಯು ವೇದಾಧ್ಯಯನವನ್ನು ಮಾಡಿಸಲು

ಉಪಕ್ರಮಿಸಿದನು. ಆದರೆ ಅವನ ಮಗನು ಕೇವಲ ವಾಸುದೇವ ಎಂಬ ಅಕ್ಷರವನ್ನು ಮಾತ್ರ ಉಚ್ಚರಿಸಲು ಸಮರ್ಥನಾಗಿದ್ದನು. ಬೇರೆ ಅಕ್ಷರಗಳನ್ನು ಉಚ್ಚರಿಸಲು ಅವನ ನಾಲಿಗೆ ಹೊರಳುತ್ತಿರಲಿಲ್ಲ. ಇದರಿಂದ ತಂದೆಗೆ ನನಗೆ ಬಹಳ ದುಃಖವಾಯತು. ಹೇಗಾದರೂ ಮಾಡಿ ತನ್ನ ಮಗನಿಗೆ ಬೇರೆ ಅಕ್ಷರಗಳನ್ನು ಉಚ್ಚಾರಮಾಡಲು ಪ್ರಯತ್ನಿಸಿ ಕೊನೆಗೆ ಆಗದೆ ಸೋತು ಆ ಮಗನ ಕೈ ಬಿಟ್ಟನು. ತಾನು ಬೇರೆ ಕನ್ಯೆಯನ್ನು ಮದುವೆಯಾದನು. ಆ ದ್ವಿತೀಯ ಭಾರ್ಯೆಯಿಂದ ಅವನಿಗೆ ಅನೇಕ ಮಕ್ಕಳಾದರು. ಅವರೆಲ್ಲರೂ ವೇದಾಧ್ಯಯನಮಾಡಿ ಪಾಂಡಿತ್ಯವನ್ನುಗಳಿಸಿ ಸರ್ವಮಾನ್ಯರಾದರು. ವಿದ್ಯೆಯ ಪ್ರಭಾವದಿಂದ ಅವರು ದ್ರವ್ಯವನ್ನುಗಳಿಸಿದರು. ಆದರೆ ಅವನ ಮೊದಲಿನ ಮಡದಿಯಾದ ಇತರಾ ದೇವಿಯಿಂದ ಹುಟ್ಟಿದ ಐತರೇಯ ಎಂಬ ಜ್ಯೇಷ್ಠ ಪುತ್ರನು ಮಾತ್ರ ವಾಸುದೇವ ಎಂಬ ಹೆಸರಿನ ಹೊರತು ಬೇರೆ ನಾಮೋಚ್ಚಾರಕ್ಕೆ ನಾಲಿಗೆ ಹರಿದಾಡದೇ ಇರುವದರಿಂದ ದಡ್ಡನಾಗಿಯೇ ಉಳಿದನು. ಅದರಿಂದ ಅವನಿಗೆ ವಿದ್ಯೆ ಹತ್ತಲಿಲ್ಲ. ದ್ರವ್ಯ ದೊರಕಲಿಲ್ಲ ಇದರಿಂದ ಆ ಬ್ರಾಹ್ಮಣನ ಪ್ರಥಮ ಪತ್ನಿ ಇತರಾದೇವಿಗೆ ಭಯಂಕರ ದುಃಖ ಉಂಟಾಯಿತು. ಆಗ ಅವಳು ಅತಿಶಯವಾದ ವ್ಯಸನದಿಂದ ಕಂಗೆಟ್ಟು ಮಂದಮತಿಯಾದ ತನ್ನ ಪುತ್ರನನ್ನು ಕುರಿತು ಹೇಳಿದಳು.

**ಇತರಾ :-** ಮಗನೆ, ನೀನು ನನ್ನ ದುರ್ದೈವದಿಂದ ಮತಿಹೀನನಾಗಿ ಹುಟ್ಟಿರುವೆ. ಉಳಿದ ಸ್ತ್ರೀಯರ ಪುತ್ರರು ಬುದ್ಧಿವಂತರಾಗಿ ಅಧ್ಯಯನಮಾಡಿ ಪಂಡಿತರಾಗಿ ಹಣವನ್ನು ಸಂಪಾದಿಸಿದರು, ಹೆಸರನ್ನೂ ಸಂಪಾದಿಸಿದರು. ಹಡೆದವಳಿಗೆ ಹರುಷವನ್ನೂ ಉಂಟುಮಾಡಿದರು. ಆದರೆ ಅದೃಷ್ಟಹೀನಳಾದ ನನಗೆ ನಿನ್ನಂತಹ ಮಂದಮತಿಯ ಮೂರ್ಖ ಮನುಷ್ಯನು ಮಗನಾಗಿ ಹುಟ್ಟಿದ್ದು ನನ್ನ ದೊಡ್ಡ ದುರ್ದೈವ.

ಮಾತೆಯ ಈ ಮಾತನ್ನು ಕೇಳಿ ಐತರೇಯನಿಗೆ ಬಹಳ ವ್ಯಥೆಯಾಯಿತು. ಇಷ್ಟು ದಡ್ಡನಾಗಿ ನಾನು ಈ ಲೋಕದಲ್ಲಿ ಬದುಕಿರುವದಕ್ಕಿಂತ ಸಾಯುವದೇ ಲೇಸು. ಎಂದು ನಿರ್ಧರಿಸಿ ಮನೆಬಿಟ್ಟುಹೊರಟನು. ಒಂದು ಸ್ಥಳದಲ್ಲಿ ಬ್ರಾಹ್ಮಣರೆಲ್ಲರೂ ಕೂಡಿ ಹೋಮಮಾಡುವ ಯಜ್ಞಶಾಲೆಗೆ ಬಂದನು. ಅವನನ್ನು ನೋಡಿದ ಕೂಡಲೇ ಅಲ್ಲಿರುವ ಎಲ್ಲ ಬ್ರಾಹ್ಮಣರ ಮಂತ್ರಗಳೇ ನಿಂತು ಹೋದವು. ಅವುಗಳ ಅರ್ಥವು ಹೊಳೆಯದಂತಾಯಿತು. ಎಲ್ಲ ಬ್ರಾಹ್ಮಣರು ಐತರೇಯನನ್ನು ನೋಡಿದ ಕೂಡಲೇ ಮೋಹಿತರಾದರು. ಆಗ ಆ ಯಜ್ಞವಾಟದಲ್ಲಿ ಐತರೇಯನು ತನಗೆ ಬರುವ **'ಓಂ ನಮೋ ಭಗವತೇ ವಾಸುದೇವಾಯ'** ಎಂಬ ಒಂದೇ ಒಂದು ಮಂತ್ರವನ್ನು ಅಂತಃ ಸ್ಫೂರ್ತಿಯಿಂದ ಉಚ್ಚರಿಸಿದನು. ಅದೇ ಅವನು ಆಡಿದ ಮೊಟ್ಟ ಮೊದಲನೆಯ ಮಾತಾಗಿತ್ತು. ಅವನ ಸುಸ್ಪಷ್ಟವಾದ ವಾಸುದೇವ ಮಂತ್ರೋಚ್ಚಾರಣೆಯ ಕ್ರಮವನ್ನು ನೋಡಿಯೇ ಮುಗ್ಧರಾದ ಅಲ್ಲಿರುವ ಎಲ್ಲ ವೈದಿಕರೂ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿದರು.

ಆ ವಾಸುದೇವ ದ್ವಾದಶಾಕ್ಷರ ಮಂತ್ರದ ಸ್ಫುರಣ ಸ್ಮರಣ ಪಠನ ಪ್ರಭಾವದಿಂದ ಅವನಿಗೆ ಒಮ್ಮೆಲೆ ದಿವ್ಯಜ್ಞಾನೋದಯವಾಯಿತು. ಅದರಿಂದ ಅವನು ಸಕಲವೇದಗಳನ್ನು

ಷಡಂಗ ಸಹಿತವಾಗಿ ಅವರೆಲ್ಲರಿಗೂ ಮುಖೋದ್ಗತವಾಗಿ ಅರ್ಥಸಹಿತವಾಗಿ ನಿರೂಪಿಸಿದನು. ಅಲ್ಲಿ ನಡೆದ ಆ ಯಜ್ಞಕ್ಕಾಗಿ ಸಮ್ಮಿಲಿತರಾದ ಎಲ್ಲ ವೇದ ಕೋವಿದರೂ, ವೇದಾಂತ ವಿದ್ವಾಂಸರೂ, ಅಧ್ಯಾತ್ಮ ವಿದ್ಯಾ ವಿಶಾರದರೂ, ಅವನ ವೇದ ವೇದಾಂಗ ವೇದಾಂತಾದಿಗಳ ಪಾಂಡಿತ್ಯ ಪ್ರವಚನಗಳನ್ನು ಕೇಳಿ ಪರಮ ಸಂತೋಷಪಟ್ಟು ಅವನಿಗೆ ಎಲ್ಲರೂ ಹಣೆಮಣಿದರು. ಬ್ರಹ್ಮಾದಿ ದೇವತೆಗಳೂ ಕೂಡ ಅವನ ವಾಸುದೇವ ಮಂತ್ರದ ಸಿದ್ಧಿಶಕ್ತಿಗಳನ್ನು ಕಂಡು ಪರಮ ಪ್ರೀತರಾದರು. ದೇವತೆಗಳು, ಗಂಧರ್ವರು ವಿಮಾನದಿಂದಲೇ ಪುಷ್ಪವೃಷ್ಟಿಮಾಡಿದರು. ಅದರಿಂದ ಐತರೇಯನಿಗೆ ವಿಪುಲವಾದ ದಾನ ದಕ್ಷಿಣೆ, ವಿಶೇಷವಾದಮಾನ ಮನ್ನಣೆ, ಅನಿರೀಕ್ಷಿತವಾದ ನಮಸ್ಕಾರ ಪುರಸ್ಕಾರಗಳು ದೊರೆತವು.

ಅವನು ಆ ಯಜ್ಞವನ್ನು ಪೂರ್ತಿಯಾಗಿ ಸಾಂಗವಾಗಿ ಮುಗಿಸಿ ಸೊತ್ತು ಸಂಪತ್ತುಗಳಿಂದೊಡಗೂಡಿ ಮನೆಗೆ ಬಂದನು. ತಾಯಿಗೆ ಸರ್ವಸ್ವವನ್ನು ಒಪ್ಪಿಸಿದನು. ಮಗನ ಈ ವಿದ್ಯೆ ವೈಭವ, ವೈಶಿಷ್ಟ್ಯಗಳನ್ನು ಕಂಡು ತಾಯಿಯು ಸಂತುಷ್ಟಳು, ಸಂತೃಪ್ತಳೂ, ಶಾಂತಳೂ ಅವಳಿಗೆ ತಾನು ಹುಟ್ಟಿದ್ದೂ, ಇಂಥಹ ವಿದ್ಯಾವಂತ ಮಗನನ್ನು ಹಡೆದದ್ದೂ ಸಾರ್ಥಕ ಎನಿಸಿತು. ನಿಶ್ಚಿಂತವಾದ ಹಾಗೂ ಸಂತುಷ್ಟವಾದ ಮನಸ್ಸಿನಿಂದ ಅಂತರಂಗದಲ್ಲಿ ಅನಂತನಾದ ವಾಸುದೇವರೂಪಿಭಗವಂತನನ್ನು ಅಂತ್ಯಕಾಲದವರೆಗೂ ಸ್ಮರಿಸುತ್ತ ಧ್ಯಾನಿಸುತ್ತ ಕೊನೆಗೆ ಮರಣಾನಂತರ ವೈಕುಂಠಲೋಕವನ್ನು ಹೊಂದಿದಳು.

ಶ್ರೀಮನ್ನಾರಾಯಣನ ಈ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಯಾರು ಜಪಿಸುವರೋ ಇದರ ಮಹಿಮೆ ಪ್ರಭಾವಗಳನ್ನು ಯಾರು ಹೇಳುವರೋ ಕೇಳುವರೋ ಈ ಮಂತ್ರವನ್ನು ಜಪಿಸುತ್ತಲೇ ಈ ಮಂತ್ರಜಪರೂಪವಾದ ತಪ್ಪಸ್ಸನ್ನು ಯಾರು ಗೈಯ್ಯುವರೋ ಅವರು ವಿಷ್ಣುವಿನ ದಿವ್ಯ ಸ್ಥಾನವನ್ನು ಪಡೆಯುತ್ತಾರೆ.

*ಲಿಂಗ ಮಹಾಪುರಾಣದ ಉತ್ತರ ಭಾಗದ ವಾಸುದೇವ ದ್ವಾದಶಾಕ್ಷರ ಮಂತ್ರ ಪ್ರಶಂಸಾಕಥನ ಎಂಬ ಏಳನೆಯ ಅಧ್ಯಾಯ ಮುಗಿದುದು*

—o—

# ಪಂಚಾಕ್ಷರೀ ಮಂತ್ರ

## ಅಧ್ಯಾಯ - ೮

**ಸೂತರು :-** ವಿಪ್ರೋತ್ತಮರೇ, ವಾಸುದೇವ ಮಂತ್ರದಂತೆ ವಿಷ್ಣುವಿನ ಸಂಬಂಧಿಯಾದ **'ಓಂ ನಮೋ ನಾರಾಯಣಾಯ'** ಎಂಬ ಅಷ್ಟಾಕ್ಷರಮಂತ್ರವೂ ಕೂಡ ಅತ್ಯಂತ ಶ್ರೇಷ್ಠವಾದ ಮಂತ್ರವಾಗಿದೆ. ಅದರಂತೆ 'ಓಂ ನಮಃ ಶಿವಾಯ' ಎಂಬ ಆರು ಅಕ್ಷರದ ಷಡಕ್ಷರ ಮಂತ್ರವೂ ಕೂಡ ಸರ್ವ ವೇದ ವೇದಾರ್ಥಗಳ ಸಾರಭೂತವಾಗಿದೆ. ಆದುದರಿಂದಲೇ ಅದು ಸಕಲಾಭೀಷ್ಟಗಳನ್ನು ನೀಡುವ ಇಷ್ಟಸಿದ್ಧಿ ಮಂತ್ರವಾಗಿದೆ.

ಇದರಂತೆ ಶಿವತರಾಯ ಮತ್ತು ಶ್ರೇಯಸ್ಕರಾಯ ಎಂಬ ಪಂಚಾಕ್ಷರಿ ಮಂತ್ರಗಳು ಹಾಗೂ **'ನಮಃ ಶಂಕರಾಯ'** ಎಂಬ ಏಳು ಅಕ್ಷರಗಳುಳ್ಳ ಪ್ರಕೃತಿ ಪುರುಷರೂಪವಾದ ಶಿವನ ಸಪ್ತಾಕ್ಷರೀಮಂತ್ರವು ಜಪಕರ. ಕಷ್ಟಾನಿಷ್ಟಗಳನ್ನು ಪರಿಹರಿಸುತ್ತವೆ. ಇಷ್ಟಾರ್ಥಗಳನ್ನೆಲ್ಲ ಪ್ರದಾನಮಾಡುತ್ತವೆ. ಬ್ರಹ್ಮನು, ವಿಷ್ಣುವು, ದೇವೇಂದ್ರನೇ ಮೊದಲಾದ ದೇವಾಧಿದೇವತೆಗಳು, ಬ್ರಾಹ್ಮಣೋತ್ತಮರು, ಮಹಾಮಹರ್ಷಿಗಳು ಪಂಚಾಕ್ಷರ, ಷಡಕ್ಷರ, ಸಪ್ತಾಕ್ಷರ ಶಿವ ಮಂತ್ರಗಳನ್ನು ಪಠಿಸಿ, ಜಪಿಸಿ, ತಪಿಸಿ, ಧ್ಯಾನಿಸಿ, ಜಗದುತ್ಪತ್ತಿಗೆ ಕಾರಣನಾದ ಆ ಪರಮೇಶ್ವರನನ್ನು ಪೂಜಿಸುತ್ತಾರೆ. ಈ ಶಿವಮಂತ್ರಗಳಿಂದ ಜಪಿಸುವವರ ಬ್ರಹ್ಮಹತ್ಯಾದಿ ಪಾಪಗಳು ತಾವಾಗಿಯೆ ತೊಲಗಿ ಹೋಗುವವು.

ಪೂರ್ವಕಾಲದಲ್ಲಿ ತ್ರೇತಾಯುಗದಲ್ಲಿ 'ಧುಂಧುಮುಖ' ಎಂಬ ಹೆಸರಿನ ಬ್ರಾಹ್ಮಣನು ಇದ್ದನು. ಶಂಕರನ ಮೇಘವಾಹನ ಕಲ್ಪದಲ್ಲಿ ದೇವೋತ್ತಮನಾದ ವಿಷ್ಣುವು ಸ್ವಯಂ ಮೇಘನಾಗಿ ಹುಲಿಯಚರ್ಮವನ್ನು ಧರಿಸಿದ ಮಹಾದೇವನನ್ನು ಬಹು ಗೌರವದಿಂದ ಧರಿಸಿದನು. ಆದರೆ ಮಹಾದೇವನ ಅತಿಶಯವಾದ ಭಾರದಿಂದ ಭುಗ್ನನಾಗಿ ಏದುಸಿರುಬಿಡುತ್ತ ಆ ಶಂಕರನನ್ನು ಕುರಿತು ತಾವರೆಗಣ್ಣಿನ ಆ ಮಹಾವಿಷ್ಣುವು ತಪಸ್ಸನ್ನುಮಾಡಿದನು. ಅದರಿಂದ ಪರಿತುಷ್ಟನಾದ ಪರಮೇಶ್ವರನ ಪರಮ ಪ್ರಸಾದದಿಂದ ಆ ವಿಷ್ಣುವು ಪರಮೈಶ್ವರ್ಯವನ್ನು, ಅದ್ಭುತ ಬಲವನ್ನು ಪಡೆದು ಧನ್ಯನಾದನು. ಆ ಕಲ್ಪದಲ್ಲಿ ವಿಷ್ಣುವು ಆ ಪಾರ್ವತೀಪತಿಯನ್ನು ಮೇಘನಾಗಿ ಹೊತ್ತು ನಿಂತದ್ದರಿಂದ ಆ ಕಲ್ಪಕ್ಕೆ ಮೇಘವಾಹನ ಕಲ್ಪವೆಂದು ಹೆಸರಾಯಿತು. ಆ ಮೇಘವಾಹನ ಕಲ್ಪದಲ್ಲಿಯೇ ಮುನಿಶಾಪದಿಂದ ಧುಂಧುಮುಖ ಬ್ರಾಹ್ಮಣನು ಹುಟ್ಟಿದನು.

ಮುನಿಶಾಪದಿಂದ ಆ ಕಲ್ಪದಲ್ಲಿ ಹುಟ್ಟಿದ ಧುಂಧುಮುಖನು ದುಷ್ಟಬುದ್ಧಿಯ ದುರಾತ್ಮನಾದನು. ಈ ಧುಂಧುಮುಖನು ಮೊದಲೇನೋ ವಿರಕ್ತನಾಗಿದ್ದನು. ವಿರಕ್ತನಿದ್ದಷ್ಟೇ ಅವನು ಕಾಮಿಯೂ ಆಗಿದ್ದನು. ಅವನ ವೈರಾಗ್ಯದ ಸಂಯಮದ ಕಟ್ಟನ್ನು ಒಡೆದು ಒಮ್ಮೊಮ್ಮೆ ಅವನ ಕಾಮಪ್ರೇಮಗಳು ಮೇಲೆದ್ದು ವಿಜೃಂಭಿಸುತ್ತಿದ್ದವು. ಒಂದು ದಿನ ಅಮಾವಾಸ್ಯೆ ಹಗಲು ಹೊತ್ತು ರುದ್ರದೇವಾತ್ಮಿಕವಾದ ಮುಹೂರ್ತ. ಆ ಕಾಲದಲ್ಲಿ ಸ್ಫುರದ್ರೂಪಿಣಿಯಾದ ಅವನ ಮೆಚ್ಚಿನ ಮಡದಿಯು

ಅಲ್ಲಿಗೆ ಬಂದಳು. ನವಯೌವ್ವನವತಿಯಾದ ಆತನ ಸುದತಿಯನ್ನು ಕಂಡ ಕೂಡಲೇ ಅವನ ಪ್ರೇಮ ಅರಳಿತು. ಕಾಮಕೆರಳಿತು. ಅವನು ಭೋಗ ಮಾಡಿಬಿಟ್ಟ. ಅವಳ ಉದರದಲ್ಲಿ ಗರ್ಭವು ಸ್ಥಾಪಿತವಾಯಿತು. ವಿಶಲ್ಯೆ ಎಂಬ ಹೆಸರಿನ ಧುಂಧುಮುಖನ ಸುಂದರಿಯು ಶನಿಯಿಂದ ಲಗ್ನವು ನೋಡಲ್ಪಡುತ್ತಿರುವ ಒಂದು ಭಯಂಕರ ಮೂಹೂರ್ತದಲ್ಲಿ ಒಂದು ಗಂಡು ಮಗುವನ್ನುಹೆತ್ತಳು. ಮಿತ್ರವರುಣ ಎಂದು ಅವನ ಹೆಸರು. ಅವನನ್ನು ನೋಡಿ ಋಷಿಗಳು ಧುಂಧುಮುಖನಿಗೆ, 'ನಿನಗೆ ಹುಟ್ಟಿದವನು ದುಷ್ಪುತ್ರ ಎಂದು ಹೇಳಿದರು.' ಆದರೆ ತ್ರಿಕಾಲದರ್ಶಿಗಳಾದ ವಸಿಷ್ಠರು ಮಾತ್ರ ಆ ಮಗುವಿನ ಮುಖವನ್ನು ನಿರುಕಿಸಿ ನೋಡಿ ಪರುಕಿಸಿ ಹೇಳಿದರು. ''ಧುಂಧುಮುಖ ಈ ನಿನ್ನ ಮಗನು ನೀಚಬುದ್ಧಿಯ ದುಷ್ಟ ಪುತ್ರನಾದರೂ ಗುರುಗ್ರಹದ ಪ್ರಭಾವದಿಂದ ಇವನು ಶಾಪದಿಂದ ಮುಕ್ತನಾಗುತ್ತಾನೆ'' ಎಂದು ಹೇಳಿದರು.

ಅನಂತರ ಧುಂಧುಮುಖನು ಆ ಮಗನಿಗೆ ವಿಧಿವತ್ತಾಗಿ ಜಾತಕರ್ಮಾದಿ ಸಂಸ್ಕಾರಗಳನ್ನುಮಾಡಿದನು. ಉಪನಯನಮಾಡಿ ವೇದಾಧ್ಯಯನವನ್ನೂ ಮಾಡಿಸಿದನು. ಒಳ್ಳೆಯ ಕನ್ಯೆಯನ್ನು ತಂದು ಅವನ ಮದುವೆಮಾಡಿದನು. ಆ ಬಳಿಕ ಅವನು ಗುರುಗಳ ಸೇವೆಯಲ್ಲಿ ತತ್ಪರನಾದನು. ಹುಟ್ಟಿದಾಗಲೇ ಮುನಿಗಳು ಮುಖ ಹಾಗೂ ಜಾತಕ ನೋಡಿ ಹೇಳಿದ ಮಾತು ಸುಳ್ಳಾಗಲಿಲ್ಲ. ಅವನು ವಿಧಿಪೂರ್ವಕವಾಗಿ ವಿವಾಹವಾದ ತನ್ನ ಧರ್ಮಪತ್ನಿಯನ್ನು ಬಿಟ್ಟು ಬೇರೊಬ್ಬ ಶೂದ್ರ ಕಾಮಿನಿಯನ್ನು ಕಾಮದಿಂದ ಮೋಹಿಸಿದನು. ಪ್ರೇಮದಿಂದ ಭೋಗಿಸಿದನು. ಹಗಲುರಾತ್ರಿ ಆ ಶೂದ್ರೆಯ ಮನೆಯಲ್ಲಿಯೇ ಇರುತ್ತಿದ್ದನು. ಅವಳನ್ನೇ ಏಕ ಶೈಯ್ಯೆ ಏಕಾಸನದಿಂದ ಭೋಗಿಸುತ್ತ ತನ್ನ ಧರ್ಮಾಚರಣವನ್ನೆಲ್ಲ ಬಿಟ್ಟು ಬಿಟ್ಟನು. ಕಾಮೋದ್ದೀಪನಕ್ಕಾಗಿ ಅವನು ಅವಳೊಡನೆ ಸೆರೆಯನ್ನು ಕುಡಿಯತೊಡಗಿದನು.

ಬ್ರಾಹ್ಮಣನಾದ ಧುಂಧುಮುಖನ ಮಗನು ತಮ್ಮ ಶೂದ್ರ ಜಾತಿಯ ಹೆಣ್ಣನ್ನು ಕೆಡಿಸಿದನೆಂದು ಊರಲ್ಲಿಯ ಕೆಲವು ಶೂದ್ರರು ಇವನ ಕಾಮಕೇಳಿಗೆ ಪ್ರತಿಬಂಧ ಮಾಡಿದರು. ಆಗ ಮದ್ಯಪಾನಮಾಡಿ ಮತ್ತನಾದ ಈ ಧುಂಧುಮುಖನು. ತನಗೆ ವಿರೋಧಮಾಡಿದ ಶೂದ್ರರನ್ನೆಲ್ಲ ಕೊಂದುಹಾಕಿದನು. ಆಗ ಶೂದ್ರೆಯ ಸಹೋದರರೆಲ್ಲರು ಬಂದು ಇವನ ತಂದೆಯಾದ ಧುಂಧುಮುಖನನ್ನೂ ಅವನ ಮಡದಿಯನ್ನೂ ಹೊಡೆದುಬಡಿದು ಸಂಹಾರಮಾಡಿದರು. ಅವರನ್ನು ತಡೆಯಲು ಹೋದ ಧುಂಧುಮುಖನ ತಾಯಿ, ಪತ್ನಿ ಎಲ್ಲರನ್ನೂ ಆ ಶೂದ್ರರು ಕೊಚ್ಚಿ ಹಾಕಿದರು.

ಇದೆಲ್ಲ ಪ್ರೇಮ ಪ್ರಕರಣವನ್ನು ತಿಳಿದು ಆ ದೇಶದ ರಾಜನು ಬಂದು ಅವನ ಹಾಗೂ ಅವಳ ಬಂಧು ಬಾಂಧವರನ್ನೆಲ್ಲ ವಧಿಸಿದರು. ಹೀಗೆ ಧುಂಧುಮುಖ ಪುತ್ರನ ಉಚ್ಛೃಂಖಲ, ಕಾಮಕತೆಯ ದುಷ್ಪರಿಣಾಮವಾಗಿ ಎರಡು ವಂಶಗಳು ಧ್ವಂಸವಾಗಿ ಹೋದವು.

ಆದರೆ ಧುಂಧುಮುಖನ ಆ ದುಷ್ಟ ಪುತ್ರನು ಮಾತ್ರ ಹೇಗೋ ಸುದೈವದಿಂದ ಆ ಹತ್ಯಾಕಾಂಡದಿಂದ ತಪ್ಪಿಸಿಕೊಂಡು ಉಳಿದ. ಅಲ್ಲಿಂದ ಬದುಕಿ ಪಾರಾದ ಅವನು ಬ್ರಹಸ್ಪತಿ ಎಂಬ ಮುನಿವರ್ಯನ ಕಡೆಗೆ ಬಂದನು. ಆ ಬ್ರಹ್ಮಸ್ಪತಿ ಮುನಿಯು ಹಿಂದೆ

ಸಾಕ್ಷಾತ್ ರುದ್ರದೇವರೇ ಹೇಳಿದ ಲಿಂಗ ಪೂಜಾದಿಗಳಿಂದ ಕೂಡಿದ ಪಾಶುಪತ ಎಂಬ ವ್ರತವನ್ನು ಪಡೆದು ಈಶ್ವರನ ಧ್ಯಾನದಲ್ಲಿ ಆಸಕ್ತನಾಗಿದ್ದನು. ಮಹಾನುಭಾವರಾದ ಆ ಬೃಹಸ್ಪತಿ ಮುನೀಶ್ವರನಿಂದ ಈ ಧುಂಧುಮುಖ ಎಂಬ ಬ್ರಾಹ್ಮಣಾಧಮನು ಶಿವಪಂಚಾಕ್ಷರಿ ಮಂತ್ರವನ್ನು, ಶಂಕರ ಷಡಕ್ಷರಿಮಂತ್ರದ ಉಪದೇಶವನ್ನು ಪಡೆದನು. ಪ್ರತಿಯೊಂದು ಮಂತ್ರವನ್ನು ಒಂದೊಂದು ಲಕ್ಷ ಲಕ್ಷ ಬಾರಿ ಬೇರೆ ಬೇರೆಯಾಗಿ ಜಪಮಾಡಿದನು. ಹನ್ನೆರಡು ತಿಂಗಳೂ ಪಾಶುಪತವ್ರತವನ್ನೂ ಅನೂಚಾನವಾಗಿ ಅನುಷ್ಠಾನಮಾಡಿದನು. ಮುಂದೆ ಕಾಲಪ್ರಾಪ್ತವಾದ ಮರಣವನ್ನು ಹೊಂದಿ ಯಮಲೋಕಕ್ಕೆ ಹೋದನು. ಅಷ್ಟರಲ್ಲಿ ಊರಲ್ಲಿ ನಡೆದ ಹತ್ಯಾಕಾಂಡದಲ್ಲಿ ಹತ ಮೃತರಾದ ಅವನ ತಾಯಿ ತಂದೆ ಪತ್ನಿ ಭಾವ ಮೈದುನರು ಎಲ್ಲರೂ ನರಕಲೋಕದಲ್ಲಿ ಇದ್ದರು. ಈ ಧುಂಧುಮುಖನ ಶಿವಮಂತ್ರದ ಮಹಿಮೆಯಿಂದ ಅವರೆಲ್ಲರು ನರಕದಿಂದ ಉದ್ಧೃತರಾದರು. ಅವನ ಪತ್ನಿಯೂ ಕೂಡ ಪತಿಯ ತಪಃಪ್ರಭಾವವನ್ನು ಅರಿತು ಪರಮಸಂತೋಷಭರಿತವಾದಳು. ಆಗ ಆ ಧುಂಧುಮುಖನು ತಾಯಿ, ತಂದೆ, ಮಡದಿ, ಭಾವ, ಮೈದುನರು ಎಲ್ಲರನ್ನು ಕೂಡಿಕೊಂಡು ದೇವವಿಮಾನವನ್ನು ರೋಹ ಮಾಡಿದರು. ಇಂದ್ರಾದಿ ದೇವತೆಗಳು ಅವರನ್ನು ಹೊಗಳಿದರು. ಅಲ್ಲಿಂದ ಅವನು ರುದ್ರಲೋಕಕ್ಕೆ ಹೋಗಿ ಗಣಾಧಿಪತ್ಯವನ್ನು ಹೊಂದಿ ಮಹಾದೇವರಿಗೆ ಅತ್ಯಂತ ಪ್ರೀತ್ಯಾಸ್ಪದನಾದನು.

ಆದುದರಿಂದ ಅಷ್ಟಾಕ್ಷರ ಮಹಾಮಂತ್ರ ಮತ್ತು ದ್ವಾದಶಾಕ್ಷರ ಮಹಾಮಂತ್ರಗಳಿಗಿಂತಲೂ ಕೋಟಿ ಪಟ್ಟು ಪುಣ್ಯವು, ಪಂಚಾಕ್ಷರೀಮಂತ್ರ ಜಪದಿಂದ ಬರುವದು ಎನ್ನುವದಕ್ಕೆ ಸಂಶಯವೇ ಇಲ್ಲ.

*ಲಿಂಗ ಮಹಾಪುರಾಣ ಉತ್ತರಭಾಗದ ಪಂಚಾಕ್ಷರೀಮಂತ್ರ ಜಪಪ್ರಭಾವ ಕಥನ ಎಂಬ ಎಂಟನೆಯ ಅಧ್ಯಾಯ ಮುಗಿದುದು*



**ಶೌನಕಾದಿಋಷಿಗಳು :-** ಪರಮಮಂಗಳಕರವಾದ ಪಾಶುಪತವ್ರತವನ್ನು ಮೊದಲು ದೇವತೆಗಳು ಮಾಡಿದರು. ಅನಂತರ ಬ್ರಹ್ಮದೇವ, ಸ್ವಯಂ ಸಾಕ್ಷಾತ್ ಶ್ರೀ ಕೃಷ್ಣನೂ ಕೂಡ ಆ ವ್ರತವನ್ನು ಅನುಷ್ಠಾನುಮಾಡಿದನು. ಪತಿತಬ್ರಾಹ್ಮಣನಾದ ಧುಂಧುಮುಖನು ಆ ಪಾಶುಪತವ್ರತವನ್ನುಮಾಡಿ ಸಕುಟುಂಬ ಸಪರಿವಾರ ದಿವ್ಯಗತಿಯನ್ನು ಹೊಂದಿದನು. ಆ ಪಾಶುಪತ ವ್ರತ ಯಾವುದು? ಮಂಗಳಪ್ರದನಾದ ಮಹೇಶ್ವರನು ಪಶುಪತಿಯಾದುದು ಎಂತು? ಇದನ್ನೆಲ್ಲ ನಮಗೆ ಹೇಳಿರಿ.

**ಸೂತರು :-** ಹಿಂದೆ ಬ್ರಹ್ಮದೇವರ ಮಾನಸಪುತ್ರನಾದ ಸಹತ್ಕುಮಾರನು ರುದ್ರಶಾಪದಿಂದ ಮುಕ್ತನಾಗಿ ಮರುದೇಶದಿಂದ ಭರತಖಂಡಕ್ಕೆ ಬಂದನು. ರುದ್ರದೇವರ ಅನುಗ್ರಹದಿಂದ ತನಗೆ ಬಂದ ಒಂಟೆಯ ದೇಹವನ್ನು ತ್ಯಜಿಸಿದನು. ಬ್ರಹ್ಮದೇವರ ಅಪ್ಪಣೆಯಂತೆ ಮೇರುಪರ್ವತದ ಮೇಲೆ ನಂದಿಯನ್ನು ಕಂಡನು. ಅವನಿಗೆ ನಮಸ್ಕರಿಸಿ ಅವನಿಂದ ಶ್ರೇಷ್ಠವಾದ ಮೋಕ್ಷಧರ್ಮವನ್ನು ಕೇಳಿದನು. ಮತ್ತು ಆ ಸನತ್ಕುಮಾರನು ಪಶುಪತಿಯ ಮಹಿಮೆ, ರುದ್ರನು ಪಶುಪತಿಯಾದ ಬಗೆ ಮತ್ತು ಪಾಶುಪತವ್ರತದ ಮಹಿಮೆ, ಪೂಜೆ, ವಿಧಾನ, ಎಲ್ಲವನ್ನೂ ನನಗೆ ಹೇಳಬೇಕು. ಎಂದು ಮತ್ತೆ ಮತ್ತೆ ಕೇಳಿದನು. ನಂದಿಯು ಆ ಇತಿಹಾಸವನ್ನೆಲ್ಲ ಸನತ್ಕುಮಾರನಿಗೆ ಹೇಳಿದನು. ನಂದಿ ಹೇಳಿದ್ದನ್ನು ಸನತ್ಕುಮಾರನೊಂದಿಗೆ ವೇದವ್ಯಾಸಮುನಿಯೂ ಕೇಳಿದನು. ಕೃಷ್ಣದ್ವೈಪಾಯನ ಎಂದು ಹೆಸರಾದ ಆ ವೇದವ್ಯಾಸರ ಮುಖಾಂತರ ನಾನು ಆ ಪಾಶುಪತದ ಇತಿಹಾಸವನ್ನು ಕೇಳಿದ್ದೇನೆ. ಅದನ್ನೇ ನಾನು ನಿಮಗೆ ಹೇಳುತ್ತೇನೆ ಕೇಳಿ. ಎಂದು ಹೇಳಿ ಸೂತರು ಸನತ್ಕುಮಾರ ಹಾಗೂ ನಂದಿಯ ಸಂವಾದ ರೂಪವಾದ ಪಶುಪತಿ ಮಾಹಾತ್ಮ್ಯವನ್ನು ನಿರೂಪಿಸಿದರು.

**ಸನತ್ಕುಮಾರ :**

**''ಕಥಂ ಪಶುಪತಿರ್ದೇವಃ ಪಶವಃ ಕೇ ಪ್ರಕೀರ್ತಿತಾಃ।**
**ಕೈಃ ಪಾಶೈಃ ತೇ ನಿಬಧ್ಯಂತೇ ವಿಮುಚ್ಯಂತೇ ಚ ತೇ ಕಥಂ॥''**

ಮಹಾದೇವನು ಪಶುಪತಿ ಹೇಗೆ ? ಪಶುಗಳು ಯಾವುವು ? ಆ ಪಶುಗಳು ಯಾವ ಪಾಶದಿಂದ ಬಂಧಿಸಲ್ಪಟ್ಟಿವೆ? ಆ ಪಾಶಗಳಿಂದ ಅವುಗಳಿಗೆ ಬಿಡುಗಡೆ ಹೇಗೆ?

**ನಂದಿ :-** ಸನತ್ಕುಮಾರ, ನೀನು ರುದ್ರದೇವರ ಪರಮಭಕ್ತ. ಶಾಂತಮೂರ್ತಿ. ಸಕಲರಿಗೆ ಲೇಸನ್ನೇ ಬಯಸುವ ನಿನಗೆ ಆ ವಿಷಯವನ್ನೆಲ್ಲ ಹೇಳುತ್ತೇನೆ ಕೇಳು. ಸ್ಥಾವರ ಪದಾರ್ಥಗಳಿಂದ ಬ್ರಹ್ಮದೇವರ ಪರ್ಯಂತರವಾಗಿರುವ ಎಲ್ಲರೂ ಎಲ್ಲವೂ ಸಂಸಾರದಲ್ಲಿರುವವರು ಪಶುಗಳೆಂದು ಹೇಳಲ್ಪಡುತ್ತಾರೆ. ಅವರೆಲ್ಲರಿಗೂ ಒಡೆಯನಾದುದರಿಂದ ಮಹಾದೇವನು 'ಪಶುಪತಿ' ಎಂದು ಕರೆಯಲ್ಪಡುತ್ತಾನೆ.

ಜಗದೊಡೆಯನಾದ ಆ ಪರಮೇಶ್ವರನು ತನ್ನ ಮಾಯಾಪಾಶದಿಂದ ಪ್ರಾಣಿಗಳನ್ನು ಕಟ್ಟುವಂತೆ ಸಕಲ ಚರಾಚರವನ್ನು ಬಂಧಿಸುತ್ತಾನೆ. ಬಂಧಕನಾದ ಆ ಪಶುಪತಿಯೇ ಜ್ಞಾನಯೋಗದಿಂದ ಅವನನ್ನು ಸೇವಿಸಿದರೆ ಅವರೆಲ್ಲರಿಗೂ ಮೋಚಕನಾಗುತ್ತಾನೆ. ಅವಿದ್ಯಾಪಾಶದಿಂದ ಬದ್ಧರಾದ ಜೀವಕೋಟಿಯನ್ನು ಶಂಕರನ ಹೊರತು ಯಾರೂ ಮೋಚನಮಾಡಲಾರರು. ಮಾಯಾಪಾಶದಿಂದ ಸರ್ವರ ಬಂಧಕನೂ ಅವನೇ, ಮೋಚಕನೂ ಅವನೇ. ಪರಮೇಶ್ವರನ ಪಾಶಗಳು ಇಪ್ಪತ್ನಾಲ್ಕು ತತ್ವಗಳೇ ಆಗಿರುತ್ತವೆ. ಕಣ್ಣು, ಕಿವಿ. ಮೂಗು, ನಾಲಿಗೆ, ತೊಗಲು ಇವು ಐದು ಜ್ಞಾನೇಂದ್ರಿಯಗಳೂ, ಕೈಕಾಲು, ನಾಲಿಗೆ, ಪಾಯು, ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳು. ಇವು ಹತ್ತೂ ಪಾಶಗಳು, ಮತ್ತು ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಭೂತ ತನ್ಮಾತ್ರೆಗಳು ಆಕಾಶ, ವಾಯು, ತೇಜಸ್ಸು, ಜಲ, ಪೃಥ್ವಿ ಎಂಬ ಐದು ಪಂಚ ಮಹಾಭೂತಗಳು. ಇವು ಹತ್ತು ಪಾಶಗಳು. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಎಂಬ ನಾಲ್ಕು ಪಾಶಗಳು, ಇವು ಒಟ್ಟು. ಇಪ್ಪತ್ನಾಲ್ಕು ಪಾಶಗಳಿಂದ ಜೀವಜಂತುಗಳೆಲ್ಲವೂ ಪರಮೇಶ್ವರನಿಂದ ಬಂಧಿಸಲ್ಪಟ್ಟಿರುತ್ತವೆ. ಜ್ಞಾನಯೋಗದಿಂದ ಬಂಧಕನಾದ ಪರಮೇಶ್ವರನನ್ನು ಜೀವರು ಅರ್ಚಿಸಿ ಮೆಚ್ಚಿಸಿದರೆ ಅವನೇ ಬಂಧಮೋಚಕನಾಗುತ್ತಾನೆ. ಮಾತು, ಮನಸ್ಸು, ಶರೀರ ಮತ್ತು ಕಾರ್ಯ ಇವುಗಳಿಂದ ಮಾಡುವ ಭಗವಂತನ ಸೇವೆಗೆ ಭಕ್ತಿ ಎಂದು ಹೆಸರು. ಈ ಭಕ್ತಿಯೇ ಬಂಧ ಮೋಚನಕ್ಕೆ ಕಾರಣವಾಗುತ್ತದೆ. ಶಿವನ ನಾಮ ರೂಪಚಿಂತನೆಯೇ ಮಾನಸಿಕ ಭಜನೆ. ಓಂಕಾರಾದಿ ಪ್ರಣವ ಜಪಗಳು ವಾಚನಿಕ ಭಜನೆ. ಪ್ರಾಣಾಯಾಮ ಅಷ್ಟಾಂಗಯೋಗಾದಿಗಳು ಶಾರೀರಭಜನೆ ಎನಿಸುತ್ತವೆ. ಜೀವರುಗಳ ಬಂಧನಕ್ಕೆ ಕಾರಣವಾದುದರಿಂದ ಆ ಇಪ್ಪತ್ನಾಲ್ಕು ತತ್ವಗಳು, ಮಾಯಾಕಾರಿಗಳಾದ ಸತ್ವಾದಿ ಗುಣಗಳು ಪಾಶಗಳೆಂದು ಕರೆಯಲ್ಪಡುತ್ತವೆ. ಈ ಪಾಶಬದ್ಧರಾದ ದೇಹಿಗಳಿಗೆಲ್ಲ ಶಿವಭಕ್ತಿಯೊಂದರಿಂದಲೇ ಮುಕ್ತಿ.

ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶಗಳೆಂಬ ಕ್ಲೇಶಗಳನ್ನೂ ಪಾಶಗಳನ್ನೂ ವಿದ್ವಾಂಸರು ಹೇಳುತ್ತಾರೆ. ತಮಸ್ಸು, ಮೋಹ, ಮಹಾಮೋಹ, ತಾಮಿಸ್ರಾ, ಅಂಧತಾಮಿಸ್ರಾ ಎಂದು ಪಂಚಪ್ರಕಾರವಾಗಿರುವ ಅವಿದ್ಯೆಯ ಫಲ ಪರಿಣಾಮಗಳೇ ಈ ಕ್ಲೇಶಗಳು. ತಮಸ್ಸೆಂದರೆ ಅವಿದ್ಯೆ. ಅಸ್ಮಿತೆ ಎಂದರೆ ಮೋಹ, ರಾಗವೇ ಮಹಾಮೋಹ. ದ್ವೇಷವೇ ತಾಮಿಸ್ರಾ, ಅಭಿನಿವೇಶವೇ ಅಂಧತಾಮಿಸ್ರಾ ಇವೆಲ್ಲವೂ ಮಿಥ್ಯಾ ಜ್ಞಾನದ ಪ್ರಭೇದಗಳು.

ತಮಸ್ಸೆಂದರೆ ಶರೀರವೇ ಆತ್ಮ. ಆತ್ಮವೇ ಶರೀರವೆಂದು ತಿಳಿಯುವದು. ಮೋಹ ಎಂದರೆ ನನ್ನ ಹೆಂಡತಿ ನನ್ನ ಮಕ್ಕಳು ಎಂಬ ಮಮಕಾರ. ಮಹಾಮೋಹ ಎಂದರೆ ಶಬ್ದವೇ ಮೊದಲಾದ ವಿಷಯಗಳಿಗೆ ರಾಗ ಅಥವಾ ಅತ್ಯಾಸಕ್ತಿ. ತಾಮಿಸ್ರಾ ಎಂದರೆ ಅವುಗಳ ಅಪೇಕ್ಷೆಯು ನೆರವೇರದೇ ಇದ್ದರೆ ಉಂಟಾಗತಕ್ಕ ಕೋಪ. ಅಂಧತಾಮಿಸ್ರಾ ಎಂದರೆ ಅವುಗಳಲ್ಲಿ ಅಭಿನಿವೇಶ. ತಮಸ್ಸು ಎಂಟು ವಿಧ, ಮೋಹವು ಎಂಟು ವಿಧ. ಮಹಾಮೋಹವು ಹತ್ತು ಪ್ರಕಾರಕ, ತಾಮಿಸ್ರವು. ಹದಿನಾರು ವಿಧ ಅಂಧತಾಮಿವು

ಹದಿನೆಂಟು ಪ್ರಕಾರಕವಾಗಿದೆ. ಈ ಯಾವುದೇ ವಿಧವಾದ ಅವಿದ್ಯೆಯ ಸಂಬಂಧವು ಆ ಪರಮೇಶ್ವರನಿಗೆ ಇರುವದಿಲ್ಲ. ಸರ್ವಾಂತರ್ಯಾಮಿಯಾಗಿ ಪ್ರಾಣಿಗಳಿಗೆಲ್ಲ ಶುಭವನ್ನುಂಟು ಮಾಡುವ ಶಿವನಿಗೆ ತ್ರಿಕಾಲದಲ್ಲಿಯೂ ಕರ್ಮಗಳ ಫಲಾಫಲಗಳ ಲೇಪವೂ ಇರುವದಿಲ್ಲ. ಓಂಕಾರವು ಪರಮ ಪುರುಷನಾದ ಆ ಶಿವನನ್ನೇ ಹೇಳುತ್ತದೆ.

**ಪ್ರಣವೋ ವಾಚಕಸ್ತಸ್ಯ ಶಿವಸ್ಯ ಪರಮಾತ್ಮನಃ ।**
**ಶಿವ ರುದ್ರಾದಿ ಶಬ್ದಾನಾಂ ಪ್ರಣವೋಽಪಿ ಪರಃ ಸ್ಮೃತಃ ॥**

ಓಂಕಾರವು ಪರಮ ಪುರುಷನಾದ ಆ ಪರಮಾತ್ಮ ಶಿವನನ್ನೇ ಹೇಳುತ್ತದೆ. ಪರಶಿವನನ್ನು ಹೇಳುವ ಶಿವ, ರುದ್ರ ಮೊದಲಾದ ಶಬ್ದಗಳಿಗಿಂತ ಓಕಾಂರವೇ ಶ್ರೇಷ್ಠವಾಗಿರುತ್ತದೆ. ಅದರ ಜಪದಿಂದಲೇ ಪ್ರಣವ ವಾಚ್ಯನಾದ ಶಂಭುವಿನ ಪೂರ್ಣಾನುಗ್ರಹವಾಗಿ ಸಿದ್ಧಿಯು ಕರಗತವಾಗುತ್ತದೆ.

ಶ್ರೇಷ್ಠವಾದ ಶೈವ ತತ್ವಜ್ಞಾನವೇ ಪಾಶುಪತಯೋಗ. ಈ ಯೋಗವು ಸೂರ್ಯ ರೂಪಿಯಾದ ಪರಮೇಶ್ವರನಿಂದ ಸಕಲ ಲೋಕ ಹಿತಕ್ಕಾಗಿ ಹೇಳಲ್ಪಟ್ಟಿದೆ.

ಸೂರ್ಯನಿಂದ ಉಪದಿಷ್ಟರಾದ ಯಾಜ್ಞವಲ್ಕ್ಯರು ಗಾರ್ಗಿಗೆ ಹೇಳಿದರು.

**ಕೃತ್ವೋಂಕಾರ ಪ್ರದೀಪಂ ಮೃಗಯ ಗೃಹಪತಿಂ ಸೂಕ್ಷ್ಮಮಾದ್ಯಂತರಸ್ಥಂ**
**ಸಂಯಮ್ಯ ದ್ವಾರ ವಾಸಂ ಪವನ ಪಟುತರಂ ನಾಯಕಂ ಚೇಂದ್ರಿಯಾಣಾಂ॥**
**ವಾಗ್ಜಾಲೈಃ ಕಸ್ಯಹೇತೋ ರ್ವಿವದಸಿ ತು ಭಯಂ ದೃಶ್ಯತೇ ನೈವ ಕಿಂಚಿದ್**
**ಓ ದೇಹ ಸ್ಥಂ ಪಶ್ಯ ಶಂಭುಂ ಭ್ರಮಸಿ ಕಿಮುಪರೇ ಶಾಸ್ತ್ರ ಜಾಲೇಽಂಧಕಾರೇ**

ಓಂಕಾರವನ್ನು ಧ್ಯಾನಮಾಡಿ ನಿನ್ನಲ್ಲೇ ಅಂತರ್ಯಾಮಿಯಾಗಿ ಇರುವ ಅಣುಸ್ವರೂಪವಾದ ಪರಮವಸ್ತುವನ್ನು ಹುಡುಕು. ಇಂದ್ರಿಯಗಳಲ್ಲಿಯೂ ವ್ಯಾಪಿಸಿರುವ ವಾಯುವಿಗಿಂತಲೂ ವೇಗವಾಗಿರುವ ದೇಹದಲ್ಲೇ ಇರುವ ಆ ಪರವಸ್ತುವನ್ನು, ಮನಸ್ಸನ್ನು ವಶದಲ್ಲಿಟ್ಟುಕೊಂಡು ನೀನು ನೋಡು. ವ್ಯರ್ಥವಾದ ವಾದವಿವಾದವನ್ನು ಏಕೆ ಮಾಡುವೆ? ಭಗವಂತನನ್ನು ಅರಸುವ ನಿನಗೆ ಯಾವುದರಿಂದಲೂ ಇನಿತೂ ಭಯವಿಲ್ಲ. ದ್ವೈತವೇ ಮೊದಲಾದ ಶಾಸ್ತ್ರ ಸಮೂಹವೆಲ್ಲವೂ ಅಂಧಃಕಾರಕ್ಕೆ ಸಮಾನವಾಗಿವೆ. ಅವುಗಳನ್ನೆಲ್ಲ ಅಭ್ಯಸಿಸಿ ಏಕೆ ಭ್ರಾಂತನಾಗುವೆ?''

ಈ ಪ್ರಕಾರವಾಗಿ ಶಿವನಿಂದ ಋಷಿಗಳಿಗೆ ಹೇಳಲ್ಪಟ್ಟ ವಿಷಯಗಳನ್ನು ಮೋಕ್ಷವನ್ನು ಅಪೇಕ್ಷಿಸುವವರು ವಿದ್ವಜ್ಜನರಿಂದ ಕೇಳಿ ತಿಳಿದುಕೊಳ್ಳಬೇಕು. ಆನಂದರೂಪವಾದ ಆತ್ಮಸ್ವರೂಪವನ್ನು ಪಂಚಕೋಶ ಶೋಧನ ರೂಪವಾದ ಸಾಧನದಿಂದ ಅರಿಯಬೇಕು. ಅನಂತರ ಮೋಕ್ಷವನ್ನು ಸ್ವಸ್ವರೂಪ ಹೊಂದುವದರ ಮೂಲಕ ಆತ್ಮದಲ್ಲೇ ಪಡೆಯಬೇಕು.

*ಲಿಂಗಮಹಾಪುರಾಣ ಉತ್ತರ ಭಾಗದ ಪಾಶುಪತವ್ರತ ನಿರೂಪಣ*
*ಎಂಬ ಒಂಬತ್ತನೆಯ ಅಧ್ಯಾಯ ಮುಗಿದುದು*

—o—

## ಅಧ್ಯಾಯ - ೧೦

**ಸನತ್ಕುಮಾರ :-** ಮಹಾಪ್ರಾಜ್ಞನಾದ ನಂದಿಕೇಶ್ವರನೇ, ಪರಮ ಭಗವದ್ಭಕ್ತನಾದ ನೀನು ಆ ಉಮಾಪತಿಯ ಮಹಾಮಹಿಮೆಯನ್ನು ಮತ್ತೆ ನನಗೆ ಹೇಳು.

**ನಂದಿಕೇಶ್ವರ :-** ಪರಮೇಷ್ಠಿಯಾದ ಆ ಮಹೇಶ್ವರನ ಮಹಾಮಹಿಮೆಯನ್ನು ಸಂಕ್ಷೇಪವಾಗಿ ಹೇಳುತ್ತೇನೆ ಕೇಳು. ಬಂಧಮೋಚಕನಾದ ಆ ಭವಾನೀಪತಿಗೆ ಪ್ರಕೃತಿ ಬಂಧವಿಲ್ಲ. ಬುದ್ಧಿಬಂಧನವೂ ಇಲ್ಲ. ಅದರಂತೆ ಅಹಂಕಾರಬಂಧ, ಮನೋಬಂಧ, ಶ್ರೋತ್ರಬಂಧ, ಚಕ್ಷುರ್ಬಂಧ, ತ್ವಚಾಬಂಧ, ಜಿಹ್ವಾಬಂಧ, ಘ್ರಾಣಬಂಧ, ಪಾದ ಬಂಧ, ಪಾಣಿ ಬಂಧ, ವಾಗ್ಬಂಧ, ಉಪಸ್ಥೇಂದ್ರಿಯಬಂಧ, ಭೂತತನ್ಮಾತ್ರಬಂಧ ಮೊದಲಾದ ಯಾವದೇ ವಿಧವಾದ ಬಂಧನವು ಅವನಿಗೆ ಸುತರಾಂ ಇರುವದಿಲ್ಲ. ಅವನು ನಿತ್ಯ ಶುದ್ಧ, ಬುದ್ಧ. ನಿತ್ಯಮುಕ್ತ ಎಂದು ಮುನಿಗಳು ಅವನನ್ನು ಹೊಗಳಿದ್ದಾರೆ.

ಆ ಪರಮ ಪುರುಷನ ಆಜ್ಞೆಯಿಂದಲೇ ಪ್ರಕೃತಿ ಬುದ್ಧಿಯನ್ನು ಸೃಜಿಸುತ್ತದೆ. ಪ್ರಕೃತಿ ಬುದ್ಧಿಕೂಡಿ ಅವನ ಅಪ್ಪಣೆಯಿಂದ ಅಹಂಕಾರವನ್ನು ಸೃಜಿಸುತ್ತವೆ. ಆ ಅಹಂಕಾರತತ್ವವು ಮನಸ್ಸು, ಪಂಚ ಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ, ಪಂಚಭೂತ ತನ್ಮಾತ್ರೆಗಳು, ಪಂಚಮಹಾಭೂತಗಳ ಸೃಷ್ಟಿಗೆ ಕಾರಣವಾಗುತ್ತವೆ. ಅವನ ಆಜ್ಞೆಯಿಂದಲೇ ಶ್ರೋತ್ರೇಂದ್ರಿಯವು ಕೇಳುವದು. ವಾಗೀಂದ್ರಿಯವು ಮಾತನಾಡಬಲ್ಲದು. ಹಸ್ತವು ಆದಾನಾದಿಕೆಲಸಗಳನ್ನು, ಪಾದವು ಗಮನಕಾರ್ಯವನ್ನು. ವಾಯು ಇಂದ್ರಿಯವು ಅವನ ಆಜ್ಞೆಯಿಂದಲೇ ಜಂತುಗಳ ಕಶ್ಮಲವನ್ನು ವಿಸರ್ಜಿಸುವ ಕಾರ್ಯವನ್ನು, ಮಾಡುತ್ತವೆ. ಉಪಸ್ಥೇಂದ್ರಿಯವು ಆನಂದವನ್ನುಂಟುಮಾಡುತ್ತದೆ. ಈ ಪಂಚಮಹಾಭೂತಗಳ ಕಾರ್ಯಗಳೆಲ್ಲವೂ ಭೂತ ಪತಿಯಾದ ಆ ಭಗವಂತನಿಂದಲೇ ಚೆನ್ನಾಗಿ ನಡೆಯುತ್ತವೆ.

ಆ ಪರಮೇಶ್ವರನ ಆಜ್ಞೆಯಿಂದಲೇ ಅಗ್ನಿಯು ದೇವತೆಗಳಿಗೆ ಹವ್ಯವನ್ನೂ, ಪಿತೃಗಳಿಗೆ ಕವ್ಯವನ್ನೂ ತಲುಪಿಸುತ್ತಾನೆ. ಮತ್ತು ಪ್ರಾಣಿಗಳ ಜಠರದಲ್ಲಿದ್ದು ಅವು ತಿಂದ ಆಹಾರವು ಪಚನವಾಗುವಂತೆ ಮಾಡುತ್ತಾನೆ. ನೀರು ಅವನ ಅಪ್ಪಣೆಯಿಂದಲೇ ಎಲ್ಲರಿಗೂ ಆಪ್ಯಾಯನವಾಗಿ ಜೀವಧಾರಣವಾಗುವಂತೆ ಮಾಡುತ್ತದೆ. ಈ ಭೂಮಿಯು ಸರ್ವ ಚರಾಚರ ವಸ್ತುಗಳನ್ನು ಅವನ ಆಜ್ಞೆಯಿಂದಲೇ ಧರಿಸಿರುತ್ತದೆ. ಯಮನು ಎಲ್ಲರನ್ನು ಸಂಹರಿಸಿ ಅವರ ಕರ್ಮಗಳಿಗೆ ತಕ್ಕ ಶಿಕ್ಷೆಯನ್ನು ವಿಧಿಸುತ್ತಾನೆ. ವಿಷ್ಣುವು ಎಲ್ಲರನ್ನು ರಕ್ಷಿಸುತ್ತಾನೆ. ಅಸುರರನ್ನು ಶಿಕ್ಷಿಸುತ್ತಾನೆ. ಇದರಂತೆ ವರುಣ, ಕುಬೇರ, ಸೂರ್ಯ, ಚಂದ್ರ, ನವಗ್ರಹ, ಪಿತೃಗಣ, ಎಲ್ಲವೂ ಅವನ ಆಜ್ಞೆಯಿಂದಲೇ ತಮತಮಗೆ ನಿಯತವಾದ ವ್ಯಾಪಾರಗಳನ್ನು ಮಾಡುತ್ತ ಈ ಸಂಸಾರಚಕ್ರ ಪ್ರವೃತ್ತಿಗೆ ಕಾರಣರಾಗುತ್ತಾರೆ.

*ಲಿಂಗಮಹಾಪುರಾಣ ಉತ್ತರ ಭಾಗ ಶಿವನಿಂದಲೇ ಚರಾಚರಪ್ರಪಂಚದ ನಿಯಮನ ಎಂಬ ಹತ್ತನೆಯ ಅಧ್ಯಾಯ ಮುಗಿದುದು*

—೦—

## ಸರ್ವಲೋಕ ಮಹತ್ವ

**ಅಧ್ಯಾಯ - ೧೧**

**ನಂದಿಕೇಶ್ವರ :-** ಪರಮಾತ್ಮನಾದ ಆ ಶಿವನು ಕಲ್ಯಾಣಸ್ವರೂಪಿಯು. ಅವನ ಪತ್ನಿಯಾದ ಆ ಪಾರ್ವತಿಯು ಶಿವಸ್ವರೂಪಿಣಿಯೇ. ಆ ಶಿವನೇ ಈಶ್ವರನೆಂದೂ, ಅವನ ಮಾಯೆಯೇ ಗೌರಿಯೆಂದೂ ಬಲ್ಲವರು ತಿಳಿಯುತ್ತಾರೆ. ಗೌರಿಯೇ ಪ್ರಕೃತಿ, ಶಂಕರನೇ ಪುರುಷ, ಅವಳು ವಾಕ್ಯರೂಪಳು. ಅವನು ಶಿವನು ಅರ್ಥಸ್ವರೂಪನು. ಅವನು ಹಗಲು, ಇವಳು ರಾತ್ರಿ, ಶಿವ ಯಾಗ. ಶಿವೆ ದಕ್ಷಿಣೆ. ಅವನು ಆಕಾಶ, ಇವಳು ಭೂಮಿ. ಅವನು ಸಮುದ್ರ, ಇವಳು ಅದರ ಮೇರೆ. ಅವನು ವೃಕ್ಷ ಇವಳು ಬಳ್ಳಿ. ಅವನು ಬ್ರಹ್ಮ, ಇವಳು ಸಾವಿತ್ರಿ. ಅವನು ವಿಷ್ಣು, ಇವಳು ಲಕ್ಷ್ಮೀ. ಒಟ್ಟಾಗಿ ಹೇಳಬೇಕೆಂದರೆ ಜಗತ್ತಿನಲ್ಲಿರುವ ಸಕಲ ಪುರುಷರು ಶಂಕರನ ಅಂಶ ಸ್ವರೂಪರು. ಸಕಲ ಸ್ತ್ರೀಯರು ಪಾರ್ವತಿಯ ಅಂಶ ಸ್ವರೂಪರು. ಪುಲ್ಲಿಂಗ ಶಬ್ದಗಳಿಂದ ವಾಚ್ಯರಾದವರೆಲ್ಲರು ಶಿವ ಸ್ವರೂಪರು. ಸ್ತ್ರೀಲಿಂಗ ಶಬ್ದಗಳಿಂದ ಹೇಳಲ್ಪಡುವರೆಲ್ಲರು ಗೌರಿಯ ಅಂಶವುಳ್ಳವರು.

ಎಂಟು ವಿಧವಾದ ಪ್ರಕೃತಿಯ ರೂಪಗಳು ಪಾರ್ವತಿಯ ಎಂಟು ಮೂರ್ತಿಗಳೆ. ವಿಕೃತಿಗಳೆಲ್ಲವೂ ಅವಳ ಶರೀರದಲ್ಲಿರುವ ವಿಭೂತಿಗಳು. ಅಗ್ನಿಯು ಒಂದೇ ಆದರು ಅದರ ಕಿಡಿಗಳು ಅನೇಕ ಇರುವಂತೆ ಆ ಮಹೇಶ್ವರನು ಒಬ್ಬನೇ ಆದರೂ ದ್ವಂದ್ವ ಸತ್ವವನ್ನು ಹೊಂದಿ ಅನೇಕ ಜೀವರೂಪದಲ್ಲಿರುತ್ತಾನೆ.

ದೇವಿಯಾದ ಉಮೆಯು ಪೀಠಸ್ವರೂಪಳಾದರೆ ಆ ಮಹಾದೇವನು ಲಿಂಗ ಸ್ವರೂಪನಾಗಿರುತ್ತಾನೆ. ಆ ಗೌರಿಯು ಕ್ಷೇತ್ರ ಸ್ವರೂಪಳಾದರೆ ಆ ಪಾರ್ವತೀಪತಿಯು ಕ್ಷೇತ್ರಜ್ಞನಾಗಿರುತ್ತಾನೆ. ಶಿವಲಿಂಗವನ್ನು ಪೂಜಿಸದವನು ನರಕಭಾಗಿಯಾಗುವನು. ಶಿವನನ್ನು ಬಿಟ್ಟು ಬೇರೆ ದೇವತೆಗಳಲ್ಲಿ ಭಕ್ತಿಮಾಡುವವನು ಪತಿಯನ್ನು ತ್ಯಜಿಸಿ ಜಾರನೊಡನೆ ವಿಹರಿಸುವ ಸತಿಯಂತೆ ನರಕವನ್ನು ಹೊಂದುವನು. ಶ್ರೀರಾಮನು ಬ್ರಹ್ಮನ ಮಗನಾದ ರಾವಣನನ್ನು ಕೊಂದುದರಿಂದ ಬಂದ ಬ್ರಹ್ಮಹತ್ಯಾ ಪಾಪವನ್ನು ಕಳೆದುಕೊಳ್ಳಲು ಸಮುದ್ರತೀರದಲ್ಲಿ ಶಾಸ್ತ್ರೋಕ್ತವಾದ ವಿಧಿಯಿಂದ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಅದರ ಪೂಜೆಯನ್ನುಮಾಡಿದನು. ಅದೇ **'ರಾಮೇಶ್ವರ'** ಅದರಿಂದ ಶ್ರೀರಾಮನು ಬ್ರಹ್ಮಹತ್ಯಾದೋಷದಿಂದ ಮುಕ್ತನಾದನು.

ಇದರಂತೆ ಬ್ರಹ್ಮಹತ್ಯೆ ಮೊದಲಾದ ಮಹಾಪಾಪಗಳನ್ನು ಮಾಡಿದವರು ಶಿವನಿಗೆ ಶರಣು ಹೋಗಿ ಭಕ್ತಿಯಿಂದ ಲಿಂಗಪೂಜೆಯನ್ನು ಮಾಡಿದರೆ ಸರ್ವ ಪಾಪಗಳಿಂದಲೂ ಮುಕ್ತರಾಗುತ್ತಾರೆ ಎಂಬುವಲ್ಲಿ ಸಂದೇಹವೇ ಇಲ್ಲ.

*ಲಿಂಗ ಮಹಾಪುರಾಣ ಉತ್ತರಭಾಗ ಶಿವಪಾರ್ವತಿಯರ ಸರ್ವಲೋಕಮಹತ್ವ ಕಥನ ಎಂಬ ಹನ್ನೊಂದನೆಯ ಅಧ್ಯಾಯ ಮುಗಿದುದು*

—o—

**ಸನತ್ಕುಮಾರ :-** ನಂದೀಕೇಶ್ವರನೆ, ವಿಶ್ವಸ್ವರೂಪಿಯೂ ಮಹಾಮಹಿಮನೂ ಆದ ಶಂಕರನ ಎಂಟು ಮೂರ್ತಿಗಳನ್ನು ನನಗೆ ಹೇಳು.

**ನಂದಿಕೇಶ್ವರ :-** ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಯಜಮಾನ, ಚಂದ್ರ ಇವು ಎಂಟು ಮಂಗಳರೂಪನಾದ ಆ ಪರಮೇಶ್ವರನ ಅಷ್ಟಮೂರ್ತಿಗಳು. ಇದರಂತೆ ಆಕಾಶ, ಜೀವ, ಚಂದ್ರ, ಅಗ್ನಿ, ಸೂರ್ಯ, ನೀರು, ಭೂಮಿ, ವಾಯು ಇವುಗಳು ಕೂಡ ಶಿವ ಸಂಬಂಧಿಯಾದ ಅಷ್ಟಮೂರ್ತಿಗಳೆಂದು ಹೇಳಲ್ಪಟ್ಟಿವೆ.

ಶಿವನ ಅಷ್ಟಮೂರ್ತಿಗಳಲ್ಲಿ ಒಂದಾದ ಸೂರ್ಯ ರೂಪನಾದ ಈಶ್ವರನಲ್ಲಿ, ಯಾಗಗಳ ಮುಖಾಂತರ ಅಗ್ನಿಹೋತ್ರತ್ವದ ಅಗ್ನಿಯಲ್ಲಿ ಹವಿರ್ದ್ರವ್ಯಗಳನ್ನು ಅರ್ಪಿಸಿದರೆ ದೇವತೆಗಳು ಸಂತೃಪ್ತರಾಗುತ್ತಾರೆ. ವೃಕ್ಷದ ಮೂಲದಲ್ಲೇ ನೀರು ಹಾಕುವದರಿಂದ ಮರದ ರೆಂಬೆ ಕೊಂಬೆ ಕುಡಿ ಮಿಡಿಗಳೆಲ್ಲ ಪಲ್ಲವಿಸಿ ನಿಲ್ಲುವಂತೆ ಆ ಪಾರ್ವತೀಪತಿಯ ಪೂಜೆಯಿಂದ ಅವನ ಅಂಶಭೂತರೂ ಅವನ ಅಂಶಸಂಭೂತರೂ ಆದ ಸಕಲದೇವತೆಗಳೂ ತೃಪ್ತರಾಗುತ್ತಾರೆ.

ಅವನ ಸೂರ್ಯಾತ್ಮಕ ಪ್ರತೀಕವು ಹನ್ನೆರಡು ಪ್ರಕಾರ ಉಳ್ಳದ್ದು, ಸೂರ್ಯಸ್ವರೂಪನಾದ ಆ ಗಿರೀಶನ ಕಿರಣಗಳು ಚಂದ್ರನಲ್ಲಿ ಪ್ರತಿಫಲಿತವಾಗಿ ಕಿರಣಗಳ ಮೂಲಕ ಗಿಡಮೂಲಿಕೆಗಳ ಅಭಿವೃದ್ಧಿಗಾಗಿ ಹಿಮವರ್ಷವನ್ನು ಕರೆಯುತ್ತವೆ. ಮಾರ್ತಂಡ ರೂಪಿಯಾದ ಆ ಶಿವನ ಶುಕ್ಲ ಎಂಬ ಹೆಸರಿನ ಕಿರಣಗಳು ಧಾನ್ಯಗಳ ಬೆಳವಣಿಗೆಗೆ ಕಾರಣವಾದ ಶಾಖವನ್ನು ಕೊಡುತ್ತವೆ. ಅವನ ಹರಿಕೇಶ ಎಂಬ ಕಿರಣಗಳು ನಕ್ಷತ್ರಗಳಿಗೆ ಬೆಳಕನ್ನೂ, ವಿಶ್ವಕರ್ಮವೆಂಬ ಆದಿತ್ಯರೂಪಿ ಶಿವನಕಿರಣವು ಬುಧಗ್ರಹಕ್ಕೂ, ವಿಶ್ವವ್ಯಚ ಎಂಬ ಕಿರಣವು ಶುಕ್ರಗ್ರಹಕ್ಕೂ, ಸೈಂಯದ್ವಸು ಎಂಬ ಕಿರಣವು ಮಂಗಳಗ್ರಹಕ್ಕೂ, ಆ ಪಿನಾಕಪಾಣಿಯ ಸರ್ವಾವಸು ಎಂಬ ಕಿರಣವು ಬೃಹಸ್ಪತಿಗ್ರಹಕ್ಕೂ, ಸ್ವರಾಟ್ ಕಿರಣವು ಶನೈಶ್ವರಗ್ರಹಕ್ಕೂ, ಬೆಳಕನ್ನು ಬೀರಿ ಪೋಷಕವಾಗಿ ಅವುಗಳ ಪ್ರಕಾಶಕ್ಕೆ ಕಾರಣವಾಗಿರುತ್ತವೆ. ಸೌಮ್ಯ ಕಿರಣಗಳ ಕಾರಣ ಸ್ವಭಾವವನ್ನು ಹೊಂದಿರುವ ಜಗತ್ತಿಗೆಲ್ಲ ಉಪದೇಶಕವಾದ ಆ ಶಂಕರನ ಮೂರ್ತಿಗೆ ಸೋಮ ಎಂದು ಹೆಸರು. ಯಮನಿಗೂ ಶಾಸಕನಾದ ಆ ಈಶ್ವರನ ಚಂದ್ರಾತ್ಮಕವಾದ ರೂಪವು ಸಕಲಜೀವರ ದೇಹಗಳಲ್ಲಿ ಧಾತುರೂಪದಿಂದ ಇದ್ದು ಅವುಗಳ ಸ್ಥಿತಿಗತಿಪ್ರಗತಿಗಳಿಗೆ ಕಾರಣವಾಗಿರುತ್ತವೆ. ಆ ಪರಮೇಶ್ವರನ ಸೋಮ ಎಂಬ ಮೂರ್ತಿಯು ತನ್ನ ಅಮೃತ ಸ್ವರೂಪವಾದ ಕಿರಣದಿಂದ ದೇವತೆಗಳನ್ನೂ ಪಿತೃಗಳನ್ನೂ ಪೋಷಿಸುತ್ತದೆ. ಅವನ ಜಲರೂಪವಾದ ಮೂರ್ತಿಯು ಬ್ರಹ್ಮಾಂಡಗಳ ಒಳಗೂ ಹೊರಗೂ ಇದ್ದು ಎಲ್ಲ ಪ್ರಾಣಿಗಳ ಶರೀರದಲ್ಲಿದ್ದು ಜೀವಾಧಾರವಾಗಿರುವದು. ಆ ಜಲಮಯ ಶರೀರವು ಚಂದ್ರ ಉಮಾರೂಪದಿಂದ ಎಲ್ಲಕ್ಕೂ ತಾಯಿಯಾಗಿ ಪ್ರಾಣಾಧಾರವಾಗಿ ಹೃದಯದಲ್ಲಿರುತ್ತದೆ. ಶಂಭುವಿನ ಅಗ್ನಿಮಯ

ಮೂರ್ತಿಯು ನಲವತ್ತೊಂಬತ್ತು ಭೇದಗಳುಳ್ಳದ್ದಾಗಿದೆ. ಅವನ ವಾಯುಮೂರ್ತಿಯು ಪ್ರಾಣ ಅಪಾನಾದಿ ವಾಯುಗಳು, ನಾಗಕೂರ್ಮಾದಿ ಉಪಪ್ರಾಣಗಳು ಮತ್ತು ಆಹವಾದಿ ವಾಯುಮಂಡಲಗಳು ಮುಂತಾದ ಭೇದ ಉಳ್ಳದ್ದಾಗಿರುತ್ತದೆ.

ಈಶ್ವರನ ಆಕಾಶಾತ್ಮಕವಾದ ಮೂರ್ತಿಯು ಬಹಳ ವಿಸ್ತಾರವಾದದ್ದು. ಅವನ ಪೃಥಿವೀಮೂರ್ತಿಯು ಚರಾಚರರೂಪವನ್ನು ಧರಿಸಿದೆ. ಪೃಥಿವ್ಯಾದಿಪಂಚಭೂತ, ಚಂದ್ರ, ಸೂರ್ಯ, ಆತ್ಮ (ಯಜಮಾನ) ಇವೆಲ್ಲವೂ ಸೇರಿ ಈಶ್ವರನ ಎಂಟು ಮೂರ್ತಿಗಳೆಂದು ಪ್ರಖ್ಯಾತವಾಗಿವೆ. ಆ ಎಂಟುಮೂರ್ತಿಗಳಲ್ಲಿ ಐದುಮೂರ್ತಿಗಳಿಂದ ಪಂಚಮಹಾಭೂತಗಳ ಉತ್ಪತ್ತಿಯಾಗಿದೆ. ಯಜಮಾನ ಎಂಬ ಹೆಸರುಳ್ಳ ಆತ್ಮನೇ ಅವನ ಎಂಟನೆಯಮೂರ್ತಿ. ಆ ಮೂರ್ತಿಯು ಯಜ್ಞದೀಕ್ಷಿತನಾದ ಬ್ರಾಹ್ಮಣನ ಮೂರ್ತಿ ಎಂದು ತಿಳಿಯುತ್ತಾರೆ. ಪರಮೇಶ್ವರನ ಈ ಅಷ್ಟಮೂರ್ತಿಗಳನ್ನು ಭಕ್ತಿಯಿಂದ ನೆನೆದು ನಮಸ್ಕರಿಸಿದವರಿಗೆ ಶ್ರೇಯೋಭಿವೃದ್ಧಿಯಾಗುವದು.

*ಲಿಂಗಮಹಾಪುರಾಣದ ಉತ್ತರ ಭಾಗದ ಪರಮೇಶ್ವರನ ಸೂರ್ಯಾದಿ ಸರ್ವಗ್ರಹಗಳ ಪೋಷಕತ್ವ ಹಾಗೂ ಸರ್ವ ಪ್ರಪಂಚ ನಿಯಮಾಕತ್ವ ಕಥನ ಎಂಬ ಹನ್ನೆರಡನೆಯ ಅಧ್ಯಾಯ ಮುಗಿದುದು*



## ಅಷ್ಟಮೂರ್ತಿ ಸ್ವರೂಪ

**ಅಧ್ಯಾಯ - ೧೩**

**ನಂದೀಶ್ವರ :-** ''ಅಷ್ಟಮೂರ್ತಿ ಸ್ವರೂಪದಿಂದ ಸಕಲ ಜಗತ್ತನ್ನೇ ವ್ಯಾಪಿಸಿರುವ ಆ ಗೌರೀಪತಿಯ ಮಾಹಾತ್ಮ್ಯವನ್ನು ಮತ್ತೆ ಹೇಳುತ್ತೇನೆ ಕೇಳು. ಚರಾಚರಪ್ರಾಣಿಗಳಿಗೆ ಆಧಾರಭೂತನಾಗಿ ಧರಾಸ್ವರೂಪನಾದ ಆ ಈಶ್ವರನನ್ನು ಸಕಲಶಾಸ್ತ್ರಗಳನ್ನು ತಿಳಿದಿರುವದರಿಂದ **'ಶರ್ವ'** ಎನ್ನುತ್ತಾರೆ. ವಿಶ್ವಂಭರ ಸ್ವರೂಪಿಯಾದ ಆ ಶರ್ವ ಎಂಬ ಪರಬ್ರಹ್ಮನಿಗೆ ವಿಕೇಶಿ ಎಂಬುವವಳೇ ಪತ್ನಿ, ಅಂಗಾರಕನೇ ಪುತ್ರ. ಸಕಲಲೋಕಗಳಿಗೂ ಸಂಜೀವಿನಿಯಂತಿರುವ ಆ ಈಶ್ವರನ ಜಲಮಯಮೂರ್ತಿಯನ್ನು 'ಭವ' ಎನ್ನುತ್ತಾರೆ. ಆ ಭವನಿಗೆ ಉಮಾದೇವಿಯೇ ಪತ್ನಿ, ಶುಕ್ರನು ಮಗ.

ಅಗ್ನಿ ಸ್ವರೂಪನಾದ ಆ ಪರಮಾತ್ಮನು ಪಶುಪತಿ, ಅವನ ಪತ್ನಿಯೇ ಸ್ವಾಹಾದೇವಿ. ಷಣ್ಮುಖನು ಆ ಪಶುಪತಿ ಹಾಗೂ ಸ್ವಾಹಾದೇವಿಗೆ ಮಗನು. ಆ ಶಂಕರನ ವಾಯು ರೂಪವಾದ ಮೂರ್ತಿಯೇ ಈಶಾನ. ಈಶಾನನ ಪತ್ನಿ ಶಿವಾ. ಅವನ ಪುತ್ರನೇ ಮನೋಜವನಾದ ಆಂಜನೇಯ. ಅವನ ಗಗನಾತ್ಮಕ ಮೂರ್ತಿಗೆ 'ಭೀಮಾ' ಎನ್ನುವರು. ಅವನೇ ವ್ಯೋಮರೂಪಿ. ಹತ್ತು ದಿಕ್ಕುಗಳೇ ಆ ವ್ಯೋಮಭೀಮನ ಪತ್ನಿಯರು ಸರ್ಗಎನ್ನುವವನು ಅವರ ಪುತ್ರ.

ಸೂರ್ಯಾತ್ಮಕನಾಗಿ ಸಕಲರಿಗೆ ಐಶ್ವರ್ಯವನ್ನು ಕೊಡುವ ಆ ಪರಮಾತ್ಮನನ್ನು 'ರುದ್ರ' ಎಂದು ಕರೆಯುವರು. ಅಣಿಮಾದಿ ಐಶ್ವರ್ಯವನ್ನು ಇಹಪರ ಸುಖಗಳನ್ನು ನೀಡುವ ಆ ಶಿವನಿಗೆ ಸುವರ್ಚಲೆಯು ಪತ್ನಿ, ಶನೈಶ್ಚರನು ಪುತ್ರ, ಸೌಮ್ಯ ವಸ್ತುಗಳ ಪ್ರಕೃತಿ ಎಂದು ಪ್ರಸಿದ್ಧವಾದ ಅವನ ಸೋಮಾತ್ಮಕವಾದ ಶರೀರವೇ ಮಹಾದೇವ.''

ದೇವತೆಗಳಿಗೆ ಹವಿಸ್ಸನ್ನು, ಪಿತೃಗಳಿಗೆ ಕವ್ಯವನ್ನು ತಲುಪಿಸುವ ಯಜಮಾನ ಎಂಬ ಹೆಸರಿನ ಮಹಾದೇವನ ಮೂರ್ತಿಯು ಉಗ್ರ ಎಂದು ಜ್ಞಾನಿಗಳಿಂದ ತಿಳಿಯಲ್ಪಡುತ್ತದೆ. ಆ ಉಗ್ರನಿಗೆ ವಿಶ್ವರಕ್ಷಣೆಯದೇ ದೀಕ್ಷೆ, ಮೂರ್ತ್ಯಾತ್ಮಕವಾದ ಈ ಪರಮಾತ್ಮನಿಗೆ ಪ್ರೀತಿಯಾಗಬೇಕಾದರೆ ಮಾನವರು ಸರ್ವರಿಗೂ ಉಪಕಾರ ಮಾಡಬೇಕು. ಸಕಲರ ಹಿತವನ್ನು ಬಯಸಬೇಕು. ಇದೆ ಅವನ ಮುಖ್ಯ ಸೇವೆ ಎಂದು ಮುನಿಮನುಜಶ್ರೇಷ್ಠರು ತಿಳಿಯುತ್ತಾರೆ.

*ಲಿಂಗಮಹಾಪುರಾಣ ಉತ್ತರಭಾಗದ ಶಿವನ ಅಷ್ಟಮೂರ್ತಿ ಸ್ವರೂಪದ ಗೈಮೆ ಹಾಗೂ ಮೈಮೆಗಳ ಕಥನ ಎಂಬ ಹದಿಮೂರನೆಯ ಅಧ್ಯಾಯವು ಮುಗಿದುದು*



## ಪಂಚಬ್ರಹ್ಮನಿರೂಪಣ

**ಅಧ್ಯಾಯ - ೧೪**

**ಸನತ್ಕುಮಾರ :-** ಪ್ರಮಥ ಗಣದಲ್ಲಿ ಶ್ರೇಷ್ಠನಾದ ನಂದೀಶ್ವರನೆ ಶರೀರಧಾರಿಗಳಾದ ಜೀವಿಗಳ ಪಂಚಬ್ರಹ್ಮ ಎಂಬ ಹೆಸರಿನ ಪರಮೇಶ್ವರನ ರೂಪಗಳ ಬಗೆಗೆ ನಮಗೆ ಹೇಳು.

**ನಂದೀಶ್ವರ :-** ಶಿವನು ಪಂಚಬ್ರಹ್ಮ ಸ್ವರೂಪನು. ಸರ್ವಲೋಕಗಳನ್ನು ನಿರ್ಮಾಣ ಮಾಡಿದ ಏಕೈಕ ದೇವನೆಂದರೆ ಶಿವ. ಸರ್ವ ಲೋಕಗಳ ಏಕೈಕ ಸಂಹಾರಕನೂ ಅವನೆ. ಸರ್ವಲೋಕಗಳ ಏಕೈಕ ರಕ್ಷಕನೆಂದರೂ ಶಿವನೆ, ಎಲ್ಲ ಜಗತ್ತುಗಳಿಗೂ ಆ ಪರಮೇಶ್ವರನೇ ಉಪಾದಾನ ಕಾರಣನಾಗಿದ್ದಾನೆ. ಈ ಪ್ರಪಂಚಕ್ಕೆ ನಿಮಿತ್ತ ಕಾರಣನೂ ಆ ಪರಬ್ರಹ್ಮನಾದ ಪರಶಿವನೆ. ಜಗದ್ರಕ್ಷಕನಾದ ಶಿವ ಪರಮಾತ್ಮನ ಪಂಚಮೂರ್ತಿಗಳೇ ಪಂಚಬ್ರಹ್ಮರೂಪಗಳೆಂದು ಪ್ರಸಿದ್ಧವಾಗಿವೆ. ಪ್ರಕೃತಿ ವರ್ಗದಲ್ಲಿರುವ ಭೋಗ್ಯ ವಸ್ತುಗಳ ಅನುಭಾವಕನಾದ ಆ ಶಿವನಿಗೆ 'ಈಶಾನ' ಎಂದು ಸಂಜ್ಞೆ ಇರುವದು. ಅವನೇಕ್ಷೇತ್ರಜ್ಞನಾದ ಆತ್ಮ.

ಆ ಭಗವಂತನ ತತ್ಪುರುಷ ಎಂಬುವದು ಆ ಶಿವನ ಎರಡನೆಯ ಮೂರ್ತಿ. ಅದು ಆ ಪರಮಾತ್ಮನ ಮುಖ್ಯಾಧಾರವಾದ ಪ್ರಕೃತಿ ಎಂದು ತಿಳಿಯಬೇಕು. ಆ ಶಿವಭಗವಂತನ ಮೂರನೆಯದಾದ 'ಅಘೋರಾ' ಎಂಬ ಮೂರ್ತಿಯು ಧರ್ಮವೆ ಮೊದಲಾದ ಅಷ್ಟಾಂಗಗಳಿಂದ ಕೂಡಿದ್ದು ಬುದ್ಧಿ ಸಂಬಂಧಿಯಾಗಿದೆ.

ಪರಮೇಶ್ವರನ ಈ ಪಂಚಬ್ರಹ್ಮರೂಪಗಳಲ್ಲಿ ಮೊದಲನೆಯದಾದ **'ಈಶಾನ'** ಮೂರ್ತಿಯು ಶ್ರವಣೇಂದ್ರಿಯ ರೂಪದಿಂದ ಎಲ್ಲ ಪ್ರಾಣಿಗಳ ಶರೀರದಲ್ಲಿಯೂ ಇರುತ್ತದೆ. ಸ್ವರ್ಶೇಂದ್ರಿಯ ರೂಪದಿಂದ, ಪ್ರಾಣಿದೇಹದಲ್ಲಿ, ತತ್ಪುರುಷನೆಂಬ ಶಿವಮೂರ್ತಿಯು ತೈಜಸೇಂದ್ರಿಯ ರೂಪದಿಂದ ಅವನ ಅಘೋರಮೂರ್ತಿಯು ರಸನೇಂದ್ರಿಯ ರೂಪದಿಂದ, ವಾಮದೇವಮೂರ್ತಿಯು ನಾಸಿಕಾರೂಪದಿಂದ, ಶಿವನ ಸದ್ಯೋಜಾತಮೂರ್ತಿಯು ಸರ್ವಜನ ಶರೀರದಲ್ಲಿರುತ್ತವೆ.

ಎಲ್ಲ ಜೀವ ಜಂತುಗಳ ದೇಹಗಳಲ್ಲಿ ಈಶಾನಮೂರ್ತಿಯು. ಕರ್ಮೇಂದ್ರಿಯಗಳಲ್ಲಿ ವಾಗ್ರೂಪದಿಂದಲೂ. ತತ್ಪುರುಷಮೂರ್ತಿಯು, ಕರ್ಮೇಂದ್ರಿಯವಾದ ಹಸ್ತರೂಪದಿಂದಲೂ ಸರ್ವಪ್ರಾಣಿಗಳ ಶರೀರದಲ್ಲಿರುತ್ತದೆ.

ಅಘೋರಮೂರ್ತಿಯು ಪಾದೇಂದ್ರಿಯ ರೂಪದಿಂದಲೂ, ವಾಮದೇವ ಮೂರ್ತಿಯು ಪಾಯುಇಂದ್ರಿಯ ರೂಪದಿಂದಲೂ, ಸದ್ಯೋಜಾತಮೂರ್ತಿಯು ಉಪಸ್ಥೇಂದ್ರಿಯ ರೂಪದಿಂದಲೂ ಎಲ್ಲ ಪ್ರಾಣಿಗಳ ಶರೀರದಲ್ಲಿಯೂ ಇರುತ್ತದೆ ಎಂದು ಶಾಸ್ತ್ರದ ಮರ್ಮವನ್ನು ತಿಳಿದವರು ಹೇಳುತ್ತಾರೆ.

ಸ್ಪರ್ಶಗುಣಾತ್ಮಕವಾದ ತತ್ಪುರುಷಮೂರ್ತಿಯು ವಾಯುಜನಕವಾಗಿದೆ. ರೂಪತನ್ಮಾತ್ರ ಸ್ವರೂಪವಾದ ಅಘೋರಮೂರ್ತಿಯು ತೇಜಸ್ಸಿಗೆ ಜನಕ. ರಸಾತ್ಮಕನಾದ ವಾಮದೇವ ಜಲಕ್ಕೆ ಜನಕ. ಪೃಥಿವೀಗುಣವಾದ ಗಂಧ ತನ್ಮಾತ್ರ ಸ್ವರೂಪನಾದ ಸದ್ಯೋಜಾತನು ಪೃಥ್ವಿಯ ಜನಕನಾಗಿದ್ದಾನೆ. ಆಕಾಶಮೂರ್ತಿಯಾದ ಈಶಾನ ದೇವನು ಮಹಾ ಪರಿಮಾಣದಿಂದ ಕೂಡಿದ ಅತ್ಯಂತ ಆಶ್ಚರ್ಯಕಾರಕನೆಂದು ಮುನಿಗಳಿಂದ ವರ್ಣಿಸಲ್ಪಟ್ಟಿದ್ದಾನೆ. ತತ್ಪುರುಷಮೂರ್ತಿಯನ್ನು ಸಕಲಪ್ರಪಂಚದಲ್ಲಿ ವಾಸಿಸಿರುವದರಿಂದ ವಾಯು ರೂಪಿಯನ್ನಾಗಿ ಜ್ಞಾನಿಗಳು ಹೇಳುತ್ತಾರೆ.

ಹೀಗೆ ಈಶಾನಾದಿ ಪಂಚ ಬ್ರಹ್ಮಾತ್ಮಕವಾದ ಸ್ಥಾವರ ಜಂಗಮಾತ್ಮಕವಾದ ಸಕಲಜಗತ್ತು ಆ ಪಾರ್ವತೀಶನ ಕ್ರೀಡಾಭೂಮಿ. ಅದು ಆನಂದಾತ್ಮಕವೂ ಆಗಿದೆ.

*ಲಿಂಗಮಹಾಪುರಾಣ ಉತ್ತರ ಭಾಗದ ಪಂಚಬ್ರಹ್ಮ ನಿರೂಪಣ*
*ಎಂಬ ಹದಿನಾಲ್ಕನೆಯ ಅಧ್ಯಾಯ ಸಮಾಪ್ತವಾದುದು*



## ಕ್ಷೇತ್ರಜ್ಞ ಕಥನ

**ಅಧ್ಯಾಯ - ೧೫**

**ನಂದಿಕೇಶ್ವರ :-** ಸನತ್ಕುಮಾರ ಮುನಿಯೇ, ನಾನು ಹೇಳುವ ಶಿವ ಮಾಹಾತ್ಮ್ಯವನ್ನು ನೀನು ಲಕ್ಷ್ಯವಿಟ್ಟು ಏಕಾಗ್ರ ಮನಸ್ಸಿನಿಂದ ಕೇಳು.

ಪರಬ್ರಹ್ಮನಾದ ಆ ಪರಮೇಶ್ವರನು ಸದ್ರೂಪ ಅಸದ್ರೂಪನು ಆಗಿದ್ದಾನೆ. ಅವನು ಸದಸತ್ಪತಿಯೂ ಆಗಿದ್ದಾನೆ. ಸದ್ರೂಪ ಎಂದರೆ ಕಾರಣ ಭೂತವಾದ ನಿತ್ಯ ದ್ರವ್ಯರೂಪನಾಗಿದ್ದಾನೆ ಎಂದು ಅರ್ಥ. ಅಸದ್ರೂಪನಾಗಿದ್ದಾನೆ ಎಂದರೆ ಕಾರ್ಯರೂಪವಾದ ಅನಿತ್ಯವಾದ ದ್ವ್ಯಣುಕಾದಿರೂಪನೂ ಆಗಿದ್ದಾನೆ. ಇವನನ್ನು ವೇದ ಶಾಸ್ತ್ರಗಳನ್ನು ಬಲ್ಲ ಪಂಡಿತರು ಸದ್ದ್ರವ್ಯಕ್ಕೂ, ಅಸದ್ದ್ರವ್ಯಕ್ಕೂ ಸ್ವಾಮಿಯಾಗಿದ್ದಾನೆ ಎಂದು ಹೇಳುತ್ತಾರೆ. ಆದುದರಿಂದ ಅವನು ಸದಸದ್ ಪತಿ ಎಂದೆನಿಸುತ್ತಾನೆ.

ಅದಕ್ಕೆ ಕಾರಣವನ್ನು ಹೀಗೆ ಹೇಳುತ್ತಾರೆ. ಪಂಚಮಹಾಭೂತಗಳಿಗೆ ಜಾಯತೆ, ಅಸ್ತಿ, ವರ್ಧತೆ ವಿಪರಿಣಮತೆ, ಅಪಕ್ಷೀಯತೆ, ನಶ್ಯತಿ, ಹುಟ್ಟುತ್ತದೆ, ಇರುತ್ತದೆ, ಬೆಳೆಯುತ್ತದೆ, ಪರಿಣಾಮ ಹೊಂದುತ್ತದೆ, ಕ್ಷೀಣವಾಗುತ್ತದೆ. ನಾಶಹೊಂದುತ್ತದೆ ಎಂದು ಆರು ವಿಧವಾದ ಭಾವವಿಕಾರಗಳು ಇರುತ್ತವೆ. ಇವುಗಳಲ್ಲಿ ಎರಡನೆಯ ವಿಕಾರವಾದ ಅಸ್ತಿ ಎಂದರೆ ಕಾರ್ಯರೂಪದಿಂದ ಇರುವಿಕೆ. ಎನ್ನುವ ಭಾವವಿಕಾರದಿಂದ ಆ ಶಿವನು ವ್ಯಕ್ತಸ್ವರೂಪನಾಗಿರುವನು. ಅದಕ್ಕೆ ಸದ್ರೂಪ ಎನ್ನುವರು. ಅಂಥಹ ಭಾವ

ವಿಕಾರವು ಇಲ್ಲದೆ ಕಾರಣರೂಪನಾಗಿರುವುದರಿಂದ ಅವ್ಯಕ್ತನಾಗಿರುವದರಿಂದ ಅಸದ್ರೂಪನೆಂದು ಹೇಳಲ್ಪಡುವನು.

ಆ ಎರಡೂ ರೂಪಗಳು ಶಂಕರನ ಸ್ವರೂಪವೇ ಆಗಿರುವದರಿಂದಲೂ ಆ ಎರಡೂ ರೂಪಗಳಿಗೆ ಅವನೇ ಸ್ವಾಮಿಯಾಗಿರುವದರಿಂದಲೂ ಸದಸತ್‌ಪತಿ ಎಂದು ಕರೆಯಲ್ಪಡುತ್ತಾನೆ.

ತತ್ವ ವಿಷಯವನ್ನು ಚಿಂತಿಸುವ ಸಾಂಖ್ಯರೆ ಮೊದಲಾದವರು. ಆ ಮಹೇಶ್ವರನು ಕ್ಷರಸ್ವರೂಪ, ಎಂದರೆ ನಶಿಷ್ಣುವಾದ ಎಲ್ಲ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ, ಸರ್ವಭೂತ ಸ್ವರೂಪನಾಗಿ ಇರುವವನು ಎಂದೂ ಮತ್ತು ಅಕ್ಷರ ಸ್ವರೂಪದಿಂದ ಮಾಯಾಶಕ್ತಿರೂಪನೆಂದೂ ಹೇಳುತ್ತಾರೆ.

ಕ್ಷರ ಪುರುಷರು ಎಂದರೆ ಎಲ್ಲ ಜೀವರು. ಅಕ್ಷರ ಎಂದರೆ ಪ್ರಕೃತಿ. ಈ ಕ್ಷರಾಕ್ಷರ ಪುರುಷರಿಗಿಂತ ಶ್ರೇಷ್ಠನಾದವನೇ ಮಹಾದೇವ, ಪರಶಿವ ಎನಿಸಲ್ಪಡುತ್ತಾನೆ. ಕೆಲವು ತತ್ವಜ್ಞಾನಿಗಳಾದ ಆಚಾರ್ಯರು ಶಿವನ ಸಮಷ್ಟಿ ಎನಿಸುವ ಮಾಯಾಶಕ್ತಿಯೂ, ವ್ಯಷ್ಟಿ ಎನಿಸುವ ಸಮಸ್ತಭೂತಗಳಿಗೂ ಅಧೀಶ್ವರನೆಂದೂ, ವ್ಯಕ್ತಾವ್ಯಕ್ತ ಪ್ರಪಂಚಕ್ಕೆ ಒಡೆಯನೆಂದೂ ನಿರೂಪಿಸುತ್ತಾರೆ.

ಇನ್ನು ಕೆಲವು ವೇದಾಂತಿಗಳು ಆ ಪರಮೇಶ್ವರನೇ ಕ್ಷೇತ್ರ ಸ್ವರೂಪನೂ, ಕ್ಷೇತ್ರಜ್ಞಸ್ವರೂಪನೂ ಆಗಿದ್ದಾನೆ ಎಂದು ಹೇಳುತ್ತಾರೆ. ಕ್ಷೇತ್ರ ಎಂದರೆ ಪಂಚಮಹಾಭೂತ, ಪಂಚತನ್ಮಾತ್ರ, ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ. ಒಟ್ಟು ಇಪ್ಪತ್ತು. ಮತ್ತು ಅಹಂಕಾರ, ಬುದ್ಧಿ, ಅವ್ಯಕ್ತ ಮಾಯಾಶಕ್ತಿ ಇವು ನಾಲ್ಕು ಸೇರಿಸಿ ಇಪ್ಪತ್ನಾಲ್ಕುತತ್ವಗಳು, ಇವುಗಳಿಂದ ನಿರ್ಮಿತವಾದ ಅಖಂಡ ಬ್ರಹ್ಮಾಂಡವು ಕ್ಷೇತ್ರ ಎನಿಸುವದು ಇದೆಲ್ಲದಕ್ಕು ಒಡೆಯನಾಗಿ ನಿಯಾಮಕನಾಗಿ ಇವನ್ನೆಲ್ಲ ಅಶೇಷ ವಿಶೇಷಾಕಾರವಾಗಿ ಸರ್ವಜ್ಞಮೂರ್ತಿಗೆ ಕ್ಷೇತ್ರಜ್ಞ ಎಂದು ಹೆಸರು.

ಈ ಕ್ಷೇತ್ರಕ್ಷೇತ್ರಜ್ಞರುಗಳು ಎರಡೂ ಸ್ವಯಂಭೂ ಆದ ಶಂಭುವಿನಿಗಿಂತ ಬೇರೆಯಲ್ಲ.

*ಲಿಂಗಮಹಾಪುರಾಣ ಉತ್ತರಭಾಗದ ಕ್ಷೇತ್ರಕ್ಷೇತ್ರಜ್ಞ ಕಥನ*
*ಎಂಬ ಹದಿನೈದನೆಯ ಅಧ್ಯಾಯ ಮುಗಿಯಿತು*



## ಅಧ್ಯಾಯ - ೧೬

**ನಂದೀಶ್ವರ:-** ಜ್ಞಾನಿಗಳಾದ ಮುನೀಶ್ವರರು ಅನೇಕ ಶಬ್ದಗಳಿಂದ ಶಿವ ರೂಪಗಳನ್ನು ಬಣ್ಣಿಸುತ್ತಾರೆ. ಕ್ಷೇತ್ರಜ್ಞ, ಪ್ರಕೃತಿ, ವ್ಯಕ್ತ, ಕಾಲ ಎಂದು ನಾಲ್ಕು ಭಗವಂತನ ಅಸಾಧಾರಣ ಕರ್ತೃತ್ವವನ್ನು ಸೂಚಿಸುವ ಶಬ್ದಗಳು. ಕ್ಷೇತ್ರಜ್ಞ ಎಂದರೆ ಶಬ್ದಾದಿ ಗುಣ ಭೋಕ್ತೃನಾದ ಜೀವ. ಪ್ರಕೃತಿ ಎಂದರೆ ಪ್ರಧಾನ. ಸಂಸಾರಕ್ಕೆ ಮೂಲಕಾರಣವಾದ ಮಾಯಾಶಕ್ತಿ. ವ್ಯಕ್ತ ಎಂದರೆ ಮೂಲ ಪ್ರಕೃತಿಯ ಕಾರ್ಯವಾದ ಪಂಚ ಮಹಾಭೂತಗಳ ಸಮೂಹ. ಕಾಲ ಎಂದರೆ ಪ್ರಧಾನ, ವ್ಯಕ್ತ ಇವುಗಳ ಪರಿಣತಿಗೆ ಕಾರಣವಾದ ಮಹಾಶಕ್ತಿ ಎಂದು ಅರ್ಥ. ಈ ನಾಲ್ಕು ರೂಪಗಳು ಶಿವ ಸ್ವರೂಪಗಳೆ.

ಇದೇ ರೀತಿಯಾಗಿ ಶಿವನನ್ನು ಹಿರಣ್ಯಗರ್ಭ, ಪುರುಷ, ಪ್ರಧಾನ, ವ್ಯಕ್ತ ಎಂದೂ ವ್ಯಸ್ತ, ಸಮಸ್ತ ಹಾಗೂ ಜಾತಿ ಸ್ವರೂಪನೆಂದೂ, ವಿರಾಟ, ಹಿರಣ್ಯಗರ್ಭ ಎಂದೂ ಅವನ ವಿವಿಧ ವ್ಯಾಪಾರಗಳ ಶಕ್ತಿಮತ್ವ ಸೂಚಕವಾದ ಶಬ್ದಗಳಿಂದ ಆ ಶಿವನನ್ನು ಪಂಡಿತರು ಬಣ್ಣಿಸುತ್ತಾರೆ. ಇನ್ನು ಕೆಲವರು ಆ ಪರಶಿವನನ್ನು ಅಂತರ್ಯಾಮಿ, ಸ್ವಯಂಜ್ಯೋತಿ ರೂಪವಾಗಿ ಇರುವನೆಂದು ಹೇಳುವರು. ಹಲವು ವಿದ್ವಾಂಸರು ಅವಸ್ಥಾತ್ರಯ ರಹಿತನಾದ ಶಿವನಿಗೆ ಪ್ರಾಜ್ಞ, ತೈಜಸ, ವಿಶ್ವ ಎಂಬ ಮೂರು ರೂಪಗಳನ್ನು ತಿಳಿಯುತ್ತಾರೆ. ಶಿವನಿಗೆ ಸುಷುಪ್ತಿ ಅವಸ್ಥೆಯಲ್ಲಿ ಪ್ರಾಜ್ಞ ಎನ್ನುವರು. ಸ್ವಪ್ನಾವಸ್ಥೆಯಲ್ಲಿ ತೈಜಸ, ಜಾಗ್ರದವಸ್ಥೆ ಯಲ್ಲಿ ವಿಶ್ವನೆಂತಲೂ ಹೆಸರಿರುತ್ತವೆ. ವಿರಾಟ್, ಹಿರಣ್ಯಗರ್ಭ, ಅವ್ಯಾಕೃತ ಎಂಬ ಮೂರು ಶಬ್ದಗಳಿಂದ ಪರಮೇಶ್ವರನ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳು ಹೇಳಲ್ಪಡುತ್ತವೆ. ಈ ಮೂರು ರೂಪಗಳೇ ಜಾಗೃತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೆ ನಿಯಾಮಕವಾಗಿರುತ್ತವೆ.

ತುರೀಯನಾದ ಕಲ್ಪಿತಗಳಾದ ಮೂರು ಅವಸ್ಥೆಗಳುಳ್ಳ ಶಿವನಿಗೆ ಹಿರಣ್ಯಗರ್ಭ (ಬ್ರಹ್ಮ), ಪುರುಷ (ವಿಷ್ಣು), ಕಾಲ (ರುದ್ರ) ಎಂಬುದಾಗಿ ಹೇಳಲ್ಪಟ್ಟ ಮೂರು ರೂಪಗಳು ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕಾರಣಗಳಾಗಿವೆ.

ಪರಮೇಶ್ವರನ ಅವಸ್ಥಾತ್ರಯದಲ್ಲಿ ಅಭಿಮಾನಿಗಳಾಗಿರುವ ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರು ಮೂರ್ತಿಗಳನ್ನು ಭಕ್ತಿಯಿಂದ ಆರಾಧನೆಮಾಡಿ ಜೀವರು ಮೋಕ್ಷವನ್ನು ಪಡೆಯುತ್ತಾರೆ. ಪ್ರಕೃತಿಯ ಇಪ್ಪತ್ನಾಲ್ಕು ತತ್ವಗಳು ಮೂಲಪ್ರಕೃತಿ ಹಾಗು ಪುರುಷ ಇವೆಲ್ಲವೂ ಶಿವಸ್ವರೂಪವಾಗಿ ಶಿವನಿಂದ ನಿಯಮ್ಯವಾಗಿ ಶಿವಸ್ವರೂಪವಾಗಿರುತ್ತವೆ. ಸಮುದ್ರದ ತರಂಗಗಳ ಸಮೂಹವು ಸಮುದ್ರದ ನೀರಿಗಿಂತ ಹೇಗೆ ಬೇರೆಯಲ್ಲವೋ ಹಾಗೆ ಈ ಎಲ್ಲ ತತ್ವಗಳು ಶಿವ ಸ್ವರೂಪವೆಂದೇ ಜ್ಞಾನಿಗಳು ತಿಳಿಯುತ್ತಾರೆ. ಮಾಯಾ ಮೊದಲಾದ ಐದು ಸ್ವರೂಪಗಳುಳ್ಳ ಗೌರೀದೇವಿಯು ಆ ಶಂಕರನಿಂದಲೇ ಉತ್ಪನ್ನಳಾದಳು. ಸೂರ್ಯನಿಂದ ಹೊರ ಹೊಮ್ಮುವ ಕಿರಣಗಳು ಸೂರ್ಯನದೇ ಸ್ವರೂಪವಾಗಿರುವಂತೆ ಗೌರಿಯು ಮಹಾದೇವನ ಅಭಿನ್ನಾಂಶಳೇ ಆಗಿರುತ್ತಾಳೆ.

*ಇತಿ ಶ್ರೀ ಲಿಂಗಮಹಾಪುರಾಣ ಉತ್ತರಭಾಗ ಪರಶಿವನ ವಿವಿಧ ಸ್ವರೂಪ ಕಥನ ಎಂಬ ಹದಿನಾರನೆಯ ಅಧ್ಯಾಯ ಮುಗಿದುದು*

**ಸನತ್ಕುಮಾರ:-** ಭಗವಂತನಾದ ರುದ್ರನು ಶರೀರ ಉಳ್ಳವನಾಗಿ ಯಾವನಿಂದ ಹೇಗೆ ಉಂಟಾದನು? ಎನ್ನುವದನ್ನು ಪಾಶಪತವ್ರತದ ಸ್ವರೂಪವನ್ನು ನನಗೆ ತಿಳಿಸಿ ಹೇಳಿರಿ.

**ನಂದೀಶ್ವರ :-** ಪರಮಾತ್ಮ ಸ್ವರೂಪನಾದ ಕೂಟಸ್ಥನಿಂದ ಈ ಬ್ರಹ್ಮಾಂಡ ಮಂಟಪಕ್ಕೆ ಆಧಾರಸ್ತಂಭವಾಗಿರುವ ಶಿವನು ಉತ್ಪನ್ನನಾದನು. ಅವನೇ ಈ ಪ್ರಪಂಚಕ್ಕೆಲ್ಲ ಮುಖ್ಯಮೂಲಕಾರಣ ಜಗತ್ತಿನ ವಿಸ್ತಾರಕ್ಕೆ ಕಾರಣವಾದ ವಸ್ತುಗಳೆಲ್ಲವೂ ಅವನ ಅಧೀನದಲ್ಲಿಯೇ ಇದ್ದವು. ಆ ರುದ್ರನಿಂದಲೇ ದೇವತೆಗಳಿಗೆಲ್ಲ ಆದ್ಯಪುರುಷನಾದ ಬ್ರಹ್ಮನು ಸೃಷ್ಟಿಸಲ್ಪಟ್ಟನು. ಕಣ್ಣೆದುರು ನಿಂತುಕೊಂಡ ಆ ಬ್ರಹ್ಮದೇವನನ್ನು ಮಹಾದೇವನು ನೋಡಿ ಅವನಿಗೆ ಸೃಷ್ಟಿಕಾರ್ಯವನ್ನು ಮಾಡಲು ಆಜ್ಞಾಪಿಸಿದನು. 'ವಿರಾಟ್' ಎಂಬ ಹೆಸರುಳ್ಳ ಆ ಚತುರ್ಮುಖ ಬ್ರಹ್ಮನು ವರ್ಣ, ಆಶ್ರಮಗಳನ್ನೆಲ್ಲ ವ್ಯವಸ್ಥೆಗೊಳಿಸಿದನು. ಬ್ರಾಹ್ಮಣಾದಿ ವರ್ಣಗಳು, ಬ್ರಹ್ಮಚರ್ಯಾದಿ ಆಶ್ರಮಗಳನ್ನು ನಿರ್ಮಿಸಿದ ಆ ಬ್ರಹ್ಮನೇ ಯಜ್ಞಕ್ಕೋಸ್ಕರ ಸೋಮದ್ರವ್ಯವನ್ನು ಉತ್ಪಾದಿಸಿದನು. ಉಮಾದೇವಿಯಿಂದ ಸಹಿತನಾದುದರಿಂದ ಸೋಮ ಎಂದು ಕರೆಸಲ್ಪಡುವ ರುದ್ರನು ಕೂಡ ಎಲ್ಲದಕ್ಕಿಂತ ಮೊದಲು ಆ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟನು. ಆ ಸೋಮನಿಂದಲೇ ಹವಿಷ್ಯ ರೂಪವಾದ ಸೋಮವು, ಅಗ್ನಿಯು, ಯಜ್ಞವು ಶಚೀಪತಿಯಾದ ದೇವೇಂದ್ರನು, ಮಹಾವಿಷ್ಣುವು ಉತ್ಪನ್ನರಾಗಿ ಎಲ್ಲ ಜಗತ್ತು ಸೋಮಮಯವಾಯಿತು. ಈಶ್ವರನಾದ ಆ ಮಹಾರುದ್ರ ದೇವರನ್ನು ದೇವತೆಗಳು ರುದ್ರಾಧ್ಯಾಯದಿಂದ ಸ್ತೋತ್ರಮಾಡುತ್ತಿರುವಾಗ ಆ ಮಹೇಶ್ವರನು ದೇವತೆಗಳ ಬುದ್ಧಿಯನ್ನು ಅಪಹರಿಸಿ ಅವರ ಮಧ್ಯದಲ್ಲಿ ಪ್ರಸನ್ನ ಮುಖನಾಗಿ ನಿಂತುಕೊಂಡನು. ಆಗ ಆ ದೇವತೆಗಳು 'ನೀನು ಯಾರು?' ಎಂದು ಆ ಶಂಕರನನ್ನು ಕೇಳಿದರು. ಆಗ ಶಿವನು ದೇವತೆಗಳಿಗೆ ತನ್ನ ವಿರಾಟ್‌ರೂಪವನ್ನು ಪರಿಚಯ ಮಾಡಿಕೊಡುತ್ತ ಹೇಳಿದನು.

**ಶಂಕರ :-** ದೇವತೆಗಳೆ, ನಾನು ಈ ಚರಾಚರ ಪ್ರಪಂಚದ ಸೃಷ್ಟಿಗಿಂತ ಪೂರ್ವದಲ್ಲಿಯೇ ಅದ್ವಿತೀಯನಾಗಿ ಮೊದಲನೆಯವನಾಗಿಯೂ ಇದ್ದೆ. ಈ ವರ್ತಮಾನ ಕಾಲದಲ್ಲಿಯೂ ನಾನು ಇರುತ್ತೇನೆ. ಭವಿಷ್ಯತ್ ಕಾಲದಲ್ಲಿಯೂ ಇರುತ್ತೇನೆ. ನನಗಿಂತ ಬೇರೆ ಭಿನ್ನವಾದ ಬೇರೆ ಚೇತನನೂ ಇಲ್ಲ. ಅಚೇತನವಾದ ಘಟಪಟಾದಿ ಪದಾರ್ಥಗಳು ನನ್ನಿಂದ ವ್ಯತಿರಿಕ್ತವಾಗಿಲ್ಲ. ನಾನು ಆತ್ಮ ಸ್ವರೂಪದಿಂದ ನಿತ್ಯನಾಗಿಯೂ ಘಟಪಟಾದಿ ಸ್ವರೂಪದಿಂದ ಅನಿತ್ಯನಾಗಿಯೂ, ಪರಹಿತನಾಗಿಯೂ ದೋಷರಹಿತನಾಗಿಯೂ ಇರುತ್ತೇನೆ. ಬ್ರಹ್ಮನಾಗಿ ನಾನೇ ಸೃಷ್ಟಿಮಾಡುತ್ತೇನೆ. ನಾನೇ ಪುರುಷ. ನಾನೇ ಪ್ರಕೃತಿ. ಅಷ್ಟುದಿಕ್ಕುಗಳ ಒಡೆಯರಾದ ದಿಕ್ಪಾಲಕರ ಸ್ವರೂಪನೂ ನಾನೆ. ಎಲ್ಲ ತತ್ವಗಳಿಗಿಂತ ನಾನೇ ಶ್ರೇಷ್ಠ. ನೀರಿಗೆ ಒಡೆಯನಾದ ವರುಣನು ನಾನೇ ಇರುತ್ತೇನೆ. ಋಗ್ವೇದ, ಯಜುರ್ವೇದ, ಸಾಮವೇದ ಅಥರ್ವಣವೇದ ಎಂಬ ನಾಲ್ಕು ವೇದಗಳ ಸ್ವರೂಪನು ನಾನೇ ಆಗಿರುತ್ತೇನೆ.

ಇತಿಹಾಸ, ಪುರಾಣ, ಕಲ್ಪ ಮೊದಲಾದವುಗಳಿಂದ ಪ್ರತಿಪಾದ್ಯನು ನಾನೇ ಆಗಿರುತ್ತೇನೆ. ಸರ್ವವೇದಗಳ ಗುಹ್ಯಾರ್ಥವೇ ನಾನು. ಈ ಬ್ರಹ್ಮಾಂಡದ ಒಳಗೂ ಹೊರಗೂ ಮಧ್ಯದಲ್ಲಿಯೂ ನಾನೇ ಇರುತ್ತೇನೆ. ಬ್ರಹ್ಮ ವಿಷ್ಣು, ಮಹೇಶ್ವರರ ಸ್ವರೂಪನಾದ ನಾನು ವಿಷ್ಣುರೂಪನೇ ಆಗಿದ್ದೇನೆ. ಹೀಗೆ ಮಹಾದೇವನು ತನ್ನ ಸರ್ವಾತ್ಮ ಭಾವವನ್ನು ಈ ರೀತಿಯಾಗಿ ತಿಳಿಸಿಹೇಳಿ ಅಲ್ಲಿಯೇ ಅಂತರ್ಧಾನ ಹೊಂದಿದನು. ಅನಂತರ ಶ್ರೀಮನ್ನಾರಾಯಣನು, ದೇವೇಂದ್ರನೇ ಮೊದಲಾದ ದೇವತೆಗಳು ಕೈಜೋಡಿಸಿ ಆ ರುದ್ರದೇವರನ್ನು ಧ್ಯಾನಿಸುತ್ತ ಸ್ತುತಿಸಿದರು.

*ಲಿಂಗ ಮಹಾಪುರಾಣ ಉತ್ತರ ಭಾಗ ಈಶನ ಸರ್ವಾತ್ಮ ಭಾವ ಕಥನ*
*ಎಂಬ ಹದಿನೇಳನೆಯ ಅಧ್ಯಾಯ ಮುಗಿದುದು*



## ಶಿವನಾಮಗಳ ಅರ್ಥ

**ಅಧ್ಯಾಯ - ೧೮**

**ದೇವತೆಗಳು:**

**ಯ ಏಷ ಭಗವಾನ್ರುದ್ರೋ ಬ್ರಹ್ಮವಿಷ್ಣುಮಹೇಶ್ವರಾಃ ।**
**ಸ್ಕಂದಶ್ಚಾಪಿ ತಥಾ ಚೇಂದ್ರೋ ಭುವನಾನಿಚತುರ್ದಶ ।**
**ಅಶ್ವಿನೌ ಗ್ರಹತಾರಾಶ್ಚ ನಕ್ಷತ್ರಾಣಿ ಚ ಖಂ ದಿಶಃ ॥**

ಯಾವ ಭಗವಂತನಾದ ರುದ್ರದೇವನು ಬ್ರಹ್ಮಾ, ವಿಷ್ಣು, ಮಹೇಶ್ವರ ಸ್ವರೂಪನಾಗಿಯೂ, ಸುಬ್ರಹ್ಮಣ್ಯದೇವ ಸ್ವರೂಪನಾಗಿಯೂ ಇಂದ್ರದೇವ ಸ್ವರೂಪನಾಗಿಯೂ ಅತಲ, ವಿತಲ, ಸುತಲ, ತಲಾತಲ, ಮಹಾತಲ, ಪಾತಾಲ, ಭೂರ್ಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳೆಂಬ ಹದಿನಾಲ್ಕು ಲೋಕಗಳ ಸ್ವರೂಪನಾಗಿಯೂ, ಅಶ್ವಿನೀದೇವತೆಗಳ ಸ್ವರೂಪನಾಗಿಯೂ, ನವಗ್ರಹಗಳೆಂಬ ತಾರ (ನಕ್ಷತ್ರ) ಸ್ವರೂಪನಾಗಿಯೂ, ಆಕಾಶ ಸ್ವರೂಪನಾಗಿಯೂ, ಪೂರ್ವಾದಿ ದಿಕ್ಕುಗಳ ಸ್ವರೂಪನಾಗಿಯೂ, (ಪಂಚಭೂತ ಸ್ವರೂಪನಾಗಿಯೂ, ಸೂರ್ಯದೇವ ಸ್ವರೂಪನಾಗಿಯೂ, ಪ್ರಾಣ, ಘ್ರಾಣ, ವಾಕ್, ಜಿಹ್ವಾ, ಚಕ್ಷುಸ್ಸು, ಶ್ರೋತ್ರ, ಮನಸ್ಸು, ತ್ವಕ್ ಎಂಬ ಎಂಟು ಇಂದ್ರಿಯಗಳ ಸ್ವರೂಪನಾಗಿಯೂ ಇರುವನೋ.

**ಭೂತಾನಿ ಚ ತಥಾ ಸೂರ್ಯಃ ಸೋಮಶ್ಚಾಷ್ಟಗ್ರಹಾಸ್ತಥಾ ।**
**ಪ್ರಾಣಃ ಕಾಲೋ ಯಮೋ ಮೃತ್ಯು-ರಮೃತಃ ಪರಮೇಶ್ವರಃ ॥**

**ಭೂತಂ ಭವ್ಯಂ ಭವಿಷ್ಯಂಚ ವರ್ತಮಾನಂ ಮಹೇಶ್ವರಃ ।**
**ವಿಶ್ವಂ ಕೃತ್ಸ್ನಂ ಜಗತ್ಸರ್ವಂ ನಿತ್ಯಂ ತಸ್ಮೈ ನಮೋ ನಮಃ ॥**

ಮತ್ತು ಪಂಚಭೂತ ಸ್ವರೂಪನಾಗಿಯೂ, ಸೂರ್ಯದೇವ ಸ್ವರೂಪನಾಗಿಯೂ, ಚಂದ್ರದೇವ ಸ್ವರೂಪನಾಗಿಯೂ ಅಷ್ಟಗ್ರಹಗಳ, ಮತ್ತು ಪ್ರಾಣ, ಘ್ರಾಣ, ವಾಕ್,

ಜಿಹ್ವಾ, ಚಕ್ಷಸ್ಸು, ಶ್ರೋತ್ರ, ಮನಸ್ಸು, ತ್ವಕ್ ಎಂಬ ಎಂಟು ಇಂದ್ರಿಯಗಳ ಸ್ವರೂಪನಾಗಿಯೂ, ಪಂಚಪ್ರಾಣ ಸ್ವರೂಪನಾಗಿಯೂ, ಯಮದೇವ ಸ್ವರೂಪನಾಗಿಯೂ, ಮೃತ್ಯುದೇವ ಸ್ವರೂಪನಾಗಿಯೂ, ಮೋಕ್ಷ ಸ್ವರೂಪನಾಗಿಯೂ, ಮತ್ತು ಭೂತ ಕಾಲದಲ್ಲಿಯೂ, ವರ್ತಮಾನ ಕಾಲದಲ್ಲಿಯೂ, ಭವಿಷ್ಯತ್ಕಾಲದಲ್ಲಿಯೂ ಇರುವ ಸಮಸ್ತ ಪ್ರಪಂಚವೂ ಕೂಡ ನಿಜವಾದ ಯಾವ ಪರಮೇಶ್ವರನ ಸ್ವರೂಪವಾಗಿರುವುದೋ ಆ ಪರಮೇಶ್ವರನಿಗೆ ನಮಸ್ಕಾರವು.

ಹೃದಯದಲ್ಲಿರುವ ಅಕಾರ, ಉಕಾರ, ಮಕಾರ ಎಂಬ ಮೂರು ಮಾತ್ರೆಗಳು ಎಲ್ಲ ದೇವತೆಗಳು ಹೃದಯವೇ ಆಧಾರವಾಗಿ ಉಳ್ಳ ಪ್ರಾಣನಲ್ಲಿ ಪ್ರತಿಷ್ಠಿತವಾಗಿವೆ. ಪ್ರಾಣರೂಪನಾಗಿರುವ ನೀನು ಹೃದಯದಲ್ಲಿ ನಿತ್ಯವೂ ಇರುವದರಿಂದ 'ನಾದ' ವೆಂಬ ಅರ್ಧಮಾತ್ರಾ ರೂಪನಾಗಿರುತ್ತಿ. ಶಿರಸ್ಥಾನಾಪನ್ನವಾದ ಆಕಾರವು ಮೇಲಿನ ಭಾಗವಾಗಿಯೂ, ಪಾದಸ್ಥಾನಾಪನ್ನವಾದ ಮಕಾರವು ಕೆಳಭಾಗವಾಗಿಯೂ, ಉಕಾರವು ಮೇಲಿನ ಭಾಗಕ್ಕೆ ಸೇರಿಕೊಂಡಿರುವಂತಹದಾಗಿಯೂ ಇರುವ, ಹೃದಯ ಕೇಂದ್ರದಲ್ಲಿ ತೋರುವ ಓಂಕಾರವೇ ನಿತ್ಯವಾದ ಶಿವನು. ಉಚ್ಚರಿಸಲ್ಪಟ್ಟ ಓಂಕಾರದಿಂದ ಕಾಲಕ್ರಮೇಣ ಸಂಪೂರ್ಣವಾಗಿ ಮೇಲಕ್ಕೆ ಹೋಗುವದರಿಂದ ಓಂಕಾರಕ್ಕೆ ಪ್ರಣವ ಎಂದು ಹೆಸರಾಯಿತು. ಸಂಸಾರಸಾಗರದಿಂದ ದಾಟಿಸುವದರಿಂದ ಆ ಶಿವನು ತಾರ ಎಂದು ಕರೆಯಲ್ಪಡುತ್ತಾನೆ. ಸ್ವಯಂ ಪ್ರಕಾಶನಾಗಿ ಇತರ ವಸ್ತುಗಳನ್ನು ಅವನು ವೈದ್ಯುತ, ಐಹಿಕ, ಆಮುಷ್ಮಿಕ ಫಲಗಳನ್ನು ಪುಷ್ಟಿಪಡಿಸುವದರಿಂದ ಪರಬ್ರಹ್ಮ, ಭೂಲೋಕ ಸ್ವರ್ಗಲೋಕಗಳಿಗೆ ಸ್ವಾಮಿಯಾಗಿ ಎಲ್ಲ ವಿದ್ಯೆಗಳಿಗೂ ಪ್ರತಿಪಾದ್ಯನಾಗಿ ಒಡೆಯನಾಗಿರುವದರಿಂದ ಈಶಾನ, ತಾನು ಇತರರನ್ನು ನೋಡುತ್ತಿದ್ದರೂ ತನ್ನನ್ನು ಯಾರೂ ನೋಡದೇ ಇರುವಂತಹ 'ಅನಿರೀಕ್ಷ್ಯಂ' ಎಂದೂ ಯೋಗ ಮಹಾತ್ಮ್ಯವನ್ನು ಉಪದೇಶಮಾಡುವದರಿಂದ ಭಗವಾನ್ ಎಂದೂ, ಎಲ್ಲ ಪ್ರಾಣಿಗಳನ್ನು ಸೃಷ್ಟಿಸಿ ರಕ್ಷಿಸಿ ಕೊನೆಗೆ ತಾನೇ ಅವುಗಳನ್ನೆಲ್ಲ ಸ್ವೀಕರಿಸುವದರಿಂದ ಮಹೇಶ್ವರನೆಂದೂ ಆನೇಕ ಸಾತ್ವಿಕ ಶಬ್ದಗಳಿಂದ ನೀನೇ ಹೊಗಳಲ್ಪಡುತ್ತಿರುವೆ.

ವ್ರತಗಳಲ್ಲೆಲ್ಲ ಪಾಶುಪತವ್ರತವೇ ಶ್ರೇಷ್ಠವಾದದ್ದು. ಆ ಪಾಶುಪತವ್ರತವನ್ನು ಮೊದಲು ಸಂಕಲ್ಪಮಾಡಿ ಪ್ರಾರಂಭಿಸಬೇಕು. ವೇದಮಂತ್ರಗಳಿಂದ ಅಗ್ನಿಯನ್ನು ಆಧಾನಮಾಡಿ ಉಪವಾಸವಿದ್ದು ಸ್ನಾನಮಾಡಿ ಶುದ್ಧನಾಗಿ ವಿರಜಾ ಹೋಮವನ್ನು ಮಾಡಬೇಕು. ಹೋಮಕಾಲದಲ್ಲಿ ''ಪ್ರಾಣಾಪಾನವ್ಯಾನೋದಾನ ಸಮಾನಾ ಮೇ ಶುದ್ಧ್ಯಂತಾಮ್'' ಎಂದು ವೇದದಲ್ಲಿ ಹೇಳಿದಂತೆ ಸಂಕಲ್ಪವನ್ನು ಮಾಡಬೇಕು. ಅದರಂತೆ ನನ್ನ ವಾಗಿಂದ್ರಿಯ, ಮನಸ್ಸು, ಕರಣಗಳು, ಶ್ರೋತ್ರೇಂದ್ರಿಯ, ರಸನೇಂದ್ರಿಯ, ಬುದ್ಧಿ, ಶಿರಸ್ಸು, ಕೈಗಳು, ಎಡಬಲ ಪಾರ್ಶ್ವಗಳು, ಪೃಷ್ಠ, ಉದರವು ಶುದ್ಧವಾಗಲಿ, ಮೊಳಕಾಲು, ಶಿಶ್ನ, ಉಪಸ್ಥ, ಗುದ, ಅಂಡ, ಚರ್ಮ, ರಕ್ತ, ವೇದಸ್ಸು, ಮೂಳೆಗಳು, ಶಬ್ದ, ಸ್ಪರ್ಶ ರೂಪ, ರಸ, ಗಂಧಗಳು, ದೇಹದಲ್ಲಿರುವ ಸಕಲ ಭೂತಗಳು ಶುದ್ಧಿಯನ್ನು ಹೊಂದಲಿ. ಆದರಂತೆ ನನ್ನ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಕೋಶಗಳು ಶುದ್ಧವಾಗಲಿ ಎಂದು ಪ್ರಾರ್ಥಿಸಬೇಕು. ತುಪ್ಪ, ಸಮಿಧೆಗಳು ಮೊದಲಾದ

ಚರದ್ರವ್ಯಗಳಿಂದ ಹೋಮವನ್ನು ಮಾಡಬೇಕು. ಹೋಮಾನಂತರ ಅಗ್ನಿಯನ್ನು ಸೂಕ್ತಕ್ರಮದಿಂದ ವಿಸರ್ಜಿಸಿ ಭಸ್ಮವನ್ನು ತೆಗೆದುಕೊಳ್ಳಬೇಕು. 'ಅಗ್ನಿರಿತಿ ಭಸ್ಮ' ಎಂಬ ಮೊದಲಾದ ಮಂತ್ರಗಳಿಂದ ಆ ಭಸ್ಮಗಳನ್ನು ಅಂಗಾಂಗಗಳಲ್ಲಿ ಲೇಪಿಸಿಕೊಳ್ಳಬೇಕು. ಇದೇ ದಿವ್ಯವಾದ ಪಾಶುಪತವ್ರತ. ಇದು ಉಪಾಸಕರನ್ನು ಸಂಸಾರ ಬಂಧನದಿಂದ ಪಾರುಮಾಡುತ್ತದೆ.

ಈ ಪಾಶುಪತವ್ರತಕ್ಕೆ ಬ್ರಾಹ್ಮಣ, ಕ್ಷತ್ರಿಯು, ವೈಶ್ಯರು, ಸನ್ಯಾಸಿಗಳು, ಸತ್ಪುರುಷರು, ಸತ್ಪುರುಷರಾದ ಗೃಹಸ್ಥರು, ವಾನಪ್ರಸ್ಥರು ಅಧಿಕಾರಿಗಳಾಗಿದ್ದಾರೆ. ಅಗ್ನಿ ಹೋತ್ರದಿಂದ ಉಂಟಾದ, ಭಸ್ಮವನ್ನು ಮಂತ್ರೋಚ್ಚಾರಣ ಪೂರ್ವಕವಾಗಿ ಧಾರಣಮಾಡಿಕೊಂಡವನು **'ಪಾಶುಪತ'** ಎಂದು ಕರೆಯಿಸಿಕೊಳ್ಳಲ್ಪಡುತ್ತಾನೆ. ವ್ರತವನ್ನು ಅನುಷ್ಠಾನ ಮಾಡದಿದ್ದರೂ ಕೇವಲ ಭಸ್ಮ ಲೇಪನ ಮಾತ್ರದಿಂದಲೂ ಪಾಶುಪತವ್ರತವನ್ನು ಮಾಡಿದ ಫಲವನ್ನು ಮಾನವನು ಹೊಂದುತ್ತಾನೆ.

ಭಸ್ಮವು ಅಗ್ನಿಯ ವೀರ್ಯ. ಅದನ್ನು ಧಾರಣಮಾಡುವವನು ಪರಾಕ್ರಮಶಾಲಿಯಾಗುತ್ತಾನೆ. ಭಸ್ಮಸ್ನಾನಮಾಡುವವನೂ, ಭಸ್ಮದಮೇಲೆ ಮಲಗುವವನೂ, ಜಿತೇಂದ್ರಿಯನೂ ಆದ ಶಿವ ಭಕ್ತನು ಪಾಪಗಳಿಂದ ಮುಕ್ತನಾಗಿ ಶಿವ ಸಾಯುಜ್ಯವನ್ನು ಪಡೆಯುವನು. ಗೃಹಸ್ಥನು ಭಸ್ಮಧಾರಣಮಾಡದಿದ್ದರೆ ಅವನ ಸ್ನಾನದಾನ ಪೂಜಾ ಕರ್ಮಗಳೆಲ್ಲವೂ ಮತ್ತು ಅವನು ಈ ಭೂಮಿಯಲ್ಲಿ ಮಾಡಿದ ದಾನ ಧರ್ಮಗಳೆಲ್ಲವೂ ನಿಷ್ಫಲವಾಗುವವು.

ಅನಂತರ ಆ ದೇವತೆಗಳನ್ನು ಬ್ರಾಹ್ಮಣರನ್ನು ಅನುಗ್ರಹಿಸಲು ಸ್ವಯಂ ಪರಮೇಶ್ವರನು ಪಾರ್ವತೀ ಮತ್ತು ತನ್ನ ಪ್ರಮಥಗಣಗಳಿಂದೊಡಗೂಡಿ ದೇವತೆಗಳು ಇದ್ದಲ್ಲಿಗೆ ಬಂದನು. ಆಗ ಆ ದೇವತೆಗಳೆಲ್ಲರೂ ರುದ್ರಾಧ್ಯಾಯದಿಂದ ಸ್ತೋತ್ರಮಾಡಿದರು. ಅದರಿಂದ ಸಂತುಷ್ಟನಾದ ಆ ಪರಮೇಶ್ವರನು ''ನಿಮಗೆ ವರಗಳನ್ನು ಅನುಗ್ರಹಿಸುವದಕ್ಕಾಗಿಯೇ ನಾನು ಇಲ್ಲಿಗೆ ಬಂದಿದ್ದೇನೆ. ನಿಮ್ಮ ಸ್ತೋತ್ರಗಳಿಂದ ಸಂತುಷ್ಟನಾಗಿದ್ದೇನೆ. ಬೇಕಾದ ವರಗಳನ್ನು ಕೇಳಿರಿ'' ಎಂದು ಹೇಳಿದನು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಶಿವನ ನಾಮಗಳ ಅರ್ಥ ವಿವರಣ ಪಾಶುಪತವ್ರತದ ವಿಧಾನ ಎಂಬ ಹದಿನೆಂಟನೆಯ ಅಧ್ಯಾಯ ಸಮಾಪ್ತ*

—o—

## ಅಧ್ಯಾಯ - ೧೯

**ದೇವತೆಗಳು :-** ಪರಮೇಶ್ವರನೆ, ನಿನ್ನ ಪೂಜೆಯನ್ನು ಯಾರು ಮಾಡಬೇಕು? ಹೇಗೆ ಮಾಡಬೇಕು? ಎಲ್ಲಿ ಮಾಡಬೇಕು? ಬ್ರಾಹ್ಮಣರು ಮಾಡುವ ಪೂಜೆಯ ಪ್ರಕಾರವೇನು? ಕ್ಷತ್ರಿಯರ ಪೂಜಾ ವಿಧಾನ ಹೇಗೆ? ವೈಶ್ಯರ ಪೂಜಾಪದ್ಧತಿ ಯಾವುದು? ಸ್ತ್ರೀಯರು ಶೂದ್ರರು ನಿನ್ನನ್ನು ಹೇಗೆ ಪೂಜಿಸಬೇಕು? ಅದಕ್ಕಿಂತಲೂ ಕೀಳುಜಾತಿಯವರಾದ ಕುಂಡಗೋಳಕರು ನಿನ್ನನ್ನು ಪೂಜಿಸುವ ಬಗೆ ಎಂತು? ಪರಮೇಶ್ವರನೆ, ಪ್ರಪಂಚದ ಕ್ಷೇಮಕ್ಕಾಗಿ ಇದೆಲ್ಲವನ್ನು ನೀನು ನಮಗೆ ತಿಳಿಸು ''

ಹೀಗೆ ದೇವತೆಗಳಿಂದ ಪ್ರಾರ್ಥಿತನಾದ ಶ್ರೀ ಪರಮೇಶ್ವರನು ದೇವತೆಗಳ ಪ್ರಶ್ನೆಗಳಿಗೆ ಸಂತುಷ್ಟನಾಗಿ ಉತ್ತರ ಕೊಡಬೇಕೆಂದು ಆ ದೇವತೆಗಳ ಕಣ್ಣೆದುರು ಬಂದು ನಿಂತುಕೊಂಡನು. ಆಗ ಆ ಮಹೇಶನು ಸೂರ್ಯಮಂಡಲದಲ್ಲಿ ಸನ್ನಿಹಿತನಾಗಿದ್ದನು. ಸೂರ್ಯಮಂಡಲದ ಮುಂಭಾಗದಲ್ಲಿ ಎಂಟು ತೋಳು, ನಾಲ್ಕು ಮುಖ, ಹನ್ನೆರಡು ಕಣ್ಣುಗಳುಳ್ಳ ಆ ಪರಮೇಶ್ವರನು ಜಟಾಕಿರೀಟಗಳನ್ನು ಧರಿಸಿ ಉಮಾದೇವಿಯೊಂದಿಗೆ ಕೋಟಿಮಿಂಚುಗಳಿಗೆ ಸಮಾನವಾದ ಕಾಂತಿಯುಳ್ಳವನಾಗಿ ಅರ್ಧನಾರೀಶ್ವರ ರೂಪದಿಂದ ಆ ದೇವತೆಗಳ ಕಣ್ಣಿಗೆ ಕಾಣಿಸಿಕೊಂಡನು.

ಆ ಪರಮೇಶ್ವರನ ತತ್ಪುರುಷ ರೂಪವಾದ ಪೂರ್ವದಿಕ್ಕಿನ ಮುಖ ಹಳದಿ ಬಣ್ಣದ್ದೂ, ಪ್ರಸನ್ನವಾಗಿಯೂ ಇದ್ದಿತು. ದಕ್ಷಿಣ ದಿಕ್ಕಿನ ಅಘೋರ ಮೂರ್ತಿಯ ಮುಖವು ಕಪ್ಪುಕಾಡಿಗೆಯಂತಿರುವ ಕಾಂತಿಯುಳ್ಳದ್ದಾಗಿ ಭಯಂಕರ ಕೋರೆದಾಡೆಗಳಿಂದ ಕೂಡಿ ಜ್ವಾಲೆಗಳ ಮಾಲೆಗಳಿಂದ ಒಪ್ಪುತ್ತಿತ್ತು. ಉತ್ತರದಲ್ಲಿ ವಾಮದೇವ ಎಂಬ ಮುಖವು ರಕ್ತವರ್ಣದ ಗಡ್ಡ, ಮೀಸೆ, ಜಡೆಗಳಿಂದ ಕೂಡಿ ಹವಳದ ಕಾಂತಿಯಿಂದ ಪ್ರಸನ್ನವಾಗಿ ಹೊಳೆಯುತ್ತಿತ್ತು. ಸದ್ಯೋಜಾತ ಎಂಬ ಶಿವನ ಪಶ್ಚಿಮ ದಿಕ್ಕಿನ ಮುಖವು ಹಸುವಿನ ಹಾಲಿನಂತೆ ಶುಭ್ರವೂ, ಮಂಗಳಕರವೂ, ಮುತ್ತಿನಹಾರಗಳಿಂದ ಅಲಂಕೃತವೂ ಆಗಿ ತಿಲಕದಿಂದ ಪ್ರಕಾಶಮಾನವಾಗಿದ್ದು ಅತ್ಯಂತ ಮನೋಹರವಾಗಿದ್ದಿತ್ತು.

ಮುಂಭಾಗದಲ್ಲಿ ನಾಲ್ಕು ಮುಖವುಳ್ಳ ಸೂರ್ಯನನ್ನು ದಕ್ಷಿಣೋತ್ತರ ಭಾಗದಲ್ಲಿ ಚತುರ್ಮುಖನಾದ ಸೂರ್ಯನನ್ನು ನೋಡಿದರು.

ಬಲಭಾಗದಲ್ಲಿ ಬ್ರಹ್ಮ, ಎಡಭಾಗದಲ್ಲಿ ವಿಷ್ಣು, ಮಧ್ಯದಲ್ಲಿ ಬ್ರಹ್ಮಾಸನದಲ್ಲಿ ಈಶಾನರೂಪದಿಂದ ಮಂಡಿಸಿದ ಆ ಶಿವನನ್ನು ನೋಡಿದರು.

ದೀಪ್ತಾ, ವಿದ್ಯುತ್ಪ್ರಭಾ, ಜಯಾ, ವಿಭೂತಿ, ವಿಮಲಾ ಅಮೋಘಾ, ವಿದ್ಯುತ್ ಎಂಬ ಏಳು ಶಕ್ತಿದೇವತೆಗಳು ಆ ಶಂಕರನ ಕೈಂಕರ್ಯಕ್ಕೆ ಕೈ ಜೋಡಿಸಿ ನಿಂತಿದ್ದನ್ನು ನೋಡಿದರು. ಚಂದ್ರ, ಅಂಗಾರಕ, ಬುಧ, ಬೃಹಸ್ಪತಿ, ಶುಕ್ರ, ಶನಿ ಮೊದಲಾದ ಗ್ರಹಾಧಿಪತಿಗಳೆಲ್ಲರೂ ಆ ಶಿವನ ಪಾದೋಪಾಂತ ಸ್ಥಳದಲ್ಲಿ ಸೇವೆಗಾಗಿ ಸಿದ್ಧರಾಗಿ

ನಿಂತುಕೊಂಡಿದ್ದರು. ಇಂಥ ಆ ಭಗವಂತನನ್ನು ನೋಡಿ ದೇವತೆಗಳೆಲ್ಲರೂ ತನ್ನ ಎಲ್ಲ ಪರಿವಾರದೊಂದಿಗೆ ಕೂಡಿ ಪ್ರತ್ಯಕ್ಷನಾದ ಪರಮೇಶ್ವರನನ್ನು ನೋಡಿ ಕೈಜೋಡಿಸಿ ತಲೆಬಾಗಿಸಿ ಸ್ತೋತ್ರಮಾಡಿದರು. ಮತ್ತು ಎಲ್ಲ ಋಷಿಗಳು ಆ ಶಿವಸ್ತೋತ್ರಕ್ಕೆ ತಮ್ಮ ಧ್ವನಿ ಕೂಡಿಸಿದರು.

**ನಮಃ ಶಿವಾಯ ರುದ್ರಾಯ ಕದ್ರುದ್ರಾಯ ಪ್ರಚೇತಸೇ।**
**ಮೀಢುಷ್ಟಮಾಯ ಶರ್ವಾಯ ಶಿಪಿವಿಷ್ಟಾಯ ರಂಹಸೇ॥**

ಮಂಗಳಕರನೂ, ವರುಣಸ್ವರೂಪಿಯೂ, ದುಷ್ಟರಿಗೆ ಭಯಂಕರನೂ, ಸಜ್ಜನರಿಗೆ ಸುಖವನ್ನು ವರ್ಷಿಸುವವನೂ, ಪಶುಗಳಲ್ಲಿ ಯಜ್ಞಸ್ವರೂಪದಿಂದ ಪ್ರವೇಶಿಸುವವನು ಆದ ಪರಮೇಶ್ವರನೆ, ನಿನಗೆ ನಮಸ್ಕಾರ. ಶ್ರೇಷ್ಠವಾದ ಆಸನದಲ್ಲಿ ನವಶಕ್ತಿಗಳಿಂದ ಕೂಡಿಕೊಂಡು ಕಮಲದಲ್ಲಿ ಇರುವ ಸೂರ್ಯರೂಪನಾದ ದೇವನನ್ನೂ ಹಾಗೂ ಅವನಿಂದಲೇ ಬೆಳಕನ್ನೂ ಕಾಂತಿಯನ್ನೂ ಪಡೆದ ಆದಿತ್ಯ, ಭಾಸ್ಕರ, ಭಾನು, ರವಿ, ದಿವಾಕರ ಎಂಬ ಹೆಸರುಳ್ಳ ಸೂರ್ಯನನ್ನೂ ನಾವು ನಮಸ್ಕರಿಸುತ್ತೇವೆ. ಉಮಾ, ಪ್ರಭಾ, ಪ್ರಜ್ಞಾ, ಸಂಧ್ಯಾ, ಸಾವಿತ್ರಿ, ವಿಸ್ತಾರ, ಉತ್ತರಾ, ಬೋಧಿನಿ ಮುಂತಾದ ಅವನ ಸೇವೆಗಾಗಿ ನಿಂತಿರುವ ದೇವಿಯರನ್ನು ಬ್ರಹ್ಮ, ವಿಷ್ಣು, ಮಹೇಶ್ವರ ಮೊದಲಾದ ದೇವತೆಗಳನ್ನು ನಾವು ನಮಸ್ಕರಿಸುತ್ತೇವೆ.

**ನಮಃ ಶಿವಾಯ ದೇವಾಯ ಈಶ್ವರಾಯ ಕಪರ್ದಿನೆ।**
**ರುದ್ರಾಯ ವಿಷ್ಣವೇ ತುಭ್ಯಂ ಬ್ರಹ್ಮಣೇ ಸೂರ್ಯ ಮೂರ್ತಯೇ॥**

ಬ್ರಹ್ಮ ವಿಷ್ಣು ಮಹೇಶ್ವರರ ಸ್ವರೂಪನಾದ ಸೂರ್ಯಮೂರ್ತಿಯಾದ ಈಶ್ವರನಿಗೆ ನಮ್ಮ ನಮಸ್ಕಾರ.

*ಇತಿ ಲಿಂಗ ಮಹಾಪುರಾಣ ಉತ್ತರ ಭಾಗದ ದೇವತೆಗಳು ಋಷಿಗಳು ಮಾಡಿದ ಶಿವಸ್ತೋತ್ರ ಎಂಬ ಹತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—○—

## ಗುರುಶಿಷ್ಯರ ಆಯ್ಕೆ



**ನಂದಿಕೇಶ್ವರ :-** ದೇವತೆಗಳು ಋಷಿಗಳು ಕೂಡಿ ಮಾಡಿದ ಸ್ತೋತ್ರವನ್ನು ಕೇಳಿ ಪರಮೇಶ್ವರನು ಸಂತುಷ್ಟನಾದನು. ಮತ್ತು ತನ್ನ ಸಂತೋಷಕ್ಕೆ ಕಾರಣವಾದ ಶಿವಪೂಜೆಯನ್ನು ಹೇಗೆ ಮಾಡಬೇಕೆಂಬ ವಿಧಿವಿಧಾನಗಳನ್ನೆಲ್ಲ ಕ್ರಮಬದ್ಧವಾಗಿ ನಿರೂಪಿಸಿದನು. ಅವನ ಬಾಯಿಂದಲೇ ಶಿವಪೂಜಾ ವಿಧಾನವನ್ನು ಕೇಳಿ ದೇವತೆಗಳು ಋಷಿಗಳು ಸಂತುಷ್ಟರಾದರು. ಹೀಗೆ ಮಹರ್ಷಿಗಳನ್ನು ಮಹಾದೇವತೆಗಳನ್ನು ಸಂತೋಷಪಡಿಸಿ ಆ ಮಹಾದೇವನು ಅವರೆಲ್ಲರನ್ನು ಆಶೀರ್ವದಿಸಿ ಅಲ್ಲಿಂದ ಅಂತರ್ಧಾನವನ್ನು ಹೊಂದಿದನು. ಶಂಕರನಿಂದಲೇ ಶಂಕರನ ಪೂಜಾ ಕೈಂಕರ್ಯ ಹಾಗೂ ವಿಧಿವಿಧಾನಗಳನ್ನು ಕೇಳಿ ಸಂತೃಪ್ತರಾದ ದೇವತೆಗಳು ಹಾಗೂ ಋಷಿಗಳು ತಾವು ಧನ್ಯರಾದೆವೆಂದುಕೊಂಡು ಅಲ್ಲಿಂದ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

**ಸನತ್ಕುಮಾರ :-** ನಂದಿಕೇಶ್ವರನೆ, ಮಹಾದೇವನು ಹೇಳಿದ ಶಿವಪೂಜಾವಿಧಿ ವಿಧಾನಗಳನ್ನು ನೀನು ನಮಗೆ ಯಥಾವತ್ತಾಗಿ ತಿಳಿಸು.

**ನಂದಿಕೇಶ್ವರ :-** ಶಾಸ್ತ್ರಸಮ್ಮತವಾದ ಗುರುವಿನ ಉಪದೇಶದಂತೆ ಶಿವಪೂಜಾ ಅಧಿಕಾರಾದಿಗಳನ್ನು ನಾನು ನಿಮಗೆ ತಿಳಿಸುತ್ತೇನೆ. ಶೈವಧರ್ಮವನ್ನು ಅದರ ಮರ್ಮವನ್ನು ತಿಳಿದಿರುವ ಆಚಾರ್ಯರಿಗೆ ಗುರು ಎಂದು ಅನ್ವರ್ಥಕವಾದ ಹೆಸರು ಇರುತ್ತದೆ. ಶಿವ ಧರ್ಮವನ್ನು ಸರಿಯಾಗಿ ತಿಳಿಯದಿದ್ದವ ಶಿವಾಚಾರ್ಯನೇ ಅಲ್ಲ.

**"ಸ್ವಯಮಾಚರತೇ ಯಸ್ತು ಆಚಾರೇ ಸ್ಥಾಪಯತ್ಯಪಿ ಆಚಿನೋತಿ ಚ ಶಾಸ್ತ್ರಾರ್ಥಾ ನಾಚಾರ್ಯಸ್ತೇನ ಚೋಚ್ಯತೇ**

ಶಾಸ್ತ್ರಾರ್ಥಗಳನ್ನು ಚೆನ್ನಾಗಿ ಓದಿ ತಿಳಿದುಕೊಳ್ಳಬೇಕು. ಮತ್ತು ಸ್ವಯಂ ತಾನು ಶಾಸ್ತ್ರದ ವಿಧಿವಿಧಾನಗಳನ್ನು ಆಚರಣದಲ್ಲಿ ತರಬೇಕು. ಅದರಂತೆ ಜನರಿಗೆಲ್ಲ ಉಪನ್ಯಾಸ, ಪಾಠಪ್ರವಚನಗಳಿಂದ ಶಾಸ್ತ್ರಾರ್ಥಗಳನ್ನು ತಿಳಿಸಿ ಅವರ ಕಡೆಯಿಂದ ಸದಾಚಾರಗಳನ್ನು ಮಾಡಿಸಿ ಸದ್ವಿಚಾರಗಳನ್ನು ಎಲ್ಲರಿಗೂ ಬಿಂಬಿಸಬೇಕು. ಅಂಥವನು ಮಾತ್ರ ಆಚಾರ್ಯ ಎಂದು ಕರೆಯಲ್ಪಡುವನು.

ಆದುದರಿಂದ ಶಿವಭಕ್ತನು ಭಸ್ಮವನ್ನು ಧಾರಣಮಾಡಿಕೊಂಡ, ವೇದಶಾಸ್ತ್ರಗಳ ತತ್ವಾರ್ಥಗಳನ್ನು ಚೆನ್ನಾಗಿ ಬಲ್ಲ ಆಚಾರ್ಯರನ್ನು ಹುಡುಕಿ ಪಡೆಯಬೇಕು. ಆ ಗುರುವು ಶ್ರುತಿಗಳಲ್ಲಿ ಹೇಳಿದ, ಸ್ಮೃತಿಗಳಲ್ಲಿ ಬೋಧಿಸಿದ ಧರ್ಮಕರ್ಮಗಳನ್ನು ಮಾಡುತ್ತಿರಬೇಕು. ಅವನಿಗೆ ಇಂದ್ರಿಯ ಚಾಪಲ್ಯ ಇರಬಾರದು. ಜನರಿಗೆಲ್ಲ ತನ್ನ ಪ್ರವಚನದಿಂದ ಸಂತೋಷಪಡಿಸುವವನಿರಬೇಕು. ಮತ್ತು ಅವನು ತಾನು ಕಲಿತ ವಿದ್ಯೆಯನ್ನು ಸಂತೋಷದಿಂದ ಜನರಿಗೆ ಬೋಧಿಸುವ ಸ್ವಭಾವದವನಾಗಿರಬೇಕು.

ಇಂಥ ಗುರುವನ್ನು ಶಿಷ್ಯನಾದವನು ದೈಹಿಕ ಸೇವೆಯಿಂದಲೂ, ಆರ್ಥಿಕ ಸಹಾಯದಿಂದಲೂ ಅವನನ್ನು ಒಲಿಸಿಕೊಂಡು ಅವನ ಅನುಗ್ರಹವನ್ನು ಸಂಪಾದಿಸಬೇಕು.

ಗುರು ಒಲಿದರೆ ಕೂಡಲೇ ಭವಪಾಶವು ನೀಗುವುದು. ಆದುದರಿಂದಲೇ ಗುರುವು ಅತ್ಯಂತ ಮಾನನೀಯನಾಗಿದ್ದಾನೆ. ಅವನನ್ನು ಭಕ್ತಿಯಿಂದ ಪೂಜಿಸಬೇಕು. ಗುರು ಎಂದರೆ ಸಾಕ್ಷಾತ್ ಪರಮೇಶ್ವರನೆ ಎಂದು ತಿಳಿಯಬೇಕು.

ಇಂಥ ಗುರುವು ಶಿಷ್ಯರನ್ನು ಮೂರುವರುಷಗಳವರೆಗೆ ಮನೆಯಲ್ಲಿಟ್ಟುಕೊಂಡು ಅನ್ನಪಾನಾದಿಗಳನ್ನು ಕೊಟ್ಟು ಕೆಲಸಗಳನ್ನು ಮಾಡಿಸಿಕೊಳ್ಳುತ್ತ ಪರೀಕ್ಷಿಸಬೇಕು. ಉತ್ತಮನಾದವನನ್ನು ಕೀಳುಕೆಲಸಗಳಲ್ಲಿಯೂ, ಕೀಳುದರ್ಜೆಯವನನ್ನು ಉತ್ತಮ ಕೆಲಸಗಳಲ್ಲಿಯೂ ತೊಡಗಿಸಿ ಪರೀಕ್ಷಿಸಬೇಕು. ಹೊಡೆದು ಬಡಿದು ಬೈಯ್ದು ಅಂದು ಯಾವದೇ ಕೆಲಸಕ್ಕು ಎಷ್ಟೇ ದುಡಿಸಿಕೊಂಡರೂ ಯಾರು ದುಃಖ ಪಡುವದಿಲ್ಲವೋ ಹಿಂದೇಟು ಹಾಕುವದಿಲ್ಲವೋ ಅವರೇ ನಿಜವಾದ ಶಿಷ್ಯರು. ಶಿವಧರ್ಮದಲ್ಲಿ ದೀಕ್ಷೆಯುಳ್ಳವರು, ಧರ್ಮಸಂಪನ್ನರು, ವೇದಶಾಸ್ತ್ರದ ಮಾರ್ಗವನ್ನು ಅನುಸರಿಸುವವರು, ಎಲ್ಲ ವಿಧವಾದ ದುಃಖ ದುಮ್ಮಾನಗಳನ್ನು ಸಹಿಸುವವರು. ಪರೋಪಕಾರಮಾಡುವ ಸ್ವಭಾವವುಳ್ಳವರು. ಗುರುಗಳಸೇವೆಯನ್ನು ಪ್ರೀತಿಯಿಂದ ಮಾಡುವವರು ಶಿಷ್ಯರಾಗಲು ಅರ್ಹರು ಆಗಿರುತ್ತಾರೆ.

ಶಿಷ್ಯರು ಮೃದು ಸ್ವಭಾವದವರಾಗಿರಬೇಕು. ಆರೋಗ್ಯ ಸರಿ ಇರಬೇಕು. ಗುರುಗಳಿಗೆ ಎಂದೂ ಎದುರು ಬೀಳಬಾರದು. ಗರ್ವ, ದುರಾಶೆ, ದಂಭ, ಅಸೂಯೆ, ಮುಂತಾದ ಯಾವದೋಷಗಳು ಅವರಲ್ಲಿರಬಾರದು. ಬುದ್ಧಿವಂತರಿದ್ದರೂ ಈರ್ಷೆ, ಅಸೂಯೆ ಅವರಲ್ಲಿ ಇರಕೂಡದು. ಇಂತಹ ಸದಾಚಾರ, ಸದ್ವಿಚಾರಗಳುಳ್ಳ ಶಿಷ್ಯರನ್ನೇ ಆರಿಸಿಕೊಂಡು ಪಾಠ ಹೇಳಬೇಕು.

ಇದರಂತೆಯೆ ಗುರುವಾಗುವವನು ಕೂಡ ವಿಶಿಷ್ಟ ಗುಣಗಳುಳ್ಳವನಿರಬೇಕು. ಶಾಸ್ತ್ರಗಳಲ್ಲಿ ಒಳ್ಳೆಯ ಜ್ಞಾನ, ಜನರಲ್ಲಿ ಪ್ರೀತಿ, ಪಾರಮಾರ್ಥಿಕ ವಿಷಯಗಳಲ್ಲಿ ಆಸಕ್ತಿ, ಲೌಕಿಕ ಜ್ಞಾನ ಇವುಗಳೆಲ್ಲ ಇದ್ದರೆ ಮಾತ್ರ ಅವನು ಗುರು ಪದಕ್ಕೆ ಅರ್ಹನಾಗುವನು. ಇಂತಹ ಗುಣಗಳಿಂದ ಒಡಗೂಡಿದ ಗುರು ಮಾತ್ರ ಶಿಷ್ಯರನ್ನು ಮೋಕ್ಷ ಮಾರ್ಗದಲ್ಲಿ ಮುನ್ನಡೆಸಬಲ್ಲ.

ಇವೆಲ್ಲ ಲಕ್ಷಣಗಳಿದ್ದರೂ ಆತ್ಮಜ್ಞಾನವಿಲ್ಲದಿದ್ದರೆ ಅಂತಹ ಗುರು ಅಪ್ರಯೋಜಕ. ಆತ್ಮಜ್ಞಾನಇಲ್ಲದವರು ಪಶುವು ಎಂದು ಹೇಳಲ್ಪಟ್ಟಿದ್ದಾರೆ. ಇಂತಹ ಪಶುಗಳು ಯಾರಿಗೆ ಉಪದೇಶ ಮಾಡುತ್ತಾರೋ ಅವರೆಲ್ಲರೂ ಶುದ್ಧಪಶುಗಳೇ ಆಗಿರುತ್ತಾರೆ. ಸ್ವಯಂ ಆತ್ಮಜ್ಞಾನಶೂನ್ಯರಾದವರು ಮತ್ತೊಬ್ಬರನ್ನು ಸಂಸಾರ ಬಂಧನದಿಂದ ಹೇಗೆ ಪಾರುಮಾಡಬಲ್ಲರು? ಒಂದು ಕಲ್ಲು ಮತ್ತೊಂದು ಕಲ್ಲನ್ನು ತೇಲಿಸಿ ದಾಟಿಸಬಲ್ಲದೆ? ಯಾವನಿಗೆ ಕೇವಲ ಶಬ್ದದಿಂದ ತತ್ವಜ್ಞಾನದ ಪರಿಚಯವಿರುವದೋ ಅವನು ಮಾಡಿದ ಉಪದೇಶವೂ ಕೂಡ ವಾಸ್ತವವಾಗಿರದೇ ಕೇವಲ ಶಾಬ್ದಿಕವಾಗಿರುವದು. ನಿಜವಾದ ಜ್ಞಾನಯೋಗಿಗಳ ದರ್ಶನದಿಂದ ಸ್ಪರ್ಶನ, ಭಾಷಣಗಳಿಂದ ತಕ್ಷಣದಲ್ಲಿಯೇ ಸಂಸಾರ ಬಂಧನ ನಾಶಕ್ಕೆ ಕಾರಣವಾದ ತತ್ವಜ್ಞಾನವು ಉತ್ಪನ್ನವಾಗಿರುತ್ತದೆ. ಹಾಗಾಗದಿದ್ದರೆ. ಯೋಗಮಾರ್ಗದಲ್ಲಿ ಮುಂದುವರಿದ ಯೋಗಿಯು ಶಿಷ್ಯನ ದೇಹವನ್ನು ಪ್ರವೇಶಿಸಿ ಸಕಲತತ್ವಗಳನ್ನು ಯೋಗಬಲದಿಂದ ಉಪದೇಶಿಸುತ್ತಾನೆ. ಯೋಗಿ ಪುರುಷನಿಗೆ ಜ್ಞಾನ ಸಂಬಂಧದಿಂದ ಮೂರು ವಿಧವಾದ ಪರೀಕ್ಷೆಯ ಹೇಳಲ್ಪಟ್ಟಿದೆ. ವೇದಗಳಲ್ಲಿ

ಪಾರಂಗತನು, ಸದಾಚಾರವನ್ನು ಅರಿತವನು. ಸ್ವಭಾವತಃ ಧಾರ್ಮಿಕ ಪ್ರವೃತ್ತಿಯವನು ಆದ ಶಿಷ್ಯನನ್ನು ಜ್ಞಾನ ಆಚಾರವಿಚಾರ ಮೂರರಿಂದ ಪರೀಕ್ಷಿಸಬೇಕು. ದೀಪದಿಂದ ದೀಪವು ಹೊತ್ತಿ ಬೆಳಕನ್ನು ಬೀರುವಂತೆ ಪಂಡಿತನಾದ ಗುರುವಿನಿಂದ ಜ್ಞಾನ ಕಲಿತು ಜ್ಞಾನಜ್ಯೋತಿಯನ್ನು ಎಲ್ಲ ಕಡೆಗೂ ಬೆಳಗಿಸಬೇಕು.

ಸಕಲಶಾಸ್ತ್ರ ಸಮ್ಮತವಾದ ತತ್ವಗಳು ಭೌವನ, ಪದ, ವರ್ಣ, ಮಾತ್ರ, ಕಾಲಾಧ್ವರ ಎಂದು ಆರು ಬಗೆಯಾಗಿರುತ್ತವೆ. ಪೃಥಿವಿ ಮೊದಲಾದ ಪಂಚಭೂತಗಳು ಭೌವನ ತತ್ವಗಳು ಎನಿಸುವವು. ಶಬ್ದಸ್ಪರ್ಶ ರೂಪ, ರಸ, ಗಂಧ ಮೊದಲಾದ ಗುಣಗಳು ಸ್ವಭಾವತಃ ಏವ ಪದಸಂಜ್ಞೆ ಉಳ್ಳವುಗಳು. ಪಂಚಜ್ಞಾನೇಂದ್ರಿಯಗಳಿಗೆ ವರ್ಣ ಎಂಬ ಹೆಸರು. ಪಂಚಕರ್ಮೇಂದ್ರಿಯಗಳು ಮಾತ್ರಾ ಎನಿಸುತ್ತವೆ. ಮನಸ್ಸು, ಬುದ್ಧಿ, ಅಹಂಕಾರ, ಅವ್ಯಕ್ತ ಇವು ಕಾಲಾಧ್ವರ ಎಂಬ ಸಂಜ್ಞೆ ಉಳ್ಳಂಥವು. ಪೃಥಿವಿ, ತೇಜಸ್ಸು ವಾಯು, ಜಲ, ಆಕಾಶ ಇವೆಲ್ಲವೂ ಜಡಭೂತವಾದವುಗಳು. ಇವುಗಳಿಂದಲೇ ಜಗತ್ ಚಕ್ರವು ಪ್ರವರ್ತಿಸುವದು ಈಶ್ವರನ ಕಾಣದ ಶಕ್ತಿಯ ಕೈವಾಡವೆಂದು ಗುರುವು ಶಿಷ್ಯರಿಗೆ ಮನಗಾಣಿಸಿಕೊಡಬೇಕು. ಪ್ರತ್ಯಕ್ಷವಾಗಿ ಭುವನದಲ್ಲಿ ಕಾಣುವ ಎಲ್ಲ ಪದಾರ್ಥಗಳ ಅಂತರ್ಯಾಮಿಯಾದ ಶಕ್ತಿಯನ್ನು ತಿಳಿಯುವದೇ ಭೌವ್ವನ ವಿದ್ಯೆ. ಪಂಚೇಂದ್ರಿಯ ವಿಷಯಗಳಾದ ಶಬ್ದ, ಸ್ಪರ್ಶ ರೂಪ, ರಸ, ಗಂಧ ಮೊದಲಾದವುಗಳು ಎಲ್ಲದರಲ್ಲಿಯೂ ಭಗವದನುಸಂಧಾನ ಇರುವವನಿಗೆ ಸುಖಕ್ಕೆ ಆಸ್ಪದಮಾಡಿಕೊಡುತ್ತವೆ. ಆ ವಿಷಯಗಳ ಬೆನ್ನುಹತ್ತಿ ದುರ್ಮಾರ್ಗಗಾಮಿಯಾದವನಿಗೆ ದುಃಖಕ್ಕೂ ಕಾರಣವಾಗುತ್ತವೆ. ಪಂಚಜ್ಞಾನೇಂದ್ರಿಯಗಳು ಭಗವಂತನನ್ನೇ ವರಿಸಿ ಅರಿಸಿ ಅವನನ್ನೆ ವರಣಮಾಡಿದರೆ ಆ ಮನುಷ್ಯನು ವರ್ಣನೀಯನಾಗುತ್ತಾನೆ. ಪಂಚಕರ್ಮೇಂದ್ರಿಯಗಳು ಎಲ್ಲಿ ಹೋಗಬೇಕು? ಏನು ಮಾಡಬೇಕು? ಎನ್ನುವದನ್ನು ತಿಳಿಸಿ ಮಾನವರು ಸನ್ಮಾರ್ಗಗಾಮಿಗಳೂ ಒಳ್ಳೆಯ ಕಾರ್ಯಮಾಡುವವರೂ ಹೇಗೆ ಆಗಬೇಕು ಎನ್ನುವದನ್ನು ತಿಳಿಸಿ ಮಾನವರನ್ನು ರಕ್ಷಿಸುತ್ತವೆ. ದುರ್ಮಾರ್ಗದಲ್ಲಿ ಕಾಲಿರಿಸಬಾರದು ಎಂದು ತಿಳಿಸಿ ಮಾನವನನ್ನು ಅಧಃಪಾತದಿಂದ ಉಳಿಸಿ ಕಾಪಾಡುತ್ತವೆ. ಆದುದರಿಂದ ಆ ಕರ್ಮೇಂದ್ರಿಯಗಳಿಗೆ ಮಾತ್ರಾ ಎಂದು ಹೆಸರು. ಮನಸ್ಸು, ಬುದ್ಧಿ, ಅಹಂಕಾರ ಮೊದಲಾದವುಗಳೆಲ್ಲವು ಮಾನವನಿಗೆ ಮಹಾಕಾಲನಾದ ಪರಮೇಶ್ವರನ ಅನುಗ್ರಹದಿಂದ ಸರಿಯಾದ ಕಾಲದಲ್ಲಿ ಸರಿಯಾದ ಮಾರ್ಗವನ್ನು ತಿಳಿಸಿಕೊಡುತ್ತವೆ. ಆದುದರಿಂದ ಅವು ಕಾಲಾಧ್ವರ ಎಂಬ ಸಂಜ್ಞೆ ಉಳ್ಳವುಗಳು ಆಗಿರುತ್ತವೆ. ಇವೆಲ್ಲವುಗಳನ್ನು ಮೊದಲು ತಾನೂ ತಿಳಿದು ಶಿಷ್ಯನಿಗೆ ತಿಳಿಸಿ ಅವನ ಎಲ್ಲ ಇಂದ್ರಿಯಗಳು, ಮನಸ್ಸು ಬುದ್ಧಿ ಸನ್ಮಾರ್ಗದಲ್ಲಿ ನಡೆಯುವಂತೆ ಗುರುವು ಶಿಷ್ಯನನ್ನು ಪ್ರೇರೇಪಿಸಬೇಕು. ತಾನು ಅದೇ ಮಾರ್ಗದಲ್ಲಿ ನಡೆದು ಪರಮೇಶ್ವರನ ಅನುಗ್ರಹವನ್ನು ಪಡೆಯಬೇಕು. ಸಾಮಾನ್ಯಮನುಷ್ಯರಿಂದ ಆರಂಭಿಸಿ ಬ್ರಹ್ಮದೇವನವರೆಗೆ ಎಲ್ಲವು ಅಪರ. ಎಲ್ಲವುಗಳಿಗಿಂತ ಪರಮೇಶ್ವರನು ಮಾತ್ರ ಪರಾತ್ಪರ. ಇದೇ ಈಶತತ್ವ. ಅದೇ ಈಶತ್ವ. ಇದೆಲ್ಲವನ್ನು ತಿಳಿಸುವ ತತ್ವಾರ್ಥ ಬೋಧಕನೆ ಯೋಗಿ. ಯೋಗಿ ಅಲ್ಲದವನು ಮಂಗಳಕರವಾದ ಈ ತತ್ವಶುದ್ಧಿ ಬುದ್ಧಿಯನ್ನು ಪಡೆಯಲಾರನು.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ಗುರು ಶಿಷ್ಯರ ಆಯ್ಕೆ ಎಂಬ ಇಪ್ಪತ್ತನೆಯ ಅಧ್ಯಾಯ ಮುಗಿದುದು*

## ಶಿವದೀಕ್ಷಾಕ್ರಮ ವಿವರಣ



ಮಹಾದೇವನ ಪೂಜೆಯನ್ನುಮಾಡಲು ಮೊದಲು ದೇವರನ್ನು ಸ್ಥಾಪಿಸಲು ಯೋಗ್ಯವಾದ ಭೂಮಿಯನ್ನು ಪರೀಕ್ಷಿಸಬೇಕು. ಯೋಗ್ಯವಾದ ಸ್ಥಳವನ್ನು ಆಯ್ಕೆಮಾಡಿ ಅದನ್ನು ಗೋಮಯದಿಂದ ಸಾರಿಸಿ ರಂಗವಲ್ಲ್ಯಾದಿಗಳನ್ನು ಬಿಡಿಸಬೇಕು. ಪರಿಮಳಯುಕ್ತವಾದ ನೀರಿನಿಂದ ಪ್ರೋಕ್ಷಿಸಬೇಕು. ಮಧುರವಾದ ರಸಾದಿಗಳಿಂದ ಪರಿಮಳದ್ರವ್ಯಗಳನ್ನು ಸಿಂಪಡಿಸಬೇಕು. ಬಗೆ ಬಗೆಯ ಅಲಂಕಾರಗಳಿಂದ ಶಾಸ್ತ್ರಪೂರ್ವಕವಾಗಿ ಪೂಜಾಸ್ಥಾನಗಳನ್ನು ಅಲಂಕರಿಸಬೇಕು. ಒಂದು ಮೊಳ ಉದ್ದ, ಒಂದು ಮೊಳ ಅಗಲವಾದ ಮಂಡಲವನ್ನು ರಚಿಸಬೇಕು. ಅದರ ಮಧ್ಯದಲ್ಲಿ ಕಮಲವನ್ನು ಬರೆಯಬೇಕು. ಅದರಲ್ಲಿ ಐದು ರತ್ನಗಳನ್ನು ಇರಿಸಬೇಕು. ಗಂಧದ ಹುಡಿಯಿಂದ ಎಂಟು ದಳಗಳುಳ್ಳ ಒಂದು ವರ್ತುಳವನ್ನು ಕೆಂಪು ಅಥವಾ ಬಿಳಿಯ ಬಣ್ಣದಿಂದ ಬರೆಯಬೇಕು. ಅದರಲ್ಲಿ ಆ ಕಮಲದ ಕರಣಿಕಾಸ್ಥಾನವಾದ ಮಧ್ಯಭಾಗದಲ್ಲಿ ಪರಿವಾರ ಸಹಿತನಾದ ಮಹಾದೇವನನ್ನು ಆವಾಹಿಸಬೇಕು. ಶಿವ ಹಾಗೂ ಶಿವ ಪರಿವಾರ ವರ್ಗವನ್ನೆಲ್ಲ ಗಂಧ, ಪುಷ್ಪ, ಆಭರಣ ಮೊದಲಾದವುಗಳಿಂದ ಶೋಭಿಸುವಂತೆ ಮಾಡಬೇಕು. ಅನಂತರ ತನ್ನ ಯೋಗ್ಯತೆಗೆ ಅನುಗುಣವಾಗಿ ಆ ಮಹಾದೇವನನ್ನು ಪೂಜಿಸಬೇಕು. ಮಂಡಲದಲ್ಲಿ ಲಿಖಿತವಾದ ಪದ್ಮದ ಎಂಟು ದಳಗಳಲ್ಲಿ ಅಣಿಮಾ, ಮಹಿಮಾ, ಲಘಮಾ, ಗರಿಮಾ ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಎಂಬ ಎಂಟು, ಸಿದ್ಧಿಗಳನ್ನು ಭಾವಿಸಬೇಕು. ಕಮಲಪುಷ್ಪದ ಕರಣಿಕಾಸ್ಥಾನದಲ್ಲಿ ವೈರಾಗ್ಯವನ್ನು, ನಾಲಮೂಲ ಪ್ರದೇಶದಲ್ಲಿ ಜ್ಞಾನ ವೈರಾಗ್ಯಗಳನ್ನು, ಬೀಜ ಸ್ಥಾನದಲ್ಲಿ ಧರ್ಮವನ್ನು ಸುಂದರವಾಗಿ ರೂಪಿಸಬೇಕು.

ಮಂಡಲದಲ್ಲಿ ಲಿಖಿತವಾದ ಕಮಲಪುಷ್ಪದ ಕೇಸರಗಳಲ್ಲಿ ವಾಮಾ, ಜ್ಯೇಷ್ಠಾ, ರೌದ್ರಿ, ಕಾಲಿ, ಕಲವಿಕರಣೆ, ಬಲವಿಕರಣಿ, ಬಲಪ್ರಮಥಿನಿ, ಸರ್ವಭೂತಶಮನಿ ಮೊದಲಾದ ಶಕ್ತಿದೇವತೆಗಳನ್ನು, ಅವರೆಲ್ಲರ ಪತಿಗಳಾದ ವಾಮದೇವನೇ ಮೊದಲಾದವರೊಡನೆ ಜೋಡಿಜೋಡಿಯಾಗಿ ಬರೆಯಬೇಕು. ಮಧ್ಯದಲ್ಲಿ ಮನೋನ್ಮನನಾದ ದೇವನೊಡನೆ ಮಹಾಮಾಯಾ ಸ್ವರೂಪಳಾದ ಮನೋನ್ಮನಿ ದೇವಿಯನ್ನು ಪರಮೇಶ್ವರನ ಆಸನದಲ್ಲಿಯೇ ರೇಖಿಸಬೇಕು.

ಸೂರ್ಯ, ಚಂದ್ರ, ಅಗ್ನಿ ಇವರ ಸಂಬಂಧದಿಂದ ಪ್ರಣವ ಎಂಬ ಹೆಸರಿನ, ಪ್ರಣವ ಪ್ರತಿಪಾದ್ಯನಾದ ತತ್ಪುರುಷ ಎಂಬ ಶಿವಸ್ವರೂಪವನ್ನು ಪೂರ್ವದಳದಲ್ಲಿ ಕಾಣಿಸಬೇಕು. ದಕ್ಷಿಣದ ಎಲೆಯ ಮೇಲೆ ಕಾಡಿಗೆಯ ಬೆಟ್ಟದಂತೆ ಕಪ್ಪಾಗಿ ಒಪ್ಪುವ ಅಘೋರಮೂರ್ತಿಯನ್ನು ದಕ್ಷಿಣದ ದಳದಲ್ಲಿ ಬರೆಯಬೇಕು. ಜಪಾಕುಸುಮದಂತೆ ಅರುಣಾರುಣನಾದ ವಾಮದೇವ ಶಿವನಮೂರ್ತಿಯನ್ನು ಉತ್ತರದಲ್ಲಿ ದಳದಲ್ಲಿ ಬರೆಯಬೇಕು. ಗೋಕ್ಷೀರದಂತೆ ಶುಭ್ರನಾದ ಸದ್ಯೋಜಾತ ಮೂರ್ತಿಯನ್ನು ಆ ಕಮಲ ಪುಷ್ಪದ ಪಶ್ಚಿಮದಳದಲ್ಲಿ ಇರಿಸಬೇಕು. ಸ್ಫಟಿಕದಂತೆ ಶುಭ್ರನಾದ ಈಶಾನ ಮೂರ್ತಿಯನ್ನು ಕರಣಿಕಾಸ್ಥಾನದಲ್ಲಿ ಪರಿಭಾವಿಸಬೇಕು.

**"ಚಂದ್ರಮಂಡಲ ಸಂಕಾಶಂ ಹೃದಯಾಯ ನಮಃ"** ಎಂಬ ಮಂತ್ರವನ್ನು ಅಂದು ಆಗ್ನೇಯ ಮತ್ತು ಈಶಾನ್ಯದಿಕ್ಕುಗಳಲ್ಲಿ ನ್ಯಾಸಮಾಡಬೇಕು. 'ಧೂಮ್ರ ವರ್ಚಸೇ **ಶಿರಸೇ ಸ್ವಾಹಾ**' ಎಂದು ಅರುಣ ಕಾಂತಿಯುಳ್ಳ ನೈಋತ್ಯ ದಿಕ್ಕಿನ ದಳದಲ್ಲಿ ನ್ಯಾಸಮಾಡಬೇಕು. **'ಅಂಜನಾಭಾಯ ಕವಚಾಯ ನಮಃ'** ಎಂಬ ಮಂತ್ರದಿಂದ ವಾಯವ್ಯದಿಕ್ಕಿನಲ್ಲಿರುವ ಕಮಲದ ದಳದಲ್ಲಿ ನ್ಯಾಸಮಾಡಬೇಕು. ಬೆಂಕಿಯ ಜ್ವಾಲೆಯಂತಿರುವ ದೇವನಿಗೆ **'ಅಸ್ತ್ರಾಯ ಫಟ್'** ಎಂಬ ಮಂತ್ರದಿಂದ **ನೇತ್ರೇಭ್ಯಃ ಪಿಂಗಳೇಭ್ಯಃವೌಷಟ್,** ಎಂಬ ಮಂತ್ರಗಳಿಂದ ಈಶಾನ್ಯದಿಕ್ಕಿನಲ್ಲಿರುವ ಕಮಲದ ದಳಗಳಲ್ಲಿಯೂ ನ್ಯಾಸಮಾಡಬೇಕು. ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವ ಪರಮೇಶ್ವರನನ್ನು ಬ್ರಹ್ಮ ವಿಷ್ಣು ಮಹೇಶ್ವರ ರೂಪಗಳಲ್ಲಿ ಧ್ಯಾನಿಸಬೇಕು. ಬ್ರಹ್ಮನಲ್ಲಿ ಇದ್ದು ಸೃಷ್ಟಿಮಾಡುವ ಶಿವನನ್ನು ಮಹೇಶ್ವರನೆಂದೂ, ವಿಷ್ಣುವಿನಲ್ಲಿ ಇದ್ದು ಸ್ಥಿತಿಪಾಲನೆ ಮಾಡುವ ಶಿವನನ್ನು ಸದಾಶಿವನೆಂದೂ ರುದ್ರನಲ್ಲಿ ಇದ್ದು ಸಂಹಾರ ಮಾಡುವ ಶಿವನನ್ನು ಮಹಾರುದ್ರ ಎಂಬ ಭಾವನೆಯಿಂದಲೂ ಧ್ಯಾನಮಾಡಬೇಕು.

ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಎಂಬ ಪಂಚಭೂತಸ್ವರೂಪನಾದ ರುದ್ರನನ್ನು ಕ್ರಮವಾಗಿ ೧) ಶಿವಾಯ ನಮಃ, ರುದ್ರರೂಪಾಯ ನಮಃ, ಶಾಂತ್ಯತೀತಾಯ ನಮಃ , ೨)ಶಾಂತಾಯ ನಮಃ, ಶಾಂತಕೃತ್ಯಾಯ ನಮಃ, ಚಂದ್ರಮಸೇ ನಮಃ, ೩) ವೇದ್ಯಾಯ ನಮಃ, ವಿದ್ಯಾಧಾರಾಯ ನಮಃ, ವಹ್ನಯೇ ನಮಃ, ವಹ್ನಿ ವರ್ಚಸೇ ನಮಃ, ೪) ಕಾಲಾಯೈ ನಮಃ, ಪ್ರತಿಷ್ಠಾಯೈ ನಮಃ, ತಾರಕಾಯ ನಮಃ, ಅಂತಕಾಯ ನಮಃ, ೫) ನಿವೃತ್ತ್ಯೈ ನಮಃ, ಧನದೇವಾಯ ನಮಃ, ಧಾರಾಯೈ ನಮಃ, ಧಾರಣಾಯ ನಮಃ ಎಂಬ ಐದು ಮಂತ್ರಗಳಿಂದ ಆ ಪರಬ್ರಹ್ಮನನ್ನು ಪೂಜಿಸಬೇಕು.

ಆ ಮಂಡಲದಲ್ಲಿ ಆವಾಹಿತನಾದ ಪರಶಿವನ ಒಂದೊಂದು ಸ್ವರೂಪವೇ ಆಗಿವೆ. ಈ ಐದು ರೂಪಗಳು. ಆ ಕಪರ್ದಿಯ ತಲೆಯ ಮೇಲೆ ಇರುವದು. ಅವನ ಈಶಾನ ಎಂಬ ರೂಪವೇ ಈ ಪಂಚಾತ್ಮಕ ಆಗಿದೆ. ತತ್ಪುರುಷನೇ ಮುಖಮಂಡಲದಲ್ಲಿ ಆವಾಹಿತನಾದ ಮಹಾದೇವ. ಹೃದಯವೇ ಅಘೋರ ಎಂಬ ರುದ್ರಸ್ವರೂಪ. ವಾಮದೇವನೇ ಗುಹ್ಯ ಸದ್ಯೋಜಾತನೇ ಮಿಕ್ಕ ಶರೀರ ಎಂದು ಭಾವಿಸಿ ಆವಾಹಿಸಿ ಪೂಜಿಸಬೇಕು. ಪಂಚಮುಖನಾಗಿ ಕಾರ್ಯಕಾರಣ ರೂಪವಾದ ಪ್ರಪಂಚದ ಅಭಿವ್ಯಕ್ತಿಗೆ ಕಾರಣ ರೂಪನಾದ ಆ ಪರಮೇಶ್ವರನು ಐದು ಮುಖ, ಹತ್ತು ತೋಳು ಉಳ್ಳವನಾಗಿ ಮೂವ್ವತ್ತೆಂಟು ಕಲಾ ಸ್ವರೂಪನಾಗಿರುವನು.

ಈ ಪಂಚ ಬ್ರಹ್ಮ ಮೂರ್ತಿಯ ಮೂವ್ವತ್ತೆಂಟು ಕಲೆಗಳಲ್ಲಿ ಸದ್ಯೋಜಾತನಿಗೆ ಎಂಟು ಕಲೆಗಳು, ವಾಮದೇವನಿಗೆ ಹದಿಮೂರು ಕಲೆಗಳು, ಅಘೋರನಿಗೆ ಎಂಟು ಕಲೆಗಳು, ತತ್ಪುರುಷನಿಗೆ ನಾಲ್ಕು ಕಲೆಗಳು, ಈಶಾನನಿಗೆ ಐದು ಕಲೆಗಳು. ಹೀಗೆ ಒಟ್ಟು ಮೂವ್ವತ್ತೆಂಟು ಕಲಾತ್ಮಕನಾದ ಆ ಪರಶಿವನು ಪರಾತ್ಪರ ಪರಂಜ್ಯೋತಿ ಸ್ವರೂಪನಾಗಿರುತ್ತಾನೆ.

ಈ ರೀತಿಯಾಗಿ ಕಲಾತಕನಾಗಿದ್ದಾನೆ. ಆ ಪರಮೇಶ್ವರ. ಹೀಗೆ ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ ಎಂದು ಪಂಚ ಬ್ರಹ್ಮ ಸ್ವರೂಪನಾದ ಆ ಪರಮಾತ್ಮನನ್ನು ಹಂಸಮಂತ್ರದಿಂದ ಧ್ಯಾನಮಾಡಬೇಕು. **'ಹಂಸ ಹಂಸಾಯ ವಿದ್ಮಹೇ, ಪರಮ ಹಂಸಾಯ ಧೀಮಹಿ, ತನ್ನೋ ಹಂಸಃ ಪ್ರಚೋದಯಾತ್'** ಎಂಬ

ಹಂಸಗಾಯತ್ರಿ ಮಂತ್ರದಿಂದ ಭಕ್ತಿಯಿಂದ ಧ್ಯಾನಮಾಡಬೇಕು. ವಸ್ತುತಸ್ತು ಆ ಪರಶಿವನು ಓಂಕಾರ ಸ್ವರೂಪ. ಪ್ರಣವ ಪ್ರತಿಪಾದ್ಯ. ಅ ಇ ಉ ಎ ಎಂಬ ನಾಲ್ಕು ಅಕ್ಷರಗಳು ಚತುಷ್ಕೋಶ ರೂಪ ದೇವತಾ ವಾಚಕಗಳು. 'ಉ' ಎಂಬ ಅಕ್ಷರವು ಪಾರ್ವತೀ ವಾಚಕವು. ಕ್ರಮವಾಗಿ ಓಂಕಾರ ಸಹಿತವಾದ ಐದು ಅಕ್ಷರಗಳು ದೇವಿ, ಗಣೇಶ, ಸೂರ್ಯ, ವಿಷ್ಣು, ಶಿವ ಎಂಬ ಪಂಚಾಯತನ ದೇವತಾ ವಾಚಕಗಳಾಗಿ ಆ ಆ ದೇವತಾ ಸ್ವರೂಪವಾಗಿರುತ್ತವೆ.

ಶಿವನು ಪ್ರಧಾನ ಸಹಿತನಾಗಿದ್ದಾನೆ. ಪ್ರಧಾನ ಎಂದರೆ ಪ್ರಕೃತಿ, ಪ್ರಕೃತಿ ಎಂದರೆ ಪಾರ್ವತಿ. ಅವನಿಗೆ ನಾಶವಿಲ್ಲ. ಉತ್ಪತ್ತಿ ಇಲ್ಲ ಅವನು ಅಣುವಿಗಿಂತ ಅಣು. ಮಹತ್ತಿಗಿಂತ ಮಹತ್ತಮ. ಅವನು ಊರ್ಧ್ವ ರೇತಸ್ಕ. ಸರ್ವಕ್ಕೂ ನಿಯಾಮಕ. ಸರ್ವೋತ್ತಮ. ಸರ್ವನಿಯಾಮಕ, ಸರ್ವಪ್ರಭು. ಪಾರ್ವತೀ ಪತಿ. ಅವನಿಗೆ ಸಾವಿರ ತಲೆಗಳು. ಸಾವಿರ ಕಣ್ಣುಗಳು. ಅವನು ಓಂಕಾರ ಸ್ವರೂಪ. ಸಾವಿರ ಕೈ ಸಾವಿರ ಕಾಲು. ಸೂರ್ಯನಿಗೆ ಸಮಾನವಾದ ತೇಜಸ್ಸು, ಮಸ್ತಕದಲ್ಲಿ ಬಾಲಚಂದ್ರನನ್ನು ಧರಿಸಿದ ಮಹಾಪ್ರಭು ಅವನು. ಇಂತಹ ಪರಮೇಶ್ವರನನ್ನು ನಡುನೆತ್ತಿಯಲ್ಲಿರುವ ಸಹಸ್ರಾರ ಚಕ್ರದಲ್ಲಿಯೂ ಭ್ರೂಮಧ್ಯ ದಲ್ಲಿಯೂ, ಕಂಠದಲ್ಲಿಯೂ, ಹೃದಯಾಕಾಶದಲ್ಲಿಯೂ ಧ್ಯಾನಿಸಬೇಕು. ಆ ಪರಬ್ರಹ್ಮ ಪರಮಾನಂದ ಸ್ವರೂಪ. ಅವನ ಕಾಂತಿಯು ಕೋಟಿ ಕೋಟಿ ಮಿಂಚುಗಳಿಗೆ ಸಮಾನ. ಅವನು ಶ್ಯಾಮ ಸುಂದರನೂ ಹೌದು, ಹೊಂಬಣ್ಣದಿಂದ ಹೊಳೆಯುವವನೂ ಅಹುದು. ಕಲೆಯ ಸ್ವರೂಪ, ಇಚ್ಛಾಜ್ಞಾನ ಕ್ರಿಯಾ ಶಕ್ತಿಗಳಿಂದ ಅವನು ಸೃಷ್ಟಿಕರ್ತನಾಗಿ ಜಗದ್ವ್ಯಾಪಾರವನ್ನು ಮಾಡುತ್ತಾನೆ. ಜ್ಞಾನ ಸ್ವರೂಪನೂ, ಮಂಗಳಾಂಗನೂ, ಆತ್ಮ ಪ್ರಕೃತಿ ಮಹತತ್ವಗಳಿಂದ ಕೂಡಿದವನೂ ಆದ ಆ ಮಹಾದೇವನನ್ನು ಧ್ಯಾನ ಮಾಡಿ ಪೂಜೆ ಮಾಡಬೇಕು.

ಪೂರ್ವ ಮೊದಲಾದ ದಿಕ್ಕುಗಳ ಅಧಿಪತಿಗಳಾದ ಲೋಕಪಾಲಕರನ್ನು 'ಅಸ್ತ್ರಾಯ ಫಟ್' ಎಂದು ಫಟ್ ಶಬ್ದಾಂತವಾಗಿ ಉಚ್ಚರಿಸಿ ಬೇರೆಬೇರೆಯಾಗಿ ಪೂಜಿಸಬೇಕು. ವಿಧಿಗೆ ಅನುಸಾರವಾಗಿ ಚರುವನ್ನು ಬೇಯಿಸಿ ಮಹಾದೇವನಿಗೆ ನೈವೇದ್ಯತೋರಿಸಬೇಕು. ನಿವೇದನ ಮಾಡಿದ ಉಳಿದ ಚರುವಿನ ಅರ್ಧಭಾಗದಲ್ಲಿ ಅಘೋರ ಮಂತ್ರದಿಂದ ಹೋಮಮಾಡಿ ಮಿಕ್ಕದ್ದನ್ನು ಶಿಷ್ಯರಿಗೆ ಊಟಕ್ಕಾಗಿ ಕೊಡಬೇಕು. ಅನಂತರ ಆಚಮನ ಮಾಡಿ ಪರಿಶುದ್ಧನಾಗಿ ತತ್ಪುರುಷ ಮೂರ್ತಿಯನ್ನು ವಿಧಿವತ್ತಾಗಿ ಪೂಜಿಸಬೇಕು. ಈಶಾನ ಮಂತ್ರದಿಂದ ಅಭಿಮಂತ್ರಿತವಾದ ಪಂಚಗವ್ಯವನ್ನು ಶಿಷ್ಯರಿಗೆ ಪ್ರಾಶನ ಮಾಡಿಸಬೇಕು. ವಾಮದೇವ ಮಂತ್ರದಿಂದ ಅವನ ಅಂಗಾಂಗಗಳಿಗೆ ಭಸ್ಮಲೇಪನಮಾಡಿಸಬೇಕು. ಅವನ ಕಿವಿಗಳಲ್ಲಿ 'ತತ್ಪುರುಷಾಯ ವಿದ್ಮಹೆ' ಮುಂತಾದ ರುದ್ರ ಗಾಯತ್ರೀ ಮಂತ್ರವನ್ನು ಉಪದೇಶಿಸಬೇಕು. ಅದಕ್ಕೂ ಮೊದಲು ಬಂಗಾರದ ಎಳೆಗಳಿಂದ ಮಾಡಿದ ದಾರವನ್ನು ಪಂಚ ಕಲಶಗಳಿಗೆ ಸುತ್ತಿ ಅವುಗಳ ಮುಚ್ಚಳವನ್ನು ಮುಚ್ಚಬೇಕು. ಆ ಐದು ಕಲಶಗಳನ್ನು ಜೋಡು ವಸ್ತ್ರದಿಂದ ಅಲಂಕರಿಸಬೇಕು. ಅವುಗಳಲ್ಲಿ ಬಂಗಾರವನ್ನು ಪಂಚರತ್ನವನ್ನು ಹಾಕಿ ಆ ಕಲಶಗಳನ್ನು ಅಲಂಕರಿಸಬೇಕು. ಐದು ಜನ ಬ್ರಾಹ್ಮಣರಿಂದ ಕೂಡಿಕೊಂಡು ಆ ಕಲಶಗಳಲ್ಲಿ ಮಹಾದೇವರ ಪಂಚಬ್ರಹ್ಮ ರೂಪಗಳನ್ನು ಆವ್ಹಾನಮಾಡಬೇಕು. ಅನಂತರ ತನ್ನ ವೈಭವಾನುಸಾರವಾಗಿ ಚರುಹೋಮವನ್ನು ಶ್ರುತ್ಯುಕ್ತವಾದ ಮಂತ್ರಗಳಿಂದ ವಿಧಿಪೂರ್ವಕವಾಗಿ ಮಾಡಬೇಕು.

ಮಂಡಲದ ದಕ್ಷಿಣ ದಿಕ್ಕಿನಲ್ಲಿ ದರ್ಭದ ಶಯ್ಯೆಯ ಮೇಲೆ ಭಕ್ತನಾದ ಶಿಷ್ಯನನ್ನು ಕೂರಿಸಬೇಕು. ಅವನು ಅಲ್ಲೆ ಇದ್ದಲ್ಲಿಯೇ ಶಿವನ ಧ್ಯಾನವನ್ನು ತತ್ಪರನಾಗಿ ಮಾಡಬೇಕು. ಅವನು ಆ ದರ್ಭಶಯ್ಯೆಯಲ್ಲಿ ಮಲಗಿದಾಗಲೂ ಶಿವಧ್ಯಾನವನ್ನೇ ಮಾಡಬೇಕು. ಮರುದಿನ ಬೆಳಗಾದ ಬಳಿಕ ಅಘೋರ ಮಂತ್ರದಿಂದ ತುಪ್ಪದಿಂದ ನೂರೆಂಟು ಹೋಮವನ್ನು ಮಾಡಿ ದುಃಸ್ವಪ್ನ ದೋಷವನ್ನು ನಿವಾರಣೆ ಮಾಡಬೇಕು.

ಹೀಗೆ ಉಪವಾಸವನ್ನು ಮಾಡಿದ ಶಿಷ್ಯನಿಗೆ ಮಂಗಲಸ್ನಾನ ಮಾಡಿಸಬೇಕು. ಅವನಿಗೆ ಹೊಸವಸ್ತ್ರವನ್ನು ಉಡಲುಕೊಡಬೇಕು. ಹೊದೆಯಲು ನೂತನವಸ್ತ್ರವನ್ನು ನೀಡಬೇಕು. ಅಲಂಕಾರದಿಂದ ಅವನನ್ನು ಭೂಷಿತನಾಗುವಂತೆ ಮಾಡಬೇಕು. ತಲೆಗೆ ಉಷ್ಣೀಷವನ್ನು ಇರಿಸಬೇಕು. ನಂತರ ರೇಷ್ಮೆ ಬಟ್ಟೆಯಿಂದ ಅವನ ಕಣ್ಣನ್ನು ಕಟ್ಟಿ ಕರೆದುಕೊಂಡು ಬರಬೇಕು. ಅನಂತರ ಬಂಗಾರದ ಹೂವುಗಳಿಂದ ಒಡಗೂಡಿದ ಪುಷ್ಪಾಂಜಲಿಯನ್ನು ''ಈಶಾನಃ ಸರ್ವ ವಿದ್ಯಾನಾಮ್' ಎಂಬ ಮಂತ್ರದಿಂದ ಭವಾನೀ ಪತಿಯಾದ ಭಗವಂತನಿಗೆ ಭಕ್ತಿಯಿಂದ ಅರ್ಪಿಸಬೇಕು.

ಅನಂತರ ಶಿಷ್ಯನು ಮೂರು ಪ್ರದಕ್ಷಿಣೆಗಳನ್ನುಮಾಡಿ ರುದ್ರಾಧ್ಯಾಯವನ್ನು ಪಾರಾಯಣಮಾಡುತ್ತ ಮತ್ತು ಪ್ರಣವ ಮಂತ್ರವನ್ನು ಜಪಿಸುತ್ತ ಶಿವದೇವನನ್ನು ಧ್ಯಾನಿಸುತ್ತ ಈಶಾನ್ಯ ದಿಕ್ಕಿನಲ್ಲಿ ಕುಳಿತುಕೊಳ್ಳಬೇಕು.

ಯಾವ ಮಂತ್ರವನ್ನು ಹೇಳುವಾಗ ಪರಮೇಶ್ವರನಿಗೆ ಏರಿಸಿದ ಪುಷ್ಪವು ಬೀಳುವದೋ ಆ ಮಂತ್ರವು ಶಿಷ್ಯನಿಗೆ ಸಿದ್ಧಿಸುವದು. ಪುಣ್ಯಕರವಾದ ನೀರಿನಲ್ಲಿ ಅಘೋರ ಮಂತ್ರವನ್ನು ಹೇಳುತ್ತ ಭಸ್ಮವನ್ನು ಕಲಿಸಿ ಗುರುವು ತನ್ನ ಕೈಯ್ಯನ್ನು ಶಿಷ್ಯನ ನೆತ್ತಿಯ ಮೇಲಿರಿಸಬೇಕು. ಈಶ್ವರನ ನಿರ್ಮಾಲ್ಯವಾದ ಗಂಧ ಪುಷ್ಪ ಮುಂತಾದ ಪೂಜಾ ದ್ರವ್ಯಗಳಿಂದ ಶಿಷ್ಯನನ್ನು ಸತ್ಕರಿಸಬೇಕು.

ಮಂತ್ರಗ್ರಹಣಕ್ಕಾಗಿ ಮಂಡಲವಿರುವ ಸ್ಥಳಕ್ಕೆ ಪ್ರವೇಶಿಸಲು ಎಲ್ಲ ವರ್ಣದವರಿಗೂ ಪಶ್ಚಿಮ ದಿಕ್ಕಿನ ಬಾಗಿಲವೇ ಯೋಗ್ಯವಾದುದು. ಶಿಷ್ಯನನ್ನು ಒಳಗೆ ಪ್ರವೇಶಮಾಡಿಸಿದ ಮೇಲೆ ಅವನ ಕಣ್ಣಿಗೆ ಕಟ್ಟಿದ ರೇಷ್ಮೆ ಬಟ್ಟೆಯನ್ನು ಬಿಚ್ಚಿ ಆ ಮಂಡಲದರ್ಶನವನ್ನು ಮಾಡಿಸಬೇಕು. ಬಳಿಕ ಕುಶಾಸನದಲ್ಲಿ ಆ ಶಿಷ್ಯನನ್ನು ಕೂಡಿಸಿ ದಕ್ಷಿಣಾ ಮೂರ್ತಿರೂಪನಾದ ಶಿವನನ್ನು ಆಶ್ರಯಿಸಿ ಪಂಚತತ್ವ ಪ್ರಕಾರದಿಂದ ತತ್ವಶುದ್ಧಿಯನ್ನು ಮಾಡಬೇಕು.

ಪೃಥ್ವಿ, ಜಲ, ತೇಜಸ್ಸು, ವಾಯು, ಆಕಾಶ ಅಹಂಕಾರ ತತ್ವ ಪರ್ಯಂತರವಾಗಿ ಕ್ರಮವಾಗಿ ಬ್ರಹ್ಮಾಂಡದ ಲಯವನ್ನು ಚಿಂತಿಸಬೇಕು. ಆ ಬಳಿಕ ಅಹಂಕಾರ ತತ್ವದಿಂದ ಮುಂದೆ ಪ್ರಕೃತಿ ತತ್ವ ಪರ್ಯಂತರವಾಗಿ ಜ್ಞಾನ ಕಲೆ ಒಂದರಿಂದಲೇ ಪೂರ್ಣನಾಗಿರುವ ವಿಶ್ವೇಶ್ವರನೆಂಬ ಮಹಾಪುರುಷನವರೆಗೂ ತಿಳಿದುಕೊಳ್ಳಬೇಕು. ಅಲ್ಲಿಂದ ಮುಂದೆ ಇಪ್ಪತ್ತಾರನೆಯ ತತ್ವವಾದ ಮಹಾ ಮಹೇಶ್ವರನ ಮಾರ್ಗವನ್ನು ಅವನಲ್ಲಿರುವ ಅನನ್ಯ ಭಕ್ತಿಯಿಂದಲೇ ಶೋಧನೆಮಾಡಬೇಕು. ಎಂದರೆ ಆವರಣ ಇಲ್ಲದಂತೆ ಮಾಡಿ ಶಿಷ್ಯನನ್ನು ತುರೀಯನಾದ ಪರಶಿವನಲ್ಲಿ ಸೇವಿಸಬೇಕು.

ಸರ್ವೇಶ್ವರನೂ ಯೋಗೇಶ್ವರನೂ ಆದ ಇಪ್ಪತ್ತಾರನೇ ತತ್ವ ಸ್ವರೂಪನಾದ ಆ ಮಹೇಶ್ವರನ ಪೂಜೆಗಾಗಿ ಪ್ರಕೃತಿ, ಪುರುಷ, ಈಶ್ವರ ಎಂಬ ಮೂರು ತತ್ವಗಳ

ಕ್ರಮದಿಂದಾಗಲೀ ಅಹಂಕಾರ ತತ್ವದಿಂದಾಗಲೀ, ಶಾಂತ್ಯತೀತ ಕಲಾತ್ಮಕನಾದ ಆ ಪರಬ್ರಹ್ಮನನ್ನು ಉದ್ದೇಶಿಸಿ ಅಂಗಮಂತ್ರವಾದ ಈಶಾನ ಮಂತ್ರದಿಂದ ಹೋಮವನ್ನು ಮಾಡಿಸಬೇಕು. ಸದ್ಯೋಜಾತಾದಿ ನಾಲ್ಕು ಮಂತ್ರಗಳಿಂದ ಶಾಂತಿಕಲಾ ಪರ್ಯಂತವಾಗಿ ಹೋಮವನ್ನು ಮಾಡಬೇಕು. ಮತ್ತು ಶಾಂತ್ಯತೀತ ಕಲಾಸ್ವರೂಪನಾದ ಆ ಪರಬ್ರಹ್ಮನನ್ನು ಕುರಿತು ಈಶಾನಮಂತ್ರದಿಂದ ಮತ್ತೆ ಒಂದು ನೂರಾ ಎಂಟು ಹೋಮಗಳನ್ನು ಮಾಡಿಸಬೇಕು. ಅನಂತರ ಬೇರೆ ಬೇರೆಯಾಗಿ ನೂರ ಎಂಟು ದಿಗ್‌ದೇವತಾ ಹೋಮಗಳನ್ನು ಮಾಡಿಸಬೇಕು. ಬಳಿಕ ಈಶಾನ್ಯದಿಕ್ಕಿನಲ್ಲಿ ಓಂಕಾರ ಪುರಸ್ಸರವಾಗಿ ಈಶಾನ ಮಂತ್ರವನ್ನು ಸ್ವಾಹಾಂತವಾಗಿ ಪಠಿಸುತ್ತ ಸಮಿಧಾ, ಘೃತ, ಚರು, ಅರಳು, ಸಾಸಿವೆ, ಗೋದಿ, ಎಳ್ಳು ಎಂಬ ಏಳು ದ್ರವ್ಯಗಳ ಹೋಮವನ್ನು ಮಾಡಬೇಕು. ಕೊನೆಗೆ ಈಶಾನ ಮಂತ್ರದಿಂದಲೇ ಪೂರ್ಣಾಹುತಿಯನ್ನು ನೆರವೇರಿಸಬೇಕು. ಓಂಕಾರಾಕ್ಷರ ಶಿರಸ್ಕವಾದ ಹಂಸ ಗಾಯತ್ರೀ ಮಂತ್ರದಿಂದ ಪ್ರಾಯಶ್ಚಿತ್ತ ಹೋಮವನ್ನು ಮಾಡಬೇಕು.

ಜಯಾದಿ ಹೋಮಗಳಿಂದ ಪ್ರಾರಂಭಿಸಿ ಸ್ವಿಷ್ಟಿಕೃದ್ ಹೋಮ ಪರ್ಯಂತರವಾಗಿ ಅಗ್ನಿಕಾರ್ಯವನ್ನು ಮೂರುಪ್ರಕಾರವಾಗಿ ಮಾಡಿ ಪ್ರಧಾನ ಹೋಮದೊಡನೆ ಸೇವಿಸಬೇಕು. ಅನಂತರ ಗುರುವು ಮೌನದಿಂದಲೇ ಭೂಮಿ ಮೊದಲಾದ ಪಂಚಮಹಾಭೂತಗಳನ್ನು ಸದ್ಯೋಜಾತಾದಿ ಮಂತ್ರಗಳಿಂದಲೂ ಪ್ರಾಣಾಪಾನಾದಿ ಪ್ರಧಾನವಾದ ಈಶಾನಮಂತ್ರದಿಂದಲೂ ನಿಯಮ ಮಾಡಿ ಆರನೆಯದಾದ 'ನಮೋ ಹಿರಣ್ಯ ಬಾಹವೇ' ಎಂಬ ಮಂತ್ರದಿಂದ ಆತ್ಮವಾಚಕವಾದ ಪ್ರಣವದ ಕೊನೆಯಲ್ಲಿರುವ ನಾದ ಸಮೂಹದಿಂದ ವ್ಯಾಪ್ತವಾದ ಬ್ರಹ್ಮರಂಧ್ರವನ್ನು ಭೇದಿಸಬೇಕು.

ಬ್ರಹ್ಮನನ್ನು ವಿಷ್ಣುವಿನಲ್ಲಿಯು, ವಿಷ್ಣುವನ್ನು ರುದ್ರನಲ್ಲಿಯೂ ಆ ಮಹೇಶ್ವರನನ್ನು ಪರಮೇಶ್ವರನಲ್ಲಿಯೂ ಉಪಸಂಹಾರ ಮಾಡಬೇಕು. ಪರಮೇಶ್ವರನಿಂದ ಸೃಷ್ಟಿ ಕ್ರಮದಲ್ಲಿ ಜನನ ಮರಣ ರೂಪವಾದ ಸಂಸಾರ ನಾಶಕವಾದ ರುದ್ರನನ್ನು ಧ್ಯಾನಿಸಬೇಕು. ಶಿಷ್ಯ ಜೀವನನ್ನು ರುದ್ರನೆಂದು ಸ್ಥಾಪಿಸಿ ತಾಡನ, ದ್ವಾರದರ್ಶನ, ದೀಪನ, ಗ್ರಹಣ, ಪೂಜೆಯೊಡನೆ ಬಂಧನ, ಅಮೃತೀಕರಣ ಎಂಬ ಕಾರ್ಯಗಳನ್ನು ತಾಂತ್ರಿಕ ವಿಧಿಗೆ ಅನುಸಾರವಾಗಿ ಶಿಷ್ಯನ ಮೂಲಕವಾಗಿಯೇ ಮಾಡಿಸಬೇಕು.

ಉಪಸಂಹಾರದ ಪ್ರಕಾರವು ಈ ರೀತಿಯಾಗಿದೆ. ಸದ್ಯೋಜಾತ ಮಂತ್ರದಿಂದಲೂ, ಅಘೋರಮಂತ್ರದಿಂದಲೂ ಕೂಡಿದ 'ನಮೋ ಹಿರಣ್ಯ ಬಾಹವೇ' ಎಂಬ ಮಂತ್ರದ ಕೊನೆಯಲ್ಲಿ 'ಫಟ್' ಎಂಬ ಮಂತ್ರೋಚ್ಚಾರಣೆಯನ್ನು ಮಾಡಿ ಪೃಥಿವಿತತ್ವವನ್ನು ಜಲ ತತ್ವದಲ್ಲಿಯೂ ಜಲತತ್ವವನ್ನು ತೇಜಸ್‌ತತ್ವದಲ್ಲಿಯೂ, ತೇಜಸ್‌ತತ್ವವನ್ನು ವಾಯು ತತ್ವದಲ್ಲಿಯೂ, ವಾಯುತತ್ವವನ್ನು ಆಕಾಶತತ್ವದಲ್ಲಿಯೂ ಲಯವಾಗುವದು ಎಂದು ಚಿಂತಿಸುವದೇ ಉಪಸಂಹಾರತತ್ವವಾಗಿದೆ.

ದೀಕ್ಷಾ ಯೋಗವುಳ್ಳ ಶಿಷ್ಯನಿಗೆ ಸದ್ಯೋಜಾತಮಂತ್ರಾದಿಯಾದ 'ನಮೋ ಹಿರಣ್ಯಬಾಹವೇ' ಎಂಬ ಮಂತ್ರದೊಡನೆ ಕೂಡಿದ ಈಶಾನಮಂತ್ರದ ಕೊನೆಯಲ್ಲಿ ಫಟ್ ಎಂಬ ಅಸ್ತ್ರಮಂತ್ರವನ್ನು ಉಚ್ಚಾರಣೆಮಾಡಿ ತತ್ವಗಳ ತಾಡನವನ್ನೂ ದ್ವಾರದರ್ಶನವನ್ನೂ ಮಾಡಿಸಬೇಕು.

ಮೂರನೆಯದಾದ ಅಘೋರಮಂತ್ರದಿಂದ ಆದ್ಯಂತಗಳಲ್ಲಿ ಸಂಪುಟೀಕರಣವನ್ನು ಮಾಡಿ ಮುಖ್ಯವಾದ ಈಶಾನಮಂತ್ರವನ್ನು ಉಚ್ಚರಿಸುವದು ದೀಪನ ಎನಿಸುವದು. ಮೊದಲನೆಯದಾದ ಸದ್ಯೋಜಾತಮಂತ್ರದಿಂದ ಈಶಾನ ಮಂತ್ರವನ್ನು ಸಂಪುಟೀಕರಣ ಮಾಡಿದರೆ ಗ್ರಹಣ ಎನಿಸುವದು.

ಸದ್ಯೋಜಾತಮಂತ್ರದಿಂದ ಹಿಂದಿನಂತೆ ಈಶಾನಮಂತ್ರವನ್ನು ಸಂಪುಟೀಕರಣ ಮಾಡಿದರೆ ಬಂಧ ಎನಿಸುವದು. ಸದ್ಯೋಜಾತಾದಿ ಪಂಚಬ್ರಹ್ಮಮಂತ್ರವನ್ನು ಸಂಪೂರ್ಣವಾಗಿ ಉಚ್ಚರಿಸಿ ಅಮೃತರೂಪವಾದ ತ್ರ್ಯಂಬಕಮಂತ್ರವನ್ನು ಪಠಿಸಿದರೆ ಅಮೃತೀಕರಣವಾಗುವದು. ಹಿಂದೆ ಹೇಳಿದ ತಾಂತ್ರಿಕ ವಿಧಿಯನ್ನು ಮಾಡಿದ ಮೇಲೆ ಕ್ರಮವಾಗಿ ಶಾಂತ್ಯತೀತ, ಶಾಂತಿ, ಪ್ರತಿಷ್ಠಾ, ವಿದ್ಯಾ, ನಿವೃತ್ತಿರೂಪವಾದ ಕಲಾ ಸಂಕ್ರಮಣಗಳನ್ನು ಮಾಡಿಸಬೇಕು.

ಶಿವ ಶಕ್ತಿ ತತ್ವಗಳನ್ನು ಅಕಾರಾದಿ ವಿಸರ್ಗಾಂತವಾದ ಹದಿನಾರು ವರ್ಣಗಳೊಡನೆ ಕೂಡಿಸಿ ಎಂಟು ಪ್ರದೇಶಗಳಲ್ಲಿ ಹಿಂದೆ ಹೇಳಿದ ಕಲಾಸಂಕ್ರಮಣವನ್ನು ಮಾಡಿಸಬೇಕು. ಶಾಂತ್ಯತೀತ ಕಲೆಯನ್ನು, ಶಾಂತಿಕಲೆಯನ್ನು ಇದೇ ಕ್ರಮದಿಂದ ಒಂದೊಂದು ಕಲೆಯನ್ನು ತತ್ವ ವರ್ಣಾದಿಗಳನ್ನು ಸಂಕ್ರಮಣ ಮಾಡಿ ಅಷ್ಟಭುವನ ಸಿದ್ಧಿಯನ್ನು ಮಾಡಬೇಕು. ದೀಪಕ, ರೋಚಕ, ಮೋಚಕ, ಉರ್ಧ್ವಗಾಮಿ, ವ್ಯೋಮ ರೂಪ, ಅನಾಶ್ರಿತ, ಓಂಕಾರ ಪದ ಎಂಬ ಇವೇ ಅಷ್ಟ ಭುವನಗಳು.

ಓಂಕಾರದಿಂದಲೂ, ಹ್ರೀಂಕಾರದಿಂದಲೂ ಸಂಪುಟೀಕರಣಮಾಡಿ ಶಿವಪ್ರತಿಪಾದಕವಾದ ಮಂತ್ರಗಳನ್ನು ಅರ್ಥಪೂರ್ವಕವಾಗಿ ತಿಳಿದುಕೊಂಡು ಸ್ತೋತ್ರಮಾಡಬೇಕು. ಪ್ರಣವಾದಿಯಾದ ಹ್ರೀಂ ಎಂಬ ಬೀಜಾಕ್ಷರವನ್ನು ನಮಃ ಶಬ್ದಾಂತವಾಗಿ ಉಚ್ಚರಿಸಿ ಪೂಜಿಸಬೇಕು. ಪೂಜೆ, ಸಂಪ್ರೋಕ್ಷಣ, ತಾಡನ, ಹರಣ, ಅತ್ಯಂತ ಶುದ್ಧ ಮನಸ್ಸಿನ ಸಂಯೋಗ, ಕ್ರಮವಾದ ವಿಕ್ಷೇಪ, ಅರ್ಚನಾ, ಗರ್ಭಧಾರಣ, ಪುನರ್ಜನನ, ಭಾನೋರಧಿಕಾರ ಎಂದರೆ ಸೂರ್ಯ ಸಮಾನವಾದ ಅಜ್ಞಾನ ನಿವಾರಕವಾದ ಒಂದು ವಿಶೇಷ ಸ್ಥಿತಿ. ಲಯವೆಂದರೆ ಅವಿದ್ಯಾನಾಶ ಇವುಗಳೂ ಈ ಶಿವದೀಕ್ಷೆಯಿಂದ ಉಂಟಾಗುವವೆಂದು ತಿಳಿಯಬೇಕು.

ಎಲೈ ಮಹಾಮುನಿಯಾದ ಸನತ್ಕುಮಾರನೇ, ಈಶಾನ ಮಂತ್ರದ ಕೊನೆಯಲ್ಲಿ ಯೋನಿ ಬೀಜಾಕ್ಷರವಾದ ಹ್ರೀಂ ಎಂಬುದನ್ನು ಸೇರಿಸಿ, ಪ್ರೋಕ್ಷಣ ತಾಡನಗಳಲ್ಲಿ ಉಪಯೋಗಿಸಬೇಕು. ಅಘೋರಮಂತ್ರದ ಕೊನೆಯಲ್ಲಿ ಫಟ್ ಎಂಬ ಅಸ್ತ್ರಮಂತ್ರವನ್ನು ಉಪಯೋಗಿಸಿದರೆ ಜನನಮರಣ ರೂಪವಾದ ಸಂಸಾರದ ನಾಶಉಂಟಾಗುವದರಲ್ಲಿ ಸಂದೇಹವಿಲ್ಲ. ಈ ಪೂರ್ವೋಕ್ತ ಕ್ರಮದಲ್ಲಿ ಪ್ರತಿಯೊಂದು ತತ್ವಕ್ಕೂ ಅಂದರೆ ವಿಷಯಕ್ಕೂ ಈ ಕ್ರಮವು ಇರುವುದೆಂದು ಯೋಗಮಾರ್ಗದಿಂದ ತಿಳಿಯಬೇಕು. ತತ್ವಗಳ ಯೋಜನ ಸ್ಥಳವನ್ನು ವಿಪುವವೆಂದು ಆಗ್ನೇಯ ಪುರಾಣದಲ್ಲಿ ಹೇಳಿರುವುದು. ಮುಷ್ಟಿ ಸದೃಶವಾದ ಪ್ರಾಣಾಯಾಮದಿಂದ ಎಷ್ಟು ಕಾಲದವರೆಗೆ ವಿಘ್ನವೆಂಬ ಯೋಗವಿರುವುದೋ ಅಷ್ಟು ಕಾಲದವರೆಗೆ ನಿವೃತ್ತಿ ಕಲೆಯಿಂದ ಸದಾಶಿವಾಂತವಾಗಿ ಮನಸ್ಸು ಒಂದೆಡೆಯಲ್ಲಿ ಸಮತೆಯನ್ನು ಪಡೆವುದು. ಹಾಗಿಲ್ಲದಿದ್ದರೆ ಮನಸ್ಸಿನ ವಿಕಲ್ಪವು ಇದ್ದೇ ಇರುವುದು.

ಕೆಲವು ಯೋಗಿಗಳಿಗೆ ನಾಸಾಗ್ರ ದೃಷ್ಟಿಯಲ್ಲಿಯೂ ಮತ್ತೆ ಕೆಲವರಿಗೆ ದ್ವಾದಶಾಂತವೆಂಬ ಕೊನೆಯ ಅವಯವವಾದ ಶಿವಪರತತ್ವದಲ್ಲಿಯೂ ಸಮತೆಯು ಪ್ರಾಪ್ತವಾಗುವುದು. ಬೇರೆ ಸ್ಥಾನಗಳಲ್ಲಿ ಬೇರೆಯ ರೂಪವಾಗಿ ಸಮತೆಯ ಉಂಟಾಗುವುದಿಲ್ಲ. ಎಲೈ ಸನುತ್ಕುಮಾರನೇ, ದೀಕ್ಷೆಯನ್ನು ಪಡೆದವನು ಸುಖದುಃಖಾದಿ ದ್ವಂದ್ವಗಳನ್ನು ಸಹಿಸಬೇಕೆಂದು ದೇವದೇವನಾದ ಪರಶಿವನ ಆಜ್ಞೆಯು ಇರುವುದು. ಆ ಮೇಲೆ ಶಿವಭಕ್ತನೂ ಧರ್ಮಮಾರ್ಗಸಕ್ತನೂ ಆದ ಶಿಷ್ಯನಿಗೆ ಚಿನ್ನ ಬೆಳ್ಳಿ ತಾಮ್ರ ಮುಂತಾದ ಕಲಶಗಳಲ್ಲಿ ವಿಧಿಗನುಸಾರವಾಗಿ ದಾರವನ್ನು ಸುತ್ತಿ, ವಸ್ತುಗಳಿಂದ ಅಲಂಕರಿಸಿ, ನವರತ್ನಗಳಿಂದಲೂ ತೀರ್ಥೋದಕಗಳಿಂದಲೂ ತುಂಬಿದ ಅಭಿಮಂತ್ರಿಸಿದ ನೀರಿನಿಂದ ರುದ್ರಾಧ್ಯಾಯ ಮಂತ್ರದಿಂದಾಗಲಿ ಶಿವಸ್ತೋತ್ರಗಳಿಂದಾಗಲಿ ಪವಮಾನಾದಿ ಮಂತ್ರಗಳಿಂದಾಗಲಿ ಕೂರ್ಚಿಯಿಂದ ಪ್ರೋಕ್ಷಿಸಬೇಕು. ಆ ಶಿಷ್ಯನು ಶಿವಗುರು ಅಗ್ನಿ ಇವರೆದುರಿಗೆ ದೀಕ್ಷಾಗ್ರಹಣವನ್ನು ಮಾಡಿ ಮುಂದೆ ಹೇಳುವ ನಿಯಮವನ್ನು ಆಚರಿಸಬೇಕು.

ಶಿವದೀಕ್ಷೆಯನ್ನು ಪಡೆದವನು ಪ್ರಾಣವು ಹೋಗುವ ಕಷ್ಟವು ಪ್ರಾಪ್ತವಾದರೂ ತನ್ನ ತಲೆಯನ್ನು ಕಡಿಯುವ ಕಷ್ಟವು ಒದಗಿದರೂ ಶಿವಪೂಜೆಯನ್ನು ಮಾಡದೆ ಭೋಜನವನ್ನು ಮಾಡಬಾರದು. ಈ ರೀತಿಯಲ್ಲಿ ದೀಕ್ಷೆಯನ್ನು ವಹಿಸಿ ಪ್ರತಿದಿನವೂ ತ್ರಿಕಾಲದಲ್ಲಿಯಾಗಲಿ ಒಂದು ಕಾಲದಲ್ಲಿಯಾಗಲಿ ಕ್ರಮವಾಗಿ ಪರಮೇಶ್ವರನ ಪೂಜೆಯನ್ನು ಮಾಡಬೇಕು. ಪ್ರತಿದಿನವೂ ಅಗ್ನಿಹೋತ್ರವೂ ವೇದಾಭ್ಯಾಸವೂ ಬಹಳವಾಗಿ ವಿಶೇಷ ದಕ್ಷಿಣಾ ದಾನಪೂರ್ವಕವಾಗಿ ಮಾಡಿದ ಯಜ್ಞಗಳು ಶಿವಲಿಂಗ ಪೂಜೆಯ ಹದಿನಾರನೆಯ ಒಂದು ಅಂಶಕ್ಕೂ ಸಮವಾಗಲಾರವು.

ಸದಾ ಸರ್ವದಾ ಯಜ್ಞಯಾಗ, ದಾನ ದಕ್ಷಣೆ, ಜಪ, ತಪ, ಅನುಷ್ಠಾನ, ಉಪಾಸನೆ, ಭಜನೆ, ಧ್ಯಾನ ಮಾಡುವವನಿಗೆ ಬರುವ ಫಲವು ಒಂದು ದಿನ ಶಿವ ಪೂಜೆ ಮಾಡಿದವನಿಗೆ ಬರುವದು.

ಪ್ರತಿ ದಿನವೂ ಒಂದು ಸಲ, ಎರಡು ಸಲ ಅಥವಾ ತ್ರಿಕಾಲದಲ್ಲಿಯು ಸಂತತವಾಗಿ ಪರಮೇಶ್ವರನ ಪೂಜೆ ಮಾಡುವವನು ಶಿವ ಸ್ವರೂಪನೇ ಆಗುವನು.

**ನಾ ರುದ್ರಸ್ತು ಽಸ್ಪೃಶೇದ್ರುದ್ರಂ ನಾರುದ್ರೋ ರುದ್ರಮರ್ಚಯೇತ್।**
**ನಾರುದ್ರಃ ಕೀರ್ತಯೇದ್ರುದ್ರಂ ನಾರುದ್ರೋ ರುದ್ರಮಾಪ್ನುಯಾತ್॥**

ರುದ್ರನಾಗದವನು ರುದ್ರನ ಲಿಂಗವನ್ನಾಗಲಿ ಮೂರ್ತಿಯನ್ನಾಗಲಿ ಮುಟ್ಟಲಾರನು. ರುದ್ರನಲ್ಲದ್ದವನು ರುದ್ರನನ್ನು ಪೂಜಿಸಲಾರನು. ಯಾವನು ರುದ್ರನಲ್ಲವೋ ಅವನು ರುದ್ರನನ್ನು ಹೊಗಳಿಹಾಡಲಾರ. ರುದ್ರನಿಂದ ಭಿನ್ನನಾದವನು ರುದ್ರನನ್ನು ಎಂದೂ ಹೊಂದಲಾರ ಎಂಬ ಶಾಸ್ತ್ರವಚನವು ಇರುತ್ತದೆ. ಇದರ ಮೇಲಿಂದ ಶಿವನನ್ನು ಭಕ್ತಿಯಿಂದ ಪೂಜಿಸುವವನು ಶಿವಸ್ವರೂಪನೇ ಆಗುವನು ಎಂದು ಶಾಸ್ತ್ರದ ಸಿದ್ಧಾಂತವು ಪ್ರಮಾಣ ಬದ್ಧವಾಗಿದೆ.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ಶಿವದೀಕ್ಷಾಕ್ರಮ ವಿವರಣ ಎಂಬ ಇಪ್ಪತ್ತೊಂದನೆಯ ಅಧ್ಯಾಯ ಸಮಾಪ್ತ*

## ಸೂರ್ಯೋಪಾಸನ ಕ್ರಮ ನಿರೂಪಣ

**ಅಧ್ಯಾಯ - ೨೨**

**ನಂದೀಶ್ವರ ಉವಾಚಃ**

**ಸ್ನಾನ ಯಾಗಾದಿ ಕರ್ಮಾಣಿ ಕೃತ್ವಾ ವೈ ಭಾಸ್ಕರಸ್ಯ ಚ।**
**ಶಿವಸ್ನಾನಂ ತತಃ ಕುರ್ಯಾತ್ ಭಸ್ಮ ಸ್ನಾನಂ ಶಿವಾರ್ಚನಮ್॥**

**ನಂದೀಶ್ವರ:-** ಶಿವಪೂಜೆಯನ್ನು ಮಾಡಲು ಮುಖ್ಯವಾಗಿ ಮೊದಲು ಅಧಿಕಾರ ಇರಬೇಕು. ಆ ಅಧಿಕಾರವು ಸಿದ್ಧವಾಗಲಿಕ್ಕಾಗಿ ಸೂರ್ಯನ ಅರ್ಚನೆಯನ್ನು ಮಾಡಬೇಕು. ಸೂರ್ಯನ ಸ್ನಾನವನ್ನು ಅನಂತರ ಪೂಜೆ ಮೊದಲಾದ ನಿತ್ಯ ಕರ್ಮಗಳನ್ನು ನೆರವೇರಿಸಬೇಕು. ಅದಾದ ಬಳಿಕ ಭಸ್ಮಸ್ನಾನವನ್ನು ಮಾಡಿ ಪರಮೇಶ್ವರ ಪೂಜೆಯನ್ನು ಮಾಡಬೇಕು.

ಓಂ ತಪಃ ಎಂಬ ಆರನೆಯ ಮಂತ್ರವನ್ನು ಹೇಳಿ ಮೃತ್ತಿಕೆ (ಮಣ್ಣು)ಯನ್ನು ತರಬೇಕು. ಭಕ್ತಿಯಿಂದ ಆ ಮಣ್ಣನ್ನು ಭೂಮಿಯಲ್ಲಿ ಸ್ಥಾಪಿಸಬೇಕು. ಅನಂತರ ಓಂ ಭುವಃ 'ಎಂಬ ಎರಡನೆಯ ಮಂತ್ರದಿಂದ ಮೃತ್ತಿಕೆಯನ್ನು ಪ್ರೋಕ್ಷಿಸಬೇಕು. ಅನಂತರ ಓಂ ಸ್ವಃ ಎಂಬ ತೃತೀಯ ಮಂತ್ರದಿಂದ ಅದನ್ನು ಶೋಧಿಸಬೇಕು. 'ಓಂ ಮಹಃ' ಎಂಬ ನಾಲ್ಕನೆಯ ಮಂತ್ರದಿಂದ ಸ್ನಾನಮಾಡಬೇಕು. ಓಂ ಭೂಃ ಎಂಬ ಮೊದಲ ಮಂತ್ರದಿಂದ ಕೊಳೆಯನ್ನು ತೆಗೆಯಬೇಕು. ಬಳಿಕ 'ಓ ತಪಃ' ಎಂಬ ಆರನೆಯ ಮಂತ್ರದಿಂದ ಸ್ನಾನಮಾಡಬೇಕು. ನೀರಲ್ಲಿ ಮುಳುಗುಹಾಕಿ, ಕೈಯಲ್ಲಿರುವ ಮೃತ್ತಿಕೆಯನ್ನು ಮೂರು ಭಾಗವಾಗಿ ವಿಂಗಡಿಸಿ ಮೂಲ ಮಂತ್ರದಿಂದ ಎಡಗೈಗೆ ಲೇಪನ ಮಾಡಬೇಕು. ಓಂ ತಪಃ ಎಂಬ ಆರನೆಯ ಮಂತ್ರದಿಂದ ಹತ್ತು ಸಲ ದಿಗ್ಬಂಧನವನ್ನು ಮಾಡಿ ಎಡಗೈಯಿಂದ ತೀರ್ಥವನ್ನು ತೆಗೆದುಕೊಂಡು ಬಲಗೈ ಬೆರಳುಗಳಿಂದ ದೇಹವನ್ನು ಲೇಪಿಸಿಕೊಳ್ಳಬೇಕು. ಅನಂತರ ಸ್ನಾನಮಾಡಿ ಸಕಲಮಂತ್ರಗಳಿಂದಲೂ ಸೂರ್ಯನನ್ನು ಸ್ಮರಿಸಿ ತೀರ್ಥಾಭಿಷೇಕವನ್ನು ಮಾಡಿಕೊಳ್ಳಬೇಕು. ಜಲಾಭಿಷೇಕವನ್ನು ಮಾಡುವಾಗ ಸೂರ್ಯದೇವತಾಕವಾದ ಸೌರಮಂತ್ರಗಳಿಂದ ಸೂರ್ಯನನ್ನು ಸ್ಮರಿಸಬೇಕು. ಕಾಡುಕೋಣದ ಕೋಡಿನಿಂದ ಅಥವಾ ದೊನ್ನೆಯ ಆಕಾರದಲ್ಲಿರುವ ಎಲೆಗಳಿಂದಾಗಲಿ ಮುತ್ತಗದ ಎಲೆಯಿಂದಾಗಲಿ ಜಲಾಭಿಷೇಕವನ್ನು ಮಾಡಿಕೊಳ್ಳಬೇಕು.

ಭುವರಾದಿ ಲೋಕಗಳು ಕಲ್ಪಾಂತರ ಕಾಲದವರೆಗೆ ನಾಶವನ್ನು ಹೊಂದುವದಿಲ್ಲ. ಆದುದರಿಂದ ಅವುಗಳನ್ನು ಅಕ್ಷರ ಎಂದು ಯೌಗಿಕ ಶಬ್ದದಿಂದ ನಿರ್ದೇಶಿಸುತ್ತಾರೆ. **"ಓಂ ಭೂಃ" "ಓಂ ಭುವಃ" "ಓಂ ಸುವಃ" "ಓಂ ಜನಃ" "ಓಂ ತಪಃ" "ಓಂ ಸತ್ಯಂ" "ಓಂ ಬ್ರಹ್ಮ",** ಎಂಬ ಒಂಬತ್ತು ಅಕ್ಷರಗಳಿಂದ ಕೂಡಿರುವ ಈ ಮಂತ್ರವು ನವಾಕ್ಷರಮಯವಾದ ಭಾಸ್ಕರಮಂತ್ರ ಎಂದು ಹೇಳಲ್ಪಟ್ಟಿದೆ.

**ನ ಕ್ಷರತೀತಿ ಲೋಕಾನಿ ಋತಮಕ್ಷರ ಮುಚ್ಯತೇ।**
**ಸತ್ಯಮಕ್ಷರ ಮಿತ್ಯುಕ್ತಂ ಪ್ರಣವಾದಿ ನಮೋಽಂತಕಂ॥**

ಓಂಕಾರದಿಂದ ಪ್ರಾರಂಭವಾಗಿ ನಮಃ ಶಬ್ದದ ಪರ್ಯಂತರವರೆಗೆ ಇರುವ ಒಂಬತ್ತು ಅಕ್ಷರಗಳುಳ್ಳ ಈ ಮಂತ್ರವು ಸತ್ಯಬೋಧಕ ಎಂದು ಹೇಳಿದ್ದಾರೆ.

**ಓಂ ಭೂಃಭುವಃ ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥**

**ಓಂ ನಮಃ ಸೂರ್ಯಾಯ ಖಂ ಖೋಲ್ಕಾಯ ನಮಃ ।**

ಇದಕ್ಕೆ ಮೂಲಮಂತ್ರ ಎನ್ನುತ್ತಾರೆ. ಒಂಬತ್ತು ಅಕ್ಷರಗಳಿಂದ ಕೂಡಿದ ಸೂರ್ಯನ ಈ ಮೂಲ ಮಂತ್ರದಿಂದ ತೇಜೋಭಾಸುರವಾದ ಮುಖವುಳ್ಳ ಸೂರ್ಯನನ್ನು ಪೂಜಿಸಬೇಕು. ಈ ಮಂತ್ರದ ಮಧ್ಯದಲ್ಲಿ ವ್ಯಾಹೃತಿಗಳು, ಆದಿ ಅಂತ್ಯಭಾಗದಲ್ಲಿ ಓಂಕಾರವೂ ಇರುತ್ತದೆ. ಈ ಸೌರಮಂತ್ರಗಳನ್ನು ಹೇಳಿ ಹೂವು ಅಥವಾ ದರ್ಭೆಯನ್ನು ತೆಗೆದುಕೊಂಡು ಪೂಜಕನು ತಾನು ಅಭಿಷೇಕ ಮಾಡಿಕೊಳ್ಳಬೇಕು.

ಸ್ನಾನಾನಂತರ ಕೆಂಪುಬಟ್ಟೆಯನ್ನು ಧರಿಸಿ ಮಂತ್ರಾಚಮನ ಮಾಡಬೇಕು. ಮುಂಜಾನೆ, ''ಸೂರ್ಯಶ್ಚ ಮಾಮನ್ಯುಶ್ಚ'' ಎಂಬ ಮಂತ್ರದಿಂದಲೂ ರಾತ್ರಿ ಸಾಯಂಕಾಲದಲ್ಲಿ 'ಅಗ್ನಿಶ್ವೇತ್ಯಸ್ಯ' ಎಂಬ ಮಂತ್ರದಿಂದಲೂ, ಮಧ್ಯಾಹ್ನದಲ್ಲಿ 'ಆಪಃ ಪುನಂತು ಪೃಥಿವೀಂ', 'ಓಂ ತಪಃ', ಎಂಬ ಆರನೇ ಮಂತ್ರದಿಂದಲೂ ಶುದ್ಧಿಯನ್ನುಮಾಡಿ 'ವೌಷಟ್' ಎಂಬ ಮಂತ್ರ ಪರ್ಯಂತವಾಗಿ ಜಪಿಸಿ ಹಿಂದೆ ಹೇಳಿದ 'ಓಂ ಭೂಃ' ಎಂದು ಮೊದಲಾಗುವ ನವಬೀಜಾಕ್ಷರ ಮಂತ್ರವನ್ನು ಜಪಿಸಬೇಕು. ಸ್ನಾನಾನಂತರ ಕರನ್ಯಾಸ ಮಾಡಿಕೊಂಡು ದೇವತೆ, ಋಷಿಗಳಿಗೂ, ಭೂತಗಳಿಗೂ, ಪಿತೃಗಳಿಗೂ ತರ್ಪಣವನ್ನು ಕೊಡಬೇಕು.

ನೆಲದ ಮೇಲೆ ರಕ್ತ ಚಂದನ ಮಿಶ್ರಿತವಾದ ನೀರಿನಿಂದ ಒಂದು ಕೈಯ ಉದ್ದಗಲವುಳ್ಳ ವರ್ತುಲಾಕಾರದ ಮಂಡಲವನ್ನು ರಚಿಸಬೇಕು. ಅದರ ಮಧ್ಯದಲ್ಲಿ ಗಂಧ ಮಿಶ್ರಿತವಾದ ನೀರು ತುಂಬಿದ ಕಲಶವನ್ನು ಸ್ಥಾಪಿಸಬೇಕು. ಆ ಕಲಶವನ್ನು ಕೆಂಪು ಹೂವು, ಎಳ್ಳು, ದರ್ಭೆ, ಅಕ್ಷತೆ, ದೂರ್ವೆ ಉತ್ತರಣೆ, ಗೋಘೃತ ಮುಂತಾದ ವಸ್ತುಗಳಿಂದ ಪೂರಣ ಮಾಡಬೇಕು. ಮೂಲ ಮಂತ್ರಹೇಳಿ ನೆಲದಮೇಲೆ ಮೊಣಕಾಲನ್ನು ಊರಿ ಸೂರ್ಯನಿಗೆ ಅಭಿಮುಖವಾಗಿ ನಿಂತು ಅವನನ್ನು ಪ್ರಾರ್ಥಿಸಬೇಕು. ಅನಂತರ ನೀರು ತುಂಬಿದ ಆ ಕಲಶವನ್ನು ತಲೆಯ ಮೇಲೆ ಇಟ್ಟುಕೊಂಡು ಹಿಂದೆ ಹೇಳಿದ ಮೂಲಮಂತ್ರದಿಂದ ಅರ್ಘ್ಯವನ್ನು ಕೊಡಬೇಕು. ಸೂರ್ಯನಿಗೆ ಕೊಟ್ಟ ಈ ಅರ್ಘ್ಯದಿಂದ ಅಶ್ವಮೇಧಯಾಗದ ಅನುಷ್ಠಾನದಿಂದ ಬರುವ ಫಲವು ಪ್ರಾಪ್ತವಾಗುತ್ತದೆ.

ಭಾಸ್ಕರಾರ್ಚನೆಯ ಅನಂತರ ಶಿವಾರ್ಚನೆಯನ್ನು ಹೇಳುತ್ತೇನೆ. ಸೌರಸ್ನಾನದಂತೆ ಶಿವಸ್ನಾನವು ಶ್ರೇಷ್ಠವಾಗಿರುತ್ತದೆ. ಸ್ನಾನಾನಂತರ **''ಆದಿತ್ಯೋ ವೈ ತೇಜ ಓಜೋ ಬಲಂ ಯಶಃ ಚಕ್ಷುಃ ಶ್ರೋತ್ರಮಾತ್ಮಾ''** ಮೊದಲಾದ ಯಾಜುಷ ಮಂತ್ರಗಳಿಂದ ಸೂರ್ಯನನ್ನು ನಮಸ್ಕರಿಸಿ ಅವನಿಗೆ ಆಸನವನ್ನು ಕಲ್ಪಿಸಬೇಕು. ಬಳಿಕ ಅಂಗನ್ಯಾಸ, ಹೃದಯನ್ಯಾಸಾದಿಗಳನ್ನು ಮಾಡಿಕೊಳ್ಳಬೇಕು. ದೀಪ್ತಾ ಸೂಕ್ಷ್ಮಾ, ಜಯಾ, ಭದ್ರಾ, ವಿಭೂತಿ, ವಿಮಲಾ, ಅಘೋರಾ, ವಿಕೃತಾ ಎಂಬ ಅಷ್ಟಶಕ್ತಿಗಳು ಸೂರ್ಯನಿಗೆ ಎದುರಾಗಿ ಕೈಮುಗಿದುಕೊಂಡು ನಿಂತಿದ್ದಾರೆ ಎಂದು ಭಾವಿಸಬೇಕು. ಮಧ್ಯದಲ್ಲಿ ಗಾಯತ್ರೀ

ದೇವಿಯನ್ನು ಸ್ಥಾಪಿಸಿ ಆವ್ಹಾನವನ್ನು ಮಾಡಿ ಅನಂತರ ಸೂರ್ಯನನ್ನು ಆವಾಹಿಸಬೇಕು. ಕಮಲಕರಣಿಕೆಯಲ್ಲಿ ಸೂರ್ಯನ ಪ್ರತಿಬಿಂಬವನ್ನು ಧ್ಯಾನಮಾಡಬೇಕು. ಪದ್ಮವನ್ನು ರಚಿಸಿದ ಸೂರ್ಯಮಂಡಲದ ಹೊರಗೆ ನವಗ್ರಹಗಳ ಪೂಜೆಯನ್ನು ಮಾಡಬೇಕು. ದೇವರಮಂಟಪದ ಹೊರಭಾಗದಲ್ಲಿ ಸಪ್ತಋಷಿಗಳನ್ನು ವಾಲಖಿಲ್ಯರೆಂಬ ಮುನಿಗಳನ್ನು ಪೂಜಿಸಬೇಕು. ಆವಾಹನ ಕಾಲದಲ್ಲಿಯೂ, ಪೂಜೆಯ ಕೊನೆಯಲ್ಲಿಯೂ ಸಾವಿರ, ಐದುನೂರು, ನೂರೆಂಟು ಸಲವಾದರೂ ಭಾಸ್ಕರಮಂತ್ರವನ್ನು ಜಪಿಸಬೇಕು.

ಅನಂತರ 'ಓಂ ಭೂಃ' ಎಂಬ ಆದಿಮಂತ್ರದಿಂದ ಪ್ರಭಾವತಿ ಎಂಬ ಶಕ್ತಿದೇವತೆಯನ್ನು ವಿನ್ಯಾಸಮಾಡಿ ಭಾಸ್ಕರಮಂತ್ರದಿಂದಲೇ ಪೂಜೆಮಾಡಬೇಕು. ನಂತರ ಮೂಲಮಂತ್ರದಿಂದ ಪೂರ್ಣಾಹುತಿಯನ್ನು ನೆರವೇರಿಸಬೇಕು. ಈ ಸೂರ್ಯನ ಅರ್ಚನೆ ಮಾಡುವವನು ಸಕಲ ಪಾಪರಹಿತವಾಗಿ ಇಹದಲ್ಲಿ ಭುಕ್ತಿಯನ್ನು ಪರದಲ್ಲಿ ಮುಕ್ತಿಯನ್ನು ಹೊಂದುತ್ತಾನೆ.

*ಇತಿ ಲಿಂಗ ಮಹಾಪುರಾಣ ಉತ್ತರ ಭಾಗದ ಸೂರ್ಯೋಪಾಸನ ಕ್ರಮನಿರೂಪಣ ಎಂಬ ಇಪ್ಪತ್ತರಡನೆಯ ಅಧ್ಯಾಯ ಮುಗಿದುದು*



## ಶಿವಪೂಜೆ ವಿಧಾನ

ಅಧ್ಯಾಯ - ೨೩

**ನಂದಿಕೇಶ್ವರ :-** ದ್ವಿಜೋತ್ತಮ, ಶಿವಾರ್ಚನೆಯ ಕ್ರಮವನ್ನು ಹೇಳುತ್ತೇನೆ ಕೇಳು. ಶಿವಪೂಜೆಯನ್ನು ಮಾಡಬಯಸುವವನು ಸ್ನಾನಮಾಡಿ ಪೂಜಾ ಸಾಮಗ್ರಿಗಳನ್ನು ತೆಗೆದುಕೊಂಡು ಪೂಜಾಮಂಟಪವನ್ನು ಪ್ರವೇಶಿಸಬೇಕು. ಏಕಾಗ್ರಚಿತ್ತನಾಗಿ ಮೂರು ಸಲ ಪ್ರಾಣಾಯಾಮಮಾಡಿ ಯೋಗಶಾಸ್ತ್ರೋಕ್ತವಾದ ಮಹಾಮುದ್ರೆಯನ್ನು ವಿನ್ಯಾಸಗೊಳಿಸಬೇಕು. ಹೃದಯ ಕಮಲದ ಕರಣಿಕೆಯಲ್ಲಿ ನೆಲೆಸಿರುವ ಶಿವನನ್ನು ಸಗುಣನನ್ನಾಗಿ ಭಾವಿಸಿ ಪೂಜಿಸಬೇಕು. ಆ ಪರಮೇಶ್ವರನು ಸದ್ಯೋಜಾತಾದಿ ಐದು ಮುಖಗಳನ್ನು ಧರಿಸಿದವನೂ, ಹತ್ತು ಬಾಹುಗಳುಳ್ಳವನೂ, ಸರ್ವಾಭರಣಗಳಿಂದ ಪೂಜಿತನೂ ಆಗಿದ್ದಾನೆ. ಶಿರಸ್ಸಿನಲ್ಲಿ ಚಂದ್ರನನ್ನು ಧರಿಸಿದ ಅವನು ಶುದ್ಧ ಸ್ಫಟಿಕದಂತೆ ಇರುತ್ತಾನೆ. ಅವನ ಊರ್ಧ್ವಮುಖ ಶುಭ್ರವರ್ಣ, ಪೂರ್ವಮುಖ ಕುಂಕುಮಾರುಣ, ದಕ್ಷಿಣ ಮುಖ ಹಸುವಿನ ಹಾಲಿನಂತೆ ಶುಕ್ಲವರ್ಣ, ಎಡಕೈಗಳಲ್ಲಿ ಪಾಶ ಅಂಕುಶ ಘಂಟೆ, ಬಾಣಗಳು. ಬಲಗೈಗಳಲ್ಲಿ ಶೂಲ, ಪರಶು, ವಜ್ರಾಯುಧ, ಖಡ್ಗ, ಶಕ್ತಿ ಮುಂತಾದ ಆಯುಧಗಳು ಇರುವವು. ಅವನ ಒಂದು ಕೈ ವರವನ್ನು ನೀಡುವುದು, ಮತ್ತೊಂದು ಅಭಯವನ್ನು ಕೊಡುವದು ಆಗಿರುತ್ತದೆ. ಇಂಥ ಶಿವನನ್ನು ಸದ್ಯೋಜಾತಾದಿ ಅಂಗಗಳ ಕ್ರಮದಿಂದ ಸಕಲ ವಸ್ತುಗಳಲ್ಲಿ ಅಷ್ಟಮೂರ್ತಿಯ ಭಾವನೆಯಿಂದ ಪೂಜಿಸಬೇಕು.

ಶಿವನ ಸದ್ಯೋಜಾತಾದಿ ಅಂಗಗಳು ಹೃದಯಾದಿ ಶಕ್ತಿಗಳು ಯಾವವು ಎನ್ನುವುದನ್ನು ಹೇಳುತ್ತೇನೆ ಕೇಳು.

'ಓಂ ಈಶಾನಃ ಸರ್ವ ವಿದ್ಯಾನಾಂ,' 'ಹೃದಯಾಯ ಶಕ್ತಿ ಬೀಜಾಯ ನಮಃ' ಎಂಬ ಮಂತ್ರದಿಂದ ಹೃದಯನ್ಯಾಸ ಮಾಡಬೇಕು. 'ಓಂ ಈಶ್ವರಃ ಸರ್ವಭೂತಾನಾಂ' ಎಂಬ ಮಂತ್ರ ಹೇಳಿ ' ಅಮೃತಾಯ ಶಿರಸೇ ನಮಃ' ಎಂದು ಶಿರಸ್ಸಿನಲ್ಲಿ ನ್ಯಾಸ ಮಾಡಬೇಕು. 'ಓಂ ಬ್ರಹ್ಮಾಧಿ ಪತಯೇ ಕಾಲಾಗ್ನಿ ರೂಪಾಯ ಶಿಖಾಯೈ ನಮಃ' ಎಂದು ಚಂಡಿಕೆಯಲ್ಲಿ ನ್ಯಾಸಮಾಡಬೇಕು.

ಇದರಂತೆ 'ಓಂ ಬ್ರಹ್ಮಣೋಧಿಪತಯೇ ಕಾಲಾಯ ನಮಃ' 'ಚಂಡಮಾರುತಾಯ ಕವಚಾಯ ನಮಃ', ಓಂ ಬ್ರಹ್ಮಣೇ ಬ್ರಹ್ಮಣ್ಯಾಯ ನಮಃ

**ಜ್ಞಾನ ಮೂರ್ತಯೇ ನೇತ್ರಾಯ ನಮಃ ।**
**ಓಂ ಶಿವಾಯ ಸದಾಶಿವಾಯ ಪಾಶುಪತಾಸ್ತ್ರಾಯ**
**ಅಪ್ರತಿ ಹತಾಯ ಫಟ್ ಫಟ್**
**ಓಂ ಸದ್ಯೋಜಾತಾಯ ಭವೇ ಭವೇ ನಾತಿಭವೇ ಭರಸ್ವ ಮಾಂ**
**ಭವೋದ್ಭವಾಯ ಶಿವ ಮೂರ್ತಯೇ ನಮಃ ।**
**ಓಂ ಹಂಸ ಶಿಖಾಯ ವಿದ್ಯಾ ದೇಹಾಯ ಆತ್ಮ ಸ್ವರೂಪಾಯ**
**ಪರಾಪರಾಯ ಶಿವಾಯ ಶಿವತಮಾಯ ನಮಃ ।**

ಈ ಮಂತ್ರಗಳಿಂದ ಅಂಗನ್ಯಾಸ, ಕರನ್ಯಾಸ, ಹೃದಯನ್ಯಾಸಾದಿಗಳನ್ನು ಮಾಡಿ ಪರಮೇಶ್ವರನನ್ನು ಪೂಜಿಸಬೇಕು.

ಈ ಮಂತ್ರಗಳಿಂದ ಶಿವನನ್ನು ಹೃತ್ಕಮಲದಲ್ಲಿ ಅರ್ಚಿಸಬೇಕು. ಮತ್ತು ನಾಭಿಸ್ಥಾನವಾದ ಅಗ್ನಿಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠೆಮಾಡಿ ವಿಧಿಪೂರ್ವಕವಾಗಿ ಹೋಮವನ್ನು ಮಾಡಬೇಕು.

ಮಾನಸ ಹೋಮವನ್ನು ನೆರವೇರಿಸುವ ಕ್ರಮವನ್ನು ಹೇಳುತ್ತೇನೆ. ಸದ್ಯೋಜಾತಾದಿ ಪಂಚರೂಪಗಳಿಂದ ಕೂಡಿದ ರಕ್ತಪದ್ಮಾಸನಸ್ಥನಾದ ಶಿವಮೂರ್ತಿಯನ್ನು ಮೂಲ ಮಂತ್ರದಿಂದಲೂ, ಅಂಗಮಂತ್ರಗಳಿಂದಲೂ ಪ್ರತ್ಯೇಕವಾಗಿ ಹೃದಯಾಂತರಂಗದಲ್ಲಿ ಪೂಜಿಸಬೇಕು. ವಿಧಿಪೂರ್ವಕವಾಗಿ ಹೃದಯಮಂಟಪದಲ್ಲಿ ಪೂಜೆ ಮಾಡಿದ ಶಿವನ ಆ ಮಾನಸಪ್ರತಿಮೆಯನ್ನು ಬಾಹ್ಯಮಂಟಪದಲ್ಲಿ ಸ್ಥಾಪಿಸಿದ ಶಿವ ಮೂರ್ತಿಯಲ್ಲಿ ಆವ್ಹಾನಿಸಬೇಕು. ಅನಂತರ ವಿಧಿ ಪೂರ್ವಕವಾಗಿ ಪೂಜೆ ಮಾಡಬೇಕು. ಬಳಿಕ ಸಮಿಧಾ ಹೋಮವನ್ನು, ತುಪ್ಪದ ಹೋಮವನ್ನುಮಾಡಿ ಚಂದ್ರಮಂಡಲದಿಂದ ಉದ್ಧೃತವಾದ ಅಮೃತ ಧಾರೆಯಿಂದ ಪೂರ್ಣಾಹುತಿಯನ್ನು ಮಾಡಬೇಕು.

ಹೋಮವನ್ನು ಮಾಡಿದ ಬಳಿಕ ಆ ಪರಮೇಶ್ವರನು ಮುಖದಲ್ಲಿ ಇರುವನೆಂದು ಧ್ಯಾನಮಾಡಬೇಕು. ಹೃತ್ಕಮಲದಲ್ಲಿ ಸರ್ವತೋಮುಖದಿಂದ ವ್ಯಾಪಿಸಿ ದೀಪಜ್ವಾಲೆಯಂತೆ ತೇಜೋ ವಿಶಿಷ್ಟನಾದ ಮಹೇಶ್ವರನನ್ನು ಹೃತ್ಕಮಲದಲ್ಲಿ ಧ್ಯಾನಮಾಡಬೇಕು. ಈ ರೀತಿಯಾಗಿ ಮಾನಸಪೂಜೆಯು ಉತ್ತಮಾಧಿಕಾರಿಗಳಿಗೆ ಮಾತ್ರ ಹೇಳಲ್ಪಟ್ಟಿದೆ. ಮಂದಾಧಿಕಾರಿಗಳು ಶಿವಲಿಂಗದಲ್ಲಿಯಾಗಲಿ, ಸ್ಥಂಡಿಲದಲ್ಲಿಯಾಗಲಿ ಶಿವದೃಷ್ಟಿಯಿಂದ ಶಿವಪೂಜೆಯನ್ನು ಮಾಡಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಶಿವಪೂಜೆಯ ವಿಧಾನ ಎಂಬ ಇಪ್ಪತ್ತೂರನೆಯ ಅಧ್ಯಾಯ ಮುಗಿದುದು*

**ನಂದೀಶ್ವರ :-** ಶಿವಶಾಸ್ತ್ರದಲ್ಲಿ ನಿರೂಪಿಸಿದಂತೆ ಶಿವಲಿಂಗಪೂಜಾ ವಿಧಾನದ ವಿವರಣೆಯನ್ನು ಮಾಡುತ್ತೇನೆ. ಕೇಳಿರಿ.

ಶಿಷ್ಯನಿಗೆ ಶಿವಸ್ನಾನ, ಭಸ್ಮಸ್ನಾನಗಳು ಆದ ಬಳಿಕ ಎರಡೂ ಕೈಗಳಿಗೆ ಗಂಧವನ್ನು ಲೇಪಿಸಿಕೊಳ್ಳಬೇಕು. 'ವೌಷಟ್ ಮಂತ್ರವನ್ನು ಉಚ್ಚರಿಸಿ ಬೊಗಸೆಮಾಡಿ ಮೂರ್ತಿ ವಿದ್ಯೆಯನ್ನೂ ಶೈವ ಮಂತ್ರಗಳನ್ನೂ ಜಪಿಸಬೇಕು. ಹೆಬ್ಬೆರಳಿನಿಂದ ಆರಂಭಿಸಿ ಕಿರಿಬೆರಳಿನವರೆಗೆ ಈಶಾನಾದಿಮಂತ್ರಗಳಿಂದ ನ್ಯಾಸಮಾಡಬೇಕು. ಕನಿಷ್ಠಿಕಾ, ತರ್ಜನಿ, ಮಧ್ಯಮಾ, ಹೃದಯ ಈ ಪ್ರದೇಶಗಳಲ್ಲಿ ಅಘೋರಮಂತ್ರವನ್ನೂ, ಅಂಗುಷ್ಠದಲ್ಲಿ ತತ್ಪುರುಷಮಂತ್ರವನ್ನೂ, ಅನಾಮಿಕಾದಿದಲ್ಲಿ ಐದನೆಯಮಂತ್ರವನ್ನು, ಎರಡೂ ಅಂಗೈಗಳಿಂದ ಆರನೆಯಮಂತ್ರವನ್ನು ಜಪಿಸಿ ನ್ಯಾಸಮಾಡಬೇಕು. ತೋರು ಬೆರಳು ಹಾಗು ಹೆಬ್ಬೆರಳುಗಳಿಂದ ನಾರಾಚಮುದ್ರೆಯನ್ನುಮಾಡಿ ಮೂಲ ಮಂತ್ರವಾದ ಪಂಚಾಕ್ಷರಮಂತ್ರವನ್ನು ಜಪಿಸಬೇಕು. ನಾಲ್ಕನೆಯ ಮಂತ್ರದಿಂದ ಅವಗುಂಠನವನ್ನು ಮಾಡಬೇಕು. ಇಷ್ಟು ಮಾಡಿದರೆ ಶಿವ ಹಸ್ತ ಎನಿಸುವದು. ಈ ಶಿವಹಸ್ತದಿಂದ ಶಿವಾರ್ಚನೆಯನ್ನು ಮಾಡಬೇಕು.

ಭಕ್ತನು ತನ್ನ ಮನಸ್ಸನ್ನು ತತ್ವಗಳಲ್ಲಿ ಸೇರುವಂತೆ ಮಾಡಿ ತತ್ವಶುದ್ಧಿಯನ್ನು ಮಾಡಬೇಕು. 'ನಮೋ ಹಿರಣ್ಯಬಾಹವೇ' ಎಂಬ ಮಂತ್ರದಿಂದ ಹಾಗೂ ಸದ್ಯೋಜಾತ ಅಘೋರಮಂತ್ರಗಳಿಂದಲೂ 'ಫಟ್' ಎಂದು ಕೊನೆಯಲ್ಲಿ ಉಚ್ಚರಿಸಿ ಭೂತತ್ವ ಶುದ್ಧಿಯನ್ನು ಮಾಡಬೇಕು. 'ನಮೋ ಹಿರಣ್ಯ ಬಾಹವೇ' ಮಂತ್ರದಿಂದ ಜಲತತ್ವ, ಮೂರನೆಯ ಅಘೋರ ಮಂತ್ರದಿಂದ ಅಗ್ನಿತತ್ವ, ನಾಲ್ಕನೆಯ ತತ್ಪುರುಷ ಮಂತ್ರ ಆರನೆಯ ನಮೋ ಹಿರಣ್ಯ ಬಾಹವೇ ಎಂಬ ಮಂತ್ರದ ಕೊನೆಯಲ್ಲಿ ಫಟ್ ಎಂಬ ಮಂತ್ರವನ್ನು ಉಚ್ಚರಿಸಿ ವಾಯುತತ್ವ ಶುದ್ಧಿಯನ್ನು, 'ನಮೋಹಿರಣ್ಯಬಾಹವೇ' ಸದ್ಯೋಜಾತ ಅಘೋರ ಮಂತ್ರಗಳ ಕೊನೆಯಲ್ಲಿ ಫಟ್ ಎಂಬ ಶಬ್ದವನ್ನು ಉಚ್ಚರಿಸಿ ಆಕಾಶತತ್ವ ಶುದ್ಧಿಯನ್ನೂ ಮಾಡಬೇಕು.

ಬಳಿಕ 'ಸದ್ಯೋಜಾತ' , 'ನಮೋಹಿರಣ್ಯ ಬಾಹವೇ', 'ಅಘೋರ' ಮತ್ತು ಪಂಚಾಕ್ಷರಮಂತ್ರ ಇವುಗಳ ಕೊನೆಯಲ್ಲಿ ಫಟ್‌ಮಂತ್ರವನ್ನು ಉಚ್ಚರಿಸಿ ತಾಡನವನ್ನೂ, ಪಂಚಾಕ್ಷರಮಂತ್ರವನ್ನು ಅಘೋರಮಂತ್ರದಿಂದ ಸಂಪುಟೀಕರಣಗೊಳಿಸಿ ಗ್ರಹಣವನ್ನು, ಪಂಚಾಕ್ಷರಿಮಂತ್ರವನ್ನು ಯೋನಿ ಬೀಜವಾದ 'ಹ್ರೀಂ' ಎಂಬ ಮಂತ್ರದಿಂದ ಸಂಪುಟೀಕರಣಮಾಡಿ ದಿಗ್ಬಂಧನವನ್ನು ಮಾಡಬೇಕು.

ಹಿಂದೆ ಹೇಳಿದ ರೀತಿಯಲ್ಲಿ ಆಸನವನ್ನು ಕಲ್ಪಿಸಿ ಸಮಸ್ತ ಉಪಚಾರ ಸಹಿತವಾಗಿ ಹೊರಗಿನ ಪೂಜೆ ಮಾಡಿದಂತೆ ಮನಸ್ಸಿನಲ್ಲಿಯೇ ಪೂಜೋಪಚಾರಗಳನ್ನು ಸಲ್ಲಿಸಬೇಕು.

ನಾಭಿಯಲ್ಲಿ ಇರುವ ಅಗ್ನಿ ಕುಂಡದಲ್ಲಿ ಹಿಂದೆ ಹೇಳಿದಂತೆ ಆಸನವನ್ನು ಕಲ್ಪಿಸಿ ಶಿವನನ್ನು ಧ್ಯಾನಿಸಬೇಕು. ಹಣೆಯಲ್ಲಿ ದೀಪಶಿಖೆಯ ಆಕಾರವಾಗಿರುವ ಅಗ್ನಿ ನೇತ್ರವುಳ್ಳ ಮಹೇಶ್ವರನನ್ನು ಧ್ಯಾನಿಸಿ ಬಿಂದುವಿನಿಂದ ಅಮೃತಧಾರೆಯು ಶಿವ ಮಂಡಲದ ಮೇಲೆ ಬೀಳುತ್ತಿರುವದೆಂದು ಧ್ಯಾನಮಾಡಬೇಕು. ಇದೇ ಆತ್ಮ ಶುದ್ಧಿ.

ಪ್ರಾಣಾಪಾನವಾಯುಗಳನ್ನು ಒಂದು ಕ್ರಮದಲ್ಲೇ ಸಂಚರಿಸಿಸುವಂತೆಮಾಡಿ ಸುಶುಮ್ನಾ ನಾಡಿಯಲ್ಲಿ ಸ್ಥಿರಗೊಳಿಸಿಷು ಆರನೆಯ 'ನಮೋ ಹಿರಣ್ಯ ಬಾಹವೆ' ಎಂಬ ಮಂತ್ರದಿಂದ ತಾಲುಮುದ್ರೆ ಎಂಬ ಖೇಚರೀಮುದ್ರೆಯನ್ನು, ದಿಗ್ಬಂಧನವನ್ನೂ ಮಾಡಿದರೆ ಶರೀರ ಶುದ್ಧಿಯಾಗುವುದು.

ಪಂಚಬ್ರಹ್ಮಮಂತ್ರಗಳಲ್ಲಿ ಮೊದಲನೆಯ ಮಂತ್ರದಿಂದ ಪೂಜೆಮಾಡಿ, ಎರಡನೆಯ ಮಂತ್ರದಿಂದ ಅಮೃತೀಕರಣವನ್ನುಮಾಡಿ, ಮೂರನೆಯದರಿಂದ ಶುದ್ಧಿ ಮಾಡಬೇಕು. ನಾಲ್ಕನೆಯದರಿಂದ ಮುಟ್ಟಿ, ಐದನೆಯದರಿಂದ ನಿರೀಕ್ಷಿಸಿ, ಆರನೆಯ 'ಹಿರಣ್ಯಬಾಹವೆ' ಮಂತ್ರದಿಂದ ರಕ್ಷಣೆಯನ್ನುಮಾಡಬೇಕು. ನಾಲ್ಕನೆಯ ರುದ್ರಗಾಯತ್ರಿಯಿಂದ ಅರ್ಘ್ಯಪಾತ್ರೆಯ ನೀರನ್ನು ಕೂರ್ಚೆಯಿಂದ ತೆಗೆದುಕೊಳ್ಳಬೇಕು. ಅದರಂತೆ ಸಮಸ್ತ ಪೂಜಾ ದ್ರವ್ಯಗಳನ್ನು ಬೇರೆ ಬೇರೆಯಾಗಿ ಪ್ರೋಕ್ಷಿಸಿ ಶುದ್ಧೀಕರಣವನ್ನು ಮಾಡಬೇಕು. ಸದ್ಯೋಜಾತಮಂತ್ರದಿಂದ ಗಂಧವನ್ನು, ವಾಮದೇವಮಂತ್ರದಿಂದ ವಸ್ತ್ರವನ್ನೂ, ಅಘೋರಮಂತ್ರದಿಂದ ಆಭರಣಗಳನ್ನೂ, ತತ್ಪುರುಷಮಂತ್ರದಿಂದ ನೈವೇದ್ಯವನ್ನೂ, ಈಶಾನಮಂತ್ರದಿಂದ ಪುಷ್ಪವನ್ನೂ ಅಭಿಮಂತ್ರಿಸಬೇಕು. ಉಳಿದ ಪೂಜೋಪಕರಣಗಳನ್ನೆಲ್ಲ ಶಿವ ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಬೇಕು. ಪಂಚಾಮೃತ, ಪಂಚಗವ್ಯ ಮುಂತಾದ ದ್ರವ್ಯಗಳನ್ನು ಪಂಚಾಕ್ಷರಿ ಮಂತ್ರದಿಂದ ಅಭಿಮಂತ್ರಿಸಬೇಕು.

ಬೇರೆಬೇರೆಯಾಗಿ ಪಂಚಾಕ್ಷರ ಮಂತ್ರದಿಂದ ಅರ್ಘ್ಯ, ಧೂಪ, ಆಚಮನೀಯಗಳನ್ನು ಸಮರ್ಪಿಸಿ, ಧೇನುಮುದ್ರೆಯನ್ನು ತೋರಿಸಿ, ಕವಚ ಮುದ್ರೆಯಿಂದ ಮುಚ್ಚಿ, ಅಸ್ತ್ರ ಮುದ್ರೆಯಿಂದ ರಕ್ಷಣೆಮಾಡಿ, ದ್ರವ್ಯ ಶುದ್ಧಿಯನ್ನು ಮಾಡಬೇಕು. ಪೂಜಾ ಸಮರ್ಪಣವನ್ನು ಮಾಡುವವರೆಗೂ ಮೌನವಾಗಿಯೇ ಇದ್ದು ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ಎಲ್ಲ ಪೂಜಾಮಂತ್ರಗಳನ್ನು ಓಂಕಾರದಿಂದ ಪ್ರಾರಂಭಿಸಿ ನಮಃ ಎಂದು ಮುಗಿಸಬೇಕು. ಇದಕ್ಕೆ ಮಂತ್ರಶುದ್ಧಿ ಎನ್ನುವರು.

ಪಂಚಬ್ರಹ್ಮಮಂತ್ರದಿಂದ ಅಭಿಮಂತ್ರಿಸಿದ ನೀರಿನಿಂದ ಶಿವನಿಗೆ ಸ್ನಾನ ಮಾಡಿಸಬೇಕು. ಈಶಾನ ಮಂತ್ರದಿಂದ ಪಂಚಾಮೃತದ್ರವ್ಯಗಳಿಂದ ಅಭಿಷೇಕವನ್ನು ಮಾಡಬೇಕು. ಅನಂತರ ಮೂಲಮಂತ್ರವನ್ನು ಉಚ್ಚರಿಸಿ ಶುದ್ಧೋದಕಸ್ನಾನವನ್ನು ಮಾಡಬೇಕು. ಪಂಚಾಮೃತ ಅಭಿಷೇಕವಾದ ಮೇಲೆ ಬಿಸಿ ನೀರಿನಿಂದಲೂ, ಅರಿಷಿಣದ ಪುಡಿಯಿಂದಲೂ ಪೀಠಸಹಿತವಾದ ಲಿಂಗಮೂರ್ತಿಯನ್ನು ಸ್ನಾನಮಾಡಿಸಬೇಕು. ಗಂದೋಧಕ, ಹಿರಣ್ಯೋದಕ, ಮಂತ್ರೋದಕಗಳಿಂದ ರುದ್ರಾಧ್ಯಾಯವನ್ನು ಹೇಳುತ್ತ ನೀಲರುದ್ರ, ತ್ವರಿತರುದ್ರ, ಪಂಚಬ್ರಹ್ಮಮಂತ್ರಗಳಿಂದ 'ನಮಃಶಿವಾಯ' ಎಂಬ ಮಂತ್ರದೊಡನೆ ಶುದ್ಧ ಸಲಿಲದಿಂದ ಸ್ನಾನಮಾಡಿಸಬೇಕು.

ಶಿವಲಿಂಗಕ್ಕೆ ಪ್ರತಿಯೊಂದು ದ್ರವ್ಯಗಳ ಅಭಿಷೇಕವನ್ನು ಮಾಡುವಾಗ ನೆತ್ತಿಯ ಮೇಲೆ ಹೂವನ್ನು ಇಟ್ಟು ಅಭಿಷೇಕವನ್ನು ಮಾಡಬೇಕು. ಲಿಂಗದ ನೆತ್ತಿಯನ್ನು ಎಂದೂ ಖಾಲಿ ಮಾಡಬಾರದು. ಯಾವ ರಾಜ್ಯದಲ್ಲಿ ಲಿಂಗದ ನೆತ್ತಿಯು ಏನೂ ಇಲ್ಲದೆ ರಿಕ್ತವಾಗಿರುವದೋ ಅರ್ಥಾತ್ ಬರಿದಾಗಿರುವದೋ ಆ ರಾಜ್ಯಕ್ಕೆ ದುರ್ಭಿಕ್ಷ, ಮಹಾರೋಗ, ವಾಹನಗಳ ನಾಶಗಳು ಉಂಟಾಗುವವು.

ಹೀಗೆ ಲಿಂಗಕ್ಕೆ ಅಭಿಷೇಕವನ್ನುಮಾಡಿ ವಸ್ತ್ರದಿಂದ ಒರಿಸಿ ಗಂಧ, ಹೂವು, ವಸ್ತ್ರಾಲಂಕಾರಗಳನ್ನು ಏರಿಸಬೇಕು. ಧೂಪ, ಆಚಮನ, ದೀಪ, ನೈವೇದ್ಯಾದಿಗಳನ್ನು ಪಂಚಾಕ್ಷರಿಮಂತ್ರದಿಂದ ಸಮರ್ಪಿಸಿದ ಬಳಿಕ ಲಿಂಗದ ನೆತ್ತಿಯ ಮೇಲೆ ಓಂಕಾರದಿಂದ ಮಾಡುವದು ಪವಿತ್ರೀಕರಣ ಎನಿಸುವುದು.

ಮೂಲ ಮಂತ್ರವಾದ ಪಂಚಾಕ್ಷರ ಮಂತ್ರದಿಂದ ನಮಸ್ಕಾರ ಮಾಡಿದ ಮೇಲೆ ಆವಾಹನ, ಸ್ಥಾಪನ ಮೊದಲಾಗಿ ಷೋಡಶೋಪಚಾರ ಪೂಜೆಗಳನ್ನು ನಿವೇದಿಸಿ ಯಥಾಸಾಂಗ ಶಿವಲಿಂಗ ಪೂಜೆಯನ್ನು ಮಾಡಬೇಕು.

ಅನಂತರ ಎಲ್ಲ ಲಿಂಗಮೂರ್ತ್ಯಾದಿಗಳ ಧ್ಯಾನವನ್ನೂ ಮೂಲಮಂತ್ರ ಜಪವನ್ನೂ ಮಾಡಬೇಕು. ಮೂಲಮಂತ್ರ ಜಪಸಂಖ್ಯೆಯ ಹತ್ತನೆಯ ಒಂದು ಭಾಗದಷ್ಟು ಬ್ರಹ್ಮಾಂಡ ಜಪವನ್ನು ಮಾಡಿ ಜಪ ಸಮರ್ಪಣೆಯನ್ನು ಮಾಡಬೇಕು. ಅನಂತರ ಆತ್ಮನಿವೇದನ, ಸ್ತೋತ್ರ, ಕ್ಷಮಾಪ್ರಾರ್ಥನೆ, ನಮಸ್ಕಾರಾದಿಗಳನ್ನು ಮಾಡಬೇಕು. ಪೂರ್ವದಿಕ್ಕಿನಲ್ಲಿ ಗುರುಪೂಜೆಯನ್ನೂ, ದಕ್ಷಿಣ ದಿಕ್ಕಿನಲ್ಲಿ ವಿನಾಯಕ ಪೂಜೆಯನ್ನು ಮಾಡಬೇಕು. ಇದೇ ಉತ್ತರಾಂಗ ಪೂಜೆ.

ಶಿವಲಿಂಗಕ್ಕೆ ಏಳು ಪ್ರದಕ್ಷಿಣೆಯನ್ನುಮಾಡಿ ನೆಲದುದ್ದಕ್ಕೂ ಸಾಷ್ಟಾಂಗ ನಮಸ್ಕಾರವನ್ನುಮಾಡಬೇಕು. ಶಿವಲಿಂಗದ ಪ್ರದಕ್ಷಿಣೆಯಲ್ಲಿ ಒಂದೊಂದು ಹೆಜ್ಜೆಗೂ ನೂರು ಅಶ್ವಮೇಧ ಯಾಗಮಾಡಿದ ಫಲವುಂಟು. ಆದುದರಿಂದ ಸರ್ವ ಇಷ್ಟಾರ್ಥಗಳ ಸಿದ್ಧಿಗಾಗಿ ಪ್ರತಿ ದಿನವೂ ಲಿಂಗಪೂಜೆಯನ್ನು ಮಾಡಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಲಿಂಗಪೂಜಾವಿಧಾನ ಎಂಬ ಇಪ್ಪನಾಲ್ಕನೆಯ ಅಧ್ಯಾಯ ಸಮಾಪ್ತವಾದುದು.*

—o—

**ನಂದೀಶ್ವರ :-** ಸನತ್ಕುಮಾರರೇ, ಈಗ ನಾನು ನಿಮಗೆ ಶಿವನು ತಾನೇ ಹೇಳಿದ ಶಿವಾಗ್ನಿಕಾರ್ಯದ ಕ್ರಮವನ್ನು ಹೇಳುತ್ತೇನೆ ಕೇಳು. ಸಂಪ್ರೋಕ್ಷಣಾದಿಗಳಿಂದ ಶುದ್ಧೀಕರಿಸಿದ ಮಂಗಳಕರವಾದ ಪ್ರದೇಶದಲ್ಲಿ ಪೂರ್ವದಿಕ್ಕಿನಲ್ಲಿ ಯಜಮಾನನ ಮುಂಭಾಗದಲ್ಲಿ ಒಂದು ಸ್ಥಳವನ್ನು ಸಿದ್ಧಪಡಿಸಬೇಕು. ಪೂರ್ವಾಗ್ರವಾಗಿಯೂ, ಉತ್ತರಾಗ್ರವಾಗಿಯೂ ಮೂರು ದಾರಗಳನ್ನು ಇಟ್ಟು ಚಚ್ಚೌಕಾದ ಒಂದು ಸ್ಥಳದಲ್ಲಿ ಹೋಮದ ಅಗ್ನಿಕುಂಡವು ಇಡಬೇಕು ಮೇಖಲಾರೂಪವಾದ ಆವರಣಗಳಿಂದ ಕೂಡಿರಬೇಕು. ಆ ಮೇಖಲೆಯು ಒಂದು ಮೊಳ ಉದ್ದ, ನಾಲ್ಕು, ಮೂರು ಅಥವಾ ಎರಡು ಅಂಗುಲ ವಿಸ್ತಾರವಾಗಿರಬೇಕು. ಅಗ್ನಿಕುಂಡವು ಒಂದು ಮೊಳ ಎತ್ತರ ಒಂದು ಮೊಳ ಆಳವೂ ಇರಬೇಕು. ಯೋನಿಯು ಒಂದು ಚೋಟು ಇರಬೇಕು. ಮೇಖಲೆಯ ಮೇಲೆ ಅರಳಿ ಎಲೆಯ ಆಕಾರವಾಗಿ ಯೋನಿಯನ್ನು ಕಲ್ಪಿಸಬೇಕು. ಅಗ್ನಿಕುಂಡದ ನಡುವೆ ಒಂದು ಚೋಟು ವಿಸ್ತಾರವಾಗಿ ಎಂಟು ಪತ್ರಗಳು ಕರಣಿಕೆ ಸಹಿತವಾಗಿರುವ ನಾಭಿ ಎಂಬ ಪ್ರದೇಶವನ್ನು ರಚಿಸಬೇಕು. ಅಸ್ತ್ರಮಂತ್ರವಾದ ಫಟ್ ಎಂಬುವದರಿಂದ ಉಲ್ಲೇಖನವನ್ನು, ಹೂಂ ಎಂಬ ಕವಚ ಮಂತ್ರದಿಂದ ಪ್ರೋಕ್ಷಣವನ್ನುಮಾಡಿ, ಕುಂಡವನ್ನು ಕಣ್ಣಿನಿಂದ ನೋಡಿ ಆರು ರೇಖೆಗಳನ್ನು ಬರೆಯಬೇಕು. ಪಶ್ಚಿಮದಿಂದ ಪೂರ್ವಕ್ಕೂ, ದಕ್ಷಿಣದಿಂದ ಉತ್ತರಕ್ಕೂ ಬ್ರಹ್ಮಾ ವಿಷ್ಣು ಮಹೇಶ್ವರ ಸ್ವರೂಪವಾದ ಮೂರು ಮೂರು ರೇಖೆಗಳನ್ನು ಬರೆದು ಹೂಂ ಎಂಬ ಕವಚಮಂತ್ರದಿಂದ ಪ್ರೋಕ್ಷಿಸಬೇಕು. ಬನ್ನಿ ಮತ್ತು ಅರಳಿಯ ಮರಗಳಿಂದ ಮಾಡಿದ ಹದಿನಾರು ಅಂಗುಲ ಅಗಲವಾದ ಅರಣಿಯನ್ನು ಅಗ್ನಿ ಬೀಜಾಕ್ಷರವಾದ 'ರಂ' ಎಂಬ ಮಂತ್ರವನ್ನು ಉಚ್ಚರಿಸುತ್ತ ಕಡೆದು ಹೃದಯ ಮಂತ್ರದಿಂದ ಶಕ್ತಿನ್ಯಾಸವನ್ನು ಮಾಡಬೇಕು.

ಅಗ್ನಿಕುಂಡದಲ್ಲಿ ಅಗ್ನಿಯನ್ನು ವಿಧಿವತ್ತಾಗಿ ಪ್ರತಿಷ್ಠೆಮಾಡಿ ಯಜ್ಞಕ್ಕೆ ಉಪಯೋಗಿಸುವ ಒಂದು ಚೋಟುದ್ದದ ಸಮಿಧೆಗಳಿಂದ ಅನ್ವಾಧಾನವನ್ನು ಮಾಡಬೇಕು. ಪೂರ್ವದಿಕ್ಕಿನಲ್ಲಿ ಉತ್ತರಾಗ್ರವಾಗಿಯೂ, ದಕ್ಷಿಣದಿಕ್ಕಿನಲ್ಲಿ ಪೂರ್ವಾಗ್ರವಾಗಿಯೂ, ಪಶ್ಚಿಮದಲ್ಲಿ ಉತ್ತರಾಗ್ರವಾಗಿಯೂ, ಉತ್ತರದಲ್ಲಿ ಪೂರ್ವಾಗ್ರವಾಗಿಯೂ ದರ್ಭೆಗಳಿಂದ ಪರಸ್ತರಣಗಳನ್ನು ಹಾಕಬೇಕು.

ಪೂರ್ವದಿಕ್ಕಿನಲ್ಲಿ ಐಂದ್ರಾಗ್ನಿಯನ್ನೂ, ದಕ್ಷಿಣದಲ್ಲಿ ಯಾಮ್ಯಾಗ್ನಿಯನ್ನೂ, ಎತ್ತರದಲ್ಲಿ ಚಾಂದ್ರಾಗಿಯನ್ನೂ, ಪಶ್ಚಿಮದಲ್ಲಿ ವಾರುಣಾಗ್ನಿಯನ್ನೂ ಸ್ಥಾಪಿಸಿ ದಿಗ್ದೇವತಾವಾಹನೆಯನ್ನು ಮಾಡಬೇಕು. ಉತ್ತರದಿಕ್ಕಿನಲ್ಲಿ ಹಾಕಿದ ದರ್ಭೆಯ ಮೇಲೆ ಎರಡೆರಡು ಪಾತ್ರೆಗಳನ್ನು ಅಧೋಮುಖವಾಗಿ ಇಟ್ಟು ಅವುಗಳ ಮೇಲೆ ಒಂದು ಚೋಟು ಉದ್ದದ ಎರಡು ದರ್ಭೆಗಳನ್ನು ಇರಿಸಿ 'ವಸೋಃ ಸೂರ್ಯಸ್ಯ ರಶ್ಮಿಭಿಃ' ಎಂಬ ಮಂತ್ರದಿಂದ ಆ ನೀರನ್ನು ದರ್ಭೆಯಿಂದ ಎಲ್ಲ ಪಾತ್ರೆಗಳ ಮೇಲೂ ಪ್ರೋಕ್ಷಿಸಬೇಕು.

ಯಾಜ್ಞಿಕ ಗ್ರಂಥಗಳಲ್ಲಿ ಹೇಳಿದ ವಿಧಿವಿಧಾನಗಳಿಂದಲೇ ಎಲ್ಲ ಹೋಮ ಕಾರ್ಯವನ್ನು ಯಥಾಸಾಂಗವಾಗಿ ಮಾಡಬೇಕು. ಹೋಮಕ್ಕೆ ಆಕಳ ತುಪ್ಪವೇ ಆಗಬೇಕು.

ಆದರಲ್ಲಿಯೂ ಕಪಿಲ ಗೋವಿನ ತುಪ್ಪವೇ ಆಗಬೇಕು. ಕಪಿಲ ಗೋವಿನ ತುಪ್ಪವು ಅತ್ಯಂತ ಶ್ರೇಷ್ಠ. ಒಂದೊಂದು ಆಹುತಿಗೆ ಸ್ರುವದಲ್ಲಿ ತುಂಬುವಷ್ಟು ತುಪ್ಪವನ್ನು ಹಾಕಿ ಹೋಮ ಮಾಡಬೇಕು. ಹೋಮಕ್ಕೆ ಅನ್ನವು, ತಾರೆಯಕಾಯಿಯ ಗಾತ್ರದ್ದೂ, ಎಳ್ಳು ಒಂದು ಕಪ್ಪೆಯ ಚಿಪ್ಪಿನಲ್ಲಿ ತುಂಬುವಷ್ಟು ಇದ್ದು ಇದರ ಅರ್ಧ ಗೋಧಿಯು, ಹಣ್ಣುಗಳು ಆವುಗಳ ಸಾಮಾನ್ಯ ಗಾತ್ರವುಳ್ಳವುಗಳು ಇರಬೇಕು. ಹಾಲು, ಜೇನುತುಪ್ಪ, ಮೊಸರು ಇವೆಲ್ಲವೂ ತುಪ್ಪದಷ್ಟೇ ಅಳತೆಯಲ್ಲಿ ಇರಬೇಕು. ನಾಲ್ಕು ಸ್ರುವಗಳಲ್ಲಿ ತುಂಬುವಷ್ಟು ತುಪ್ಪವನ್ನು ಸ್ರುಕ್ಕಿನಲ್ಲಿ ತುಂಬಿ ಪೂರ್ಣಾಹುತಿಯನ್ನು ಮಾಡಬೇಕು. ಸ್ವಿಷ್ಟ ಕೃತ್ ಹೋಮಕ್ಕೆ ಅದರ ಅರ್ಧಭಾಗ ತುಪ್ಪವು ಸಾಕಾಗುವುದು. ಅಥವಾ ಹೋಮಮಾಡಿ ಉಳಿದ ತುಪ್ಪವನ್ನೆಲ್ಲ ಸ್ವಿಷ್ಟಕೃತು ಹೋಮದಲ್ಲಿ ಉಪಯೋಗಿಸಬಹುದು. ಶಾಂತಿಕ ಪೌಷ್ಟಿಕಕರ್ಮಗಳಲ್ಲಿ ಶಿವಾಗ್ನಿಯಲ್ಲಿ ಹೋಮವನ್ನು ಮಾಡಬೇಕು. ಮೋಹನ, ಉಚ್ಚಾಟನೆ ಮುಂತಾದ ಕರ್ಮಗಳಲ್ಲಿ ಲೌಕಿಕಾಗ್ನಿಯಲ್ಲಿ ಹೋಮಮಾಡಬೇಕು.

ಶಾಂತಿಕ ಪೌಷ್ಟಿಕ ಮುಂತಾದ ಸಮಸ್ತ ಶುಭಕರ್ಮಗಳನ್ನೂ, ಅರಣಿಯಲ್ಲಿ ಶಿವಾಗ್ನಿಯನ್ನು ಕಡೆದು ಹುಟ್ಟಿಸಿ ಆ ಅಗ್ನಿಯಲ್ಲಿ ಸಪ್ತ ಜಿಹ್ವೆಗಳನ್ನು ಕಲ್ಪಿಸಿ ಅವುಗಳಲ್ಲಿ ಹೋಮ ಮಾಡಿ ಕರ್ಮಸಿದ್ಧಿಯನ್ನು ಪಡೆಯಬೇಕು. ಅಗ್ನಿಯಲ್ಲಿ ಜಿಹ್ವೆಗಳನ್ನು ಕಲ್ಪಿಸದೆ ಹೋಮ ಮಾಡಿದರೆ ಕಾರ್ಯಸಿದ್ಧಿ ಆಗುವುದಿಲ್ಲ. ಈ ಕಾರಣದಿಂದ ಜಿಹ್ವೆಗಳನ್ನು ಕಲ್ಪಿಸಿ ಹೋಮಮಾಡುವದನ್ನೇ ಶಿವಾಗ್ನಿ ಎಂದು ಕರೆಯುವರು. ಅಗ್ನಿಯಲ್ಲಿ ಜಿಹ್ವಾ ಕಲ್ಪನೆಯನ್ನು ಮಾಡುವ ಕ್ರಮವು ಇಂತು ಇದೆ.

**ಓಂ ಬಹುರೂಪಾಯೈ ಮಧ್ಯಜಿಹ್ವಾಯೈ ಅನೇಕ ವರ್ಣಾಯೈ**
**ದಕ್ಷಿಣೋತ್ತರಮಧ್ಯಗಾಯೈ ಶಾಂತಿಕ ಪೌಷ್ಟಿಕ ಮೋಕ್ಷಾದಿ**
**ಫಲ ಪ್ರದಾಯೈ ಸ್ವಾಹಾ ॥**
**ಓಂ ಹಿರಣ್ಯಾಯೈ ಚಾಮೀಕರಾಭಾಯೈ ಈಶಾನ ಜಿಹ್ವಾಯೈ**
**ಜ್ಞಾನಪ್ರದಾಯೈ ಸ್ವಾಹಾ॥**
**ಓಂ ಕನಕಾಯೈ ಕನಕನಿಭಾಯೈ ರಮ್ಯಾಯೈ ಐಂದ್ರ ಜಿಹ್ವಾಯೈ ಸ್ವಾಹಾ ॥**
**ಓಂ ರಕ್ತಾಯೈ ರಕ್ತವರ್ಣಾಯೈ ಆಗ್ನೇಯ ಜಿಹ್ವಾಯೈ ಅನೇಕ ವರ್ಣಾಯೈ**
**ವಿದ್ವೇಷಣ ಮೋಹನಾಯೈ ಸ್ವಾಹಾ ॥**
**ಓಂ ಕೃಷ್ಣಾಯೈ ನೈರ್ಯತ ಜಿಹ್ವಾಯೈ ಮಾರಣಾಯೈ ಸ್ವಾಹಾ॥**
**ಓಂ ಸುಪ್ರಭಾಯೈ ಪಶ್ಚಿಮ ಜಿಹ್ವಾಯೈ ಮುಕ್ತಾ ಫಲಾಯೈ ಶಾಂತಿ ದಾಯೈ**
**ಪೌಷ್ಟಿಕಾಯೈ ಸ್ವಾಹಾ॥**
**ಓಂ ಅಭಿವ್ಯಕ್ತಾಯೈ ವಾಯವ್ಯ ಜಿಹ್ವಾಯೈ ಶತ್ರೂಚ್ಚಾಟನಾಯೈ ಸ್ವಾಹಾ ॥**
**ಓಂ ವಹ್ನಯೇ ತೇಜಸ್ವಿನೇ ಸ್ವಾಹಾ ॥**

ಅಗ್ನಿಯಲ್ಲಿ ಜಿಹ್ವಾ ಕಲ್ಪನೆಯನ್ನುಮಾಡುವ ಕ್ರಮವು ಇದರಿಂದ ಸ್ಪಷ್ಟವಾಗುವದು. ಅಗ್ನಿಸ್ಥಾಪನೆಯನ್ನು ಮಾಡಿದ ಮೇಲೆ ಹೇಳಿದಂತೆ ಒಂದೊಂದು ಮಂತ್ರಗಳಿಂದ ಸ್ವಾಹಾಕಾರಾಂತವಾಗಿ ಹೋಮಮಾಡುವುದೇ ಜಿಹ್ವಾ ಕಲ್ಪನೆಯು. ಮೇಲೆ

ತೋರಿಸಿದ ಮಂತ್ರಗಳಿಂದ ದಕ್ಷಿಣೋತ್ತರ ದಿಕ್ಕುಗಳಿಗೆ ನಡುವೆ ಇರುವ ಮಧ್ಯೆ ಜಿಹ್ವೆಗಳಿಗಾಗಿ ಹೋಮವನ್ನು ಮಾಡತಕ್ಕದ್ದು. ಉಳಿದ ಮಂತ್ರಗಳು ಮಿಕ್ಕ ಜಿಹ್ವಾ ಹೋಮಕ್ಕೆ ಸಂಬಂಧ ಪಟ್ಟವುಗಳು. ಸಪ್ತ ಜಿಹ್ವಾ ಹೋಮವಾದ ಮೇಲೆ ಕೊನೆಯದು ಪ್ರಧಾನ ಮಂತ್ರ ಹೋಮವು. ಹಿಂದೆ ಹೇಳಿದ ಅಗ್ನಿ ಸಂಸ್ಕಾರಗಳನ್ನು ಶಾಂತಿಕ ಪೌಷ್ಟಿಕ ಮೊದಲಾದ ಶುಭ ಕರ್ಮಗಳಲ್ಲಿ ಮಾಡಬೇಕು. ನೈಮಿತ್ರಿಕ ಕರ್ಮಗಳಲ್ಲಿಯೂ ಹೋಮಾದಿಗಳನ್ನು ಮಾಡಬೇಕಾದರೆ ಸುತ್ತೆ ಶಿವಾಗ್ನಿಯನ್ನು ಸ್ಥಾಪಿಸಿ ವಿಧಿ ಪೂರ್ವಕವಾಗಿ ಹೋಮಗಳನ್ನು ಮಾಡಬೇಕು.

ಶಿವಾಗ್ನಿ ವಿಧಿಯಲ್ಲಿ ಕುಂಡ ಸಂಸ್ಕಾರವು ಹದಿನೆಂಟು ಬಗೆಯದಾಗಿದೆ. ನಿರೀಕ್ಷಣ, ಪ್ರೋಕ್ಷಣ, ತಾಡನ ಇವುಗಳನ್ನು ಆರನೆಯದಾದ 'ನಮೋ ಹಿರಣ್ಯ ಬಾಹವೆ' ಎಂಬ ಮಂತ್ರದ ಕೊನೆಯಲ್ಲಿ ಫಟ್ ಎಂಬ ಮಂತ್ರವನ್ನುಚ್ಚರಿಸಿ ಮಾಡಬೇಕು. ನೀರಿನಿಂದ ಚಿಮುಕಿಸುವದು, ಅಭ್ಯುಕ್ಷಣ ಎನಿಸುವದು. ಇದನ್ನು ತತ್ಪುರುಷ ಮಂತ್ರದ ಕೊನೆಯಲ್ಲಿ 'ಹೂಂ' ಎಂಬುದನ್ನು ಉಚ್ಚರಿಸಿ ಮಾಡಬೇಕು. ಮಣ್ಣನ್ನು ಅಗೆಯುವದೂ, ಮೇಲಕ್ಕೆ ಎತ್ತಿ ಹಾಕುವದೂ 'ಖನನೋತ್ಕಿರಣ' ಎನಿಸುವದು. ಇದನ್ನು ಆರನೆಯದಾದ 'ನಮೋ ಹಿರಣ್ಯಬಾಹವೇ' ಎಂಬ ಮಂತ್ರದಿಂದ ಮಾಡಬೇಕು. ಮಣ್ಣನ್ನು ತುಂಬುವದು ಸಮಮಾಡುವದು 'ಪೂರಣ ಸಮೀಕರಣಗಳು'. ಇವುಗಳನ್ನು ಸದ್ಯೋಜಾತ ಮಂತ್ರದಿಂದ ಮಾಡಬೇಕು. ಮಣ್ಣನ್ನು ಕಲಿಸುವದು ಕುಟ್ಟುವದು 'ಕುಟ್ಟನ' ಎನ್ನುವರು. ಈ ಕುಟ್ಟನವನ್ನು 'ನಮೋ ಹಿರಣ್ಯಬಾಹವೆ' ಎಂಬ ಮಂತ್ರದಿಂದ ಮಾಡಬೇಕು. ಕಸವನ್ನು ಗುಡಿಸಿ ಸಾರಿಸುವುದು. 'ಸಂಮಾರ್ಜನ', 'ಉಪಲೇಪನ' ಎಂದು ಕರೆಯಲ್ಪಡುತ್ತದೆ. ಇವುಗಳನ್ನು ನಾಲ್ಕನೆಯ ತತ್ಪುರುಷ ಮಂತ್ರದಿಂದ ಮಾಡಬೇಕು. ಕುಂಡವನ್ನು ಮಾಡುವುದು, ಕುಂಡ ಸಂಕಲ್ಪನೆಯು ಇದನ್ನು ಪ್ರತಿಲೋಮವಾಗಿ ಎಂದರೆ ವಿಪರೀತ ಕ್ರಮದಿಂದ ಉಚ್ಚಾರ ಮಾಡಿದ ಅಘೋರ, ವಾಮದೇವ, ತತ್ಪುರುಷ ಮಂತ್ರಗಳಿಂದ ಮಾಡಬೇಕು. ಕುಂಡದ ಸುತ್ತಲೂ ಆವರಣ ರೂಪವಾದ ಮೇಖಲೆಯನ್ನು ಮಾಡುವದು 'ಕುಂಡ ಪರಿಧಾನ' ಎನಿಸುವದು. ಇದನ್ನು ನಾಲ್ಕನೆಯ ತತ್ಪುರುಷ ಮಂತ್ರದಿಂದಲು, ಕುಂಡಾರ್ಚನೆಯನ್ನು ಸದ್ಯೋಜಾತ ಮಂತ್ರದಿಂದಲೂ, ರೇಖಾ ಚತುಷ್ಟಯ ಸಂಪಾದನೆಯನ್ನು ಆರನೆಯ 'ನಮೋ ಹಿರಣ್ಯ ಬಾಹವೇ' ಎಂಬ ಮಂತ್ರದ ಕೊನೆಯಲ್ಲಿ ಫಟ್ ಎಂಬ ಮಂತ್ರದಿಂದಲೂ, ವಜ್ರೀಕರಣವೂ, ಚತುಷ್ಪಾದ ಸಾಧನೆಯೂ, ನಾಲ್ಕು ದಿಕ್ಕುಗಳಲ್ಲಿ ಇಂದ್ರಾದಿದೇವತೆಗಳನ್ನು ಸ್ಥಾಪಿಸುವದೂ ಮೊದಲಾದವುಗಳನ್ನು ಸದ್ಯೋಜಾತ ಮಂತ್ರದಿಂದಲೂ ಮಾಡಬೇಕು.ಹೀಗೆ ಕುಂಡ ಸಂಸ್ಕಾರವು ಹದಿನೆಂಟು ಬಗೆಯಾಗಿರುವದು.

ಕುಂಡ ಸಂಸ್ಕಾರವಾದ ಮೇಲೆ ಆ ಕುಂಡವನ್ನು ಹೊಟ್ಟಿನಿಂದ ಮುಚ್ಚುವದು 'ಅಕ್ಷಪಾಟನ' ಎನಿಸುವದು. ಇದನ್ನು 'ನಮೋ ಹಿರಣ್ಯಬಾಹವೇ' ಎಂಬ ಮಂತ್ರದಿಂದ ಮಾಡಬೇಕು. ಬಳಿಕ ಸದ್ಯೋಜಾತ ಮಂತ್ರದಿಂದ ಭದ್ರಾಸನವನ್ನು ಇಟ್ಟು ಆ ವಜ್ರಾಸನದಲ್ಲಿ ವಾಗೀಶ್ವರೀ ದೇವಿಯ ಆವ್ಹಾಹನವನ್ನು ಮಾಡಬೇಕು.

**ಓಂ ಹ್ರೀಂ ವಾಗೀಶ್ವರೀಂ ಶ್ಯಾಮವರ್ಣಾಂ ವಿಶಾಲಾಕ್ಷೀಂ ಯೌವನೋನ್ನತ್ತ ವಿಗ್ರಹಾಂ। ಋತುಮತೀಂ ವಾಗೀಶ್ವರ ಶಕ್ತಿಮಾವಾಹಯಾಮಿ ॥ ವಾಗೀಶ್ವರೀಂ ಪೂಜಯಾಮಿ॥**

ಈ ಮಂತ್ರದಿಂದ ವಾಗೀಶ್ವರನ ಶಕ್ತಿಯಾದ, ಋತುಸ್ನಾನಮಾಡಿದ ಯೌವ್ವನದಿಂದ ಮದಿಸಿದ ದೇಹವುಳ್ಳ, ವಿಶಾಲ ನೇತ್ರವುಳ್ಳ, ಮೇಘವರ್ಣದ ಕಾಂತಿಯಿಂದ ಕೂಡಿದ ವಾಗೀಶ್ವರೀ ದೇವಿಯನ್ನು ಆವ್ಹಾಹಿಸುತ್ತೇನೆ, ಮತ್ತು ಪೂಜಿಸುತ್ತೇನೆ ಎಂದು ಪೂಜೆ ಮಾಡಬೇಕು.

**ಏಕ ವಕ್ತ್ರಂ ಚತುರ್ಭುಜಂ ಶುದ್ಧ ಸ್ಫಟಿಕಾಭಂ ವರದಾಭಯಹಸ್ತಂ ಪರಶುಮೃಗಧರಂ ಜಟಾಮುಕುಟ ಮಂಡಿತಂ ಸರ್ವಾಭರಣ ಭೂಷಿತ ಮಾವಾಹಯಾಮಿ ವಾಗೀಶ್ವರಂ ॥**

ಈ ಮಂತ್ರದಿಂದ ಒಂದು ಮುಖ, ನಾಲ್ಕು ತೋಳು, ವರದ ಅಭಯಹಸ್ತವು ಉಳ್ಳ ಪರಶು ಮೃಗಗಳನ್ನು ಧರಿಸಿದ, ಜಟಾ ಕಿರೀಟ, ಅಲಂಕಾರ ಮೊದಲಾದ ಸಕಲ ಆಭರಣಗಳಿಂದ ಕೂಡಿದ ವಾಗೀಶ್ವರನನ್ನು ಆವ್ಹಾನಿಸುವೆನು ಎಂಬ ಮಂತ್ರದಿಂದ ಪೂಜಿಸಬೇಕು. ಈ ಮಂತ್ರದಿಂದ ವಾಗೀಶ್ವರವಾಗೀಶ್ವರಿಯರನ್ನೂ ಪೂಜಿಸಿ ಈ ಸಂದರ್ಭದಲ್ಲಿ ಪಂಚಾಕ್ಷರ ಮಂತ್ರದಿಂದ ಹತ್ತು ಆಜ್ಯ ಹೋಮಗಳನ್ನು ಮಾಡಬೇಕು. ಈ ಹೋಮಗಳೆಲ್ಲ ಆದ ಮೇಲೆ ಮೂಲಮಂತ್ರದಿಂದ ಪೂರ್ಣಾಹುತಿ ಹೋಮವನ್ನು ಮಾಡಬೇಕು. ಎಲ್ಲ ಆವರಣ ದೇವತೆಗಳಿಗೂ ಈಶಾನ ಮಂತ್ರಕ್ರಮದಿಂದಲೂ, ಶಕ್ತಿಬೀಜ ಕ್ರಮದಿಂದಲೂ ಐದೈದು ಹೋಮಗಳನ್ನು ಮಾಡಬೇಕು. ಕೊನೆಗೆ ಅಘೋರಮಂತ್ರದಿಂದ ಪ್ರಾಯಶ್ಚಿತ್ತ ಹೋಮವನ್ನು, ಸ್ವಿಷ್ಟ ಕೃತು ಹೋಮವನ್ನೂ ಮಾಡಬೇಕು.

ಧಾರ್ಮಿಕರಾದವರು ಪ್ರತಿದಿನವೂ ಶೈವಶಾಸ್ತ್ರದಲ್ಲಿ ಹೇಳಿದಂತೆ ಅಗ್ನಿಕಾರ್ಯವನ್ನು ಮಾಡಬೇಕು. ಪ್ರತಿದಿನವೂ ಅಗ್ನಿಕಾರ್ಯವನ್ನು ಮಾಡುವ ಮಾನವನು ಯಾವ ದುಷ್ಕರ್ಮ ಮಾಡಿದರೂ ಎಷ್ಟೇ ಪಾಪಮಾಡಿದರೂ ಅವನಿಗೆ ನರಕವಾಗುವುದಿಲ್ಲ. ಮೋಕ್ಷವನ್ನು ಬಯಸುವವರು ಅಹಿಂಸಾ ರೂಪವಾದ ಹೋಮವನ್ನು ಮಾಡಬೇಕು.

ಅಹಿಂಸಾ ಹೋಮ ಎಂದರೆ ಮೋಕ್ಷಾಕಾಂಕ್ಷೆಯ ಮನುಷ್ಯನು ತನ್ನ ಮನಸ್ಸಿನಲ್ಲಿಯೇ ಶಿವಾಗ್ನಿ ಇರುವದೆಂದು ಭಾವಿಸಿ ಧ್ಯಾನರೂಪವಾದ ಯಜ್ಞದಿಂದ ಹೋಮವನ್ನು ಮಾಡಬೇಕು. ಸರ್ವಪ್ರಪಂಚಕ್ಕೂ ಒಡೆಯನಾದ ಆ ಪರಮೇಶ್ವರನು ಸಕಲಪ್ರಾಣಿಗಳ ದೇಹದಲ್ಲಿ ಅಗ್ನಿರೂಪನಾಗಿ ಇರುವನು ಎಂದು ತಿಳಿದು ಪ್ರತಿದಿನವೂ ಪ್ರಾಣಾಯಾಮವನ್ನು ಮಾಡಿ ಭಕ್ತಿಯಿಂದ ಧ್ಯಾನರೂಪವಾದ ಹೋಮವನ್ನು ಮಾಡಬೇಕು. ಚಿತ್ತದಲ್ಲಿ ಆ ಚಂದ್ರಚೂಡನನ್ನು ಚಿರಂತನ ಧ್ಯಾನಮಾಡದೇ ಹೊರಗಿನ ಕಾರ್ಯ ಕಲಾಪಗಳಿಂದ ಹೋಮವನ್ನು ಮಾಡುವವನು ಕಲ್ಲಿನಲ್ಲಿ ವಾಸಮಾಡುವ ಕಪ್ಪೆಯಾಗಿ ಹುಟ್ಟುವನು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಶಿವಹೋಮ ವಿಧಾನ ಎಂಬ ಇಪ್ಪತ್ತೈದನೆಯ ಅಧ್ಯಾಯ ಸಮಾಪ್ತವಾದುದು.*

—೦—

**ನಂದೀಶ್ವರ :-** 'ಪರಮೇಶ್ವರ ಅಘೋರಾರ್ಚನ' ಎಂಬ ಪೂಜಾವಿಧಾನವನ್ನು ಹೇಳುತ್ತೇನೆ ಕೇಳು. ಪರಮೇಶ್ವರನ ಏಕಾಂತ ಭಕ್ತನಾದ ಮನುಷ್ಯನು ಆ ಭಗವಂತನನ್ನು 'ಈಶಾನ' ಎಂಬ ಹೆಸರಿನ ಸರ್ವೇಶ್ವರತ್ವ ರೂಪವಾದ ಅರ್ಥವನ್ನು ತಿಳಿದು ಲಿಂಗದಲ್ಲಿ ಪೂಜಿಸಬೇಕು.

'ಅಗ್ನಿರಿತಿಭಸ್ಮ', 'ವಾಯುರಿತಿಭಸ್ಮ, ಜಲಮಿತಿಭಸ್ಮ, ಸ್ಥಲಮಿತಿಭಸ್ಮ, ವ್ಯೋಮಇತಿಭಸ್ಮ, ಇವೇ ಮೊದಲಾದ ಮಂತ್ರಗಳಿಂದ ಅಗ್ನಿಹೋತ್ರದ ಭಸ್ಮವನ್ನು ತೆಗೆದುಕೊಂಡು ಪಾದದಿಂದ ತಲೆಯವರೆಗೆ ಸರ್ವಾಂಗಗಳಿಗೂ ಲೇಪಿಸಿಕೊಳ್ಳಬೇಕು. ಅನಂತರ ಉತ್ತರಕ್ಕೆ ಮುಖಮಾಡಿ ಯಜ್ಞೋಪವೀತವನ್ನು ಬ್ರಹ್ಮಸೂತ್ರವನ್ನಾಗಿ ಹಾಕಿಕೊಂಡು ಬ್ರಹ್ಮ ತೀರ್ಥದಿಂದ 'ಓಂನಮಃ ಶಿವಾಯ' ಎಂಬ ಮಂತ್ರದಿಂದ ಆಚಮನ ಮಾಡಬೇಕು. ಬಳಿಕ ಅದೇ ಮಂತ್ರದಿಂದ ತನ್ನ ಶರೀರವನ್ನು ಶುದ್ಧಮಾಡಿಕೊಳ್ಳಬೇಕು. 'ಓಂ ನಮಃ ಶಿವಾಯ ಎಂಬ ಮಂತ್ರದಿಂದಲೂ ಓಂಕಾರದಿಂದಲೂ ಈಶ್ವರಾರ್ಚನೆಯನ್ನು ಮಾಡಬೇಕು. ಶೂಲಾಯುಧವನ್ನು ಧರಿಸಿದ ಅಘೋರೇಶ ಎಂಬ ಶಿವನ ಪೂಜೆಯು ಎಲ್ಲ ಪೂಜೆಗಳಿಗಿಂತಲೂ ಶ್ರೇಷ್ಠವಾದದ್ದು. ಈ ಅಘೋರಾರ್ಚನೆಯನ್ನು ಲಿಂಗದಲ್ಲೇ ಆಗಲಿ ಸ್ಥಂಡಿಲದಲ್ಲೇ ಆಗಲಿ ಮಾಡಬೇಕು. ಸ್ಥಂಡಿಲದಲ್ಲಿ ಪೂಜಿಸುವದಕ್ಕಿಂತ ಲಿಂಗದಲ್ಲಿ ಪೂಜಿಸುವದು ಮೂರುಪಟ್ಟು ಪುಣ್ಯಪ್ರದ. ಹಾಗೂ ಫಲಪ್ರದ. 'ಲಿಂಗದರ್ಶನವು ಪುಣ್ಯಕರ. ಅದಕ್ಕಿಂತ ಅದರ ಸ್ಪರ್ಶನ ಇನ್ನೂ ಶ್ರೇಷ್ಠ. ಅಘೋರೇಶನ ಮಂತ್ರ, ನ್ಯಾಸ, ಧ್ಯಾನ ಎಲ್ಲವೂ ಈ ರೀತಿಯಾಗಿರುತ್ತವೆ.

<u>ಅಘೋರೇಶನ ಮಂತ್ರ :-</u>

**ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರ ತರೇಭ್ಯಃ ।**
**ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರ ರೂಪೇಭ್ಯಃ॥**

ಈ ಮಂತ್ರದಿಂದ ಅಘೋರೇಶನ ಧ್ಯಾನವನ್ನುಮಾಡಿ ಹೃದಯಾದಿ ನ್ಯಾಸವನ್ನು ಮಾಡಬೇಕು.

**ಅಘೋರೇಭ್ಯಃ ಪ್ರಶಾಂತ ಹೃದಯಾಮ ನಮಃ ।**
**ಅಥ ಘೋರೇಭ್ಯಃ ಸರ್ವಾತ್ಮ ಬ್ರಹ್ಮಶಿರಸೇ ಸ್ವಾಹಾ ॥**

**ಘೋರ ಘೋರತರೇಭ್ಯಃ ಜ್ವಾಲಾಮಾಲಿನೇ ಶಿಖಾಯೈ ವೌಷಟ್।**
**ಸರ್ವೇಭ್ಯಃ ಸರ್ವಶರ್ವೇಭ್ಯಃ ಪಿಂಗಲ ಕವಚಾಯ ಹುಂ ॥**

**ನಮಸ್ತೇ ಅಸ್ತು ರುದ್ರರೂಪೇಭ್ಯಃ ನೇತ್ರತ್ರಯಾಯ ವೌ ಷಟ್।**
**ಸಹಸ್ರಾಕ್ಷಾಯ ದುರ್ಭೇದಾಯ ಪಾಶುಪತಾಸ್ತ್ರಾಯ ಹುಂ ಫಟ್ ॥**

**ಓಂ ಹ್ರೀಂ ವಾಗೀಶ್ವರೀಂ ಶ್ಯಾಮವರ್ಣಾಂ ವಿಶಾಲಾಕ್ಷೀಂ ಯೌವನೋನ್ಮತ್ತ ವಿಗ್ರಹಾಂ। ಋತುಮತೀಂ ವಾಗೀಶ್ವರ ಶಕ್ತಿಮಾವಾಹಯಾಮಿ ॥ ವಾಗೀಶ್ವರೀಂ ಪೂಜಯಾಮಿ॥**

ಈ ಮಂತ್ರದಿಂದ ವಾಗೀಶ್ವರನ ಶಕ್ತಿಯಾದ, ಋತುಸ್ನಾನಮಾಡಿದ ಯೌವ್ವನದಿಂದ ಮದಿಸಿದ ದೇಹವುಳ್ಳ, ವಿಶಾಲ ನೇತ್ರವುಳ್ಳ, ಮೇಘವರ್ಣದ ಕಾಂತಿಯಿಂದ ಕೂಡಿದ ವಾಗೀಶ್ವರೀ ದೇವಿಯನ್ನು ಆವ್ಹಾಹಿಸುತ್ತೇನೆ, ಮತ್ತು ಪೂಜಿಸುತ್ತೇನೆ ಎಂದು ಪೂಜೆ ಮಾಡಬೇಕು.

**ಏಕ ವಕ್ತ್ರಂ ಚತುರ್ಭುಜಂ ಶುದ್ಧ ಸ್ಫಟಿಕಾಭಂ ವರದಾಭಯಹಸ್ತಂ ಪರಶುಮೃಗಧರಂ ಜಟಾಮುಕುಟ ಮಂಡಿತಂ ಸರ್ವಾಭರಣ ಭೂಷಿತ ಮಾವಾಹಯಾಮಿ ವಾಗೀಶ್ವರಂ ॥**

ಈ ಮಂತ್ರದಿಂದ ಒಂದು ಮುಖ, ನಾಲ್ಕು ತೋಳು, ವರದ ಅಭಯಹಸ್ತವು ಉಳ್ಳ ಪರಶು ಮೃಗಗಳನ್ನು ಧರಿಸಿದ, ಜಟಾ ಕಿರೀಟ, ಅಲಂಕಾರ ಮೊದಲಾದ ಸಕಲ ಆಭರಣಗಳಿಂದ ಕೂಡಿದ ವಾಗೀಶ್ವರನನ್ನು ಆವ್ಹಾನಿಸುವೆನು ಎಂಬ ಮಂತ್ರದಿಂದ ಪೂಜಿಸಬೇಕು. ಈ ಮಂತ್ರದಿಂದ ವಾಗೀಶ್ವರವಾಗೀಶ್ವರಿಯರನ್ನೂ ಪೂಜಿಸಿ ಈ ಸಂದರ್ಭದಲ್ಲಿ ಪಂಚಾಕ್ಷರ ಮಂತ್ರದಿಂದ ಹತ್ತು ಆಜ್ಯ ಹೋಮಗಳನ್ನು ಮಾಡಬೇಕು. ಈ ಹೋಮಗಳೆಲ್ಲ ಆದ ಮೇಲೆ ಮೂಲಮಂತ್ರದಿಂದ ಪೂರ್ಣಾಹುತಿ ಹೋಮವನ್ನು ಮಾಡಬೇಕು. ಎಲ್ಲ ಆವರಣ ದೇವತೆಗಳಿಗೂ ಈಶಾನ ಮಂತ್ರಕ್ರಮದಿಂದಲೂ, ಶಕ್ತಿ ಬೀಜ ಕ್ರಮದಿಂದಲೂ ಐದೈದು ಹೋಮಗಳನ್ನು ಮಾಡಬೇಕು. ಕೊನೆಗೆ ಅಘೋರಮಂತ್ರದಿಂದ ಪ್ರಾಯಶ್ಚಿತ್ತ ಹೋಮವನ್ನು, ಸ್ವಿಷ್ಟ ಕೃತು ಹೋಮವನ್ನೂ ಮಾಡಬೇಕು.

ಧಾರ್ಮಿಕರಾದವರು ಪ್ರತಿದಿನವೂ ಶೈವಶಾಸ್ತ್ರದಲ್ಲಿ ಹೇಳಿದಂತೆ ಅಗ್ನಿಕಾರ್ಯವನ್ನು ಮಾಡಬೇಕು. ಪ್ರತಿದಿನವೂ ಅಗ್ನಿಕಾರ್ಯವನ್ನು ಮಾಡುವ ಮಾನವನು ಯಾವ ದುಷ್ಕರ್ಮ ಮಾಡಿದರೂ ಎಷ್ಟೇ ಪಾಪಮಾಡಿದರೂ ಅವನಿಗೆ ನರಕವಾಗುವುದಿಲ್ಲ. ಮೋಕ್ಷವನ್ನು ಬಯಸುವವರು ಅಹಿಂಸಾ ರೂಪವಾದ ಹೋಮವನ್ನು ಮಾಡಬೇಕು.

ಅಹಿಂಸಾ ಹೋಮ ಎಂದರೆ ಮೋಕ್ಷಾಕಾಂಕ್ಷೆಯ ಮನುಷ್ಯನು ತನ್ನ ಮನಸ್ಸಿನಲ್ಲಿಯೇ ಶಿವಾಗ್ನಿ ಇರುವದೆಂದು ಭಾವಿಸಿ ಧ್ಯಾನರೂಪವಾದ ಯಜ್ಞದಿಂದ ಹೋಮವನ್ನು ಮಾಡಬೇಕು. ಸರ್ವಪ್ರಪಂಚಕ್ಕೂ ಒಡೆಯನಾದ ಆ ಪರಮೇಶ್ವರನು ಸಕಲಪ್ರಾಣಿಗಳ ದೇಹದಲ್ಲಿ ಅಗ್ನಿರೂಪನಾಗಿ ಇರುವನು ಎಂದು ತಿಳಿದು ಪ್ರತಿದಿನವೂ ಪ್ರಾಣಾಯಾಮವನ್ನು ಮಾಡಿ ಭಕ್ತಿಯಿಂದ ಧ್ಯಾನರೂಪವಾದ ಹೋಮವನ್ನು ಮಾಡಬೇಕು. ಚಿತ್ತದಲ್ಲಿ ಆ ಚಂದ್ರಚೂಡನನ್ನು ಚಿರಂತನ ಧ್ಯಾನಮಾಡದೇ ಹೊರಗಿನ ಕಾರ್ಯ ಕಲಾಪಗಳಿಂದ ಹೋಮವನ್ನು ಮಾಡುವವನು ಕಲ್ಲಿನಲ್ಲಿ ವಾಸಮಾಡುವ ಕಪ್ಪೆಯಾಗಿ ಹುಟ್ಟುವನು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಶಿವಹೋಮ ವಿಧಾನ ಎಂಬ ಇಪ್ಪತ್ತೈದನೆಯ ಅಧ್ಯಾಯ ಸಮಾಪ್ತವಾದುದು.*

—○—

**ನಂದೀಶ್ವರ :-** 'ಪರಮೇಶ್ವರ ಅಘೋರಾರ್ಚನ' ಎಂಬ ಪೂಜಾವಿಧಾನವನ್ನು ಹೇಳುತ್ತೇನೆ ಕೇಳು. ಪರಮೇಶ್ವರನ ಏಕಾಂತ ಭಕ್ತನಾದ ಮನುಷ್ಯನು ಆ ಭಗವಂತನನ್ನು 'ಈಶಾನ' ಎಂಬ ಹೆಸರಿನ ಸರ್ವೇಶ್ವರತ್ವ ರೂಪವಾದ ಅರ್ಥವನ್ನು ತಿಳಿದು ಲಿಂಗದಲ್ಲಿ ಪೂಜಿಸಬೇಕು.

'ಅಗ್ನಿರಿತಿಭಸ್ಮ', 'ವಾಯುರಿತಿಭಸ್ಮ, ಜಲಮಿತಿಭಸ್ಮ, ಸ್ಥಲಮಿತಿಭಸ್ಮ, ವ್ಯೋಮಇತಿಭಸ್ಮ, ಇವೇ ಮೊದಲಾದ ಮಂತ್ರಗಳಿಂದ ಅಗ್ನಿಹೋತ್ರದ ಭಸ್ಮವನ್ನು ತೆಗೆದುಕೊಂಡು ಪಾದದಿಂದ ತಲೆಯವರೆಗೆ ಸರ್ವಾಂಗಗಳಿಗೂ ಲೇಪಿಸಿಕೊಳ್ಳಬೇಕು. ಅನಂತರ ಉತ್ತರಕ್ಕೆ ಮುಖಮಾಡಿ ಯಜ್ಞೋಪವೀತವನ್ನು ಬ್ರಹ್ಮಸೂತ್ರವನ್ನಾಗಿ ಹಾಕಿಕೊಂಡು ಬ್ರಹ್ಮ ತೀರ್ಥದಿಂದ 'ಓಂನಮಃ ಶಿವಾಯ' ಎಂಬ ಮಂತ್ರದಿಂದ ಆಚಮನ ಮಾಡಬೇಕು. ಬಳಿಕ ಅದೇ ಮಂತ್ರದಿಂದ ತನ್ನ ಶರೀರವನ್ನು ಶುದ್ಧಮಾಡಿಕೊಳ್ಳಬೇಕು. 'ಓಂ ನಮಃ ಶಿವಾಯ ಎಂಬ ಮಂತ್ರದಿಂದಲೂ ಓಂಕಾರದಿಂದಲೂ ಈಶ್ವರಾರ್ಚನೆಯನ್ನು ಮಾಡಬೇಕು. ಶೂಲಾಯುಧವನ್ನು ಧರಿಸಿದ ಅಘೋರೇಶ ಎಂಬ ಶಿವನ ಪೂಜೆಯು ಎಲ್ಲ ಪೂಜೆಗಳಿಗಿಂತಲೂ ಶ್ರೇಷ್ಠವಾದದ್ದು. ಈ ಅಘೋರಾರ್ಚನೆಯನ್ನು ಲಿಂಗದಲ್ಲೇ ಆಗಲಿ ಸ್ಥಂಡಿಲದಲ್ಲೇ ಆಗಲಿ ಮಾಡಬೇಕು. ಸ್ಥಂಡಿಲದಲ್ಲಿ ಪೂಜಿಸುವದಕ್ಕಿಂತ ಲಿಂಗದಲ್ಲಿ ಪೂಜಿಸುವದು ಮೂರುಪಟ್ಟು ಪುಣ್ಯಪ್ರದ. ಹಾಗೂ ಫಲಪ್ರದ. 'ಲಿಂಗದರ್ಶನವು ಪುಣ್ಯಕರ. ಅದಕ್ಕಿಂತ ಅದರ ಸ್ಪರ್ಶನ ಇನ್ನೂ ಶ್ರೇಷ್ಠ. ಅಘೋರೇಶನ ಮಂತ್ರ, ನ್ಯಾಸ, ಧ್ಯಾನ ಎಲ್ಲವೂ ಈ ರೀತಿಯಾಗಿರುತ್ತವೆ.

<u>ಅಘೋರೇಶನ ಮಂತ್ರ :-</u>

**ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರ ತರೇಭ್ಯಃ ।**
**ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರ ರೂಪೇಭ್ಯಃ॥**

ಈ ಮಂತ್ರದಿಂದ ಅಘೋರೇಶನ ಧ್ಯಾನವನ್ನುಮಾಡಿ ಹೃದಯಾದಿ ನ್ಯಾಸವನ್ನು ಮಾಡಬೇಕು.

**ಅಘೋರೇಭ್ಯಃ ಪ್ರಶಾಂತ ಹೃದಯಾಮ ನಮಃ ।**
**ಅಥ ಘೋರೇಭ್ಯಃ ಸರ್ವಾತ್ಮ ಬ್ರಹ್ಮಶಿರಸೇ ಸ್ವಾಹಾ ॥**

**ಘೋರ ಘೋರತರೇಭ್ಯಃ ಜ್ವಾಲಾಮಾಲಿನೇ ಶಿಖಾಯೈ ವೌಷಟ್।**
**ಸರ್ವೇಭ್ಯಃ ಸರ್ವಶರ್ವೇಭ್ಯಃ ಪಿಂಗಲ ಕವಚಾಯ ಹುಂ ॥**

**ನಮಸ್ತೇ ಅಸ್ತು ರುದ್ರರೂಪೇಭ್ಯಃ ನೇತ್ರತ್ರಯಾಯ ವೌ ಷಟ್।**
**ಸಹಸ್ರಾಕ್ಷಾಯ ದುರ್ಭೇದಾಯ ಪಾಶುಪತಾಸ್ತ್ರಾಯ ಹುಂ ಫಟ್ ॥**

ಹೀಗೆ ಹೃದಯನ್ಯಾಸಾದಿಗಳನ್ನು ಮಾಡಿ ವಿಧಿಪೂರ್ವಕವಾಗಿ ಅಘೋರೇಶನ ಪೂಜೆಯನ್ನು ಮಾಡಬೇಕು.

'ಅಘೋರೇಭ್ಯಃ' ಎಂದು ಮೇಲೆ ಹೇಳಿದ ಮಂತ್ರವನ್ನು ಐದು ವಿಧವಾಗಿ ವಿಂಗಡಿಸಿ ಪಂಚಾಂಗ ನ್ಯಾಸವನ್ನುಮಾಡಿ ವಿಧಿಪೂರ್ವಕವಾಗಿ ಜ್ಞಾನವೆಂಬ ಕ್ರಿಯೆಯಲ್ಲಿ ಸೇರಿಸಬೇಕು. ಆ ಅಘೋರ ಮೂರ್ತಿಯನ್ನು ಶ್ರೇಷ್ಠ ಆಸನದಂತೆ ಇರುವ ತನ್ನ ಹೃದಯದಲ್ಲಿ ಧ್ಯಾನಿಸಿ ನಾಭಿಯಲ್ಲಿ ಇರುವ ಅಗ್ನಿಯಲ್ಲಿ ಇರುವಂತೆ ಸ್ಮರಿಸಿ ಭ್ರೂಮಧ್ಯದಲ್ಲಿ ಪ್ರಕಾಶಮಾನನಾಗಿರುತ್ತಾನೆ ಎಂದು ಚಿಂತಿಸಬೇಕು.

ಸೂರ್ಯ ಚಂದ್ರ ಅಗ್ನಿಗಳಿಂದ ಸಹಿತನಾಗಿದ್ದಾನೆ. ಬ್ರಹ್ಮವಿಷ್ಣುಮಹೇಶ್ವರ ಎಂಬ ಮೂರ್ತಿತ್ರಯದಿಂದ ಏಕೀಭೂತನಾಗಿದ್ದಾನೆ. ಅವನ ದೇಹಕ್ಕೆ ಮುವ್ವತ್ತೆಂಟು ಕಲೆಗಳು ಹದಿನೆಂಟು ಭುಜಗಳು. ಆನೆಯ ಚರ್ಮವೆ ಉತ್ತರೀಯ. ಶಕ್ತಿಸ್ವರೂಪಗಳಾದ ಉಮಾದೇವಿಯ ನಿತ್ಯ ಸಾನಿಧ್ಯ. ಒಂದು ಕೈಯ್ಯಲ್ಲಿ ಖಡ್ಗ, ಚರ್ಮ, ಪಾಶ, ಅಂಕುಶಗಳು. ಇನ್ನೊಂದು ಕೈಯಲ್ಲಿ ಧನಸ್ಸು, ಪಾಶುಪತಾಸ್ತ್ರ, ದಂಡ, ಖಟ್ವಾಂಗ ಮುಂತಾದವುಗಳು. ಇನ್ನೊಂದು ಕೈಯಲ್ಲಿ ತಂತಿ, ಘಂಟೆ, ಶೂಲ, ಡಮರು ಮತ್ತೆ ಬೇರೆ ಒಂದು ಕೈಯಲ್ಲಿ, ವಜ್ರ, ಗದೆ, ಟಂಕ, ಮುದ್ಗರ ಮುಂತಾದ ಆಯುಧಗಳನ್ನು ಧರಿಸಿದ್ದಾನೆ. ವರದ ಅಭಯ ಮುದ್ರೆಯುಳ್ಳವ ನಾಗಿದ್ದಾನೆ. ಇಂಥ ಪರಮೇಶ್ವರನಿಗೆ ಅಗ್ನಿಯಲ್ಲಿ ಹೋಮವನ್ನು ಮಾಡಿಸಬೇಕು. ಕುಂಡದಲ್ಲಿ ಅಂತರ್ಬಲಿಯನ್ನು ಅಗ್ನಿ ಪುರಾಣೋಕ್ತ ವಿಧಿಯಿಂದ ಮಾಡಬೇಕು. ಬಹಿರ್ಬಲಿಯನ್ನು ಮಂಡಲವನ್ನು ಮಾಡಿ ಮುಂದಿನ ಮಂತ್ರಗಳಿಂದ ಹಾಕಬೇಕು.

'ರುದ್ರೇಭ್ಯಃ ಸ್ವಾಹಾ' ಎಂದು ಹೇಳಿ ಮಾತೃ ಗಣೇಭ್ಯಃ, ಯಕ್ಷೇಭ್ಯಃ , ಅಸುರೇಭ್ಯಃ, ಗ್ರಹೇಭ್ಯಃ, ರಾಕ್ಷಸೇಭ್ಯಃ, ನಾಗೇಭ್ಯಃ, ನಕ್ಷತ್ರೇಭ್ಯಃ ವಿಶ್ವಗಣೇಭ್ಯಃ, ಕ್ಷೇತ್ರಪಾಲೇಭ್ಯಃ ಎಂದು ಉಚ್ಚರಿಸಿ ಬಲಿಯನ್ನು ಹಾಕಬೇಕು. ವಾಯು, ವರುಣ, ದಿಗ್ಭಾಗಗಳಲ್ಲಿ ಕ್ಷೇತ್ರಪಾಲ ಬಲಿಯನ್ನು ಹಾಕಬೇಕು. ಈ ರೀತಿಯಾಗಿ ಅಘೋರಾರ್ಚನೆಯನ್ನು, ಅರ್ಕಾದಿ ಅಷ್ಟವಿಧ ಪುಷ್ಪಗಳೊಂದಿಗೆ ವ್ರತಸ್ಥನಾಗಿ ಮಾಡಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಅಘೋರ ಮೂರ್ತಿಯ ಪೂಜಾ ವಿಧಾನ ಎಂಬ ಇಪ್ಪತ್ತಾರನೆಯ ಅಧ್ಯಾಯ ಮುಗಿದುದು*

—o—

**ಋಷಿಗಳು :-** ಹಿಂದೆ ಆ ಭವಾನೀಪತಿಯು ಮೇರುಪರ್ವತದಲ್ಲಿ ಸಕಲ ಕ್ಷತ್ರಿಯರ ಹಿತಕ್ಕಾಗಿ ಜಯಾಭಿಷೇಕವನ್ನು ಹೇಳಿದ್ದನು. ಅದನ್ನು ಹೇಳಿರಿ ಮತ್ತು ಹದಿನಾಲ್ಕು ವಿಧವಾದ ಮಹಾದಾನಗಳನ್ನು ಹೇಳಿರಿ.

**ಸೂತರು :-** ಬಹುಪುರಾತನಕಾಲದಲ್ಲಿ ಸ್ವಾಯಂಭುವ ಮನುವು ಜೀವಚ್ಛ್ರಾದ್ಧವನ್ನು ಮಾಡಿಕೊಂಡು ಮೇರುಪರ್ವತಕ್ಕೆ ಹೋಗಿ ಮಹಾರುದ್ರನನ್ನು ಸ್ತೋತ್ರ ಮಾಡಿದನು. ಕರುಣಾಶಾಲಿಯಾದ ಆ ನೀಲಕಂಠನು ಸಂತುಷ್ಟನಾಗಿ ಅವನಿಗೆ ದಿವ್ಯಚಕ್ಷುಸ್ಸನ್ನು ನೀಡಿದನು. ಆ ದಿವ್ಯದೃಷ್ಟಿಯಿಂದ ಸ್ವಾಯಂಭುವ ಮನುವು ಪರಮಪುರುಷನಾದ ಪರಮೇಶ್ವರನನ್ನುನೋಡಿದನು. ಮತ್ತು ಕೈಮುಗಿದು ನಮಸ್ಕಾರ ಮಾಡಿ ಹೇಳಿದನು. ''ಈಗ ನೀನು ನನ್ನಿಂದ ಪೂಜೆಯನ್ನು ಸ್ವೀಕರಿಸಿರುವೆ. ನೀನು ಹಿಂದೆ ಇಂದ್ರನಿಗೆ ಜಯಾಭಿಷೇಕವನ್ನು ಹೇಳಿದ್ದಿ. ಅದನ್ನು ನನಗೂ ಹೇಳು.''

**ಪರಮೇಶ್ವರ :-** ರಾಜರಹಿತಕ್ಕಾಗಿಯೂ, ಅಪಮೃತ್ಯುನಾಶಕ್ಕಾಗಿಯೂ, ಶತ್ರುಜಯಕ್ಕಾಗಿಯೂ, ಇದ್ದ ಜಯಾಭಿಷೇಕವನ್ನು ಹೇಳುತ್ತೇನೆ. ಯುದ್ಧದ ಪ್ರಸಂಗ ಬಂದಾಗ ಈ ಜಯಾಭಿಷೇಕವನ್ನುಮಾಡಿ ಸ್ವಪತಿಯನ್ನು ಅಭಿಷೇಕಿಸಿ ರಣರಂಗಕ್ಕೆ ಹೋಗಬೇಕು. ಹೀಗೆ ಮಾಡಿದರೆ ಅವನು ಜಯಶಾಲಿಯಾಗುವುದು ನಿಶ್ಚಿತ.

ಶಾಸ್ತ್ರೋಕ್ತ ವಿಧಿಯಿಂದ ಮಂಟಪವನ್ನಾಗಲೀ ಅರವಟ್ಟಿಗೆಯನ್ನಾಗಲಿ ಮಾಡಬೇಕು. ಆ ಮಂಟಪದಲ್ಲಿ ವೇದಜ್ಞರಾದ ವಿಪ್ರರು ಒಂಬತ್ತು ಕಡೆ ಅಗ್ನಿಯನ್ನು ಪ್ರತಿಷ್ಠಿಸಬೇಕು. ಆ ಬಳಿಕ ಸರ್ವಾಭಿಷೇಕಕ್ಕಾಗಿ ರೇಖೆಗಳನ್ನು ಬರೆಯಬೇಕು. ಚಿನ್ನದಿಂದಾಗಲಿ, ಬೆಳ್ಳಿಯಿಂದಾಗಲಿ, ತಾಮ್ರದಿಂದಾಗಲಿ ಮಾಡಿದ ಸಾವಿರದ ಎಂಟು ಕಲಶಗಳನ್ನು ಸ್ಥಾಪಿಸಬೇಕು. ಶಿವ ಕಲಶವು ಉಳಿದ ಕಲಶಗಳಿಗಿಂತ ಎರಡು ಪಟ್ಟು ದೊಡ್ಡದಿರಬೇಕು. ನೂಲಿನಿಂದ ಆ ಕಲಶವನ್ನು ಸುತ್ತಬೇಕು. ಬಳಿಕ ಅದರ ಮೇಲೆ ದರ್ಭೆಯನ್ನು ಮುಚ್ಚಿ ಪರೀಕ್ಷಿಸಬೇಕು. ಗಂಧದ ನೀರನ್ನು ಆ ಕಲಶದಲ್ಲಿ ತುಂಬಬೇಕು. ವಿಧಿಗೆ ಅನುಸಾರವಾಗಿ ಆ ಶಿವಕಲಶದಲ್ಲಿ ಖಡ್ಗಾಕಾರವನ್ನು ಮಾಡಬೇಕು. ಅದರಂತೆ ಆ ಸಾವಿರದ ಎಂಟು ಕಲಶಗಳನ್ನು ಕಮಲಗಳಿಂದ ಮುಚ್ಚಬೇಕು. ಆ ಶಿವ ಕುಂಭದಲ್ಲಿ ರುದ್ರಗಾಯತ್ರಿಯಿಂದಲೂ, ಓಂಕಾರದಿಂದಲೂ ಶಿವನನ್ನು ಸ್ಥಾಪಿಸಬೇಕು. **'ಗಣಾಂಬಿಕಾಯ್ಯೆ ವಿದ್ಮಹೇ ಮಹಾತಪಾಯ್ಯೆ ಧೀಮಹಿ ತನ್ನೋ ಗೌರೀ ಪ್ರಚೋದಯಾತ್'** ಎಂಬ ದೇವಿ ಗಾಯತ್ರಿಯಿಂದ ಗೌರಿಯನ್ನು ಸ್ಥಾಪಿಸಬೇಕು. ರುದ್ರಕ್ಷೇತ್ರದಲ್ಲಿಟ್ಟ ಕಲಶಗಳನ್ನು ಭವಾದಿ ಮಂತ್ರಗಳಿಂದಲೂ, ವಿಷ್ಣುಸಹಸ್ರನಾಮ ಮಂತ್ರಗಳಿಂದಲೂ ಪೂಜಿಸಿ ಮುಂಭಾಗದಲ್ಲಿಡಬೇಕು. ಅನಂತರ ಬಾಣಲಿಂಗವನ್ನು ಅಭಿಷೇಕ ಮಾಡಿ ಪೃಥಿವೀ ಪತಿಯನ್ನು ಪೂಜಿಸಬೇಕು. ಚಿನ್ನ, ಬೆಳ್ಳಿ, ತಾಮ್ರಮಯವಾದ ಗಂಧ, ನೀರು, ಪಂಚರತ್ನಗಳಿಂದ ಕೂಡಿದ ಸಹಸ್ರ ಕಲಶಾಭಿಷೇಕವನ್ನು ಇಪ್ಪತ್ನಾಲ್ಕು ವ್ಯೂಹಾಭಿಷೇಕವನ್ನು,

ರುದ್ರಾಧ್ಯಾಯವನ್ನು ಹೇಳುತ್ತ ಮಾಡಬೇಕು. ಬ್ರಹ್ಮಕೂರ್ಚದಿಂದ ಹಾಲಿನಿಂದಾಗಲಿ, ಮೊಸರಿನಿಂದಾಗಲಿ, ಪಂಚಗವ್ಯದಿಂದಾಗಲಿ ಅಭಿಷೇಕವನ್ನು ಮಾಡಬೇಕು. ಅನಂತರ -

**ಅಘೋರೇಭ್ಯೋಽಥ ಘೋರೇಭ್ಯೋ ಘೋರತರೇಭ್ಯಃ ।**
**ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರ ರೂಪೇಭ್ಯಃ ॥**

ಈ ಮಂತ್ರದಿಂದ ಅಘೋರ, ಘೋರ, ಘೋರತರ ರೂಪದಿಂದ ಎಲ್ಲ ರೂಪಗಳಿಗೆ ನಮಸ್ಕಾರಮಾಡಿ ನೆನೆದು ಈ ಮಂತ್ರದಿಂದ ರಾಜನನ್ನು ಅಭಿಷೇಕಮಾಡಬೇಕು. ಪಾಪಾಪನೋದನ ಪಟುತರವಾದ ಈ ಅಘೋರ ಮಂತ್ರದಿಂದ ಅಭಿಷೇಕ ಮಾಡಿದ ರಾಜನಿಗೆ ಪ್ರೋಕ್ಷಣವನ್ನು ಮಾಡಬೇಕು. ದೇವಕುಂಡ ಅಥವಾ ಸ್ಥಂಡಿಲದಲ್ಲಿ, ಅಗ್ನಿಯಲ್ಲಿ, ಘೃತ, ಸಮಿಧೆ, ಆಜ್ಯ, ಚರು, ಅರಳು, ಅಕ್ಕಿ, ನೀವಾರ (ನವಣೆ) ಇವುಗಳಿಂದ ನೂರೆಂಟು ಸಲ ಹೋಮಮಾಡಬೇಕು. ಬಳಿಕ ರಾಜನನ್ನು ಪೂರ್ವಾಭಿಮುಖವಾಗಿ ಕೂಡಿಸಿ ಸ್ವಸ್ತಿ ಪುಣ್ಯಾಹವಾಚನವನ್ನು ಪಾರ್ವತೀಪತಿಯ ಪ್ರೀತಿಗೋಸ್ಕರ ಹೇಳಿಸಬೇಕು. ಬಂಗಾರದ ಭಸ್ಮದಿಂದ ಲೇಪಿತವಾದ ಕಂಕಣವನ್ನು ಕಮಲದ ಮೃಣಾಲ (ತಾವರೆ ದಂಟು) ದೊಡನೆ ರಾಜನ ಬಲದ ಕೈಗೆ ಕಟ್ಟಬೇಕು. ಅನಂತರ -

**ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।**
**ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯಮಾಮೃತಾತ್ ।**
**ಮಂತ್ರೇಣಾನೇನ ರಾಜಾನಂ ಸೇಚಯೇದ್ವಾಽಥ ಹೋಮಯೇತ್ ॥**

ಈ ಮಂತ್ರದಿಂದ ರಾಜನನ್ನು ಪ್ರೋಕ್ಷಿಸಬೇಕು. ಹೋಮವನ್ನು ಮಾಡಬೇಕು. ಅನಂತರ ಯಥಾಕ್ರಮವಾಗಿ ಸರ್ವದ್ರವ್ಯಗಳಿಂದ ಅಭಿಷೇಕಗಳನ್ನೂ, ಅರಳು ಮುಂತಾದ ದ್ರವ್ಯಗಳಿಂದ, ಪಂಚಬ್ರಹ್ಮ ಮಂತ್ರಗಳನ್ನುಚ್ಚರಿಸುತ್ತ ಹೋಮವನ್ನು ಮಾಡಬೇಕು. ಇದೆಲ್ಲ ಮುಗಿದ ಬಳಿಕ ರಾಜನ ಸಮೀಪದಲ್ಲಿ ಪ್ರತಿಯೊಂದು ದ್ರವ್ಯವನ್ನು ಸಹ ಸಾವಿರ ಸಾವಿರ ಸಂಖ್ಯೆಯಲ್ಲಿ ಈಶಾನಮಂತ್ರದಿಂದ ಪ್ರಧಾನ ಹೋಮಮಾಡಬೇಕು. ರಾಜನು ಅತ್ಯಂತ ಶಿವಭಕ್ತನಾಗಿದ್ದರೆ ತನ್ನ ಕೈಯಿಂದಲೇ ಹೋಮಮಾಡಬೇಕು.

ಹೊಸ ವಸ್ತ್ರಾಭರಣಗಳನ್ನು ಧರಿಸಿದ ರಾಜನಿಗೆ ದಿವ್ಯವಾದ ಶಂಖ, ಭೇರಿ, ಗೀತ, ವಾದಿತ್ರ ಧ್ವನಿಗಳಿಂದಲೂ, ಜಯಶಬ್ದದಿಂದಲೂ, ವೇದಘೋಷಗಳಿಂದಲೂ ಮತ್ತೊಮ್ಮೆ ಅಭಿಷೇಕಮಾಡಬೇಕು ಅಥವಾ ಕೂರ್ಚದಿಂದ ಪ್ರೋಕ್ಷಿಸಬೇಕು.

ಅನಂತರ ಶಿವಕುಂಭಜಲದಿಂದಲೂ ರಾಜನಿಗೂ ಪ್ರೋಕ್ಷಣೆಮಾಡಬೇಕು. 'ತಸ್ಮಹೇಶಾಯ' ಎಂಬ ಮಂತ್ರದಿಂದಲೂ ಶುದ್ಧಮಂತ್ರ, ಗೌರಿ ಗಾಯತ್ರಿ, ರುದ್ರಾಧ್ಯಾಯ, ಅಘೋರಮಂತ್ರಗಳಿಂದಲೂ ರಾಜನಿಗೆ ಶಿವಕಲಶದ ಜಲದಿಂದ ಪ್ರೋಕ್ಷಿಸಬೇಕು. ಅತ್ಯುತ್ತಮವಾದ ರತ್ನಖಚಿತ ಕಿರೀಟ, ಆಭರಣ, ರೇಷ್ಮೆವಸ್ತ್ರಗಳಿಂದ ರಾಜನನ್ನು ಅಲಂಕರಿಸಬೇಕು. ಅಭಿಷಿಕ್ತನಾದ ರಾಜನು ಅರವತ್ತು ತೊಲ ತೂಕದ ಬಂಗಾರದ ಸುದರ್ಶನವನ್ನು ಮಾಡಿಸಿ ಅದನ್ನು ನವರತ್ನಗಳಿಂದಲಂಕರಿಸಿ ಗುರುಗಳಿಗೆ ದಕ್ಷಿಣೆಯನ್ನಾಗಿ ಕೊಡಬೇಕು. ಅಲ್ಲಿ ಬಂದ ಶಿವಯೋಗಿಗಳಿಗೆ ಮೂವತ್ತು ತೊಲ ಚಿನ್ನ,

ಪುರೋಹಿತರಿಗೆ ಹದಿನೈದು ತೊಲ, ಶಿವಭಕ್ತರಿಗೆ ಏಳೂವರೆ ತೊಲ ಚಿನ್ನವನ್ನು ದಾನಮಾಡಬೇಕು. ಅನಂತರ ರಾಜನು ಮಹಾದೇವನ ಮಹಾಪೂಜೆಯನ್ನು ಮಾಡಬೇಕು.

ರಾಜರಿಗೆ ಮಾಡಲ್ಪಡಬೇಕಾದ ಜಯಾಭಿಷೇಕವನ್ನು ಅತ್ಯಂತ ಸಂಕ್ಷೇಪ ರೀತಿಯಿಂದ ಇಲ್ಲಿ ಹೇಳಲಾಗಿದೆ. ಪೂರ್ವಕಾಲದಲ್ಲಿ ದೇವೇಂದ್ರನು ಈ ಜಯಾಭಿಷೇಕವನ್ನು ಮಾಡಿಸಿಕೊಂಡು ಇಂದ್ರಪದವಿಯನ್ನೂ, ಪರಮೇಷ್ಠಿಯು ಬ್ರಹ್ಮಪದವನ್ನೂ, ಮಹಾವಿಷ್ಣುವು ತನ್ನ ವಿಶಿಷ್ಟ ಅಧಿಕಾರವನ್ನೂ ಪಡೆದರು. ಪಾರ್ವತಿ, ಸಾವಿತ್ರಿ, ಲಕ್ಷ್ಮೀದೇವಿ, ಕಾತ್ಯಾಯನಿ, ಇವರೆಲ್ಲರೂ ಇದರಿಂದ ಅತ್ಯಧಿಕವಾದ ಸೌಭಾಗ್ಯವನ್ನು ಹೊಂದಿದರು. ಹಿಂದೆ ತಾರಕನೆಂಬ ದೈತ್ಯನು ಮತ್ತು ವಿದ್ಯುನ್ಮಾಲಿಯು ಈ ವಿಧಿಯಿಂದ ಅಭಿಷಿಕ್ತರಾಗಿ ದೇವತೆಗಳಿಗೂ ಜಯಿಸಲು ಅಶಕ್ಯರಾದರು. ಸಾಕ್ಷಾತ್ ವಿಷ್ಣುವು ಈ ಅಭಿಷೇಕದಿಂದ ಬಲಿಷ್ಠನಾಗಿ ಹಿರಣ್ಯಾಕ್ಷನನ್ನು ಸಂಹರಿಸಿದನು. ನರಸಿಂಹನು ಹಿರಣ್ಯಕಶಿಪುವನ್ನೂ, ಸ್ಕಂದನು ತಾರಕಾಸುರನನ್ನೂ ಸಂಹರಿಸಿದ್ದು ಈ ಅಭಿಷೇಕದಿಂದಲೇ. ಇಂತಹ ಅಭಿಷೇಕವನ್ನು ಮಾಡಿಕೊಂಡರೆ ರಾಜರು ಕೋಟಿ ಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲವೂ ಪರಿಹಾರವಾಗುತ್ತವೆ.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ರಾಜರ ಜಯಾಭಿಷೇಕ ಎಂಬ ಇಪ್ಪತ್ತೇಳನೆಯ ಅಧ್ಯಾಯ ಮುಗಿದುದು*

—o—

## ತುಲಾಪುರುಷ ದಾನ — ಅಧ್ಯಾಯ - ೨೮

ಜಯಾಭಿಷೇಕದ ನಂತರ ಮನುಮಹಾರಾಜನು ರುದ್ರದೇವನನ್ನು ದಿವ್ಯಚಕ್ಷುಸ್ಸಿದಿಂದ ನೋಡಿ ಸಾಕ್ಷಾತ್ಕಾರಮಾಡಿಕೊಂಡು ರುದ್ರಾಧ್ಯಾಯದಿಂದ ಸ್ತೋತ್ರ ಮಾಡಿದನು. ಅದರಿಂದ ಮಹಾದೇವನು ಪ್ರೀತನಾಗಿ ಆ ಮನುಮಹಾರಾಜನನ್ನು ಕುರಿತು, ''ನೀನು ರಾಜ್ಯಶಾಸನವನ್ನು ಮಾಡಿದ ಬಳಿಕ ಕರ್ಮಾನುಷ್ಠಾನದಿಂದ ನಿನಗೆ ಕೈವಲ್ಯಪ್ರಾಪ್ತಿಯಾಗುವದು'' ಎಂದು ಹೇಳಿದನು. ಅನಂತರ ಆ ಪರಮೇಶ್ವರನು ಅಲ್ಲಿಯೇ ಅಂತರ್ಧಾನ ಹೊಂದಿದನು.

ಅನಂತರ ಆ ಮನುರಾಜನು ಮೇರುಪರ್ವತವನ್ನೂ ಏರಿ ಅದರ ಶೃಂಗಾಂಗಣದಲ್ಲಿ ಯೋಗಾಭ್ಯಾಸಮಾಡಿ ಭಗವದುಪಾಸನೆಯನ್ನು ಮಾಡುತಲಿದ್ದ ಬ್ರಹ್ಮದೇವರ ಮಾನಸಪುತ್ರನಾದ ಸನತ್ಕುಮಾರ ಮಹಾಮುನಿಯನ್ನು ನೋಡಿದನು ಮತ್ತು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಪ್ರಶ್ನೆಮಾಡಿದನು, ''ಮಹಾಪ್ರಭೊ, ನಿತ್ಯ ಸುಖರೂಪವಾದ ಮೋಕ್ಷವು ಹೇಗೆ ಪ್ರಾಪ್ತವಾಗುತ್ತದೆ ? ಕೇವಲ ಕರ್ಮದಿಂದೊ ಅಥವಾ ಜ್ಞಾನದಿಂದೋ ಅಥವಾ ಜ್ಞಾನಕರ್ಮ ಸಮುಚ್ಚಯದಿಂದೋ ಮೋಕ್ಷಪ್ರಾಪ್ತಿಯಾಗುವುದೋ? ಈ ವಿಷಯವನ್ನು ನನಗೆ ಚೆನ್ನಾಗಿ ತಿಳಿಸಿ ಹೇಳಿ.''

**ಸನತ್ಕುಮಾರ :-** ಕೇವಲ ಕರ್ಮದಿಂದಾಗಲಿ, ಜ್ಞಾನಕರ್ಮ ಸಮುಚ್ಚಯದಿಂದಾಗಲಿ ಮೋಕ್ಷವೂ, ಮೋಕ್ಷಪ್ರಾಪ್ತಿಯೂ ಆಗುವುದಿಲ್ಲ. ಮೋಕ್ಷವು ಎಂದಾದರೂ ಜ್ಞಾನ ಸಾಧ್ಯ. ಆ ಜ್ಞಾನ ಉಂಟಾಗಬೇಕಾದರೆ ಅಜ್ಞಾನ ನಿವೃತ್ತಿಯಾಗಬೇಕಾಗುವದು.

ಆ ಅಜ್ಞಾನ ನಿವೃತ್ತಿಯು ಕೇವಲ ಕರ್ಮದಿಂದಾಗಲಿ, ಜ್ಞಾನಕರ್ಮ ಸಮುಚ್ಚಯ ದಿಂದಾಗಲಿ ಆಗಲಾರದು. ಕರ್ಮವನ್ನು ಮಾಡಿದರೆ ಚಿತ್ತಶುದ್ಧಿಯಾಗುವದು. ಶುದ್ಧವಾದ ಮನಸ್ಸಿನಿಂದ ವೇದಾಂತ ವಿಚಾರವನ್ನು ಮಾಡಿದರೆ ಜ್ಞಾನೋದಯವಾಗಿ ಮೋಕ್ಷವು ಲಭಿಸುವದು. ಈ ರೀತಿಯಾಗಿ ಕರ್ಮವು ಪರಂಪರಯಾ ಮೋಕ್ಷಕ್ಕೆ ಸಾಧನವಾಗಿದೆ. ಮೋಕ್ಷಕ್ಕೆ ಸಾಕ್ಷಾತ್ ಸಾಧನವೆಂದರೆ ಜ್ಞಾನವೇ. ಆ ಜ್ಞಾನವೇ ಅಜ್ಞಾನ ನಿವರ್ತಕ.

ಸನತ್ಕುಮಾರರು ತಮ್ಮ ಪೂರ್ವಜನ್ಮದ ವೃತ್ತಾಂತವನ್ನೂ ಪರಮೇಶ್ವರನ ಆರಾಧನೆಯ ಮಹಿಮೆಯನ್ನೂ ಹೇಳುತ್ತಾರೆ. ''ನಾನು ಪೂರ್ವದಲ್ಲಿ ಒಂದು ಪ್ರಸಂಗದಲ್ಲಿ ನಂದೀಶ್ವರನನ್ನು ಅವಮಾನಪಡಿಸಿ ಅವನ ಶಾಪದಿಂದ ಒಂಟೆಯ ಜನ್ಮವನ್ನು ಹೊಂದಿದೆ. ಅನಂತರ ಮುಂದಿನ ಜನ್ಮದಲ್ಲಿ ನಿಷ್ಕಾಮಕರ್ಮದಿಂದ ಮಹಾದೇವನನ್ನು ಆರಾಧಿಸಿದೆ. ಭಕ್ತಿಯುಕ್ತವಾದ ನನ್ನ ಶಿವಾರ್ಚನೆ ಹಾಗೂ ನಂದೀಶ್ವರನ ಅನುಗ್ರಹದಿಂದ ನಾನು ಬ್ರಹ್ಮದೇವರ ಮಾನಸಪುತ್ರನಾಗಿ ಜನಿಸಿದೆ. ಆ ಬಳಿಕ ಆ ನಂದೀಶ ಗುರುವಿನ ಮುಖದಿಂದಲೇ ಮೋಕ್ಷಮಾರ್ಗವನ್ನು ಕೇಳಿದೆ. ಈಗ ದಿವ್ಯವಾದ ಜೀವನ್ಮುಕ್ತಸ್ಥಿತಿಯನ್ನು ಹೊಂದಿದ್ದೇನೆ. ಆ ಮಹಾತ್ಮನಾದ ನಂದೀಶ್ವರನು ಪುಣ್ಯಕಾಲ ಪುಣ್ಯಕ್ಷೇತ್ರಗಳಲ್ಲಿ ಅನುಷ್ಠಿಸಲು ಯೋಗ್ಯವಾದ ಹದಿನಾರು ದಾನಗಳ ಹಾಗೂ ತುಲಾಭಾರ ಮೊದಲಾದವುಗಳ ವಿಧಿವಿಧಾನಗಳನ್ನು ನನಗೆ ಹೇಳಿದ್ದಾರೆ. ಅದನ್ನು ನಾನು ನಿನಗೆ ಚಿತ್ತರಿಸುತ್ತೇನೆ ಕೇಳು. ಮೊದಲು ತುಲಾಭಾರದ ವಿಧಾನವನ್ನು ಹೇಳುತ್ತೇನೆ. ಇಪ್ಪತ್ತು ಹಸ್ತ ಪ್ರಮಾಣವುಳ್ಳ ಒಂದು ಮಂಟಪವನ್ನು ನಿರ್ಮಿಸಬೇಕು. ಅದರ ಮಧ್ಯದಲ್ಲಿ ಒಂಭತ್ತು ಹಸ್ತಪ್ರಮಾಣದ ವೇದಿಕೆಯನ್ನು ರಚಿಸಬೇಕು. ಆ ವೇದಿಕೆಗೆ ಹನ್ನೆರಡು ಕಂಬಗಳು ಇರಬೇಕು. ಅದರ ಸುತ್ತಲೂ ನಾಲ್ಕು ಮೂರ್ತಿಗಳುಳ್ಳ ಚೌಕಾಕಾರದ ಒಂಭತ್ತು ಕುಂಡಗಳನ್ನು ರಚಿಸಬೇಕು. ಈಶಾನ್ಯದಿಕ್ಕಿನ ಮಧ್ಯದಲ್ಲಿ ಪ್ರಧಾನ ಕುಂಡವನ್ನು ಮಾಡಿಸಬೇಕು. ತ್ರಿಕೋಣವಾದ ಪದ್ಮಾಕಾರದ ಎಂಟು ಕೋನಗಳುಳ್ಳ ಸ್ಥಂಡಿಲವನ್ನು ಮಾಡಿಸಬೇಕು. ಇದರ ಮಧ್ಯದಲ್ಲಿ ನಾಲ್ಕು ತೋರಣಗಳು ಮತ್ತು ಎಂಟು ದಿಕ್ಕುಗಳಲ್ಲಿ ಆನೆಗಳುಳ್ಳ ಎಂಟು ಅಂಗುಲದ ಮೇಲ್ಗಟ್ಟಿನಿಂದ ಆ ಮಂಟಪವು ಪ್ರಕಾಶಮಾನವಾಗಿರಬೇಕು. ಬಿಲ್ವ, ಅಶ್ವತ್ಥ, ಪಲಾಶ ಈ ವೃಕ್ಷಗಳಿಂದಾಗಲಿ ಅಥವಾ ಖದಿರ ವೃಕ್ಷಗಳಿಂದಾಗಲಿ ಮಾಡಿಸಬೇಕು. ಈ ತುಲಾಸ್ಥಂಭವು ಎಂಟು. ಹಸ್ತ ಪ್ರಮಾಣವುಳ್ಳದ್ದಾಗಿರಬೇಕು. ಆ ತುಲಾ ಸ್ತಂಭದ ಮೂರು ಭಾಗವು ಅನಾಚ್ಛಾದಿತವಾಗಿ ತ್ರಿಗುಣಾತ್ಮಕವಾಗಿರಬೇಕು. ಎರಡು ಅಂಗುಲಕ್ಕಿಂತ ಕಡಿಮೆ ಆಗದೆ ಚೆನ್ನಾಗಿ ಮಾಡಲ್ಪಟ್ಟದ್ದಾಗಿರಬೇಕು. ಉತ್ತರ ದ್ವಾರದ ಸ್ಥಂಭಗಳ ಪ್ರಮಾಣದಂತೆ ತುಲಾರೂಪದ ವಿಸ್ತಾರವು ಮೂವತ್ತಾರು ಮಾತ್ರೆಯುಳ್ಳದ್ದಾಗಿರಬೇಕು. ಆ ತುಲಾಮಧ್ಯದಲ್ಲಿ ಒಂದು ಶಾಲಿಗೆಯನ್ನು ಮಾಡಿಸಿ ತೋರಣವನ್ನು ಕಟ್ಟಬೇಕು. ವೇದಿಕೆಯ ಮಧ್ಯಭಾಗದಲ್ಲಿ ಬರೆದು ಆ ಮಂಡಲದ ಪೂರ್ವದಿಕ್ಕಿನಲ್ಲಿ ವಜ್ರವನ್ನು, ಆಗ್ನೇಯದಲ್ಲಿ ಶಕ್ತಿಯನ್ನು, ದಕ್ಷಿಣದಲ್ಲಿ ದಂಡವನ್ನು, ನೈರುತ್ಯದಲ್ಲಿ ಖಡ್ಗವನ್ನು, ಪಶ್ಚಿಮದಲ್ಲಿ ಪಾಶಾಯುಧವನ್ನು, ವಾಯವ್ಯದಲ್ಲಿ ಧ್ವಜವನ್ನು, ಉತ್ತರದಲ್ಲಿ ಗದೆಯನ್ನು, ಈಶಾನ್ಯದಿಕ್ಕಿನಲ್ಲಿ ಶೂಲವನ್ನು ಬರೆಯಬೇಕು. ಶೂಲದ ಎಡಭಾಗದಲ್ಲಿ ಚಕ್ರವನ್ನು, ಬಲಭಾಗದಲ್ಲಿ ಪದ್ಮವನ್ನು ಬರೆಯಬೇಕು. ಈ ರೀತಿಯಾಗಿ ಮಂಡಲವನ್ನು ಬರೆದು ಹೋಮವನ್ನು ಆಚರಿಸಬೇಕು. ಪ್ರಧಾನ

ಹೋಮವನ್ನು ಓಂಕಾರಪೂರ್ವಕವಾಗಿ ಸ್ವಾಹಾಂತವಾಗಿ ಮಾಡಬೇಕು. ಅನಂತರ ವಿಧಿಪೂರ್ವಕವಾಗಿ ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ, ಈಶಾನ ಎಂಬ ಅಷ್ಟದಿಕ್ಪಾಲಕರಿಗೂ ಮತ್ತು ಬ್ರಹ್ಮ, ವಿಷ್ಣು ಇವರಿಗೂ ಇಪ್ಪತ್ತೊಂದು ಸಮಿಧೆಗಳನ್ನು ತೆಗೆದುಕೊಂಡು ಚರುವಿನಿಂದಲೂ, ತುಪ್ಪದಿಂದಲೂ, ಬೆಳ್ಳಗಿರುವ ಅನ್ನದ ಪಾಯಸದಿಂದಲೂ, ಕ್ರಸರಾನ್ನದಿಂದಲೂ ಮಾಡಬೇಕು. ''ಓಂ ಭೂಃಸ್ವಾಹಾ, ಓಂ ಭುವಃ ಸ್ವಾಹಾ, ಓಂ ಸ್ವಃ ಸ್ವಾಹಾ, ಓಂ ಭೂರ್ಭುವ ಸ್ವಃ ಸ್ವಾಹಾ'' ಎಂಬ ಮಂತ್ರದಿಂದ ಒಂದು ಸಾವಿರ, ಐನೂರು ಅಥವಾ ನೂರಾಎಂಟು ಆಹುತಿಗಳನ್ನು ಕೊಟ್ಟು ಮೇಲೆ ಹೇಳಿದ ಮಂತ್ರಗಳನ್ನು ಉಚ್ಚರಿಸುತ್ತ ಹೋಮಗಳನ್ನು ಮಾಡಬೇಕು. ಪ್ರಧಾನ ಹೋಮವನ್ನು ಗಾಯತ್ರಿ ಮಂತ್ರದಿಂದ ಹಾಗೂ ಸಮಿಧೆಗಳಿಂದ ಮಾಡಬೇಕು. ಇಂದ್ರಾದಿ ದಿಕ್ಪಾಲಕರ ಹೋಮವನ್ನು ಆಜ್ಯ ಚರುವಿನಿಂದ ಮಾಡಬೇಕು.

ವಜ್ರಾದಿಗಳಿಗೆ ಐದುನೂರು ಸಲ ಹೋಮವನ್ನು ಮಾಡಬೇಕು. ಬ್ರಹ್ಮದೇವನಿಗೆ 'ಬ್ರಹ್ಮಜಜ್ಞಾನಂ' ಎಂಬ ಮಂತ್ರದಿಂದಲೂ, ವಿಷ್ಣುವಿಗೆ 'ನಾರಾಯಣಾಯ ವಿದ್ಮಹೆ' ಎಂಬ ಮಂತ್ರದಿಂದಲೂ ಹೋಮವನ್ನು ಮಾಡಬೇಕು.

**'ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ**
**ತನ್ನೋ ವಿಷ್ಣುಃ ಪ್ರಚೋದಯಾತ್**
**ತ್ರ್ಯಂಬಕಂ ಯಜಾಮಹೆ ಸುಗಂಧಿಂ ಪುಷ್ಟಿವರ್ಧನಮ್ ।**
**ಊರ್ವಾರುಕಮಿವ ಬಂಧನಾತ್ ಮೃತ್ಯೋರ್ಮುಕ್ಷೀಯ ಮಾಮೃತಾತ್ ॥'**

ಈ ಮಂತ್ರಗಳಿಂದ ಹಾಲಿನಿಂದ ಮಿಶ್ರಿತವಾದ ದರ್ಭೆಯಿಂದ ಹೋಮ ಮಾಡಬೇಕು. ಇಪ್ಪತ್ತೈದು ಸಲ ಬೇರೆ ಬೇರೆಯಾಗಿ ಮಾಡಿದ ಈ ದೂರ್ವಾ ಹೋಮವು ಮತ್ತು ವಾಸ್ತು ಹೋಮವು ಹಾಗೂ ಅಘೋರಮಂತ್ರದಿಂದ ನೂರಾವೃತ್ತಿ, ತುಪ್ಪದಿಂದ ಪ್ರಾಯಶ್ಚಿತ್ತ ಹೋಮವೂ ಮಾಡಲ್ಪಡಬೇಕು.

ಆ ದೇವತಾಮಂಡಲದಲ್ಲಿ ದೇವೀ ಸಹಿತನಾದ ಶಿವನ ಬಲಭಾಗದಲ್ಲಿ ಬ್ರಹ್ಮನನ್ನು, ಎಡಭಾಗದಲ್ಲಿ ವಿಷ್ಣುವನ್ನು, ಸುತ್ತಲೂ ಇಂದ್ರಾದಿದೇವತೆಗಳನ್ನು ಆಹ್ವಾನಿಸಬೇಕು. ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು ಈ ಗ್ರಹಗಳನ್ನು ಕ್ರಮವಾಗಿ ಆಹ್ವಾನಿಸಿ ಪೂಜಿಸಬೇಕು. ಹೋಮವಾಗುವ ಕಾಲದಲ್ಲಿ ರುದ್ರಾಧ್ಯಾಯವನ್ನು ಹೇಳುತ್ತ ಪೂರ್ವದಿಕ್ಕಿನ ಮಧ್ಯಭಾಗದಲ್ಲಿ ರಾಜನಿಗೆ ತುಲಾರೋಹಣವನ್ನು ಮಾಡಿಸಬೇಕು. ರಾಜನು ರುದ್ರಗಾಯತ್ರಿ ಎಂಬ ಮಂತ್ರವನ್ನು ಜಪಿಸುತ್ತ ಒಂದು ಅರ್ಧಗಳಿಗೆಯಾದರೂ ತಕ್ಕಡಿಯಲ್ಲಿಯೇ ಕುಳಿತಿರಬೇಕು. ಇನ್ನೊಂದು ತಕ್ಕಡಿಯಲ್ಲಿ ರಾಜನ ತೂಕಕ್ಕೆ ಸಮಾನವಾದ ಸುವರ್ಣ ನಾಣ್ಯಗಳನ್ನು ಇರಿಸಬೇಕು. ರಾಜನು ಅಲಂಕಾರಗಳಿಂದ ಅಲಂಕೃತನಾಗಿ ಖಡ್ಗ, ಗುರಾಣಿ ಮುಂತಾದ ಆಯುಧಗಳನ್ನು ಹಿಡಿದಿರಬೇಕು. ತುಲಾರೋಹಣದ ಆರಂಭದಲ್ಲಿಯೂ ಕೊನೆಯಲ್ಲಿಯೂ 'ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ' ಇತ್ಯಾದಿ ಮಂತ್ರಗಳಿಂದ ಸ್ವಸ್ತಿ ಪುಣ್ಯಾಹವಾಚನಗಳನ್ನು ಕೂರ್ಚಧಾರಿಯಾಗಿ ಬ್ರಾಹ್ಮಣನು ಮಾಡಿಸಬೇಕು.

ತಕ್ಕಡಿಯಲ್ಲಿ ಕುಳಿತಿರುವ ರಾಜನು ಎರಡು ಹೊಸ ವಸ್ತ್ರ, ರುಮಾಲು, ಕರ್ಣಕುಂಡಲ, ಕಂಠಹಾರ, ಬೆರಳಿನುಂಗುರ, ಕೈ ಖಡ್ಗವನ್ನು ಧರಿಸಿರಬೇಕು. ತುಲಾಭಾರ

ಮಾಡಿಕೊಂಡ ಬಳಿಕ ಅವೆಲ್ಲವುಗಳನ್ನು ಪಾಶುಪತ ವ್ರತನಿಷ್ಠನಾದ ಶೈವ ಬ್ರಾಹ್ಮಣನಿಗೂ ಉಳಿದ ಋತ್ವಿಜರಿಗೂ ದಾನಮಾಡಬೇಕು. ಋತ್ವಿಜರಿಗೆ ನೂರೈವತ್ತು ಸುವರ್ಣ ನಾಣ್ಯಗಳನ್ನು ಸಮವಾಗಿ ಹಂಚಿ ದಾನಕೊಡಬೇಕು. ಉಳಿದ ಶಿವಯೋಗಿಗಳಿಗೆ ಪ್ರತ್ಯೇಕ ನಾಣ್ಯವನ್ನು ಕೊಡಿಸಬೇಕು. ಉಳಿದ ಸುವರ್ಣ ನಾಣ್ಯಗಳಿಂದ ಊರಲ್ಲಿ ಪರಮೇಶ್ವರನಿಗೋಸ್ಕರ ದೊಡ್ಡ ದೇವಾಲಯವನ್ನು ನಿರ್ಮಿಸಬೇಕು.

ತುಲಾಭಾರದ ವಿಧಿಯ ನಂತರ ಪರಮೇಶ್ವರನಿಗೆ ಗಾಯತ್ರಿಯಿಂದ ಗೋಮೂತ್ರವನ್ನು, ಓಂಕಾರದಿಂದ ಗೋಮಯವನ್ನು, ''ಆಪ್ಯಾಯ ಸ್ವ'' ಮಂತ್ರದಿಂದ ಹಾಲನ್ನು, 'ಧಧಿಕ್ರಾವಣೋ ಅಕಾರಿಷಂ' ಮಂತ್ರದಿಂದ ಮೊಸರನ್ನು, 'ತೇಜೋಸಿ' ಮಂತ್ರದಿಂದ ತುಪ್ಪವನ್ನು, 'ದೇವಸ್ಯತ್ವಾ' ಮಂತ್ರದಿಂದ ದರ್ಭೆಸಹಿತವಾದ ಕಲಶದ ನೀರನ್ನೂ, ರುದ್ರಾಧ್ಯಾಯದಿಂದ ಎಳೆನೀರು ಮುಂತಾದ ದ್ರವ್ಯಗಳನ್ನು ಉಪಯೋಗಿಸಿ ಶಿವನಿಗೆ ಪಂಚಾಮೃತ ಸ್ನಾನವನ್ನು ಮಾಡಿಸಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ತುಲಾಪುರುಷ ದಾನ*
*ಎಂಬ ಇಪ್ಪತ್ತೆಂಟನೆಯ ಅಧ್ಯಾಯ ಮುಗಿದುದು*



## ಹಿರಣ್ಯಗರ್ಭದಾನ

**ಅಧ್ಯಾಯ - ೨೯**

**ಸನತ್ಕುಮಾರ :-** ಮನು ಮಹಾರಾಜನೇ, ನಾನು ಈಗ ನಿನಗೆ ತುಲಾಪುರುಷ ದಾನದ ವಿಧಾನವನ್ನು ಹೇಳಿದೆನು. ಈಗ ಸಕಲ ಸಿದ್ಧಿಗಳನ್ನು ಕೊಡುವ ಹಿರಣ್ಯಗರ್ಭ ದಾನದ ವಿಧಿಯನ್ನು ಹೇಳುತ್ತೇನೆ ಕೇಳು.

ಒಂದು ಬಂಗಾರದ ಮಂಗಳಕರವಾದ ಪಾತ್ರೆಯನ್ನು ಮಾಡಿಸಿ, ಅಲಂಕಾರಗಳಿಂದ ಅದನ್ನು ಶೃಂಗರಿಸಬೇಕು. ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳುಳ್ಳವಳಾಗಿ ಅಧೋಭಾಗದಲ್ಲಿ ಇದ್ದು ಬ್ರಹ್ಮ, ವಿಷ್ಣು, ಅಗ್ನಿ ಸ್ವರೂಪಳಾಗಿರುವ ಇಪ್ಪತ್ತನಾಲ್ಕನೆಯ ತತ್ವರೂಪಿಣಿಯಾದ ಚತುರ್ವಿಂಶತಿಕಾ ದೇವಿಯನ್ನು ಸ್ಮರಿಸಬೇಕು. ಊರ್ಧ್ವಭಾಗದಲ್ಲಿ ಸತ್ವಾದಿಗುಣಗಳಿಲ್ಲದ ಇಪ್ಪತ್ತೊಂದನೆಯ ತತ್ವರೂಪನಾದ ಆತ್ಮ ಎಂಬ ಪುರುಷನನ್ನು ಧ್ಯಾನಿಸಬೇಕು. ಅನಂತರ ವೇದಿಕೆಯ ಮೇಲ್ಭಾಗದಲ್ಲಿ, ಮಂಡಲದಲ್ಲಿ, ಅಕ್ಕಿಯ ಮಧ್ಯದಲ್ಲಿ ಇಡಬೇಕು. ಹೊಸವಸ್ತ್ರವನ್ನು ಸುತ್ತಿ ಉದ್ದಿನಹಿಟ್ಟಿನಿಂದ ಲೇಪಿಸಿ ಪಂಚದ್ರವ್ಯಗಳಿಂದ ಈಶಾನಾದಿ ಪಂಚಮಂತ್ರಗಳಿಂದ ವಿಧಿಪೂರ್ವಕವಾಗಿ ಪೂಜೆ ಮಾಡಬೇಕು. ಮೂವತ್ತು ಚಿನ್ನದ ನಾಣ್ಯಗಳಿಂದ ಮಂಗಳಕರವಾದ ಕನ್ಯೆಯನ್ನು ಮಾಡಿಸಿ ಅದನ್ನು ಅಲಂಕರಿಸಿ ಮದುವೆಮಾಡಿ ಅನಂತರ ಹೋಮವನ್ನು ಪೂರೈಸಿ ಶಿವನಿಗೆ ಅರ್ಪಿಸಬೇಕು.

ವೇದ ಮತ್ತು ಅದರ ಅರ್ಥ ತಿಳಿದ ಬ್ರಾಹ್ಮಣೋತ್ತಮರೊಂದಿಗೆ ಶಕ್ತಿಬೀಜದಿಂದ ಗರ್ಭಾದಾನ ಮೊದಲುಗೊಂಡು ವಿಶ್ವಜಿತ್, ಆಪ್ತೋರ್ಯಾಮ ಪರ್ಯಂತವಾದ ಎಲ್ಲ ಕರ್ಮಗಳನ್ನು ಮಾಡಬೇಕು ಮತ್ತು ಉಳಿದ ಕರ್ಮಗಳನ್ನು ತುಲಾಹೋಮದಂತೆ ವಿಧಿಗೆ ಅನುಸಾರವಾಗಿ ಮಾಡಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗ ದಹಿರಣ್ಯಗರ್ಭದಾನ ಎಂಬ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು*

## ತಿಲಪರ್ವತ ದಾನ

**ಅಧ್ಯಾಯ - ೩೦**

**ಸನತ್ಕುಮಾರ :-** ಋಷಿಗಳೇ, ತಿಲಪರ್ವತ ದಾನದ ವಿಧಿಯನ್ನು ಹೇಳುತ್ತೇನೆ ಕೇಳಿ, ಗೋಮಯದಿಂದ ಸಾರಿಸಲ್ಪಟ್ಟ ಭೂಮಿಯಲ್ಲಿ ಶುದ್ಧವಸ್ತ್ರಗಳನ್ನು ಹಾಸಿ ಮೂರು ಭಾಗ ಅಥವಾ ಹತ್ತು ಪಲ್ಲ ಎಳ್ಳನ್ನು ಪರ್ವತಾಕಾರವಾಗಿ ಒಟ್ಟಬೇಕು. ಎಂಟು ಗಳಗಳಿಂದ ಯುಕ್ತವಾದ ಕರ್ಣಿಕಾ, ಕೇಸರ ಮುಂತಾದ ಪುಷ್ಪದ ಅವಯವಗಳಿಂದ ಕೂಡಿರುವ ಒಂದು ಪದ್ಮವನ್ನು ರಚಿಸಬೇಕು. ಹತ್ತು ಅಥವಾ ಐದು, ಕನಿಷ್ಠ ಎರಡೂವರೆ ಸುವರ್ಣ ನಾಣ್ಯಗಳಿಂದ ನಿರ್ಮಿಸಲ್ಪಟ್ಟ ಆ ಸುವರ್ಣ ಪದ್ಮವನ್ನು ಎಳ್ಳಿನ ರಾಶಿಯ ನಟ್ಟನಡುವೆ ಇರಿಸಬೇಕು. ಅದರ ಮಧ್ಯಭಾಗದಲ್ಲಿ ಪರಮೇಶ್ವರನನ್ನು ಸ್ಥಾಪಿಸಿ, ಯಥಾಶಾಸ್ತ್ರ ಪೂಜೆಮಾಡಿ, ವಾಮಾದಿ ಪಂಚಬ್ರಹ್ಮಾಂಗಗಳನ್ನು ಅನುಸಂಧಾನಿಸಿ ಪೂಜೆಮಾಡಬೇಕು. ಶಕ್ತಿದೇವತೆಯ ಮೂರ್ತಿಯನ್ನು ಮೂರು ಸುವರ್ಣನಾಣ್ಯಗಳಿಂದ ಮಾಡಿಸಬೇಕು. ಅಷ್ಟವಿಘ್ನೇಶ್ವರರನ್ನು ಮೂರು ಸುವರ್ಣ ನಾಣ್ಯಗಳಿಂದ ಮಾಡಿಸಿ ಯಥೋಕ್ತ ವಿಧಿಯಿಂದ ಪೂಜೆ ಮಾಡಿಸಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ತಿಲಪರ್ವತ ದಾನ ಎಂಬ*
*ಮೂವತ್ತನೆಯ ಅಧ್ಯಾಯ ಮುಗಿದುದು*



## ತಿಲಪರ್ವತ ದಾನ

**ಅಧ್ಯಾಯ - ೩೧**

**ಸನತ್ಕುಮಾರ :-** ಋಷಿಗಳೇ, ಮಹತ್ತರವಾದ ಫಲವನ್ನುಕೊಡುವ ಅಲ್ಪದ್ರವ್ಯ ಸಾಧ್ಯವಾದ ಇನ್ನೊಂದು ತಿಲಪರ್ವತದಾನಕ್ರಮವನ್ನು ಹೇಳುತ್ತೇನೆ. ಯೋಗ್ಯವಾದ ಒಂದು ಸ್ಥಾನವನ್ನು ಆರಿಸಿ ಅದರ ಮಧ್ಯದಲ್ಲಿ ಒಂದು ದಂಡವನ್ನು ಇರಿಸಿ ನೀರಿನಿಂದ ಪ್ರೋಕ್ಷಿಸಬೇಕು. ವಿದ್ವಾಂಸನಾದ ಬ್ರಾಹ್ಮಣನು ಆ ಪ್ರದೇಶನನ್ನು ಪಂಚಗವ್ಯದಿಂದ ಪ್ರೋಕ್ಷಿಸಿ ಮಂಡಲವನ್ನೂ ಬರೆಯಬೇಕು. ಅನಂತರ ಹೋಮ ವಸ್ತ್ರಗಳನ್ನು ಇಟ್ಟು, ಸುಗಂಧ ಪುಷ್ಪಗಳನ್ನು ಇರಿಸಿ ಒಂದು ಪ್ರಾದೇಶ ಮಾತ್ರ ಎತ್ತರವಾದ ಎಳ್ಳು ರಾಶಿಯನ್ನು ಹಾಕಬೇಕು. ನಾಲ್ಕು ಬೆರಳಿಗಿಂತ ಕಡಿಮೆಯಾದರೆ, ಎಳ್ಳಿನ ರಾಶಿಯು ಮಧ್ಯಮ. ಅಲ್ಲಿ ಸ್ಥಾಪಿತವಾದ ದಂಡಗಳಿಗಿಂತ ಒಂದು ಪ್ರಾದೇಶ ಮಾತ್ರ ಎತ್ತರವಾದರೆ ಅದು ಉತ್ತಮ. ದಂಡಕ್ಕಿಂತ ಕಡಿಮೆಯಾದರೆ ಕನಿಷ್ಠ. ಸದ್ಯೋಜಾತಾದಿ ಪಂಚಬ್ರಹ್ಮರನ್ನು ಶಾಸ್ತ್ರೋಕ್ತ ವಿಧಾನದಿಂದ ಸ್ಥಾಪಿಸಿ ಪೂಜಿಸಬೇಕು. ಎಂಟುದಿಕ್ಕುಗಳಲ್ಲಿಯೂ ಎಂಟುಮೂರ್ತಿಗಳನ್ನು, ಮೂರು ಮೂರು ಸುವರ್ಣ ನಾಣ್ಯಗಳಿಂದ ಮಾಡಿಸಬೇಕು. ತಿಲಪರ್ವತ ಮಧ್ಯದಲ್ಲಿ ಇಂದ್ರಾದಿ ಅಷ್ಟದಿಕ್ಪಾಲಕರಿಂದ ಸುತ್ತುವರಿಯಲ್ಪಟ್ಟ ಮಹಾದೇವನನ್ನು ಪೂಜಿಸಬೇಕು. ಸಹಸ್ರಕಲಶಗಳಲ್ಲಿಯ ನೀರನ್ನು ಪ್ರೋಕ್ಷಿಸಿ ವಿಧಿಪೂರ್ವಕವಾಗಿ ಶಿವಪೂಜೆ ಮಾಡಿ ಕ್ರಮವಾಗಿ ವಿಸರ್ಜನೆಯನ್ನು ಮಾಡಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ತಿಲಪರ್ವತ ದಾನವಿಧಿ*
*ಎಂಬ ಮೂವತ್ತೊಂದನೆಯ ಅಧ್ಯಾಯ ಮುಗಿದುದು*

## ಸುವರ್ಣಭೂಮಿ ದಾನ

ಅಧ್ಯಾಯ - ೩೨

**ಸನತ್ಕುಮಾರ :-** ಎರಡೂ ತಿಲಪರ್ವತದಾನದ ವಿಧಿಯಲ್ಲಿ ಜಪ, ಹೋಮ, ಪೂಜೆ, ದಾನ, ಅಭಿಷೇಕ ಮುಂತಾದ ಸಕಲಕಾರ್ಯಗಳನ್ನು ಯಥಾಪ್ರಕಾರ ನೆರವೇರಿಸಬೇಕು. ಸಾವಿರ ಸುವರ್ಣ ನಾಣ್ಯಗಳಿಂದಾಗಲೀ ಅದರ ಅರ್ಧದಿಂದಾಗಲಿ ಒಂದು ಹಸ್ತ ಪ್ರಮಾಣ ಅಗಲವುಳ್ಳ ಒಂದು ಚಚ್ಚೌಕವಾದ ಸುವರ್ಣ ಭೂಮಿಯನ್ನು ರಚಿಸಬೇಕು. ಅದರ ಸುತ್ತಲೂ ಸಪ್ತದ್ವೀಪ, ಗಂಧಮಾದನಾದಿ ಪರ್ವತಗಳು, ಸಕಲ ತೀರ್ಥಸ್ಥಳಗಳನ್ನು ರೇಖಿಸಬೇಕು. ಆ ಭೂಮಿಯ ಮಧ್ಯಭಾಗದಲ್ಲಿಯೇ ಮೇರುಪರ್ವತ, ಅದರ ಮಧ್ಯದಲ್ಲಿ ಜಂಬೂದ್ವೀಪವನ್ನು ರಚಿಸಬೇಕು. ವೇದಿಕೆಯ ಮಧ್ಯದಲ್ಲಿರುವ ಮಂಡಲದಲ್ಲಿ ಪೂಜಾದಿಕಾರ್ಯಗಳನ್ನು ಮಾಡಬೇಕು. ಒಂದು ಸಾವಿರ ಸುವರ್ಣದಾನಗಳ ಏಳನೆಯ ಒಂದು ಭಾಗವನ್ನು ದಕ್ಷಿಣೆಯ ಜೊತೆಗೆ ಶಿವಭಕ್ತನಾದ ಬ್ರಾಹ್ಮಣನಿಗೆ ದಾನಕೊಡಬೇಕು. ಸಾವಿರ ಕಲಶಗಳಿಂದ ಪರಮೇಶ್ವರನನ್ನು ಪೂಜಿಸಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಸುವರ್ಣಭೂಮಿ ದಾನ*
*ಎಂಬ ಮೂವತ್ತೆರಡನೆಯ ಅಧ್ಯಾಯ ಮುಗಿದುದು*



## ಕಲ್ಪವೃಕ್ಷ ದಾನ

ಅಧ್ಯಾಯ - ೩೩

**ಸನತ್ಕುಮಾರ :-** ಋಷಿಗಳೇ, ಕಲ್ಪವೃಕ್ಷ ದಾನದ ವಿಧಿಯನ್ನು ಹೇಳುತ್ತೇವೆ. ನೂರು ಸುವರ್ಣ ನಾಣ್ಯಗಳಿಂದ ನಾನಾ ಶಾಖೆ, ರೆಂಬೆಗಳುಳ್ಳ ರತ್ನದ ಚಿಗುರುಗಳು ಚಿಗಿತಂತಿರುವ ಒಂದು ವೃಕ್ಷವನ್ನು ಮಾಡಿಸಬೇಕು. ಆ ಮರದ ಮೂಲಭಾಗವನ್ನು ರತ್ನದಿಂದಲೂ, ಮಧ್ಯಭಾಗವನ್ನು ವಜ್ರದಿಂದಲೂ, ಮೇಲುಭಾಗವನ್ನು ವೈಢೂರ್ಯದಿಂದಲೂ, ಅದರ ವೇದಿಕೆಯನ್ನು ಸೂರ್ಯಕಾಂತ ಅಥವಾ ಚಂದ್ರಕಾಂತ ಮಣಿಯಿಂದಲೂ ಮಾಡಿಸಬೇಕು.

ಆ ಸುವರ್ಣವೃಕ್ಷದ ಮೂಲಭಾಗದಲ್ಲಿ ಇಂದ್ರಾದಿ ದಿಕ್ಪಾಲಕರಿಂದ ಕೂಡಿದ ಶಿವಲಿಂಗವನ್ನು ಸ್ಥಾಪಿಸಬೇಕು. ತುಲಾಭಾರ ದಾನವಿಧಿಯಲ್ಲಿಹೇಳಿದಂತೆ ಜಪಹೋಮಾದಿಗಳನ್ನು ಮಾಡಿಸಬೇಕು. ಆ ವೃಕ್ಷದಲ್ಲಿ ಮೂಲ, ಮಧ್ಯ, ಮೇಲ್ಭಾಗದಲ್ಲಿ ಶಿವನನ್ನು, ಅವನ ಪರಿವಾರ ದೇವತೆಗಳನ್ನು ಯಥಾಶಾಸ್ತ್ರ ಪೂಜೆಮಾಡಿ, ಜಪ ಹೋಮಾದಿಗಳನ್ನು ಆಚರಿಸಿ ಶಿವನಿಗಾಗಲಿ ವಿಹಿತ ಕರ್ಮಾನುಷ್ಠಾನ ಮಾಡುವ ಕರ್ಮಯೋಗಿಗಾಗಲಿ ಭಸ್ಮಧಾರಿಗಳಾದ ಬ್ರಾಹ್ಮಣರಿಗಾಗಲಿ ದಾನಕೊಡಬೇಕು. ಹೀಗೆ ವಿಧಿಪೂರ್ವಕವಾಗಿ ಕಲ್ಪವೃಕ್ಷವನ್ನು ದಾನಮಾಡಿದವನು. ಮುಂದಿನ ಜನ್ಮದಲ್ಲಿ ಸಾರ್ವಭೌಮನಾಗುವನು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಕಲ್ಪವೃಕ್ಷ ದಾನ*
*ಎಂಬ ಮೂವತ್ತಮೂರನೆಯ ಅಧ್ಯಾಯ ಮುಗಿದುದು*



## ಗಣೇಶೇಶ ದಾನ

ಅಧ್ಯಾಯ - ೩೪

**ಸನತ್ಕುಮಾರ :-** ಮುನಿಗಳೆ, ಈಗ ನಿಮಗೆ ಗಣೇಶೇಶನ ಅರ್ಥಾತ್ ಈಶ್ವರನ ದಾನದ ಕರ್ಮವನ್ನು ಹೇಳುತ್ತೇನೆ. ಹಿಂದೆ ಹೇಳಿದಂತೆ ದೇವತಾಮಂಟಪವನ್ನು ನಿರ್ಮಿಸಿ ಅದರಲ್ಲಿ ಇಂದ್ರಾದಿ ಲೋಕಪಾಲಕರಿಂದೊಡಗೂಡಿದ ಶಿವನನ್ನು ಸ್ಥಾಪಿಸಬೇಕು. ಹತ್ತು ಸುವರ್ಣ ನಾಣ್ಯ, ಪರಿಮಿತವಾದ ಬಂಗಾರದಿಂದ ಅಷ್ಟದಿಕ್ಪಾಲಕರನ್ನು ಮಾಡಿಸಿ ಅವರನ್ನು ಸಕಲ ಆಭರಣಗಳಿಂದ ಅಲಂಕರಿಸಬೇಕು. ಮಧ್ಯದಲ್ಲಿ ಇರಿಸಿದ ಮಹಾದೇವನೊಡನೆ ಎಲ್ಲ ದಿಕ್ಪಾಲಕರನ್ನು ಶಾಸ್ತ್ರೋಕ್ತವಾಗಿ ಪೂಜಿಸಬೇಕು. ಎಂಟುದಿಕ್ಕುಗಳಲ್ಲಿ ಎಂಟು ಕುಂಡಗಳನ್ನು ನಿರ್ಮಿಸಬೇಕು. ಆ ಕುಂಡಗಳಲ್ಲಿ ಪೂರ್ವೋಕ್ತ ವಿಧಿಯಿಂದ ಹೋಮ ಮಾಡಬೇಕು. ಶಿವಪೂಜಾದಿ ಪಂಚಾವರಣ ಪೂಜೆಯಿಂದಾಗಲೀ, ಶೈವ ಪರಂಪರಾಪ್ರಾಪ್ತವಾದ ಪೂಜಾವಿಧಾನದಿಂದಾಗಲೀ ಶಿವಾರ್ಚನೆಯನ್ನು ಮಾಡಬೇಕು.

ಏಳು ಜನ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿ ಕೂಡಿಸಬೇಕು. ಓರ್ವ ಕನ್ಯೆಯನ್ನು ಉತ್ತರಾಭಿಮುಖವಾಗಿ ಆಸನದ ಮೇಲೆ ಕೂಡಿಸಬೇಕು. ಆ ಬ್ರಾಹ್ಮಣರನ್ನೂ ಈ ಕನ್ಯೆಯನ್ನೂ ಆಯಾ ಮಂತ್ರಗಳಿಂದ ಪೂಜೆಮಾಡಿ ಆಯಾ ದೇವತಾ ಪ್ರಸಾದರೂಪವಾದ ಪ್ರತಿಮೆಗಳನ್ನು ದಾನ ಕೊಡಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಗಣೇಶೇಶ ದಾನ*
*ಎಂಬ ಮೂವತ್ತನಾಲ್ಕನೆಯ ಅಧ್ಯಾಯ ಮುಗಿದುದು*



## ಸುವರ್ಣಧೇನು ದಾನ

ಅಧ್ಯಾಯ - ೩೫

**ಸನತ್ಕುಮಾರ :-** ಬ್ರಾಹ್ಮಣರೆ, ಈಗ ಸುವರ್ಣಧೇನು ದಾನದವಿಧಿಯನ್ನು ಹೇಳುವೆನು. ಈ ಹೇಮಧೇನು ದಾನವು ವಿಧಿಪೂರ್ವಕವಾಗಿ ಮಾಡಿದರೆ ಸರ್ವಪಾಪಗಳನ್ನು ಪರಿಹರಿಸುವದು. ದುರ್ಭಿಕ್ಷವನ್ನು ಹೋಗಲಾಡಿಸುವದು. ದುಷ್ಟಗ್ರಹಗಳ ಪೀಡೆಯನ್ನು ನಿವಾರಿಸುವದು.

ಕನಿಷ್ಠ ನೂರುಸುವರ್ಣನಾಣ್ಯಗಳಿಂದ ಒಂದು ಬಂಗಾರದ ಆಕಳವನ್ನು ಮಾಡಿಸಬೇಕು. ಅದರ ಗೊರಸಿನ ಮುಂಭಾಗವನ್ನು ವಜ್ರದಿಂದ, ಕೋಡನ್ನು ಪದ್ಮರಾಗ ಮಣಿಗಳಿಂದ, ಸ್ತನಗಳನ್ನು ವೈಡೂರ್ಯಗಳಿಂದ, ಬಾಲವನ್ನು ಇಂದ್ರನೀಲ ಮಣಿಯಿಂದ, ಹಲ್ಲುಗಳನ್ನು ಪುಷ್ಯರಾಗ ಮಣಿಗಳಿಂದ ಮಾಡಿಸಬೇಕು. ಅದರ ಕರುವನ್ನು ಹತ್ತು ಸುವರ್ಣನಾಣ್ಯಗಳಿಂದ ಮಾಡಿಸಿ ರತ್ನಾದ್ಯಾಭರಣಗಳಿಂದ ಅಲಂಕರಿಸಬೇಕು. ವೇದಿಕೆಯ ಮಧ್ಯಭಾಗದಲ್ಲಿ ಒಂದು ಚಚ್ಚೌಕ ಮಂಡಲವನ್ನು ರಚಿಸಿ ಅದರ ನಡುವೆ ಕರುವಿನೊಂದಿಗೆ ಹಸುವನ್ನು ಸ್ಥಾಪಿಸಬೇಕು. ಎರಡು ವಸ್ತ್ರಗಳನ್ನು ಎರಡಕ್ಕೂ ಹೊದಿಸಿ, ಗಾಯತ್ರಿ

ಮಂತ್ರದಿಂದ ಪೂಜಿಸಿ, ಏಕಾಗ್ನಿ ವಿಧಾನದಿಂದ ಹೋಮವನ್ನು ಮಾಡಬೇಕು. ಸಮಿಧೆ, ಆಜ್ಯದ್ರವ್ಯಗಳಿಂದ ಹೋಮಮಾಡಿ ಪರಮೇಶ್ವರನನ್ನು ಪೂಜಿಸಬೇಕು. ಶಿವಲಿಂಗವನ್ನು ಹಾಲು, ಮೊಸರು, ಗೋಘೃತ ಮುಂತಾದ ಪಂಚಾಮೃತ ದ್ರವ್ಯದಿಂದ ಅಭಿಷೇಕಮಾಡಬೇಕು. ಅನಂತರ ಗಾಯತ್ರೀ ಮಂತ್ರವನ್ನು ಉಚ್ಚರಿಸಿ ಶಿವನಿಗೆ ವತ್ಸ ಸಹಿತವಾದ ಆ ಬಂಗಾರದ ಹಸುವನ್ನು ದಾನಮಾಡಬೇಕು. ಮೂವತ್ತು ಸುವರ್ಣ ನಾಣ್ಯಗಳನ್ನು ದಕ್ಷಿಣಾರೂಪವಾಗಿ ಜ್ಞಾನಿಗೆ ದಾನನೀಡಬೇಕು.

*ಲಿಂಗಮಹಾಪುರಾಣ ಉತ್ತರಭಾಗ ಸುವರ್ಣಧೇನು ದಾನವಿಧಿ*
*ಎಂಬ ಮೂವತ್ತೈದನೆಯ ಅಧ್ಯಾಯ ಮುಗಿದುದು*



## ಸುವರ್ಣಲಕ್ಷ್ಮೀ ದಾನವಿಧಿ

ಅಧ್ಯಾಯ - ೩೬

**ಸನತ್ಕುಮಾರ :-** ಋಷಿಗಳೇ, ಅಪಾರ ಸಂಪತ್ತನ್ನು ಕೊಡುವ ಸುವರ್ಣಲಕ್ಷ್ಮೀ ದಾನ ವಿಧಿಯನ್ನು ಹೇಳುತ್ತೇನೆ. ಅಲಂಕೃತವಾದ ಒಂದು ಮಂಟಪದ ಮಧ್ಯದಲ್ಲಿ ವೇದಿಕೆಯನ್ನು ನಿರ್ಮಿಸಿ ಅದರಲ್ಲಿ ಬಂಗಾರದ ಲಕ್ಷ್ಮೀಮೂರ್ತಿಯನ್ನು ಸ್ಥಾಪಿಸಬೇಕು. ಆ ಲಕ್ಷ್ಮೀಮೂರ್ತಿಯನ್ನು ಸಾವಿರ, ಐದುನೂರು, ಎರಡೂವರೆ ನೂರು ಕನಿಷ್ಠ ಒಂದು ನೂರು ಸುವರ್ಣ ನಾಣ್ಯಗಳಿಂದ ಮಾಡಿಸಬೇಕು. ಬಗೆಬಗೆಯ ಆಭರಣಗಳಿಂದ ಅದನ್ನು ಅಲಂಕರಿಸಬೇಕು. ಆ ಪ್ರತಿಮೆಯ ಬಲಪಾರ್ಶ್ವದಲ್ಲಿ ವಿಷ್ಣುವಿನ ಮೂರ್ತಿಯನ್ನು ಸ್ಥಾಪಿಸಿ ಪೂಜೆಮಾಡಬೇಕು. ವಿಷ್ಣುವನ್ನು ವಿಷ್ಣುಗಾಯತ್ರೀ ವಿಧಾನದಿಂದಲೂ, ಲಕ್ಷ್ಮೀದೇವಿಯನ್ನು ಉದ್ದೇಶಿಸಿ ಶ್ರೀಸೂಕ್ತ ವಿಧಾನದಿಂದಲೂ ಹೋಮವನ್ನು ಮಾಡಬೇಕು.

ಮೊದಲು ಸಮಿಧಾಹೋಮವನ್ನುಮಾಡಿ ನೂರಾಎಂಟು ಸಲ ಬ್ರಾಹ್ಮಣರಿಂದ ಆಜ್ಯಾಹುತಿಗಳಿಂದ ಪ್ರತ್ಯೇಕವಾಗಿ ಹೋಮವನ್ನು ಮಾಡಿಸಬೇಕು. ಅನಂತರ ಮಹಾದೇವನನ್ನು ಶಾಸ್ತ್ರೋಕ್ತವಿಧಿಯಿಂದ ಪೂಜೆಮಾಡಬೇಕು. ಆ ಪ್ರತಿಮೆಯ ಪರಿಮಾಣದ ಇಪ್ಪತ್ತನೆಯ ಒಂದು ಅಂಶವನ್ನು ದಕ್ಷಿಣಾರೂಪವಾಗಿ ಬ್ರಾಹ್ಮಣರಿಗೆ ದಾನಕೊಡಬೇಕು. ಇತರ ಬ್ರಾಹ್ಮಣರಿಗೂ ಹಿಂದೆ ಹೇಳಿದ ದಕ್ಷಿಣೆಯ ಅರ್ಧದಷ್ಟು ದಾನಮಾಡಬೇಕು. ಅನಂತರ ಶಿವಯೋಗಿಯು ಶಿವನಿಗಾಗಿ ಹೋಮ ಮಾಡಬೇಕು.

*ಇತಿ ಲಿಂಗಮಹಾಪುರಾಣ ಸುವರ್ಣಲಕ್ಷ್ಮೀ ದಾನವಿಧಿ ನಿರೂಪಣ*
*ಎಂಬ ಮೂವತ್ತಾರನೆಯ ಅಧ್ಯಾಯ ಮುಗಿದುದು*



## ತಿಲಧೇನು ದಾನ

## ಅಧ್ಯಾಯ - ೩೭

**ಸನತ್ಕುಮಾರ :-** ಋಷಿಗಳೇ, ತಿಲಧೇನು ದಾನವಿಧಿಯನ್ನು ಹೇಳುತ್ತೇನೆ. ಒಂದು ಮಂಟಪವನ್ನು ನಿರ್ಮಿಸಿ ಅದರ ಮಧ್ಯದ ವೇದಿಕೆಯ ಮೇಲೆ ಮಂಡಲವನ್ನು ರಚಿಸಬೇಕು. ಅಲ್ಲಿ ಪೂಜಾದಿಕಾರ್ಯಗಳನ್ನು ನೆರವೇರಿಸಬೇಕು. ಶಿವಪೂಜೆಯನ್ನು ಮಾತ್ರ ಪಶ್ಚಿಮ ದಿಕ್ಕಿನಲ್ಲಿ ನೆರವೇರಿಸಬೇಕು. ಮಂಡಲದ ನಟ್ಟನಡುವೆ ಒಂದು ಕಮಲವನ್ನು ಬರೆದು ವಸ್ತ್ರಗಳಿಂದ ಮುಚ್ಚಿ ಅದರ ನಟ್ಟನಡುವೆ ತಿಲಪುಷ್ಪ (ಎಳ್ಳಿನ ಹೂವ)ವನ್ನು ಇರಿಸಿ ಅದರ ಮೇಲೆ ಬಂಗಾರದ ಕಮಲವನ್ನು ಸ್ಥಾಪಿಸಬೇಕು. ಆ ಪದ್ಮವನ್ನು ಮೂವತ್ತು, ಹದಿನೈದು, ಏಳೂವರೆ, ಕನಿಷ್ಠ ಐದು ನಾಣ್ಯಗಳಿಂದಾಗಲಿ ಮಾಡಿಸಬೇಕು. ಇದಕ್ಕೂ ಅಸಮರ್ಥನಾದವನು ಅದರ ಅರ್ಧ ಮತ್ತೂ ಅದರರ್ಧಾಂಶದಿಂದ ಮಾಡಿಸಬೇಕು. ಆ ಸುವರ್ಣ ಪದ್ಮವನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ ಅದರ ಉತ್ತರ ದಿಕ್ಕಿನಲ್ಲಿ, ಹನ್ನೊಂದು ಜನ ಬ್ರಾಹ್ಮಣರನ್ನು ಕೂಡಿಸಿ ಅವರಿಗೆ ಗಂಧಪುಷ್ಪಾದಿಗಳನ್ನು ಕೊಟ್ಟು ಅವರನ್ನು ಪೂಜಿಸಬೇಕು. ಆ ಎಳ್ಳು ಹೂವಿನ ಮೇಲೆ ಹೊದಿಸಿದ ವಸ್ತ್ರವನ್ನೂ, ಬೇರೆ ಹೊದೆಯುವ ವಸ್ತ್ರವನ್ನೂ, ತಲೆಗೆ ಸುತ್ತುವ ವಸ್ತ್ರ, ಪೇಟಾ ಮುಂತಾದವುಗಳನ್ನು ರತ್ನಾಲಂಕೃತವಾದ ಕುಂಡಲಗಳನ್ನೂ ಅವರಿಗೆ ದಾನ ಮಾಡಬೇಕು.

ಪ್ರತಿಯೊಬ್ಬ ವಿಪ್ರನಿಗೂ ಒಂದೊಂದು ಬಂಗಾರದ ಉಂಗುರವನ್ನು ದಾನಮಾಡಬೇಕು. ಅವರ ಮುಂಭಾಗದಲ್ಲಿ ಹನ್ನೊಂದು ವಸ್ತ್ರಗಳನ್ನು ಹಾಸಿ ಅವುಗಳ ಮೇಲೆ ಎಳ್ಳು ಮುಂತಾದವುಗಳನ್ನು ಇಟ್ಟು ಆ ಎಳ್ಳುಗಳ ಮೇಲೆ ಭಾರವಾಗಿರುವ ಕಂಚಿನ ಪಾತ್ರೆಯನ್ನು ದಾನಮಾಡಬೇಕು. ಕಬ್ಬಿನ ಗಳವನ್ನು ಹನ್ನೊಂದು ಭಾಗ ಮಾಡಿ ಅವರಿಗೆ ದಾನನೀಡಬೇಕು. ಎರಡು ಬಂಗಾರದ ನಾಣ್ಯಗಳಿಂದ ಗೋವಿನ ಕೋಡುಗಳನ್ನು, ಎರಡು ಬೆಳ್ಳಿಯ ನಾಣ್ಯಗಳಿಂದ ಗೋವಿನ ಗೊರಸುಗಳನ್ನು ಮಾಡಿಸಿ ತಿಲಪಾತ್ರೆ ಗಳಲ್ಲಿರಿಸಬೇಕು. ಹನ್ನೊಂದು ರುದ್ರರ ಸ್ಥಾನದಲ್ಲಿ ಏಕಾದಶರುದ್ರರ ಮಂತ್ರಗಳಿಂದ ಆಹ್ವಾನಿಸಲ್ಪಟ್ಟ ಹನ್ನೊಂದು ಬ್ರಾಹ್ಮಣರಿಗೆ ಅವುಗಳನ್ನು ದಾನ ನೀಡಬೇಕು.

ಇದೇ ರೀತಿಯಾಗಿ ಪದ್ಮದ ಪೂರ್ವದಿಕ್ಕಿನಲ್ಲಿ ಹನ್ನೆರಡು ಜನ ಬ್ರಾಹ್ಮಣರನ್ನು ಕೂಡಿಸಿ, ಪೂಜಿಸಿ ದ್ವಾದಶಾದಿತ್ಯರ ಮಂತ್ರಗಳಿಂದ ಆಹ್ವಾನಿಸಿ ದಾನವನ್ನು ಕೊಡಬೇಕು. ಪದ್ಮದ ದಕ್ಷಿಣಭಾಗದಲ್ಲಿ ಹದಿನಾರು ಜನ ಬ್ರಾಹ್ಮಣರನ್ನು ಕೂಡಿಸಿ ವಿಘ್ನೇಶ್ವರನ ಮಂತ್ರಗಳಿಂದ ದಾನಮಾಡಿಸಬೇಕು. ಅಥವಾ ದ್ವಾದಶಾದಿತ್ಯರ ಸ್ಥಾನಗಳಲ್ಲಿ ಬ್ರಾಹ್ಮಣರನ್ನು ಪೂಜಿಸಿ ಅವರಿಗೆ ರುದ್ರದಾನವನ್ನಾಗಲಿ ಪ್ರತಿಮಾದಾನವನ್ನಾಗಲಿ ಮಾಡಬೇಕು. ಈ ದಾನವಿಧಿಯಲ್ಲಿ ಅರಸನು ಪದ್ಮವನ್ನು ಮಾತ್ರ ವಿನ್ಯಾಸಮಾಡಿ ಉಳಿದ ಕಾರ್ಯಗಳನ್ನು ಪುರೋಹಿತನ ಮೂಲಕ ಮಾಡಿಸಬೇಕು. ಅವನಿಗೆ ಐದು ಚಿನ್ನದ ನಾಣ್ಯಗಳನ್ನು ದಕ್ಷಿಣಾ ರೂಪದಿಂದ ದಾನನೀಡಬೇಕು.

*ಇತಿ ಲಿಂಗಮಹಾಪುರಾಣ ಉತ್ತರ ಭಾಗ ತಿಲಧೇನು ದಾನ*
*ಎಂಬ ಮೂವತ್ತೇಳನೆಯ ಅಧ್ಯಾಯ ಮುಗಿದುದು*

**ಸನತ್ಕುಮಾರ :-** ಋಷಿಗಳೆ, ಸಹಸ್ರಗೋದಾನದ ವಿಧಿಯನ್ನು ಹೇಳುತ್ತೇನೆ. ಕರುಗಳಿಂದಕೂಡಿದ ಸಾವಿರಗೋವುಗಳನ್ನು ತಂದು ಅವುಗಳಲ್ಲಿ ಎಂಟು ಗೋವುಗಳನ್ನು ಯಥಾಶಾಸ್ತ್ರವಾಗಿ ಪೂಜೆಮಾಡಬೇಕು. ಆ ಎಲ್ಲ ಹಸುಗಳ ಕೊಂಬುಗಳನ್ನು ಸುವರ್ಣ ನಾಣ್ಯಗಳಿಂದ ಅಲಂಕರಿಸಿ ಕೊರಳಿನಲ್ಲಿ ಹಾಗೂ ಗೊರಸುಗಳಲ್ಲಿ ಬೆಳ್ಳಿಯ ನಾಣ್ಯಗಳನ್ನೂ ಕಿವಿಯಲ್ಲಿ ವಜ್ರಾಭರಣಗಳನ್ನೂ ಕಟ್ಟಬೇಕು.

ಆ ಎಲ್ಲ ಗೋವತ್ಸಗಳನ್ನು ಪೂಜೆಮಾಡಿ ಮಹಾದೇವನಿಗೆ ಸಮರ್ಪಣೆ ಮಾಡಬೇಕು. ಬ್ರಾಹ್ಮಣರಿಗೆ ಅಥವಾ ಶಿವ ಭಕ್ತರಿಗೆ ಬೇರೆ ಬೇರೆಯಾಗಿ ಹತ್ತು, ಐದು, ಎರಡುವರೆ ಕನಿಷ್ಠ ಒಂದು ನಾಣ್ಯವನ್ನಾದರೂ ದಾನ ಕೊಡಬೇಕು. ಗೋವಿನ ಸ್ತೋತ್ರ ರೂಪ ಮಂತ್ರವನ್ನು ಜಪ ಮಾಡಬೇಕು.

**''ಗಾವೋ ಮಮಾಗ್ರತೋ ನಿತ್ಯಂ ಗಾವೋ ನಃ ಪೃಷ್ಠತಸ್ತಥಾ ।**
**ಹೃದಯೇ ಮೇ ಸದಾ ಗಾವೋ ಗವಾಂ ಮಧ್ಯೇ ವಸಾಮ್ಯಹಂ॥''**

''ನನ್ನ ಮುಂಭಾಗದಲ್ಲಿ ಹಾಗೂ ನನ್ನ ಹಿಂಭಾಗದಲ್ಲಿಯೂ ಹಸುಗಳು ಯಾವಾಗಲೂ ಇರಲಿ. ನನ್ನ ಹೃದಯದಲ್ಲಿಯೂ ಹಸುಗಳ ಹೆಸರು ಹಸಿರಾಗಿಯೇ ಇರಲಿ. ನಾನು ಯಾವಾಗಲೂ ಹಸುಗಳ ಮಧ್ಯದಲ್ಲಿಯೇ ವಾಸಮಾಡುವೆನು.'' ಹೀಗೆ ಭಾವಿಸಿ ಸೋತ್ರಮಾಡಿ ಗೋವುಗಳನ್ನು ಯೋಗ್ಯರಾದ ವಿಪ್ರರಿಗೆ ದಾನಮಾಡಿದರೆ ಆ ಗೋವುಗಳ ಮೈಮೇಲಿರುವ ಕೂದಲುಗಳಷ್ಟುಕಾಲ ದಾನನೀಡಿದವನು ಸ್ವರ್ಗಲೋಕದಲ್ಲಿದ್ದು ಸುಖವನ್ನನುಭವಿಸುತ್ತಾನೆ.

*ಇತಿ ಲಿಂಗಮಹಾಪುರಾಣ ಉತ್ತರ ಭಾಗ ಸಹಸ್ರಗೋದಾನದ ವಿಧಿ ವಿಧಾನ ಎಂಬ ಮೂವತ್ತೆಂಟನೆಯ ಅಧ್ಯಾಯ ಮುಗಿದುದು*

—o—

## ಹಿರಣ್ಯಾಶ್ವ ದಾನವಿಧಿ

**ಅಧ್ಯಾಯ - ೩೯**

**ಸನತ್ಕುಮಾರ :-** ವಿಪ್ರರೆ, ಸುವರ್ಣಮಯ ಅಶ್ವದಾನದ ಕ್ರಮವನ್ನು ಹೇಳುತ್ತೇನೆ. ಒಂದು ಸಾವಿರದ ಎಂಟು ತೊಲೆ ಅಥವಾ ನೂರಾ ಎಂಟು ತೊಲೆ ಬಂಗಾರದಿಂದ ಸುಂದರವಾದ ಕುದುರೆಯನ್ನು ಮಾಡಿಸಿ ಸಕಲ ಲಕ್ಷಣಗಳಿಂದಲೂ, ಆಯುಧಗಳಿಂದಲೂ ಕೂಡಿದ ರಥವನ್ನು ಮಾಡಿಸಬೇಕು. ರಥದ ನಟ್ಟನಡುವೆ ಬಂಗಾರದಿಂದ ಮಾಡಿಸಿದ ಕುದುರೆಯನ್ನು ಸ್ಥಾಪನೆಮಾಡಿ ಅದು ದೇವೇಂದ್ರನ ಉಚ್ಚೈಶ್ರವ ಕುದುರೆ ಎಂಬ ಭಾವನೆಯಿಂದ ಪೂಜೆಯನ್ನು ಮಾಡಬೇಕು. ಕುದುರೆಯ ಪೂರ್ವದಿಕ್ಕಿನಲ್ಲಿ ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನನ್ನು ಕೂಡಿಸಿ ಅವನನ್ನು ದೇವೇಂದ್ರನ ಭಾವನೆಯಿಂದ ಪೂಜೆಮಾಡಬೇಕು. ಐದು ಬಂಗಾರದ ನಾಣ್ಯಗಳನ್ನು ಆ ಅಶ್ವಸಹಿತವಾಗಿ ಶಿವಭಕ್ತನಿಗೆ ದಾನಕೊಡಬೇಕು. ಅನಂತರ ಬಡವರನ್ನು, ಕುರುಡರನ್ನು, ಅನಾಥರನ್ನು, ಮುದುಕರನ್ನು, ರೋಗಿಗಳನ್ನು, ಸಂಪನ್ನರಾದ ಬ್ರಾಹ್ಮಣರನ್ನು ಕರೆದು ಅನ್ನದಾನವನ್ನು ನೀಡಿ ಸಂತೋಷ ಪಡಿಸಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಹಿರಣ್ಯಾಶ್ವದಾನ ವಿಧಿ*
*ಎಂಬ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿದುದು*



## ಕನ್ಯದಾನ ವಿಧಿ

**ಅಧ್ಯಾಯ - ೪೦**

**ಸನತ್ಕುಮಾರ :-** ಎಲ್ಲ ದಾನಗಳಲ್ಲಿ ಶ್ರೇಷ್ಠವಾದ ಕನ್ಯಾದಾನದ ವಿಧಾನವನ್ನು ಹೇಳುತ್ತೇನೆ.

ಅಂಗ ವೈಕಲ್ಯ ಅಥವಾ ರೋಗ ಇಲ್ಲದಿರುವ ಸಲಕ್ಷಣಳಾದ ಕನ್ಯೆಯನ್ನು ಅವಳ ತಾಯಿ ತಂದೆಗಳಿಗೆ ಹೇರಳವಾಗಿ ಹಣವನ್ನು ಕೊಟ್ಟು ಅವರ ಸಮ್ಮತಿಯಿಂದ ಕರಕೊಂಡು ಬರಬೇಕು. ಕುಲ, ಗೋತ್ರ, ನಕ್ಷತ್ರಗಳನ್ನು ಚೆನ್ನಾಗಿ ನೋಡಿ ವೇದಾಧ್ಯಯನವನ್ನು ಮಾಡಿದ ಶ್ರೋತ್ರಿಯನಾದ ಬ್ರಹ್ಮಚಾರಿಗೆ ದಾನಕೊಡಬೇಕು. ಕನ್ಯೆಯ ಜೊತೆಗೆ ದಾಸದಾಸಿಯರನ್ನು ಹೊಲ, ಮನೆ, ವಸ್ತ್ರಗಳನ್ನು ಕೂಡ ವಧೂ ವರರಿಗೆ ನೀಡಬೇಕು. ಹೀಗೆ ಕುಲಶೀಲಗಳನ್ನು ಪರಿಶೀಲಿಸಿ ಸಂಪನ್ನನಾದ ವರನಿಗೆ ಸಲಕ್ಷಣಳಾದ ಕನ್ಯೆಯನ್ನು ದಾನಮಾಡಿಕೊಟ್ಟರೆ ಅವರಿಂದ ಹುಟ್ಟುವ ಮಕ್ಕಳ ಮೈಮೇಲಿರುವ ಕೂದಲಗಳಷ್ಟು ಸಾವಿರ ವರ್ಷಗಳವರೆಗೆ ರುದ್ರಲೋಕದಲ್ಲಿ ದಾನಿಯು ಸುಖಾವಾಸವನ್ನು ಮಾಡುತ್ತಾನೆ.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಕನ್ಯಾದಾನ ವಿಧಿ*
*ಎಂಬ ನಲವತ್ತನೆಯ ಅಧ್ಯಾಯ ಮುಗಿದುದು*



## ಹಿರಣ್ಯ ವೃಷಭ ದಾನವಿಧಿ

ಅಧ್ಯಾಯ - ೪೧

**ಸನತ್ಕುಮಾರ :-** ಈಗ ಹಿರಣ್ಯ ವೃಷಭ (ಬಂಗಾರದ ಎತ್ತು) ದಾನ ವಿಧಿಯನ್ನು ಹೇಳುತ್ತೇನೆ. ಸಾವಿರತೊಲೆಯ ಅಥವಾ ತನ್ನ ಶಕ್ತಿಗನುಗುಣವಾಗಿ ಬಂಗಾರದಿಂದ ಎತ್ತನ್ನು ಮಾಡಿಸಬೇಕು. ಅದರ ಹಣೆಯಲ್ಲಿ ಅರ್ಧಚಂದ್ರಕಲೆಯ ಆಕಾರದ ಪುಂಡ್ರವನ್ನು ಸ್ಪಟಿಕದಿಂದ, ಗೊರಸನ್ನು ಬೆಳ್ಳಿಯಿಂದ, ಕುತ್ತಿಗೆಯನ್ನು ಪದ್ಮರಾಗದಿಂದ ಏಣಿಯನ್ನು ಗೋಮೇದರತ್ನದಿಂದ ಮಾಡಿಸಬೇಕು. ಅದರ ಕೊರಳಲ್ಲಿ ರತ್ನಖಚಿತವಾದ ಗಂಟೆಗಳ ಮಾಲೆಯನ್ನು ಮಾಡಿಸಿ ಅದರ ನಟ್ಟನಡುವೆ ಶಿವನ ವಿಗ್ರಹವನ್ನು ಒಂದು ಪದಕದಲ್ಲಿ ಮಾಡಿಸಿ ಹಾಕಬೇಕು. ಹಿಂದೆ ಹೇಳದಂತೆ ವೇದಿಕೆಯ ಮೇಲ್ಭಾಗದಲ್ಲಿ ಆ ಎತ್ತನ್ನು ಪಶ್ಚಿಮಕ್ಕೆ ಮುಖಮಾಡಿನಿಲ್ಲಿಸಬೇಕು. ಅದರ ಮೇಲೆ ವೃಷಭಾರೂಢನಾದ ಪರಮೇಶ್ವರನನ್ನು ಗಾಯತ್ರೀಮಂತ್ರದಿಂದ ಪೂಜಿಸಬೇಕು. ಶಿವ ಪೂಜೆಯ ನಂತರ ಆ ಎತ್ತನ್ನು

**''ತೀಕ್ಷ್ಣ ಶೃಂಗಾಯ ವಿದ್ಮಹೇ ಧರ್ಮಪಾದಾಯ ಧೀಮಹಿ ।**
**ತನ್ನೋ ವೃಷಃ ಪ್ರಚೋದಯಾತ್ ॥''**

ಎಂಬ ಮಂತ್ರವನ್ನು ಹೇಳಿ ಆ ಎತ್ತನ್ನು ಪೂಜಿಸಿ ಅದಕ್ಕೆ ತುಪ್ಪ ಅನ್ನ ಮುಂತಾದವುಗಳನ್ನು ತಿನ್ನಿಸಿ ಸಂತೋಷ ಪಡಿಸಬೇಕು. ಪೂಜಿತವಾದ ಆ ವೃಷಭವನ್ನು ಶಿವನಿಗಾಗಲಿ ಶಿವಭಕ್ತರಿಗಾಗಲಿ ದಾನ ನೀಡಬೇಕು. ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ಹಿರಣ್ಯವೃಷಭದಾನ ವಿಧಿ*
*ಎಂಬ ನಲವತ್ತೊಂದನೆಯ ಅಧ್ಯಾಯ ಮುಗಿದುದು*



## ಗಜದಾನವಿಧಿ

ಅಧ್ಯಾಯ - ೪೨

**ಸನತ್ಕುಮಾರ :-** ಈಗ ಗಜದಾನ ವಿಧಿಯನ್ನು ಹೇಳುತ್ತೇನೆ. ತನ್ನ ಶಕ್ತಿಗೆ ಅನುಗುಣವಾಗಿ ಬೆಳ್ಳಿ ಅಥವಾ ಬಂಗಾರದಿಂದ ಒಂದು ಆನೆಯನ್ನು ಮಾಡಿಸಬೇಕು. ಅಷ್ಟಮೀತಿಥಿ, ಅಥವಾ ಯೋಗ್ಯವಾದ ದೇಶಕಾಲದಲ್ಲಿ ಆ ಗಜವನ್ನು ಪೂಜೆಮಾಡಿ ಗಂಗಾಧರನಿಗೆ ಅರ್ಪಿಸಬೇಕು. ಮೊದಲು ಶಿವ ಪೂಜೆಯನ್ನು ಮಾಡಿ ಬಳಿಕ ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನಲ್ಲಿ ಶಿವನಭಾವನೆಯನ್ನು ಇಟ್ಟು ಅವನಿಗೆ ಬಂಗಾರ ಅಥವಾ ಬೆಳ್ಳಿಯಿಂದ ಮಾಡಿದ ಆ ಆನೆಯನ್ನು ದಾನಕೊಡಬೇಕು. ಈ ಗಜ ದಾನದಿಂದ ಮುಂದೆ ದಾನಿಯು ಬಹುಕಾಲ ಸ್ವರ್ಗ ಲೋಕದಲ್ಲಿ ವಾಸಮಾಡುವನು.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ಗಜದಾನ ವಿಧಿ*
*ಎಂಬ ನಲವತ್ತೆರಡನೆಯ ಅಧ್ಯಾಯ ಮುಗಿದುದು*

—o—

## ಅಷ್ಟದಿಕ್ಪಾಲಕ ದಾನವಿಧಿ

## ಅಧ್ಯಾಯ - ೪೩

**ಸನತ್ಕುಮಾರ :-** ಇಂದ್ರಾದಿ ಅಷ್ಟದಿಕ್ಪಾಲಕರ ದಾನವಿಧಿಯನ್ನು ಹೇಳುತ್ತೇನೆ. ಬಂಗಾರದ ನಾಣ್ಯಗಳಿಂದ ಅಷ್ಟದಿಕ್ಪಾಲಕರನ್ನು ಮಾಡಿಸಿ ಮಂಟಪದ ಮಧ್ಯಭಾಗದಲ್ಲಿ ಆ ಮೂರ್ತಿಗಳನ್ನು ಸ್ಥಾಪಿಸಬೇಕು. ಆ ದಿಕ್ಪಾಲಕರ ಮಧ್ಯದಲ್ಲಿ ಮಹಾದೇವನನ್ನು ಸ್ಥಾಪಿಸಿ ಪೂಜೆಮಾಡಬೇಕು. ಅನಂತರ ಪೂರ್ವ, ಪಶ್ಚಿಮ, ದಿಕ್ಷಿಣ, ಉತ್ತರ ನಾಲ್ಕು ದಿಕ್ಕುಗಳಲ್ಲಿಯೂ ಆಗ್ನೇಯ, ನೈರುತ್ಯ, ವಾಯವ್ಯ ಈಶಾನ್ಯಾದಿ ಉಪದಿಕ್ಕುಗಳಲ್ಲಿಯೂ ಮರಳಿನ ಸ್ಥಂಡಿಲಗಳನ್ನು ರಚಿಸಬೇಕು. ಅವುಗಳ ಮೇಲೆ ವೇದ, ವೇದಾಂಗ ವೇದಾಂತಗಳನ್ನು ಅಧ್ಯಯನಮಾಡಿದ ಸದಾಚಾರಸಂಪನ್ನರಾದ ಎಂಟುಜನ ಬ್ರಾಹ್ಮಣರನ್ನು ಸ್ಥಂಡಿಲ ಮಧ್ಯದಲ್ಲಿ ಇರುವ ಶಿವನಿಗೆ ಅಭಿಮುಖವಾಗಿ ಕೂಡಿಸಬೇಕು. ಇಂದ್ರಾದಿ ಲೋಕಪಾಲಕ ದೇವತಾದಿ ಮಂತ್ರಗಳಿಂದ ಹಾಗೂ ವಸ್ತ್ರಾಭರಣಗಳಿಂದ, ಗಂಧ ಪುಷ್ಪ, ಧೂಪ ದೀಪಗಳಿಂದ ಶಿವ ಪ್ರತೀಕರೆಂದು ಭಾವಿಸಿ ಪೂಜೆಮಾಡಬೇಕು. ಅನಂತರ ಅಗ್ನಿಗೆ ಪೂರ್ವಾಭಿಮುಖವಾಗಿ ನಿಂತು ಸಮಿಧೆ ಹಾಗೂ ತುಪ್ಪಗಳಿಂದ ಹೋಮಮಾಡಿ ಅಗ್ನಿ ಕಾರ್ಯವನ್ನು ನೆರವೇರಿಸಬೇಕು. ಬಳಿಕ ಪೂರ್ವೋಕ್ತ ವಿಧಾನದಿಂದ ಹೋಮಮಾಡಿ ಶಿವಭಕ್ತನಾದ ಪುರೋಹಿತನು ಯಜಮಾನನನ್ನು ಕರೆದು ಅವನ ಕೈಯ್ಯಿಂದ ಆ ಬ್ರಾಹ್ಮಣರ ಪೂಜೆಮಾಡಿಸಬೇಕು. ದಕ್ಷಿಣೆಯನ್ನು ಕೊಡಿಸಬೇಕು. ಬ್ರಾಹ್ಮಣರಿಗೆ ಅಲಂಕಾರಾರ್ಥವಾಗಿ ಪ್ರತ್ಯೇಕವಾಗಿ ಅಷ್ಟದಿಕ್ಪಾಲಕರ ಮಂತ್ರಗಳಿಂದ ಹತ್ತು ಸುವರ್ಣ ನಾಣ್ಯಗಳಿಂದ ನಿರ್ಮಿತವಾದ ಸುವರ್ಣಾಸನಗಳನ್ನು ಕೊಡಬೇಕು. ಇದಕ್ಕೂ ಮೊದಲು ನಂತರ ಪರಮೇಶ್ವರನ ಪೂಜೆಯನ್ನು ಯಜಮಾನನಿಂದ ಮಾಡಿಸಬೇಕು.

*ಇತಿ ಲಿಂಗಮಹಾಪುರಾಣ ಉತ್ತರಭಾಗ ಅಷ್ಟದಿಕ್ಪಾಲಕ ದಾನವಿಧಿ*
*ಎಂಬ ನಲವತ್ತಮೂರನೆಯ ಅಧ್ಯಾಯ ಮುಗಿದುದು*

—o—

## ತ್ರಿಮೂರ್ತಿ ದಾನವಿಧಿ

ಅಧ್ಯಾಯ - ೪೪

**ಸನತ್ಕುಮಾರ** :- ತ್ರಿಮೂರ್ತಿ ದಾನದ ವಿಧಾನವನ್ನು ಹೇಳುತ್ತೇನೆ. ಉಚಿತವಾದ ದೇಶ ಕಾಲಗಳಲ್ಲಿ ಪೂರ್ವೋಕ್ತ ಪ್ರಕಾರದಿಂದ ಮಂಟಪವನ್ನು ನಿರ್ಮಿಸಿ ಅದರಲ್ಲಿ ಕುಂಡವನ್ನು ರಚಿಸಬೇಕು. ಆ ಕುಂಡದಲ್ಲಿ ಸ್ಥಂಡಿಲ, ಅದರಲ್ಲಿ ಶಿವಮೂರ್ತಿ, ಅದರ ಪಕ್ಕದಲ್ಲಿ ವಿಷ್ಣು, ಅನಂತರ ಬ್ರಹ್ಮ ಇವರನ್ನೆಲ್ಲ ಸ್ಥಾಪನೆ ಮಾಡಬೇಕು. ಮೊದಲು ವಿಷ್ಣುವನ್ನು, ಆಮೇಲೆ ಬ್ರಹ್ಮನನ್ನು, ಆ ನಂತರ ಮಹಾದೇವನನ್ನು ಶಾಸ್ತ್ರೋಕ್ತ ಮಂತ್ರಗಳಿಂದ ಪೂಜಿಸಬೇಕು.

**''ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।**
**ತನ್ನೋ ವಿಷ್ಣುಃ ಪ್ರಚೋದಯಾತ್**
**ಬ್ರಹ್ಮ ಬ್ರಾಹ್ಮಣ ವೃದ್ಧಾಯ ಬ್ರಹ್ಮಣೇ ವಿಶ್ವವೇಧಸೇ**
**ಶಿವಾಯ ಹರಯೇ ಸ್ವಾಹಾ ಸ್ವಧಾ ವೌಷಟ್ ವಷಟ್ ತಥಾ ॥''**

ಈ ಮಂತ್ರಗಳನ್ನು ಓಂಕಾರ ಪುರಸ್ಸರವಾಗಿ ಉಚ್ಚರಿಸಿ ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ತ್ರಿಮೂರ್ತಿಗಳನ್ನು ಪೂಜಿಸಬೇಕು. ಅನಂತರ ವಿಧಿಪೂರ್ವಕವಾಗಿ ಸಕಲ ಹೋಮ ದ್ರವ್ಯಗಳಿಂದ ಬೇರೆ ಬೇರೆ ಹೋಮ ಕುಂಡಗಳಲ್ಲಿ ಆ ಆ ಮಂತ್ರಗಳಿಂದ ಹೋಮವನ್ನು ಮಾಡಬೇಕು. ಪುರೋಹಿತನೊಂದಿಗೆ ಇಬ್ಬರು ಋತ್ವಿಜರನ್ನು ಆಹ್ವಾಹಿಸಬೇಕು. ಹರಿಹರ ಬ್ರಹ್ಮ ಈ ತ್ರಿಮೂರ್ತಿಗಳ ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ವಸ್ತ್ರ, ಆಭರಣ ಹಾಗೂ ನೂರಾ ಎಂಟು ನಾಣ್ಯಗಳಿಗೆ ಸಮಾನವಾದ ಹಣವನ್ನು ದಾನಮಾಡಬೇಕು. ಒಬ್ಬನೇ ಒಬ್ಬ ಆಚಾರ್ಯನು ತ್ರಿಮೂರ್ತಿ ಸ್ವರೂಪನಾಗಿದ್ದಾನೆ ಎಂದು ಭಾವಿಸಿ ಬೇರೆ ಬೇರೆ ಬ್ರಾಹ್ಮಣರಿಗೆ ತ್ರಿಮೂರ್ತಿಗಳ ದಾನಮಾಡಬೇಕು. ವಿಧಿ ಪೂರ್ವಕವಾಗಿ ಶಿವಾರ್ಚನೆಯನ್ನು ಮಾಡಿ ಬ್ರಾಹ್ಮಣರಿಗೂ ಬಡ ಬಗ್ಗರಿಗೂ ಭೋಜನ ಮಾಡಿಸಿ ತೃಪ್ತಿಪಡಿಸಬೇಕು.

*ಇತಿ ಲಿಂಗಮಹಾಪುರಾಣ ಉತ್ತರ ಭಾಗ ತ್ರಿಮೂರ್ತಿ ದಾನ ವಿಧಿ ನಿರೂಪಣ*
*ಎಂಬ ನಲವತ್ತನಾಲ್ಕನೆಯ ಅಧ್ಯಾಯ ಮುಗಿದುದು*

—o—

## ಜೀವಚ್ಛ್ರಾದ್ಧವಿಧಿ ನಿರೂಪಣ

ಅಧ್ಯಾಯ - ೪೫

**ಋಷಿಗಳು** :- ಸೂತನೆ, ನೀನು ಷೋಡಶದಾನಗಳವಿಧಿಯನ್ನು ನಮಗೆ ನಿರೂಪಿಸಿದೆ. ಈಗ ಜೀವಚ್ಛ್ರಾದ್ಧದ ವಿಧಾನವನ್ನು ತಿಳಿಸು.

**ಸೂತರು** :- ಈ ಜೀವಚ್ಛ್ರಾದ್ಧದ ವಿಧಿವಿಧಾನಗಳನ್ನು ಪೂರ್ವಕಾಲದಲ್ಲಿ ಬ್ರಹ್ಮದೇವನು ಮನುಮಹಾರಾಜನಿಗೂ ಹಾಗೂ ತನ್ನ ಶಿಷ್ಯರಾದ ವಸಿಷ್ಠ, ಭೃಗು, ಭಾರ್ಗವ ಮುಂತಾದ ಮುನಿ ಮಹರ್ಷಿಗಳಿಗೂ ಹೇಳಿದನು. ಅದನ್ನೇ ನಾನು ನಿಮಗೆ ಈಗ ಬಿತ್ತರಿಸುತ್ತೇನೆ. ಕ್ಷೇತ್ರ, ಪರ್ವತ, ನದಿತೀರ ಅಥವಾ ತನ್ನ ಸ್ವಂತ ಮನೆಗಳಲ್ಲಿ ಮರಣೋನ್ಮುಖನಾದ ಮನುಷ್ಯನು ಈ ಜೀವಚ್ಛ್ರಾದ್ಧವನ್ನು ಆಚರಿಸಬೇಕು. ನಿತ್ಯ ನೈಮಿತ್ರಿಕ ಕರ್ಮಾನುಷ್ಠಾನಗಳನ್ನು ಆಚರಿಸಬೇಕು. ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನಗಳನ್ನು ಮಾಡುವವನೇ ಪ್ರಾಜ್ಞ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಯೋಗಿ ಎಲ್ಲರೂ ಈ ಜೀವಚ್ಛ್ರಾದ್ಧವನ್ನು ಮಾಡಲು ಅಧಿಕಾರಿಗಳಾಗಿರುತ್ತಾರೆ.

ಈ ಜೀವಚ್ಛ್ರಾದ್ಧವನ್ನು ಮಾಡುವ ಮೊದಲು ಆ ಭೂಮಿಯನ್ನು ಗಂಧ, ವರ್ಣ ರಸ ಮುಂತಾದವುಗಳಿಂದ ಪರೀಕ್ಷಿಸಬೇಕು. ಆ ನೆಲದ ಮಣ್ಣು ಸುಗಂಧವಿರಬೇಕು. ಕಪ್ಪು ಬಣ್ಣ ಮಧುರ ರಸ ಇವುಗಳಿಂದ ಕೂಡಿದ ನೆಲವು ಶ್ರೇಷ್ಠವಾಗಿದೆ. ಅದರಲ್ಲಿ ಕಸಕಡ್ಡಿ ಉಳಿಯದಂತೆ ಗುಡಿಸಿ ಮಧ್ಯಭಾಗದಲ್ಲಿ ಒಂದುಹಸ್ತಪ್ರಮಾಣದ ಕುಂಡವನ್ನಾಗಲಿ ಅಥವಾ ಒಂದುಬಾಣಪ್ರಮಾಣದ ಸ್ಥಂಡಿಲವನ್ನಾಗಲಿ ನಿರ್ಮಿಸಬೇಕು. ಗೋಮಯದಿಂದ ಸಾರಿಸಿ ಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಬೇಕು. ಅನ್ನದಾನಮಾಡಿ ಸಮಿಧೆಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ಆ ದೇವತೆಗಳನ್ನು ಆವ್ಹಾನಮಾಡಿ ಅಗ್ನಿಯನ್ನು ಪೂಜಿಸಿ ಮುಂದೆ ಹೇಳುವ ಮಂತ್ರಗಳಿಂದ ಸಮಿಧಾ ಹೋಮವನ್ನುಮಾಡಬೇಕು. ಸಮಿಧಾ ಹೋಮವನ್ನು ಮಾಡಿದ ಬಳಿಕ ಪ್ರತ್ಯೇಕವಾಗಿ ಆಯಾ ದೇವತೆಗಳನ್ನು ಉದ್ದೇಶಿಸಿ ಚರುವಿನಿಂದ ಹೋಮವನ್ನುಮಾಡಬೇಕು. ಬಳಿಕ ಬೇರೆ ಬೇರೆ ಪಾತ್ರೆಗಳಲ್ಲಿ ಸಂಸ್ಕೃತವಾದ ಘೃತವನ್ನು ಹೋಮಮಾಡಬೇಕು. ಹೋಮಮಾಡುವಾಗ ಪೃಥಿವ್ಯಾದಿ ಪಂಚತತ್ವಗಳನ್ನು ಮನಸ್ಸಿನಿಂದ ಸ್ಮರಣೆ ಮಾಡುತ್ತ ಹೋಮ ಮಾಡಬೇಕು.

''ಓಂ ಭೂಃ ಬ್ರಹ್ಮಣೇ ನಮಃ ॥ ಓಂ ಭೂಃ ಬ್ರಹ್ಮಣೇ ಸ್ವಾಹಾ॥ ಓಂ ಭುವಃ ವಿಷ್ಣವೇ ನಮಃ ॥ ಓಂ ಭುವಃ ವಿಷ್ಣವೇ ಸ್ವಾಹಾ ॥ ಓಂ ಸ್ವಃ ರುದ್ರಾಯ ನಮಃ ॥ ಓಂ ಸ್ವಃ ರುದ್ರಾಯ ಸ್ವಾಹಾ ॥ ಓಂ ಮಹಃ ಈಶ್ವರಾಯ ನಮಃ ॥ ಓಂ ಮಹಃ ಈಶ್ವರಾಯ ಸ್ವಾಹಾ ॥ ಓಂ ಜನಃ ಪ್ರಕೃತಯೇ ನಮಃ ॥ ಓಂ ಜನಃ ಪ್ರಕೃತ್ಯೈ ಸ್ವಾಹಾ ॥ ಓಂ ತಪಃ ಮುದ್ಗಲಾಯ ನಮಃ ॥ ಓಂ ತಪಃ ಮುದ್ಗಲಾಯ ಸ್ವಾಹಾ ॥ ಓಂ ಋತಂ ಪುರುಷಾಯ ನಮಃ॥ ಓಂ ಋತಂ ಪುರುಷಾಯ ಸ್ವಾಹಾ ॥ ಓಂ ಸತ್ಯಂ ಶಿವಾಯ ನಮಃ॥ ಓಂ ಸತ್ಯಂ ಶಿವಾಯ ಸ್ವಾಹಾ ॥ ಓಂ ಶರ್ವಧರಾಂ ಮೇ ಗೋಪಾಯ । ಘ್ರಾಣೇಗಂಧಂ ಶರ್ವಾಯ ದೇವಾಯ ಭೂರ್ನಮಃ ॥

ಓಂ ಶರ್ವಂ ಧರಾ ಮೇ ಗೋಪಾಯ । ಘ್ರಾಣೇ ಗಂಧಂ ಶರ್ವಾಯ ದೇವಾಯ ಭೂಃ ಸ್ವಾಹಾ ॥ ಓಂ ಶರ್ವ ಧರಾಂ ಮೇ ಗೋಪಾಯ ಘ್ರಾಣೇ ಗಂಧಂ ಶರ್ವಸ್ಯ ದೇವಸ್ಯ ಪತ್ನ್ಯೈ ಭೂರ್ನಮಃ ॥ ಓಂ ಶರ್ವಧರಾಂ ಮೇ ಗೋಪಾಯ ಘ್ರಾಣೇ ಗಂಧಂ ಶರ್ವಪತ್ನ್ಯೈ ಭೂಃ ಸ್ವಾಹಾ ॥ ಓಂ ಭವ ಜಲಂ ಮೇ ಗೋಪಾಯ ಜಿಹ್ವಾಯಾಂ ರಸಂ ಭವಾಯ ದೇವಾಯ ಭುವೋ ನಮಃ ॥ ಓಂ ಭವ ಜಲಂ ಮೇ ಗೋಪಾಯ ಜಿಹ್ವಾಯಾಂ ರಸಂ ಭವಾಯ ದೇವಾಯ ಭುವಃ ಸ್ವಾಹಾ ॥ ಓಂ ಭವ ಜಲಂ ಮೇ ಗೋಪಾಯ ಜಿಹ್ವಾಯಾಂ ರಸಂ ಭವಸ್ಯ ದೇವಸ್ಯ ಪತ್ನ್ಯೈ ಭುವೋ ನಮಃ ॥ ಓಂ ಭವ ಜಲಂ ಮೇ ಗೋಪಾಯ ಜಿಹ್ವಾಯಾಂ ರಸಂ ಭವಸ್ಯ ಪತ್ನ್ಯೈ ಭುವಃ ಸ್ವಾಹಾ ॥ ರುದ್ರಾಗ್ನಿಂ ಮೇ ಗೋಪಾಯ ನೇತ್ರೇ ರೂಪಂ ರುದ್ರಾಯ ದೇವಾಯ ಸ್ವರೋಂ ನಮಃ ॥ ರುದ್ರಾಗ್ನಿಂ ಮೇ ಗೋಪಾಯ ನೇತ್ರೇ ರೂಪಂ ರುದ್ರಾಯ ದೇವಾಯ ಸ್ವಃ ಸ್ವಾಹಾ॥ ರುದ್ರಾಗ್ನಿಂ ಮೇ ಗೋಪಾಯ ನೇತ್ರೇ ರೂಪಂ ರುದ್ರಸ್ಯ ಪತ್ನ್ಯೈ ಸ್ವರೋಂ ನಮಃ ॥ ರುದ್ರಾಗ್ನಿಂ ಮೇ ಗೋಪಾಯ ನೇತ್ರೇ ರೂಪಂ ರುದ್ರಸ್ಯ ದೇವಸ್ಯ ಪತ್ನ್ಯೈ ಸ್ವಃ ಸ್ವಾಹಾ ॥ ಉಗ್ರ ವಾಯುಂ ಮೇ ಗೋಪಾಯ ತ್ವಚಿ ಸ್ಪರ್ಶ ಮುಗ್ರಾಯ ದೇವಾಯ ಮಹಃ ಸ್ವಾಹಾ ॥ ಉಗ್ರ ವಾಯುಂ ಮೇ ಗೋಪಾಯ ತ್ವಚಿ ಸ್ಪರ್ಶ ಮುಗ್ರಸ್ಯ ದೇವಸ್ಯ ಪತ್ನ್ಯೈ ಮಹರೋಂ ನಮಃ ॥ ಉಗ್ರ ವಾಯುಂ ಮೇ ಗೋಪಾಯ ತ್ವಚಿ ಸ್ಪರ್ಶ ಮುಗ್ರಸ್ಯ ದೇವಸ್ಯ ಪತ್ನ್ಯೈ ಮಹಃ ಸ್ವಾಹಾ ॥ ಭೀಮ ಸುಷಿರಂ ಮೇ ಗೋಪಾಯ ಶ್ರೋತ್ರೇ ಶಬ್ದಂ ಭೀಮಾಯ ದೇವಾಯ ಜನೋ ನಮಃ ॥ ಭೀಮ ಸುಷಿರಂ ಮೇ ಗೋಪಾಯ ಶ್ರೋತ್ರೇ ಶಬ್ದಂ ಭೀಮಾಯ ದೇವಾಯ ಜನಃ ಸ್ವಾಹಾ ॥ ಭೀಮ ಸುಷಿರಂ ಮೇ ಗೋಪಾಯ ಶ್ರೋತ್ರೇ ಶಬ್ದಂ ಭೀಮಸ್ಯ ಪತ್ನ್ಯೈ ಜನೋ ನಮಃ॥ ಭೀಮ ಸುಷಿರಂ ಮೇ ಗೋಪಾಯ ಶ್ರೋತ್ರೇ ಶಬ್ದಂ ಭೀಮಸ್ಯ ದೇವಾಸ್ಯ ಪತ್ನ್ಯೈ ಜನಃ ಸ್ವಾಹಾ ॥ ಈಶ ರಜೋ ಮೇ ಗೋಪಾಯ ದ್ರವ್ಯೇ ತೃಷ್ಣಾಮೀಶಾಯ ದೇವಾಯ ತಪೋ ನಮಃ ॥ ಈಶ ರಜೋ ಮೇ ಗೋಪಾಯ ದ್ರವ್ಯೇ ತೃಷ್ಣಾಮೀಶಾಯ ದೇವಾಯ ತಪಃ ಸ್ವಾಹಾ ॥ (ಈಶ) ರಜೋ ಮೇ ಗೋಪಾಯ ದ್ರವ್ಯೇ ತೃಷ್ಣಾಮೀಶಸ್ಯ ಪತ್ನ್ಯೈ ತಪೋ ನಮಃ॥ ಈಶ ರಜೋ ಮೇ ಗೋಪಾಯ ದ್ರವ್ಯೇ ತೃಷ್ಣಾಮೀಶಸ್ಯ ಪತ್ನ್ಯೈ ತಪಃ ಸ್ವಾಹಾ ॥ ಮಹಾ ದೇವ ಸತ್ಯಂ ಮೇ ಗೋಪಾಯ ಶ್ರದ್ಧಾಂ ಧರ್ಮೇ ಮಹಾದೇವಾಯ ಋತಂ ನಮಃ॥ ಮಹಾ ದೇವ ಸತ್ಯಂ ಮೇ ಗೋಪಾಯ ಶ್ರದ್ಧಾಂ ಧರ್ಮೇ ಮಹಾದೇವಾಯ ಋತಂ ಸ್ವಾಹಾ ॥ ಮಹಾದೇವ ಸತ್ಯ ಮೇ ಗೋಪಾಯ ಶ್ರದ್ಧಾಂ ಧರ್ಮೇ ಮಹಾದೇವಸ್ಯ ಪತ್ನ್ಯೈ ಋತಂ ನಮಃ ॥ ಮಹಾದೇವಾಯ ಸತ್ಯಂ ಮೇ ಗೋಪಾಯ ಶ್ರದ್ಧಾಂ ಧರ್ಮೇ ಮಹಾದೇವಸ್ಯ ಪತ್ನ್ಯೈ ಋತಂ ಸ್ವಾಹಾ ॥ ಪಶುಪತೇ ಪಾಶಂ ಮೇ ಗೋಪಾಯ ಭೋಕ್ತೃತ್ವ ಭೋಗ್ಯಂ ಪಶುಪತಯೇ ದೇವಾಯ ಸತ್ಯಂ ನಮಃ ॥ ಪಶುಪತೇ ಪಾಶಂ ಮೇ ಗೋಪಾಯ ಭೋಕ್ತೃತ್ವ ಭೋಗ್ಯಂ ಪಶುಪತಯೇ ದೇವಸ್ಯ ಸತ್ಯಂ ಸ್ವಾಹಾ ॥ ಓಂ ಪಶುಪತೇ ಪಾಶಂ ಮೇ ಗೋಪಾಯ ಬೋಕ್ತೃತ್ವ ಭೋಗ್ಯಂ ಪಶುಪತೇರ್ದೇವಸ್ಯ ಪತ್ನ್ಯೈ ಸತ್ಯಂ ಸ್ವಾಹಾ ॥ ಓಂ ಶಿವಾಯ ನಮಃ ॥ ಓಂ ಶಿವಾಯ ಸತ್ಯಂ ಸ್ವಾಹಾ ॥ ಏವಂ ಶಿವಾಯ ಹೋತವ್ಯಂ ವಿರಿಂಚಾದ್ಯಂ ಚ ಪೂರ್ವವತ್ ॥ ವಿರಿಂಚಾದ್ಯಂ ಚ ಪೂರ್ವೋಕ್ತಂ ಸೃಷ್ಟಿ ಮಾರ್ಗೇಷು ಸುವ್ರತಾಃ ॥ ಪುನಃ ಪಶುಪತೇಃ

ಪತ್ನೀಂ ತಥಾ ಪಶುಪತಿಂ ಕ್ರಮಾತ್ ॥ ಸಂಪೂಜ್ಯ ಪೂರ್ವವನ್ಮಂತ್ರೈ ರ್ಹೋತವ್ಯಂ ಚ ಕ್ರಮೇಣ ವೈ ॥

ಮೇಲೆ ಹೇಳಿದ ಈ ಎಲ್ಲ ಮಂತ್ರಗಳನ್ನು ಉಚ್ಚರಿಸಿ ಬ್ರಹ್ಮ ವಿಷ್ಣು ಮೊದಲಾದ ಎಲ್ಲ ದೇವತೆಗಳನ್ನು, ಮತ್ತು ಎಲ್ಲ ಜ್ಞಾನೇಂದ್ರಿಯ ಕರ್ಮೇಂದ್ರಿಯ ನಿಯಾಮಕರಾದ ತತ್ವಾಭಿಮಾನಿ ದೇವತೆಗಳನ್ನು, ಆ ಎಲ್ಲ ದೇವತೆಗಳಲ್ಲಿಯೂ ಮಹಾರುದ್ರ ದೇವರು ಸನ್ನಿಹಿತರಾಗಿ ಅವರೆಲ್ಲರಿಂದ ದೇಹೇಂದ್ರಿಯಾದಿ ವ್ಯಾಪಾರಗಳನ್ನು, ಸರ್ವಜಗದ್ವ್ಯಾಪಾರಗಳನ್ನು ಸರ್ವಾಂತರ್ಯಾಮಿಯಾಗಿ ಮಾಡುತ್ತಾರೆಂದು ಅನುಸಂಧಾನಮಾಡಿ ಹೋಮಗಳನ್ನು ಮಾಡಬೇಕು. ಅನಂತರ ಮತ್ತೆ ಮಹಾದೇವರ ಪತ್ನಿಯನ್ನು ಮತ್ತು ಮಹಾದೇವರನ್ನು ಪೂಜೆಮಾಡಿ ಮೇಲೆ ಹೇಳಿದ ಮಂತ್ರಗಳಿಂದ ಮೊದಲು ತುಪ್ಪದಿಂದಲೂ, ನಡುವೆ, ಸಮಿಧಿಗಳಿಂದಲೂ, ಕೊನೆಗೆ ಚರುವಿನಿಂದಲೂ ಹೋಮಮಾಡಬೇಕು.

''ಶರ್ವಧರಾಮ ಮೇ ಘಿಂದಿ '' ಎಂಬ ಮಂತ್ರದಿಂದ ವ್ಯಾಹೃತಿ ಮಂತ್ರವನ್ನು ಹೇಳುತ್ತ ಘೃತದಿಂದ ಸಾವಿರ, ಐನೂರು ಕನಿಷ್ಠ ನೂರು ಸಲವಾದರೂ ಹೋಮಮಾಡಬೇಕು. ಹೀಗೆ ಹೋಮ ಮಾಡಿದ ಬಳಿಕ ವಿರಜ ಎಂಬ ಸಂಜ್ಞೆಯುಳ್ಳ ದೀಕ್ಷಾ ಮಂತ್ರದಿಂದ ನೂರಾ ಎಂಟುಸಲ ಘೃತ ಹೋಮವನ್ನು ಮಾಡಬೇಕು. ವಿರಜಾ ಹೋಮವನ್ನು 'ಪ್ರಾಣೋನಿಮಿಷ್ಟೋ ಅಮೃತಂ ಜುಹೋಮಿ'' ಎಂಬ ದೀಕ್ಷಾ ಮಂತ್ರದಿಂದ ನೂರಾ ಎಂಟು ಆ ವೃತ್ತಿ ಘೃತ ದ್ರವ್ಯಗಳಿಂದ ಹೋಮವನ್ನು ಮಾಡಬೇಕು. ಈ ಕ್ರಮದಿಂದಲೂ ಮತ್ತು ಸಾಮಾನ್ಯ ಶ್ರಾದ್ಧ ಕ್ರಮದಿಂದಲೂ ಹೋಮ ಮಾಡಬೇಕು. ಏಳನೆಯ ದಿನ ಶ್ರಾದ್ಧ ಭೋಜನಕ್ಕೆ ಯೋಗ್ಯರಾದ ಬ್ರಾಹ್ಮಣರನ್ನೂ, ಸನ್ಯಾಸಿಗಳನ್ನೂ ಭೋಜನ ಮಾಡಿಸಬೇಕು. ಬ್ರಾಹ್ಮಣರನ್ನು ಯಥೇಷ್ಟ ಭೋಜನಹಾಕಿ ಸಂತೋಷ ಪಡಿಸಬೇಕು. ಶರ್ವಾದಿ ಇಷ್ಟದೇವತೆಗಳೆಂದು ಆವ್ಹಾನಾ ಮಾಡಿರುವ ಬ್ರಾಹ್ಮಣರಿಗೆ ವಸ್ತ್ರ, ಆಭರಣ, ಹಾಸಿಗೆ, ವಾಹನ, ತಾಮ್ರದ ಪಾತ್ರೆಗಳು, ಸುವರ್ಣ ಧೇನುವನ್ನೂ, ಎಳ್ಳು, ಭೂಮಿ, ದಾಸ, ದಾಸಿಯರು, ದಕ್ಷಿಣೆ ಮುಂತಾದವುಗಳನ್ನು ನೀಡಬೇಕು. ಮೇಲೆ ಹೇಳಿದ ಕ್ರಮವನ್ನು ಅನುಸರಿಸಿ ಯಾವನು ಜೀವಚ್ಛ್ರಾದ್ಧವನ್ನು ಮಾಡಿ ಪೂರೈಸುವನೊ ಅವನು ಮರಣ ಹೊಂದಿದ ಬಳಿಕ ಅವನಿಗೆ ಔರ್ಧ್ವ ದೇಹಿಕ ಕರ್ಮಗಳನ್ನು ಮಾಡುವದು ಐಚ್ಛಿಕ. ಇಂಥ ಜೀವಚ್ಛ್ರಾದ್ಧ ಸೂತಕಾದಿಗಳು ಸರ್ವಥಾ ಇರುವದಿಲ್ಲ.

ಜೀವಚ್ಛ್ರಾದ್ಧವನ್ನು ಮಾಡಿದ ಬಳಿಕ ಧರ್ಮಪತ್ನಿಯಲ್ಲಿ ಹುಟ್ಟಿದ ಅವನ ಮಗನಿಗೆ ಅವನು ಜಾತಕ ನಾಮಕರಣಾದಿಗಳನ್ನು ಮಾಡಬೇಕು. ಅವನೂ ಕೂಡ ನಂತರ ಬ್ರಹ್ಮಜ್ಞಾನಿಯಾಗುತ್ತಾನೆ. ಈ ಜೀವಚ್ಛ್ರಾದ್ಧದ ವಿಧಿಯನ್ನು ಪೂರ್ವದಲ್ಲಿ ಬ್ರಹ್ಮದೇವರು. ತಮ್ಮ ಮಾನಸಪುತ್ರರಿಗೆ ಹೇಳಿದರು. ಅವರಲ್ಲಿ ಸನತ್ಕುಮಾರರು ವೇದವ್ಯಾಸರಿಗೆ ಹೇಳಿದರು. ವೇದವ್ಯಾಸರ ಅನುಗ್ರಹದಿಂದ ನಾನು ಈ ವಿಧಿಯನ್ನು ತಿಳಿದುಕೊಂಡು ಸ್ವಯಂ ಅನುಷ್ಠಾನ ಮಾಡಿ ನಿಮಗೆ ತಿಳಿಸಿದ್ದೇನೆ.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ಜೀವಚ್ಛ್ರಾದ್ಧ ವಿಧಿ ನಿರೂಪಣ ಎಂಬ ನಲವತ್ತೈದನೆಯ ಅಧ್ಯಾಯ ಮುಗಿದುದು*

—o—

## ಲಿಂಗಪ್ರತಿಷ್ಠಾ ಪೂಜಾವಿಧಿ

ಅಧ್ಯಾಯ - ೪೬

**ಋಷಿಗಳು :-** ನಮಗೆ ಇನ್ನು ಮುಂದೆ ವಿಷ್ಣು, ಬ್ರಹ್ಮ, ಇಂದ್ರ, ದುರ್ಗಾ, ಪಾರ್ವತಿ, ಷಣ್ಮುಖ, ಗಣಪತಿ ಮೊದಲಾದ ದೇವತೆಗಳ ಪ್ರತಿಷ್ಠಾಪನಾ ವಿಧಾನವನ್ನು ನಮಗೆ ವಿಸ್ತಾರವಾಗಿ ನಿರೂಪಣೆ ಮಾಡಬೇಕು. ಹೀಗೆ ಋಷಿಗಳು ಕೇಳಿತ್ತಿರುವಾಗಲೇ ಅಲ್ಲಿ ಸಾಕ್ಷಾತ್ ಸರಸ್ವತೀ ದೇವಿಯು ಅಂತರಿಕ್ಷದಲ್ಲಿ ಸನ್ನಿಹಿತಳಾಗಿ ಹೇಳಿದಳು.

**ಸರಸ್ವತಿ :-** ಋಷಿಗಳೇ ಈ ಜಗತ್ತೆಲ್ಲವೂ ಲಿಂಗರೂಪವಾದದ್ದೇ ಇರುತ್ತದೆ. ಆದುದರಿಂದ ಸಕಲವೂ ಲಿಂಗದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಆದುದರಿಂದ ಇತರ ಸರ್ವಧರ್ಮಗಳನ್ನು ಪರಿತ್ಯಜಿಸಿ ಲಿಂಗವನ್ನು ಸ್ಥಾಪಿಸಿ ಪೂಜೆಮಾಡಬೇಕು.

ಋಷಿಗಳೆ, ಪೂರ್ವಕಾಲದಲ್ಲಿ ವಿಷ್ಣು, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳು ಲಿಂಗಾಕಾರನಾದ ಪರಮೇಶ್ವರನನ್ನು ಪ್ರತಿಷ್ಠಮಾಡಿ ಪೂಜೆಮಾಡಿದ್ದರಿಂದಲೇ ಇಂಥ ಉಚ್ಚ ಪದವಿ ಸ್ಥಾನ ಮಾನಗಳನ್ನು ಹೊಂದಿ ಜಗತ್ಪೂಜ್ಯರಾಗಿದ್ದಾರೆ.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ಲಿಂಗಪ್ರತಿಷ್ಠಾ ಪೂಜಾ ವಿಧಿ ನಿರೂಪಣ ಎಂಬ ನಲವತ್ತಾರನೆಯ ಅಧ್ಯಾಯ ಮುಗಿದುದು*



## ಲಿಂಗಮೂರ್ತಿ ಪ್ರತಿಷ್ಠಾಪನಾ ವಿಧಿ

ಅಧ್ಯಾಯ - ೪೭

**ಸೂತರು :-** ಚತುರ್ವಿಧ ಪುರುಷಾರ್ಥ ಸಿದ್ಧಿಗಾಗಿ ನಾನು ನಿಮಗೆ ಲಿಂಗಮೂರ್ತಿ ಪ್ರತಿಷ್ಠಾಪನೆಯ ಕ್ರಮವನ್ನು ಹೇಳುತ್ತೇನೆ ಕೇಳಿರಿ. ಬ್ರಹ್ಮ, ವಿಷ್ಣು, ಮಹೇಶ್ವರಾತ್ಮಕವಾದ ಲಿಂಗವನ್ನು ಬೆಳ್ಳಿ, ಬಂಗಾರ, ತಾಮ್ರದಿಂದ ಮಾಡಿಸಬೇಕು. ಅದರ ಜೊತೆಗೆ ಪೀಠ, ಸೋಮಸೂತ್ರಗಳನ್ನು ಮಾಡಿಸಬೇಕು. ಲಿಂಗದ ಮೂಲಭಾಗದಲ್ಲಿ ಬ್ರಹ್ಮ, ಮಧ್ಯದಲ್ಲಿ ವಿಷ್ಣು, ಅಗ್ರಭಾಗದಲ್ಲಿ ಮಹಾದೇವನು ವಾಸಮಾಡುತ್ತಾರೆ. ಗಂಧ, ಮಾಲ್ಯ, ಧೂಪ, ದೀಪ, ಸ್ನಾನ, ಬಲಿ, ಹೋಮ, ಸ್ತೋತ್ರ, ಮಂತ್ರ, ನೈವೇದ್ಯ ಮೊದಲಾದವುಗಳಿಂದ ಲಿಂಗರೂಪಿಯಾದ ಪರಮೇಶ್ವರನನ್ನು ಪೂಜೆಮಾಡಿದವನು ಗರ್ಭವಾಸಾದಿ ದುಃಖಗಳಿಂದ ರಹಿತನಾಗಿ ಶಿವ ಸಾಯುಜ್ಯವನ್ನು ಹೊಂದುತ್ತಾನೆ. ಪುಣ್ಯಾಹವಾಚನವನ್ನು ಮಾಡಿ ಒಂಬತ್ತು ಕುಂಡಗಳಿಂದ ಹಾಗೂ ಅಷ್ಟದಿಕ್ಪಾಲಕರ ಎಂಟು ಮಂಡಲಗಳಿಂದ ಕೂಡಿರುವ ವೇದಿಕೆಯ ಮಧ್ಯ ಮಂಡಲದಲ್ಲಿ ಶಿವನನ್ನು ಸ್ಥಾಪಿಸಬೇಕು. ಲಿಂಗವನ್ನು ಈಶಾನ್ಯದಿಕ್ಕಿನಿಂದ ಪೂರ್ವಾಭಿಮುಖವಾಗಿ ಸ್ಥಾಪನೆಮಾಡಿ ನವರತ್ನಗಳ ನ್ಯಾಸವನ್ನು ಮಾಡಿ ಪ್ರಧಾನ ಕಲಶವನ್ನು ನ್ಯಾಸ ಮಾಡಬೇಕು. ಪಂಚ ಬ್ರಹ್ಮಾತ್ಮಕ ಶಿವಲಿಂಗವನ್ನು ಶಿವಗಾಯತ್ರಿಯಿಂದಲೂ ಅಥವಾ ಕೇವಲ ಪ್ರಣವ ಮಂತ್ರದಿಂದಲೂ ವೇದಿಕೆಯ ಸುತ್ತಲೂ ಕಲಶಗಳನ್ನು ಸ್ಥಾಪಿಸಬೇಕು. ಮಧ್ಯದ ಕಲಶದಲ್ಲಿ ಶಿವನನ್ನೂ, ದಕ್ಷಿಣ ದಿಕ್ಕಿನ ಕಲಶದಲ್ಲಿ ಪಾರ್ವತೀ ದೇವಿಯನ್ನೂ, ಅವೆರಡರ ಮಧ್ಯದಲ್ಲಿ ಷಣ್ಮುಖನನ್ನೂ, ಈಶಾನ್ಯ ಕುಂಭದಲ್ಲಿ ವಿಷ್ಣುವನ್ನೂ ವಿನ್ಯಾಸ

ಮಾಡಬೇಕು. ಶಿವ, ವಿಷ್ಣು, ಪರಮೇಶ್ವರ ಇವರ ಪ್ರತಿಮೆಗಳನ್ನು ಸ್ಥಾಪಿಸಿದ ಕಲಶದ ನೀರಿನಿಂದ ಲಿಂಗಕ್ಕೆ ಅಭಿಷೇಕವನ್ನು ಮಾಡಬೇಕು. ಈಶಾನಾದಿ ಮಂತ್ರಗಳನ್ನು ನ್ಯಾಸಮಾಡಿ ಶಿವನನ್ನು ಕಲಶಗಳಿಂದ ಸಹಸ್ರಾವೃತ್ತಿ ಸ್ನಾನಮಾಡಿಸಿ ಪೂಜಿಸಬೇಕು. ಸಾವಿರ ಸುವರ್ಣ ನಾಣ್ಯಗಳನ್ನು ಶಿವನಿಗೂ ಉಳಿದ ದೇವತೆಗಳಿಗೆ ಅದರ ಅರ್ಧ ಅಥವಾ ಅದಕ್ಕೂ ಕಿಂಚಿತ್ ಕಡಿಮೆ ದಕ್ಷಿಣೆಯನ್ನು ಶ್ರೋತ್ರಿಯನಿಗೆ ಆದೇವತಾಪ್ರೀತ್ಯರ್ಥ ಕೊಡಬೇಕು. ಈ ಕ್ರಮದಿಂದ ಶಿವಲಿಂಗ ಸ್ಥಾಪನೆ ಮಾಡಿದವನು ಮುಂದೆ ಶಿವಸ್ವರೂಪಿಯಾಗುತ್ತಾನೆ.

*ಇತಿ ಲಿಂಗಮಹಾಪುರಾಣ ಉತ್ತರಭಾಗದ ಲಿಂಗ ಮೂರ್ತಿ ಪ್ರತಿಷ್ಠಾಪನ ವಿಧಿ ನಿರೂಪಣ ಎಂಬ ನಲವತ್ತೇಳನೆಯ ಅಧ್ಯಾಯ ಮುಗಿದುದು*

—o—

## ದೇವತಾ ಪ್ರತಿಷ್ಠಾ ನಿರೂಪಣ

ಅಧ್ಯಾಯ - ೪೮

**ಸೂತರು :-** ಋಷಿವರ್ಯರೆ, ಉಳಿದ ದೇವತೆಗಳ ಪ್ರತಿಷ್ಠಾಕ್ರಮವನ್ನು ಹೇಳುತ್ತೇನೆ. ಪಂಚಾಗ್ನಿ ಸ್ಥಾಪನೆಯ ಕ್ರಮದಿಂದ ಅಥವಾ ದ್ವಾದಶಾಗ್ನಿ ಸ್ಥಾಪನೆಯ ಕ್ರಮದಿಂದ ಸೂರ್ಯನನ್ನು ಸ್ಥಾಪಿಸಬೇಕು. ಎಲ್ಲ ಕುಂಡಗಳನ್ನು ಪದ್ಮದಂತೆ ವರ್ತುಲಾಕಾರವಾಗಿ ನಿರ್ಮಿಸಬೇಕು. ಪಾರ್ವತಿಯ ಕುಂಡವನ್ನು ಯೋನಿ ಅಥವಾ ಖಡ್ಗಾಕಾರದಿಂದ ನಿರ್ಮಿಸಬೇಕು. ಈಶ್ವರನ ಸಂಬಂಧವಾದ ಸಕಲ ಕಾರ್ಯಗಳಲ್ಲಿಯೂ ಗಾಯತ್ರಿಯನ್ನು ಸ್ಥಾಪಿಸಬೇಕು. ಎಲ್ಲದೇವತೆಗಳು ರುದ್ರಾಂಶ ಸಂಭೂತರಾದುದರಿಂದ ಗಾಯತ್ರೀ ಮಂತ್ರದಿಂದ ಎಲ್ಲ ದೇವತೆಗಳಲ್ಲಿಯೂ ಮಹಾದೇವರನ್ನೇ ಅನುಸಂಧಾನಮಾಡಿ ಗಾಯತ್ರೀ ಮಂತ್ರದಿಂದ ಪೂಜೆ, ಪ್ರತಿಷ್ಠೆ ಎಲ್ಲವನ್ನು ಮಾಡಬೇಕು. ಈ ಗಾಯತ್ರಿ ಮಂತ್ರದಲ್ಲಿ ಇಪ್ಪತ್ತೆರಡು ಪ್ರಭೇದಗಳು ಇರುತ್ತವೆ. ಈ ಮಂತ್ರಭೇದದಿಂದ ಹಾಗೂ ರೂಪಭೇದಗಳಿಂದ ಗಾಯತ್ರಿಯು ನಾನಾರೂಪಭೇದಲುಳ್ಳವಳೆಂದು ತಿಳಿದು ಅವಳನ್ನು ಆಸನದಲ್ಲಿ ಸ್ಥಾಪಿಸಬೇಕು. ಓಂಕಾರವನ್ನು ಗಾಯತ್ರಿಯ ಆಸನವೆಂದು ಭಾವಿಸಿ. ಅಲ್ಲಿ ಗಾಯತ್ರೀ ದೇವಿಯನ್ನು ಪೂಜೆ ಮಾಡಬೇಕು. ಗಾಯತ್ರೀ ಮಂತ್ರವು ನಾನಾ ವಿಧವಾಗಿರುವದು. ದೇವತೆಗಳೆಲ್ಲರಿಗೂ ದೇವಗಾಯತ್ರೀ ಎಂದೂ, ವಿಷ್ಣುವಿನ ಅವತಾರಗಳಿಗೆ ವಿಷ್ಣುಗಾಯತ್ರೀ ಎಂದೂ ಹೇಳುತ್ತಾರೆ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ ಇವೆಲ್ಲವೂ ಪಂಚವ್ಯೂಹಾತ್ಮಕವಾಗಿದ್ದು ಇವೆಲ್ಲವು ವಿಷ್ಣುವಿನ ಮೂರ್ತಿ ಭೇದಗಳಾಗಿರುತ್ತವೆ. ಈ ಮೂರ್ತಿಗಳಲ್ಲಿ ವಾಸುದೇವನು ಪ್ರಧಾನ, ಇವುಗಳಲ್ಲದೇ ಎಲ್ಲ ಯುಗಗಳಲ್ಲಿಯೂ ಲೋಕೋದ್ಧಾರಕನಾಗಿ ಇವನು ಅನೇಕ ನಾಮ ರೂಪಗಳನ್ನು ತೊಟ್ಟಿರುತ್ತಾನೆ. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ, ಇವೆಲ್ಲವೂ ವಿಷ್ಣುವಿನ ರೂಪಭೇದಗಳಾಗಿರುತ್ತವೆ. ದೇವ ಗಾಯತ್ರೀ, ವಿಷ್ಣು ಗಾಯತ್ರೀ ಮಂತ್ರದಿಂದ ಅಥವಾ ವಿಷ್ಣು ಪುರುಷ ಸೂಕ್ತಗಳಿಂದ ಗಾಯತ್ರೀದೇವಿಯನ್ನು ಅವಳ ಓಂಕಾರಾಸನದಲ್ಲಿ ಸ್ಥಾಪಿಸಿ ಪೂಜಿಸಬೇಕು. ಇಪ್ಪತ್ತೆರಡು ಬಗೆಯ ಭಿನ್ನ ಭಿನ್ನ ದೇವತಾ ಪ್ರತಿಪಾದಕವಾದ ಗಾಯತ್ರೀ ಮಂತ್ರದ ಪ್ರಭೇದಗಳನ್ನು ಹೇಳುತ್ತೇನೆ.

ತತ್ಪುರುಷಾಯ ವಿದ್ಮಹೇ ವಾಗ್ವಿಶುದ್ಧಾಯ ಧೀಮಹಿ ।
ತನ್ನಃ ಶಿವಃ ಪ್ರಚೋದಯಾತ್ ॥
ಗಣಾಂಬಿಕಾಯೈ ವಿದ್ಮಹೇ ಕರ್ಮಸಿದ್ಧ್ಯೈ ಚ ಧೀಮಹಿ ।
ತನ್ನೋ ಗೌರೀ ಪ್ರಚೋದಯಾತ್ ॥
ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ ।
ತನ್ನಃ ರುದ್ರಃ ಪ್ರಚೋದಯಾತ್ ॥
ತತ್ಪುರುಷಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ।
ತನ್ನೋ ದಂತಿಃ ಪ್ರಚೋದಯಾತ್ ॥
ಮಹಾಸೇನಾಯ ವಿದ್ಮಹೇ ವಾಗ್ವಿಶುದ್ಧಾಯ ಧೀಮಹಿ ।
ತನೋಃ ಸ್ಕಂದಃ ಪ್ರಚೋದಯಾತ್ ॥
ತೀಕ್ಷ್ಣ ಶೃಂಗಾಯ ವಿದ್ಮಹೇ ವೇದ ಪಾದಾಯ ಧೀಮಹಿ ।
ತನ್ನಃ ವೃಷಃ ಪ್ರಚೋದಯಾತ್ ॥
ಹರಿವಕ್ತ್ರಾಯ ವಿದ್ಮಹೇ ರುದ್ರವಕ್ತ್ರಾಯ ಧೀಮಹಿ ।
ತನ್ನೋ ನಂದೀ ಪ್ರಚೋದಯಾತ್ ॥
ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥
ಮಹಾಂಬಿಕಾಯೈ ವಿದ್ಮಹೇ ಕರ್ಮ ಸಿದ್ಧ್ಯೈ ಚ ಧೀಮಹಿ ।
ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥
ಸಮುದ್ಧೃತಾಯೈ ವಿದ್ಮಹೇ ವಿಷ್ಣುನೈಕೇನ ಧೀಮಹಿ ।
ತನ್ನೋ ರಾಧಾ ಪ್ರಚೋದಯಾತ್ ॥
ವೈನತೇಯಾಯ ವಿದ್ಮಹೇ ಸುವರ್ಣ ಪಕ್ಷಾಯ ಧೀಮಹಿ ।
ತನ್ನೋ ಗರುಡಃ ಪ್ರಚೋದಯಾತ್ ॥
ಪದ್ಮೋದ್ಭವಾಯ ವಿದ್ಮಹೇ ವೇದ ವಕ್ತ್ರಾಯ ಧೀಮಹಿ ।
ತನ್ನಃ ಸ್ರಷ್ಟಾ ಪ್ರಚೋದಯಾತ್ ॥
ಶಿವಾಸ್ಯಜಾಯೈ ವಿದ್ಮಹೇ ದೇವ ರೂಪಾಯೈ ಧೀಮಹಿ ।
ತನ್ನೋ ವಾಚಾ ಪ್ರಚೋದಯಾತ್ ॥
ದೇವರಾಜಾಯ ವಿದ್ಮಹೇ ವಜ್ರ ಹಸ್ತಾಯ ಧೀಮಹಿ ।
ತನ್ನಃ ಶಕ್ರಃ ಪ್ರಚೋದಯಾತ್ ॥
ರುದ್ರ ನೇತ್ರಾಯ ವಿದ್ಮಹೇ ಶಕ್ತಿ ಹಸ್ತಾಯ ಧೀಮಹಿ ।
ತನ್ನೋ ವಹ್ನಿಃ ಪ್ರಚೋದಯಾತ್ ॥
ವೈವಸ್ವತಾಯ ವಿದ್ಮಹೇ ದಂಡ ಹಸ್ತಾಯ ಧೀಮಹಿ ।
ತನ್ನೋ ಯಮಃ ಪ್ರಚೋದಯಾತ್ ॥

ನಿಶಾಚರಾಯ ವಿದ್ಮಹೇ ಖಡ್ಗ ಹಸ್ತಾಯ ಧೀಮಹಿ ।
ತನ್ನೋ ನಿರ್ಋತಿಃ ಪ್ರಚೋದಯಾತ್ ॥
ಶುದ್ಧ ಹಸ್ತಾಯ ವಿದ್ಮಹೇ ಪಾಶ ಹಸ್ತಾಯ ಧೀಮಹಿ ।
ತನ್ನೋ ವರುಣಃ ಪ್ರಚೋದಯಾತ್ ॥
ಸರ್ವ ಪ್ರಾಣಾಯ ವಿದ್ಮಹೇ ಯಷ್ಟಿ ಹಸ್ತಾಯ ಧೀಮಹಿ ।
ತನ್ನೋ ವಾಯಃ ಪ್ರಚೋದಯಾತ್ ॥
ಯಕ್ಷೇಶ್ವರಾಯ ವಿದ್ಮಹೇ ಗದಾಹಸ್ತಾಯ ಧೀಮಹಿ ।
ತನ್ನೋ ಯಕ್ಷಃ ಪ್ರಚೋದಯಾತ್ ॥
ಸರ್ವೇಶ್ವರಾಯ ವಿದ್ಮಹೇ ಶೂಲ ಹಸ್ತಾಯ ಧೀಮಹಿ ।
ತನ್ನೋ ರುದ್ರಃ ಪ್ರಚೋದಯಾತ್ ॥
ಕಾತ್ಯಾಯನ್ಯೈ ವಿದ್ಮಹೇ ಕನ್ಯಾಕುಮಾರ್ಯೈ ಧೀಮಹಿ ।
ತನ್ನೋ ದುರ್ಗಾ ಪ್ರಚೋದಯಾತ್ ॥

ಈ ದೇವತಾ ಗಾಯತ್ರೀ ಮಂತ್ರಗಳಿಂದ ಆ ದೇವತೆಗಳನ್ನು ಸ್ಥಾಪಿಸಿ ಪೂಜಿಸಬೇಕು. ಇದರಂತೆ ಸಂಕರ್ಷಣ, ಪ್ರದ್ಯುಮ್ನ ಮೊದಲಾದ ವಿಷ್ಣುವಿನ ರೂಪಗಳನ್ನೂ, ಮತ್ಸ್ಯ ಕೂರ್ಮಾದಿ ಹರಿಯ ದಶಾವತಾರ ರೂಪಗಳನ್ನೂ, ವಿಷ್ಣು ಗಾಯತ್ರಿಯಿಂದ ಸ್ಥಾಪಿಸಿ ಪೂಜಿಸಬೇಕು. ಓಂ ನಮೋ ವಾಸುದೇವಾಯ, ಓಂ ನಮೋ ನಾರಾಯಣಾಯ, ಓಂ ನಮಃ ಸಂಕರ್ಷಣಾಯ ಓಂ ನಮಃ ಪ್ರದ್ಯುಮ್ನಾಯ, ಓಂ ನಮಃ ಅನಿರುದ್ಧಾಯ, ಮುಂತಾದ ವೈಷ್ಣವ ಮಂತ್ರಗಳಿಂದ ವಿಷ್ಣುವಿನ ಸ್ಥಾಪನೆ ಪೂಜನೆಗಳನ್ನು ಮಾಡಬೇಕು. ಒಂಬತ್ತು ಅಥವಾ ಐದು ಕುಂಡಗಳಲ್ಲಿ ಇಲ್ಲವೇ ಒಂದೇ ಕುಂಡದಲ್ಲಿ ಹೋಮಮಾಡಿ ದೇವತಾ ಪ್ರತಿಷ್ಠಾಪನವನ್ನು ಮಾಡಬೇಕು.

ಇದರಂತೆ ಪ್ರಸಾದ ಪ್ರತಿಷ್ಠಾ ವಿಧಿಯನ್ನು ಶಾಸ್ತ್ರೋಕ್ತವಾಗಿ ಮಾಡಬೇಕು. ವೃಷ, ಅಗ್ನಿ, ಮಾತ್ರ, ವಿಘ್ನೇಶ, ಷಣ್ಮುಖ, ಶ್ರೇಷ್ಠಾ, ದುರ್ಗಾ, ಚಂಡಿ ಈ ಎಂಟು ಅಷ್ಟಾವರಣ ದೇವತೆಗಳನ್ನು ಈಶ್ವರನ ಸುತ್ತಲೂ ಅಷ್ಟದಿಕ್ಕುಗಳಲ್ಲಿ ಸ್ಥಾಪಿಸಬೇಕು. ಅಷ್ಟ ಲೋಕಪಾಲಕರನ್ನೂ, ರುದ್ರನ ಪ್ರಮಥಗಣಗಳಾದ ಗಣೇಶಾದಿಗಳನ್ನು ಸ್ಥಾಪಿಸಬೇಕು.

ಉಮಾ, ಚಂಡಿ, ನಂದಿ, ಮಹಾಕಾಲ, ಮಹಾಮುನಿ, ವಿಘ್ನೇಶ್ವರ, ಮಹಾಭೃಂಗಿ, ಸ್ಕಂದ ಈ ಅಷ್ಟದೇವತೆಗಳನ್ನು ಉತ್ತರ ದಿಕ್ಕಿನಿಂದ ಪ್ರಾರಂಭಿಸಿ ಕ್ರಮವಾಗಿ ಸ್ಥಾಪಿಸಬೇಕು. ಬ್ರಹ್ಮ ವಿಷ್ಣು ದೇವತೆಗಳನ್ನು ಪೂರ್ವಾದಿ ದಿಕ್ಕುಗಳಲ್ಲಿ, ಈಶಾನ್ಯ ದಿಕ್ಕಿನಲ್ಲಿ ಕ್ಷೇತ್ರಪಾಲರನ್ನು ಸ್ಥಾಪಿಸಿ ಪೂಜಿಸಬೇಕು. ಅನಂತಾದಿ ದೇವತೆಗಳನ್ನು, ವಾಗೀಶ್ವರಿ ಮುಂತಾದ ದೇವಿಯರನ್ನೂ ಸಿಂಹಾಸನದಲ್ಲಿ ಸ್ಥಾಪಿಸಿ ಓಂಕಾರ ಮಂತ್ರದಿಂದ ಆವ್ಹಾನಿಸಿ ಪೂಜಿಸಬೇಕು.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ದೇವತಾ ಪ್ರತಿಷ್ಠಾ ವಿಧಾನ ನಿರೂಪಣ ಎಂಬ ನಲವತ್ತೆಂಟನೆಯ ಅಧ್ಯಾಯ ಮುಗಿದುದು*

—o—

## ಅಘೋರೇಶನ ಪ್ರತಿಷ್ಠೆ ಮತ್ತು ಹೋಮವಿಧಿ ನಿರೂಪಣ

ಅಧ್ಯಾಯ - ೪೯

**ಸೂತರು :-** ಅಘೋರೇಶನ ಪೂಜಾ ಪ್ರತಿಷ್ಠಾಕ್ರಮವನ್ನು ಹೇಳುತ್ತೇನೆ. ಹೃದಯಾದಿ ಅಂಗಗಳಲ್ಲಿ "ಅಘೋರೇಭ್ಯೋ" ಎಂಬ ಮಂತ್ರದಿಂದ ನ್ಯಾಸಮಾಡಿ ಅಘೋರೇಶನ ಪ್ರತಿಷ್ಠೆಯನ್ನು, ಲಿಂಗಪೂಜಾಪ್ರತಿಷ್ಠೆಯ ಕ್ರಮದಿಂದ ಮಾಡಬೇಕು. ಮೊಸರು, ಜೇನುತುಪ್ಪ, ತುಪ್ಪ ಈ ಮೂರು ಹೋಮ ದ್ರವ್ಯಗಳಿಂದ ಕನಿಷ್ಠ ನೂರಾ ಎಂಟು ಆವೃತ್ತಿಯಿಂದ ಹೋಮವನ್ನು ಮಾಡಬೇಕು. ಅಘೋರೇಶನ ಮಂತ್ರವನ್ನು ಒಂದು ಸಾವಿರ ಸಲ ಮಾಡುವದರಿಂದ ಐಶ್ವರ್ಯ ಪ್ರಾಪ್ತಿ ಆಗುವದು. ಆರು ತಿಂಗಳ ಕಾಲ ಪ್ರತಿ ದಿನವೂ ಸಾವಿರದ ಎಂಟು ಅಘೋರೇಶ ಮಂತ್ರ ಜಪಮಾಡಿದರೆ ರಾಷ್ಟ್ರವೆಲ್ಲವೂ ಸುಭಿಕ್ಷೆಯಾಗಿ ಸಂಪದ್ಭರಿತವಾಗುವದು. ಹಾಲು, ತುಪ್ಪ, ಮೊಸರು, ಜೇನುತುಪ್ಪ ಎಲ್ಲವನ್ನು ಮಿಶ್ರಮಾಡಿ ಅಥವಾ ಯವಧಾನ್ಯ, ಆಜ್ಯ, ಕ್ಷೀರ ಈ ಮೂರಿಂದ ಮಂತ್ರಗಳಿಂದ ಅಥವಾ ಕೇವಲ ಹಾಲು ಮೊಸರು ತುಪ್ಪಗಳಿಂದ ಮಂತ್ರೋಚ್ಚಾರಣ ಪೂರ್ವಕವಾಗಿ ಹೋಮವನ್ನು ಮಾಡಿದರೆ ಸರ್ವರೋಗ ನಿವಾರಣೆಯಾಗುವದು. ಇದರಂತೆ ಅಘೋರೇಶನ ಪ್ರೀತ್ಯರ್ಥವಾಗಿ ತಿಲಹೋಮ, ಘೃತ ಹೋಮಗಳಿಂದ ಸಕಲ ಸಾಂಸಾರಿಕ ರೋಗಗಳು ಪರಿಹಾರವಾಗುತ್ತವೆ.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ಅಘೋರೇಶನ ಪ್ರತಿಷ್ಠಾ ಹಾಗೂ ಹೋಮ ವಿಧಿ ನಿರೂಪಣ ಎಂಬ ನಲವತ್ತೊಂಬತ್ತನೆಯ ಅಧ್ಯಾಯ ಮುಗಿದುದು*



## ದುಷ್ಟರಾಜರ ನಿಗ್ರಹಕ್ರಮ

ಅಧ್ಯಾಯ - ೫೦

**ಋಷಿಗಳು :-** ಸೂತ ಮುನಿಯೆ, ಅಪರಾಧಿಗಳನ್ನು ನಿಗ್ರಹಮಾಡುವ ಈಶ್ವರನ ಕ್ರಮವನ್ನು ನೀನು ವ್ಯಾಸರಿಂದ ತಿಳಿದು ಕೊಂಡಿರುವೆ. ಅದನ್ನು ನಮಗೆ ಹೇಳು.

**ಸೂತ :-** ನೀವು ಪ್ರಶ್ನೆ ಮಾಡಿದ ನಿಗ್ರಹವಿಧಿಯು ಹಿಂದೆ ಭೃಗು ಋಷಿಯ ಪುತ್ರನು, ಅಘೋರ ರೂಪಿ ಈಶ್ವರನ ಶಿಷ್ಯನೂ ಆದ ಶುಕ್ರಾಚಾರ್ಯರಿಂದ ಹಿರಣ್ಯಾಕ್ಷ ರಾಕ್ಷಸನಿಗೆ ಹೇಳಲ್ಪಟ್ಟಿತು. ಶುಕ್ರಾಚಾರ್ಯರ ಅನುಗ್ರಹದಿಂದ ಅಪರಿಮಿತವಾದ ಶಕ್ತಿಸಾಮರ್ಥ್ಯಗಳನ್ನು ಹಿರಣ್ಯಾಕ್ಷನು ಪಡೆದು ಮೂರು ಲೋಕಗಳನ್ನು ಜಯಿಸಿದನು. ಗಣಪ ಎಂಬ ಒಳ್ಳೆ ಪರಾಕ್ರಮಿಯಾದ ಮಗನನ್ನು ಹುಟ್ಟಿಸಿ ಲೋಕದಲ್ಲಿ ಮೆರೆದನು. ಕೊನೆಗೆ ವರಾಹ ರೂಪಿ ವಿಷ್ಣುವಿನಿಂದ ವಧಿಸಲ್ಪಟ್ಟನು.

ಈ ಜಗತ್ತಿನಲ್ಲಿ ಸ್ತ್ರೀಯರನ್ನು, ಮಕ್ಕಳನ್ನು ಗೋವುಗಳನ್ನು ಪೀಡಿಸುವವನಿಗೆ ಈ ಅಘೋರೇಶ್ವರನ ನಿಗ್ರಹಕ್ರಮದಿಂದ ಜಯವುಲಭಿಸುವದಿಲ್ಲ. ಹಿರಣ್ಯಾಕ್ಷನು ಭೂದೇವಿಯನ್ನು ರಸಾತಳಕ್ಕೆ ಸೆಳೆದೊಯ್ದನು. ಆದುದರಿಂದ ಅವನನ್ನು ಸಂಹರಿಸಲು ಅಘೋರೇಶ್ವರನ ನಿಗ್ರಹವು ವ್ಯರ್ಥವಾಗಿ ಪರಿಣಮಿಸಿತು. ವಿಷ್ಣುವು ವರಾಹರೂಪದಿಂದ

ಅವನನ್ನು ಕೊಂದುಹಾಕಿದನು. ಆದುದರಿಂದ ಅಘೋರೇಶನ ಜಪ, ಹೋಮ ಮುಂತಾದವುಗಳ ಸಿದ್ಧಿಯನ್ನು ಬಯಸುವವನು ಮಕ್ಕಳು, ಮಹಿಳೆ, ಮಹೀಸುರ, ಗೋವು ಇವುಗಳನ್ನು ಪೀಡಿಸಬಾರದು. ಈ ಪಾಪ ಕೃತ್ಯಗಳನ್ನು ಮಾಡದೇ ಇರುವವರು ತಮ್ಮ ವೈರಿಗಳನ್ನು ಸಂಹಾರ ಮಾಡಬೇಕಾದರೆ ಅದಕ್ಕೆ ಆವಶ್ಯಕವಾದ ಅನುಷ್ಠಾನ ವಿಧಿಯನ್ನು ರಹಸ್ಯವಾಗಿ ನಿನಗೆ ಹೇಳುತ್ತೇನೆ. ಇದೊಂದು ನಿಗ್ರಹ ಕ್ರಮ. ಇದನ್ನು ಎಂದೂ ಯೋಗ್ಯರಾದ ಬ್ರಾಹ್ಮಣರ ಮೇಲೆ ಮತ್ತು ಸಾಧು ಸ್ವಭಾವದ ತನ್ನ ಜನರ ಮೇಲೆ ಪ್ರಯೋಗಿಸಬಾರದು. ಧರ್ಮಯುದ್ಧದಲ್ಲಿ ತನ್ನ ಜನರೆಲ್ಲರೂ ಸೋತು ಪರಾಜಯವು ಪ್ರಾಪ್ತವಾಗುವ ಪ್ರಸಂಗ ಬಂದಾಗ ಈ ನಿಗ್ರಹಕ್ರಮವನ್ನು ಕೈಕೊಳ್ಳಬಹುದು.

ಋಷಿಗಳೇ, ಭಯಂಕರವಾದ ಈ ಅಘೋರ ಮಂತ್ರವನ್ನು ಒಂದು ಲಕ್ಷ ಸಲ ಜಪಮಾಡಿ ಹತ್ತು ಸಾವಿರ ತಿಲಹೋಮಗಳನ್ನು ಮಾಡಿದ ಮೇಲೆ ಬಾಣ ಲಿಂಗದಲ್ಲಾಗಲಿ ಅಥವಾ ಅಗ್ನಿಯಲ್ಲಾಗಲಿ ದಕ್ಷಿಣಾ ಮೂರ್ತಿಯ ಅವತಾರದ ಪ್ರತಿಮೆಯನ್ನಿಟ್ಟು ಒಂದು ಲಕ್ಷ ಬಿಳಿ ಹೂಗಳಿಂದ ಪೂಜೆ ಮಾಡಿದರೆ ಈ ಮಂತ್ರ ಸಿದ್ಧಿಯಾಗುವದು.

ಪೂರ್ವದಿಕ್ಕಿನಿಂದ ಈಶಾನ್ಯದವರೆಗೆ ಒಂದೊಂದು ದಿಕ್ಕಿನಲ್ಲಿ ಒಂದೊಂದರಂತೆ ಎಂಟು ತ್ರಿಶೂಲಾಯುಧಗಳನ್ನು ಸ್ಥಾಪಿಸಬೇಕು. ಮೂರು ಶಿಖೆಗಳಿಂದ ಭಿನ್ನವಾದ ಅಗ್ರದಿಂದ ಯುಕ್ತವಾದ ಆಯುಧಗಳ ತುದಿಯಲ್ಲಿ ಅಘೋರ ರೂಪಿಯಾದ ಶಿವನ ಆಕೃತಿಯನ್ನು ರಚಿಸಿ ಅವನನ್ನು ಧ್ಯಾನಮಾಡಿ ಸಕಲ ಕಾರ್ಯಗಳನ್ನು ನೆರವೇರಿಸಬೇಕು. ಶೂಲ, ಕಪಾಲ, ಪಾಶ, ದಂಡ, ಧನಸ್ಸು, ಬಾಣ, ಡಮರು, ಖಡ್ಗ ಇವು ಎಂಟು ಅಘೋರೇಶನ ಆಯುಧಗಳು.

ಅಷ್ಟಹಸ್ತಶ್ಚ ವರದಃ ನೀಲಕಂಠೋ ದಿಗಂಬರಃ ।
ಪಂಚತತ್ವಸಮಾರೂಢಃ ಹ್ಯರ್ಧಚಂದ್ರಧರಃ ಪ್ರಭುಃ ॥

ದಂಷ್ಟ್ರಾಕರಾಲವದನೋ ರೌದ್ರದೃಷ್ಟಿರ್ಭಯಂಕರಃ ।
ಹುಂ ಫಟ್ಕಾರಮಹಾಶಬ್ದ ಶಬ್ದಿತಾಖಿಲ ದಿಙ್ಮುಖಃ ॥

ತ್ರಿನೇತ್ರಂ ನಾಗಪಾಶೇನ ಸುಬದ್ಧಮುಕುಟಂ ಸ್ವಯಂ ।
ಸರ್ವಾಭರಣಸಂಪನ್ನಂ ಪ್ರೇತಭಸ್ಮಾವಗುಂಠಿತಂ ॥

ಭೂತೈಃ ಪ್ರೇತೈಃ ಪಿಶಾಚೈಶ್ಚ ಡಾಕಿನೀಭಿಶ್ಚ ರಾಕ್ಷಸೈಃ ।
ಸಂವೃತಂ ಗಜಕೃತ್ಯಾ ಚ ಸರ್ವಭೂಷಣಭೂಷಿತಂ ॥

ವೃಶ್ಚಿಕಾಭರಣಂ ದೇವಂ ನೀರ (ಲ) ನೀರದ ನಿಸ್ವನಂ ।
ನೀಲಾಂಜನಾದ್ರಿಸಂಕಾಶಂ ಸಿಂಹ ಚರ್ಮೋತ್ತರೀಯಕಂ ॥

ಹೀಗೆ ಘೋರ ರೂಪವುಳ್ಳ ಅಘೋರೇಶನ ಧ್ಯಾನವನ್ನುಮಾಡಿ ಮಂತ್ರಸಿದ್ಧಿಯನ್ನು ಪಡೆದು ಚಿತಾಗ್ನಿಯಲ್ಲಾಗಲಿ ಸ್ಮಶಾನ ಮಧ್ಯದಲ್ಲಿ ನಿರ್ಮಿಸಿದ ಮಹಾಕುಂಡದಲ್ಲಾಗಲಿ ಹೋಮಮಾಡಬೇಕು. ಹಿಂದೆ ಹೇಳಿದಂತೆ ಆಯುಧಗಳನ್ನು ಎಂಟು ದಿಕ್ಕುಗಳಲ್ಲಿರಿಸಿ ಆಚಾರ್ಯನು ನಟ್ಟನಡುವಿನ ಮಹಾಕುಂಡದ ಸಮೀಪದಲ್ಲಿ ಕುಳಿತುಕೊಳ್ಳಬೇಕು. ಉಳಿದ

ಋತ್ವಿಜರು ನಾಲ್ಕುದಿಕ್ಕುಗಳಲ್ಲಿರುವ ಕುಂಡಗಳ ಸಮೀಪದಲ್ಲಿ ಕುಳಿತು ಹೋಮಮಾಡಬೇಕು. ಆಚಾರ್ಯರು ಕಾಲಾಗ್ನಿ ಪೀಠ ಎಂಬ ಹೆಸರುಳ್ಳ ಪೀಠದಲ್ಲಿ ಕುಳಿತು ಮುವ್ವತ್ತೆರಡು ಅಕ್ಷರಗಳಿಂದ ಕೂಡಿದ ಮಂತ್ರದಿಂದ ಅಘೋರೇಶನ ಧ್ಯಾನವನ್ನು ಮಾಡಬೇಕು. ತನ್ನ ವೈರಿಯಾದ ಶತ್ರುರಾಜನ ಕಲ್ಪಿತ ವಿಗ್ರಹವನ್ನು ಹನ್ನೆರಡು ಅಂಗುಲದ ಕಟ್ಟಿಗೆಯಿಂದ ಮಾಡಿಸಿ ಕುಂಡದ ಮಧ್ಯಭಾಗದಲ್ಲಿ ಸ್ಮಶಾನದ ಇದ್ದಲಿಯೊಂದಿಗೆ ಮಣ್ಣುಗೂಡಿಸಬೇಕು. ವೈರಿಯ ಗೊಂಬೆಯ ಮುಖವನ್ನು ಕೆಳಗೆ ಮಾಡಿ ಪಾದವನ್ನು ಮೇಲೆ ಮಾಡಿ ಹುಗಿದು ಎಲ್ಲ ಕುಂಡಗಳಲ್ಲಿಯೂ ಆ ಶತ್ರುವಿನ ಪ್ರತಿಮೆಯನ್ನು ಮಣ್ಣುಗೂಡಿಸಬೇಕು. ಸ್ಮಶಾನದ ಬೆಂಕಿಯ ಕೆಂಡವನ್ನು ತಂದು, ಹೊಟ್ಟು ಒಣ ಸೌದೆಗಳಿಂದ ವೈರಿ ಮೂರ್ತಿಯ ದೇಹ ದಾಹವನ್ನು ಮಾಡಬೇಕು. ಅನಂತರ ಮೌನ ಮುದ್ರೆಯನ್ನು ಧರಿಸಿ ಆ ಅಗ್ನಿಯನ್ನು ಅಲ್ಲಿಯೇ ಸ್ಥಾಪಿಸಿ ಹತ್ತಿಯ ಬೀಜ ಹಾಗೂ ಎಣ್ಣೆಯಿಂದ ಶಿಷ್ಯರೊಂದಿಗೆ ಹೋಮವನ್ನು ಮಾಡಬೇಕು. ಕೃಷ್ಣಪಕ್ಷ ಚತುರ್ದಶಿಯಿಂದ ಶುಕ್ಲಪಕ್ಷದ ಅಷ್ಟಮಿಯವರೆಗೆ ಸ್ಮಶಾನಾಗ್ನಿಯನ್ನು ಪ್ರಜ್ವಲಿಸಿ ಒಂದು ಸಾವಿರದ ಎಂಟು ಸಲ ಹೋಮವನ್ನು ಮಾಡಬೇಕು. ಇದರಿಂದ ರಾಜನ ಶತ್ರುಗಳು ತನ್ನ ಪರಿವಾರದೊಂದಿಗೆ ಮರಣವನ್ನು ಹೊಂದುತ್ತಾರೆ.

ಈ ಅಘೋರಮಂತ್ರದಿಂದ ಶತ್ರುವನ್ನು ನಾಶಮಾಡುವ ಇನ್ನು ಒಂದು ಉಪಾಯವನ್ನು ಹೇಳುತ್ತಾರೆ. ಮನುಷ್ಯನ ತಲೆ ಬುರುಡೆ, ಉಗುರು, ಕೂದಲು, ಇದ್ದಿಲು, ಹಾವಿನ ಪೊರೆ, ವಿಷ ಸರ್ಪದ ಹಲ್ಲು, ಎತ್ತು, ಹಸು, ಹುಲಿ, ಚಿಗರೆ, ಬೆಕ್ಕು, ಮುಂಗುಲಿ, ಹಂದಿ ಇವುಗಳ ಹಲ್ಲು, ಕೋರೆದಾಡೆ, ಉಗುರು, ಬೀದಿಯ ಧೂಳು ಇವುಗಳನ್ನು ಹೇಗಾದರೂ ಮಾಡಿ ಪಡೆದು ಅಘೋರ ಮಂತ್ರವನ್ನು ನೂರಾ ಎಂಟು ಬಾರಿ ಜಪಿಸಬೇಕು. ಅನಂತರ ಮೇಲೆ ಹೇಳಿದ ಅಮಂಗಳ ವಸ್ತುಗಳನೆಲ್ಲಾ ಪ್ರೇತದ ಮೇಲಿನ ವಸ್ತ್ರದಿಂದ ಸುತ್ತಿ ವೈರಿಯ ಅಷ್ಟಮ ಸ್ಥಾನದಲ್ಲಿ ಸೂರ್ಯ ಅಥವಾ ಚಂದ್ರನಿದ್ದಾಗ ಆ ಶತ್ರುವಿನ ಮನೆಯಲ್ಲಾಗಲಿ ಅವನ ಹೊಲದಲ್ಲಾಗಲಿ ಇಟ್ಟು ಬರಬೇಕು. ಇದರಿಂದ ವೈರಿಯು ಸ್ಥಾನ ಭ್ರಷ್ಟನಾಗುವನು.

ಇನ್ನೂ ಒಂದು ರೀತಿಯ ವೈರಿನಾಶದ ಕ್ರಮವು ಇರುತ್ತದೆ. ರಾಜನು ಯುದ್ಧಕ್ಕೆ ಹೊರಡುವ ಸಮಯದಲ್ಲಿ ಶತ್ರುವಿನ ಚಿತ್ರವನ್ನು ಅದನ್ನು ಮಂತ್ರ ಸಿದ್ಧಿಯುಳ್ಳ ಆಚಾರ್ಯನು ತನ್ನ ಬಲಗಾಲಿನಿಂದ ಚೆನ್ನಾಗಿ ಒದೆಯಬೇಕು. ಹೀಗೆ ಮಾಡಿದರೆ ರಾಜನ ವೈರಿಯು ಮರಣ ಹೊಂದುವನು. ಆದರೆ ಯೋಗ್ಯನಾದ ಧರ್ಮಾತ್ಮನಾದ ರಾಜನನ್ನು ಸಂಹರಿಸಲಿಕ್ಕೆ ಈ ಉಪಾಯಗಳನ್ನು ಕೈಕೊಂಡರೆ ಆ ದುಷ್ಟರಾಜನು ತಾನೇ ನಾಶ ಹೊಂದುತ್ತಾನೆ.

ಆದುದರಿಂದ ರಾಜರು ಇಂಥ ಚೌಡಿಮಂತ್ರಮಾಟಗಳು ತಮ್ಮ ಮೇಲೆ ನಡೆಯದಂತೆ ಧರ್ಮಾತ್ಮರಾಗಿ ಶಿವಭಕ್ತರಾಗಿ ಇರಬೇಕು. ಅಂಥಹ ಯೋಗ್ಯರಾದ ರಾಜರ ಮೇಲೆ ಯಾವ ಮಂತ್ರ ತಂತ್ರ ಪ್ರಯೋಗಗಳು ನಡೆಯುವದಿಲ್ಲ.

*ಇತಿ ಲಿಂಗಮಹಾಪುರಾಣ ಉತ್ತರದ ಭಾಗದ ದುಷ್ಟರಾಜರ ನಿಗ್ರಹ ಕ್ರಮ ಎಂಬ ಐವತ್ತನೆಯ ಅಧ್ಯಾಯ ಮುಗಿದುದು*

—○—

# ವಜ್ರೇಶ್ವರಿ ವಿದ್ಯೆಯ ಪ್ರಭಾವ

ಅಧ್ಯಾಯ - ೫೧

**ಋಷಿಗಳು :-** ಸೂತಮುನಿಯೇ, ನಮಗೆ ವಜ್ರವಾಹನಿಕೆ ಎಂಬ ವಿದ್ಯೆಯನ್ನು ಹೇಳು.

**ಸೂತರು :-** ಈ ವಜ್ರವಾಹನಿಕೆ ವಿದ್ಯೆಯು ಶತ್ರುಗಳಿಗೆ ಭಯಜನಕವಾಗಿದೆ. ಈ ವಿದ್ಯೆಯಿಂದ ವಜ್ರವನ್ನು ಪ್ರೋಕ್ಷಿಸಿ ಅದನ್ನು ರಾಜರಿಗೆ ಅರ್ಪಿಸಬೇಕು.

ಮೊದಲು ಆ ವಜ್ರವನ್ನು ವಿಧಿ ಪೂರ್ವಕವಾಗಿ ಸಂಸ್ಕರಿಸಿ ಅಭಿಷೇಕವನ್ನು ಮಾಡಿ ಆ ವಜ್ರದಲ್ಲಿ ವಜ್ರವಾಹನಿಕಾ ವಿದ್ಯೆಯಿಂದ ಕಾಂಚನ ಶಲಾಕೆ (ಸುವರ್ಣದ ಕಡ್ಡಿ) ಯಿಂದ ಮಂತ್ರವನ್ನು ಬರೆಯಬೇಕು. ಆ ಮಂತ್ರದಲ್ಲಿ ಎಷ್ಟು ಅಕ್ಷರಗಳಿರುವವೋ ಅಷ್ಟು ಲಕ್ಷಮಂತ್ರ ಜಪವನ್ನು ಮಾಡಿ ವಜ್ರ ವಿಶಿಷ್ಟನಾದ ಆಚಾರ್ಯನು ವಜ್ರ ಕುಂಡದಲ್ಲಿ ಹೋಮ ದ್ರವ್ಯಗಳಿಂದ ಹತ್ತು ಸಾವಿರ ಹೋಮ ಮಾಡಬೇಕು.

ಇಷ್ಟು ಮಂತ್ರ, ಜಪ, ಹೋಮಗಳಿಂದ ಸಂಸ್ಕಾರಿತವಾದ ವಜ್ರವನ್ನು ಗುಪ್ತವಾಗಿ ರಕ್ಷಿಸಿ ರಾಜನಿಗೆ ನೀಡಬೇಕು. ರಾಜನು ಆ ವಜ್ರವನ್ನು ತನ್ನ ಜೊತೆಗೆ ರಣಾಂಗಣಕ್ಕೆ ಒಯ್ದು ಶತ್ರುಗಳ ಜೊತೆಗೆ ಯುದ್ಧಮಾಡಿದರೆ ಅದರ ಸಹಾಯದಿಂದ ವೈರಿಗಳನ್ನು ಗೆದ್ದು ವಿಜಯಶಾಲಿಯಾಗುತ್ತಾನೆ. ಪೂರ್ವಕಾಲದಲ್ಲಿ ದೇವದೈತ್ಯರ ನಡುವೆ ಯುದ್ಧ ನಡೆದಾಗ ಬ್ರಹ್ಮದೇವನು ಇಂದ್ರನ ಸಹಾಯಾರ್ಥವಾಗಿ ಈ ವಜ್ರವಾಹನಿಕಾ ವಿದ್ಯೆಯನ್ನು ಪರಮೇಶ್ವರನಿಂದ ಪಡೆದನು.

ಹಿಂದೆ ದೇವಗುರು ಬೃಹಸ್ಪತ್ಯಾಚಾರ್ಯರು ಇಂದ್ರನುಮಾಡಿದ ತಮ್ಮ ಅಪಮಾನದಿಂದ ನೊಂದು ತಮ್ಮ ದೇವತಾ ಗುರುಸ್ಥಾನವನ್ನು ತ್ಯಜಿಸಿ ಎಲ್ಲಿಯೋ ಹೊರಟುಹೋದರು. ಆಗ ದೇವತೆಗಳ ಬಡಿಗನಾದ ತ್ವಷ್ಟಾರನ ಮಗ ವಿಶ್ವರೂಪಾಚಾರ್ಯರನ್ನು ಗುರುವಿನ ಪಟ್ಟದಲ್ಲಿ ದೇವತೆಗಳು ತಂದು ಕೂಡಿಸಿದರು. ಆ ವಿಶ್ವರೂಪಾಚಾರ್ಯರು ತನ್ನ ತಾಯಿಯ ಬಳಗವಾದ ದೈತ್ಯರಿಗೂ ಯಜ್ಞದಲ್ಲಿ ಹವಿರ್ಭಾಗವನ್ನು ಕೊಡುತ್ತಿರುವದನ್ನು ಕಂಡು ಇಂದ್ರನು ಅವರ ಶಿರಚ್ಛೇದ ಮಾಡಿದನು. ಅದರಿಂದ ಕುಪಿತನಾದ ಆ ವಿಶ್ವಕರ್ಮ ಬಡಿಗನು ತಾನು ಮಾಡುವ ಯಜ್ಞದಲ್ಲಿ ಇಂದ್ರನಿಗೆ ಸೋಮರಸವನ್ನು ಪಾನಮಾಡಲು ಕೊಡಲಿಲ್ಲ. ಆಗ ದೇವೇಂದ್ರನು ಈ ವಜ್ರವಾಹನಿಕಾ ವಿದ್ಯೆಯಿಂದ ವಿಶ್ವಕರ್ಮನು ಮಾಡಿದ ಮಾಯೆಯನ್ನು ದೂರಗೊಳಿಸಿ ಸೋಮರಸವನ್ನು ತನ್ನ ಪರಿವಾರದೊಂದಿಗೆ ಪಾನ ಮಾಡಿದನು. ಇದರಿಂದ ದೇವತೆಗಳ ಬಡಿಗನಾದ ತ್ವಷ್ಟೃಪ್ರಜಾಪತಿಗೆ ಬ್ರಹ್ಮಾಂಡ ಕೋಪ ಬಂದಿತು. ಅವನು ಇಂದ್ರನು ಪಾನಮಾಡಿ ಉಳಿದ ಸೋಮರಸವನ್ನು ''ಇಂದ್ರ ಶತ್ರುರ್ವರ್ಧಸ್ವ ಸ್ವಾಹಾ '' ಎಂದು ಮಂತ್ರಹೇಳಿ ಹೋಮಮಾಡಿದನು. ಅದರಿಂದ ಭಯಂಕರನಾದ ಪರಾಕ್ರಮಿ ವೃತ್ರಾಸುರನು ಹುಟ್ಟಿದನು. ಅವನು ಸ್ವರ್ಗದ ಮೇಲೆ ದಾಳಿ ಮಾಡಿ ದೇವತೆಗಳ ರಾಜ್ಯವನ್ನೆಲ್ಲ ಆಕ್ರಮಿಸಿದನು. ಇಂದ್ರನು ವೃತ್ರನಿಂದ ಭಯಭೀತನಾಗಿ ಸ್ವರ್ಗದಿಂದ ಓಡಿ

ಹೋದನು ಮತ್ತು ಬ್ರಹ್ಮ ದೇವರನ್ನು ಕುರಿತು ತಪಸ್ಸನ್ನು ಮಾಡಿದನು. ಅದರಿಂದ ಸಂತುಷ್ಟನಾದ ಬ್ರಹ್ಮದೇವನು ಇಂದ್ರನಿಗೆ ವಜ್ರೇಶ್ವರಿ ಮಂತ್ರವನ್ನು ಉಪದೇಶಿಸಿದನು. ಆ ಮಂತ್ರದಿಂದ ಶಚೀಪತಿಯು ವಜ್ರಾಯುಧವನ್ನು ನಿರ್ಮಿಸಿ ವೃತ್ರಾಸುರನನ್ನು ಸಂಹಾರಮಾಡಿ ತನ್ನ ಸ್ವರ್ಗ ಸಿಂಹಾಸನವನ್ನು ಮರಳಿ ಪಡೆದನು. ಈ ವಜ್ರೇಶ್ವರಿ ವಿದ್ಯೆಯು ಶತ್ರುಭಯಂಕರವಾಗಿದೆ. ಸೂರ್ಯನ ರಥಕ್ಕೆ ಪ್ರತಿದಿನವೂ ಅಡ್ಡ ಬಂದು ವಿಘ್ನ ಒಡ್ಡುವ ಮಂದೇಹ ಎಂಬ ರಾಕ್ಷಸರ ಗುಂಪು ಈ ವಜ್ರೇಶ್ವರೀ ವಿದ್ಯೆಯಿಂದಲೇ ನಿಗ್ರಹಿಸಲ್ಪಡುತ್ತದೆ. ಈ ವಜ್ರೇಶ್ವರೀ ವಿದ್ಯೆಯು ಸಕಲ ಶತ್ರುಗಳಿಗೆ ಭಯವನ್ನುಂಟುಮಾಡುವದು. ಈ ವಜ್ರೇಶ್ವರೀ ವಿದ್ಯೆಯಿಂದಲೇ ಪ್ರಳಯ ಕಾಲದಲ್ಲಿ ಮಹಾರುದ್ರದೇವರು ಲೋಕ ಸಂಹಾರವನ್ನು ಮಾಡುತ್ತಾರೆ.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ವಜ್ರೇಶ್ವರಿ ವಿದ್ಯೆಯ ಪ್ರಭಾವ ಎಂಬ ಐವತ್ತೊಂದನೆಯ ಅಧ್ಯಾಯ ಮುಗಿದುದು*

—o—

## ವಜ್ರೇಶ್ವರೀ ಗಾಯತ್ರೀ ವಿದ್ಯೆ

ಅಧ್ಯಾಯ - ೫೨

**ಋಷಿಗಳು :-** ರೋಮಹರ್ಷಣ ಸೂತರೆ, ಪಿತಾಮಹನು ಪುರಂದರನಿಗೆ ಹೇಳಿದ ವಜ್ರೇಶ್ವರೀ, ಗಾಯತ್ರಿ ವಿದ್ಯೆಗಳನ್ನು ನಿಮ್ಮ ಮುಖದಿಂದ ನಾವು ಕೇಳಿದೆವು. ಈ ವಿದ್ಯೆಗಳನ್ನು ಪ್ರಯೋಗ ಮಾಡುವ ವಿಧಾನಗಳನ್ನು ಹೇಳಿರಿ.

**ಸೂತರು :-** ಈ ವಜ್ರೇಶ್ವರೀ ವಿದ್ಯೆಯ ಪ್ರಭಾವದಿಂದ ವಶೀಕರಣ, ಆಕರ್ಷಣ, ಉದ್ವೇಷಣ, ಉಚ್ಚಾಟನ, ಸ್ಥಂಭನ, ಮೋಹನ, ತಾಡನ, ಉತ್ಸಾದನ, ಛೇದ, ಮಾರಣ, ಪ್ರತಿಬಂಧನ ಎಂಬ ಹನ್ನೊಂದು ಕ್ರಿಯೆಗಳನ್ನು ಸಾಧಿಸಬಹುದು. ಸೇನಾ ಸ್ತಂಭನಾದಿ ಕಾರ್ಯಗಳನ್ನು ಸಾವಿತ್ರಿಯ ಮಂತ್ರದಿಂದ ಮಾಡಬೇಕು. ''ಆಗಚ್ಛದೇವಿ'' ಎಂಬ ಮಂತ್ರದಿಂದ ಸಾವಿತ್ರಿಯನ್ನು ಆವಾಹನೆ ಮಾಡಿ ಹಿಂದೆ ಹೇಳಿದ ವಶ್ಯ ಆಕರ್ಷಣಾದಿಗಳನ್ನು ಮುಗಿಸಿ 'ಬ್ರಾಹ್ಮಣೇಭ್ಯೋ ಹ್ಯನುಜ್ಞಾತಾ' ಎಂಬ ಮಂತ್ರದಿಂದ ವಿಸರ್ಜನೆಯನ್ನುಮಾಡಿ ಬಳಿಕ ಯುದ್ಧಕ್ಕೆ ಹೊರಡಬೇಕು. ವಜ್ರೇಶ್ವರೀ ವಿದ್ಯೆಯ ಮಂತ್ರದ ಪುನಶ್ಚರಣ ಮಾಡಬೇಕು. ಮೊದಲನೆಯ ದಿನ ದೇವಿಯನ್ನು ಆಹ್ವಾನಿಸಿ ಅಗ್ನ್ಯಾಧಾನವನ್ನು ಮಾಡಿ ಹೋಮಮಾಡಬೇಕು. ಬೇರೆ ದಿನಗಳಲ್ಲಿಯೂ ದೇವಿಯನ್ನು ಆವ್ಹಾನಿಸಿ ಅನಂತರ ಮಂತ್ರ ಜಪ, ಜಪದ ಅನಂತರ. ಪೂಜೆ, ಪೂಜೆಯ ನಂತರ ವಿಧಿ ಪೂರ್ವಕವಾಗಿ ಹೋಮಗಳನ್ನು ಮಾಡಬೇಕು. ಈ ವಜ್ರೇಶ್ವರೀ ಸಾವಿತ್ರೀ ವಿದ್ಯೆಗಳನ್ನು ಆವಾಹನ ಮಂತ್ರ, ತಂತ್ರ, ಪುನಶ್ಚರಣ, ಹೋಮ ಮುಂತಾದವುಗಳಲ್ಲಿ ಯಾವುದಕ್ಕೂ ಲೋಪವಿಲ್ಲದಂತೆ ವಿಧಿವತ್ತಾಗಿ ಆಚರಿಸಿದರೆ ಸಕಲ ಕಾರ್ಯಗಳನ್ನು ಸಾಧಿಸಬಹುದು. ವಶೀಕರಣ ಸಿದ್ಧಿಯನ್ನು ಅಪೇಕ್ಷಿಸುವವರು ಮೊದಲು ಜಪವನ್ನು ಮಾಡಿ ಜಾಜೀ ಪುಷ್ಪಗಳಿಂದ ಪೂಜೆಗೈದು ಅನಂತರ ಹೋಮವನ್ನು ಮಾಡಬೇಕು.

ಆಕರ್ಷಣ ಸಿದ್ಧಿಯನ್ನು ಬಯಸುವವರು ತುಪ್ಪ, ಕರವೀರಪುಷ್ಪಗಳಿಂದ ಹೋಮವನ್ನು ಆಚರಿಸಬೇಕು. ವಿದ್ವೇಷಣವನ್ನು ಬಯಸುವವರು ಲಾಂಗಕ ಪುಷ್ಪ (ಕಹಲಾವಿ ಬಳ್ಳಿಯ ಹೂವು) ವಿಶೇಷದಿಂದ ಹೋಮವನ್ನು ಆಚರಿಸಬೇಕು.

ಉಚ್ಚಾಟನವನ್ನು ಅಪೇಕ್ಷಿಸುವವನು ಎಣ್ಣೆಯಿಂದ ಹೋಮವನ್ನು, ಸ್ತಂಭನಾಪೇಕ್ಷಿಯು ಜೇನುತುಪ್ಪದ ಹೋಮವನ್ನು, ಮೋಹನವನ್ನು ಮಾಡಬಯಸುವವನು ಎಳ್ಳಿನಿಂದ ಹೋಮವನ್ನು, ತಾಡನಾಪೇಕ್ಷಿಯು ರಕ್ತದಿಂದ ಹೋಮವನ್ನು ಮಾಡಬೇಕು. ಈ ತಾಡನಾರ್ಥ ಹೋಮವನ್ನು ಆನೆ, ಒಂಟೆ, ಕತ್ತೆ ಇವುಗಳ ನೆತ್ತರದಿಂದಮಾಡಬಹುದು. ಶತ್ರುಗಳ ಸ್ತಂಭನವನ್ನು ಮಾಡಬಯಸುವವರು ಸಾಸಿವೆಯಿಂದ ಹೋಮವನ್ನು ಮಾಡಬೇಕು. ದರ್ಭೆಯಿಂದ ಶತ್ರುಗಳ ಉಚ್ಚಾಟನವನ್ನು ಮಾಡಬಹುದು. ರೋಹಿ ರಕ್ತರೊಡ ಎಂಬ ಬೀಜದಿಂದ ವೈರಿಗಳ ಮಾರಣ ಉಚ್ಚಾಟನೆಯನ್ನು ಮಾಡಬಹುದು. ವೀಳ್ಯದೆಲೆಯ ದಳದಿಂದ ಸೇನೆಯ ಬಂಧನವನ್ನೂ, ಕುನಟಿ ಎಂಬ ಗೈರಿಕಾದಿಧಾತುಗಳಲ್ಲಿ ಒಂದಾದ ಮಣಿಶಿಲೆಯಿಂದ ಸ್ತಂಭನವನ್ನು ಮಾಡಬಹುದು. ಇವೆಲ್ಲಕ್ಕಿಂತಲು ಮೊದಲು ಈ ಮಂತ್ರಗಳೆಲ್ಲ ಸಿದ್ಧಿಸಬೇಕಾದರೆ ಗಾಯತ್ರೀ ಮಂತ್ರವನ್ನು ಜಪಿಸಬೇಕು.

ತುಪ್ಪದಿಂದ ಹೋಮವನ್ನು ಮಾಡಿದರೆ ಎಲ್ಲ ಕಾರ್ಯಗಳು ತಪ್ಪದಂತೆ ಕೈಗೂಡುವವು. ಹಾಲಿನಿಂದ ಹೋಮಮಾಡಿದರೆ ಆತ್ಮ ಶುದ್ಧಿಯಾಗುವದು. ಎಳ್ಳಿನಿಂದ ಹೋಮಮಾಡಿದರೆ ಸಕಲ ರೋಗಗಳು ನಾಶವಾಗುವವು. ಕಮಲಪುಷ್ಪದಿಂದ ಹೋಮವನ್ನು ಆಚರಿಸಿದರೆ ಸಂಪತ್ತು ಬರುವದು. ಮಧುಕ, ಹಿಪ್ಪೆ ಎಂಬ ಪತ್ರವಿಶೇಷವಾದ ಎಲೆಗಳಿಂದ ಸಾವಿತ್ರಿಯನ್ನು ಉದ್ದೇಶಿಸಿ ಮೂವ್ವತ್ತು ಸಾವಿರ ಹೋಮಗಳನ್ನು ಆಚರಿಸಿದರೆ ಮನುಷ್ಯನ ಮುಖದಲ್ಲಿ ಕಾಂತಿ ಉತ್ಪನ್ನವಾಗುವದು.

ಅಥವಾ ಈ ಗಾಯತ್ರೀ ವಿದ್ಯೆ, ವಜ್ರೇಶ್ವರೀ ವಿದ್ಯೆಗಳನ್ನು ಹೋಮ ಹವನ ಯಾವುದೂ ಇಲ್ಲದೆ ಆವ್ಹಾಹನ ಪೂರ್ವಕವಾಗಿ ಪೂಜೆಮಾಡಿ ಜಪವನ್ನು ಆಚರಿಸಿದರೂ ಸಕಲ ಸಿದ್ಧಿಗಳನ್ನು ಹೊಂದಬಹುದು.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ವಜ್ರೇಶ್ವರೀ ಗಾಯತ್ರೀ ವಿದ್ಯೆಗಳ ಪ್ರಯೋಗ ವಿಧಾನ ನಿರೂಪಣ ಎಂಬ ಐವತ್ತೆರಡನೆಯ ಅಧ್ಯಾಯ ಮುಗಿದುದು*

—o—

## ಮೃತ್ಯುಂಜಯ ಹೋಮ

ಅಧ್ಯಾಯ - ೫೩

**ಋಷಿಗಳು :-** ಬ್ರಾಹ್ಮಣಾದಿ ತ್ರೈವರ್ಣಿಕರಿಗೂ ಅನುಷ್ಠಾನಕ್ಕೆ ಉಪಯುಕ್ತವಾದ ಮೃತ್ಯುಂಜಯ ಹೋಮ ವಿಧಿಯನ್ನು ಹೇಳು.

**ಸೂತರು :-** ರುದ್ರಾಧ್ಯಾಯದ ಮಂತ್ರದೊಡನೆ ತುಪ್ಪ. ತುಪ್ಪದಿಂದ ಕೂಡಿದ ಎಳ್ಳು, ಘೃತ ಮತ್ತು ಗೋಕ್ಷೀರದಿಂದ ಕೂಡಿದ ದೂರ್ವಾ, ಅಥವಾ ಕೇವಲ ಜೇನುತುಪ್ಪ, ತುಪ್ಪದಿಂದ ಕೂಡಿದ ಚರುದ್ರವ್ಯ ಅಥವಾ ಕೇವಲ ಹಾಲಿನಿಂದಾಗಲಿ ಹೋಮವನ್ನು ಮಾಡಬೇಕು. ಈ ಹೋಮವು ಕಾಲಮೃತ್ಯುವಿಗೂ ಅಪಮೃತ್ಯುವಿಗೂ ಪ್ರತೀಕಾರ ರೂಪವಾಗಿರುತ್ತದೆ. ಈ ಹೋಮಕ್ಕೆ ಮೃತ್ಯುಂಜಯ ಹೋಮ ಎನ್ನುತ್ತಾರೆ.

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ಮೃತ್ಯುಂಜಯ ಹೋಮ ವಿಧಾನ ಎಂಬ ಐವತ್ತಮೂರನೆಯ ಅಧ್ಯಾಯ ಮುಗಿದುದು*



## ತ್ರ್ಯಂಬಕ ಮಂತ್ರದ ಅರ್ಥ

ಅಧ್ಯಾಯ - ೫೪

**ಸೂತರು :-** ಮೃತ್ಯು ಪರಿಹಾರಕವಾದ ತ್ರ್ಯಂಬಕ ಮಂತ್ರವನ್ನು ಹೇಳುತ್ತೇನೆ. ತ್ರಿನೇತ್ರನಾದ ಮುಕ್ಕಣ್ಣ ಮಹಾದೇವನನ್ನು ತ್ರ್ಯಂಬಕ ಮಂತ್ರದಿಂದ ಬಾಣ ಲಿಂಗದಲ್ಲಾಗಲಿ, ಉದ್ಭವಿಸಿದ ಲಿಂಗದಲ್ಲಾಗಲಿ ಪೂಜಿಸಬೇಕು.

ಆಯುರ್ವೃದ್ಧಿಮಾಡುವ ಉಪಾಯವನ್ನು ತಿಳಿದ ವಿದ್ವಾನ್ ಬ್ರಾಹ್ಮಣರು ಸಹಸ್ರನಾಮೋಕ್ತವಾದ ಕ್ರಮದಿಂದ ಸಾವಿರದ ಎಂಟು ಕಮಲಗಳಿಂದಾಗಲಿ, ಸಾವಿರದ ಎಂಟು ಕನ್ನೈದಿಲೆಗಳಿಂದಾಗಲಿ ಮಹಾದೇವರನ್ನು ಪೂಜಿಸಬೇಕು. ಪಾಯಸ, ಪೊಂಗಲು, ತುಪ್ಪದ ಅನ್ನ, ಹುಗ್ಗಿ ಮೊದಲಾದ ಭಕ್ಷ್ಯಭೋಜ್ಯಗಳನ್ನು ಮಹಾದೇವರಿಗೆ ನಿವೇದಿಸಬೇಕು. ಹಿಂದೆ ಹೇಳಿದಂತೆ ಶ್ವೇತ ಪದ್ಮಾದಿ ಪುಷ್ಪಗಳಿಂದಲೂ ಚರುವಿನಿಂದಲೂ ಹೋಮವನ್ನುಮಾಡಿ ನೂರು, ಸಾವಿರ, ಲಕ್ಷ, ಕೋಟಿ ಸಲ ಯಥಾ ಶಕ್ತಿ ಜಪವನ್ನು ಮಾಡಬೇಕು. ಸಾವಿರ ಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ಸಾವಿರ ಆಕಳುಗಳನ್ನು ದಾನ ಕೊಡಿಸಿ ಸುವರ್ಣ ದಾನವನ್ನು ಮಾಡಬೇಕು.

ಪೂರ್ವಕಾಲದಲ್ಲಿ ಒಂದಾನೊಂದು ದಿನ ಪರಮೇಶ್ವರನು ಮೇರುಪರ್ವತದ ಶಿಖರದಲ್ಲಿ ಈ ವಿಷಯವನ್ನು ತನ್ನ ಪ್ರೀತಿಯ ಪುತ್ರನಾದ ಷಣ್ಮುಖನಿಗೆ ಹೇಳಿದನು. ಆ ಸ್ಕಂದನು ಸನತ್ಕುಮಾರನಿಗೂ, ಸನತ್ಕುಮಾರನು ವ್ಯಾಸನಿಗೂ ಗುರುಪರಂಪರೆಯಿಂದ ಹೇಳಿದನು. ವ್ಯಾಸಪುತ್ರನಾದ ಶುಕನು ಮೋಕ್ಷ ಹೊಂದಿದ ಬಳಿಕ ಪುತ್ರಶೋಕದಿಂದ ವ್ಯಾಸನು ವ್ಯಾಕುಲನಾದನು. ಪರಮೇಶ್ವರನದರ್ಶನದಿಂದ ವ್ಯಾಸರ ದುಃಖವು ಶಾಂತವಾಯಿತು. ಸ್ಕಂದನ ಉತ್ಪತ್ತಿಯನ್ನು ಕೇಳಿದ ತ್ರ್ಯಂಬಕನು ಮಂತ್ರದ ಮಾಹಾತ್ಮ್ಯವನ್ನು ವ್ಯಾಸಮಹರ್ಷಿಗೆ ನಿರೂಪಿಸಿದನು. ಆ ಮಹಾದೇವ ಮತ್ತು

ವೇದವ್ಯಾಸರ ಅನುಗ್ರಹದಿಂದ ಆ ಎಲ್ಲ ವಿಷಯಗಳನ್ನು ಕೇಳಿ ತಿಳಿದ ನಾನು ನಿಮಗೆ ಅದನ್ನು ಹೇಳುತ್ತೇನೆ. ಮಹಾದೇವನಾದ ಪರಮೇಶ್ವರನನ್ನು ವಿಧಿ ಪೂರ್ವಕವಾಗಿ ಪೂಜಿಸಿ ಭಕ್ತಿಯಿಂದ ಈ ಮಂತ್ರವನ್ನು ಜಪಿಸಬೇಕು.

**''ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।**
**ಊರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್॥''**

ರಾಜ್ಯಾಪೇಕ್ಷೆಯುಳ್ಳವನು ಈ ಮಂತ್ರವನ್ನು ಒಂದುಲಕ್ಷಸಲ ಜಪಿಸಿ ಹೋಮವನ್ನು ಮಾಡಿದರೆ ರಾಜ್ಯಾಧಿಕಾರವನ್ನು ಪಡೆಯುತ್ತಾನೆ. ಪುತ್ರಾಪೇಕ್ಷಿಯು ಈ ಮಂತ್ರದ ಲಕ್ಷ ಜಪವನ್ನು ಮಾಡುವದರಿಂದ ಪುತ್ರನನ್ನೂ, ದ್ರವ್ಯಾಪೇಕ್ಷಿಯು ಸಂಪತ್ತನ್ನೂ, ಯಾವ ಅಪೇಕ್ಷೆಯು ಇಲ್ಲದವನು ಈ ಮಂತ್ರವನ್ನು ಲಕ್ಷ ಲಕ್ಷ ಬಾರಿ ಜಪಿಸಿದರೆ ಇಹದಲ್ಲಿ ಸಕಲ ಸೌಭಾಗ್ಯವನ್ನು ಮರಣಾನಂತರ ಮೋಕ್ಷವನ್ನೂ ಹೊಂದುತ್ತಾನೆ. ಈ ಜಗತ್ತಿನಲ್ಲಿ ಮತ್ತು ವೇದಗಳಲ್ಲಿ ಈ ತ್ರ್ಯಂಬಕ ಮಂತ್ರಕ್ಕೆ ಸಮಾನವಾದ ಮಂತ್ರವೇ ಇಲ್ಲ. ಈ ಮಂತ್ರವನ್ನು ಜಪಿಸಿ ಇದರಿಂದ ಹೋಮವನ್ನು ಮಾಡಿದರೆ ಅಗ್ನಿಷ್ಟೋಮ ಯಾಗದಿಂದ ಬರುವ ಫಲಕ್ಕಿಂತ ಎಂಟು ಪಟ್ಟು ಅಧಿಕ ಪುಣ್ಯವು ಪ್ರಾಪ್ತವಾಗುತ್ತದೆ. ತ್ರ್ಯಂಬಕ ಎಂದರೆ ಮೂರು ಕಣ್ಣುಳ್ಳವ. ತ್ರ್ಯಂಬಕ ಎಂಬ ಹೆಸರುಳ್ಳ ಈ ಮಹಾದೇವನು ಮೂರು ಲೋಕಗಳಿಗೂ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಗೂ ನಿಯಾಮಕನಾಗಿದ್ದಾನೆ. ಅಕಾರ, ಉಕಾರ, ಮಕಾರ ಎಂಬ ಮೂರು ಅಕ್ಷರಗಳಿಂದ ಕೂಡಿದ ಓಂಕಾರ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಚಂದ್ರ, ಸೂರ್ಯ, ಅಗ್ನಿಗಳಿಗೂ, ದಕ್ಷಿಣಾಗ್ನಿ, ಗಾರ್ಹಪತ್ಯಾಗ್ನಿ, ಆಹವನೀಯಾಗ್ನಿ ಎಂಬ ಮೂರು ವಿಧ ಅಗ್ನಿಗಳಿಗೂ ಕಾರಣನಾಗಿದ್ದಾನೆ. ಮೂರು ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಕಾಮನ ದಹನ ಮಾಡಲು ಹಣೆಯಲ್ಲಿಯ ಒಂದು ಕಣ್ಣು ಮೂಡಿದ್ದರಿಂದ ತ್ರ್ಯಂಬಕ, ಮೂರು ಕಣ್ಣುಳ್ಳ ಮುಕ್ಕಣ್ಣ, ತ್ರಿಲೋಚನ ಎಂದು ಕರೆಯಲ್ಪಡುತ್ತಾನೆ. ಹೂಬಿಟ್ಟ ಮರದ ಸುಗಂಧವು ಎಲ್ಲ ಕಡೆಗೂ ಪಸರಿಸುವಂತೆ ಮಹಾತ್ಮರಾದ ಮಹಾದೇವರ ಸದ್ಗುಣಗಳನ್ನು ಸುಗಂಧವು ದೂರದೂರಕ್ಕೆ ಹರಡುತ್ತದೆ. ಆದುದರಿಂದ ಮಹಾದೇವನು ಸುಗಂಧ ಎನಿಸಿದ್ದಾನೆ. ದೇವತೆಗಳಿಗೂ ಗುಂ ಎಂದರೆ ವಾಕ್‌ಶಕ್ತಿಯನ್ನು ಹಾಗೂ ಗಾನ ಶಕ್ತಿಯನ್ನು ಕರುಣಿಸಿದ್ದರಿಂದ ಆ ಮಹಾದೇವನು ಸುಗಂಧಿ ಎನಿಸಿದ್ದಾನೆ. ಆಕಾಶದಲ್ಲಿ ಬೀಸುವ ಗಾಳಿಯು ಅವನ ಕೀರ್ತಿಯನ್ನು, ಸದ್ಗುಣಗಳ ಸೌರಭವನ್ನು ಎಲ್ಲಕಡೆಗೂ ಹರಡುತ್ತದೆ. ಆದುದರಿಂದ ಆ ದೇವನು ಸುಗಂಧಿ ಎನಿಸುತ್ತಾನೆ. ಎಲ್ಲರಿಗೂ ಶಾಂತಿ, ತುಷ್ಟಿಪುಷ್ಟಿಯನ್ನು ಬೆಳೆಸುವದರಿಂದ ಅವನು ಪುಷ್ಟಿವರ್ಧನ ಎನಿಸಿದ್ದಾನೆ.

ಪೂರ್ವಕಾಲದಲ್ಲಿ ಹರಿಯ ನಾಭಿಸ್ಥಾನದಲ್ಲಿ ಸ್ಥಾಪಿತವಾದ ಮಹಾದೇವನ ವೀರ್ಯದಿಂದಲೇ ಹಿರಣ್ಮಯವಾದ ಅಂಡವು, ಅದರಿಂದ ಬ್ರಹ್ಮನು, ಆ ಬ್ರಹ್ಮನಿಂದ ಎಲ್ಲ ಜಗತ್ತು ಉತ್ಪನ್ನವಾದವು. ಆ ಮಹಾದೇವನ ವೀರ್ಯವು ಚಂದ್ರ, ಸೂರ್ಯ, ನಕ್ಷತ್ರ, ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ, ತಪೋ ಲೋಕ, ಸತ್ಯಲೋಕಗಳನ್ನು ಕೂಡ ದಾಟಿ ಸರ್ವತ್ರ ವ್ಯಾಪಿಸಿರುತ್ತದೆ. ಆದರಿಂದಲೇ

ಈ ಪ್ರಪಂಚವೆಲ್ಲವೂ ಪುಷ್ಟಿಯನ್ನು ಹೊಂದಿದೆ. ಮತ್ತು ಅವನ ವೀರ್ಯವೇ ಪೃಥಿವ್ಯಾದಿ ಪಂಚ ಮಹಾಭೂತಗಳಿಗೂ, ಅಹಂಕಾರ, ಬುದ್ಧಿ, ಮೂಲ ಪ್ರಕೃತಿ ಎಂಬ ಎಲ್ಲ ತತ್ವಗಳಿಗೂ ಕಾರಣವಾಗಿದೆ. ಅವೆಲ್ಲವುಗಳಿಗೂ ಪುಷ್ಟಿದಾಯಕವಾಗಿದೆ. 'ತ್ರ್ಯಂಬಕಂ ಯಜಾಮಹೆ' ಸುಂಗಧಿಂ ಪುಷ್ಟಿ ವರ್ಧನಮ್ ಎಂಬ ಅರ್ಧ ಮಂತ್ರದ ಅರ್ಥದ ವ್ಯಾಪ್ತಿಯನ್ನು ನಿಮಗೆ ಈಗ ನಿರೂಪಿಸಿದೆ. ಇನ್ನು ಯಜಾಮಹೆ ಎಂಬ ಮಂತ್ರದ ಅರ್ಥವನ್ನು ಪಂಡಿತರು ಹೀಗೆ ನಿರೂಪಿಸುತ್ತಾರೆ.

''ಎಲ್ಲ ವಸ್ತುಗಳಿಗೂ ಪುಷ್ಟಿಕಾರಕನಾದ ಆ ತ್ರ್ಯಂಬಕನನ್ನು ಅಕ್ಕಿ, ಜೇನುತುಪ್ಪ, ಗೋದಿ, ಉದ್ದು, ಬಿಲ್ವ, ಅರ್ಕ ಪುಷ್ಪ, ಶಮೀ ಪತ್ರ, ಬಿಳಿ ಸಾಸಿವೆ, ಭತ್ತ ಈ ದ್ರವ್ಯಗಳಿಂದ ಸರಿಯಾಗಿ ಹೋಮವನ್ನು ಮಾಡಿ ಭಕ್ತಿಯಿಂದ ಲಿಂಗಪೂಜೆಯನ್ನು ಮಾಡುತ್ತೇವೆ. ಪರಮೇಶ್ವರ, ನಾನು ಮಾಡುವ ಈ ಹೋಮ ಪೂಜಾದಿ ರೂಪವಾದ ವಿಧಿಯಿಂದ ನೀನು ಸಂತುಷ್ಟನಾಗು ಮತ್ತು ಮೃತ್ಯು ಪಾಶದಿಂದ ನೀನು ನನ್ನನ್ನು ಮುಕ್ತನನ್ನಾಗಿ ಮಾಡು. ಪಕ್ವವಾದ ಉರ್ವಾರುಕ ಎಂಬ ಸೌತೆಕಾಯಿಯು ಕಾಲಾಂತರದಿಂದ ಬಂಧನದಿಂದ ಮುಕ್ತವಾಗುವಂತೆ ತ್ರ್ಯಂಬಕನನ್ನು ಭಕ್ತಿಯಿಂದ ಪ್ರಯತ್ನಪೂರ್ವಕವಾಗಿ ಭಜಿಸಿ, ಜಪಿಸಿ, ಪೂಜಿಸಿ, ಹೋಮವನ್ನು ಆಚರಿಸಿದರೆ ಮೃತ್ಯುಪಾಶದಿಂದಲೂ ಕರ್ಮ ಬಂಧನದಿಂದಲೂ ಮನುಷ್ಯನು ಮುಕ್ತನಾಗುತ್ತಾನೆ. ಈ ರೀತಿಯಾಗಿ 'ತ್ರ್ಯಂಬಕಂಯಜಾಮಹೆ' ಎಂಬ ಮಂತ್ರದಿಂದ ಸಾರಾರ್ಥವನ್ನು ಪರಮಾರ್ಥವನ್ನು ತಿಳಿದು ಆ ಮಂತ್ರವನ್ನು ಜಪಿಸಿ, ಪಠಿಸಿ ಪಾರಾಯಣವನ್ನು ಮಾಡಿ ವಿಧಿ ಪೂರ್ವಕವಾಗಿ ಶಿವಲಿಂಗವನ್ನು ಪೂಜಿಸಬೇಕು. ಅದರಿಂದ ಅವನಿಗೆ ಸಂಸಾರ ಪಾಶದಿಂದ ಬಿಡುಗಡೆಯಾಗಿ ಮೃತ್ಯುವನ್ನು ಕೂಡ ನಿಗ್ರಹಮಾಡುವ ಶಕ್ತಿಯು ಸಹಜವಾಗಿ ಬರುವದು. ದೇವತೆಗಳಲ್ಲಿ ಮಹಾದೇವನಿಗೆ ಸಮಾನನಾದ ಕರುಣಾಶಾಲಿ ದೇವತೆ ಇಲ್ಲ. ಮೃತ್ಯುಂಜಯ ಮಂತ್ರಕ್ಕೆ ಸಮಾನವಾದ ಮಂತ್ರವೂ ಇಲ್ಲ. ಆದುದರಿಂದ ಕಾಮ್ಯವಾದ ಜಪತಪಾದಿಗಳನ್ನು ಬಿಟ್ಟು ಪಾರ್ವತೀ ಪತಿಯಾದ ತ್ರ್ಯಂಬಕನನ್ನು ಈ ತ್ರ್ಯಂಬಕ ಮಂತ್ರದಿಂದ ಪೂಜಿಸಬೇಕು.''

*ಇತಿ ಲಿಂಗಮಹಾಪುರಾಣ ಉತ್ತರ ಭಾಗದ ತ್ರ್ಯಂಬಕ ಮಂತ್ರದ ಅರ್ಥ ವಿವರಣೆ ಎಂಬ ಐವತ್ತನಾಲ್ಕನೆಯ ಅಧ್ಯಾಯ ಮುಗಿದುದು*

—o—

**ಋಷಿಗಳು :-** ಸೂತರೆ, ಆ ಮಹಾದೇವನನ್ನು ಇಷ್ಟಾರ್ಥ ಸಿದ್ಧಿಗಾಗಿ ಧ್ಯಾನಯೋಗ ಮಾರ್ಗದಿಂದ ಧ್ಯಾನಿಸುವ ಬಗೆ ಯಾವುದು ಹೇಗೆ ಎಂಬುದನ್ನು ತಿಳಿಸಿರಿ.

**ಸೂತರು :-** ಋಷಿಗಳೇ, ಹಿಂದೆ ಒಂದಾನೊಂದು ಕಾಲದಲ್ಲಿ ಬ್ರಹ್ಮದೇವರ ಮಾನಸ ಪುತ್ರನಾದ ಸನತ್ಕುಮಾರನು ಮೇರು ಪರ್ವತದ ಶಿಖರದಲ್ಲಿ ಕುಳಿತಿರುವ ನಂದೀಶ್ವರನನ್ನು ಕುರಿತು ಇದೇ ಪ್ರಶ್ನೆಯನ್ನು ಕೇಳಿದನು. ಅದಕ್ಕೆ ಉತ್ತರವಾಗಿ ಆ ನಂದಿಕೇಶ್ವರನು ಹೇಳಿದನು. ''ಸನತ್ಕುಮಾರನೆ, ಹಿಂದೊಮ್ಮೆ ಪಾರ್ವತೀ ದೇವಿಯು ಈಶ್ವರನೊಂದಿಗೆ ಶಯನಾರೂಢಳಾಗಿ ಇದ್ದಾಗ ಸಂತುಷ್ಟನಾದ ಆ ಮಹಾದೇವನನ್ನು ಕುರಿತು ತ್ರ್ಯಂಬಕ ಧ್ಯಾನವನ್ನು ಮಾಡುವ ಬಗೆಯನ್ನು ಬಿತ್ತರಿಸಿರಿ'' ಎಂದು ಕೇಳಿಕೊಂಡಳು.

**ಪರಮೇಶ್ವರ :-** ದೇವಿ, ಯೋಗವು, ಮಂತ್ರಯೋಗ, ಸ್ಪರ್ಶಯೋಗ ಭಾವಯೋಗ, ಅಭಾವಯೋಗ, ಮಹಾಯೋಗ ಎಂದು ಐದು ವಿಧವಾಗಿದೆ. ಅವುಗಳಲ್ಲಿ ಮಹಾಯೋಗವು ಉಳಿದ ಯೋಗಗಳಿಗಿಂತ ಪ್ರಶಸ್ತವೂ ಪ್ರಧಾನವೂ ಆಗಿರುತ್ತದೆ. ಎಲ್ಲ ಕಡೆಗೂ ಸಂಚರಿಸುವ ಚಂಚಲವಾದ ಮನಸ್ಸನ್ನು ನಿಯಂತ್ರಣ ಮಾಡಿ ಧ್ಯೇಯವಾದ ಒಂದು ವಸ್ತುವಿನಲ್ಲಿ ಕೇಂದ್ರೀಕರಿಸಿ ಅದರ ನಾಮ ಅಥವಾ ಮಂತ್ರವನ್ನು ನಿರಂತರ ಜಪಿಸುವದು ಮಂತ್ರಯೋಗ ಎನಿಸಲ್ಪಡುತ್ತದೆ. ಇದೇ ಪ್ರಥಮ ಯೋಗ, ಸ್ಪರ್ಶಯೋಗ ಎಂದರೆ ರೇಚಕ, ಪೂರಕ, ಕುಂಭಕ, ಎಂಬ ಹೆಸರುಳ್ಳ ಮೂರು ಪ್ರಾಣಾಯಾಮವನ್ನು ಮಾಡಿ ಅದರ ಮೂಲಕ ಸುಷುಮ್ನಾನಾಡಿಯನ್ನು, ಇತರ ಎಲ್ಲ ನಾಡಿಗಳನ್ನು ಶುದ್ಧವಾದವುಗಳನ್ನಾಗಿ ಮಾಡುವುದು. ಇದು ಸ್ಪರ್ಶಯೋಗದ ಮುಖ್ಯ ಫಲವಾಗಿರುತ್ತದೆ. ರೇಚಕ ಎಂದರೆ ಒಳಗಿನ ವಾಯುವನ್ನು ಮೂಗಿನ ಹೊರಳೆಯಿಂದ ನಿಧಾನವಾಗಿ ಹೊರಗೆ ಬಿಡುವ ಕ್ರಿಯೆ. ಇದಕ್ಕೆ ರೇಚಕ ಪ್ರಾಣಾಯಾಮ ಎನ್ನುತ್ತಾರೆ. ಪೂರಕ ಪ್ರಾಣಾಯಾಮ ಎಂದರೆ ಮೂಗಿನಿಂದ ಹೊರಗಿನ ಶುದ್ಧವಾದ ವಾಯುವನ್ನು ಒಳಗೆ ತೆಗೆದುಕೊಳ್ಳುವದು. ಇದು ಪೂರಕ ಪ್ರಾಣಾಯಾಮ. ಕುಂಭಕ ಪ್ರಾಣಾಯಾಮ ಎಂದರೆ ಪೂರಕ ಪ್ರಾಣಾಯಾಮದಿಂದ ಒಳಗೆ ಸೆಳೆದು ಕೊಂಡಿರುವ ವಾಯುವನ್ನು ಒಳಗಿನ ಅಂತಃ ಕರಣ ಪ್ರದೇಶದಲ್ಲಿಯೇ ಸ್ತಬ್ಧವಾಗಿರುವಂತೆ ಮಾಡುವದು. ಇದೇ ಕುಂಭಕ ಪ್ರಾಣಾಯಾಮ. ಈ ರೇಚಕ, ಪೂರಕ, ಕುಂಭಕ ಪ್ರಾಣಾಯಾಮಗಳಿಂದ ಸುಷುಮ್ನಾದಿನಾಡಿಗಳನ್ನು ಶುದ್ಧಗೊಳಿಸಿ ವ್ಯಸ್ತ ಸಮಸ್ತಯೋಗದಿಂದ ಪ್ರಾಣವಾಯುವನ್ನು ಜಯಿಸಬೇಕು. ಧಾರಣ, ಧ್ಯಾನ, ಸಮಾಧಿ ಮೊದಲಾದ ಯೋಗದ ಅಂಗಗಳನ್ನು ಸತತ ಅಭ್ಯಾಸ ಮಾಡಿ ಅದರಿಂದ ಅಂತರಿಂದ್ರಿಯ ಬಹಿರಿಂದ್ರಿಯ ಎರಡನ್ನೂ ಜಯಿಸಬೇಕು. ಅಂತರಿಂದ್ರಿಯ ನಿಗ್ರಹದಿಂದ ವೀರ್ಯ ಸ್ತಂಭನವು ಆಗುತ್ತದೆ. ಇದಕ್ಕೆ ವಜ್ರಕ್ರಿಯೆ ಎನ್ನುತ್ತಾರೆ.

ಭಾವಯೋಗ ಎಂದರೆ ಮಂತ್ರಯೋಗ, ಸ್ಪರ್ಶಯೋಗಗಳ ಸಾಧಾನಾವಸ್ಥೆಯನ್ನು ಬಿಟ್ಟು ರೂಪಾದಿ ಬಾಹ್ಯ ವಿಷಯಗಳಿಂದಲೂ, ಸುಖವೇ ಮೊದಲಾದ ಆಂತರಿಕ

ವಿಷಯಗಳಿಂದಲೂ ಮನಸ್ಸನ್ನು ಉಪಸಂಹರಿಸಿ ಅದರ ಮೂಲಕ ಚಿತ್ತವನ್ನು ಶುದ್ಧಪಡಿಸುವದು ಇದಕ್ಕೆ ಭಾವಯೋಗ ಎನ್ನುವರು.

ಅಭಾವಯೋಗ ಎಂದರೆ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವು ಪ್ರಳಯ ಕಾಲದಲ್ಲಿ ನಾಶವಾಗಿ ಆ ಭಗವಂತನಲ್ಲಿಯೇ ಲೀನವಾಗುವದು. ಪ್ರಳಯಕಾಲದಲ್ಲಿ ಆ ಭಗವಂತನ ಹೊರತಾಗಿ ಯಾವುದು ಇರುವದಿಲ್ಲ. ಎಲ್ಲವೂ ಶೂನ್ಯ. ಆದುದರಿಂದ ಇದಕ್ಕೆ ಅಭಾವಯೋಗ ಎನ್ನುವರು. ಮಹಾಯೋಗ ಎಂದರೆ ರೂಪರಹಿತವೂ ಅದ್ವಿತೀಯವೂ, ಸುಖದುಃಖಾದಿ ಸಂಸರ್ಗ ಇಲ್ಲದೇ ಇರುವದೂ, ಪ್ರಕಾಶ ಮಾನವೂ, ಗುಣ, ಕ್ರಿಯೆ ಜಾತಿ ಮುಂತಾದವುಗಳಿಂದ ನಿರ್ದೇಶಮಾಡಲು ಅಶಕ್ಯವೂ, ಸಚ್ಚಿದಾನಂದ ಸ್ವರೂಪವೂ, ಆದ ಆತ್ಮವಸ್ತುವು, ಯಾವ ಅವಸ್ಥೆಯಲ್ಲಿ ಸ್ಫುರಿಸುವದೋ ಆ ಅವಸ್ಥೆಗೆ ಮಹಾಯೋಗ ಎನ್ನುವರು. ಆತ್ಮನು ಕಾಲತ್ರಯದಲ್ಲಿಯು ಇರುವವನಾಗಿ ಸ್ವಪ್ರಕಾಶ ಸ್ವರೂಪನೂ, ಕನ್ನಡಿಯಂತೆ ನಿರ್ಮಲವಾದ ಅಂತಃಕರಣದಲ್ಲಿ ಪಡಿಮೂಡುವವನೂ, ನಿರ್ಮಲನೂ, ಅದ್ವಿತೀಯನೂ ಆಗಿರುತ್ತಾನೆ.

ಈ ಹಿಂದೆ ಹೇಳಿದ ಮಂತ್ರಯೋಗವೇ ಮೊದಲಾದ ಐದು ಯೋಗಗಳೂ, ಅಣಿಮಾದಿಅಷ್ಟೈಶ್ವರ್ಯಗಳನ್ನೂ ಮೋಕ್ಷ ಸಾಧನಿಭೂತವಾದ ಜ್ಞಾನವನ್ನೂ ಕೊಡುತ್ತವೆ. ಈ ಐದು ಯೋಗಗಳಲ್ಲಿ ಪ್ರತಿಯೊಂದು ಯೋಗವೂ ಉತ್ತರೋತ್ತರ ಶ್ರೇಷ್ಠವಾಗಿರುತ್ತವೆ. ಮಂತ್ರಯೋಗಕ್ಕಿಂತ ಸ್ಪರ್ಶಯೋಗ ಅದಕ್ಕಿಂತ ಭಾವಯೋಗ ಅದಕ್ಕಿಂತ ಅಭಾವಯೋಗ ಹೀಗೆ ಒಂದಕ್ಕಿಂತ ಒಂದು ಶ್ರೇಷ್ಠವಾಗಿರುತ್ತವೆ. ಆಕಾಶವು ವ್ಯಾಪಕವಾಗಿದ್ದರೂ ಪದಾರ್ಥಗಳ ಸಂಸರ್ಗವಿಲ್ಲದೇ ನಿರ್ಲಿಪ್ತವಾಗಿರುವದು. ಅದರಂತೆ "ನಾನೂ ಕೂಡ ವ್ಯಾಪಕನಾಗಿದ್ದರೂ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚದ ಸಂಸರ್ಗ ಸಂಬಂಧ ಇಲ್ಲದೇ ಇರುವವನು ಆಗಿದ್ದೇನೆ. ಕಾಲತ್ರಯದಲ್ಲಿಯೂ ಏಕರೂಪನಾಗಿರುವ ನಾನು ಅವಿದ್ಯೆಯ ಬಂಧನದಿಂದ ವಿಮುಕ್ತನಾಗಿರುತ್ತೇನೆ". ಈ ಜ್ಞಾನವೇ ಮೋಕ್ಷಕ್ಕೆ ಸಾಧನವಾಗಿರುತ್ತದೆ.

ಶಮ ದಮಾದಿ ಆರು ವಿಧವಾದ ಸಾಧನಗಳಿಂದ ಕೂಡಿಕೊಂಡು ಬಾಹ್ಯ ವಿಷಯಗಳಿಂದ ಮನಸ್ಸನ್ನು ಉಪಸಂಹರಿಸಿ ಯಾವನು ಅಹಂಕಾರ ಮಮಕಾರಗಳಿಂದ ಯಾವನು ಬಿಡಲ್ಪಟ್ಟಿರುವನೋ ಅವನೇ ಮೋಕ್ಷ ಸಾಧನವಾದ ಜ್ಞಾನಕ್ಕೆ ಉತ್ತಮಾಧಿಕಾರಿ ಆಗಿರುತ್ತಾನೆ. ಇಂತಹ ಮೋಕ್ಷ ಸಾಧನವಾದ ಜ್ಞಾನವನ್ನು ವಿಪ್ರನು ಗುರುದೇವತೆಗಳಲ್ಲಿ ಭಕ್ತಿಯುಳ್ಳ ಧಾರ್ಮಿಕನೂ, ಆಹಿತಾಗ್ನಿಯೂ ಆದ ಶಿಷ್ಯನಿಗೆ ಮಾತ್ರ ಅವನನ್ನು ಪರಿಕ್ಷಿಸಿ ಉಪದೇಶ ಮಾಡಬೇಕು. ಶಾಸ್ತ್ರ ನಿಷಿದ್ಧವಾದ ಕರ್ಮಗಳನ್ನು ಮಾಡುವ, ಪತಿತ, ವ್ಯಾಧಿಪೀಡಿತ ಆದ ಮಾನವನು ಇಂಥ ಜ್ಞಾನಕ್ಕೆ ಅಧಿಕಾರಿಯಾಗುವದಿಲ್ಲ. ಅಂಥವನಿಗೆ ಇಂಥ ಜ್ಞಾನೋಪದೇಶವನ್ನು ಮಾಡಿದರೆ ಆ ಗುರುವೂ ಕೂಡ ಮಹಾ ಪಾತಕಕ್ಕೆ ಗುರಿಯಾಗುವನು. ಬ್ರಹ್ಮಜ್ಞಾನಿಯಾದ ಯೋಗಿಯು ಈ ಪಾಶುಪತಯೋಗ ವೆಂಬ ಅಮೃತಪಾನವನ್ನು ಮಾಡಿ ಈ ಸಂಸಾರ ಪಾಶದಿಂದ ಮುಕ್ತನಾಗುತ್ತಾನೆ.

ಭಗವಂತನಾದ ಆ ಪರಮೇಶ್ವರನು ತನ್ನ ಪ್ರಿಯಪತ್ನಿಯಾದ ಪಾರ್ವತಿಗೆ ಯೋಗಮಾರ್ಗದ ರಹಸ್ಯವನ್ನು ಉಪದೇಶಿಸಿ ಶಂಖುಕರ್ಣ ಎಂಬ ಹೆಸರುಳ್ಳ ಓರ್ವ

ಪ್ರಮಥ ಗಣಾಧೀಶನನ್ನು ದ್ವಾರದಲ್ಲಿ ನಿಲ್ಲಿಸಿ ತಾನು ತನ್ನ ಸಚ್ಚಿದಾನಂದ ಸ್ವರೂಪದಲ್ಲಿ ಲೀನನಾದನು. ಆದುದರಿಂದ ಸನತ್ಕುಮಾರ, ನೀನು ಯೋಗಾಭ್ಯಾಸದಲ್ಲಿ ಹಾಗೂ ಬ್ರಹ್ಮಜ್ಞಾನದಲ್ಲಿ ಉತ್ತಮಾಧಿಕಾರಿಯಾಗಿರುವೆ. ಆದುದರಿಂದ ನೀನು ಈ ಪಾಶುಪತಯೋಗ ಮಾರ್ಗದಲ್ಲಿಯೇ ನಿರತವಾಗು.

**ಸೂತರು :-** ಋಷಿಗಳೇ, ಶಿಲಾದ ಪುತ್ರನಾದ ಭಸ್ಮಧಾರಿ ನಂದೀಶ್ವರನಿಂದ ಈ ಪಾಶುಪತಯೋಗವು ಸನತ್ಕುಮಾರನಿಗೆ ಹೇಳಲ್ಪಟ್ಟಿತು. ಸನತ್ಕುಮಾರನು ಈ ಯೋಗವನ್ನು ವ್ಯಾಸಮಹರ್ಷಿಗೆ ಹೇಳಿದನು. ನಾನು ವ್ಯಾಸರಿಂದ ಈ ಯೋಗದ ರಹಸ್ಯವನ್ನು ತಿಳಿದು ನಿಮ್ಮ ಅಪೇಕ್ಷೆಯಂತೆ ನಿಮಗೆ ಇದನ್ನು ಉಪದೇಶಿಸಿದ್ದೇನೆ. ಈ ಲಿಂಗಪುರಾಣವು ಹನ್ನೊಂದು ಸಾವಿರ ಶ್ಲೋಕಗಳಿಂದ ಒಡಗೂಡಿರುತ್ತದೆ. ಇದರ ಪೂರ್ವ ಭಾಗದಲ್ಲಿ ನೂರಾ ಎಂಟು ಅಧ್ಯಾಯಗಳು ಉತ್ತರಭಾಗದಲ್ಲಿ ನಲವತ್ತಾರು, ವ್ಯಾಖ್ಯಾನದಲ್ಲಿ ನಲವತ್ತು ಒಂಬತ್ತು ಆರು, ಒಟ್ಟು ಐವತ್ತೈದು ಅಧ್ಯಾಯಗಳಿರುತ್ತವೆ.

ಅನಂತರ ನೈಮಿಷಾರಣ್ಯದಲ್ಲಿ ಪುರಾಣಶ್ರವಣಕ್ಕಾಗಿ ಕುಳಿತುಕೊಂಡ ಎಲ್ಲ ಋಷಿಗಳು ಈ ಲಿಂಗಪುರಾಣ ಶ್ರವಣವನ್ನುಮಾಡಿ ಸಂತೋಷದಿಂದ ರೋಮಾಂಚಿತರಾಗಿ ಮಹಾದೇವನನ್ನು ನಮಸ್ಕರಿಸಿದರು. ಈ ಪುರಾಣವನ್ನು ಮೊದಲಿನಿಂದ ಕೊನೆಯವರೆಗೂ ಯಾರು ಶ್ರವಣಮಾಡಿ ಇನ್ನೊಬ್ಬರಿಗೆ ಶ್ರವಣ ಮಾಡಿಸುವನೋ ಅವರಿಬ್ಬರು ಮುಕ್ತಿಯನ್ನು ಹೊಂದುತ್ತಾರೆ. ತಪಸ್ಸು, ಯಜ್ಞ, ದಾನ, ಅಧ್ಯಯನಗಳಿಂದ ದೊರಕುವ ಮೋಕ್ಷರೂಪ ಫಲವು ಈ ಲಿಂಗಪುರಾಣ ಶ್ರವಣದಿಂದ ಪ್ರಾಪ್ತವಾಗುತ್ತದೆ. ಬ್ರಹ್ಮದೇವನು ''ಈ ಪುರಾಣವನ್ನು ಶ್ರವಣಮಾಡುವ ಭಾವುಕ ಭಕ್ತರಿಗೆ ನನ್ನಲ್ಲಿಯೂ, ವಿಷ್ಣುವಿನಲ್ಲಿಯೂ ನಿರಂತರ ಭಕ್ತಿಯು ಇರಲಿ. ಅವನ ವಂಶ ಪರಂಪರೆಗೆ ಅಕ್ಷಯಜ್ಞಾನವು ಪ್ರಾಪ್ತವಾಗಿ ಸಂಸಾರದುಃಖದಿಂದ ಮೋಕ್ಷವು ದೊರಕಲಿ.'' ಎಂದು ಆಜ್ಞೆಯನ್ನು ಮಾಡಿದ್ದಾರೆ.

**ಋಷಿಗಳು :-** ನಮಗೆ ಈ ಪುರಾಣವನ್ನು ಶ್ರವಣಮಾಡಿಸಿರುವ ಸೂತರಿಗೂ, ಇಲ್ಲಿ ಶ್ರಾವಕರಾಗಿ ಕುಳಿತಿರುವ ಋಷಿಗಳಿಗೂ, ತೀರ್ಥಯಾತ್ರಾ ಪ್ರಸಂಗದಿಂದ ಇಲ್ಲಿಗೆ ಬಂದು ನಮಗೆಲ್ಲ ಜ್ಞಾನೋಪದೇಶಮಾಡಿದ ನಾರದಮಹರ್ಷಿಗಳಿಗೂ ಪರಮೇಶ್ವರನ ಪೂರ್ಣ ಪ್ರಸಾದವೂ ಪ್ರಾಪ್ತವಾಗಲಿ. ಮಹಾದೇವನಿಗೂ, ಸ್ಕಂದನಿಗೂ, ನಾರದರಿಗೂ ನಮ್ಮ ವಂದನೆಗಳು.

ಬ್ರಾಹ್ಮಣರೆಲ್ಲರು ಹೀಗೆ ನುಡಿಯಲು ನಾರದರು ತಮ್ಮ ಕೈಯಿಂದ ಸೂತನನ್ನು ಸ್ಪರ್ಶಿಸಿ ''ಸೂತ ಮಹರ್ಷಿಯೇ, ನಿನಗೆ ಮಂಗಲವಾಗಲಿ. ನಿನಗೂ ನಮಗೂ, ವೃಷಭಾರೂಢನಾದ ಈಶ್ವರನಲ್ಲಿ ಗಾಢವಾದ ಭಕ್ತಿಯು ಉಂಟಾಗಲಿ. ಆ ಶಿವನಿಗೆ ನಮ್ಮ ನಮಸ್ಕಾರ.

*ಇತಿ ಲಿಂಗಮಹಾಪುರಾಣ ಉತ್ತರಭಾಗ ಐವತ್ತೈದನೆಯ ಅಧ್ಯಾಯ ಮುಗಿಯಿತು.*

*ಈ ಲಿಂಗಮಹಾಪುರಾಣದ ಉತ್ತರ ಭಾಗವು ಸಮಾಪ್ತವಾಯಿತು.*

*ಶ್ರೀ ವೇದವ್ಯಾಸರಚಿತ ಲಿಂಗಮಹಾಪುರಾಣವು ಸಮಾಪ್ತವಾಯಿತು.*

—o—

# ಗಣೇಶ ಪುರಾಣ

**ಗಣಾನಾಂ ತ್ವಾಂ ಗಣಪತಿಂ ಹವಾಮಹೇ**

**ಋಗ್ವೇದ ೨/೨೩/೧**

## ಸೋಮಕಾಂತ ವರ್ಣನೆ

ಅಧ್ಯಾಯ - ೧

**ನಮಸ್ತಸ್ಮೈ ಗಣೇಶಾಯ ಬ್ರಹ್ಮವಿದ್ಯಾಪ್ರದಾಯಿನೇ ॥**
**ಯಸ್ಯಾಽಗಸ್ತ್ಯಾಯತೇ ನಾಮ ವಿಘ್ನಸಾಗರ ಶೋಷಣೇ ॥**

ಬ್ರಹ್ಮವಿದ್ಯೆಯನ್ನು ಜಿಜ್ಞಾಸು ಭಕ್ತರಿಗೆ ಪ್ರದಾನಮಾಡುವ ಗಣಪತಿಗೆ ನಮಸ್ಕಾರ. ಶ್ರೀ ಗಣೇಶನ ನಾಮವು ವಿಘ್ನಗಳ ಸಮುದ್ರವನ್ನೇ ಅಗಸ್ತ್ಯಮುನಿಯು ಸಮುದ್ರಪಾನ ಮಾಡಿದಂತೆ ಕುಡಿದು ಒಣಗಿಸಿ ಬಿಡುತ್ತದೆ. ಇಂಥ ಗಣಪತಿಗೆ ವಂದನೆ.

ನೈಮಿಷಾರಣ್ಯವು ಪರಮ ಪವಿತ್ರವಾದ ಒಂದು ಪುಣ್ಯಾರಣ್ಯ. ಅಲ್ಲಿ ಶೌನಕಾದಿ ಮಹರ್ಷಿಗಳು ಕಲಿಯ ಭಯದಿಂದ ದೀರ್ಘವಾದ ಒಂದು ಜ್ಞಾನಸತ್ರವನ್ನು ಪ್ರಾರಂಭಿಸಿದ್ದಾರೆ. ಆ ಋಷಿಗಳೆಲ್ಲರೂ ಬ್ರಹ್ಮಜಿಜ್ಞಾಸುಳು. ಭಗವತ್ತತ್ತ್ವದ ಚಿಂತನ ಮಂಥನಗಳು ಅಲ್ಲಿ ಸತತವೂ ನಡೆಯುತ್ತಲಿದ್ದವು.

ಅಲ್ಲಿಗೆ ಒಂದು ದಿನ ಭಗವಾನ್ ಶ್ರೀ ವೇದವ್ಯಾಸರಿಂದ ಎಲ್ಲ ಪುರಾಣಗಳನ್ನೂ ಕೇಳಿ ಮಹಾಜ್ಞಾನಿಗಳೆನಿಸಿದ ಶ್ರೀ ಸೂತಮುನಿಗಳು ದಯಮಾಡಿಸಿದರು. ಮತ್ತು ಅಲ್ಲಿ ನೆರೆದ ಮಹಾಜ್ಞಾನಿಗಳಾದ ಶೌನಕಾದಿ ಮಹರ್ಷಿಗಳಿಗೆ ಅನೇಕ ಪುರಾಣಗಳನ್ನು ಸಾಂಗೋಪಾಂಗವಾಗಿ ಪ್ರವಚನರೂಪದಿಂದ ಬಿತ್ತರಿಸಿದರು.

ಆದರೂ ಪುರಾಣ ಶುಶ್ರೂಷುಗಳಾದ ಶೌನಕರಿಗೆ ಇನ್ನೂ ತೃಪ್ತಿಯಾಗಿದ್ದಿಲ್ಲ. ಆಗ ಅವರು ಆಗ ಅಲ್ಲಿ ಆಗಮಿಸಿದ ಸೂತಮುನಿಗೆ ವಿಘ್ನನಿವಾರಕನಾದ ಗಣಪತಿ ಪುರಾಣವನ್ನು ಹೇಳಬೇಕೆಂದು ಬಿನ್ನವಿಸಿದರು. ಆಗ ಗಣೇಶಭಕ್ತರಾದ ಸೂತಾಚಾರ್ಯರು ಶೌನಕಾದಿಗಳಿಗೆ ಪರಮ ಪವಿತ್ರವೂ ರೋಚಕವೂ ಸುಶ್ರಾವ್ಯವೂ ಆದ ಗಣೇಶ ಪುರಾಣವನ್ನು ಹೇಳಲು ಉಪಕ್ರಮಿಸಿದರು.

**''ವಕ್ರತುಂಡ ಮಹಾಕಾಯ ಸೂರ್ಯಕೋಟಿ ಸಮಪ್ರಭ**
**ನಿರ್ವಿಘ್ನಂಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥**

ಪೂರ್ವಕಾಲದಲ್ಲಿ ಸೋಮಕಾಂತ ಎಂಬ ಓರ್ವ ಮಹಾರಾಜನಿದ್ದನು. ಅವನು ಪರಮಧರ್ಮಾತ್ಮ. ಅವನ ಮಂತ್ರಿಗಳೂ ಆಸ್ಥಾನವಿದ್ವಾಂಸರೂ ಎಲ್ಲರೂ ಬಹಳ

ಯೋಗ್ಯರೂ ಪರೋಪಕಾರಿಗಳೂ ಪಾಪಭೀರುಗಳೂ ಆಗಿದ್ದರು. ಅವರೆಲ್ಲರೂ ಹೆಸರಿಗೆ ತಕ್ಕಂತೆ ಚತುರರೂ, ಜ್ಞಾನಿಗಳೂ, ಪ್ರಬಲರೂ ಆಗಿದ್ದರು.

ಆ ಮಹಾರಾಜನಿಗೆ ಸುಧರ್ಮಾ ಎಂಬ ಒಬ್ಬ ಮಡದಿ ಇದ್ದಳು. ಅವಳು ಪರಮ ಪತಿವ್ರತೆ. ಅಪ್ಸರೆಯಂತೆ ಅವಳ ರೂಪ. ದಾನ-ಧರ್ಮ, ಅತಿಥಿ ಸತ್ಕಾರಗಳಲ್ಲಿ ಹಾಗೂ ದೇವ-ಬ್ರಾಹ್ಮಣ ಕಾರ್ಯಗಳಲ್ಲಿ ಅವಳಿಗೆ ಭಕ್ತಿ, ಆಸಕ್ತಿ, ಅನುರಕ್ತಿ ಮೂರೂ ಇದ್ದವು.

ಈ ರಾಜದಂಪತಿಗಳಿಗೆ **'ಹೇಮಕಂಠ'** ಎಂಬ ಒಬ್ಬ ಸುಪುತ್ರ ಇದ್ದ. ಅವನು ಮಹಾಪರಾಕ್ರಮಿ. ಹತ್ತು ಸಾವಿರ ಆನೆಗಳ ಬಲ ಅವನ ತೋಳುಗಳಲ್ಲಿ ತೊನೆದಾಡುತ್ತಿತ್ತು. ಇಂಥ ಮಡದಿ, ಮಗ, ಮಂತ್ರಿ ಮಹೋದಯರ ಪರಿಪೂರ್ಣ ಬೆಂಬಲ, ಮುಂಬಲಗಳನ್ನು ಪಡೆದ ಸೋಮಕಾಂತನು ದಿಗ್ದೇಶಗಳಲ್ಲಿರುವ ರಾಜರನ್ನೆಲ್ಲ ತನ್ನ ಅಂಕಿತದಲ್ಲಿಟ್ಟುಕೊಂಡು ಸಮ್ರಾಟ ಸಾರ್ವಭೌಮನಾಗಿ ಮೆರೆಯುತ್ತಿದ್ದ. ಯಜ್ಞ-ಯಾಗ, ದಾನ-ಧರ್ಮ, ಹಾಗೂ ಪುಣ್ಯಕಾರ್ಯಗಳಲ್ಲಿ ಅವನು ಸರ್ವದಾ ಆಸಕ್ತನಾಗಿದ್ದ. ತ್ಯಾಗಶೀಲ ಎಂಬ ಖ್ಯಾತಿ, ಧರ್ಮಶೀಲ ಎಂಬ ಅವನ ಕೀರ್ತಿ ದಿಗಂತ ವಿಶ್ರಾಂತವಾಗಿದ್ದಿತು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಸೋಮಕಾಂತ ವರ್ಣನೆ ಎಂಬ ಮೊದಲನೆಯ ಅಧ್ಯಾಯ ಮುಗಿದುದು*



## ಸೋಮಕಾಂತ ವರ್ಣನೆ

## ಅಧ್ಯಾಯ - ೨

**ಸೂತ :-** ಋಷಿವರ್ಯರೇ, ಪ್ರಾರಬ್ಧ ಯಾರಿಗೂ ಬಿಟ್ಟದ್ದಲ್ಲ. ಧರ್ಮಾತ್ಮನಾದ ಸೋಮಕಾಂತ ರಾಜನಿಗೆ ಅನಿರೀಕ್ಷಿತವಾಗಿ ಕುಷ್ಠರೋಗ ತಗಲಿತು. ರೋಗಗಳಲ್ಲಿ ಈ ಕುಷ್ಠ ಬಹಳ ಕೆಟ್ಟದ್ದು, ಅದನ್ನು ಅನುಭವಿಸುವದೂ ಬಹಳ ಕಷ್ಟ. ಅದರಿಂದ ಅವನ ಅವಯವಗಳು ಒಂದೊಂದಾಗಿ ಉದುರತೊಡಗಿದವು. ಅದಕ್ಕಾಗಿಯೇ ಅದಕ್ಕೆ ಗಲತ್‌ಕುಷ್ಠ ಎಂದು ಹೆಸರು.

ಮನುಷ್ಯನು ಜನ್ಮಾಂತರದಲ್ಲಿ ಮಾಡಿದ ದುಷ್ಕರ್ಮಗಳಿಂದ ಇಂಥ ಘೋರ ರೋಗಗಳು ಬರುತ್ತವೆ. ಈ ರೋಗದಿಂದ ಅವನಿಗೆ ವಿಚಿತ್ರ ಯಾತನೆ. ದೇಹದಲ್ಲೆಲ್ಲಾ ಗಾಯಗಳು ತುಂಬಿದವು. ಆ ಗಾಯಗಳಿಂದ ರಕ್ತ ಸೋರುತ್ತಿತ್ತು, ಕೀವು ಸುರಿಯುತ್ತಿತ್ತು. ಸೊಣ ನೊರಜು ಮೊದಲಾದ ಕ್ರಿಮಿಗಳು ಅವನ ದೇಹವನ್ನು ಮುತ್ತಿ ಕಿತ್ತಿ ತಿನ್ನುತ್ತಿದ್ದವು. ಆದ್ದರಿಂದ ಅವನಿಗೆ ಭಯಂಕರ ದುಃಖ. ದೇಹ ಒಣಗಿತು. ಕ್ಷಯರೋಗಿಯಂತೆ ಅವನು ಕೊರಗಿ ಸೊರಗಿ ಹೋದ.

ಒಂದು ದಿನ ಅವನು ತನ್ನ ಮಂತ್ರಿಗಳನ್ನು ಕರೆದು ಹೇಳಿದ.

"ಅಮಾತ್ಯರೇ, ನೀವು ರೋಗಗ್ರಸ್ತವಾದ ನನ್ನ ಶರೀರವನ್ನು ನೋಡುತ್ತಿದ್ದೀರಿ. ದೇಹದ ತುಂಬ ಮಾಯದ ಗಾಯಗಳು, ಬಸಿಯುವ ರಕ್ತ, ಸೋರುವ ಕೀವುಗಳು. ಅದರಿಂದ ನನ್ನ ಕಾಯ ಕಳೇವರವು ಕೊಳೆತಿದೆ. ಮೈಯೆಲ್ಲ ಹುಳುತು ಹೋಗಿದೆ. ಇವುಗಳ

ದುರ್ವಾಸನೆ ಅಸಹ್ಯ, ನನ್ನ ಜೀವನವೇ ವ್ಯರ್ಥ. ಆದುದರಿಂದ ನಾನು ಈಗ ಅರಣ್ಯಕ್ಕೆ ಹೋಗುತ್ತೇನೆ. ನನ್ನ ಈ ರೋಗಗ್ರಸ್ತ ಮುಖವನ್ನು ಇನ್ನು ಮುಂದೆ ಪ್ರಜೆಗಳಿಗೆ ತೋರಿಸಲಾರೆ. ನನ್ನ ಮಗನಾದ ಹೇಮಕಂಠ ವೀರ, ಶೂರ, ಧೀರ, ಧೀಮಂತ. ಅವನನ್ನು ನನ್ನ ಸ್ಥಾನದಲ್ಲಿ ಸಿಂಹಾಸನದ ಮೇಲೆ ಕೂಡಿಸಿ, ಪಟ್ಟಾಭಿಷೇಕ ಮಾಡಿ ನೀವು ನ್ಯಾಯಯುತವಾಗಿ ರಾಜ್ಯವನ್ನು ಆಳಿರಿ.''

ಅವನ ಮಾತನ್ನು ಕೇಳಿ ರಾಜನಿಷ್ಠರಾದ ಮಂತ್ರಿಗಳಿಗೂ ಬಹಳ ದುಃಖವಾಯಿತು. ಅವರೆಲ್ಲರೂ ಕೈ ಮುಗಿದು, ನಮಸ್ಕಾರ ಮಾಡಿ ಕೇಳಿಕೊಂಡರು. ''ಮಹಾರಾಜರೇ, ನಾವು ನಿಮ್ಮನ್ನು ಬಿಟ್ಟು ಇರಲಾರೆವು.''

ಇದನ್ನೆಲ್ಲ ಕೇಳಿ ತಿಳಿದು, ಮಹಾರಾಣಿ ಸುಧರ್ಮೆಯು ದುಃಖಿತಳಾಗಿ ನುಡಿದಳು - ''ಅಮಾತ್ಯರೇ, ನನ್ನ ಮಾತನ್ನು ಕೇಳಿರಿ. ಕಾಡಿಗೆ ಹೊರಟ ಮಹಾರಾಜರನ್ನು ಸೇವಿಸಲು ನಾನೂ ಅವರ ಜೊತೆ ಹೊರಡುತ್ತೇನೆ. ಹೇಮಕಂಠ ಇನ್ನೂ ಚಿಕ್ಕವ. ನೀವೆಲ್ಲ ಹಿರಿಯ ಮಂತ್ರಿಗಳು, ಸೇನಾಪತಿಗಳು ಅವನಿಗೆ ಬೆಂಬಲವಾಗಿ ನಿಂತು ಅವನಿಂದ ರಾಜ್ಯಶಾಸನ ಮಾಡಿಸಿರಿ. ಇದೇ ನಿಮ್ಮ ಮುಖ್ಯ ಕರ್ತವ್ಯ.''

ಇದನ್ನೆಲ್ಲ ಕೇಳುತ್ತ ಅಲ್ಲಿಯೇ ಕುಳಿತ ಹೇಮಕಂಠನು ''ತಂದೆಯೇ, ಎಣ್ಣೆಯಿಲ್ಲದೆ ದೀಪ ಉರಿಯಲಾರದು. ಜೀವವಿಲ್ಲದೆ ದೇಹ ನಿಲ್ಲಲಾರದು. ಅದರಂತೆ ನೀವು ಇಲ್ಲದೆ ನಾನು ಅರಮನೆಯಲ್ಲಿ ಇರಲಾರೆ, ರಾಜ್ಯ ಶಾಸನವನ್ನು ಮಾಡಲಾರೆ'' ಎಂದು ದೀನನಾಗಿ ಬಿನ್ನವಿಸಿದನು.

ಸೋಮಕಾಂತ ರಾಜನು ಮಂತ್ರಿ, ಮಡದಿ, ಮಗ ಮೂವರ ಮಾತನ್ನು ಕೇಳಿ ಸಂತಸಗೊಂಡನು. ಆದರೆ ಅವನ ರೋಗ ಪ್ರಜ್ಞೆ ಅವನಿಗೆ ಕರ್ತವ್ಯದ ಎಚ್ಚರಿಕೆಯನ್ನು ಕೊಡುತ್ತಲೇ ಇತ್ತು. ಆಗ ಅವನು ತನ್ನ ಮಗನಿಗೆ ಪರಿಪರಿಯಿಂದ ಬೋಧಿಸಿದ. - ''ಹೇಮಕಂಠ, ನೀನು ನನ್ನ ಪುತ್ರ. ಪುತ್ರನ ಕರ್ತವ್ಯ ಮೂರು - ಬದುಕಿ ಇದ್ದಾಗ ತಂದೆಯ ಆಜ್ಞೆಯನ್ನು ಪಾಲಿಸುವುದು. ಸತ್ತ ಬಳಿಕ ಪ್ರತಿ ವರುಷ ಶ್ರಾದ್ಧ ಮಾಡುವುದು. ಮೂರನೆಯದು ಗಯಾಕ್ಷೇತ್ರದ ವಿಷ್ಣುಪಾದದಲ್ಲಿ ತಂದೆಯ ಹೆಸರಿನಿಂದ ಪಿಂಡ ಇಡುವದು. ಈ ಮೂರು ಮಾಡಿದರೆ ಮಾತ್ರ ಮಗನು ಪುತ್ರ ಎನಿಸುವನು. ಆದುದರಿಂದ ಈಗ ನೀನು ನನ್ನ ಆಜ್ಞೆಯಂತೆ ರಾಜ್ಯವನ್ನು ಪರಿಪಾಲಿಸು, ಪ್ರಜೆಗಳನ್ನು ಮಕ್ಕಳಂತೆ ಸಂರಕ್ಷಿಸು. ಈ ನನ್ನ ಐದು ಜನ ಮಂತ್ರಿಗಳು ಪ್ರಾಮಾಣಿಕರು, ರಾಜ್ಯಶಾಸ್ತ್ರ ವಿಶಾರದರೂ, ಸಮರ್ಥ ಶಾಸಕರೂ ಆಗಿರುತ್ತಾರೆ. ಅವರ ಸಲಹೆ ಹಾಗೂ ಮಾರ್ಗದರ್ಶನದಲ್ಲಿ ನೀನು ನಮ್ಮ ವಂಶ ಪರಂಪರಾ ಪ್ರಾಪ್ತವಾದ ಸಾಮ್ರಾಜ್ಯವನ್ನು ಆಳು; ಧರ್ಮವಂತನೂ, ನೀತಿವಂತನೂ ಆಗಿ ಬಾಳು. ಇದು ನನ್ನ ಆಜ್ಞೆ. ಮಂತ್ರಿಗಳಿಗೂ ಇದೇ ನನ್ನ ಅಪ್ಪಣೆ. ಅವರೆಲ್ಲರೂ ರಾಜಾಜ್ಞೆ ಎಂದು ಊರಲ್ಲೇ ಇದ್ದು ನಿನ್ನನ್ನು ನ್ಯಾಯಮಾರ್ಗದಲ್ಲಿ ಮುನ್ನಡೆಸಲಿ.''

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಎರಡನೇ ಅಧ್ಯಾಯ ಮುಗಿದುದು.*

—o—

## ಸೋಮಕಾಂತನ ಉಪದೇಶ

ಅಧ್ಯಾಯ - ೩

**ಸೂತ :-** ಸೋಮಕಾಂತರಾಜನು ಮಂತ್ರಿಗಳಿಗೂ, ಮಗನಿಗೂ ತನ್ನ ಆಜ್ಞೆಯನ್ನು ತಿಳಿಸಿ ಹೇಮಕಂಠನನ್ನು ತನ್ನ ಮಂತ್ರಾಗಾರಕ್ಕೆ ಕರೆದುಕೊಂಡು ಹೋಗಿ ಅವನಿಗೆ ರಾಜನ ದೈನಂದಿನ ಕ್ರಮವನ್ನೂ ದೇವತಾ ಉಪಾಸನೆಯ ರೀತಿಯನ್ನೂ, ರಾಜ್ಯ ಶಾಸನದ ಪದ್ಧತಿಯನ್ನೂ ಚೆನ್ನಾಗಿ ತಿಳಿಸಿಕೊಟ್ಟನು. ''ವಿಷ್ಣು, ಶಿವ, ಸೂರ್ಯ, ಮೊದಲಾದ ದೇವತೆಗಳನ್ನು ಭಕ್ತಿಯಿಂದ ಪ್ರಾತಃಕಾಲದಲ್ಲೆದ್ದು ಸ್ನಾನ ಮಾಡಿ ಪೂಜಿಸಬೇಕು. ಗೋಬ್ರಾಹ್ಮಣರನ್ನು ಸಂರಕ್ಷಿಸಬೇಕು. ಸುಳ್ಳು ಮಾತನಾಡಬಾರದು, ಸತ್ಯವನ್ನೆಂದೂ ಬಿಡಬಾರದು. ದುಷ್ಟರನ್ನು ದಂಡಿಸಬೇಕು. ಸಜ್ಜನರನ್ನು ರಕ್ಷಿಸಬೇಕು. ಸಂಧಿವಿಗ್ರಹಗಳನ್ನು ತಿಳಿದಿರಬೇಕು. ಪ್ರಜಾ ಜನರನ್ನು ತಾಯಿ-ತಂದೆಗಳಂತೆ ರಕ್ಷಿಸಬೇಕು. ರಾಜ್ಯದಲ್ಲಿ ಧರ್ಮಚಕ್ರವು ಪ್ರವರ್ಧಿತವಾಗುವಂತೆ ನ್ಯಾಯ ನಿಷ್ಠುರನಾಗಿ ಪಾಪಭೀರುವಾಗಿ ನೀತಿನಿಯಮ ನಿಷ್ಠನಾಗಿ ನಡೆದುಕೊಳ್ಳಬೇಕು.'' ಹೀಗೆ ಮಗನಾದ ಹೇಮಕಂಠನಿಗೆ ಸೋಮಕಾಂತ ಮಹಾರಾಜನು ಉಪದೇಶವನ್ನು ನೀಡಿದನು.

ಸೋಮಕಾಂತ ಮಹಾರಾಜನ ಅಪ್ಪಣೆಯಂತೆ ಕ್ಷೇಮಂಕರ, ರೂಪವಂತ, ವಿದ್ಯಾಧೀಶನೇ ಮೊದಲಾದ ಮಂತ್ರಿಗಳ ಶ್ರೌತಕಾಂಡದಲ್ಲಿ ನಿಷ್ಣಾತರಾದ ಋತ್ವಿಜರನ್ನು, ಬ್ರಾಹ್ಮಣರನ್ನು ಕರೆಸಿ ಹೇಮಕಂಠನಿಗೆ ಶಾಸ್ತ್ರೋಕ್ತರೀತಿಯಿಂದ ತನ್ನ ವಂಶಪರಂಪರೆಯಿಂದ ಪ್ರಾಪ್ತವಾದ ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡಿಸಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಸೋಮಕಾಂತನ ಉಪದೇಶ ಎಂಬ ಮೂರನೇ ಅಧ್ಯಾಯ ಮುಗಿದುದು*



## ಸೋಮಕಾಂತನ ಅರಣ್ಯ ಪ್ರಯಾಣ

ಅಧ್ಯಾಯ - ೪

**ಸೂತ :-** ಹೇಮಕಂಠನ ಪಟ್ಟಾಭಿಷೇಕ ಮಹೋತ್ಸವ ಮುಗಿದ ಬಳಿಕ ಸೋಮಕಾಂತ ಮಹಾರಾಜನು ಮಹಾರಾಣಿ ಸುಧರ್ಮೆಯೊಂದಿಗೆ ಅರಣ್ಯಕ್ಕೆ ಹೊರಟನು. ಆಗ ಪ್ರಜಾವತ್ಸಲನಾದ ಆ ಮಹಾರಾಜನನ್ನು ಬಿಟ್ಟಿರಲಾರದೆ ಮಂತ್ರಿಗಳು, ಪ್ರಜೆಗಳು ಅರಸನ ಜೊತೆಗೆ ನಾವೂ ಅಡವಿಗೆ ಬರುತ್ತೇವೆಂದು ಬೆನ್ನು ಹತ್ತಿದರು. ಹೇಮಕಂಠನು ಕೂಡ ದುಃಖದಿಂದ ಗದ್ಗದಿತಕಂಠನಾಗಿ ತಾನೂ ಅರಣ್ಯಕ್ಕೆ ಬರುತ್ತೇನೆಂದು ಬೆನ್ನು ಹತ್ತಿದ. ಆಗ ಮಹಾರಾಜನು ಅವರೆಲ್ಲರಿಗೂ ಕಠೋರವಾಗಿ ಆಜ್ಞೆಯಿತ್ತು, ಕರ್ತವ್ಯವನ್ನು ಬೋಧಿಸಿ, ರಾಜ್ಯ ರಕ್ಷಣಾ ಪ್ರಜಾಪಾಲನವೇ ನಿಮ್ಮ ಮುಖ್ಯ ಗುರಿ. ಅದನ್ನೇ ನೀವು ಮಾಡಿರಿ ಎಂದು ಹೇಳಿ ನಾನಾ ಬಗೆಯಿಂದ ಅವರ ಕರ್ತವ್ಯ ಕರ್ಮಗಳನ್ನು ವರ್ಣಾಶ್ರಮೋಚಿತವಾದ ಧರ್ಮಗಳನ್ನೂ ಸರಿಯಾಗಿ ಬೋಧಿಸಿ ಹಿಂದಕ್ಕೆ ಕಳುಹಿಸಿದನು.

ಹೇಮಕಂಠನು ತಂದೆಯ ನ್ಯಾಯ ನಿಷ್ಠುರವಾದ ಆಜ್ಞೆಯನ್ನು ಗತ್ಯಂತರವಿಲ್ಲದೆ ಒಪ್ಪಿಕೊಂಡು ಮಂತ್ರಿ, ಪ್ರಜೆಗಳೊಂದಿಗೆ ರಾಜ್ಯಕ್ಕೆ ಹಿಂದಿರುಗಿದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಸೋಮಕಾಂತನ ಅರಣ್ಯಪ್ರಯಾಣವೆಂಬ ನಾಲ್ಕನೇ ಅಧ್ಯಾಯ ಮುಗಿದುದು*



## ಸುಧರ್ಮಾ-ಚ್ಯವನ ಸಂಭಾಷಣೆ

## ಅಧ್ಯಾಯ - ೫

**ಋಷಿಗಳು :-** ''ಪೂಜ್ಯರೇ, ಸೋಮಕಾಂತನು ಅರಣ್ಯವನ್ನು ಹೇಗೆ ಪ್ರವೇಶಿಸಿದ ? ಅವನಿಗೆ ಸಹಾಯಕರು ಯಾರಿದ್ದರು ? ಅವನು ಅರಣ್ಯದಲ್ಲಿ ಯಾವ ಕಾರ್ಯ ಮಾಡಿದನೆಂಬುದನ್ನು ಹೇಳಿರಿ.''

**ಸೂತ :-** ಮುನಿವರ್ಯರೆ, ಸೋಮಕಾಂತ ರಾಜನು ನಿಷ್ಠುರವಾಗಿ ಹೇಳಿ ಕಠೋರವಾದ ಆಜ್ಞೆ ಮಾಡಿದ್ದರಿಂದ ಪುತ್ರ, ಮಿತ್ರ, ಮಂತ್ರಿ ಪರಿವಾರ ಮೊದಲಾದ ಎಲ್ಲರೂ ರಾಜಧಾನಿಗೆ ಮರಳಿದರು. ಆದರೆ ಮಹಾರಾಜನ ಮೇಲೆ ಹೆಚ್ಚಿನ ಭಕ್ತಿಯುಳ್ಳ ಮತ್ತು ಅವನ ಏಕಾಂತ ಭಕ್ತರಾದ, ಸುಬಲ, ಜ್ಞಾನಗಮ್ಯ ಎಂಬಿಬ್ಬರು ಮಂತ್ರಿಗಳು ಮಾತ್ರ ಸೋಮಕಾಂತನು ಎಷ್ಟು ಹೇಳಿದರೂ ಕೇಳದೆ, ರಾಜನ ವಿಯೋಗವನ್ನು ತಾಳದೆ, ಅವನನ್ನು ಬಿಟ್ಟಿರಲು ಆಗದೆ ಸೋಮಕಾಂತನನ್ನು ಅನುಸರಿಸಿ ಕಾಡಿಗೆ ಬಂದರು. ಅವನ ಧರ್ಮಪತ್ನಿಯಾದ ಸುಧರ್ಮೆಯು ಸೀತಾಮಾತೆಯು ಹಿಂದೆ ರಾಮನನ್ನನುಸರಿಸಿ ಅರಣ್ಯಕ್ಕೆ ಹೋದಂತೆ ತಾನೂ ಕೂಡ ಪತಿಯ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತ ಅವನೊಡನೆ ಕಾಡಿಗೆ ನಡೆದಳು. ಹೀಗೆ ರಾಜಪರಿವಾರದವರೆಲ್ಲರೂ ಗಹನತರವಾದ ಅರಣ್ಯದಲ್ಲಿ ಮಾರ್ಗಕ್ರಮಣಮಾಡಿದರು. ಬಹಳ ಹೊತ್ತು ವಿಷಮವಾದ ವನವೀಥಿಗಳಲ್ಲಿ ನಡೆದು ಅವರು ಬಹಳ ಶ್ರಾಂತಗೊಂಡರು. ಹಸಿವೆ ನೀರಡಿಕೆಗಳಿಂದ ಬಾಯಾರಿ ಬಳಲಿ ಬಳಿಕ ವಿಶ್ರಾಂತಿಗಾಗಿ ಅವರೆಲ್ಲರೂ ಒಂದು ಮರದಡಿಯಲ್ಲಿ ಕುಳಿತುಕೊಂಡಿದ್ದರು. ಕಿಂಚಿತ್‌ಕಾಲ ಶ್ರಮ ಪರಿಹಾರ ಮಾಡಿಕೊಂಡು ಸಮೀಪದ ಸರೋವರಕ್ಕೆ ಹೋಗಿ ಸ್ನಾನ ಮಾಡಿದರು. ವಿಹಿತವಾದ ಕರ್ಮಾಚರಣೆ ಆಹ್ನಿಕಗಳನ್ನು ಮಾಡಿ ಮುಗಿಸಿ ಅರಣ್ಯದಲ್ಲಿ ಉದುರಿ ಬಿದ್ದ ರುಚಿ-ರುಚಿಯಾದ ಹಣ್ಣು ಹಂಪಲುಗಳನ್ನು ಭಕ್ಷಿಸಿದರು. ಅಲ್ಲಿದ್ದ ಮೆತ್ತಗಿನ ಮರಳಿನ ಮೇಲೆ ಮಹಾರಾಜನು ಆಯಾಸದಿಂದ ಬಳಲಿ ವಿಶ್ರಮಿಸಿದನು. ಸುಧರ್ಮಾ ಮಹಾರಾಣಿಯು ಪತಿಯ ಪಾದ ಸಂವಾಹನ ಮಾಡುತ್ತಿದ್ದಳು.

ಆ ಕಾಲದಲ್ಲಿ ಒಬ್ಬ ತೇಜಃಪುಂಜನಾದ ಮುನಿಕುಮಾರನು ಅಲ್ಲಿಗೆ ಬಂದನು. ಹಾಗೂ ಸುಧರ್ಮಾದೇವಿಯು ವಿನಯದಿಂದ ಅವನಿಗೆ ವಂದಿಸಿ ಕೈ ಮುಗಿದು ಕೇಳಿದಳು - ''ಪೂಜ್ಯರೇ, ತಾವು ಯಾರು ಎಲ್ಲಿಗೆ ಹೊರಟಿರುವಿರಿ ? ನಿಮ್ಮ ತಂದೆ ಯಾರು ? ತಾಯಿ ಯಾರು ? ದಯವಿಟ್ಟು ತಿಳಿಸಿರಿ.''

ಮಹಾರಾಣಿಯ ಮಧು ಮಧುರ ಮಾತನ್ನು ಕೇಳಿ ಆ ಮುನಿಕುರಮಾರನು ಹೇಳಿದನು ''ಮಂಗಳಾಂಗಿ, ಮಹಾತಪಸ್ವಿಗಳಾದ ಭೃಗುಮುನಿಯೇ ನನ್ನ ತಂದೆ. ಅವರ ಧರ್ಮಪತ್ನಿ ಪುಲೋಮೆ ನನ್ನ ತಾಯಿ. ನೀರು ತರಲಿಕ್ಕಾಗಿ ನಾನು ನನ್ನ ಆಶ್ರಮದಿಂದ ಇಲ್ಲಿಗೆ ಬಂದಿದ್ದೇನೆ. ನನ್ನ ಹೆಸರು ಚ್ಯವನ. ಇನ್ನು ನಿಮ್ಮ ಸಮಾಚಾರ ತಿಳಿಸಿರಿ. ನೀವು ಯಾರು ?

ನಿನ್ನ ತೊಡೆಯ ಮೇಲೆ ತಲೆ ಇಟ್ಟು ಮಲಗಿರುವ ಈ ಪುರುಷನಾರು ? ನೀವು ಈ ಕಾಡಿಗೆ ಬಂದ ಕಾರಣವೇನು ? ಇಲ್ಲಿ ಮಲಗಿದ ಮನುಷ್ಯನ ದೇಹದಿಂದ ರಕ್ತ, ಕೀವು ಬಸಿಯುತ್ತಲೇ ಇದೆ. ಆದರಿಂದ ಇವನ ದೇಹವು ದುರ್ಗಂಧಮಯವಾಗಿದೆ. ಇದಕ್ಕೆ ಇವನ ಯಾವ ದುಷ್ಕರ್ಮ ಕಾರಣ ? ಇವನು ಮಹಾರೋಗಿಷ್ಠ. ಘೋರ ವ್ಯಾಧಿಯಾದ ಕುಷ್ಠ ಈ ಪುರುಷನ ದೇಹಿವನ್ನು ಜರ್ಜರಿತವನ್ನಾಗಿ ಮಾಡಿದೆ. ಆ ದೇಹದಿಂದ ದುರ್ಗಂಧ ಸೂಸುತ್ತಿದೆ. ನೀನು ಪರಮಸುಂದರಿ, ಕೋಮಲಾಂಗಿ, ನಿನ್ನ ಅಂಗಾಂಗಳಲ್ಲಿ ಸೌಂದರ್ಯದ ಸಹಸ್ರಾರವೇ ಅರಳಿನಿಂತಿದೆ. ಇಂಥ ಚೆಲುವೆಯಾದ ನೀನು ರೋಗಿಷ್ಠನಾದ ಈ ಪುರುಷನನ್ನೆ ಏಕೆ ವರಿಸಿದೆ ? ಇವನನ್ನು ವರಿಸಿ ಆತ್ಮವಂಚನೆಯನ್ನೇಕೆ ಮಾಡಿಕೊಂಡೆ ?''

**ಸುಧರ್ಮೆ :-** ''ಇಲ್ಲಿ ಗಿಡದ ನೆರಳಿನಲ್ಲಿ ನನ್ನ ತೊಡೆಯ ಮೇಲೆ ತಲೆ ಇಟ್ಟು ಒರಗಿದವ ಸೋಮಕಾಂತ ಮಹಾರಾಜ. ಸೌರಾಷ್ಟ್ರ ದೇಶದಲ್ಲಿ ಸುಪ್ರಸಿದ್ಧವಾದ ದೇವತಾ ಎಂಬ ರಾಜಧಾನಿಯಲ್ಲಿ ಇವನು ಶಾಸನ ಮಾಡುತ್ತಿದ್ದ. ಜನ್ಮಾಂತರದ ದುಷ್ಕರ್ಮದಿಂದ ಇವರಿಗೆ ಕುಷ್ಠ ತಗಲಿದೆ. ಆದ್ದರಿಂದ ಪುತ್ರನಾದ ಹೇಮಕಂಠನಿಗೆ ರಾಜ್ಯ ಒಪ್ಪಿಸಿ ನಾವಿಬ್ಬರೂ ಅರಣ್ಯಕ್ಕೆ ಬಂದಿದ್ದೇವೆ. ನಮ್ಮ ಜೊತೆಗೆ ಕಾಡಿಗೆ ಬಂದ ಸುಬಲ ಮತ್ತು ಜ್ಞಾನಗಮ್ಯ ಎಂಬ ಮಂತ್ರಿಗಳು ಅರಸನ ಅಪ್ಪಣೆ ಪಡೆದು ಆಹಾರಭೂತವಾದ ಹಣ್ಣು-ಹಂಪಲು ತರಲು ಅಡವಿಯಲ್ಲಿ ಹೋಗಿದ್ದಾರೆ. ನಮಗೆ ಈ ರೋಗದ ಉಪದ್ರವದಿಂದ ಜೀವನದಲ್ಲಿ ಜಿಗುಪ್ಸೆ ಮೂಡಿದೆ. ಆತ್ಮಹತ್ಯೆ ಮಾಡಿಕೊಳ್ಳಬಾರದು ಎಂದು ಬದುಕಿ ಇದ್ದೇವೆ. ಹೇಗಾದರೂ ಮಾಡಿ ನಾವು ಈ ಜನ್ಮವನ್ನು ನೀಗಬೇಕಾಗಿದೆ. ಈ ಘೋರ ಅರಣ್ಯದಲ್ಲಿ ಮಾಂಸಾಹಾರಿಗಳಾದ ಕ್ರೂರ ಶ್ವಾಪದಗಳು ನಮ್ಮನ್ನು ಕೊಂದು ತಿನ್ನಬಹುದೆಂದು ಈ ಕಾಡಿಗೆ ಬಂದಿದ್ದೇವೆ. ಏನೋ ಆಸೆ ಹಿಡಿದು ನಿಂತಿದ್ದೇವೆ. ಆದರೆ ಪಾಪಿಗಳಾದ ನಮ್ಮ ಮಾಂಸವನ್ನು ಒಂದು ಪ್ರಾಣಿಯೂ ಮುಟ್ಟುವುದಿಲ್ಲ. ಹುಲಿ, ಕರಡಿ, ಸಿಂಹ, ಹಾವು, ಆನೆ ಚಿರತೆ ಮೊದಲಾದ ಯಾವ ಪ್ರಾಣಿಯೂ ನಮ್ಮನ್ನು ಮುಟ್ಟುವುದಿಲ್ಲ. ಒಂದಾನೊಂದು ಕಾಲದಲ್ಲಿ ಅತ್ಯಂತ ವೈಭವದ ಶಿಖರದಲ್ಲಿ ಮೆರೆದ ನನ್ನ ಪತಿಯು ಇಂದು ಕ್ರಿಮಿ-ಕೀಟಗಳಿಂದ ಮುತ್ತಿದವನಾಗಿ ದಿಕ್ಕಿಲ್ಲದವರಂತೆ ಈ ಅನಾಥ ಜೀವನವನ್ನು ದುಃಖದಿಂದ ಅನುಭವಿಸುತ್ತಿದ್ದಾನೆ. ಈ ದುಃಖ ಸಮುದ್ರದಿಂದ ನಾವು ಪಾರಾಗುವ ಬಗೆ ಹೇಗೆ ? ಎಂದು ದೀನದೀನಳಾಗಿ ಮಹಾರಾಣಿಯು ತನ್ನ ರೋಗಗ್ರಸ್ತನಾದ ಪತಿಯ ಹಾಗೂ ತನ್ನ ದುಃಖವನ್ನು ತೋಡಿಕೊಂಡಳು.''

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಸುಧರ್ಮಾ-ಚ್ಯವನ ಸಂಭಾಷಣೆ ಎಂಬ ಐದನೇ ಅಧ್ಯಾಯ ಮುಗಿದುದು*

—o—

## ಭೃಗುಮುನಿಗಳ ಆಶ್ರಮದಲ್ಲಿ ರಾಜಪರಿವಾರಗಳ ಆತಿಥ್ಯ | ಅಧ್ಯಾಯ - ೬

**ಸೂತ :-** ಸುಧರ್ಮಾದೇವಿಯ ಕರುಣಕಥೆಯನ್ನು ಕೇಳಿ ಭೃಗುಪುತ್ರರಾದ ಚ್ಯವನರು, ವ್ಯಥಿತಚಿತ್ತರಾದರು. ಅವರಿಗೆ ಏನೂ ಮಾತನಾಡಲಿಕ್ಕೆ ತೋರಲಿಲ್ಲ. ನೀರು ತುಂಬಿದ ಕೊಡವನ್ನು ಹೊತ್ತುಕೊಂಡು ತಮ್ಮ ಆಶ್ರಮಕ್ಕೆ ಬಂದರು. ತಮ್ಮ ತಂದೆಯಾದ ಭೃಗುಮುನಿಗಳಿಗೆ ಸೋಮಕಾಂತ ಮಹಾರಾಜನ ದಾರುಣವಾದ ರೋಗದ ವೃತ್ತಾಂತವನ್ನೂ ಅವನ ಮಡದಿಯ ಸಂತಪ್ತ ಹೃದಯದ ದುಃಖ ದುಮ್ಮಾನಗಳನ್ನೂ ತಿಳಿಸಿದರು. ಅದನ್ನು ಕೇಳಿ ಕರುಳು ಕರಗಿಹೋದ ಭೃಗುಋಷಿಗಳು ದುಃಖಾಕ್ರಾಂತರಾದ ಆ ರಾಜದಂಪತಿಗಳನ್ನೂ ಅವರ ಇಬ್ಬರೂ ಅನುಯಾಯಿ ಮಂತ್ರಿಗಳನ್ನೂ ತಮ್ಮ ಆಶ್ರಮಕ್ಕೆ ಕರೆಸಿಕೊಂಡರು. ಚ್ಯವನ ಋಷಿಯ ಆದೇಶದಂತೆ ರಾಜಪರಿವಾರದವರು ಭೃಗುಋಷಿಯ ಆಶ್ರಮಕ್ಕೆ ಬಂದರು.

ಆಶ್ರಮದಲ್ಲಿ ವ್ಯಾಘ್ರಾಸನದಲ್ಲಿ ಮಂಡಿಸಿದ ಭೃಗುಮುನಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕೈ ಮುಗಿದು ನಿಂತುಕೊಂಡರು. ಭಕ್ತಿಯಿಂದ ಸೋಮಕಾಂತ ಮಹಾರಾಜನು ಗದ್ಗದಿತ ಕಂಠನಾಗಿ ನುಡಿದನು.

**ಸೋಮಕಾಂತ :-** "ಪೂಜ್ಯರೇ, ನನ್ನ ಜನ್ಮಾಂತರದ ದುಷ್ಕರ್ಮದಿಂದ ಭೀಕರವಾದ ಈ ಕುಷ್ಠರೋಗ ನನ್ನನ್ನು ಆವರಿಸಿದೆ. ಇದಕ್ಕೆ ಅನೇಕ ಉಪಾಯಗಳನ್ನು ಮಾಡಿದೆ. ಎಲ್ಲವೂ ವ್ಯರ್ಥವಾದವು. ಅದಕ್ಕಾಗಿ ನಾನು ತಮಗೆ ಶರಣು ಬಂದಿದ್ದೇನೆ. ಈ ಘೋರ ರೋಗಕ್ಕೆ ಏನಾದರೂ ಉಪಾಯವನ್ನು ದಯವಿಟ್ಟು ಹೇಳಿರಿ."

**ಭೃಗುಋಷಿ :-** ರಾಜೇಂದ್ರ, ನೀನು ಗಾಬರಿಯಾಗಬೇಡ, ಚಿಂತೆಯನ್ನೂ ಮಾಡಬೇಡ. ನಿನ್ನ ರೋಗ ಪರಿಹಾರಕ್ಕೆ ನಾನು ಉಪಾಯವನ್ನು ಹೇಳುತ್ತೇನೆ. ನೀನು ಅದರ ಚಿಂತೆಯನ್ನು ಪೂರ್ಣವಾಗಿ ಬಿಟ್ಟುಬಿಡು. ಈಗ ನೀವೆಲ್ಲರೂ ಬಹಳ ಹಸಿದು ಬಂದಿದ್ದೀರಿ, ಬಳಲಿದ್ದೀರಿ. ಈಗ ಪ್ರಕೃತ ಏಳಿರಿ, ಮಂಗಳ ಸ್ನಾನ ಮಾಡಿರಿ. ಭೋಜನವನ್ನು ಮಾಡಿರಿ. ಅನಂತರ ನಿಮಗೆ ನಾನು ನಿಮ್ಮ ರೋಗಪರಿಹಾರದ ಉಪಾಯವನ್ನು ಹೇಳುತ್ತೇನೆ.

ಭೃಗುಋಷಿಗಳು ರಾಜಪರಿವಾರವನ್ನು ಹೀಗೆ ಸವಿನುಡಿಯಿಂದ ಸಂತೈಸಿ, ಅವರಿಗೆ ಸುಗಂಧ ತೈಲ ನೀಡಿ ಸ್ನಾನಮಾಡಿಸಿದರು, ಷಡ್ರಸಗಳಿಂದ ಕೂಡಿದ ಮೃಷ್ಟಾನ್ನ ಪಕ್ವಾನ್ನ ಭೋಜನ ಮಾಡಿಸಿದರು. ಭೃಗುಋಷಿಗಳ ತಪೋಬಲದಿಂದ ಮಧುಪಾಕ ಫಲಗಳು ಸಿದ್ಧವಾಗಿದ್ದವು. ಆಗ ರಾಜಪರಿವಾರದವರು ಮುನಿಗಳ ಆಜ್ಞೆಯಂತೆ ಸ್ನಾನಮಾಡಿ ಅಲಂಕೃತರಾಗಿ ಸುಗ್ರಾಸ ಭೋಜನ ಮಾಡಿದರು. ಅನಂತರ ಸ್ವಲ್ಪಕಾಲ ವಿಶ್ರಾಂತಿ ಪಡೆದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಭೃಗುಮುನಿಗಳ ಆಶ್ರಮದಲ್ಲಿ ರಾಜಪರಿವಾರಗಳ ಆತಿಥ್ಯ ಎಂಬಲ್ಲಿಗೆ ಆರನೇಯ ಅಧ್ಯಾಯ ಮುಗಿದುದು*

—o—

## ಸೋಮಕಾಂತನ ಪೂರ್ವಜನ್ಮದ ಕಥಾ



**ಋಷಿಗಳು :-** ಸೋಮಕಾಂತ ಮಹಾರಾಜನು ಭೃಗುಋಷಿಗಳ ಆಶ್ರಮಕ್ಕೆ ಹೋದಬಳಿಕ ಏನು ಮಾಡಿದನು ? ಸರ್ವಜ್ಞಕಲ್ಪರಾದ ಭೃಗುಋಷಿಗಳು ಅವನ ದುಃಖ ಪರಿಹಾರಕ್ಕೇನು ಉಪಾಯ ಹೇಳಿದರು ?

**ಸೂತ :-** ಸೋಮಕಾಂತ ಮಹಾರಾಜನು ಭೃಗುಋಷಿಗಳ ಆಶ್ರಮದಲ್ಲಿ ರಾತ್ರಿ ಕಳೆದು ಮರುದಿನ ಸೂರ್ಯೋದಯ ಸಮಯದಲ್ಲಿ ಸ್ನಾನ ಸಂಧ್ಯಾದಿಗಳನ್ನು ಮುಗಿಸಿಕೊಂಡು ಭೃಗುಋಷಿಗಳ ಬಳಿಗೆ ಬಂದನು. ಆಗ ಋಷಿಗಳು ಅವನಿಗೆ ಅವನ ಪೂರ್ವಜನ್ಮದ ವೃತ್ತಾಂತವನ್ನು ಹೇಳಲು ಆರಂಭಿಸಿದರು.

**ಭೃಗುಮುನಿ :-** ವಿಂಧ್ಯ ಪರ್ವತದ ಬಳಿಯಲ್ಲಿ ಕೊಲ್ಹಾರ ಎಂಬ ಪಟ್ಟಣ. ಅಲ್ಲಿ ಐಶ್ವರ್ಯ ಸಂಪನ್ನನಾದ ಚಿದ್ರೂಪ ಎಂಬ ಒಬ್ಬ ವೈಶ್ಯನಿದ್ದ. ಅವನ ಮಡದಿ ಸುಲೋಚನಾ ರೂಪವತಿಯೂ, ಗುಣವತಿಯೂ ಆಗಿದ್ದಳು. ಸದಾಚಾರ ಸಂಪನ್ನಳಾದ ಸುಲೋಚನೆಯು ಪರಮ ಪತಿವ್ರತಾ ಶಿರೋಮಣಿ, ಆ ಚಿದ್ರೂಪ ಸುಲೋಚನಾ ದಂಪತಿಗಳಿಂದ ನೀನು ಹಿಂದಿನ ಜನ್ಮದಲ್ಲಿ ಹುಟ್ಟಿ ಬಂದಿದ್ದೆ. ಆಗ ನಿನಗೆ ಬ್ರಾಹ್ಮಣರ ಸಲಹೆಯಂತೆ ಕಾಮಂಗ ಎಂಬ ಹೆಸರಿಟ್ಟಿದ್ದರು. ಮುಂದೆ ಕಾಲಕ್ರಮದಿಂದ ನೀನು ದೊಡ್ಡವನಾದ ಬಳಿಕ ನಿನಗೆ ಕುಟುಂಬಿನಿ ಎಂಬ ಕನ್ನೆಯೊಡನೆ ನಿನ್ನ ಮಾತಾಪಿತೃಗಳು ನಿನ್ನ ವಿವಾಹವನ್ನು ನೆರವೇರಿಸಿದರು. ಆ ಕುಟುಂಬಿನಿಯಿಂದ ನಿನಗೆ ಆ ಜನ್ಮದಲ್ಲಿ ಏಳು ಗಂಡು ಮಕ್ಕಳು ಐದು ಹೆಣ್ಣು ಮಕ್ಕಳು ಹುಟ್ಟಿದರು.

ಮುಂದೆ ಕೆಲದಿನಗಳ ಬಳಿಕ ನಿನ್ನ ತಂದೆಯಾದ ಚಿದ್ರೂಪನು ಮುಪ್ಪಿನಿಂದ ಹಣ್ಣಾಗಿ ಮರಣ ಹೊಂದಿದನು. ಪತಿವ್ರತಾ ಶಿರೋಮಣಿಯಾದ ಅವನ ಸತಿ ಸುಲೋಚನೆಯು ಚಿತೆಯನ್ನೇರಿ ತನ್ನ ಪತಿಯೊಡನೆ ಸಹಗಮನ ಮಾಡಿದಳು.

ಆದರೆ ನಿಮ್ಮ ತಾಯಿ-ತಂದೆ ನಿಧನರಾದ ಬಳಿಕ ನೀನು ಅಡ್ಡದಾರಿ ಹಿಡಿದೆ. ಯೌವನ, ಧನ ಸಂಪತ್ತು, ಪ್ರಭುತ್ವ ಅವುಗಳ ಜೊತೆಗೆ ಅವಿವೇಕ ಸೇರಿದುದರಿಂದ ನೀನು ದುರಾಚಾರಿಯಾದೆ. ಮದಿರಾಪಾನ, ವ್ಯಭಿಚಾರ, ಚೌರ್ಯ, ಜೂಜಾಟ ಈ ಎಲ್ಲ ದುರ್ವ್ಯಸನಗಳು ನಿನಗಂಟಿಕೊಂಡವು. ಮನೆಯಲ್ಲಿಯ ಹಣವನ್ನೆಲ್ಲ ಈ ದುರ್ವ್ಯಸನದಲ್ಲಿ ಹಾಳುಮಾಡಿ ನೀನು ದಟ್ಟದರಿದ್ರನಾಗಿ ನಿಂತುಕೊಂಡೆ. ಆದರೂ ನಿನ್ನ ದುರ್ಗುಣ ಹೋಗಲಿಲ್ಲ. ಊರ ಜನರನ್ನು ವಂಚಿಸಿ, ಸುಳ್ಳು ಸಾಕ್ಷಿ, ಮೋಸಗಳಿಂದ ಎಲ್ಲ ಜನರ ದ್ವೇಷಕಟ್ಟಿಕೊಂಡೆ. ಆಗ ಆ ರಾಜ್ಯದ ಪ್ರಜೆಗಳು ಆ ದೇಶದ ಅರಸನಿಗೆ ಹೇಳಿ ನಿನ್ನನ್ನು ಊರು ಬಿಟ್ಟು ಹೊರಗೆ ಹಾಕಿದರು. ನೀನು ಅಡವೀ ಪಾಲಾದೆ. ಅಲ್ಲಿ ಬೇಟೆಯಾಡಿ ಪಶುಪಕ್ಷಿ ಪ್ರಾಣಿಗಳನ್ನು ಕೊಂದು ಮಾಂಸವನ್ನು ತಿಂದು ಜನರನ್ನು ಹಿಂಸಿಸತೊಡಗಿದೆ. ಕಂಡವರನ್ನು ಕೊಲ್ಲತೊಡಗಿದೆ. ಕಳ್ಳರು ಹಾಗೂ ದರೋಡೆಕೋರರ ಗುಂಪು

ಕಟ್ಟಿಕೊಂಡು ಜನರನ್ನು ಹೊಡೆದು ಬಡೆದು ಅಪಾರ ಐಶ್ವರ್ಯವನ್ನು ಸಂಪಾದಿಸಿ ಕಾಡಿನ ರಾಜನಾಗಿ ಮೆರೆಯತೊಡಗಿದೆ.

ನಿಮ್ಮ ಮಾವನಾದ ಕುಟುಂಬಿನಿಯ ತಂದೆಯು ನಿನ್ನ ಮಗಳು ಮೊಮ್ಮಕ್ಕಳನ್ನು ಕರೆದುಕೊಂಡು ಬಂದು ನಿನ್ನ ಬಳಿಗೆ ಬಿಟ್ಟನು. ನೀನು ಅನ್ಯಾಯ, ಕಳುವು, ಕೊಲೆ, ಲೂಟಿಗಳಿಂದ ಸಂಪಾದಿಸಿದ ವಿಪುಲ ಐಶ್ವರ್ಯದಿಂದ ನಿನ್ನ ಮನೆಯ ಜನರು ರಾಜಭೋಗಳನ್ನನುಭವಿಸುತ್ತ ಸುಖಜೀವನದಿಂದ ಬಾಳ ತೊಡಗಿದರು.

ಒಂದು ದಿನ ನೀನು ಆ ಕಾಡಿನಲ್ಲಿ ಓರ್ವ ಬ್ರಾಹ್ಮಣನನ್ನು ನೋಡಿದೆ. ಕೂಡಲೇ ಅವನನ್ನು ಸುಲಿಯಬೇಕೆಂದು ಆ ಬ್ರಾಹ್ಮಣನ ಮೇಲೆರಗಿದೆ. ನೀನು ಅವನನ್ನು ಹೊಡೆಯಹೋದೆ. ಅದರಿಂದ ಹೆದರಿ ಗಡಗಡ ನಡುಗಿದ ಬ್ರಾಹ್ಮಣನು ಬೇಡಿಕೊಂಡ. ''ಅಯ್ಯ, ನೀನು ಧನಾಢ್ಯ. ನಿನ್ನಲ್ಲಿ ಬೇಕಾದಷ್ಟು ಐಶ್ವರ್ಯವಿದೆ. ನನ್ನನ್ನೇಕೆ ಹೊಡೆಯುವೆ? ನಾನು ನಿನಗೇನೂ ತಪ್ಪು ಮಾಡಿಲ್ಲ. ಇದೀಗ ನಾನು ಮದುವೆ ಮಾಡಿಕೊಂಡಿದ್ದೇನೆ. ನನ್ನ ಹೆಂಡತಿಯು ನನಗೆ ಅನುರೂಪಳೂ ಗುಣವತಿಯೂ ಆಗಿದ್ದಾಳೆ. ನೀನು ದಯಮಾಡಿ ನನ್ನನ್ನು ಕೊಲ್ಲಬೇಡ. ನೀನು ನನ್ನನ್ನು ಹಿಂಸಿಸಿದರೆ ನಿನಗೆ ಘೋರ ನರಕವು ಪ್ರಾಪ್ತವಾಗುವುದು. ನೀನು ಮಡದಿ ಮಕ್ಕಳ ಸಲುವಾಗಿ ಕೊಲೆ ಸುಲಿಗೆಯನ್ನು ಮಾಡುತ್ತಲಿರುವೆ. ಜನರ ಹಿಂಸೆ ಮಾಡಿ ಗಳಿಸಿದ ಹಣವನ್ನು ನಿನ್ನ ಮಡದಿ ಮಕ್ಕಳು ಆನಂದದಿಂದ ಭೋಗಿಸುವರು. ಆದರೆ ಇಂಥ ಘೋರ ಪಾಪವನ್ನು ಗೈದ ನಿನಗೆ ನರಕದಲ್ಲಿ ಘೋರ ಯಾತನೆ ತಪ್ಪಿದ್ದಲ್ಲ. ಆ ನರಕದ ದುರಂತ ದುಃಖಗಳನ್ನು ನಿನ್ನ ಸತೀ ಸುತರಾರೂ ಹಂಚಿಕೊಳ್ಳುವುದಿಲ್ಲ. ನೀನೊಬ್ಬನೆ ಅನುಭವಿಸಬೇಕಾಗುವುದು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಸೋಮಕಾಂತನ ಪೂರ್ವಜನ್ಮದ ಕಥಾ ಕಥನ ಎಂಬ ಏಳನೇ ಅಧ್ಯಾಯ ಮುಗಿದುದು*

—o—

**ಭೃಗುಋಷಿ :-** ಆ ಬಡ ಬ್ರಾಹ್ಮಣನು ದೀನನಾಗಿ ಎಷ್ಟು ರೀತಿಯಿಂದ ಅಲ್ಪರಿದರೂ ಬೇಡಿಕೊಂಡರೂ ನಿನಗೆ ದಯೆ ಬರಲಿಲ್ಲ. ಕ್ರೂರನೂ ನಿಷ್ಕರುಣಿಯೂ ಆದ ನೀನು ಹರಿತವಾದ ಖಡ್ಗವನ್ನು ಕೈಯಲ್ಲಿ ತೆಗೆದುಕೊಂಡು ಬೆಕ್ಕು ಇಲಿಯನ್ನು ಕಚ್ಚಿಕೊಲ್ಲುವಂತೆ ಆ ಬ್ರಾಹ್ಮಣನ ಕುತ್ತಿಗೆಯನ್ನು ನಿರ್ದಯವಾಗಿ ಕತ್ತರಿಸಿಬಿಟ್ಟೆ. ನೀನು ಮಾಡಿದ್ದು ಇದೊಂದೆ ಬ್ರಹ್ಮಹತ್ಯೆಯಲ್ಲ ಅನೇಕವಾದ ಸ್ತ್ರೀ ಹತ್ಯೆ, ಬಾಲಹತ್ಯೆ, ವೃದ್ಧ ಹತ್ಯೆಯನ್ನು ಮಾಡಿದೆ. ಹೀಗೆ ಪಾಪಾಚಾರದಿಂದ ಹಿಂಸಾಚಾರ ಅತ್ಯಾಚಾರಗಳನ್ನು ಮಾಡುತ್ತಲೇ ನಿನಗೆ ಮುಪ್ಪು ಬಂದಿತು. ರೋಗದಿಂದ ನಿನ್ನ ದೇಹವು ಜರ್ಝರಿತವಾಯಿತು. ಆಗ ನಿನ್ನೆಲ್ಲ ಹೆಣ್ಣು ಮಕ್ಕಳು, ಮೊಮ್ಮಕ್ಕಳು, ಆಪ್ತೇಷ್ಟರು ನಿನ್ನ ಬಿಟ್ಟು ದೂರಸರಿದರು. ಆಗ ನಿನಗೆ ಎಚ್ಚರ ಬಂದಿತು. ಮಡದಿ ಮಕ್ಕಳು ಈವರೆಗೆ ತೋರುತ್ತಿದ್ದ ಪ್ರೇಮ ಎಷ್ಟು ಸ್ವಾರ್ಥಪೂರಿತವೆಂಬುದು ಆಗ ನಿನಗೆ ಅರ್ಥವಾಯಿತು. ಪತ್ನೀಪುತ್ರ ಪುತ್ರಿಯರ ಸಲುವಾಗಿ ಮಾಡಿದ ಘೋರ ಪಾಪಕೃತ್ಯಗಳಿಗೆ ಪಶ್ಚಾತ್ತಾಪವಾಯಿತು.

ಆಗ ನೀನು ನೀನಿದ್ದ ಅಡವಿಯಲ್ಲಿ ಆಶ್ರಮ ಕಟ್ಟಿಕೊಂಡು ವಾಸಮಾಡಿದೆ. ಋಷಿಮುನಿಗಳಿಗೂ, ಬ್ರಾಹ್ಮಣರಿಗೂ ಬರಲು ಹೇಳಿಕಳುಹಿಸಿದೆ. ಅವರೆಲ್ಲರೂ ನಿನ್ನನ್ನು ನೋಡಲು ಬಂದರು. ಅವರಿಗೆ ನೀನು ಪ್ರಾರ್ಥಿಸಿಕೊಂಡೆ. ''ಪೂಜ್ಯರೇ, ನಾನು ಪತಿತ, ಪಾಪಿಷ್ಠ, ದಯಮಾಡಿ ನಾನು ಕೊಡುವ ದಾನಗಳನ್ನು ಸ್ವೀಕರಿಸಿ'' ಎಂದು ಬೇಡಿಕೊಂಡೆ. ಆದರೆ ಮಹಾಪತಿತನಾದ ನಿನ್ನ ದಾನವನ್ನು ಸ್ವೀಕರಿಸಲು ಆ ವಿಪ್ರರು, ಋಷಿಗಳು ಹೆದರಿ ''ಪತಿತನಾದ ನಿನ್ನಿಂದ ಯಾವ ದಾನವನ್ನೂ ನಾವು ಸ್ವೀಕರಿಸುವುದಿಲ್ಲ'' ಎಂದು ಹೇಳಿ ಹೊರಟುಹೋದರು.

ಇದರಿಂದ ತಿರಸ್ಕೃತನಾದ ನಿನ್ನ ಮನಸ್ಸಿಗೆ ಅಪಾರ ವ್ಯಥೆಯುಂಟಾಯಿತು. ರೋಗ ಬಾಧೆ, ಮುಪ್ಪಿನಕಾಲದ ಜ್ವರ ಜೀರ್ಣತೆ, ತಾನುಮಾಡಿದ ಘೋರ ಪಾಪಗಳಿಗಾಗಿ ಪಶ್ಚಾತ್ತಾಪ ಮತ್ತು ಬಂದ ಬ್ರಾಹ್ಮಣರು ತನ್ನ ದಾನವನ್ನು ಸ್ವೀಕರಿಸದೆ ತಿರುಗಿ ಹೋಗಿ ತನಗೆ ಮಾಡಿದ ತಿರಸ್ಕಾರ ಇವುಗಳಿಂದ ನಿನ್ನ ಅಂತಃಕರಣವು ಜರ್ಝರಿತವಾಯಿತು. ದುರ್ಮಾರ್ಗದಿಂದ, ಕೊಲೆ ಸುಲಿಗೆಗಳಿಂದ ನೀನು ಗಳಿಸಿದ ಹಣ ಅಪಾರವಾಗಿತ್ತು. ಐಶ್ವರ್ಯ ಅಪರಿಮಿತವಾಗಿತ್ತು. ಬ್ರಾಹ್ಮಣರಾರೂ ಆ ಪಾಪ ದ್ರವ್ಯವನ್ನು ಸ್ವೀಕರಿಸುವುದಿಲ್ಲವೆಂದಾಗ ನಿನಗೆ ನಿಜವಾಗಿ ಯೋಚನೆಗಿಟ್ಟುಕೊಂಡಿತು. ಈ ನನ್ನ ಪಾಪದ ದ್ರವ್ಯವನ್ನು ನಾನು ಹೇಗೆ ಸದ್ವಿನಿಯೋಗ ಮಾಡಬೇಕೆಂದು ಚಿಂತಿಸತೊಡಗಿದೆ.

ಆಗ ನಿನಗೆ ಒಂದು ಸದ್ಬುದ್ಧಿಯು ಹುಟ್ಟಿತು. ಬ್ರಾಹ್ಮಣರ ಸೂಚನೆಯಂತೆ ನೀನು ಆ ಕಾಡಿನ ಗೂಡಿನಲ್ಲಿ ಜೀರ್ಣವಾದ ಒಂದು ಪುರಾತನ ಗಣೇಶ ಮೂರ್ತಿಯನ್ನೂ, ಹಾಳುಬಿದ್ದ ದೇವಾಲಯವನ್ನೂ ನೋಡಿದೆ. ನಿನ್ನಲ್ಲಿ ಇದ್ದ ದ್ರವ್ಯದಿಂದ ನೀನು ಆ ಗಣಪತಿ ದೇವಸ್ಥಾನದ ಜೀರ್ಣೋದ್ಧಾರ ಮಾಡಿದೆ. ನಿನ್ನ ಪ್ರಯತ್ನದಿಂದ ವಿಸ್ತಾರವೂ, ಎತ್ತರವೂ

ಆದ ನಾಲ್ಕು ತೋರಣಗಳುಳ್ಳ ಒಂದು ಸುಂದರವಾದ ಮಂದಿರವು ನಿರ್ಮಿತವಾಯಿತು. ನಾಲ್ಕು ದಿಕ್ಕುಗಳಲ್ಲಿ ಅದಕ್ಕೆ ನಾಲ್ಕು ಮಹಾದ್ವಾರಗಳು, ನಾಲ್ಕು ಶಿಖರಗಳು ಶೋಭಿಸುತ್ತಿದ್ದವು. ಆ ದೇವಾಲಯದ ಮಧ್ಯದಲ್ಲಿ ನೀನೊಂದು ರತ್ನಖಚಿತವಾದ ಕಲ್ಯಾಣ ಮಂಟಪವನ್ನು ನಿರ್ಮಿಸಿದೆ. ಆ ಗಣೇಶ ಮಂದಿರವನ್ನು ನಿರ್ಮಿಸಿದ್ದಕ್ಕಾಗಿ ನಿನ್ನಲ್ಲಿಯ ದ್ರವ್ಯವು ವೆಚ್ಚವಾಯಿತು. ಮುಂದೆ ಕೆಲದಿನಗಳಲ್ಲಿ ನೀನು ಮರಣಹೊಂದಿದೆ. ಯಮದೂತರು ನಿನ್ನನ್ನು ಸೆಳೆದೊಯ್ದು ನರಕದಲ್ಲಿ ನಿನ್ನನ್ನು ಕಾಷ್ಠದಿಂದ ಹೊಡೆದರು. ಪಾಶದಿಂದ ಬಿಗಿದರು. ಮಚ್ಚಿನಿಂದ ಚುಚ್ಚಿದರು. ಕಲ್ಲುಬಂಡೆಯಮೇಲೆ ನಿನ್ನನ್ನು ಅಪ್ಪಳಿಸಿದರು. ಕೀವುರಕ್ತದ ಮಡುವಿನಲ್ಲಿ ನಿನ್ನನ್ನು ಅದ್ದಿ ತೆಗೆದರು. ಆಗ ನಿನಗೆ ಭಯಂಕರವಾದ ದುಃಖವಾಗುತ್ತಿತ್ತು. ಕ್ರೂರರಾದ ಯಮದೂತರು ನಿನ್ನನ್ನು ಹಾದಿಗುಂಟ ಹಿಂಸಿಸುತ್ತ ಯಮಧರ್ಮನ ಕಡೆಗೆ ಕೊಂಡೊಯ್ದರು. ಚಿತ್ರಗುಪ್ತರು ನಿನ್ನ ಜನ್ಮ ಜಾತಕ ಓದಿದರು. ಆಗ ಯಮದೇವರು ''ಪುಣ್ಯ, ಪಾಪ, ಕರ್ಮಗಳ ಫಲಗಳ ಪೈಕಿ ನೀನು ಮೊದಲು ಯಾವುದನ್ನು ಅನುಭವಿಸುವೆ ?'' ಎಂದು ಕೇಳಿದರು. ಆಗ ನೀನು ಹೇಳಿದೆ. ''ಯಮಧರ್ಮ, ನಾನು ಮೊದಲು ನಾ ಮಾಡಿದ ಪುಣ್ಯಕರ್ಮಗಳ ಫಲವನ್ನೇ ಅನುಭವಿಸುವೆನು'' ಎಂದು ಹೇಳಿದೆ. ಅದರಂತೆ ಯಮನು ತನ್ನ ದೂತರಿಗೆ ಆಜ್ಞೆ ಮಾಡಿದನು. ಆಗ ನೀನು ಹಿಂದಿನ ಜನ್ಮದಲ್ಲಿ ಗಣೇಶ ದೇವಾಲಯವನ್ನು ಸುಂದರವಾಗಿ ನಿರ್ಮಿಸಿದ್ದರಿಂದ ಆ ಪುಣ್ಯ ವಿಶೇಷದ ಫಲವಾಗಿ ಸೌರಾಷ್ಟ್ರದೇಶದಲ್ಲಿ ಮಹಾರಾಜನಾಗಿ ಜನಿಸಿರುವೆ. ನಿನಗೆ ಈ ಜನ್ಮದಲ್ಲಿ ಸೋಮಕಾಂತನೆಂಬ ಹೆಸರು ಬಂದಿತು. ಸರ್ವಾಂಗ ಸುಂದರಿಯಾದ ನಿನ್ನ ಮಡದಿಯೊಂದಿಗೆ ನೀನು ಚಂದ್ರನಂತೆ ಶೋಭಿಸುತ್ತಿರುವುದರಿಂದ ಸೋಮಕಾಂತನೆಂಬ ನಿನ್ನ ಹೆಸರು ಸಾರ್ಥಕವಾಗಿರುತ್ತದೆ.

ಭೃಗುಋಷಿಗಳು ಹೀಗೆ ಹೇಳಿದ ಬಳಿಕ ಮಹಾರಾಜನಿಗೆ ಅವರ ಮಾತಿನಲ್ಲಿ ನಂಬಿಗೆಯಾಗಲಿಲ್ಲ. ಭೃಗುಋಷಿಗಳ ವಚನದಲ್ಲಿ ಸಂದೇಹ ತಳೆದನು.

ದೊಡ್ಡವರ ಮಾತಿನಲ್ಲಿ ಅವಿಶ್ವಾಸ ಮಾಡಿದ್ದರ ದುಷ್ಫಲ ಅವನಿಗೆ ಆಗಲೇ ದೊರೆಯಿತು. ಕೂಡಲೇ ಅವನ ದೇಹದಿಂದ ಬಣ್ಣ ಬಣ್ಣದ ಪಕ್ಷಿಗಳು ಹೊರಗೆ ಹಾರಿಬಂದವು. ಅವೆಲ್ಲವು ಮಹಾರಾಜನ ಬಳಿಗೆ ಬಂದು ಅವನ ದೇಹವನ್ನು ತಮ್ಮ ಕೊಕ್ಕೆಗಳಿಂದ ಕುಕ್ಕಿ ಅವನ ದೇಹದಿಂದ ಮಾಂಸವನ್ನು ಕಿತ್ತು ತೆಗೆದು ತಿನ್ನತೊಡಗಿದವು. ಪುನಃ ಪುನಃ ಆ ಪಕ್ಷಿಗಳು ಮೇಲಿಂದ ಹಾರಿಬಂದು ಮಹಾರಾಜನ ಮೈಯನ್ನು ಕುಕ್ಕುವುದು, ಚುಂಚುವಿನಿಂದ ಘಾಯಮಾಡಿ ಚುಚ್ಚಿ ಮೈಯಲ್ಲಿಯ ಮಾಂಸವನ್ನು ಕಿತ್ತುಕೊಂಡು ಹಾರಿಹೋಗುವುದು. ಮೇಲಿನಂತೆ ಅವನ ಮಾಂಸವನ್ನು ತಿನ್ನುವುದು. ಅದು ಮುಗಿದ ಕೂಡಲೇ ಮಹಾರಾಜನ ಮೈಮೇಲೆ ತಿರುಗುವುದು. ಹೀಗೆ ಮಹಾರಾಜನ ಶರೀರವು ಪಕ್ಷಿಗಳ ಆಘಾತದಿಂದ ಕ್ಷತವಿಕ್ಷತವಾಗಿ ಹೋಗುತ್ತಿರಲಾಗಿ ಸೋಮಕಾಂತನು ಭೃಗುಋಷಿಗಳಿಗೆ ಶರಣು ಬಂದನು.

''ಪೂಜ್ಯರೆ, ನಿಮ್ಮ ತಪೋಭೂಮಿ ತಪೋವನದಲ್ಲಿ ವಾಸಿಸುವ ಎಲ್ಲ ಕ್ರೂರ ಪ್ರಾಣಿ ಪಶು ಪಕ್ಷಿಗಳು ತಮ್ಮ ಜನ್ಮಸಿದ್ಧವಾದ ವೈರವನ್ನು ಮರೆತು ಸ್ನೇಹದಿಂದಿರುತ್ತವೆ. ಆದರೆ ಈಗ ನಿಮ್ಮೆದುರಿಗೆ ಈ ಪಕ್ಷಿಗಳು ನನ್ನನ್ನು ಕುಕ್ಕಿ ಕೊಲ್ಲುತ್ತಲಿವೆ. ಕುಷ್ಠರೋಗದಿಂದ

ಬಳಲಿದ ನಾನು ಈ ಪಕ್ಷಿಗಳ ಕಾಟವನ್ನು ಸಹಿಸದೆ ನಿಮ್ಮ ಪಾದಾರವಿಂದಕ್ಕೆ ಪೊರಮಟ್ಟಿದ್ದೇನೆ. ರೋಗ ಬಾಧೆಯಿಂದ ನಾನು ಮೊದಲೇ ಜೀವನ್ಮೃತನಾಗಿದ್ದೇನೆ. ಹೀಗಿದ್ದರೂ ನನ್ನನ್ನು ಈ ಪಕ್ಷಿಗಳು ಪುನಃ ಪುನಃ ಕಿತ್ತು ಸಾಯಿಸುತ್ತಲಿವೆ. ಆದುದರಿಂದ ನಾನು ನಿಮ್ಮ ಚರಣಗಳಿಗೆ ಶರಣು ಬಂದಿದ್ದೇನೆ. ಸರ್ವಪ್ರಾಣಿಗಳಿಗೆ ಅಭಯ ನೀಡುವ ನೀವು ನನ್ನನ್ನು ಪಕ್ಷಿ ಪ್ರಹಾರದಿಂದ ಕಾಪಾಡಿರಿ.''

**ಭೃಗುಋಷಿ :-** ''ರಾಜನೇ, ನೀನು ನಾನು ಆಡಿದ ಮಾತುಗಳ ವಿಷಯವಾಗಿ ಸಂಶಯವನ್ನು ತಳೆದೆ. ಆದ್ದರಿಂದ ಈ ಪಕ್ಷಿಗಳು ನಿನ್ನನ್ನು ಕಾಡುತ್ತಲಿವೆ. ಇದಕ್ಕೆ ಒಂದು ಪರಿಹಾರ ಉಪಾಯವನ್ನು ಹೇಳುತ್ತೇನೆ'' ಎಂದು ಹೇಳಿ ಮುನಿಯು ಹುಮ್ಮೆಂದು ಜಬರಿಸಿದರು. ಕೂಡಲೇ ಪಕ್ಷಿಗಳೆಲ್ಲವೂ ಒಂದು ಕ್ಷಣವೂ ಅಲ್ಲಿ ನಿಲ್ಲದೆ ಹಾರಿಹೋದವು. ರಾಜನು ಇದರಿಂದ ಬಹಳ ಸಂತೋಷಪಟ್ಟನು. ಮಂತ್ರಿಗಳೊಡನೆ ಈ ಅದ್ಭುತವನ್ನು ಕಂಡ ರಾಣಿಯು ಅತ್ಯಂತ ಸಂತೋಷ ಪಟ್ಟಳು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಪಕ್ಷಿಗಳ ನಿವಾರಣವೆಂಬಲ್ಲಿ ಎಂಟನೇ ಅಧ್ಯಾಯ ಮುಗಿದುದು*



## ಗಣೇಶ ಪುರಾಣ ಶ್ರವಣ ಸಂಕಲ್ಪ

**ಅಧ್ಯಾಯ - ೯**

**ಭೃಗುಋಷಿ :-** ''ಮಹಾರಾಜ, ನೀನು ಹಿಂದೆ ಮಾಡಿದ ಪಾಪಗಳಿಗೆ ಲೆಕ್ಕವಿಲ್ಲ. ರಾಶಿರಾಶಿಯಾಗಿ ಬಿದ್ದಿದೆ. ನಿನ್ನ ಪಾಪೌಘ. ಅದಕ್ಕೊಂದು ಉಪಾಯವನ್ನು ಹೇಳುತ್ತೇನೆ ಕೇಳು. ಮಹಾಮಹಿಮನಾದ ಶ್ರೀಗಣನಾಯಕನ ಪುರಾಣವನ್ನು ಶ್ರವಣಮಾಡುತ್ತೇನೆಂದು ಸಂಕಲ್ಪವನ್ನು ಮಾಡು. ಗಣೇಶ ಪುರಾಣದ ಸಂಕಲ್ಪಮಾತ್ರದಿಂದಲೇ ಸರ್ವಪಾಪಗಳು ಪರಿಹಾರವಾಗುವವು.''

ಮಹಾಮುನಿಗಳ ಆದೇಶದಂತೆ ಸೋಮಕಾಂತನು ಗಣೇಶ ಪುರಾಣದ ಶ್ರವಣದ ಸಂಕಲ್ಪ ಮಾಡಿದನು. ಆನಂತರ ಭೃಗುಋಷಿಗಳು ಗಣನಾಥನ ನೂರಾಎಂಟು ನಾಮ ಮಂತ್ರಗಳನ್ನು ಭಕ್ತಿಯಿಂದ ಜಪಿಸಿದರು. ಆ ಅಷ್ಟೋತ್ತರ ಶತನಾಮಗಳಿಂದ ಜಪಿಸಿ ಜಲಾಭಿಮಂತ್ರಣವನ್ನು ಮಾಡಿ ಆ ಜಲದಿಂದ ಸೋಮಕಾಂತ ರಾಜನನ್ನು ಪ್ರೋಕ್ಷಿಸಿದರು. ಭೃಗುಮುನಿಯಿಂದ ಮಂತ್ರಪೂತ ಜಲದ ಪ್ರೋಕ್ಷಣೆಯಾದ ಕೂಡಲೇ ಸೋಮಕಾಂತನ ನಾಸಿಕಾ ವಿವರದಿಂದ ಒಂದು ಕರಾಳ ಆಕೃತಿಯು ಹೊರಗೆ ಬಂದಿತು. ಅದು ರಾಕ್ಷಸನ ರೂಪ ತಳೆಯಿತು. ಅವನ ಮುಖವು ಕಪ್ಪು, ಕಪ್ಪು, ದೇಹವು ದಪ್ಪ, ದಪ್ಪ. ನೆಲದ ಮೇಲೆ ಬಿದ್ದ ಕೂಡಲೇ ಅದು ದೈತ್ಯಾಕಾರವಾಗಿ ಬಾನುದ್ದ ಬೆಳೆದು ನಿಂತಿತು. ಅದರ ಬಾಯಿಂದ ಬೆಂಕಿ ನಿರಂತರವಾಗಿ ಉದುರುತ್ತಿತ್ತು. ಅದನ್ನು ಕಂಡು ಆಶ್ರಮ ವಾಸಿಗಳೆಲ್ಲರೂ ಹೆದರಿ ಓಡಿಹೋದರು. ಆಗ ಭೃಗುಋಷಿಗಳು ಆ ಕರಾಳಾಕಾರದ ಅದ್ಭುತ ಪುರುಷನನ್ನು ಕಂಡು ''ನೀನು ಯಾರು ? ನಿನ್ನ ಹೆಸರೇನು ?'' ಎಂದು ಪ್ರಶ್ನಿಸಿದರು. ಆಗ ಆ ದೈತ್ಯಾಕಾರವು ತನ್ನ ವಿಕಾರವಾದ ಕೋರೆಹಲ್ಲುಗಳನ್ನು ಅವಡುಗಚ್ಚಿ ಗರ್ಜಿಸತೊಡಗಿತು.

''ನಾನು ಪ್ರತಿಯೊಬ್ಬ ಪ್ರಾಣಿಯ ದೇಹದಲ್ಲಿ ಅಡಗಿರುವ ಒಬ್ಬ ಪಾಪಪುರುಷ. ನೀವು ನೀರನ್ನು ಅಭಿಮಂತ್ರಿಸಿ ಪ್ರೋಕ್ಷಿಸಿದ್ದರಿಂದ ನಾನು ನಿಮ್ಮ ಮಂತ್ರ ಪ್ರಭಾವಕ್ಕೆ ಹೆದರಿ ಈ ದೇಹದಲ್ಲಿ ಇರಲಾರದೆ ಹೊರಗೆ ಬಂದಿದ್ದೇನೆ. ನನಗೀಗ ವಿಪರೀತ ಹಸಿವೆ. ತಿನ್ನಲು ನನಗೇನಾದರೂ ಆಹಾರವನ್ನು ನೀಡಿರಿ. ಇಲ್ಲದಿದ್ದಲ್ಲಿ ನೀವು ನೋಡುತ್ತಿರುವಂತೆ ನಿಮ್ಮೆದುರಿಗಿರುವ ಈ ಸೋಮಕಾಂತನನ್ನೇ ತಿಂದು ಬಿಡುತ್ತೇನೆ. ನಾನು ಈ ರಾಜನ ದೇಹದಲ್ಲಿ ಸುಖವಾಗಿ ವಾಸಮಾಡಿದೆ. ನೀವು ಬಲತ್ಕಾರದಿಂದ ಮಂತ್ರಪ್ರಭಾವದಿಂದ ನನ್ನನ್ನು ನೀವು ಹೊರಗೆ ಹೊರಡಿಸಿದಿರಿ. ಇನ್ನು ಮುಂದೆ ನೀವು ನನಗೆ ವಾಸವಾಗಿರುವುದಕ್ಕನುಕೂಲವಾದ ಸ್ಥಳವನ್ನು ತೋರಿಸಿರಿ'' ಎಂದು ಕೇಳಿತು.

ಆಗ ಧ್ಯಾನ ಮಗ್ನರಾದ ಭೃಗುಮುನಿಗಳು ಬಹಿರ್ಮುಖರಾಗಿ ಆ ಪಾಪ ಪುರುಷನಿಗೆ ಹೇಳಿದರು. ''ಇದೊ ಇಲ್ಲಿ ನೆಟ್ಟಗೆ ಒಣಗಿ ನಿಂತಿರುವ ಈ ಮಾವಿನ ಮರದ ಪೊಟರೆಯಲ್ಲಿ ವಾಸಿಸು. ಈ ಮರದ ತೆರೆಗೆಲೆಗಳನ್ನು ನೀನು ಆಹಾರವಾಗಿ ಉಪಯೋಗಿಸು. ಇದು ನನ್ನ ಆಜ್ಞೆ. ನನ್ನ ಅಪ್ಪಣೆಯನ್ನು ಮೀರಿದರೆ ನಿನ್ನನ್ನೀಗಲೇ ಸುಟ್ಟು ಬೂದಿ ಮಾಡುವೆ.''

ಆನಂತರ ಭೃಗುಮುನಿಗಳು ಒಣಗಿದ ಆ ಮಾವಿನ ಮರವನ್ನು ತಾವು ಮುಟ್ಟಿ ತೋರಿಸಿದರು. ಆ ಬ್ರಾಹ್ಮಣೋತ್ತಮರು ಕೈ ಸ್ಪರ್ಶ ಮಾಡಿದ ಮಾತ್ರದಿಂದಲೇ ಆ ಮರವು ದಗದಗ ಉರಿದು ಬೂದಿಯಾಗಿ ಬಿದ್ದಿತು. ತೇಜೋಮೂರ್ತಿಯಾದ ಭೃಗುಋಷಿಯ ಪ್ರಭಾವವನ್ನು ಪ್ರತ್ಯಕ್ಷವಾಗಿ ಕಂಡ ಪಾಪ ಪುರುಷನು ಹೆದರಿ ಗಡಗಡ ನಡುಗಿದನು. ಈ ಋಷಿಯ ಕಣ್ಣಿಗೆ ಬಿದ್ದರೆ ತನ್ನನ್ನು ಸುಟ್ಟುಬಿಟ್ಟಾರೆಂದು ಹೆದರಿ ಕಂಗಾಲಾಗಿ ಆ ಬೂದಿಯ ರಾಶಿಯಲ್ಲಿಯೇ ಅಡಗಿದನು. ಆಗ ಋಷಿಗಳು ಸೋಮಕಾಂತನಿಗೆ ''ಮಹಾರಾಜ, ಈಗ ಸುಟ್ಟು ಬೂದಿಯಾಗಿ ಹೋದ ಈ ಮಾವಿನ ಮರವು ಪುನಃ ಚಿಗಿತು ದೊಡ್ಡದಾಗುವ ವರೆಗೆ ನೀನು ಈ ಸ್ಥಳದಲ್ಲಿಯೇ ಕುಳಿತು ತಪಸ್ಸನ್ನು ಮಾಡು. ನೀನು ತಪಸ್ಸನ್ನು ಮಾಡಿದಂತೆ ನಿನ್ನ ಪುಣ್ಯವು ದಿನೇ ದಿನೇ ಹೆಚ್ಚುತ್ತ ಹೋಗುವುದು. ಈ ಗಿಡವು ಮೊದಲಿನಂತೆ ಬೆಳೆದಕೂಡಲೇ ನಿನ್ನ ಪಾಪಗಳು ಕಳೆದು ನೀನು ಪರಿಶುದ್ಧನಾಗುವೆ.''

ಆಗ ಸೋಮಕಾಂತನು ''ಪೂಜ್ಯರೆ, ಈ ಗಣೇಶ ಪುರಾಣ ಗ್ರಂಥವು ಎಲ್ಲಿ ದೊರೆಯುವುದು ? ಅದನ್ನು ಮಾಡಿದವರಾರು, ಹೇಳಿದವರಾರು, ಕೇಳಿದವರಾರು ?'' ಎಂದು ಕೇಳಿದನು.

ಆಗ ಭೃಗುಮುನಿಗಳು ಸಂತೋಷದಿಂದ ''ಶ್ರೀ ಗಣೇಶ ಪುರಾಣವನ್ನು ಸೃಷ್ಟಿಕರ್ತನಾದ ಬ್ರಹ್ಮನು ವೇದವ್ಯಾಸ ಮಹರ್ಷಿಗಳಿಗೆ ಉಪದೇಶಿಸಿದನು. ಆ ವ್ಯಾಸ ಮುನಿಗಳು ನನಗೆ ಹೇಳಿದರು. ಆ ಪುರಾಣವನ್ನು ನಾನೀಗ ನಿನಗೆ ಹೇಳುವೆನು. ಮೊದಲು ನೀನು ನನ್ನ ಈ ಭೃಗುತೀರ್ಥದಲ್ಲಿ ಸ್ನಾನ ಮಾಡಿ ಬಾ. ಗಣೇಶ ಪುರಾಣವನ್ನು ಇಂದಿನಿಂದ ಶ್ರದ್ಧೆಯಿಂದ ಶ್ರವಣ ಮಾಡುತ್ತೇನೆಂದು ಸಂಕಲ್ಪಿಸು.'' ಎಂದು ತಿಳಿಸಿದರು.

ಸೋಮಕಾಂತನು ಮುನಿಗಳಪ್ಪಣೆಯಂತೆ ಭೃಗುತೀರ್ಥದಲ್ಲಿ ಸ್ನಾನಮಾಡಿ ಗಣೇಶ ಪುರಾಣ ಶ್ರವಣ ಸಂಕಲ್ಪ ಮಾಡಿದನು. ಇದರ ಸಂಕಲ್ಪ ಮಾತ್ರದಿಂದಲೇ ಅವನ ದೇಹದಲ್ಲಾವರಿಸಿದ್ದ ಸರ್ವರೋಗಗಳು ಮಟ್ಮಾಮಾಯವಾದವು. ಅವನ ದೇಹದಲ್ಲಿ

ಕುಷ್ಠರೋಗದಿಂದ ಸುರಿಯುವ ರಕ್ತ, ಹರಿಯುವ ಕೀವು ಎಲ್ಲ ನಿಂತವು. ಗಾಯಗಳೆಲ್ಲ ಒಣಗಿದವು. ಹುಣ್ಣುಗಳೆಲ್ಲ ಕಾಣದಂತಾದವು. ಆದರಿಂದ ಸೋಮಕಾಂತನು ನಿರೋಗಿಯಾಗಿ ಆರೋಗ್ಯಭಾಗ್ಯದಿಂದ ಕಳೆಕಾಂತಿಗಳು ಹೊರಹೊಮ್ಮಿ ಸುಂದರನಾಗಿ ಕಂಗೊಳಿಸತೊಡಗಿದನು. ಆದರಿಂದ ಸಂತೋಷಗೊಂಡ ಸೋಮಕಾಂತನನ್ನು ಆ ಋಷಿಗಳು ತಮ್ಮ ಅಮೃತ ಹಸ್ತದಿಂದ ಸ್ಪರ್ಶಿಸಿ ಗಣೇಶ ಪುರಾಣವನ್ನು ಉತ್ಸಾಹದಿಂದ ಹೇಳತೊಡಗಿದರು.

**ಭೃಗುಮುನಿ :-** ಮಹಾರಾಜ, ಈ ಗಣೇಶ ಪುರಾಣವನ್ನು ಕೇಳಬೇಕೆಂಬ ಇಚ್ಛೆಯು ಜನ್ಮಾಂತರದ ಪುಣ್ಯವಿದ್ದರೆ ಮಾತ್ರ ಉಂಟಾಗುತ್ತದೆ. ಇದರ ಶ್ರವಣದಿಂದ ಹಿಂದಿನ ಹಾಗು ಮುಂದಿನ ಏಳೇಳು ಜನ್ಮಗಳ ಪಾಪಗಳೆಲ್ಲವೂ ಪರಿಹಾರವಾಗುತ್ತವೆ. ಈ ಗಣೇಶ ನಿರ್ಗುಣ, ನಿರಾಕಾರ ಅಪ್ರಮೇಯ, ಅವ್ಯಯ, ಮನಸ್ಸಿಗೂ ಮೀರಿದವ, ಮಾತಿಗೆ ನಿಲುಕದವ, ಅವನು ಕೇವಲ ಆನಂದ ಸ್ವರೂಪ. ಬ್ರಹ್ಮಾರುದ್ರಾದಿ ದೇವತೆಗಳೂ ಅವನ ಸ್ವರೂಪವನ್ನು ಪೂರ್ಣವಾಗಿ ಅರಿಯಲಾರರು. ಸಾವಿರಮುಖದ ಶೇಷನೂ ಕೂಡ ಗಣೇಶ ಮಹಿಮೆಯನ್ನು ಬಣ್ಣಿಸಲು ಸಮರ್ಥನಲ್ಲ. ಆದರೂ ನಾನು ಹಿಂದೆ ವೇದವ್ಯಾಸರಿಂದ ಇದನ್ನು ಕೇಳಿದೆ. ವ್ಯಾಸರು ಅತೀಂದ್ರಿಯಜ್ಞಾನಿಗಳು. ಅವರು ನನ್ನ ಮೇಲೆ ಕೃಪೆಗೈದು ಇದನ್ನು ನನಗೆ ಹೇಳಿದರು. ಇದರಂತೆ ಹಿಂದೆ ವೀರಭದ್ರನಿಂದ ದಕ್ಷ ಪ್ರಜಾಪತಿಯ ಯಜ್ಞವು ಧ್ವಂಸವಾದ ಬಳಿಕ ದಕ್ಷನು ಬಹಳ ಶೋಕಾಕುಲನಾಗಿ ದುಃಖಿಸತೊಡಗಿದ್ದ. ಆಗ ಮುದ್ಗಲ ಮಹರ್ಷಿಯು ದಕ್ಷನಿಗೆ ಈ ಗಣೇಶ ಪುರಾಣವನ್ನು ಬೋಧಿಸತೊಡಗಿದರು. ಅದನ್ನೇ ನಾನು ನಿನಗಾಗಿ ಹೇಳುತ್ತಿದ್ದೇನೆ. ವ್ಯಾಸರು ಕಲಿಯುಗದಲ್ಲಿ ಪಾಪ ರಾಶಿಗಳು ಹೆಚ್ಚುತ್ತಿರುವುದನ್ನು ಕಂಡು ಎಲ್ಲೆಡೆಗೂ ಧರ್ಮವನ್ನು ನೆಲೆಗೊಳಿಸಲಿಕ್ಕಾಗಿ ಹದಿನೆಂಟು ಮಹಾಪುರಾಣಗಳನ್ನು ರಚಿಸಿದರು. ಅದರಂತೆ ಹದಿನೆಂಟು ಉಪಪುರಾಣಗಳನ್ನೂ ಕೂಡ ಅವರೇ ರಚಿಸಿದರು. ಆ ಪುರಾಣಗಳ ಆಧಾರದಿಂದಲೇ ಗಣೇಶನ ದಿವ್ಯರೂಪವನ್ನೂ ಮಹಿಮೆಯನ್ನೂ ಜನರು ತಿಳಿಯುವಂತಾಯಿತು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಸೋಮಕಾಂತನ ಗಣೇಶ ಪುರಾಣ ಶ್ರವಣ ಸಂಕಲ್ಪ ಎಂಬ ಒಂಬತ್ತನೇ ಅಧ್ಯಾಯ ಮುಗಿದುದು*

—o—

<u>ಭೃಗುಮುನಿ :-</u>

**ನಾರಾಯಣಾಂಶ ಸಂಭೂತಃ ಪಾರಾಶರ್ಯೋ ಮಹಾಮುನಿಃ ।**
**ಅತೀತಾನಾಗತಜ್ಞಾನೀ ವೇದಶಾಸ್ತ್ರಾರ್ಥ ತತ್ವವಿತ್ ॥**

ಪರಾಶರ ಪುತ್ರರಾದ ವೇದವ್ಯಾಸರು ಮಹಾಮುನಿ ನಾರಾಯಣನ ಸಾಕ್ಷಾತ್ ಅಂಶಸಂಭೂತರು. ಅವರು ಹಿಂದೆ ಆದದ್ದನ್ನು ಬಲ್ಲವರು. ಮುಂದೆ ಆಗುವುದನ್ನು ತಿಳಿಯುವವರು. ವೇದದ ಅರ್ಥವನ್ನು ಬಲ್ಲವರು. ಶಾಸ್ತ್ರಗಳ ರಹಸ್ಯಗಳನ್ನರಿತವರು. ಈ ಪ್ರಪಂಚದಲ್ಲಿ ನಿಜವಾದ ಜ್ಞಾನಿಗಳೆಂದರೆ ವೇದವ್ಯಾಸರೇ ಸರಿ.

ಆ ವ್ಯಾಸರು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದಗಳನ್ನು ನಾಲ್ಕು ಬಗೆಯಾಗಿ ವಿಭಾಗ ಮಾಡಿದರು. ನಂತರ ಹದಿನೆಂಟು ಪುರಾಣಗಳನ್ನು ಬರೆಯಲು ಮೊದಲು ಮಾಡಿದರು. ಆಗಲೇ ಅವರಿಗೆ ಗರ್ವ ಬಂದಿತ್ತು. ಆದುದರಿಂದ ಅವರು ತಮ್ಮ ಪುರಾಣ ಪ್ರಾರಂಭದಲ್ಲಿ ಗಣಪತಿಯ ಸ್ತುತಿಯನ್ನೂ, ನತಿಯನ್ನೂ ಕೂಡ ಮಾಡಲಿಲ್ಲ. ಆದ್ದರಿಂದ ಅವರಿಗೆ ಬಹಳ ವಿಘ್ನಗಳು ಅನಿರೀಕ್ಷಿತವಾಗಿ ಬಂದೊದಗಿದವು. ಪದಗಳಿಗೆ ಸರಿಯಾದ ಅರ್ಥಗಳೇ ಹೊಳೆಯದಂತಾಯಿತು. ಬುದ್ಧಿಯು ಭ್ರಮೆಗೊಂಡಿತು.

ವೇದವ್ಯಾಸರು ಸಾಮಾನ್ಯ ವ್ಯಕ್ತಿಯಲ್ಲ, ನಿತ್ಯ ನೈಮಿತ್ಯಕ, ಕಾಮ್ಯ, ಶ್ರೌತ, ಸ್ಮಾರ್ತ ಮುಂತಾದ ಬಗೆಬಗೆಯ ಕರ್ಮ ರಹಸ್ಯಗಳನ್ನು ತಿಳಿದವರು. ಚತುರ್ವೇದಗಳಿಗೆ ವ್ಯಾಖ್ಯಾನರೂಪವಾಗಿ ಶಾಸ್ತ್ರಗಳನ್ನು, ಸೂತ್ರಗಳನ್ನು ರಚಿಸಿದವರು. ಹೀಗಿದ್ದರೂ ಗಣನಾಯಕನನ್ನು ಗ್ರಂಥಾರಂಭದಲ್ಲಿ ಪೂಜಿಸದೇ ಇದ್ದುದರಿಂದ ವಿಘ್ನಗಳು ಅವರನ್ನು ಬೆನ್ನಟ್ಟಿದವು. ಅವರ ಬುದ್ಧಿಗೆ ಏನೂ ತೋಚದಂತಾಯಿತು. ಆಕಸ್ಮಿಕವಾದ ತಮ್ಮ ಬುದ್ಧಿ ಮಾಂದ್ಯದ ಕಾರಣವನ್ನು ಕೇಳಲು ಅವರು ನೇರವಾಗಿ ಸತ್ಯಲೋಕಕ್ಕೆ ಹೋದರು. ಅಲ್ಲಿ ಆ ಚತುರ್ಮುಖನನ್ನು "ಬ್ರಹ್ಮನ್, ನನ್ನ ಈ ಬುದ್ಧಿ ವಿಲೋಪಕ್ಕೆ ಕಾರಣವೇನು ? ನನಗೆ ನನ್ನ ಜ್ಞಾನವೆಲ್ಲವೂ ಈಗ ಭ್ರಮಾತ್ಮಕವೇ ಆಗಿದೆ. ಆದ್ದರಿಂದ ನೀವು ನನ್ನ ಈ ಭ್ರಾಂತಿಯನ್ನೋಡಿಸಿ ಪ್ರಮಾತ್ಮಕ ಜ್ಞಾನವನ್ನುಂಟುಮಾಡಿರಿ. ಬ್ರಹ್ಮದೇವ, ನಾನು ಸಾಕ್ಷಾತ್ ನಾರಾಯಣ ಸ್ವರೂಪಿಯು. ನಿಮಗೆ ಗೊತ್ತೇ ಇದೆ. ನಾನು ಸರ್ವಜ್ಞ. ಮೇಲೆ ಸದಾಚಾರ ಸಂಪನ್ನ. ನನಗೆ ಈ ಭ್ರಮೆ ಬರಲು ಕಾರಣವೇನು ?

**ಬ್ರಹ್ಮ** :- ಮಹರ್ಷಿಯಾದ ವೇದವ್ಯಾಸರೇ ಈ ಜಗತ್ತಿನಲ್ಲಿ ಜನನ ಮರಣಾದಿಗಳಿಲ್ಲದ ಅನಾದಿ ನಿಧನನಾದ ದೇವನೆಂದರೆ ಗಣಪತಿಯೊಬ್ಬನೆ. ಅವನೇ ಪ್ರಪಂಚದ ಅಳಿವು, ಉಳಿವು, ನಲಿವು ಇವುಗಳಿಗೆ ಮುಖ್ಯ ಕಾರಣ. ಅವನೇ **ಕರ್ತುಂ ಅಕರ್ತುಂ, ಅನ್ಯಾಥಾ ಕರ್ತುಂ** ಸಮರ್ಥ. ಭಕ್ತರಿಗೆ ವಿಘ್ನಕಾರಕನೂ ಅವನೇ. ವಿಘ್ನ ಪರಿಹಾರಕನೂ ಅವನೆ. ಅವನನ್ನು ನೀನು ಗರ್ವದಿಂದ ಕಾರ್ಯಾರಂಭದಲ್ಲಿ ಪೂಜಿಸಲಿಲ್ಲ. ಅವನ ಸ್ಮರಣೆಕೂಡ ಮಾಡಲಿಲ್ಲ. ಅದರಿಂದಲೇ ನಿನಗೆ ಇಂಥ

ಭ್ರಾಂತಿಯುಂಟಾಗಿದೆ. ಆದ್ದರಿಂದ ಆ ಗಣೇಶನಿಗೆ ಶರಣುಹೋಗು. ಅವನು ಪ್ರಸನ್ನನಾದರೆ ನಿನ್ನ ಮನೋರಥವನ್ನೆ ಪೂರ್ಣಮಾಡುತ್ತಾನೆ.

**ವೇದವ್ಯಾಸ :-** ಚತುರ್ಮುಖ, ಈ ಗಣೇಶನೆಂದರೆ ಯಾರು ? ಅವನ ಸ್ವರೂಪವೇನು ? ಅವನನ್ನು ತಿಳಿಯುವುದು ಹೇಗೆ ? ಅವನು ಹಿಂದೆ ಯಾರಿಗೆ ಪ್ರಸನ್ನನಾಗಿದ್ದ ? ಯಾರಿಗೇನು ವರ ಕೊಟ್ಟ ? ಈ ಗಣೇಶನ ಅವತಾರಗಳೆಷ್ಟು ? ಅವನು ಅವತಾರ ಮಾಡಿ ಸಾಧಿಸಿದ ಕಾರ್ಯಗಳಾದರು ಯಾವವು ? ಇವೆಲ್ಲವನ್ನು ವಿಸ್ತಾರ ಪೂರ್ವಕವಾಗಿ ನಿರೂಪಿಸು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ವ್ಯಾಸ ಪ್ರಶ್ನೆ*
*ಎಂಬ ಹತ್ತನೇ ಅಧ್ಯಾಯ ಮುಗಿದುದು*

—o—

## ಮಂತ್ರಕಥನ

## ಅಧ್ಯಾಯ - ೧೧

**ಭೃಗುಋಷಿ :-** ವ್ಯಾಸರು ಮಹಾಗಣಪತಿಯ ವಿಷಯವನ್ನು ತಿಳಿಯಬೇಕೆಂದು ಮಹದಭಿಲಾಷೆಯಿಂದ ಬ್ರಹ್ಮನನ್ನು ಪ್ರಶ್ನಿಸಿದರು. ಆಗ ಆ ಸತ್ಯಲೋಕಾಧಿಪತಿಯು ಆಳವಾಗಿ ವಿಚಾರಿಸಿ ಗಣೇಶನ ಮಂತ್ರಗಳನ್ನೂ ಅವರ ಚರಿತ್ರೆಯನ್ನೂ ಹೇಳತೊಡಗಿದನು.

**ಬ್ರಹ್ಮ :-** ವ್ಯಾಸಮುನಿಯೇ, ಗಣೇಶಾಗಮದಲ್ಲಿ ಒಟ್ಟು ಏಳುಕೋಟಿ ಮಹಾಮಂತ್ರಗಳಿರುತ್ತವೆ. ಅವುಗಳಲ್ಲಿ ಒಂದು ಮತ್ತು ಆರು ಅಕ್ಷರಗಳುಳ್ಳ ಮೂಲ ಮಂತ್ರಗಳು ವಿಶೇಷ ಮಹಿಮೆಯುಳ್ಳವುಗಳು. ಈ ಎರಡು ಮಂತ್ರಗಳ ಉಪಾಸನೆಯಿಂದ ಅಣಿಮಾದಿ ಎಂಟು ಸಿದ್ಧಿಗಳನ್ನು ವಶಪಡಿಸಿಕೊಳ್ಳಬಹುದು. ಗಣೇಶನಲ್ಲಿ ಭಕ್ತಿಯಿಲ್ಲದವರು ಮಾಡಿದ ಮಂತ್ರ ಜಪ ವ್ಯರ್ಥವಾಗುವುದು.

**ಓಂ ಶ್ರೀ ಗಣೇಶಾಯ ನಮಃ** ಎಂಬ ಮಂತ್ರವನ್ನು ಜಪಿಸುವವನು ತನ್ನ ಅಪೇಕ್ಷಿತ ಫಲಗಳನ್ನೆಲ್ಲ ಪಡೆಯುವನು. ಇದಕ್ಕೆ ಮಂತ್ರರಾಜ ಎಂದು ಹೆಸರು. ಈ ಮಂತ್ರದಿಂದ ಗಣಪತಿಯ ಉಪಾಸನೆ ಮಾಡುವವನು, ಈ ಲೋಕದ ಸಮಸ್ತ ಸುಖಭೋಗಗಳನ್ನ ಭವಿಸಿಅನು ಏಕದಂತನ ಅನುಗ್ರಹದಿಂದ ಅಂತ್ಯದಲ್ಲಿ ಮೋಕ್ಷ ಸುಖವನ್ನು ಹೊಂದುವನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಮಂತ್ರಕಥನ ಎಂಬ ಹನ್ನೊಂದನೆ ಅಧ್ಯಾಯ ಮುಗಿದುದು*

—o—

**ವೇದವ್ಯಾಸ** :- ಈ ಮಂತ್ರರಾಜವನ್ನು ಯಾರು ಹಿಂದೆ ಜಪಿಸಿದರು ? ಯಾರು ಸಿದ್ಧಿಪಡೆದರು ಇದೆಲ್ಲ ಹೇಳಿರಿ ?

**ಬ್ರಹ್ಮ** :- ಬ್ರಹ್ಮರ್ಷಿಯಾದ ವೇದವ್ಯಾಸ, ಭಗವಂತನಾದ ಗಣನಾಯಕನು ಪ್ರಣವಸ್ವರೂಪ. ಎಂದರೆ **"ಓಂಕಾರ ಸ್ವರೂಪ"** ಆಗಮದಲ್ಲಿ ಹೇಳಿದ ಎಲ್ಲ ಮಂತ್ರಗಳಿಗಿಂತ ಗಣೇಶನ ಈ ಮೂಲಮಂತ್ರವೇ ಸರ್ವಶ್ರೇಷ್ಠವಾದದ್ದು.

ಪೂರ್ವಕಾಲದಲ್ಲಿ ಪ್ರಪಂಚಕ್ಕೆಲ್ಲ ಒಮ್ಮೆ ಪ್ರಳಯವು ಸಂಭವಿಸಿತು. ಭಯಂಕರ ಚಂಡಮಾರುತ, ಸತತ ಧಾರಾಕಾರವಾದ ಮಳೆ, ಎಲ್ಲ ನದೀ ಸರೋವರಗಳು ನೀರು ತುಂಬಿ ಹರಿದವು. ಎಲ್ಲಿ ನೋಡಿದಲ್ಲೆಲ್ಲ ನೀರೇ ನೀರು. ಪ್ರಪಂಚವೆಲ್ಲವೂ ಅಂಧಕಾರದಲ್ಲಿ ಕರಗಿ ಹೋಯಿತು. ಹೀಗೆ ಎಷ್ಟೋ ಸಹಸ್ರ ವರ್ಷಗಳು ಕಳೆದ ಬಳಿಕ ಪ್ರಣವ ಸ್ವರೂಪಿಯಾದ, ಪರಬ್ರಹ್ಮನಾದ ಗಜಾನನು ಉದಯಿಸಿದನು. ಈ ಗಜಾನನ ದೇವನಿಂದಲೇ ಮೊದಲು **ಸತ್ವ, ರಜಸ್ಸು, ತಮಸ್ಸು** ಎಂಬ ಮೂರು ಗುಣಗಳು ಉಂಟಾದವು. ಇದರಲ್ಲಿ ಸತ್ವಗುಣವನ್ನು ಆಶ್ರಯಿಸಿ ವಿಷ್ಣು, ರಜೋಗುಣದಿಂದ ಬ್ರಹ್ಮ, ತಮೋಗುಣದಿಂದ ಈಶ್ವರ ಮೊದಲಾದ ತ್ರಿಮೂರ್ತಿದೇವತೆಗಳು ಜನಿಸಿದರು. ಈ ತ್ರಿಮೂರ್ತಿ ದೇವತೆಗಳು ತಮ್ಮ ಉತ್ಪತ್ತಿಗೆ ಕಾರಣನಾದ ವಿನಾಯಕನನ್ನು ಸಂದರ್ಶಿಸಿ ತಮ್ಮ ಕರ್ತವ್ಯ ಕರ್ಮ ಏನೆಂದು ಕೇಳಲು ತವಕ ಪಟ್ಟರು. ಆದರೆ ಅವರಿಗೆ ಆ ಗಣಾಧೀಶನು ಗೋಚರನಾಗಲಿಲ್ಲ. ಅವರು ಭೂಲೋಕ ಭುವರ್ಲೋಕ ಸುವರ್ಲೋಕ ಮೊದಲಾದ ಅಖಂಡ, ತ್ರಿಖಂಡ ಬ್ರಹ್ಮಾಂಡವನ್ನೆಲ್ಲ ಹುಡುಕಾಡಿದರು. ಆದರೂ ಆ ಭಗವಂತನು, ಅವರಿಗೆ ಸಿಕ್ಕಲಿಲ್ಲ. ನದೀ, ಸಮುದ್ರ, ಬೆಟ್ಟ ಎಲ್ಲಕಡೆ ಅವರು ಹುಡುಕುತ್ತಿರುವಾಗ ಅವರು ಒಂದು ದೊಡ್ಡ ಸರೋವರವನ್ನು ಕಂಡರು. ಅದೊಂದು ದೊಡ್ಡ ಸಮುದ್ರದಂತೆ ಇದ್ದಿತು. ಹೀಗೆ ಅವರು ಮಾರ್ಗವನ್ನು ಕ್ರಮಿಸುತ್ತಿರುವಾಗ ಅಲ್ಲಿ ಅವರು ಒಂದು ತೇಜಃಪುಂಜವನ್ನು ಕಂಡರು. ಅವನೇ ಶ್ರೀ ಗಜಾನನನೆಂದು ತಿಳಿದು ಸಂತೋಷಪಟ್ಟು ಅವನ ಪಾದಗಳಿಗೆ ನಮಸ್ಕರಿಸಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಗಜಾನನ ದರ್ಶನ ಎಂಬ ಹನ್ನೆರಡನೇ ಅಧ್ಯಾಯ ಮುಗಿದುದು*

—o—

**ತ್ರಿಮೂರ್ತಿಗಳು :-**

**ಅಜಂ ನಿರ್ವಿಕಲ್ಪಂ ನಿರಾಕಾರಮೇಕಂ**
**ನಿರಾನಂದಮದ್ವೈತಮಾನಂದಪೂರ್ಣಂ ।**
**ಪರಂ ನಿರ್ಗುಣಂ ನಿರ್ವಿಶೇಷಂ ನಿರೀಹಂ**
**ಪರಬ್ರಹ್ಮರೂಪಂ ಗಣೇಶಂ ಭಜೇಮ ॥**
**ಗುಣಾತೀತಮಾದ್ಯಂ ಚಿದಾನಂದರೂಪಂ ಚಿದಾಭಾಸಕಂ**
**ಸರ್ವಗಂ ಜ್ಞಾನಗಮ್ಯಂ ಮುನಿಧ್ಯೇಯಮಾಕಾಶರೂಪಂ ಪರೇಶಂ**
**ಪರಬ್ರಹ್ಮರೂಪಂ ಗಣೇಶಂ ಭಜೇಮ**

ತ್ರಿಮೂರ್ತಿಗಳು ಹೀಗೆ ಭಾವ ಭರಿತರಾಗಿ ಭಕ್ತಿಯಿಂದ ಸ್ತೋತ್ರಮಾಡಿದರು ಆಗ ಗಣೇಶ ಭಗವಂತನು ಸುಪ್ರೀತನಾದನು. ''ನೀವು ಮಾಡಿದ ಸ್ತೋತ್ರದಿಂದ ಸಂತುಷ್ಟನಾಗಿದ್ದೇನೆ. ನಿಮಗೆ ಬೇಕಾದ ವರಕೇಳಿ ಕೊಡುತ್ತೇನೆ'' ಎಂದನು.

**ತ್ರಿಮೂರ್ತಿಗಳು :-** ''ಸರ್ವಶಕ್ತನಾದ ದೇವೇಶ, ನಮಗೆ ಬೇರೇನೂ ಬೇಡ. ನಿನ್ನ ಪಾದಕಮಲಗಳಲ್ಲಿ ಅನನ್ಯವಾದ ಭಕ್ತಿಯನ್ನು ಕೊಡು. ಮತ್ತು ಈ ಪ್ರಪಂಚದಲ್ಲಿ ನಾವು ಮಾಡಬೇಕಾದ ಕಾರ್ಯಗಳೇನು ?

**ಗಣೇಶ :-** 'ಬ್ರಹ್ಮನೇ, ನೀನು ರಜೋಗುಣದಿಂದ ಹುಟ್ಟಿರುವೆ. ಆದ್ದರಿಂದ ನೀನು ಸೃಷ್ಟಿಮಾಡು. ವಿಷ್ಣುವೇ, ನೀನು ಸತ್ವಗುಣದಿಂದ ಹುಟ್ಟಿದುದರಿಂದ ನೀನು ಪ್ರಪಂಚವನ್ನು ರಕ್ಷಿಸು. ಹರನೇ, ನೀನು ತಮೋಗುಣದಿಂದ ಹುಟ್ಟಿರುವೆ. ಆದ್ದರಿಂದ ಸಂಹಾರಮಾಡುವ ಕಾರ್ಯ ನಿನ್ನದು.

**ಬ್ರಹ್ಮ :-** ಪ್ರಭು, ನೀನು ನನಗೆ ಸೃಷ್ಟಿ ಮಾಡಲು ಆಜ್ಞೆ ನೀಡಿರುವೆ. ಆದರೆ ನಾನು ಹಿಂದೆಂದೂ ಸೃಷ್ಟಿ ವೈಚಿತ್ರ್ಯವನ್ನು ಕಂಡಿಲ್ಲ. ನಾನು ಹೇಗೆ ಸೃಷ್ಟಿಮಾಡಲಿ ?'' ಬ್ರಹ್ಮನ ಮಾತನ್ನು ಕೇಳಿ ಗಣೇಶನು ತನ್ನ ಉಚ್ಛ್ವಾಸದಿಂದಲೇ ನನ್ನನ್ನು ಬ್ರಹ್ಮನನ್ನು ತನ್ನೊಳಗೆ ಎಳೆದುಕೊಂಡನು. ತನ್ನ ಗರ್ಭದಲ್ಲೆ ಅಡಗಿದ ಅನೇಕ ಬ್ರಹ್ಮಾಂಡಗಳನ್ನು ತೋರಿಸಿದನು. ಆ ಲಂಬೋದರನ ಉದರದಲ್ಲಿ ಹೊಸದೊಂದು ಬ್ರಹ್ಮಾಂಡವನ್ನೇ ಕಂಡ. ಅಲ್ಲಿ ನನ್ನಂತೆ ಮತ್ತೊಬ್ಬ ಬ್ರಹ್ಮ. ಇನ್ನೊಬ್ಬ ವಿಷ್ಣು, ಮಗದೊಬ್ಬ ಇಂದ್ರ, ಬೇರೊಬ್ಬ ಚಂದ್ರ ಎಲ್ಲರೂ ಇದ್ದರು. ಗಜಾನನನು ನನಗೆ ದಿವ್ಯ ಚಕ್ಷುವನ್ನು ಕೊಟ್ಟಿದ್ದರಿಂದ ಅವನ ವಿಶ್ವರೂಪವನ್ನು ನೋಡಲು ಸಾಧ್ಯವಾಯಿತು. ಆಗ ನಾನು (ಬ್ರಹ್ಮ) ಬಗೆಬಗೆಯಿಂದ ಸ್ತೋತ್ರಮಾಡಿದೆನು. ''ದೇವ ದೇವ, ನಿನ್ನ ಉದರದಲ್ಲಿ ನಾನು ಬ್ರಹ್ಮಾಂಡಗಳ ಸಮೂಹವನ್ನೇ ಕಂಡೆ. ನಾನಿಲ್ಲಿ ನಿಲ್ಲಲಾರೆ. ಹೊರಗೆ ಹೋಗಬೇಕೆಂದರೆ ಅದಕ್ಕೆ ನನಗೆ ಶಕ್ತಿ ಸಾಲದು. ನಿನಗೆ ನಾನು ಶರಣು ಬಂದಿದ್ದೇನೆ. ನನ್ನನ್ನು ಇಲ್ಲಿಂದ ಪಾರುಮಾಡು'' ಆಗ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಮೂಗಿನ ರಂಧ್ರದಿಂದ ನನ್ನನ್ನು ಹೊರಗೆ ಕರೆತಂದನು. ನನ್ನನ್ನನುಸರಿಸಿಬಂದ ಹರಿಯನ್ನೂ ಅವನ ಜೊತೆಗಿದ್ದ ಹರನನ್ನೂ ಕಿವಿಗಳ ರಂಧ್ರದಿಂದ ಆಕರ್ಷಿಸಿ ಈಚೆಗೆ ಕರೆತಂದನು. ಅದುವರೆಗೆ ಹರಿಹರರು ದೇವನ ಶರೀರದಲ್ಲಿ ಸುಖವಾಗಿ ನಿದ್ರೆಗೈಯುತ್ತಿದ್ದರು.

*ಇತಿ ಗಣೇಶ ಪುರಾಣದ ಉಪಾಸನಾ ಖಂಡದಲ್ಲಿ ಬ್ರಹ್ಮಸೃಷ್ಟಿ ವರ್ಣನ ಎಂಬ ಹದಿಮೂರನೇ ಅಧ್ಯಾಯ ಮುಗಿದುದು*

## ಬ್ರಹ್ಮನ ಗರ್ವ

**ಅಧ್ಯಾಯ - ೧೪**

**ಸೋಮಕಾಂತ :-** ಬ್ರಹ್ಮನು ಗಣೇಶನ ಜಠರದಲ್ಲಿ ಸಾವಿರಾರು ಬ್ರಹ್ಮಾಂಡಗಳನ್ನು ಕಂಡ ನಂತರ ಏನು ಮಾಡಿದನು ? ಅವನು ಸೃಷ್ಟಿಯನ್ನು ಮಾಡಿದ್ದಾದರೂ ಹೇಗೆ ?

**ಭೃಗುಮುನಿ :-** ದೇವನ ಉದರದಲ್ಲಿ ಅನಂತ ಬ್ರಹ್ಮಾಂಡಗಳನ್ನು ಕಂಡುಬಂದವನು ತ್ರಿಮೂರ್ತಿಗಳಲ್ಲಿ ತಾನೊಬ್ಬನೆ ಮತ್ತು ವೇದಶಾಸ್ತ್ರ ಪುರಾಣಗಳನ್ನೂ ಎಲ್ಲ ಆಚೂಲಮೂಲವಾಗಿ ಅರಿತವನೂ ತಾನೇ ಎಂಬ ಗರ್ವವು ಅವನ ಮನಸ್ಸಿನಲ್ಲಿ ಅಂಕುರಿತ ವಾಯಿತು. ತನ್ನ ಭಕ್ತರು ಅಹಂಕಾರಕ್ಕೆ ಒಳಗಾಗಿ ಅಧೋಗತಿಗೆ ಇಳಿಯುವುದನ್ನು ಆ ಗಣೇಶನು ಎಂದೂ ಸಹಿಸಲಾರ. ಅದಕ್ಕಾಗಿ ಅವನು ವಿಘ್ನಾಭಿಮಾನಿ ದೇವತೆಗಳಿಗೆ ಬ್ರಹ್ಮನನ್ನು ಮುತ್ತಲು ಆಜ್ಞಾಪಿಸಿದ. ತಕ್ಷಣದಲ್ಲಿಯೇ ಸಾವಿರಾರು ವಿಘ್ನರೂಪ ವಿಘ್ನಾಭಿಮಾನಿ ದೇವತೆಗಳು ಬ್ರಹ್ಮನಿಗೆ ಅಸಂಖ್ಯವಾದ ವಿಘ್ನಗಳನ್ನು ತಂದು ಒಡ್ಡಿದರು. ಮೂರು ಕಣ್ಣು, ಐದು ಕೈ, ಹಾಳುಬಾವಿಯಂತೆ ಅಗಲವಾದ ಬಾಯಿ, ಮೂರುಕಾಲು, ಐದುಮುಖ, ಏಳುಮುಖ, ಐದುಪಾದ ಹತ್ತುಮುಖಗಳುಳ್ಳ ವಿಕಾರರೂಪದ ವಿಘ್ನಭೂತಗಳು ಬ್ರಹ್ಮನನ್ನು ಮುತ್ತಿ ವಜ್ರಕಠೋರವಾದ ಮುಷ್ಟಿಗಳಿಂದ ಗುದ್ದತೊಡಗಿದವು. ಹೀಗೆ ಘೋರ ವಿಘ್ನಗಳ ಕ್ರೂರ ಹಾವಳಿಯನ್ನು ತಡೆಯುವುದು ಬ್ರಹ್ಮನಿಗೆ ಅಶಕ್ಯವಾಯಿತು. ಅವನ ಅಹಂಕಾರ ಇಳಿದುಹೋಯಿತು. ದುಃಖಾತಿರೇಕದಿಂದ ಮೂರ್ಛೆಹೋದನು. ಬಹಳ ಸಮಯದ ನಂತರ ಎಚ್ಚರವಾಗಿ ಗಣೇಶನನ್ನು ಧ್ಯಾನಿಸಿದನು.

''ಪ್ರಭುವೇ, ನಾನು ನಿನ್ನ ಭಕ್ತ. ನಿನ್ನ ಕೃಪೆ ಎಂಬ ಅಮೃತದಿಂದ ಸೇವಿಸಲ್ಪಟ್ಟಿದ್ದೇನೆ. ಆದರೂ ನನಗೇಕೆ ಇಷ್ಟು ವಿಘ್ನಗಳ ಬಾಧೆ ? ನೀನೇ ಇದರಿಂದ ನನ್ನನ್ನು ಪಾರುಮಾಡು''

ಆಗ ಒಮ್ಮೆಲೇ ಅಶರೀರವಾಣಿಯಾಯಿತು. **''ನೀನು ತಪಸ್ಸನ್ನು ಆಚರಿಸು''.** ಈ ಆಕಾಶವಾಣಿಯನ್ನು ಆಲಿಸಿದ ಬ್ರಹ್ಮನಿಗೆ ಚಿಂತೆಗೆ ಇಟ್ಟುಕೊಂಡಿತು. ನನಗೆ ಗಣೇಶನ ಯಾವ ಮಂತ್ರವೂ ಗೊತ್ತಿಲ್ಲ. ತಪೋವಿಧಾನವೂ ನನಗೆ ತಿಳಿಯದು. ಅದರಿಂದ ಏನು ಮಾಡಲಿ ? ಎಂದು ಚಿಂತಾಕ್ರಾಂತನಾಗಿ ಮನಸ್ಸಿನಿಂದ ಗಣೇಶನನ್ನು ಧ್ಯಾನಮಾಡತೊಡಗಿದ. ಆಗ ಮತ್ತೊಮ್ಮೆ ಆಕಾಶವಾಣಿಯಾಯಿತು. ''ಎದುರಿಗೆ ಕಾಣುವ ವಟವೃಕ್ಷವನ್ನು ನೋಡು, ವಟವೃಕ್ಷವನ್ನು ನೋಡು'' ಹೀಗೆ ಎರಡುಬಾರಿ ಆಕಾಶವಾಣಿ ಉಲಿಯಿತು. ಅದನ್ನು ಕೇಳಿ ಆ ಪಿತಾಮಹ ಮತ್ತೆ ಚಿಂತಾಕ್ರಾಂತನಾದ.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಬ್ರಹ್ಮಚಿಂತಾವರ್ಣನಾ ಎಂಬ ಹದಿನಾಲ್ಕನೇ ಅಧ್ಯಾಯ ಮುಗಿದುದು*

—o—

**ಭೃಗುಮುನಿ :-** ಸೋಮಕಾಂತ ಮಹಾರಾಜನೇ, ಪಿತಾಮಹನಾದ ಬ್ರಹ್ಮನು ವ್ಯಾಸ ಮುನಿಗಳಿಗೆ ಮುಂದಿನ ಕಥಾಭಾಗವನ್ನೆಲ್ಲ ವಿವರಿಸಿ ಹೇಳಿದನು. ಅದನ್ನು ನಾನು ನಿನಗೆ ಹೇಳುತ್ತೇನೆ. ಬ್ರಹ್ಮದೇವನು ತನ್ನ ಸ್ವಂತ ಅನುಭವವನ್ನು ಹೇಳುತ್ತಿದ್ದಾನೆ ಕೇಳು.

**ಬ್ರಹ್ಮ :-** ವೇದವ್ಯಾಸ, ಆ ಅಶರೀರವಾಣಿಯಾದ ಬಳಿಕ ನಾನು ಒಂದು ಕನಸನ್ನು ಕಂಡೆನು. ಒಂದು ದೊಡ್ಡ ಬಯಲು, ಹರಿಯುತ್ತಿರುವ ನೀರಿನ ಮಹಾಪೂರವು ಭೂಮಿಯನ್ನೆಲ್ಲ ವ್ಯಾಪಿಸಿಬಿಟ್ಟಿದೆ. ನಾನು ಅಲ್ಲೆಲ್ಲ ಸುತ್ತಾಡುವಾಗ ಒಂದು ದೊಡ್ಡ ವಟವೃಕ್ಷವನ್ನು ಕಂಡೆನು. ಪ್ರಳಯಕಾಲದ ಭಯಂಕರವಾದ ಬಿರುಗಾಳಿ, ಪ್ರಚಂಡವಾದ ಕೆಂಡಗಳನ್ನು ತೂರುವ ಸೂರ್ಯನ ಪ್ರಖರ ತಾಪ, ಕುಂಭದ್ರೋಣ ಎಂದು ಸುರಿಯುವ ಮಳೆ, ಏಕಾರ್ಣವ ಸಾಗರ. ಇಂಥದರಲ್ಲಿ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಧ್ವಂಸವಾಗಿ ಹೋದಬಳಿಕ ಈ ವಟವೃಕ್ಷವೊಂದೇ ಹೇಗೆ ಉಳಿಯಿತು ! ಎಂತು ಬೆಳೆಯಿತು ! ಹೀಗೆ ವಿಚಾರಮಾಡುತ್ತಾ ನಾನು ಆ ಮರದ ಕಡೆಗೆ ನೋಡಿದೆ. ಆ ಮರದ ಒಂದು ಎಲೆಯಲ್ಲಿ ಒಬ್ಬ ತೇಜಃಪುಂಜನಾದ ಬಾಲಕ ಮಲಗಿದ್ದ. ಅವನ ಕೊರಳಲ್ಲಿ ಮುತ್ತಿನ ಹಾರ, ನೆತ್ತಿಯಲ್ಲಿ ಅರ್ಧಚಂದ್ರ. ಮೈಮೇಲೆ ಕೆಂಪುವಸ್ತ್ರ, ಅವನಿಗೆ ಆನೆಯ ತಲೆ. ಮನುಷ್ಯ ದೇಹ, ಒಂದು ಹಲ್ಲು, ಮುಖದ ಮೇಲೆ ದಿವ್ಯ ತೇಜಸ್ಸು, ಇಂಥ ಸುಂದರ ಬಾಲಕ ಇಲ್ಲಿ ಏಕೆ ಇರುವನು ಎಂದು ವಿಚಾರಿಸತೊಡಗಿದೆನು. ಆಗ ಆ ಬಾಲಕನು ತನ್ನ ಸೊಂಡಿಲಿಂದ ನೀರನ್ನು ಎತ್ತಿ ನನ್ನ ತಲೆ ಮೇಲೆ ಎರಚಿದನು. ಮರುಕ್ಷಣದಲ್ಲಿ ಆ ಬಾಲಕನು ವಟವೃಕ್ಷದಿಂದ ಕೆಳಗಿಳಿದು, ನನ್ನ ತೊಡೆಯನ್ನೇರಿ ಕುಳಿತನು. ಮಧುರವಾಗಿ ಮಾತನಾಡಿದನು.

**ಬಾಲಕ :-** ''ಬ್ರಹ್ಮ, ಯಾವ ತಪಸ್ಸನ್ನು ಆಚರಿಸಲಿ ಎಂದು ನಿನಗೆ ಚಿಂತೆಯಾಗಿದೆಯಷ್ಟೆ ? ನೀನು ನನ್ನನ್ನು ಪ್ರಸನ್ನಗೊಳಿಸಬಲ್ಲ. ಏಕಾಕ್ಷರ ಮೂಲವನ್ನು ಜಪಿಸು. ಈ ಮೂಲ ಮಹಾಮಂತ್ರವನ್ನು ಹತ್ತುಲಕ್ಷ ಆವೃತ್ತಿಯಲ್ಲಿ ಜಪಿಸಿ ನನ್ನನ್ನು ನೆನೆಸಿ ನಮಸ್ಕರಿಸು. ಅನಂತರ ಆ ಮಂತ್ರದ ತಪಃಶ್ಚರ್ಯದಿಂದ ನಾನು ನಿನ್ನ ಲೋಚನಗೋಚರನಾಗಿ ನಿನ್ನನ್ನು ಅನುಗ್ರಹಿಸುತ್ತೇನೆ.'' ''ನಾನೇ ನಿನ್ನ ಆ ಉಪಾಸ್ಯ ಗಣೇಶ.'' ಹೀಗೆ ಹೇಳಿ ಆ ಹುಡುಗನು ಅದೃಶ್ಯನಾದನು.

ಅನಂತರ ನಾನು ಸ್ನಾನಮಾಡಿ ನನ್ನ ಜನ್ಮಭೂಮಿಯಾದ ಕಮಲಪುಷ್ಪದಲ್ಲಿಯೇ ಕಾಲು ಊರಿ ಎದ್ದುನಿಂತೆ. ಏಕಾಗ್ರಚಿತ್ತದಿಂದ ಗಣೇಶನನ್ನು ನೆನೆಸಿದೆ. ಮೂಲಮಂತ್ರವನ್ನು ಬಹಳ ವರ್ಷಗಳವರೆಗೆ ಜಪಿಸಿದೆ. ದೇವಮಾನವ ಏಣಿಕೆಯಲ್ಲಿ ಒಂದು ಸಾವಿರವರ್ಷ ನಾನು ಒಂದೆಡೆ ನಿಂತು ಅತ್ಯುಗ್ರವಾದ ತಪಸ್ಸನ್ನು ಆಚರಿಸಿದೆ. ನನ್ನ ಆ ತಪೋನಿಷ್ಠೆಯನ್ನು ಕಂಡು ಗಣೇಶದೇವನು ಪ್ರೀತನಾದ ಪ್ರತ್ಯಕ್ಷನೂ ಆದ. ಕೋಟಿ ಸೂರ್ಯರ ಸಮಾನಕಾಂತಿ ಆ ಭಗವಂತನ ಮುಖದಿಂದ ಹೊಮ್ಮಿಬರುತ್ತಿತ್ತು. ಆ ದೇವದೇವನ ಒಂದು ಕೈಯಲ್ಲಿ ಗಂಡುಗೊಡಲಿ, ಇನ್ನೊಂದರಲ್ಲಿ ಕಮಲ ಪುಷ್ಪ, ಆನೆಯ ಮುಖ, ಅಭಯಹಸ್ತ, ಒಟ್ಟಾರೆ

ಅವನು ಸೌಂದರ್ಯದ ಖಣಿಯೇ ಆಗಿದ್ದ, ಗಜವದನದಿಂದ ಮುದ್ದಾಗಿ ಶೋಭಿಸುತ್ತಿದ್ದ. ಆ ತೇಜೋಮಯವಾದ. ದಿವ್ಯಮೂರ್ತಿಯನ್ನು ಕಂಡು ನನ್ನ ಎದೆ ನಡುಗಿತು. ನಾನು ಕೈಕೊಂಡ ಜಪವನ್ನೂ ಕೂಡ ತೊರೆದು ಕಣ್ಣೆದುರು ಬಂದು ನಿಂತ ಮೂರ್ತಿಯನ್ನೇ ನಾನು ಎವೆಯಿಕ್ಕದೆ ನೋಡುತ್ತಾ ನಿಂತೆ. ಅವನ ಪ್ರಖರ ತೇಜಸ್ಸನ್ನು ಕಾಣಲು ಸಾಧ್ಯವಾಗದೇ ನನ್ನ ಕಣ್ಣುಗಳು ತಾವಾಗೇ ಮುಚ್ಚಿದವು. ಆಗ ವಿಘ್ನೇಶ್ವರನು ನನ್ನ ಈ ದುರವಸ್ಥೆಯನ್ನು ನೋಡಿ ಹೀಗೆ ಹೇಳಿದ.

**ಗಣೇಶ** :- ಕಮಲಾಸನ, ನೀನು ಹೆದರಬೇಡ. ಈ ಮೊದಲೇ ನೀನು ನನ್ನನ್ನು ಸ್ವಪ್ನದಲ್ಲಿ ಕಂಡಿದ್ದಿ. ಆಗ ನಾನು ನಿನಗೆ ಮಂಗಳಕರವಾದ ಏಕಾಕ್ಷರ ಮಂತ್ರವನ್ನು ಉಪದೇಶಿಸಿದ್ದೆ. ಈಗ ನಾನು ವರಗಳನ್ನು ಕೊಡಲು ಬಂದಿದ್ದೇನೆ.

**ಬ್ರಹ್ಮ** :- ಕರುಣಾಳು ವಿಘ್ನೇಶ, ನನಗೆ ನಿನ್ನಲ್ಲಿ ದೃಢವಾದ ಭಕ್ತಿ ಯಾವಾಗಲೂ ನೆಲೆಸುವಂತೆ ಅನುಗ್ರಹಿಸು. ನಾನಾ ಬಗೆಯ ಸೃಷ್ಟಿಕಾರ್ಯವನ್ನು ಒದಗಿಸುವಂತೆ ನನಗೆ ಸಾಮರ್ಥ್ಯ ಕರುಣಿಸು. ಈ ಹಿಂದೆ ನನ್ನನ್ನು ಮುತ್ತಿ ಕಾಡುತ್ತಿದ್ದ ವಿಘ್ನಗಳೆಲ್ಲವೂ ಈ ಕ್ಷಣದಿಂದ ದೂರವಾಗಲಿ.

**ಗಣೇಶ** :- ''ಚತುರಾನನ, ನಿನ್ನ ಅಪೇಕ್ಷೆಯಂತೆ ನಿನ್ನನ್ನು ಮುತ್ತಿ ಹಿಂಸಿಸುತ್ತಿದ್ದ ವಿಘ್ನಗಳೆಲ್ಲವೂ ನಾಶವಾಗುವವು. ನನ್ನಲ್ಲಿ ನಿನಗೆ ದೃಢವಾದ ಭಕ್ತಿ ಉಂಟಾಗುವುದು. ನೀನು ಧೈರ್ಯದಿಂದ ಸೃಷ್ಟಿ ಕಾರ್ಯವನ್ನು ಆರಂಭಿಸು'' ಗಣೇಶನ ಆದೇಶದಂತೆ ಬ್ರಹ್ಮನು ಮೊದಲು ತನ್ನ ಸಂಕಲ್ಪಮಾತ್ರದಿಂದ ಒದಗಿಬಂದ ಪೂಜಾಸಾಮಗ್ರಿ ಸಲಕರಣೆಗಳಿಂದ ಶಾಸ್ತ್ರೋಕ್ತವಾಗಿ ಗಣೇಶನ ಅರ್ಚನೆ ಆರಂಭಿಸಿದನು. ದಕ್ಷಿಣೆ ಅರ್ಪಿಸುವ ಸನ್ನಿವೇಶ ಬಂದಾಗ ಸುಂದರಾಕೃತಿಯ ಇಬ್ಬರು ಕನ್ಯೆಯರು ಅಲ್ಲಿಗೆ ಬಂದರು. ಅವರಿಬ್ಬರೂ ಅತ್ಯಂತ ಸುಂದರರೂ ಶಾಂತರೂ ಆಗಿದ್ದರು. ಲಾವಣ್ಯದಿಂದ ದೇವಾಂಗನೆಯರನ್ನೂ ಕೂಡ ನಾಚಿಸುವಂತಿದ್ದರೂ ದಿವ್ಯಗಂಧವನ್ನೂ ಅಂಗಾಗಳಿಗೆ ಅವರಿಬ್ಬರೂ ಕನ್ಯೆಯರೂ ಲೇಪಿಸಿಕೊಂಡಿದ್ದರು. ದಿವ್ಯದುಕೂಲವನ್ನು ಧರಿಸಿಬಂದಿದ್ದರಿಂದ ಅವರು ಕನಸಿನ ಲೋಕದ ಕನ್ಯೆಯರಂತೆ ಕಂಗೊಳಿಸುತ್ತಿದ್ದರು. ಬ್ರಹ್ಮದೇವನು ಆ ಎರಡೂ ಕನ್ಯೆಯರನ್ನು ಗಜಾನನನಿಗೆ ನೀಡಿದನು. ಶಾಸ್ತ್ರೋಕ್ತವಾಗಿ ಆ ಗಜಾನನನ್ನು ಬ್ರಹ್ಮನು ಪೂಜಿಸಿದನು. ಪಿತಾಮಹನ ಪೂಜೆಯಿಂದ ಪರಿತೃಪ್ತನಾದ ಗಣೇಶನು ಪೂಜಾಕಾಲದಲ್ಲಿ ಬ್ರಹ್ಮ ತನಗೆ ನೀಡಿದ ಸಿದ್ಧಿ, ಬುದ್ಧಿ ಎಂಬ ಸುಂದರಿಯರನ್ನು ಮಡದಿಯರಾಗಿ ಸ್ವೀಕರಿಸಿ ಅವರೊಡನೆ ಒಮ್ಮೆಲೇ ಅದೃಶ್ಯನಾದನು.

ಹೀಗೆ ಗಣೇಶನ ಅನುಗ್ರಹ ಪಡೆದ ನಂತರ ಕಮಲಾಸನನು ಸಮರ್ಥ ರೀತಿಯಿಂದ ಸೃಷ್ಟಿಯನ್ನು ಸೃಷ್ಟಿಸಿದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಗಜಾನನ ಪೂಜಾ ನಿರೂಪಣ*
*ಎಂಬ ಹದಿನೈದನೇ ಅಧ್ಯಾಯ ಮುಗಿದುದು*

—o—

**ಭೃಗುಮುನಿ :-** ಚತುರ್ಮುಖ ಬ್ರಹ್ಮನು ಗಣೇಶನ ಆಜ್ಞಾನುಸಾರವಾಗಿ ಮೊದಲು ಏಳುಜನ ಮಾನಸ ಪುತ್ರರನ್ನು ಸೃಷ್ಟಿಸಿದನು. ಅವರಿಗೆ ''ನನ್ನ ಸೃಷ್ಟಿಕಾರ್ಯಕ್ಕೆ ಸಹಾಯವಾಗುವಂತೆ ನೀವು ಸೃಷ್ಟಿಮಾಡಿರಿ'' ಎಂದು ಆಜ್ಞಾಪಿಸಿದನು. ಆದರೆ ಅವರು ತಂದೆಯ ಮಾತನ್ನು ಕೇಳದೆ ತಪೋನಿಷ್ಠಕ್ಕಾಗಿ ತೆರಳಿದರು.

ಆಗ ಬ್ರಹ್ಮನು ನಿರಾಶನಾಗಿ ಮತ್ತೆ ಏಳುಜನ ಮಾನಸಪುತ್ರರನ್ನು ನಿರ್ಮಿಸಿದನು. ಅವರೂ ಕೂಡ ಆಧ್ಯಾತ್ಮ ನಿಷ್ಠರಾಗಿ ತಪೋನುಷ್ಠಾನ ತತ್ಪರರಾದರು. ಆಗ ಬ್ರಹ್ಮನು ವಿಧಿಯಿಲ್ಲದೆ ತಾನೇ ತನ್ನ ಭುಜ ತೊಡೆ ಪಾದ ಇವುಗಳಿಂದ ಕ್ಷತ್ರಿಯ, ವೈಶ್ಯ, ಶೂದ್ರ ಮೂರು ವರ್ಣಗಳನ್ನೂ ಮುಖದಿಂದ ಅಗ್ನಿಯನ್ನೂ ವರುಣನನ್ನೂ ಮತ್ತು ಬ್ರಾಹ್ಮಣರನ್ನೂ ಸೃಷ್ಟಿಮಾಡಿದನು. ಹೃದಯದಿಂದ ಚಂದ್ರ, ಕಣ್ಣಿನಿಂದ ಸೂರ್ಯ, ಕಿವಿಗಳಿಂದ ಪ್ರಾಣವಾಯು, ನಾಭಿಯಿಂದ ಅಂತರಿಕ್ಷ, ಕಾಲಿನಿಂದ ಭೂಮಿ, ಶ್ರೋತ್ರೇಂದ್ರಿಯದಿಂದ ಲೋಕಪಾಲಕರನ್ನು ಸೃಷ್ಟಿಮಾಡಿದನು.

ಇತ್ತ, ಮಹಾವಿಷ್ಣುವು ಯೋಗನಿದ್ರಾಸಕ್ತನಾಗಿದ್ದಾಗ ಅವನ ಕಿವಿಯ ಬುಗ್ಗೆಯಿಂದ ಮಧುಕೈಟಭ ಎಂಬ ಇಬ್ಬರು ರಾಕ್ಷಸರು ಜನಿಸಿದರು. ಮಧಾಂಧರಾದ ಅವರು ನಾರಾಯಣನನ್ನು, ಬ್ರಾಹ್ಮಣರನ್ನು, ದೇವತೆಗಳನ್ನು, ಋಷಿಗಳನ್ನು ನಿಂದಿಸತೊಡಗಿದರು. ಅವರ ಕರ್ಕಶವಾದ ಗರ್ಜನೆಯನ್ನು ಕೇಳಲಾರದೆ. ಅಚಲಾ, ಸ್ಥಿರಾ ಎಂದು ಪ್ರಖ್ಯಾತಿಯನ್ನು ಪಡೆದ ಭೂಮಿಯು ನಡುಗಿತು. ಆದಿಶೇಷನೂ ನಡುಗಿ ಹೋದನು. ಬ್ರಹಾಂಡವೇ ಅವರ ಭೀಕರ ಧ್ವನಿಗೆ ಗಾಬರಿಗೊಂಡಿತು.

ಆಗ ಕ್ಷೀರಸಾಗರದಲ್ಲಿ ಭಗವಾನ್ ನಾರಾಯಣನು ಮಲಗಿದ್ದನು. ಅವನ ಹೊಕ್ಕಳದ ಹೊಂದಾವರೆಯಿಂದ ಹುಟ್ಟಿದ ಬ್ರಹ್ಮನು ಆ ಕಮಲಪುಷ್ಪವನ್ನೇ ಆಸನವನ್ನಾಗಿ ಮಾಡಿಕೊಂಡು ಮೇಲೆ ಕುಳಿತುಕೊಂಡಿದ್ದನು. ಆಗ ಈ ರಾಕ್ಷಸರಿಬ್ಬರು ತಮಗಿಂತ ಮೇಲ್ಭಾಗದಲ್ಲಿದ್ದ ಕಮಲದಲ್ಲಿ ಕುಳಿತಕೊಂಡ ಬ್ರಹ್ಮನನ್ನು ಕಂಡು ಕೋಪಗೊಂಡು ಅವನನ್ನು ತಿನ್ನಬೇಕೆಂದು ಪ್ರಯತ್ನಿಸಿದರು. ಆಗ ಬ್ರಹ್ಮನಿಗೆ ಭಯವಾಗಿ ವಿಷ್ಣುವನ್ನು ಕೂಡ ನಿದ್ರಾವಶನಾಗುವಂತೆ ಮಾಡಿದ ಯೋಗಮಾಯೆಗೆ ಶರಣುಹೋದನು.

**ಬ್ರಹ್ಮ :-** ದೇವಿ, ನೀನು ವೇದ ಸ್ವರೂಪಿಣಿ, ನೀನೇ ಕಾಲರಾತ್ರಿ, ಜಗತ್ತಿಗೆ ಜನ್ಮವೀಯುವ ಪ್ರಕೃತಿಮಾತೆಯೇ ನೀನು. ವಿಶ್ವದ ಸೃಷ್ಟಿ, ಸ್ಥಿತಿ, ಪ್ರಲಯಕಾರಕಳೂ ನೀನೇ ಆಗಿರುವಿ. ನಿನಗೇ ಗಾಯತ್ರೀ, ಸಾವಿತ್ರಿ ಸರಸ್ವತಿ ಎಂಬ ಬೇರೆ ಬೇರೆ ಹೆಸರುಗಳು ಇರುವವು. ನಿನ್ನ ಪತಿಯಾದ ಮಹಾವಿಷ್ಣು ಯೋಗನಿದ್ರೆಯಲ್ಲಿ ಇರುತ್ತಾನೆ. ಈಗ ಈ ದೈತ್ಯರು ನನ್ನನ್ನು ತಿನ್ನಲು ಬಂದಿದ್ದಾರೆ. ಈ ದೈತ್ಯರು ಪೂರ್ವಜನ್ಮದಲ್ಲಿ ನನ್ನನ್ನು ಆರಾಧಿಸಿ ಅನೇಕ ವರಗಳನ್ನು ಪಡೆದಿದ್ದಾರೆ. ಆದುದರಿಂದ ನಾನು ಅವರನ್ನು ಕೊಲ್ಲುವಂತೆ ಇಲ್ಲ. ವಿಷ್ಣುವಿನ ಹೊರತು ನನ್ನ ವರದಿಂದ ಅವಧ್ಯರಾದ ಅವರನ್ನು ಯಾರೂ ಗೆಲ್ಲಲಾರರು. ಮತ್ತು ಕೊಲ್ಲಲಾರರು. ಆದುದರಿಂದ ದೇವಿ, ನೀನೆ ಮಹಾತ್ಮನಾದ ಮಹಾವಿಷ್ಣುವನ್ನು ಎಚ್ಚರಗೊಳಿಸು. ಅವನೇ ಇವರನ್ನು ಸಂಹರಿಸಲಿ.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ದೇವೀಪ್ರಾರ್ಥನಾ ಎಂಬ ಹದಿನಾರನೇ ಅಧ್ಯಾಯ ಮುಗಿದುದು*

**ಭೃಗುಮುನಿ :-** ಮಹಾವಿಷ್ಣು ಎಚ್ಚರಗೊಳ್ಳುವುದರೊಳಗಾಗಿ ಆ ಮಧುಕೈಟಭ ರಾಕ್ಷಸರು ತಮ್ಮ ಹಾವಳಿಯನ್ನು ಆರಂಭಿಸಿಬಿಟ್ಟರು; ಸ್ವರ್ಗಲೋಕವನ್ನು ಆಕ್ರಮಿಸಿದರು. ಇಂದ್ರನ ಅರಮನೆಯನ್ನು ಕೊಳ್ಳೆಹೊಡೆದರು. ಕುಬೇರನ ಅಲಕಾವತಿಯನ್ನೂ ಸೂರೆಗೊಂಡರು. ಆಗ ಶ್ರೀಹರಿಯು ಪ್ರಬುದ್ಧನಾಗಿ ತನ್ನ ಪಾಂಚಜನ್ಯ ಶಂಖವನ್ನು ಊದಿದನು. ಆ ರಾಕ್ಷಸರ ಜೊತೆಗೆ ಯುದ್ಧವನ್ನು ಪ್ರಾರಂಭಿಸಿದನು. ಅತ್ಯಂತ ದುಷ್ಟರೂ ಬಲಿಷ್ಠರೂ ಆದ ಆ ಇಬ್ಬರು ದೈತ್ಯರು ಹರಿಯ ಜೊತೆಗೆ ಹಣಾಹಣಿ ಹೋರಾಡಿದರು. ವಿಷ್ಣುವನ್ನು ಕೇಳಿಕೊಂಡು ಅವನ ಜೊತೆಗೆ ಬಾಹುಯುದ್ಧಕ್ಕೆ ಇಳಿದರು. ಆಗ ಶ್ರೀಹರಿಯು ತನ್ನ ಕೈಯಲ್ಲಿಯ ಆಯುಧಗಳನ್ನು ಬಿಸುಟು, ತನ್ನ ನಾಲ್ಕು ಕೈಗಳಿಂದ ಹೋರಾಡತೊಡಗಿದನು. ಪರಸ್ಪರ ಕಲಿತನದಿಂದ ನಡೆಸಿದ ಆ ಕದನವು ಬಹುಕಾಲ ನಡೆಯಿತು. ಐದು ಸಾವಿರ ವರ್ಷಗಳು ಉರುಳಿದವು. ಇಷ್ಟಾದರೂ ಶ್ರೀಹರಿಗೆ ಅವರನ್ನು ಜಯಿಸಲು ಶಕ್ಯವಾಗಲಿಲ್ಲ.

ಆಗ ಶ್ರೀಹರಿಯು ಒಂದು ಯುಕ್ತಿಯನ್ನು ಹೂಡಿದನು. ಗಾನವಿದ್ಯಾ ವಿಶಾರದನಾದ ಒಬ್ಬ ಗಂಧರ್ವನ ರೂಪ ಧರಿಸಿದನು. ರಣರಂಗವನ್ನು ತೊರೆದು ಬಂದು ಅರಣ್ಯದಲ್ಲಿ ಕುಳಿತು ವೀಣೆಯನ್ನು ನುಡಿಸುತ್ತ ಸುಸ್ವರ ಗಾಯನವನ್ನು ಮಾಡಿದನು. ಭಗವಂತನ ಮಧುರಕಂಠದಿಂದ ಹೊರಡುವ ಮಂಜುಳಧ್ವನಿಯು ಕೈಲಾಸಪರ್ವತದಲ್ಲಿರುವ ಮಹಾದೇವನ ಕಿವಿಗೂ ತಲುಪಿತು. ಆಗ ಅವನು ನಿಕುಂಭ, ಪುಷ್ಪದಂತ ಇಬ್ಬರು ಪ್ರಮಥರನ್ನು ಕರೆದು ''ಕಾಡಿನ ಗೂಡಿನಲ್ಲಿ ಗಾನ ಮಾಡುವ ಗಾಯಕನನ್ನು ಇಲ್ಲಿಗೆ ಕರೆದುಕೊಂಡಿ ಬನ್ನಿರಿ'' ಎಂದು ಹೇಳಿದನು. ಅವರು ಬಂದು ಬಿನ್ನವಿಸಲು ಶ್ರೀಹರಿಯು ಮಹೇಶ್ವರನಿದ್ದಲ್ಲಿಗೆ ಹೊರಟುಬಂದನು. ಅಲ್ಲಿ ತನ್ನ ಮಧುರ ಕಂಠದಿಂದ ಪರಮೇಶ್ವರನ ಅಪೇಕ್ಷೆಯಂತೆ ಗಾಯನ ಮಾಡಿ ಅವನನ್ನು ಸಂತೋಷಪಡಿಸಿದನು. ಆದರಿಂದ ಪರಿತುಷ್ಟನಾದ ಶಿವನು ವಿಷ್ಣುವನ್ನು ಆಲಂಗಿಸಿ ''ನಾನು ತುಷ್ಟನಾಗಿದ್ದೇನೆ, ನಿನಗೆ ಇಷ್ಟವಾದುದನ್ನು ಕೇಳಿಕೋ'' ಎಂದು ಹೇಳಿದನು.

**ವಿಷ್ಣು :-** ಪರಮೇಶ್ವರ, ನಾನು ಕ್ಷೀರಸಾಗರದಲ್ಲಿ ಪವಡಿಸಿದಾಗ ನನ್ನ ಕಿವಿಯ ಮಲದಿಂದಲೇ ಹುಟ್ಟಿದ ಮಧುಕೈಟಭ ಎಂಬ ರಾಕ್ಷಸರು, ಬ್ರಹ್ಮನನ್ನು ಬೆದರಿಸಿದ್ದಾರೆ. ಸ್ವರ್ಗಾದಿಲೋಕಗಳನ್ನೆಲ್ಲ ಆಕ್ರಮಿಸಿದ್ದಾರೆ. ಆಗ ಚತುರ್ಮುಖ ಪ್ರಾರ್ಥನೆಯಂತೆ ಯೋಗಮಾಯೆಯು ನನ್ನನ್ನು ಎಚ್ಚರಿಸಿದಳು. ನಾನು ಪ್ರಬುದ್ಧನಾಗಿ ಆ ದುಷ್ಟದೈತ್ಯರೀರ್ವರ ಜೊತೆಗೆ ಹಣಾಹಣಿ ಹೋರಾಡಿದೆ. ಸಾವಿರ ವರುಷ ಯುದ್ಧಮಾಡಿದರೂ ಅವರನ್ನು ಗೆಲ್ಲಲಿಕ್ಕೆ ಆಗಲಿಲ್ಲ. ಅದಕ್ಕೆ ಒಂದು ಉಪಾಯವನ್ನು ಹೇಳು. ಅದಕ್ಕಾಗಿ ಗಂಧರ್ವರೂಪವನ್ನು ತಳೆದು ಗಾಯನ ಮಾಡುತ್ತಾ ನಿನ್ನ ಸಮೀಪಕ್ಕೆ ಬಂದಿದ್ದೇನೆ. ಅವರನ್ನು ಕೊಲ್ಲಲಿಕ್ಕೆ ಒಂದು ಉಪಾಯವನ್ನು ಹೇಳು.

**ಮಹಾದೇವ** :- ಮಾಧವ, ಯುದ್ಧಕ್ಕೆ ಹೊರಡುವಾಗ ನೀನು ಮಂಗಳಮೂರ್ತಿಯಾದ ವಿನಾಯಕನನು ಪೂಜಿಸಲಿಲ್ಲ. ಹಾಗೆಯೇ ರಣರಂಗಕ್ಕೆ ಇಳಿದೆ. ಆದುದರಿಂದಲೇ ನಿನ್ನ ಶಕ್ತಿ ಉಡುಗಿದೆ; ಸಾಮರ್ಥ್ಯ ಅಡಗಿದೆ. ಆದ್ದರಿಂದ ಮೊದಲು ನೀನು ಗಣೇಶನನ್ನು ಪೂಜಿಸು, ಅವನ ಅನುಗ್ರಹ ಪಡೆದು ಯುದ್ಧಕ್ಕೆ ತೆರಳು.

**ಶ್ರೀಹರಿ** :- ಮಹಾದೇವ, ಭಗವಂತನಾದ ಗಣನಾಥನನ್ನು ನಾನು ಯಾವ ಕ್ರಮದಿಂದ ಉಪಾಸಿಸಲಿ, ಕರುಣೆಯಿಂದ ಹೇಳು.

**ಈಶ್ವರ** :- ಲಕ್ಷ್ಮೀಪತೆ, ಆಗಮಗಳಲ್ಲಿ ಒಟ್ಟು ಏಳು ಕೋಟಿ ಗಣೇಶಮಂತ್ರಗಳನ್ನು ಹೇಳಲಾಗಿದೆ. ಅವುಗಳಲ್ಲಿ ಮಹಾಮಂತ್ರಗಳು ಕೂಡ ಬಹಳಷ್ಟು ಇರುತ್ತವೆ. ಅವುಗಳಲ್ಲಿ ಅತಿಮುಖ್ಯವಾದ ಮಹಾಮಂತ್ರಗಳ ಎರಡು. ಒಂದು ಏಕಾಕ್ಷರಮಂತ್ರ, ಇನ್ನೊಂದು ಷಡಕ್ಷರ ಮಂತ್ರ **''ಓಂ ಗಂ ಗಣೇಶಾಯ ನಮಃ''** ಇದು ಏಕಾಕ್ಷರ ಮಂತ್ರ. **''ವಕ್ರತುಂಡಾಯ ಹುಂ''** ಇದು ಷಡಕ್ಷರ ಮಂತ್ರ. ಈ ಮಂತ್ರಗಳಲ್ಲಿ ಒಂದನ್ನು ನಾನು ನಿನಗೆ ಉಪದೇಶಿಸುವೆನು. ಈ ಮಹಾಮಂತ್ರವನ್ನು ಏಕಾಗ್ರತೆಯಿಂದ ಜಪಿಸಿ ಗಣನಾಯಕನನ್ನು ಉಪಾಸಿಸಿದರೆ, ನಿನ್ನ ಇಷ್ಟಾರ್ಥಗಳೆಲ್ಲ ಕೈಗೂಡುವವು.

ಇದನ್ನು ಕೇಳಿ ಭಗವಾನ್ ಶ್ರೀಹರಿಯು ಆ ಮಂತ್ರವನ್ನು ಉಪಾಸಿಸಲಿಕ್ಕೆಂದು ಅಲ್ಲಿಂದ ತೆರಳಿದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಮಂತ್ರೋಪದೇಶ*
*ಎಂಬ ಹದಿನೇಳನೇ ಅಧ್ಯಾಯ ಮುಗಿದುದು*



## ಮಧು ಕೈಟಭ ಸಂಹಾರ

**ಅಧ್ಯಾಯ - ೧೮**

**ಸೋಮಕಾಂತ** :- ಪೂಜ್ಯರೆ, ಮಹಾವಿಷ್ಣುವು ಗಣೇಶನ ಮೂಲಮಂತ್ರವನ್ನು ಎಲ್ಲಿ ಜಪಿಸಿದನು. ಹೇಗೆ ಸಿದ್ಧಿಯನ್ನು ಪಡೆದನ್ನು ಅದನ್ನು ನಿರೂಪಿಸಿರಿ.

**ಭೃಗುಮುನಿ** :- ಭೂಮಂಡಲದಲ್ಲಿ ಅತ್ಯಂತ ಪವಿತ್ರವಾದ ಸಿದ್ಧಿಕ್ಷೇತ್ರ ಎಂಬಲ್ಲಿ ನಿಂತು ಶ್ರೀಹರಿಯು ಕಠಿಣವಾದ ತಪಸ್ಸನ್ನು ಆಚರಿಸಿದನು. ಮನಸ್ಸಿನಲ್ಲಿ ಮಹಾಗಣಪತಿಯನ್ನು ಜಪಿಸುತ್ತ ಷಡಕ್ಷರ ನ್ಯಾಸದಿಂದ ದೇವನನ್ನು ಅರ್ಚಿಸಿ ಮೂಲಮಂತ್ರವನ್ನು ಜಪಿಸಿದನು.

''ಅಸ್ಯಶ್ರೀ ಷಡಕ್ಷರ ವಕ್ರತುಂಡ ಮಹಾಮಂತ್ರಸ್ಯ ಭಾರ್ಗವೋ ಋಷಿಃ. ಅನುಷ್ಟುಪ ಛಂದಃ ವಿಘ್ನೇಶೋ ದೇವತಾವಂ ಬೀಜಂ ಯಂ ಶಕ್ತಿಃ ಓಂ ಭಾರ್ಗವ ಋಷಯೇ ನಮಃ ಶಿರಸೇ ಓಂ ಅನುಷ್ಟುಪ ಛಂದಸೇ ನಮಃ ಮುಖೇ ವಿಘ್ನೇಶ ದೇವತಾಯೈ ನಮಃ ಹೃದಿವಂ ಬೀಜಾಯ ನಮಃ ಗುಹ್ಯೆ, ಓಂ ಶಕ್ತಯೇ ನಮಃ ಪಾದಯೋಃ ಓಂ ವಿನಿಯೋಗಾಯ ನಮಃ ಸರ್ವಾಂಗೇ ಎಂದು ಋಷ್ಯಾದಿ ನ್ಯಾಸವನ್ನು ಮಾಡಿಕೊಂಡರು.

ಇದರಂತೆ ಅಂಗನ್ಯಾಸಾದಿಗಳನ್ನೂ ಕೂಡ ಮಾಡಿದರು.

ಓಂ ವಂ ನಮಃ ಅಂಗುಷ್ಠಾಭ್ಯಾಂ ಹೃದಯಾಯ ನಮಃ, ಓಂಕ್ರಂ ನಮಃ ತರ್ಜನಿಭ್ಯಾಂ ನಮಃ ಶಿರಸೇಸ್ವಾಹಾ, ಓಂ ತುಂ ನಮಃ ಮಧ್ಯಮಾಭ್ಯಾಂ ನಮಃ ಶಿಖಾಯೈ ವೌಷಟ, ಓಂ ಡಾ ನಮಃ ಅನಾಮಿಕಾಭ್ಯಾಂ ನಮಃ, ಕವಚಾಯ ಹುಂ ಓಂ ಯಂ ನಮಃ ಕನಿಷ್ಠಕಾಭ್ಯಾಂ ನಮಃ ನೇತ್ರಾಯಾಯ ವೌಷಟ ಓಂ ಹುಂ ನಮಃ ಕರತಲ ಕರಪೃಷ್ಠಾಭ್ಯಾಂ ನಮಃ ಅಸ್ತ್ರಾಯ ಫಟ, ಗಾಯತ್ರ್ಯಾ ದಿಗ್ಬಂಧಃ ಹೀಗೆ ಲಕ್ಷ್ಮೀಪತಿಯು ಅಂಗನ್ಯಾಸಾದಿಗಳನ್ನು ಮಾಡಿಕೊಂಡು ವರ್ಣನ್ಯಾಸಗಳನ್ನು ಮಾಡಿದರು.

ಓಂ ವಂ ನಮಃ ಬ್ರೂಮಧ್ಯೇ । ಓಂ ಕ್ರಂ ನಮಃ ಕಂಠೆ ಓಂ ತುಂ ನಮಃ ಹೃದಯೇ, ಓಂ ಡಾಂ ನಮಃ ನಾಭೌ, ಓಂ ಯಂ ನಮಃ ಲಿಂಗೆ, ಓಂ ಹುಂ ನಮಃ ಪಾದಯೋಃ ॥

ಹೀಗೆ ನೂರು ವರ್ಷಗಳಕಾಲ ಕಠಿಣವಾದ ಮೂಲಮಂತ್ರವನ್ನು ಜಪಿಸಿದ ನಂತರ ನಾರಾಯಣನಿಗೆ ಗಣಾಧಿಪನು ಪ್ರಸನ್ನನಾಗಿ ಪ್ರತ್ಯಕ್ಷ ದರ್ಶನವನ್ನು ದಯಪಾಲಿಸಿದನು. ಮತ್ತು ಬೇಕಾದ ವರವನ್ನು ಬೇಡು ಎಂದು ಹೇಳಿದನು.

**ವಿಷ್ಣು :-** ನನ್ನಿಂದ ಹುಟ್ಟಿದ ಮಧುಕೈಟಭ ಎಂಬ ರಕ್ಕಸರು ಲೋಕಕಂಟಕರಾಗಿ ಬೆಳೆದಿದ್ದಾರೆ. ಅವರನ್ನು ಕೊಲ್ಲಲು ನನಗೆ ಶಕ್ತಿಯನ್ನು ದಯಪಾಲಿಸು ಮತ್ತು ಅವರಂತೆ ಮದೋನ್ಮತ್ತರಾದ ಇತರ ಎಲ್ಲ ದೈತ್ಯರನ್ನು ಸಂಹರಿಸುವ ಸಾಮರ್ಥ್ಯವನ್ನು ನೀಡು.

ವಿಷ್ಣುವಿನ ಬಿನ್ನಹವನ್ನು ತಕ್ಷಣದಲ್ಲಿಯೇ ಅನುಮತಿಸಿದ ಗಣೇಶನು ತಥಾಸ್ತು ಎಂದು ಅವನು ಬೇಡಿದ ವರವನ್ನು ನೀಡಿದನು. ಅದರಿಂದ ಸಂತುಷ್ಟನಾದ ಶ್ರೀಹರಿಯು ಗಂಡಕೀನದಿಯ ಕೆಂಪು ಶಿಲೆಯಿಂದ ವಿನಾಯಕನ ಮೂರ್ತಿಯನ್ನು ಸುಂದರವಾಗಿ ನಿರ್ಮಿಸಿ ಅಲ್ಲಿಯ ಸ್ಪಟಿಕ ಮಂದಿರದಲ್ಲಿ ಸ್ಥಾಪಿಸದನು. ಅದಕ್ಕೆ ಸಿದ್ಧಿವಿನಾಯಕ ಎಂದು ಹೆಸರಿಟ್ಟನು. ಅಂದಿನಿಂದ ಅದಕ್ಕೆ ಸಿದ್ಧಿಕ್ಷೇತ್ರ ಎಂದು ಹೆಸರುಬಂದಿತು.

ಗಣಪತಿಯ ವರದಿಂದ ಉತ್ಸಾಹಭರಿತನಾದ ವಿಷ್ಣುವು ಮತ್ತೆ ಸಮರಾಂಗಣಕ್ಕೆ ಬಂದನು. ಅವನನ್ನು ಕಂಡು ಮಧುಕೈಟಭರು "ನಮ್ಮಿಂದ ಹೆದರಿ ರಣರಂಗದಿಂದ ಓಡಿಹೋಗಿ ಮತ್ತೆ ಪುನಃ ಏಕೆ ಯುದ್ಧಕ್ಕೆ ಬಂದೆ" ಎಂದು ನುಡಿದು ಹರಿಯೊಡನೆ ಯುದ್ಧಕ್ಕೆ ತೊಡಗಿದರು. ದೈತ್ಯ ಹಾಗೂ ಶ್ರೀಹರಿ ಇಬ್ಬರ ನಡುವೆ ಘನಘೋರವಾದ ಸಂಗ್ರಾಮವು ನಡೆಯಿತು. ಆ ದೈತ್ಯಾಧಮರ ಯುದ್ಧ ಚಾತುರ್ಯವನ್ನು ಕಂಡು ಶ್ರೀಹರಿಯು ಉತ್ಸಾಹಗೊಂಡು ಹೇಳಿದನು.

**ಶ್ರೀಹರಿ :-** ನಿಮ್ಮ ಯುದ್ಧ ಕೌಶಲ್ಯಕ್ಕೆ ಮೆಚ್ಚಿದ್ದೇನೆ ಬೇಕಾದ ವರ ಕೇಳಿರಿ.

**ಮಧುಕೈಟಭ :-** ಕಮಲನಾಭ, ನಿನ್ನ ಕದನ ಕೌಶ್ಯಲ್ಯ ಕಂಡು ನಾವು ಸಂತುಷ್ಟರಾಗಿದ್ದೇವೆ. ನಿನ್ನ ವರ ನಮಗೆ ಬೇಡ, ನಾವೇ ನಿನಗೆ ವರಕೋಡುತ್ತೇವೆ ಇಷ್ಟವಾದುದನ್ನು ಕೇಳು.

**ಶ್ರೀಹರಿ :-** ನೀವು ವರಕೊಡುವುದಕ್ಕೆ ಸಿದ್ಧರಾದರೆ ನಿಮ್ಮ ವಚನವು ನಿಜವಾದದ್ದಾದರೆ ಈ ವರವನ್ನು ನೀಡಿರಿ. "ನಾನು ನಿಮ್ಮನ್ನು ಕೊಲ್ಲಬೇಕು. ನೀವು ನನ್ನಿಂದ ಸಾಯಬೇಕು."

**ಮಧುಕೈಟಭ :-** ನಿನ್ನ ಇಷ್ಟದಂತೆ ಆಗಲಿ. ನಾವಿಬ್ಬರೂ ನಿನ್ನಿಂದಲೇ ಮರಣವನ್ನು ಹೊಂದುವೆವು. ಆದರೆ ಯಾವ ಸ್ಥಳವು ಭೂಮಿಯಾಗಿಲ್ಲವೊ, ಯಾವ ಸ್ಥಳವು ಜಲಮಯವೂ ಆಗಿಲ್ಲವೋ ಅಲ್ಲಿ ಮಾತ್ರ ನೀನು ನಮ್ಮನ್ನು ವಧಿಸು; ನಾವು ಸರ್ವಸ್ವವನ್ನು ಬಿಡಬಲ್ಲೆವು. ಆದರೆ ಸತ್ಯವನ್ನು ಮಾತ್ರ ಬಿಡಲಾರೆವು.

ಆಗ ಶ್ರೀಹರಿಯು ಆ ಇಬ್ಬರು ದೈತ್ಯರನ್ನು ತನ್ನ ಪರಾಕ್ರಮದಿಂದ ಸೆಳೆದುಕೊಂಡು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ತೀಕ್ಷ್ಣವಾದ ಸುದರ್ಶನಚಕ್ರದಿಂದ ಆ ದೈತ್ಯರಿಬ್ಬರ ತಲೆಗಳನ್ನು ಕತ್ತರಿಸಿದ. ಆಗ ದೇವತೆಗಳು ಹರ್ಷದಿಂದ ಪುಷ್ಪವೃಷ್ಟಿಯನ್ನು ಶ್ರೀ ಹರಿಯ ಮೇಲೆ ಮಾಡಿದರು. ಗಂಧರ್ವರು ಹಾಡಿದರು. ಮುನಿಮಹರ್ಷಿಗಳು ಹಾಡಿ ಹೊಗಳಿದರು; ಅಪ್ಸರೆಯರು ಕುಣಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಸಿದ್ಧಿಕ್ಷೇತ್ರ ಉತ್ಪತ್ತಿ ಕಥನ, ಮಧುಕೈಟಭ ಸಂಹಾರ ಎಂಬ ಹದಿನೆಂಟನೇ ಅಧ್ಯಾಯ ಮುಗಿದುದು*



## ಪುತ್ರಪ್ರಾಪ್ತಿ

## ಅಧ್ಯಾಯ - ೧೯

**ಬ್ರಹ್ಮ :-** ಪೂರ್ವಕಾಲದಲ್ಲಿ ವಿದರ್ಭದೇಶದಲ್ಲಿ ಭೀಮ ಎಂಬ ಹೆಸರಿನ ಶೂರ ವೀರ ಧೀರನಾದ ಒಬ್ಬ ರಾಜನಿದ್ದನು. ಕೌಂಡಿಣ್ಯಪಟ್ಟಣ ಅವನ ರಾಜಧಾನಿ. ಅವನ ಮಡದ್ದೀ ಚಾರುಹಾಸಿನೀ ಪರಮ ಸುಂದರಿ, ಸತೀ ಶಿರೋಮಣಿ. ಅನುರೂಪರಾದ ಈ ರಾಜ ದಂಪತಿಗಳಿಗೆ ಬಹುಕಾಲದವರೆಗೆ ಸಂತಾನ ಆಗಲಿಲ್ಲ. ಆಗ ಮಹಾರಾಜನಿಗೆ ಬಹಳ ದುಃಖವಾಯಿತು. **ಅಪುತ್ರಸ್ಯಗತಿರ್ನಾಸ್ತಿ,** ಮಕ್ಕಳಿಲ್ಲದವರಿಗೆ ಇಹಲೋಕದಲ್ಲಿ ಸುಖವಿಲ್ಲ, ಪರಲೋಕದಲ್ಲಿ ಗತಿ ಇಲ್ಲ ಆದುದರಿಂದ ರಾಜ್ಯಕೋಶಗಳನ್ನು ಬಿಟ್ಟು ಅರಣ್ಯಕ್ಕೆ ಹೋಗಿ ತಪಸ್ಸನ್ನು ಮಾಡಬೇಕು ಎಂದು ಅವನು ನಿಶ್ಚಯಿಸಿದನು.

ಆ ಮಹಾರಾಜನಿಗೆ ಅತ್ಯಂತ ಬುದ್ಧಿವಂತರೂ ಸ್ವಾಮಿನಿಷ್ಠರೂ ಆದ ಇಬ್ಬರು ಮಂತ್ರಿಗಳಿದ್ದರು. ಮನೋರಂಜನ, ಸುಮಂತ ಎಂದು ಅವರ ಹೆಸರು. ರಾಜನು ಅವರನ್ನು ಕರೆಸಿ ತನ್ನ ಅರಣ್ಯ ಪ್ರಯಾಣದ ಸಂಕಲ್ಪವನ್ನು ತಿಳಿಸಿದನು. ''ನಾವು ತಪಸ್ ಸಿದ್ಧಿಗಾಗಿ ಅರಣ್ಯಕ್ಕೆ ಹೋಗಿ ಸಂತಾನಾರ್ಥವಾಗಿ ಜಪತಪಾನುಷ್ಠಾನ ಮಾಡುವೆವು. ನಾವು ಅರಣ್ಯದಿಂದ ಯಶಸ್ವಿಯಾಗಿ ತಿರುಗಿ ಬಂದರೆ ನಮಗೆ ನಮ್ಮ ರಾಜ್ಯವನ್ನು ಒಪ್ಪಿಸಿರಿ. ನಾವು ಬಾರದಿದ್ದರೆ ನನ್ನ ಈ ರಾಜ್ಯವನ್ನು ನೀವೇ ಸಮವಾಗಿ ವಿಭಾಗಿಸಿ ನ್ಯಾಯದಿಂದ ಶಾಸನವನ್ನು ಮಾಡಿರಿ, ಆಗ ರಾಜದಂಪತಿಗಳನ್ನು ಬಿಟ್ಟಿರಲು ಮನಸ್ಸಿಲ್ಲದ ಮಂತ್ರಿಗಳನ್ನೂ ಪ್ರಜಾಪರಿವಾರದವರನ್ನೂ ಸಮಾಧಾನಪಡಿಸಿ, ರಾಜರಾಣಿಯರು ಒಂದು ಅರಣ್ಯಕ್ಕೆ ಬಂದರು. ನಿಸರ್ಗಸುಂದರವಾದ ಆ ಅರಣ್ಯದಲ್ಲಿ ವಿಕಸಿತ ಕುಸುಮಗಳಿಂದ ಸುಗಂಧವನ್ನು ಸೂಸುವ ಲತಾಮಂಟಪಗಳೂ ಸ್ವಚ್ಛ ನೀರಿನ ಸರೋವರಗಳೂ ಇದ್ದವು. ಆ ಅರಣ್ಯದ ಮಧ್ಯದಲ್ಲಿ ವಿಶ್ವಾಮಿತ್ರ ಮಹರ್ಷಿಗಳ ದಿವ್ಯ ಆಶ್ರಮವಿದ್ದಿತು. ಅಲ್ಲಿ ಆನೆ, ಸಿಂಹ, ಹಾವು, ಮುಂಗಸಿ, ಮೊದಲಾದ ಎಲ್ಲ ಪ್ರಾಣಿಗಳು ತಮ್ಮ ಜನ್ಮಸಿದ್ಧ ವೈರವನ್ನು

ಬಿಟ್ಟು ಸ್ನೇಹಸೌಹಾರ್ದದಿಂದ ಸಹಜೀವನವನ್ನು ನಡೆಸುತ್ತಲಿದ್ದವು. ಇದೆಲ್ಲವೂ ಬ್ರಹ್ಮರ್ಷಿ ವಿಶ್ವಾಮಿತ್ರರ ಪ್ರಭಾವ ಎಂದು ರಾಜದಂಪತಿಗಳು ತಿಳಿದುಕೊಂಡರು.

ರಾಜರಾಣಿಯರಿಬ್ಬರೂ, ದರ್ಭಾಸನದ ಮೇಲೆ ಮಂಡಿಸಿ, ಶಿಷ್ಯರಿಗೆ ವೇದಾಧ್ಯಯನವನ್ನು ಮಾಡಿಸುತ್ತಿದ್ದ ವಿಶ್ವಾಮಿತ್ರಮುನಿಗಳ ಬಳಿಗೆ ಬಂದರು. ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಆಗ ಮಹರ್ಷಿಗಳು ಅವರನ್ನು ಹಿಡಿದೆತ್ತಿ ಮೈದಡವಿ ಸಂತಯಿಸಿದರು. ಅವರು ಏನು ಹೇಳದಿದ್ದರೂ ರಾಜದಂಪತಿಗಳ ಮುಖದ ಮೇಲಿಂದಲೆ ಅವರ ಆಂತರಿಕ ದುಃಖ ಚಿಂತೆಗಳನ್ನು ತಿಳಿದು, ಕರಳು ಕರಗಿ, ಮನದಲ್ಲಿ ಮರುಗಿ, ಮುನಿಗಳು ಅವರಿಗೆ ಆಶ್ವಾಸನೆಯನ್ನು ನೀಡಿದರು.

**ವಿಶ್ವಾಮಿತ್ರ :-** ಮಹಾರಾಜ, ನಿನ್ನ ಮನೋರಥ ಪೂರ್ಣವಾಗುವದು. ನಿನಗೆ ಸತ್ಪುತ್ರನು ಜನಿಸುವನು. ಆದರೆ ನೀನು ಈಗ ಎಲ್ಲಿಂದ ಬಂದೆ ? ನಿನ್ನ ರಾಜಧಾನಿ ಯಾವುದು ? ನಿನ್ನ ಹೆಸರೇನು ? ಹೇಳು.

**ಮಹಾರಾಜ :-** ಪೂಜ್ಯರೆ, ವಿದರ್ಭದೇಶದ ಕೌಂಡಿಣ್ಯ ನಗರ ನಮ್ಮ ರಾಜಧಾನಿ, ನನ್ನ ಹೆಸರು ಭೀಮ. ಇವಳು ಚಾರುಹಾಸಿನಿ ನನ್ನ ಧರ್ಮಪತ್ನಿ. ಪುತ್ರ ಪುತ್ರಿಗಾಗಿ ನಾನು ಮಾಡದ ವ್ರತ ಇಲ್ಲ, ನೀಡದ ದಾನವಿಲ್ಲ. ಆರಾಧಿಸದ ದೇವರಿಲ್ಲ. ಆದರೂ ನಮಗೆ ಸಂತಾನ ಆಗಲಿಲ್ಲ. ಅದ್ದರಿಂದ ರಾಜ್ಯ ಐಶ್ವರ್ಯ ಅಧಿಕಾರ ಎಲ್ಲವನ್ನೂ ಬಿಟ್ಟು ಅರಣ್ಯಕ್ಕೆ ಬಂದಿದ್ದೇವೆ. ತಮ್ಮ ಸಂದರ್ಶನದ ಭಾಗ್ಯ ನಮಗೆ ಒದಗಿ ಬಂದದ್ದು ಜನ್ಮಾಂತರದ ಸುಕೃತ. ತಾವು ಕರುಣೆಯಿಂದ ನಮ್ಮನ್ನು ಆಶೀರ್ವದಿಸಿದಿರಿ, ತಮ್ಮ ಆರ್ಶೀರ್ವಾದದಿಂದ ನಮಗೆ ಪುತ್ರನು ಜನಿಸುವದರಲ್ಲಿ ಸಂಶಯವೇ ಇಲ್ಲ. ಆದರೆ ಇಷ್ಟುದಿನ ನಮಗೆ ಸಂತಾನ ಆಗದಿರುವದಕ್ಕೆ ಕಾರಣವೇನು ? ನಾವು ಜನ್ಮಾಂತರದಲ್ಲಿ ಮಾಡಿರಬಹುದಾದ ದುಷ್ಕರ್ಮ ಯಾವುದು ? ಯಾವ ಸತ್ಕರ್ಮದ ಆ ಸ್ಮರಣೆಯ ಪ್ರಭಾವದಿಂದ ಆ ಪಾಪವು ಪರಿಹಾರವಾಗುವುದು ? ಎಲ್ಲವನ್ನು ತಿಳಿಸಿರಿ.

**ವಿಶ್ವಾಮಿತ್ರ :-** ಮಹಾರಾಜ, ಪೂರ್ವಜನ್ಮದಲ್ಲಿ ನೀನು ಮದಾಂಧನಾಗಿದ್ದೆ. ಸಂಪತ್ತಿನ ಗರ್ವದಿಂದ ನೀನು ಅನುವಂಶಿಕವಾಗಿ ಬಂದ ಕುಲ ಧರ್ಮಾಚರಣೆಯನ್ನು ಧಿಕ್ಕರಿಸಿ ಬಿಟ್ಟಿದ್ದೆ. ನಿಮ್ಮ ವಂಶಪರಂಪರಾ ಪ್ರಾಪ್ತವಾದ ಶ್ರೀಗಣೇಶನ ಪೂಜೆಯನ್ನು ಬಿಟ್ಟು ಬಿಟ್ಟೆ. ನಿನ್ನ ಕುಲದೇವರಾದ ಗಣಪತಿಗೆ ಕೋಪ ಬಂದಿತ್ತು. ಅದಕ್ಕಾಗಿಯೇ ನಿನಗೆ ಸಂತಾನ ಉಂಟಾಗಿಲ್ಲ. ಶ್ರೀ ಗಣೇಶನು ನಿಮ್ಮ ಕುಲಕ್ಕೆ ಅಧಿದೇವನಾಗಲು ಒಂದು ಪ್ರಬಲವಾದ ಕಾರಣವಿದೆ. ಅದನ್ನು ಪ್ರಾರಂಭದಿಂದ ಹೇಳುತ್ತೇನೆ. ಕೇಳು.

ನಿನಗಿಂತ ಏಳು ತಲೆ ಹಿಂದೆ ಮಹಾಪರಾಕ್ರಮಶಾಲಿಯಾದ ವಲ್ಲಭ ಎಂಬ ಹೆಸರಿನ ರಾಜನಿದ್ದ. ಅವನು ರೂಪದಲ್ಲಿ ಮನ್ಮಥ, ಕಾಂತಿಯಲ್ಲಿ ಚಂದ್ರ. ನೀತಿಯಲ್ಲಿ ಧರ್ಮರಾಜ. ಬಹುಕಾಲದವರೆಗೆ ಅವನಿಗೆ ಮಕ್ಕಳೇ ಆಗಲಿಲ್ಲ. ಮುಪ್ಪಿನ ಕಾಲದಲ್ಲಿ ಒಬ್ಬ ಮಗ ಹುಟ್ಟಿದ. ಆದರೆ ಆ ಮಗು ಕುರುಡ. ಕೆಪ್ಪ, ಬೆಪ್ಪ ನೋಡಲು ಅಷ್ಟಾವಕ್ರ, ಕುಗ್ಗಿದ ದೇಹ, ಬಗ್ಗಿದ ಬೆನ್ನು, ದುರ್ಗಂಧಯುಕ್ತ ದೇಹ, ಅಂಥ ಮಗುವನ್ನು ನೋಡಿ ತಾಯಿಯಾದ ಕಮಲೆಯು ಚಿಂತಾ ಸಂತಾಪಗಳಿಂದ ಅಂತರಂಗದಲ್ಲಿಯೇ ಕುದಿದು

ಹೋದಳು. ರಾಜನಾದರೂ ಆ ಮಗುವಿನ ವಿಕಾರ ರೂಪವನ್ನು ಕಂಡು ದುಃಖ ಸಂತಪ್ತನಾದನು. ಆದರೂ ಹೆಂಡತಿಯನ್ನು ಸಮಾಧಾನಪಡಿಸಿದನು.

**ವಲ್ಲಭ** :- ಪ್ರಿಯೆ, ಇದೆಲ್ಲವೂ ನಮ್ಮ ಹಾಗೂ ಮಗುವಿನ ಜನ್ಮಾಂತರದ ದುಷ್ಕರ್ಮದ ಫಲ. ಮನುಷ್ಯನಿಗೆ ಶುಭಾಶುಭಕರ್ಮಗಳ ಮಿಶ್ರಫಲಗಳು ಬರುತ್ತಲೆ ಇರುತ್ತವೆ. ಈ ಬಾಲಕನ ದುಸ್ಥಿತಿಗೆ ನೀನು ಮರುಗಬೇಡ. ದುಃಖಭೋಗವು ತೀರಿದ ಬಳಿಕ ಅವನು ಸುಖಿಯಾಗುವನು. ಈ ಬಾಲಕನು ಜನ್ಮಾಂತರದಲ್ಲಿ ಯಾವುದೇ ಮಹತ್ತರವಾದ ದುಷ್ಕರ್ಮವನ್ನು ಮಾಡಿರಬೇಕು. ಇವನ ಈಗಿನ ದುಃಖವು ಪರಿಹಾರವಾಗುವಂತೆ ಮಣಿಮಂತ್ರ, ಔಷಧ ಪ್ರಯೋಗಗಳನ್ನು ಮಾಡಿ ಚಿಕಿತ್ಸೆಗಳನ್ನು ನೀಡಿ ಅವನನ್ನು ಆರೋಗ್ಯವಂತನನ್ನಾಗಿ ಮಾಡಲು ಪ್ರಯತ್ನಿಸೋಣ.

ಪತಿಯ ಸಮಾಧಾನೋಕ್ತಿಗಳಿಂದ ಮಹಾರಾಣಿ ಕಮಲೆಯು ಎಚ್ಚೆತ್ತು ಕರ್ತವ್ಯ ಪರಳಾದಳು; ದುಃಖವನ್ನು ಮರೆತಳು. ಮಗುವನ್ನೂ ತೊಳೆದು ಗಾಯಗಳಿಗೆ ತಕ್ಕ ಉಪಚಾರ ಮಾಡಿದಳು. ವಲ್ಲಭರಾಜನಾದರೂ ಮಗನಿಗೆ ಶ್ರೇಯಸ್ಸನ್ನು ಬಯಸಿ ತ್ಕಾಲೋಚಿತವಾದ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದನು. ದಾನ ದಕ್ಷಿಣೆಗಳಿಂದ ವಿಪ್ರೋತ್ತಮರನ್ನು ಪೂಜಿಸಿದನು. ಮಹಾರಾಣಿಯಾದರೂ ಕೂಡ ಸುವಾಸಿನಿಯರಾದ ಮುತ್ತೈದೆಯರನ್ನು ಕರೆಸಿ ಮಂಗಳ ದ್ರವ್ಯ ವಸ್ತ್ರ ಅಲಂಕಾರಗಳನ್ನು ದಾನ ನೀಡಿ ತೃಪ್ತಿ ಪಡಿಸಿದಳು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ರಾಜದಂಪತಿಗಳ ಪುತ್ರಪ್ರಾಪ್ತಿ ವರ್ಣನೆ ಎಂಬ ಹತ್ತೊಂಬತ್ತನೇ ಅಧ್ಯಾಯ ಮುಗಿದುದು*

—o—

## ದಕ್ಷಸ್ತುತಿ — ಅಧ್ಯಾಯ - ೨೦

**ಬ್ರಹ್ಮ** :- ಅನಂತರ ವಲ್ಲಭರಾಜನು ವೇದಶಾಸ್ತ್ರ ವಿದ್ವಾಂಸರಾದ ಬ್ರಾಹ್ಮಣರನ್ನು ಅರಮನೆಗೆ ಕರೆಸಿ ಅವರ ಸಲಹೆಯಂತೆ ತನ್ನ ಮಗನಿಗೆ ದಕ್ಷ ಎಂದು ಹೆಸರಿನ್ನಿಟ್ಟನು.

**''ಜನ್ಮಾಂತರ ಕೃತಂ ಪಾಪಂ ವ್ಯಾಧಿರೂಪೇಣ ಬಾಧತೆ'' ।**
**ತಚ್ಛಾಂತಿರೌಷಧೈಃ ದಾನೈಃ ಜಪಹೋಮಸುರಾರ್ಚನೈಃ ॥**

ಹಿಂದಿನ ಜನ್ಮದಲ್ಲಿ ಮಾಡಿದ ಪಾಪವು ರೋಗಾದಿರೂಪದಿಂದ ಬಾಧಿಸುತ್ತದೆ. ಆ ರೋಗಾದಿಗಳು ಔಷಧ, ಶಾಂತಿಕರ್ಮ, ಧಾನ, ಧರ್ಮ, ಜಪ, ಹೋಮ ದೇವತಾರ್ಚನೆಗಳಿಂದ ಉಪಶಮನವನ್ನು ಹೊಂದುತ್ತವೆ ಎಂಬ ಮಾತಿನಲ್ಲಿ ರಾಜನಿಗೆ ವಿಶ್ವಾಸವಿದ್ದಿತು. ಅದನ್ನು ಅನುಸರಿಸಿ ರಾಜವೈದ್ಯರಿಂದ ಅನೇಕ ದಿವ್ಯ ವನಸ್ಪತಿಗಳನ್ನು ತರಿಸಿ ಔಷಧಿಗಳನ್ನು ಉಪಯೋಗಿಸಿ ಉಪಚಾರ ಮಾಡಿಸಿದನು. ಬ್ರಾಹ್ಮಣರಿಂದ ಶಾಂತಿಕರ್ಮಗಳನ್ನು ಮಾಡಿಸಿದನು. ಪುರೋಹಿತರಿಂದ ಹೋಮಹವನಾದಿಗಳನ್ನು ನೆರವೇರಿಸಿದನು. ಜಪ, ಮಂತ್ರ ಪ್ರಯೋಗ, ದೇವತಾರಾಧನೆ ಬ್ರಾಹ್ಮಣ ಸೇವೆ ಎಲ್ಲವನ್ನೂ ವ್ಯವಸ್ಥಿತವಾಗಿ ವಲ್ಲಭರಾಜನು ಶ್ರದ್ಧೆಯಿಂದ ಮಾಡಿದನು. ಸ್ವಯಂ ತಾನು ಕೂಡ ಪುತ್ರನ ಆರೋಗ್ಯ ಲಾಭಕ್ಕಾಗಿ ಕಠಿಣ ತರವಾದ ತಪಸ್ಸನ್ನು ಆಚರಿಸಿದನು.

ಏನಾದರೂ ರೋಗ ಉಪಶಮನ ಹೊಂದಲಿಲ್ಲ. ಮತ್ತಿಷ್ಟೂ ಉಲ್ಬಣವಾಯಿತು. ಮಗುವಿನ ಮೈ ವಿಕಾರಗೊಂಡು ವಿಲಕ್ಷಣವಾಗಿ ತೋರ ಹತ್ತಿತು. ಇದರಿಂದ ರಾಜನಿಗೆ ನಿರಾಶೆಯಾಯಿತು. ಮಗನ ಬಗ್ಗೆ ಮನದಲ್ಲಿ ಜಿಗುಪ್ಸೆ ಮೂಡಿತು. ಸಹನಶಕ್ತಿಯು ಮಿತಿಮೀರಿತು. ಆ ಜುಗುಪ್ಸೆಯೇ ಪುತ್ರನ ಬಗ್ಗೆ ಕ್ರೋಧವಾಗಿ ಪರಿಣಮಿಸಿತು. ಅದರಿಂದ ಮಹಾರಾಜನ ತಾಳ್ಮೆ ತಪ್ಪಿತು, ಯುಕ್ತಾಯುಕ್ತವಿಚಾರ ಲುಪ್ತವಾಯಿತು. ಅವನು ಕೋಪಾಟೋಪದಿಂದ ಹುಚ್ಚನಂತಾಗಿ ಮಡದಿಯಾದ ಕಮಲೆಯನ್ನು ಕರೆದು ಕ್ರೂರನಾಗಿ ಹೇಳಿದ.

**ವಲ್ಲಭ :-** ''ಕಮಲೆ, ಈ ಮಗನ ಸಲುವಾಗಿ ನನಗೆ ಸಾಕಾಗಿ ಹೋಗಿದೆ. ಈ ಪುತ್ರನ ಸಲುವಾಗಿ ಹಗಲಿರುಳೂ ಚಿಂತಿಸಿ ಮನದಲ್ಲಿ ಮರುಗಿ, ದೇಹದಿಂದ ಸೊರಗಿ ಬೆಂದು ಬಳಲಿದ ನಿನ್ನನ್ನಾಗಲಿ, ದಿನೇ ದಿನೇ ಕೊಳೆತು ಹುಳತು ಹೋಗುತ್ತಿರುವ ಈ ನಿನ್ನ ಪುತ್ರನನ್ನಾಗಲಿ ನನ್ನ ಕಡೆಯಿಂದ ನೋಡಲಿಕ್ಕಾಗುವುದಿಲ್ಲ. ಈ ನಿನ್ನ ಪುತ್ರನನ್ನು ಕಟ್ಟಿಕೊಂಡು ನನ್ನ ಅರಮನೆಯನ್ನು ಬಿಟ್ಟು ಮನಬಂದಲ್ಲಿಗೆ ಹೊರಟು ಹೋಗು. ಒಂದು ಕ್ಷಣವಾದರೂ ನೀನು ಇನ್ನು ನನ್ನ ಬಳಿಯಲ್ಲಿ ಇರಬೇಡ.''

ರಾಜನ ಕಠೋರವಾದ ಆಜ್ಞೆಯನ್ನು ಕೇಳಿ ಮಹಾರಾಣಿ ಕಮಲೆಗೆ ಬಹಳ ದುಃಖವಾಯಿತು. ಮಗನ ದುಃಖಕ್ಕಿಂತ ಪತಿಯು ತನ್ನನ್ನು ಪರಿತ್ಯಾಗ ಮಾಡಿದ್ದು ಅವಳಿಗೆ ಸಹಿಸಲಾರದ ದುಃಖಾತಿರೇಕವನ್ನು ಉಂಟುಮಾಡಿತು. ಅವಳ ಹೃದಯಕ್ಕೆ ಸಾವಿರಸಿಡಿಲುಗಳು ಒಮ್ಮೆಲೆ ಬಂದು ಅಪ್ಪಳಿಸಿದಂತೆ ಆಯಿತು. ಉಪಾಯವಿಲ್ಲದೆ ಅವಳು ಅರಮನೆಯನ್ನು ಬಿಟ್ಟು ಹೊರಬಿದ್ದಳು. ಇಷ್ಟುದಿನ ಅರಮನೆಯ ಅಂತಃಪುರದಲ್ಲಿ ಸೂರ್ಯನನ್ನು ಕಾಣದೆ ಇರುವ ಆ ಪಟ್ಟದರಸಿಯು ತನ್ನ ಹೆತ್ತಕರಳನ್ನು ಹೊತ್ತುಕೊಂಡು ಊರುಬಿಟ್ಟು ಹೊರನಡೆದಳು. ಹಳ್ಳಿ ಹಳ್ಳಿ-ತಿರುಗಿದಳು. ಅಡವಿ ಅಡವಿ ಅಲೆದಾಡಿದಳು. ಹಸಿವೆ ಬಾಯಾರಿಕೆಯಿಂದ ಬಳಲಿ ಬಾಡಿ ಬೆಂಡಾಗಿ ಗತಿಯಿಲ್ಲದೆ, ಭಿಕ್ಷೆಬೇಡಿ ಹೊಟ್ಟೆ ತುಂಬಿಕೊಂಡಳು. ಇಷ್ಟರಲ್ಲಿಯೇ ಅವಳಿಗೆ ಮತ್ತೊಂದು ಸಂಕಟ ಕಾದಿತ್ತು. ದುಷ್ಟರಾದ ಕೆಲವು ಕಳ್ಳರು ಅವಳ ಮೈ ಮೇಲಿನ ಬೆಲೆಬಾಳುವ ಮುತ್ತು ರತ್ನಾದಿ ಆಭರಣಗಳನ್ನು ಪಟ್ಟೆ ಪೀತಾಂಬರಗಳನ್ನು ಕಂಡು ದುರಾಸೆಯಿಂದ ಅವಳ ವಸ್ತುಗಳನ್ನೆಲ್ಲ ದೋಚಿಕೊಂಡು ಒಯ್ದರು. ಉಟ್ಟ ಬಟ್ಟೆಯೊಂದನ್ನು ಬಿಟ್ಟು ಅವಳದೂ ಎಂದು ಇದ್ದ ಪದಾರ್ಥಗಳನ್ನೆಲ್ಲ ಕಸಿದುಕೊಂಡು ಹೋದರು.

ಹೀಗೆ ಕಷ್ಟದಿಂದ ದಾರಿ ನಡೆಯುತ್ತ ಬೇರೆ ಒಂದು ಗ್ರಾಮಾಂತರಕ್ಕೆ ಬಂದಳು. ಅಲ್ಲಿ ಊರ ಹೊರಗೆ ಇದ್ದ ಒಂದು ಹಾಳು ಗುಡಿಯಲ್ಲಿ ತನ್ನ ಮಗನನ್ನು ಕೂಡಿಸಿದಳು. ಇದ್ದ ಒಂದು ವಸ್ತ್ರದಿಂದಲೇ ದೇಹವನ್ನು ಮುಚ್ಚಿಕೊಂಡು ಊರಲ್ಲಿ ಭಿಕ್ಷೆ ಬೇಡಿಕೊಂಡು ಬಂದು ದೊರೆತಿದ್ದ ಅನ್ನವನ್ನು ಮಗನಿಗೆ ಉಣ್ಣಿಸಿ ಉಳಿದಿದ್ದನ್ನು ತಾನೂ ಉಂಡು ಕಾಲಯಾಪನೆ ಮಾಡುತ್ತಿದ್ದಳು.

ಒಂದು ದಿನ ತಾಯಿ ಹೊರಗೆ ಹೋದಾಗ ಮಗು ಒಂಟಿಯಾಗಿ ಶಿವಾಲಯದಲ್ಲಿ ಇರುವದಿಲ್ಲವೆಂದು ಹಟಮಾಡಿತು. ಆಗ ಅದನ್ನು ಜೊತೆಗೆ ಕರೆದುಕೊಂಡು ಭಿಕ್ಷೆಗೆ ಹೊರಟಳು. ದಾರಿಯಲ್ಲಿ ಬರುತ್ತಿರುವಾಗ ಮಗುವಿನ ಮೈಯ ದುರ್ಗಂಧದಿಂದ

ಹೋದಳು. ರಾಜನಾದರೂ ಆ ಮಗುವಿನ ವಿಕಾರ ರೂಪವನ್ನು ಕಂಡು ದುಃಖ ಸಂತಪ್ತನಾದನು. ಆದರೂ ಹೆಂಡತಿಯನ್ನು ಸಮಾಧಾನಪಡಿಸಿದನು.

**ವಲ್ಲಭ :-** ಪ್ರಿಯೆ, ಇದೆಲ್ಲವೂ ನಮ್ಮ ಹಾಗೂ ಮಗುವಿನ ಜನ್ಮಾಂತರದ ದುಷ್ಕರ್ಮದ ಫಲ. ಮನುಷ್ಯನಿಗೆ ಶುಭಾಶುಭಕರ್ಮಗಳ ಮಿಶ್ರಫಲಗಳು ಬರುತ್ತಲೆ ಇರುತ್ತವೆ. ಈ ಬಾಲಕನ ದುಸ್ಥಿತಿಗೆ ನೀನು ಮರುಗಬೇಡ. ದುಃಖಭೋಗವು ತೀರಿದ ಬಳಿಕ ಅವನು ಸುಖಿಯಾಗುವನು. ಈ ಬಾಲಕನು ಜನ್ಮಾಂತರದಲ್ಲಿ ಯಾವುದೇ ಮಹತ್ತರವಾದ ದುಷ್ಕರ್ಮವನ್ನು ಮಾಡಿರಬೇಕು. ಇವನ ಈಗಿನ ದುಃಖವು ಪರಿಹಾರವಾಗುವಂತೆ ಮಣಿಮಂತ್ರ, ಔಷಧ ಪ್ರಯೋಗಗಳನ್ನು ಮಾಡಿ ಚಿಕಿತ್ಸೆಗಳನ್ನು ನೀಡಿ ಅವನನ್ನು ಆರೋಗ್ಯವಂತನನ್ನಾಗಿ ಮಾಡಲು ಪ್ರಯತ್ನಿಸೋಣ.

ಪತಿಯ ಸಮಾಧಾನೋಕ್ತಿಗಳಿಂದ ಮಹಾರಾಣಿ ಕಮಲೆಯು ಎಚ್ಚೆತ್ತು ಕರ್ತವ್ಯ ಪರಳಾದಳು; ದುಃಖವನ್ನು ಮರೆತಳು. ಮಗುವನ್ನೂ ತೊಳೆದು ಗಾಯಗಳಿಗೆ ತಕ್ಕ ಉಪಚಾರ ಮಾಡಿದಳು. ವಲ್ಲಭರಾಜನಾದರೂ ಮಗನಿಗೆ ಶ್ರೇಯಸ್ಸನ್ನು ಬಯಸಿ ತ್ಕಾಲೋಚಿತವಾದ ಜಾತಕರ್ಮದಿ ಸಂಸ್ಕಾರಗಳನ್ನು ಮಾಡಿದನು. ದಾನ ದಕ್ಷಿಣೆಗಳಿಂದ ವಿಪ್ರೋತ್ತಮರನ್ನು ಪೂಜಿಸಿದನು. ಮಹಾರಾಣಿಯಾದರೂ ಕೂಡ ಸುವಾಸಿನಿಯರಾದ ಮುತ್ತೈದೆಯರನ್ನು ಕರೆಸಿ ಮಂಗಳ ದ್ರವ್ಯ ವಸ್ತ್ರ ಅಲಂಕಾರಗಳನ್ನು ದಾನ ನೀಡಿ ತೃಪ್ತಿ ಪಡಿಸಿದಳು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ರಾಜದಂಪತಿಗಳ ಪುತ್ರಪ್ರಾಪ್ತಿ ವರ್ಣನೆ ಎಂಬ ಹತ್ತೊಂಬತ್ತನೇ ಅಧ್ಯಾಯ ಮುಗಿದುದು*

—○—

## ದಕ್ಷಸ್ತುತಿ

## ಅಧ್ಯಾಯ - ೨೦

**ಬ್ರಹ್ಮ :-** ಅನಂತರ ವಲ್ಲಭರಾಜನು ವೇದಶಾಸ್ತ್ರ ವಿದ್ವಾಂಸರಾದ ಬ್ರಾಹ್ಮಣರನ್ನು ಅರಮನೆಗೆ ಕರೆಸಿ ಅವರ ಸಲಹೆಯಂತೆ ತನ್ನ ಮಗನಿಗೆ ದಕ್ಷ ಎಂದು ಹೆಸರಿನ್ನಿಟ್ಟನು.

**"ಜನ್ಮಾಂತರ ಕೃತಂ ಪಾಪಂ ವ್ಯಾಧಿರೂಪೇಣ ಬಾಧತೆ" ।**
**ತಚ್ಛಾಂತಿರೌಷಧೈಃ ದಾನೈಃ ಜಪಹೋಮಸುರಾರ್ಚನೈಃ ॥**

ಹಿಂದಿನ ಜನ್ಮದಲ್ಲಿ ಮಾಡಿದ ಪಾಪವು ರೋಗಾದಿರೂಪದಿಂದ ಬಾಧಿಸುತ್ತದೆ. ಆ ರೋಗಾದಿಗಳು ಔಷಧ, ಶಾಂತಿಕರ್ಮ, ಧಾನ, ಧರ್ಮ, ಜಪ, ಹೋಮ ದೇವತಾರ್ಚನೆಗಳಿಂದ ಉಪಶಮನವನ್ನು ಹೊಂದುತ್ತವೆ ಎಂಬ ಮಾತಿನಲ್ಲಿ ರಾಜನಿಗೆ ವಿಶ್ವಾಸವಿದ್ದಿತು. ಅದನ್ನು ಅನುಸರಿಸಿ ರಾಜವೈದ್ಯರಿಂದ ಅನೇಕ ದಿವ್ಯ ವನಸ್ಪತಿಗಳನ್ನು ತರಿಸಿ ಔಷಧಿಗಳನ್ನು ಉಪಯೋಗಿಸಿ ಉಪಚಾರ ಮಾಡಿಸಿದನು. ಬ್ರಾಹ್ಮಣರಿಂದ ಶಾಂತಿಕರ್ಮಗಳನ್ನು ಮಾಡಿಸಿದನು. ಪುರೋಹಿತರಿಂದ ಹೋಮಹವನಾದಿಗಳನ್ನು ನೆರವೇರಿಸಿದನು. ಜಪ, ಮಂತ್ರ ಪ್ರಯೋಗ, ದೇವತಾರಾಧನೆ ಬ್ರಾಹ್ಮಣ ಸೇವೆ ಎಲ್ಲವನ್ನೂ ವ್ಯವಸ್ಥಿತವಾಗಿ ವಲ್ಲಭರಾಜನು ಶ್ರದ್ಧೆಯಿಂದ ಮಾಡಿದನು. ಸ್ವಯಂ ತಾನು ಕೂಡ ಪುತ್ರನ ಆರೋಗ್ಯ ಲಾಭಕ್ಕಾಗಿ ಕಠಿಣ ತರವಾದ ತಪಸ್ಸನ್ನು ಆಚರಿಸಿದನು.

ಏನಾದರೂ ರೋಗ ಉಪಶಮನ ಹೊಂದಲಿಲ್ಲ. ಮತ್ತಿಷ್ಟೂ ಉಲ್ಬಣವಾಯಿತು. ಮಗುವಿನ ಮೈ ವಿಕಾರಗೊಂಡು ವಿಲಕ್ಷಣವಾಗಿ ತೋರ ಹತ್ತಿತು. ಇದರಿಂದ ರಾಜನಿಗೆ ನಿರಾಶೆಯಾಯಿತು. ಮಗನ ಬಗ್ಗೆ ಮನದಲ್ಲಿ ಜಿಗುಪ್ಸೆ ಮೂಡಿತು. ಸಹನಶಕ್ತಿಯು ಮಿತಿಮೀರಿತು. ಆ ಜುಗುಪ್ಸೆಯೇ ಪುತ್ರನ ಬಗ್ಗೆ ಕ್ರೋಧವಾಗಿ ಪರಿಣಮಿಸಿತು. ಆದರಿಂದ ಮಹಾರಾಜನ ತಾಳ್ಮೆ ತಪ್ಪಿತು, ಯುಕ್ತಾಯುಕ್ತವಿಚಾರ ಲುಪ್ತವಾಯಿತು. ಅವನು ಕೋಪಾಟೋಪದಿಂದ ಹುಚ್ಚನಂತಾಗಿ ಮಡದಿಯಾದ ಕಮಲೆಯನ್ನು ಕರೆದು ಕ್ರೂರನಾಗಿ ಹೇಳಿದ.

**ವಲ್ಲಭ :-** ''ಕಮಲೆ, ಈ ಮಗನ ಸಲುವಾಗಿ ನನಗೆ ಸಾಕಾಗಿ ಹೋಗಿದೆ. ಈ ಪುತ್ರನ ಸಲುವಾಗಿ ಹಗಲಿರುಳೂ ಚಿಂತಸಿ ಮನದಲ್ಲಿ ಮರುಗಿ, ದೇಹದಿಂದ ಸೊರಗಿ ಬೆಂದು ಬಳಲಿದ ನಿನ್ನನ್ನಾಗಲಿ, ದಿನೇ ದಿನೇ ಕೊಳೆತು ಹುಳತು ಹೋಗುತ್ತಿರುವ ಈ ನಿನ್ನ ಪುತ್ರನನ್ನಾಗಲಿ ನನ್ನ ಕಡೆಯಿಂದ ನೋಡಲಿಕ್ಕಾಗುವುದಿಲ್ಲ. ಈ ನಿನ್ನ ಪುತ್ರನನ್ನು ಕಟ್ಟಿಕೊಂಡು ನನ್ನ ಅರಮನೆಯನ್ನು ಬಿಟ್ಟು ಮನಬಂದಲ್ಲಿಗೆ ಹೊರಟು ಹೋಗು. ಒಂದು ಕ್ಷಣವಾದರೂ ನೀನು ಇನ್ನು ನನ್ನ ಬಳಿಯಲ್ಲಿ ಇರಬೇಡ.''

ರಾಜನ ಕಠೋರವಾದ ಆಜ್ಞೆಯನ್ನು ಕೇಳಿ ಮಹಾರಾಣಿ ಕಮಲೆಗೆ ಬಹಳ ದುಃಖವಾಯಿತು. ಮಗನ ದುಃಖಕ್ಕಿಂತ ಪತಿಯು ತನ್ನನ್ನು ಪರಿತ್ಯಾಗ ಮಾಡಿದ್ದು ಅವಳಿಗೆ ಸಹಿಸಲಾರದ ದುಃಖಾತಿರೇಕವನ್ನು ಉಂಟುಮಾಡಿತು. ಅವಳ ಹೃದಯಕ್ಕೆ ಸಾವಿರಸಿಡಿಲುಗಳು ಒಮ್ಮೆಲೆ ಬಂದು ಅಪ್ಪಳಿಸಿದಂತೆ ಆಯಿತು. ಉಪಾಯವಿಲ್ಲದೆ ಅವಳು ಅರಮನೆಯನ್ನು ಬಿಟ್ಟು ಹೊರಬಿದ್ದಳು. ಇಷ್ಟುದಿನ ಅರಮನೆಯ ಅಂತಃಪುರದಲ್ಲಿ ಸೂರ್ಯನನ್ನು ಕಾಣದೆ ಇರುವ ಆ ಪಟ್ಟದರಸಿಯು ತನ್ನ ಹೆತ್ತಕರಳನ್ನು ಹೊತ್ತುಕೊಂಡು ಊರುಬಿಟ್ಟು ಹೊರನಡೆದಳು. ಹಳ್ಳಿ ಹಳ್ಳಿ-ತಿರುಗಿದಳು. ಅಡವಿ ಅಡವಿ ಅಲೆದಾಡಿದಳು. ಹಸಿವೆ ಬಾಯಾರಿಕೆಯಿಂದ ಬಳಲಿ ಬಾಡಿ ಬೆಂಡಾಗಿ ಗತಿಯಿಲ್ಲದೆ, ಭಿಕ್ಷೆಬೇಡಿ ಹೊಟ್ಟೆ ತುಂಬಿಕೊಂಡಳು. ಇಷ್ಟರಲ್ಲಿಯೇ ಅವಳಿಗೆ ಮತ್ತೊಂದು ಸಂಕಟ ಕಾದಿತ್ತು. ದುಷ್ಟರಾದ ಕೆಲವು ಕಳ್ಳರು ಅವಳ ಮೈ ಮೇಲಿನ ಬೆಲೆಬಾಳುವ ಮುತ್ತು ರತ್ನಾದಿ ಆಭರಣಗಳನ್ನು ಪಟ್ಟೆ ಪೀತಾಂಬರಗಳನ್ನು ಕಂಡು ದುರಾಸೆಯಿಂದ ಅವಳ ವಸ್ತುಗಳನ್ನೆಲ್ಲ ದೋಚಿಕೊಂಡು ಒಯ್ದರು. ಉಟ್ಟ ಬಟ್ಟೆಯೊಂದನ್ನು ಬಿಟ್ಟು ಅವಳದೂ ಎಂದು ಇದ್ದ ಪದಾರ್ಥಗಳನ್ನೆಲ್ಲ ಕಸಿದುಕೊಂಡು ಹೋದರು.

ಹೀಗೆ ಕಷ್ಟದಿಂದ ದಾರಿ ನಡೆಯುತ್ತ ಬೇರೆ ಒಂದು ಗ್ರಾಮಾಂತರಕ್ಕೆ ಬಂದಳು. ಅಲ್ಲಿ ಊರ ಹೊರಗೆ ಇದ್ದ ಒಂದು ಹಾಳು ಗುಡಿಯಲ್ಲಿ ತನ್ನ ಮಗನನ್ನು ಕೂಡಿಸಿದಳು. ಇದ್ದ ಒಂದು ವಸ್ತ್ರದಿಂದಲೇ ದೇಹವನ್ನು ಮುಚ್ಚಿಕೊಂಡು ಊರಲ್ಲಿ ಭಿಕ್ಷೆ ಬೇಡಿಕೊಂಡು ಬಂದು ದೊರೆತಿದ್ದ ಅನ್ನವನ್ನು ಮಗನಿಗೆ ಉಣ್ಣಿಸಿ ಉಳಿದಿದ್ದನ್ನು ತಾನೂ ಉಂಡು ಕಾಲಯಾಪನೆ ಮಾಡುತ್ತಿದ್ದಳು.

ಒಂದು ದಿನ ತಾಯಿ ಹೊರಗೆ ಹೋದಾಗ ಮಗು ಒಂಟಿಯಾಗಿ ಶಿವಾಲಯದಲ್ಲಿ ಇರುವದಿಲ್ಲವೆಂದು ಹಟಮಾಡಿತು. ಆಗ ಅದನ್ನು ಜೊತೆಗೆ ಕರೆದುಕೊಂಡು ಭಿಕ್ಷೆಗೆ ಹೊರಟಳು. ದಾರಿಯಲ್ಲಿ ಬರುತ್ತಿರುವಾಗ ಮಗುವಿನ ಮೈಯ ದುರ್ಗಂಧದಿಂದ

ಜನರೆಲ್ಲರೂ ಮೂಗು ಮುಚ್ಚಿಕೊಂಡು ದೂರದೂರ ಸರಿಯುತ್ತಿದ್ದರು. ಆಗ ಎದುರಿನಿಂದ ಒಬ್ಬ ಬ್ರಾಹ್ಮಣೋತ್ತಮನು, ವೇಗವಾಗಿ ಇವಳಿದ್ದ ಮಾರ್ಗದಿಂದ ದೂರ ಹೊರಟಿದ್ದನು. ಆಗಮನದ ರಭಸದಿಂದ ಅವನ ದೇಹದ ಮೇಲಿನಿಂದ ಸೂಸಿ ಬರುವ ಗಾಳಿಯು ಕಮಲೆಯ ಬೆನ್ನ ಮೇಲೆ ಕುಳಿತಿದ್ದ ಮಗುವಿಗೆ ತಗುಲಿತು. ಆ ಪುಣ್ಯ ಪುರುಷನ ಪುಣ್ಯ ದೇಹದಿಂದ ಸೂಸಿ ಬಂದ ಸುಳಿಗಾಳಿಯ ಸ್ಪರ್ಶಿಸಿದ ಮಾತ್ರದಿಂದ ತಾಯಿಯ ಬೆನ್ನು ಏರಿ ಕುಳಿತಿರುವ ದಕ್ಷನಿಗೆ ಕಣ್ಣುಗಳು ಕಾಣುವಂತಾದವು; ಕಿವಿಗಳು ಕೇಳಿಸತೊಡಗಿದವು. ಮೈಮೇಲಿನ ಗಾಯಗಳೆಲ್ಲವೂ ಮಾಯವಾಗಿ ಹೋದವು. ಅವನಿಗೆ ಕುರೂಪ ಹೋಯಿತು. ಸುರೂಪ ಬಂದಿತು. ದಿವ್ಯ ರೂಪದಿಂದ ಅವನು ಸುಂದರನಾಗಿ ಕಂಗೊಳಿಸಿದನು.

ಅದನ್ನು ಕಂಡು ಕಮಲೆಗೆ ಆಶ್ಚರ್ಯದ ಆಘಾತವಾದಂತಾಯಿತು. ಹರ್ಷ ಉಕ್ಕಿ ಬಂದಿತು. ಆ ಮಗುವನ್ನು ಅವಳು ತನ್ನ ಕಣ್ಣನ್ನು ಮತ್ತೆ ಮತ್ತೆ ಉಜ್ಜಿ ನೋಡಿದಳು. ಅವನ ಮೈ ಕೈ ಕಣ್ಣು ಕಾಲು ಕಿವಿಗಳನ್ನು ಮುಟ್ಟಿನೋಡಿದಳು. ಮೂಸಿ ನೋಡಿದಳು. ಮೈ ದಡವಿದಳು. ನಿಜವಾಗಿಯೂ ಅವಳ ಕುರೂಪಿ ಮಗ ಸುರೂಪಿ ಆಗಿದ್ದ. ಕುರುಡು ಮಗ ಸುದರ್ಶನನಾಗಿದ್ದ. ಕಿವುಡು ಮಗನಿಗೆ ಕಿವಿ ಚೆನ್ನಾಗಿ ಕೇಳುತ್ತಿದ್ದವು. ತಾನು ಈಗ ನೋಡುವದೆಲ್ಲ ಕನಸೋ, ನನಸೋ ಮನಸೋ ಎಂದು ಅವಳಿಗೆ ಅಭ್ರಮ ಸಂಭ್ರಮವಾಯಿತು. ಆ ಸಂಭ್ರಮದಲ್ಲಿ ಅವಳು ಆನಂದೋದ್ರೇಕವಾಗಿ ಮಧುರವಾಕ್ಯಗಳನ್ನು ಗಟ್ಟಿಯಾಗಿ ಉಚ್ಚರಿಸುತ್ತಿದ್ದ ಮಗನನ್ನು, ಮನ್ಮಥನಂತೆ ಸುಂದರನಾದ ತನ್ನ ಕರುಳಿನ ಕೂಸನ್ನು ಬಿಗದಪ್ಪಿ ಎತ್ತಿ ಮುದ್ದಾಡಿ ಕುಣಿದಾಡಿದಳು.

ಆದರೆ ತನ್ನ ದೇಹದ ಗಾಳಿಯ ಸ್ಪರ್ಶದಿಂದಲೇ, ತನ್ನ ರೋಗಿಷ್ಠ ಮಗನನ್ನು ದಿವ್ಯ ದೇಹಿಯನ್ನಾಗಿ ಮಾರ್ಪಡಿಸಿದ ಆ ಮಹಾತ್ಮ ಯಾರು ? ಅವನ ಸಂದರ್ಶನವು ನನಗೆ ಹೇಗಾದೀತು ಎಂದು ಚಿಂತಿಸತೊಡಗಿದಳು. ಕೆಲವು ಸಮಯ ಹೀಗೆ ಆನಂದೋದ್ರೇಕದಲ್ಲಿ ಕಳೆದ ಬಳಿಕ ಅವಳಿಗೆ ಹಸಿವೆಯಾಗತೊಡಗಿತು. ತನ್ನ ಮಗುವೂ ಹಸಿದಿರಬೇಕೆಂದು ಭಾವನೆ ಅವಳಿಗೆ ಬಂದಿತು. ಯಥಾಪ್ರಕಾರ ಅವಳು ಆ ಮಗುವನ್ನು ಕರೆದುಕೊಂಡು ಬೀದಿಯಲ್ಲಿ ಭಿಕ್ಷೆಗೆ ಹೊರಟಳು. ಆ ಬ್ರಾಹ್ಮಣನ ಮೈಮೇಲಿಂದ ಹಾಯ್ದು ಬಂದ ತಂಗಾಳಿಯ ಪ್ರಭಾವ ಅತ್ಯದ್ಭುತ. ಇಷ್ಟು ದಿನ ಇವರನ್ನು ಕಂಡಕೂಡಲೆ ತಿರಸ್ಕಾರದಿಂದ ಬಯ್ಯುತ್ತಿದ್ದ ಜನರು ಈಗ ಅವರಿಬ್ಬರಿಗೂ ಪುರಸ್ಕಾರ ಮಾಡತೊಡಗಿದರು. ಸುಗ್ರಾಸ ಭೋಜನವನ್ನು ಉಣಬಡಿಸಿದರು. ಉಡಲು ಬಟ್ಟೆ, ತೊಡಲು ಆಭರಣ ನೀಡಿದರು. ತಾಯಿ ಮಗ ಇಬ್ಬರೂ ಸುಗ್ರಾಸ ಭೋಜನ, ಸಮೀಚಿನ ವಸ್ತ್ರಾಭರಣ, ಸರ್ವರಿಂದಲೂ ಅತ್ಯಾದರದ ಊಟ ಉಪಚಾರಗಳನ್ನು ಹೊಂದಿ, ಆನಂದದಿಂದ ಕಾಲಕಳೆದರು.

ಒಂದು ದಿನ ದಕ್ಷನು ನಾಗರಿಕರ ಮಕ್ಕಳೊಂದಿಗೆ ಬೆರೆತು ಸುಖವಾಗಿ ಆಟವಾಡುತ್ತಿದ್ದಾಗ ಒಬ್ಬ ನಾಗರಿಕನು ''ಮಗು ನಿನ್ನ ತಾಯಿ ಯಾರು ? ತಂದೆ ಯಾರು ? ದೇಶ ಯಾವುದು ? ನೀವು ಪ್ರತಿದಿನ ಒಂದೊಂದು ಮನೆಯಲ್ಲಿ ಆತಿಥ್ಯ ಸ್ವೀಕರಿಸುವುದನ್ನು ನೋಡಿದರೆ ನಿಮಗೆ ಯಾರೂ ಬಂಧುಗಳಿಲ್ಲವೆಂದು ತೋರುವುದು ನಿಜವಾದ ವಸ್ತುಸ್ಥಿತಿಯನ್ನು ಹೇಳು'' ಎಂದು ಕೇಳಿದನು.

ಆಗ ದಕ್ಷನು ತನ್ನ ತಾಯಿಯನ್ನು ಕೇಳಿಕೊಂಡು ಬಂದು ತನ್ನ ಸಾದ್ಯಂತ ವೃತಾಂತವನ್ನೆಲ್ಲ ಹೇಳಿದನು.

**ದಕ್ಷ :-** ''ಕರ್ನಾಟಕ ಪ್ರದೇಶದಲ್ಲಿ ಭಾನು ಎಂಬ ಪಟ್ಟಣಕ್ಕೆ ವಲ್ಲಭನೇ ಮಹಾರಾಜ. ಅವನೇ ನನ್ನ ತಂದೆ, ನನ್ನ ತಾಯಿ ಕಮಲಾದೇವಿ. ಆ ಸಾರ್ವಭೌಮನ ಪಟ್ಟಮಹಿಷಿ. ಅವರಿಗೆ ನಾನು ಒಬ್ಬನೇ ಮಗ ನಾನು ಹುಟ್ಟು ಕುರುಡ, ಜನ್ಮತಃ ಕಿವುಡ, ನನ್ನ ದೇಹ ಗಾಯಗಳ ಗೂಡು, ನನ್ನ ಅಂಗಾಂಗಳು ಕೊಳೆತು ದುರ್ಗಂಧ ನಾರುತ್ತಿದ್ದವು. ಎಷ್ಟು ರೀತಿಯಿಂದ ಚಿಕಿತ್ಸೆ, ಉಪಾಯ, ಶಾಂತಿ, ಹೋಮ ಹವನ ಮಾಡಿದರೂ ನನ್ನ ಆರೋಗ್ಯ ಸುಧಾರಿಸಲಿಲ್ಲ. ಅದರಿಂದ ಬೇಸತ್ತ ನನ್ನ ತಂದೆ ನನ್ನ ತಾಯಿಯನ್ನೂ ನನ್ನನ್ನು ಹೊರಗೆ ಹಾಕಿದರು. ಅನಾಥರಾದ ನಾವು ದೇಶ ದೇಶ ಅಲೆದಾಡುತ್ತ ಈ ಊರಿಗೆ ಬಂದೆವು. ನನ್ನನ್ನು ಬೆನ್ನಿಗೆ ಕಟ್ಟಿಕೊಂಡು ತಾಯಿಯು ಭಿಕ್ಷೆ ಬೇಡುವಾಗ ಓರ್ವ ಮಹಾತ್ಮನ ಶರೀರದಿಂದ ಸೂಸಿ ಬಂದ ಸುಗಂಧವಾಯು ನನಗೆ ಆರೋಗ್ಯಭಾಗ್ಯವನ್ನು ಕರುಣಿಸಿತು. ನನ್ನ ಕುರುಡು, ಕಿವುಡು, ಬೆಪ್ಪು, ಕೆಪ್ಪು, ಕಾಡುರೂಪ ಎಲ್ಲವೂ ಕ್ಷಣಾರ್ಧದಲ್ಲಿ ಕಳೆದು ಹೋದವು. ಕಳೆಕಾಂತಿ ಕಮನೀಯತೆಗಳು ನನ್ನ ಮೈಯಲ್ಲಿ ಅಡಿಯಿಂದ ಮುಡಿಯವರೆಗೆ ತುಂಬಿ ದಿವ್ಯಕಾಂತಿಯು ಹೊರಸೂಸತೊಡಗಿತು.'' ಎಂದು ತನ್ನ ಚರಿತ್ರೆಯನ್ನೆಲ್ಲ ದಕ್ಷನು ಹೇಳಿ ಮುಗಿಸಿದನು.

ಅನಂತರ ಈ ವಾರ್ತೆ ಊರಲ್ಲಿ ಎಲ್ಲ ಕಡೆಗೂ ಪ್ರಚಾರವಾಯಿತು. ಆ ನಗರದಲ್ಲಿ ಇದ್ದ ಒಬ್ಬ ದ್ವಿಜೋತ್ತಮನು ಇವರಿದ್ದಲ್ಲಿಗೆ ಬಂದು ಗಣೇಶನ ಆರಾಧನೆಯ ಕ್ರಮವನ್ನು ಅವರಿಗೆ ಉಪದೇಶಿಸಿದನು.

ಆ ಬ್ರಾಹ್ಮಣನ ಉಪದೇಶದಂತೆ ತಾಯಿ, ಮಗ ಇಬ್ಬರೂ ಗಣೇಶನನ್ನು ಕುರಿತು ತಪಸ್ಸನ್ನು ಮಾಡತೊಡಗಿದರು. ತಾಯಿಯ ತದೇಕ ಧ್ಯಾನಪರವಶಳಾಗಿ ಕಾಲಿನ ಹೆಬ್ಬೆಟ್ಟಿನ ಮೇಲೆ ತನ್ನ ದೇಹದ ಭಾರವನ್ನೆಲ್ಲ ಹಾಕಿ ಒಂಟಿಗಾಲಿನಲ್ಲಿ ನಿಂತು, ಶ್ರೀ ಗಣೇಶನನ್ನು ಧ್ಯಾನಿಸತೊಡಗಿದಳು.

**''ಓಂ ಗಂ ಗಣೇಶಾಯ ನಮಃ''** ಎಂಬ ಏಕಾಕ್ಷರ ಮಂತ್ರವನ್ನೂ **ಓಂ ವಕ್ರತುಂಡಾಯ ನಮಃ** ಗಣೇಶ ಅಷ್ಟಾಕ್ಷರ ಮಂತ್ರವನ್ನೂ ಭಕ್ತಿಯಿಂದ ಜಪಿಸತೊಡಗಿದರು. ಅವರಿಬ್ಬರೂ ಗಣೇಶನ ಧ್ಯಾನದಲ್ಲಿ ಆಹಾರವನ್ನು ಮರೆತರು, ನಿದ್ದೆಯನ್ನು ಬಿಟ್ಟರು, ಗಾಳಿಯನ್ನೇ ಆಹಾರವನ್ನಾಗಿ ಮಾಡಿಕೊಂಡು ಏಕಾಗ್ರಚಿತ್ತದಿಂದ ಆ ಏಕಾಂತಭಕ್ತರು ದೇಹಶೋಷಣೆ ಮಾಡಿ ಅತ್ಯುಗ್ರವಾದ ತಪಸ್ಸನ್ನು ಆಚರಿಸಿದರು.

ಅವರ ಈ ಅದ್ಭುತ ತಪಸ್ಸಿಗೆ ಕರುಣಾಳುವಾದ ಗಣಪತಿಯು ಪ್ರಸನ್ನನಾದನು, ಪ್ರೀತನಾದನು ಹಾಗೂ ಪ್ರತ್ಯಕ್ಷವಾಗಿ ತನ್ನ ದರ್ಶನವನ್ನು ಅವರಿಗೆ ದಯಪಾಲಿಸಿದನು. ತಲೆಯ ಮೇಲೆ ರತ್ನಖಚಿತ ಕಿರೀಟ, ಮೈಮೇಲೆ ರೇಶಿಮೆ ಬಟ್ಟೆ, ಅಂಗಾಂಗಗಳಲ್ಲಿ ಬಂಗಾರದ ಹಾಗೂ ಮುತ್ತಿನ ಆಭರಣ, ಚಿನ್ನದ ಉಡಿದಾರ, ಬೆರಳುಗಳಲ್ಲಿ ಉಂಗುರು ಹೊಕ್ಕಳದಲ್ಲಿ ಫಟಸರ್ಪ, ಮುಖದಲ್ಲಿ ಗಜವದನನ ಸೌಂದರ್ಯ, ಇಂತಹ ದಿವ್ಯ ರೂಪದ ಗಜಾನನನು ಒಂದು ಕಾಲು ಮೇಲೆ ಮತ್ತೊಂದು ಕಾಲು ಇಟ್ಟಿಕೊಂಡು ಕುಳಿತಿದ್ದನ್ನು ಅವರು ಕಂಡರು.

ಆಗ ಆ ಕಮಲಾ ಮತ್ತು ದಕ್ಷಕುಮಾರರು ದೀರ್ಘದಂಡ ನಮಸ್ಕಾರ ಮಾಡಿದರು. ಎದ್ದು ಕೈಮುಗಿದು ನಿಂತುಕೊಂಡರು. ಆ ದಿವ್ಯ ರೂಪವನ್ನು ತಮ್ಮ ಅಪಲಕನೇತ್ರದಿಂದ ನೋಡಿದರು. ಮರುಕ್ಷಣದಲ್ಲಿ ಆ ರೂಪವು ಬದಲಾಯಿತು. ಅವರ ಕಣ್ಣೆದುರು ಆಗ ಗಣೇಶನ ಸ್ಥಾನದಲ್ಲಿಯ ಒಬ್ಬ ತೇಜಸ್ವಿಯಾದ ಬ್ರಾಹ್ಮಣ ನಿಂತುಕೊಂಡಿದ್ದ. ವಿಪ್ರರೂಪಿಯಾದ ವಿನಾಯಕ ಆ ತಾಯಿ ಮಗನನ್ನೂ ಕುರಿತು ಹೇಳಿದ ''ನಿಮ್ಮ ಈ ಏಕಾಂತ ಭಕ್ತಿಗೆ ನಾನು ಸಂತುಷ್ಟನಾಗಿದ್ದೇನೆ. ನಿಮಗೆ ವರಗಳನ್ನು ಕೊಡುವದಕ್ಕೆ ಬಂದಿದ್ದೇನೆ. ಇಷ್ಟವಾದ ವರಗಳನ್ನು ಕೇಳಿಕೊಳ್ಳಿ.''

ಭಗವಂತನ ಪ್ರಸನ್ನ ಮುಖದಿಂದ ಬಂದ ಆ ಮಾತುಗಳನ್ನು ಕೇಳಿ ಕಮಲಾ ದಕ್ಷರಿಗೆ ಪರಮಾನಂದವಾಯಿತು. ಆಗ ಅವರು ಆ ಗಣಪತಿಯೇ ಸಾಕ್ಷಾತ್ ಪರಬ್ರಹ್ಮ ಎಂದು ಭಾವಿಸಿ ಅವನನ್ನು ಭಕ್ತಿಯಿಂದ ಕೊಂಡಾಡಿದರು.

**ದಕ್ಷ :-** ಪ್ರಭು, ನನ್ನ ಜನ್ಮಾಂತರದ ಪುಣ್ಯವೆಲ್ಲವೂ ಇಂದು ಫಲಿಸಿತು. ನಾನು ಇಂದು ನಿನ್ನ ವಿನಾಯಕರೂಪವನ್ನು ಮತ್ತು ಬ್ರಾಹ್ಮಣರೂಪವನ್ನು ಕಣ್ಣಿನಿಂದ ಕಂಡೆನು. ನನ್ನ ಜನ್ಮಸಾರ್ಥಕವಾಯಿತು. ವೇದವೇದ್ಯನಾದ ಪರಬ್ರಹ್ಮ ನೀನೆ. ಪ್ರಪಂಚದ ಹುಟ್ಟು ಸಾವು, ಸ್ಥಿತಿ-ಗತಿಗಳಿಗೆಲ್ಲ ನೀನೇ ಮುಖ್ಯ ಕಾರಣ.

ದಕ್ಷನ ಮಾತನ್ನು ಕೇಳಿ ಗಣಪತಿಯು ಮಂದಹಾಸವನ್ನು ಮಾಡುತ್ತ ಮೇಘಗಂಭೀರ ಧ್ವನಿಯಿಂದ ಹೇಳಿದನು.

**ಗಣಪತಿ :-** ಭಾಗ್ಯಶಾಲಿಯಾದ ದಕ್ಷನೆ, ಭಕ್ತಿ-ಭಾವ ಭರಿತವಾದ ಈ ನಿನ್ನ ಸ್ತುತಿಗೆ ನಾನು ಮೆಚ್ಚಿರುವೆನು. ನಾನು ಈಗ ನಿನಗೆ ವರಗಳನ್ನು ಕೊಡುವದಿಲ್ಲ. ನನ್ನ ಭಕ್ತನೇ ನಿನಗೆ ಅಭೀಪ್ಸಿತವಾದ ವರಗಳನ್ನು ಕೊಡುವನು. ಮುದ್ಗಲ ಎಂಬ ನನ್ನ ಭಕ್ತನ ಮೈಮೇಲಿನ ಗಾಳಿಯಿಂದಲೇ ನೀನು, ಸುಂದರರೂಪವನ್ನು ಪಡೆದೆ. ಅಂಥ ನೀನು, ಚಕ್ಷುಷ್ಮಂತನಾಗಿ ಭಾಗ್ಯವಂತನಾಗಿ ದಿವ್ಯರೂಪಿಯಾಗಿ ಮಾರ್ಪಟ್ಟೆ. ನೀನು ಅವನನ್ನು ಸ್ಮರಿಸಿದರೆ ಸಾಕು. ಅವನು ನಿನಗೆ ಪ್ರತ್ಯಕ್ಷನಾಗುವನು. ನೀನು ಬೇಡಿದ ವರಗಳನ್ನು ಅವನೇ ನಿನಗೆ ನೀಡುವನು.

ಹೀಗೆ ಹೇಳಿ, ಪರಮಾತ್ಮನಾದ ಗಣನಾಥನು ಅಲ್ಲಿಯೇ ಅದೃಶ್ಯನಾದನು. ಅದನ್ನು ನೋಡಿ ದಕ್ಷನಿಗೂ ಅವನ ತಾಯಿಗೂ ಬಹಳ ದುಃಖವಾಯಿತು. ದೇವನಾದ ವಿನಾಯಕನು ಇನ್ನು ಎಲ್ಲಿ ಎಂದು ಪದೇ ಪದೇ ಹಲುಬಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ದಕ್ಷಸ್ತುತಿ ಎಂಬ ಇಪ್ಪತ್ತನೇ ಅಧ್ಯಾಯ ಮುಗಿದುದು*

—○—

ವಲ್ಲಭರಾಜಕುಮಾರನಾದ ದಕ್ಷ ಒಮ್ಮೆಲೆ ದರ್ಶನಕೊಟ್ಟು ಒಮ್ಮೆಲೆ ಅಂತರ್ಹಿತನಾದ ಗಣೇಶನನ್ನು ಹುಡುಕಾಡಿಗನು. ಎಲ್ಲಿಯೂ ಅವನನ್ನು ಕಾಣದೆ ಮನಸ್ಸಿನಲ್ಲಿಯೇ ಮಿಡುಕಾಡಿದನು. ದಾರಿಯಲ್ಲಿ ಕಂಡಕಂಡವರನ್ನೆಲ್ಲ ''ವಿನಾಯಕ ದೇವರನ್ನು ಕಂಡಿದ್ದೀರಾ ? ಮುದ್ಗಲ ಬ್ರಾಹ್ಮಣರನ್ನು ನೋಡಿದ್ದೀರಾ'' ಎಂದು ಕೇಳತೊಡಗಿದನು. ಆಗ ಒಂದು ದಿನ ಮಾರ್ಗದಲ್ಲಿ ತ್ವರಿತಗತಿಯಿಂದ ಹೋಗುತ್ತಿದ್ದ ಒಬ್ಬ ಬ್ರಾಹ್ಮಣನನ್ನು ತಡೆದು ''ಮುದ್ಗಲ ಬ್ರಾಹ್ಮಣರನ್ನು ನೀವು ಕಂಡಿದ್ದೀರಾ'' ಎಂದು ಕೇಳಿದನು. ಆಗ ದ್ವಿಜೋತ್ತಮನು ದಕ್ಷನನ್ನು ಕರೆದುಕೊಂಡು ಮುದ್ಗಲ ಮಹರ್ಷಿಯ ಆಶ್ರಮಕ್ಕೆ ಬಂದು ''ಇದೇ ನೀನು ಕೇಳುವ ಮುದ್ಗಲ ಮುನಿಯ ಆಶ್ರಮ'' ಎಂದು ತೋರಿಸಿದನು. ದಕ್ಷನು ಆನಂದದಿಂದ ಆಶ್ರಮವನ್ನು ಪ್ರವೇಶಿಸಿದ. ಆಶ್ರಮದಲ್ಲಿ ಒಂದು ಉನ್ನತವಾದ ಆಸನದ ಮೇಲೆ ಮುದ್ಗಲ ಮಹರ್ಷಿ ಮಂಡಿಸಿದ್ದ. ಆ ಮುನಿಯು ವಿನಾಯಕನ ದಿವ್ಯವಾದ ಒಂದು ಮೂರ್ತಿಯನ್ನು ಷೋಡಶೋಪಚಾರಗಳಿಂದ ಪೂಜಿಸುತ್ತಿದ್ದ. ನಾಲ್ಕು ಭುಜಗಳು, ಮೂರು ಕಣ್ಣು, ಅನೇಕ ಬಗ್ಗೆಯ ವಸ್ತ್ರಾಲಂಕಾರಗಳಿಂದ ಆ ವಿನಾಯಕ ಮೂರ್ತಿಯು ದಿವ್ಯ, ಭವ್ಯವಾಗಿ ಕಂಗೊಳಿಸುತ್ತಿತ್ತು. ಅದನ್ನು ನೋಡಿ ದಕ್ಷನು ಮೂಕವಿಸ್ಮಿತನಾಗಿ ಆನಂದಭರಿತನಾಗಿ ರೋಮಪುಲಕಿತನಾಗಿ, ಬಾಷ್ಪಗದ್ಗದಿತನಾಗಿ ಸಾಷ್ಟಾಂಗ ನಮಸ್ಕಾರ ಮಾಡಿದ.

ಅವನನ್ನು ಕಂಡು ಕನಿಕರಗೊಂಡು ಮುದ್ಗಲ ಮುನಿಯು ''ನೀನು ಯಾರು ? ಎಲ್ಲಿಂದ ಬಂದೆ ? ಏನೂ ಚಿಂತಿಸಬೇಡ. ನಿನ್ನ ದುಃಖವನ್ನು ನಾನು ಪರಿಹರಿಸುತ್ತೇನೆ'' ಎಂದು ಹೇಳಿದನು. ಅವನ ಅಂತಃಕರಣ ಪೂರಿತವಾದ ಮಾತುಗಳನ್ನು ಕೇಳಿ ದಕ್ಷನು ಸಂತೋಷಗೊಂಡು ತನ್ನ ವೃತ್ತಾಂತವನ್ನೆಲ್ಲ ವಿವರಿಸಿದನು ಮತ್ತು ತಮ್ಮ ತಪಸ್ಸಿಗೆ ಮೆಚ್ಚಿ ಗಣಪತಿಯು ಪ್ರತ್ಯಕ್ಷ ದರ್ಶನವನ್ನಿತ್ತು ''ಮುದ್ಗಲ ಮುನಿಯು ನಿನ್ನ ಇಷ್ಟವನ್ನೆಲ್ಲ ನೆರವೇರಿಸುವನು'' ಎಂದು ಹೇಳಿದ್ದನ್ನೆಲ್ಲ ತಿಳಿಸಿದನು. ''ಆ ಗಣಾಧೀಶನ ಆಜ್ಞೆ ಮೇರೆಗೆ ನಾನು ತಮ್ಮ ಬಳಿಗೆ ಬಂದಿದ್ದೇನೆ. ಈಗ ಮಹಾತ್ಮರಾದ ತಾವು ಸಾಕ್ಷಾತ್ ವಿನಾಯಕನಂತೆಯೆ ನಮ್ಮ ಕಣ್ಣಿಗೆ ತೋರುತ್ತಿರಿವಿರಿ. ತಾವು ದಯವಿಟ್ಟು ನನಗೆ ಎರಡು ವರಗಳನ್ನು ಕೃಪೆಯಿಂದ ಅನುಗ್ರಹಿಸಬೇಕು.''

ದಕ್ಷನು ಹೀಗೆ ಕೇಳಿದ ಕೂಡಲೆ ''ನೀನು ಬೇಡಿದ್ದನ್ನು ಕೊಟ್ಟೆನು'' ಎಂಬ ಅಭಯವಚನವು ಗಗನ ಮಂಡಲದಿಂದಲೇ ಹೊರಟಿತು. ಆಗ ಸುಪ್ರಸನ್ನನಾದ ಮುದ್ಗಲ ಮಹಾಮುನಿಯು ದಕ್ಷನನ್ನು ಕುರಿತು ನುಡಿದನು.

**ಮುದ್ಗಲಮುನಿ :-** ರಾಜಕುಮಾರ, ನಾನು ಸಾವಿರ ವರ್ಷಗಳಿಂದ ಅಖಂಡವಾಗಿ ಕಠಿಣ ತಪಸ್ಸನ್ನು ಆಚರಿಸುತ್ತಿದ್ದೇನೆ. ಆದರೆ, ಆ ಗಣಾಧೀಶನು ನನಗೆ ಒಮ್ಮೆಯಾದರೂ ದರ್ಶನವನ್ನು ಅನುಗ್ರಹಿಸಿರುವುದಿಲ್ಲ. ಇಂಥ ಪರಾತ್ಪರ ಪರಬ್ರಹ್ಮ ಸ್ವರೂಪಿಯಾದ

ಗಣನಾಥನನ್ನು ನೀನು ಪ್ರತ್ಯಕ್ಷವಾಗಿ ನೋಡಿದಿಯಲ್ಲವೇ ! ಧನ್ಯ ಧನ್ಯ. ನೀನೇ ನಿಜವಾದ ಭಕ್ತಾಗ್ರೇಸರ. ನಿನ್ನ ಪಾದಾರವಿಂದಗಳಿಗೆ ಇದೋ ನನ್ನ ಸಾಷ್ಟಾಂಗ ನಮಸ್ಕಾರ.

ಹೀಗೆ ತನ್ನನ್ನು ನಮಸ್ಕರಿಸಲು ಬಂದ ಆ ಮುದ್ಗಲ ಮುನಿಯನ್ನು ತಡೆದು ತಾನೇ ಅವರಿಗೆ ಪ್ರಣಮಿಸಿದನು. ಹೀಗೆ ಇಬ್ಬರೂ ಪರಸ್ಪರ ನಮಸ್ಕರಿಸಿದರು. ಒಬ್ಬರನ್ನೊಬ್ಬರು ಆಲಂಗಿಸಿಕೊಂಡರು. ಅನಂತರ ಮುದ್ಗಲಮುನಿಯು ಮಹಾಗಣಪತಿಯ ಏಕಾಕ್ಷರ ಮೂಲ ಮಂತ್ರವನ್ನು ಸಾಂಗೋಪಸಾಂಗವಾಗಿ ರಾಜಪುತ್ರನೂ, ಶಿಷ್ಯನೂ, ಆದ ಆ ದಕ್ಷನಿಗೆ ಉಪದೇಶಿಸಿದನು. ಅನಂತರ ಆತನು ಶಿಷ್ಯನನ್ನು ಕುರಿತು ''ಈ ಮಂತ್ರವನ್ನು ಒಮ್ಮೆ ಮಾತ್ರ ಜಪಿಸಿದರೆ ಸಾಲದು. ಪ್ರತಿದಿನವೂ ಜಪಿಸಬೇಕು. ಇದರಿಂದ ಗಜಾನನನು ಸುಪ್ರಸನ್ನನಾಗುವನು. ನಿನ್ನ ಇಷ್ಟಗಳನ್ನು ಪೂರೈಸುವನು. ಅಜಾಗರೂಕತೆಯಿಂದಾಗಲಿ, ಮತ್ತಾವ ಕಾರಣದಿಂದಾಗಲಿ ಈ ಮಹಾಮಂತ್ರವನ್ನು ನೀನು ದುರ್ಲಕ್ಷಿಸಿದರೆ ನೀನು ಸರ್ವಾಂಶದಿಂದಲೂ ನಾಶಹೊಂದುವಿ. ಆದರೆ ನಿರಂತರ ಆ ದೇವನ ಧ್ಯಾನವನ್ನು ಮಾಡುತ್ತಲಿದ್ದರೆ ಇಂದ್ರಾದಿ ಅಷ್ಟದಿಕ್ಪಾಲಕರು ನಿನಗೆ ಅಧೀನರಾಗಿರುವರು. ಬದುಕಿ ಇರುವವರೆಗೆ ಅಪೇಕ್ಷಿಸಿದ ಅಭಿಲಾಷೆಗಳನ್ನೆಲ್ಲ ಹೊಂದಿ ಯಥೇಷ್ಟವಾಗಿ ಅನುಭವಿಸಿ ಅಂತ್ಯದಲ್ಲಿ ಆ ಗಣೇಶ ಭಗವಂತನ ಸಾಯುಜ್ಯ ಮೋಕ್ಷವನ್ನು ಹೊಂದುವೆ.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಮಂತ್ರೋಪದೇಶ ವರ್ಣನೆ ಎಂಬ ಇಪ್ಪತ್ತೊಂದನೆ ಅಧ್ಯಾಯ ಮುಗಿದುದು*



## ಬಲ್ಲಾಳ ವರಪ್ರದಾನ

**ಅಧ್ಯಾಯ - ೨೨**

**ಭೀಮರಾಜ** :- ಮುದ್ಗಲ ಮುನಿಯು ಸಾವಿರಾರು ವರ್ಷ ಕಠಿಣ ತಪಸ್ಸನ್ನು ಆಚರಿಸಿದರೂ ಅವನಿಗೆ ಪರಮಾತ್ಮನು ಏಕೆ ಪ್ರತ್ಯಕ್ಷನಾಗಲಿಲ್ಲ ? ವಲ್ಲಭರಾಜನ ಮಗನಾದ ದಕ್ಷನು ಹಿಂದೆ ಇಂದಿನ ಜನ್ಮದಲ್ಲಿ ಯಾವ ಪುಣ್ಯವನ್ನು ಮಾಡಿದ್ದ. ಇದೆಲ್ಲವನ್ನು ನನಗೆ ಹೇಳಿರಿ.

**ವಿಶ್ವಾಮಿತ್ರ** :- ರಾಜನ್, ಸಿಂಧುದೇಶದಲ್ಲಿ ಪಲ್ಲಿ ಎಂಬ ಒಂದು ಪ್ರಖ್ಯಾತವಾದ ಪಟ್ಟಣವಿದ್ದಿತು. ಅಲ್ಲಿ ಕಲ್ಯಾಣ ಎಂಬ ಹೆಸರಿನ ಒಬ್ಬ ಬುದ್ಧಿಶಾಲಿಯಾದ ವೈಶ್ಯನಿದ್ದ. ಅವನು ಅತ್ಯಂತ ಉದಾರಿ, ದೇವ ಬ್ರಾಹ್ಮಣರ ಆರಾಧಕ. ಅವನಿಗೆ ಪತಿವ್ರತಾಶಿರೋಮಣಿ ಯಾದ ಇಂದುಮತಿ ಎಂಬ ಮಡದಿ ಇದ್ದಳು. ಆ ದಂಪತಿಗಳಿಗೆ ಬಹುಕಾಲ ಮಕ್ಕಳಾಗಲಿಲ್ಲ. ವೃದ್ಧಾಪ್ಯದಲ್ಲಿ ಅವರಿಗೆ ಬಲ್ಲಾಳ ಎಂಬ ಹೆಸರಿನ ಮಗನು ಹುಟ್ಟಿದನು. ಆ ಬಲ್ಲಾಳನು ಪ್ರಾಪ್ತವಯಸ್ಕನಾದ ಬಳಿಕ ತನ್ನ ವಾರಿಗೆಯ ಮಿತ್ರರನ್ನು ಕೂಡಿಕೊಂಡು ಊರಹೊರಗೆ ಹೋಗಿ ದೇವತಾರ್ಚನೆಯ ಆಟ ಆಡುತ್ತಿದ್ದನು. ಒಂದುದಿನ ಗೆಳೆಯರಿಂದ ಕೂಡಿಕೊಂಡು ಬಲ್ಲಾಳನು ಅರಣ್ಯಕ್ಕೆ ಹೋದಾಗ ಮೊದಲು ಮನಬಂದ ಆಟಗಳನ್ನು ಆಡಿದರು. ಅನಂತರ ಅಲ್ಲಿಯೆ ಇದ್ದ ಸರೋವರದಲ್ಲಿ ಇಳಿದು ಸ್ನಾನ ಮಾಡಿದರು. ಬಳಿಕ ಅಲ್ಲಿಯೇ ಬಿದ್ದಿದ್ದ ಒಂದು ಸುಂದರವಾದ ಕೆಂಪು ಕಲ್ಲನ್ನು ತಂದು ಒಂದು ಕಡೆ ಇಟ್ಟರು ಆ ಕಲ್ಲನ್ನೇ

ಗಣೇಶನೆಂದು ಭಾವಿಸಿ ಎಳೆ ಗರಿಕೆ ಮೊಗ್ಗು ಚಿಗುರುಗಳನ್ನು ತಂದು ಪೂಜೆ ಮಾಡಿದರು. ಕೆಲವು ಬಾಲಕರು ಗಣಪತಿಯ ದಿವ್ಯ ನಾಮಗಳನ್ನು ಜಪಿಸಿದರು. ಹಲವರು ಗಾಯನ ಮಾಡಿದರು. ಕೆಲವರು ನರ್ತನ ಗೈದರು. ಧೂಪದೀಪ ನೈವೇದ್ಯ ತಾಂಬೂಲ ದಕ್ಷಿಣೆಗಳಿಂದ ದೇವನನ್ನೂ ಪೂಜಿಸಿದರು. ಅವರಲ್ಲಿ ಕೆಲವರು ಧರ್ಮಶಾಸ್ತ್ರ ಪ್ರವಚನ ಮಾಡಿದರು; ಹಲವರು ಶ್ರೋತೃಗಳಾಗಿ ಕೇಳುತ್ತ ಕುಳಿತರು.

ಹೀಗೆ ಗಣೇಶ ಪೂಜೆಯಲ್ಲಿ ಆಸಕ್ತರಾಗಿ ಆ ಮಕ್ಕಳು ''ಮನೆ ಮಾರು, ತಂದೆ ತಾಯಿ, ಹಸಿವೆ ಬಾಯಾರಿಕೆ, ಎಲ್ಲವನ್ನೂ ಮರೆತು ಅಡವಿಯಲ್ಲೆ ಉಳಿದುಬಿಟ್ಟರು. ಅದನ್ನು ನೋಡಿ ಆ ಬಾಲಕರ ತಂದೆ ತಾಯಿಗಳು ಬಲ್ಲಾಳನ ಮೇಲೆ ಸಿಟ್ಟಾಗಿ, ಅವನ ತಂದೆ ಕಲ್ಯಾಣ ಶೆಟ್ಟಿಯ ಹತ್ತಿರ ಬಂದು ಕೋಪದಿಂದ ನುಡಿದರು. ''ನಿನ್ನ ಮಗನಾದ ಬಲ್ಲಾಳನ ಸಹವಾಸದಿಂದ ನಮ್ಮ ಮಕ್ಕಳೆಲ್ಲ ಕೆಟ್ಟುಹೋದರು. ಮಕ್ಕಳು ಮನೆಗೆ ಬರುವುದಿಲ್ಲ. ಊಟ, ಉಡಿಗೆ, ತಿಂಡಿ, ತಿನಿಸು ಇಲ್ಲದೆ ಮಕ್ಕಳೆಲ್ಲ ಸೋರಗಿ ಹೋಗಿದ್ದಾರೆ. ಇದೆಲ್ಲವೂ ನಿನ್ನ ಮಗನ ಹಾವಳಿ. ಕೂಡಲೆ ನಿನ್ನ ಮಗನನ್ನು ಶಿಕ್ಷಿಸು. ಇಲ್ಲವಾದರೆ ಈ ನಗರದ ರಾಜನಲ್ಲಿಗೆ ಹೋಗಿ ದೂರುಕೊಟ್ಟು ನಿನ್ನನ್ನು, ನಿನ್ನ ಮಗನನ್ನು ಊರು ಬಿಟ್ಟು ಹೊರಗೆ ಹಾಕಿಸುವೆವು'' ಎಂದು ಹೇಳಿದರು. ಇದನ್ನು ಕೇಳಿ ಕಲ್ಯಾಣ ಶೆಟ್ಟಿಗೆ ಬಹಳ ಕೋಪಬಂದಿತು. ಅವನು ಕಣ್ಣು ಕೆಂಪಗೆ ಮಾಡಿಕೊಂಡು ಕೈಯಲ್ಲಿ ದೊಡ್ಡ ದೊಣ್ಣೆ ಹಿಡಿದು ಅರಣ್ಯಕ್ಕೆ ಬಂದನು. ಅಲ್ಲಿ ಮಕ್ಕಳು ಗಣಪತಿ ಪೂಜೆಗಾಗಿ ಕಟ್ಟಿದ ಮಂಟಪವನ್ನು ಮುರಿದು ಹಾಕಿದನು. ಅವನ ಕೋಪಾಟೋಪವನ್ನು ನೋಡಿ ಮಕ್ಕಳೆಲ್ಲರೂ ಓಡಿಹೋದರು. ಬಲ್ಲಾಳನು ಮಾತ್ರ ದೃಢಭಕ್ತಿಯಿಂದ ಗಣೇಶನನ್ನು ಧ್ಯಾನಿಸುತ್ತ ಕುಳಿತುಕೊಂಡಿದ್ದನು. ಅದರಿಂದ ಕಲ್ಯಾಣ ಶೆಟ್ಟಿಗೆ ಕೋಪ ಇಮ್ಮಡಿಯಾಯಿತು. ದೊಣ್ಣೆಯನ್ನು ಬಲವಾಗಿ ಬೀಸಿ ಬಲ್ಲಾಳನನ್ನು ಹೊಡೆದನು. ರಕ್ತವು ಧಾರಾಕಾರವಾಗಿ ಹರಿಯಿತು. ಕಲ್ಯಾಣ ಶೆಟ್ಟಿಯು ಇಷ್ಟರಿಂದ ತೃಪ್ತನಾಗದೆ ಗಣೇಶನ ಮೂರ್ತಿಯನ್ನು ಕಿತ್ತು ದೂರ ಒಗೆದನು. ಅಲ್ಲಿಯೆ ಬಿದ್ದ ಬಳ್ಳಿಗಳಿಂದ ಬಲ್ಲಾಳನನ್ನು ಬಿಗಿಯಾಗಿ ಸುತ್ತಿ ಒಂದು ಮರಕ್ಕೆ ಕಟ್ಟಿಹಾಕಿದನು. ಅಷ್ಟರಿಂದ ಅವನ ಕೋಪವು ಶಾಂತವಾಗಲಿಲ್ಲ. ಅವನು ತನ್ನ ಮಗನನ್ನು, ಕುರಿತು ಈ ಕಲ್ಲನ್ನು ಮೌಢ್ಯದಿಂದ ದೇವರೆಂದು ಪೂಜಿಸುತ್ತಿದ್ದೆಯಲ್ಲವೆ ? ಅವನು ನಿಜವಾದ ದೇವರಾಗಿದ್ದರೆ ಈಗಲೆ ಬಂದು ನಿನ್ನನ್ನು ಬಿಡಿಸಲಿ, ನೋಡೋಣ'' ಎಂದು ಹಂಗಿಸಿದ. ಮಕ್ಕಳು ಮಾಡಿದ ಮಂಟಪವನ್ನೂ ಚಿಕ್ಕದಾದ ದೇವಗೃಹವನ್ನೂ ಮುರಿದು ಬಿಸಾಡಿ ಮನೆಗೆ ಬಂದನು.

ಕಲ್ಯಾಣನು ಹೋದಬಳಿಕ ಅವನ ಮಗನಾದ ಬಲ್ಲಾಳನಿಗೆ ಬಹಳ ದುಃಖವಾಯಿತು. ಅವನು ಏಕಾಗ್ರ ಮನಸ್ಸಿನಿಂದ ಗಣೇಶನನ್ನು ಧ್ಯಾನಿಸುತ್ತ, ದುಃಖಾತಿರೇಕದಿಂದ ಗಣೇಶನನ್ನೇ ಆಕ್ಷೇಪಿಸಿ, ಕೋಪದಿಂದ ತನ್ನನ್ನು ಕಟ್ಟಿಹಾಕಿದ, ತಂದೆಯನ್ನು ಕೂಡ ಶಪಿಸತೊಡಗಿದನು.

**ಬಲ್ಲಾಳ :-** ದೇವಾ, ಗಣೇಶ, ನೀನು ವಿಘ್ನವೈರಿ, ವಿಘ್ನಗಳನ್ನು ನಾಶಮಾಡುವವ ಎಂದು ಹೇಗೆ ಪ್ರಸಿದ್ಧವಾಯಿತು. ನಿನ್ನನ್ನು ಪೂಜಿಸುವ ನಮ್ಮನ್ನೆಲ್ಲ ಹೊಡೆದು, ನಿನ್ನ ಮಂಟಪವನ್ನೆಲ್ಲ ಮುರಿದು ನಿನ್ನ ಪೂಜೆಗಾಗಿ ನಾವೆಲ್ಲ ಚಿಕ್ಕಮಕ್ಕಳು ಕೂಡಿ ಮಾಡಿದ ತಾತ್ಪೂರ್ತಿಕವಾದ ದೇವಗೃಹವನ್ನೇ ಆ ಕಲ್ಯಾಣ ಶೆಟ್ಟಿಯು ಕಿತ್ತಿ ಇಡ್ಯಾಡಿದನಲ್ಲ ? ನಿನ್ನ ಪೂಜೆಗೆ ಬಂದ ವಿಘ್ನಗಳನ್ನು ನಿವಾರಿಸಲಾರದ ನೀನು ಭಕ್ತರ ವಿಘ್ನನಾಶ ಮಾಡುವ

ವಿಘ್ನೇಶ ಹೇಗೆ ಆಗುವೆ ? ನಾವು ರಚಿಸಿದ ದೇವಗೃಹವನ್ನು ಧ್ವಂಸಮಾಡಿ, ವಿನಾಯಕನ ದಿವ್ಯ ಮೂರ್ತಿಯನ್ನು ಕಿತ್ತಿ ಒಗೆದ ನನ್ನ ತಂದೆ ಕಲ್ಯಾಣ ಶೆಟ್ಟಿಯು ಕಿವುಡನು ವಕ್ರದೇಹಿಯೂ ಮೂಕನೂ ಆಗಲಿ. ಭಗವಂತನಾದ ಗಜಾನನನಲ್ಲಿ ನಾನು ದೃಢಭಕ್ತಿಯನ್ನು ಇಟ್ಟಿದ್ದು ನಿಜವಾದರೆ ನಾನು ಕಲ್ಯಾಣ ಶೆಟ್ಟಿಗೆ ಕೊಡುವ ಶಾಪವೂ ಕೂಡ ನಿಜವಾಗಲಿ. ನಾನು ಅನನ್ಯ ಭಾವನೆಯಿಂದ ದೇವನನ್ನು ಧ್ಯಾನಿಸುತ್ತ ಈ ನಶ್ವರವಾದ ಪಾರ್ಥಿವದೇಹವನ್ನು ಆ ಗಣೇಶದೇವನಿಗಾಗಿ ಈ ಅರಣ್ಯದಲ್ಲಿಯೇ ತ್ಯಜಿಸುವೆನು.

ಬಲ್ಲಾಳನ ಈ ದೃಢ ನಿಶ್ಚಯವನ್ನು ಕಂಡು ಭಗವಂತನಾದ ಗಣೇಶನು ಇನ್ನು ಹೆಚ್ಚು ಇವನನ್ನು ಪರೀಕ್ಷಿಸಬಾರದು ಎಂದು ನಿಶ್ಚಯಿಸಿ ಬ್ರಾಹ್ಮಣರೂಪವನ್ನು ಧರಿಸಿ ಬಲ್ಲಾಳನ ಎದುರಿಗೆ ಬಂದು ನಿಂತನು.

ಪ್ರಭಾವ ಶಾಲಿಯಾದ ಗಣನಾಯಕನ ದಿವ್ಯ ತೇಜಸ್ಸಿನಿಂದ ಬಲ್ಲಾಳ ದೇಹದ ಕಟ್ಟುಗಳೆಲ್ಲವೂ ಸಡಿಲಿಹೋದವು. ಬಲ್ಲಾಳನು ಎದ್ದು ಆ ಬ್ರಾಹ್ಮಣರೂಪಿಯಾದ ಆ ದೇವದೇವನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ತಂದೆಯಾಗಿದ್ದರೂ ಯಮದೂತನಂತೆ ಕುರುಡನೂ, ಕಠೋರನೂ ಆದ ಆ ಕಲ್ಯಾಣ ಶೆಟ್ಟಿಯು ದೊಣ್ಣೆ ಬೀಸಿ ಹೊಡೆದು ಬಡಿದು ಬಲ್ಲಾಳನ ಮೈಮೇಲೆ ಉಂಟಾದ ಗಾಯಗಳೆಲ್ಲವೂ ಮಾಯವಾದವು. ಅಂಗಾಗಳಗಲ್ಲಿ ಪುಟಿದು ಬಂದ ರಕ್ತದ ಕಲೆ ಸಹ ಇಲ್ಲದಂತಾಯಿತು. ಅವನ ಶರೀರವು ದಿವ್ಯವಾದ ಕಳೆಕಾಂತಿಗಳಿಂದ ಕಂಗೊಳಿಸ ತೊಡಗಿತು. ಆಗ ಬಲ್ಲಾಳನು, ಶ್ರೀ ಗಜಾನನನ್ನು ಭಕ್ತಿಯಿಂದ ಕೈ ಮುಗಿದು ಸ್ತೋತ್ರ ಮಾಡಿದನು.

**ತ್ವಮೇವ ಮಾತಾಸಿ, ಪಿತಾಸಿ ಬಂಧುಃ ।**
**ತ್ವಮೇವ ಕರ್ತಾಸಿ ಚರಾಚರಸ್ಯ ॥**
**ನಿರ್ಮಾಸಿ ದುಷ್ಟಾಂಶ್ಚ ಖಲಾಂಶ್ಚ ಸಾಧೂನ್ ।**
**ಯೋನೌ, ವಿಯೋನೌ ವಿನಿಯುಂಕ್ಷ್ಯಥಾಪಿ ॥**

ಚರಾಚರ ಪ್ರಪಂಚಕ್ಕೆಲ್ಲ ನೀನೆ ತಾಯಿ, ನೀನೆ ತಂದೆ ನೀನೇ ಬಂಧು, ಈ ಪ್ರಪಂಚವನ್ನೆಲ್ಲ ಸೃಷ್ಟಿಮಾಡಿದವನು ನೀನೆ ಆಗಿರುವೆ. ದುಷ್ಟರನ್ನು, ಸಾಧುಗಳನ್ನು, ಅವರವರ ಕರ್ಮಾನುಸಾರವಾಗಿ ಆಯಾ ಯೋನಿಗಳಲ್ಲಿ ಹುಟ್ಟುವಂತೆ ಮಾಡುವವನೂ ನೀನೆ ಆಗಿರುವೆ. ದಿಕ್ಕು, ಕಾಲ, ಬಯಲು, ಭೂಮಿ, ಸಮುದ್ರ, ಪರ್ವತ, ಪ್ರಲಯ, ಅಗ್ನಿ ಮಾರುತ, ಇವುಗಳ ಸ್ವರೂಪನೇ ನೀನು. ಸೂರ್ಯಚಂದ್ರ ನಕ್ಷತ್ರಾದಿಗಳು ನಿನ್ನ ಸ್ವರೂಪವೆ.

ಹೀಗೆ ಬಲ್ಲಾಳನ ಸ್ತೋತ್ರವನ್ನು ಕೇಳಿ ಗಣೇಶನು ಸುಪ್ರಸನ್ನನಾಗಿ ಅವನನ್ನು ವಾತ್ಸಲ್ಯದಿಂದ ಆಲಿಂಗಿಸಿದನು. ಮತ್ತು ಹೀಗೆ ನುಡಿದನು.

**ಗಜಾನನ :-** ನಿನ್ನನ್ನು ದೊಣ್ಣೆಯಿಂದ ಹೊಡೆದು ಕೈಕಾಲು ಕಟ್ಟಿ, ನನ್ನ ಮಂದಿರವನ್ನು ಧ್ವಂಸಮಾಡಿದ ಪಾಪಿಯು ನಿನ್ನ ಶಾಪದಂತೆ ಮುಂದಿನ ಜನ್ಮದಲ್ಲಿ ಕುರುಡ, ಕಿವಿಡು ಕುಬ್ಜ ಮೂಕ ರೋಗಿಷ್ಠನೂ ಆಗುವನು. ಅವನ ದೇಹದಿಂದ ಯಾವಾಗಲೂ ರಕ್ತಕೀವು ಬಸಿಯುತ್ತಲೇ ಇರುವದು. ಅವನು ಹೋದಲ್ಲೆಲ್ಲ ಅವನ ದೇಹದ ದುರ್ಗಂಧವು ಅಸಹ್ಯವಾಗಿ ಪಸರಿಸುವವು. ನಿನಗೆ ಬೇರೆ ಏನಾದರೂ ವರಬೇಕಾಗಿದ್ದರೆ

ಕೇಳು, ಸಂಕೋಚಪಡಬೇಡ. ನೀನು, ನನ್ನನ್ನು ಪೂಜಿಸಿದ ಈ ಸ್ಥಲವು ಪುಣ್ಯಕ್ಷೇತ್ರವೆಂದು ಪ್ರಸಿದ್ಧವಾಗುವದು. ನೀನು ಆರಾಧಿಸಿದ ನನ್ನ ಮೂರ್ತಿಯು ಬಲ್ಲಾಳ ವಿನಾಯಕ ಎಂದು ಜಗತ್ತಿನಲ್ಲಿ ಪ್ರಖ್ಯಾತವಾಗಲಿ. ಈ ನಗರದಲ್ಲಿ ನನ್ನ ಮಂದಿರವು ಸುಪ್ರತಿಷ್ಠಿತವಾಗಿ ನೆಲೆಸುವದು. ಬಲ್ಲೆ ಎಂಬ ಈ ಊರು ದೊಡ್ಡಕ್ಷೇತ್ರವಾಗಿ ಮೆರೆಯುವದು. ಈ ಕ್ಷೇತ್ರಕ್ಕೆ ಜನರು ಪ್ರತಿವರ್ಷ ಭಾದ್ರಪದ ಶುಕ್ಲ ಚತುರ್ಥಿ ದಿವಸ ಬಂದು ನನ್ನನ್ನು ಸಂದರ್ಶಿಸಿ ಅರ್ಚಿಸಿದರೆ ಅವರ ಸಂಕಲ್ಪಗಳನ್ನು ನಾನು ಈಡೇರಿಸಿ ಕೊಡುವೆನು. ಹೀಗೆ, ವಿಘ್ನೇಶನು ಬಲ್ಲಾಳನಿಗೆ ವರಗಳನ್ನು ಕೊಟ್ಟು ಅಲ್ಲಿಯೇ ಅದೃಶ್ಯನಾದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಬಲ್ಲಾಳ ವರಪ್ರದಾನ ಎಂಬ ಇಪ್ಪತ್ತೆರಡನೇ ಅಧ್ಯಾಯ ಮುಗಿದುದು*



## ಭವಿಷ್ಯ ಕಥನ

**ಅಧ್ಯಾಯ - ೨೩**

**ಭೀಮರಾಜ :-** ಮಹರ್ಷಿಗಳೇ, ಪುತ್ರನಾದ ಬಲ್ಲಾಳನಿಂದ ಶಪಿತನಾದ ಕಲ್ಯಾಣಶೆಟ್ಟಿಯು ಏನಾದನು ?

**ವಿಶ್ವಾಮಿತ್ರ :-** ಬಲ್ಲಾಳನು ಕೊಟ್ಟ ಶಾಪದಿಂದ ಕಲ್ಯಾಣಶೆಟ್ಟಿಯ ಶರೀರದಲ್ಲಿ ಒಮ್ಮೆಲೆ ಸಾವಿರಾರು ಗಾಯಗಳು ಉಂಟಾದವು. ಅವುಗಳಿಂದ ರಕ್ತವು ಧಾರಾಕಾರವಾಗಿ ಸುರಿಯತೊಡಗಿತು. ಕಣ್ಣು ಕಾಣದಂತಾಯಿತು, ಕಿವಿ ಕೇಳದಂತಾಯಿತು. ಅವನ ದೇಹದಿಂದ ದುರ್ಗಂಧ ಹೊರಹೊಮ್ಮಿ ಅವನ ಸಮೀಪಕ್ಕೆ ಯಾರೂ ಬಾರದಂತಾಯಿತು. ಅವನ ಮಡದಿಯಾದ ಇಂದುಮತಿಯು ತನ್ನ ಗಂಡನಿಗೆ ಅಕಸ್ಮಾತ್ತಾಗಿ ಒದಗಿದ ಈ ದುರ್ದೆಶೆಯನ್ನು ಕಂಡ ದುಃಖಿತಳೂ, ಆಶ್ಚರ್ಯಚಕಿತೆಯೂ ಆದಳು. ಮತ್ತು ಅವಳಿಗೆ ತನ್ನ ಗಂಡನು, ಅಡವಿಗೆ ಹೋಗಿ ಮಗನನ್ನು ಮನಬಂದಂತೆ ಹೊಡೆದು, ದನಬಡಿದಂತೆ ಬಡಿದು, ಕೈ ಕಾಲು ಬಿಗಿದು, ಮರಕ್ಕೆ ಕಟ್ಟಿಹಾಕಿದ ವಿಚಾರವೂ ಅವಳಿಗೆ ತಿಳಿಯಿತು. ಅದರಿಂದ ಮಗನ ದುರವಸ್ಥೆಯನ್ನು ನೆನೆದು ಅವಳಿಗೆ ದುಃಖ ಉಕ್ಕಿಬಂದಿತು. ಪ್ರೀತಿಯ ಪುತ್ರನನ್ನು ನೆನೆದು ಬಿಕ್ಕಿ ಬಿಕ್ಕಿ ಅತ್ತಳು.

ಪುರಜನರನ್ನು ಕರೆದುಕೊಂಡು ಅವಳು ಮಗನನ್ನು ಕಟ್ಟಿಹಾಕಿದ ಕಟ್ಟಡವಿಗೆ ಬಂದಳು. ಆದರೆ ಅಲ್ಲಿ ಅವಳು ಕಂಡದ್ದು ಏನು ? ಗಣೇಶನ ಅನುಗ್ರಹದಿಂದ ಬಲ್ಲಾಳನು ನಿರ್ಮಿಸಿದ ಸುಂದರವಾದ ದೇವಮಂದಿರ. ಅದರಲ್ಲಿ ದಿವ್ಯ ಭವ್ಯವಾದ ಗಣನಾಯಕನ ಮೂರ್ತಿ, ಆ ದೇವದೇವನ ಪೂಜೆಯಲ್ಲಿ ತನ್ನ ಪ್ರೀತಿಯ ಮಗ ಬಲ್ಲಾಳನು ಆಸಕ್ತಚಿತ್ತನಾಗಿ ಕುಳಿತುಕೊಂಡಿದ್ದಾನೆ. ಅವನನ್ನು ನೋಡಿ ಅವಳಿಗೆ ನಾಗರಿಕರು ಹೇಳದ್ದು ಸುಳ್ಳು ಎಂದು ಅನಿಸಿತು. ತನ್ನ ಜೊತೆಗೆ ಬಂದ ಪುರ ಜನರಿಗೆ ಕೇಳಿದಳು.

**ಇಂದುಮತಿ :-** ನನ್ನ ಪತಿಯಾದ ಕಲ್ಯಾಣಶೆಟ್ಟಿಯು ಮಗನನ್ನು ನೆತ್ತರು ಬರುವಂತೆ ಹೊಡೆದು, ಕೈಕಾಲು ಬಿಗಿದು ಮರಕ್ಕೆ ಕಟ್ಟಿದ್ದಾನೆ ಎಂದು ಏಕೆ ಸುಳ್ಳು ಹೇಳಿದಿರಿ. ನಿಮ್ಮ ಮಾತನ್ನು ನಂಬಿ, ಆಕಸ್ಮಿಕವಾದ ರೋಗ ಗಾಯಗಳಿಂದ

ದುರವಸ್ಥೆಯಲ್ಲಿ ತೋಳ್ಳುಲಾಡುವ ಗಂಡನನ್ನು ಕೂಡ ಬಿಟ್ಟು, ಮಗನ ಮೇಲಿನ ಪ್ರೀತಿಯಿಂದ ಇಲ್ಲಿ ಓಡಿಬಂದೆ. ಇಲ್ಲಿ ನನ್ನ ಮಗನು, ಯಾವ ಬಂಧನ ಪ್ರಹಾರ, ಗಾಯಗಳು ಇಲ್ಲದೆ ಸುರಕ್ಷಿತವಾಗಿ ದೇವನನ್ನು ಪೂಜೆ ಮಾಡುತ್ತ ಕುಳಿತಿದ್ದಾನೆ.

ಅವಳ ಮಾತನ್ನು ಕೇಳಿ, ಮತ್ತು ದೇವತಾರ್ಚನೆಯಲ್ಲಿ ಆಸಕ್ತನಾದ ಬಲ್ಲಾಳನನ್ನು ನೋಡಿ ಪೌರರೆಲ್ಲರೂ ಭ್ರಾಂತರಾದರು. ಒಂದಕ್ಷರವನ್ನು ಉಚ್ಚರಿಸದೆ ಒಬ್ಬರ ಮುಖವನ್ನು ಒಬ್ಬರು ನೋಡತೊಡಗಿದರು. ಇಂದುಮತಿಗೆ ಮಗನ ಮೇಲೆ ಪ್ರೀತಿ, ಮಮತೆ ಉಕ್ಕಿ ಆನಂದದಿಂದ ಬಲ್ಲಾಳನನ್ನು ಬಿಗಿದಪ್ಪಿಕೊಂಡಳು. ಮತ್ತು ಹೇಳಿದಳು.

**ಇಂದುಮತಿ** :- ಮಗು, ನಡೆ ಮನೆಗೆ ಹೋಗೋಣ ನಿನ್ನ ತಂದೆಗೆ ಒಮ್ಮಿದೊಂದಮ್ಮೆಲೆ ಭಯಂಕರವಾದ ರೋಗ ತಗುಲಿಕೊಂಡಿದೆ. ನಿಪುಣರಾದ ವೈದ್ಯರಿಗೆ ತೋರಿಸಿದೆ. ಉಪಚಾರ ಮಾಡಿಸಿದೆ. ಯಾವುದರಿಂದಲೂ ರೋಗವಾಸಿಯಾಗಲಿಲ್ಲ. ನಿನ್ನ ತಂದೆಯ ದೇಹದಲ್ಲಿ ಸಾವಿರಾರು ಗಾಯಗಳು ನಿರಂತರ ನೆತ್ತರು ಬಸಿಯುತ್ತಲೆ ಇದೆ. ದೇಹದ ದುರ್ಗಂಧ ವಾತಾವರಣವನ್ನೇ ಅಶುದ್ಧಗೊಳಿಸಿದೆ. ನೀನು ಬೇಗನೇ ಬಂದು ಅವರ ರೋಗವನ್ನು ವಾಸಿಯಾಗುವಂತೆ ಪ್ರಯತ್ನಮಾಡು. ಔಷಧ, ಮಂತ್ರ ಪ್ರಯೋಗ, ದೇವತಾಪ್ರಾರ್ಥನೆ ಮುಂತಾದವುಗಳಿಂದ ನಿನ್ನ ತಂದೆಗೆ ಆರೋಗ್ಯವನ್ನು ಉಂಟುಮಾಡು. ನಾನು ನಿನ್ನ ತಾಯಿಯಾದರೂ ಪತಿಯ ಆರೋಗ್ಯಕ್ಕಾಗಿ ನಿನ್ನಲ್ಲಿ ಬೇಡಿಕೊಳ್ಳುತ್ತೇನೆ. ನನ್ನ ಮಾಂಗಲ್ಯವನ್ನು ಉಳಿಸು ನಿನ್ನ ತಂದೆಯನ್ನು ಕಾಪಾಡು.

**ಬಲ್ಲಾಳ** :- ತಾಯಿ, ನೀನು ಯಾರಿಗೆ ತಾಯಿ ಕಲ್ಯಾಣ ಯಾರಿಗೆ ತಂದೆ ? ನಾನು ಯಾರು ? ಯಾರು ಯಾರಿಗೆ ಸಂಬಂಧಿಗಳು ? ಈ ಸಂಬಂಧಗಳೆಲ್ಲವೂ ಗಣೇಶನ ಸಂಕಲ್ಪದಿಂದ ಕಲ್ಪಿತವಾದವುಗಳು; ವಾಸ್ತವಗಳಲ್ಲ ಇದನ್ನೆ ವೇದಶಾಸ್ತ್ರಗಳು ಸಾರುತ್ತಿವೆ. ನೀವು ನನಗೆ ನಿಜವಾದ ತಾಯಿ ತಂದೆಗಳಲ್ಲ. ಗಣೇಶನೇ ನನಗೆ ನಿಜವಾದ ತಂದೆ, ತಾಯಿ ಬಂಧು ಆಗಿದ್ದಾನೆ. ಕಲ್ಯಾಣಶೆಟ್ಟಿಯು ದುರ್ಬುದ್ಧಿಯಿಂದ ಪ್ರೇರಿತನಾಗಿ ವಿನಾಯಕನ ಮೂರ್ತಿಯನ್ನು ಕಿತ್ತಿ ಒಗೆದನು. ಅವನ ಭಕ್ತನಾದ ನನ್ನನ್ನು ಬಲವಾಗಿ ಹೊಡೆದು ಗಿಡಕ್ಕೆ ಕಟ್ಟಿಹಾಕಿದನು. ದೇವರ ಮೂರ್ತಿಯನ್ನು ಕಿತ್ತಿ ಒಗೆದನು. ಅದರಿಂದಾಗಿಯೇ ಅವನಿಗೆ ಇಂಥ ದಾರುಣವಾದ ದುರವಸ್ಥೆಯು ಬಂದಿದೆ. ನೀನು ನನ್ನಲ್ಲಿ ಇಟ್ಟಿರುವ ಪುತ್ರ ವ್ಯಾಮೋಹವನ್ನು ದೂರಮಾಡು. ನಿನ್ನ ಪತಿಯ ಸೇವೆಯನ್ನು ಮಾಡಿ ಸದ್ಗತಿ ಹೊಂದು. ಅವನು ಗಣೇಶನ ಮೇಲಿನ ದ್ವೇಷದಿಂದ ನನ್ನನ್ನು ಹೊಡೆದು ಬಡಿದದ್ದರಿಂದ ನಾನೇ ಅವನಿಗೆ ಶಾಪಕೊಟ್ಟಿದ್ದೇನೆ. ಅದರ ಫಲವಾಗಿಯೇ ಈ ದುರವಸ್ಥೆ ಬಂದಿದೆ.

**ಇಂದುಮತಿ** :- ಮಗು, ಬಲ್ಲಾಳ ಈ ಒಂದು ಜನ್ಮದಲ್ಲಾದರೂ ನಿನ್ನ ಹಡೆದ ತಾಯಿ ಎನಿಸಿದ ನನ್ನ ಈ ಒಂದು ಬಿನ್ನಹವನ್ನು ಕೇಳು. ನಿನ್ನ ತಂದೆಗೆ ನೀನು ಕೊಟ್ಟಿರುವ ಶಾಪಕ್ಕೆ ಏನಾದರೊಂದು ಪರಿಹಾರೋಪಾಯವನ್ನು ತಿಳಿಸಿ ಉಪಕರಿಸು.

**ಬಲ್ಲಾಳ** :- ತಾಯಿ, ಮುಂದಿನ ಜನ್ಮದಲ್ಲಿ ಕಲ್ಯಾಣಶೆಟ್ಟಿಗೆ ನೀನೇ ಜನನಿಯಾಗಿ ಹುಟ್ಟುವೆ. ಈಗಿನ ಈ ನಿನ್ನ ಪತಿಯಾದ ಕಲ್ಯಾಣಶೆಟ್ಟಿಯು ಹೀಗೆ ಕುರುಡ, ಕಿವುಡ ರೋಗಿಷ್ಠನಾಗಿ ನಿನ್ನ ಮಗನಾಗಿ ಜನಿಸುವನು. ನೀನು ವಲ್ಲಭ ಎಂಬ ಕ್ಷತ್ರಿಯೋತ್ತಮನಿಗೆ

ಮಡದಿಯಾಗುವೆ. ಆಗ ನಿನ್ನ ಹೆಸರು ಕಮಲಾ ಎಂದು ಪ್ರಸಿದ್ಧವಾಗುವದು. ಈ ನಿನ್ನ ಮಗನಾಗಿ ಜನಿಸುವ ಕಲ್ಯಾಣಶೆಟ್ಟಿಗೆ ದಕ್ಷ ಎಂದು ಹೆಸರು ಇಡುವಿರಿ. ಆಗ ವಲ್ಲಭರಾಜನು ದುರ್ಗಂಧ ಸೂಸುವ ದಕ್ಷನೆಂಬ ರೋಗಿಷ್ಠ ಮಗನನ್ನು ನೋಡಿ ಸಹಿಸಲಾರದೆ, ಅವನನ್ನೂ ಅವನ ತಾಯಿಯಾದ ನಿನ್ನನ್ನೂ ದೇಶಬಿಟ್ಟು ಹೊರಗೆ ಅಟ್ಟುವನು. ಆಗ ನೀನು ದೇಶಭ್ರಷ್ಟಳಾಗಿ, ನಿರಾಶ್ರಿತಳಾಗಿ, ಪರಸ್ಥಳದಲ್ಲಿ ಅಲೆಯುತ್ತಿರುವಾಗ, ಒಬ್ಬ ಬ್ರಾಹ್ಮಣೋತ್ತಮನ ಅಂಗಾಂಗಗಳ ಮೇಲೆ ಬೀಸಿ ಬಂದ ತಂಗಾಳಿಯಿಂದ ನಿನ್ನ ಮಗನ ರೋಗವು ಕಡಿಮೆ ಯಾಗುವದು. ಅನಂತರ ನಿಮಗೆ, ಗಜಾನನ ಸಂದರ್ಶನವು ದೊರೆಯುವುದು. ಅವನ ಅನುಗ್ರಹದಿಂದ ನಿನ್ನ ಪುತ್ರನು ದಿವ್ಯ ದೇಹವನ್ನು ಪಡೆಯುವನು. ನೀನು ನನಗೆ ಈ ಜನ್ಮದಲ್ಲಿ ಪಾರ್ಥಿವ ದೇಹವನ್ನು ಕೊಟ್ಟ ಜನನಿ. ಆದುದರಿಂದ, ನಿನ್ನ ಹಾಗೂ ನಿನ್ನ ಪತಿಯ ಭಾವಿಜನ್ಮದ ಭವಿಷ್ಯವನ್ನೂ ಈ ಶಾಪದ ಪರಿಹಾರೋಪಾಯವನು ಹೇಳಿದ್ದೇನೆ.

ಹೀಗೆ ಹೇಳಿ ಬಲ್ಲಾಳನು ಇಂದುಮತಿಯನ್ನು ಅಲ್ಲಿಂದ ಕಳಿಸಿ ಕೊಟ್ಟನು. ಅವಳು ವಿಧಿಯಿಲ್ಲದೇ ಅಲ್ಲಿಂದ ಹೊರಟಳು. ತಂದೆಗೆ ಶಾಪಕೊಟ್ಟ ಮಗನ ಬಗ್ಗೆ ಅವಳಿಗೆ ಬೇಸರವಾಯಿತು. ಆದರೂ ತನ್ನ ಪತಿಗೆ ಜನ್ಮಾಂತರದಲ್ಲಿ ಆದರೂ ಶಾಪಮುಕ್ತಿಯಾಗುವುದು ಎಂಬ ಆಶಾಕಿರಣ ಮೂಡಿ, ಅವಳ ದುಃಖವನ್ನು ಎಷ್ಟೋ ಮಟ್ಟಿಗೆ ಕಡಿಮೆಮಾಡಿತು.

ಇತ್ತ, ಭಗವದ್ಭಕ್ತನಾದ ಬಲ್ಲಾಳನು, ತನ್ನ ಭಕ್ತಿವಿಶೇಷದಿಂದ ಭಗವಂತನಾದ ಗಣೇಶನನ್ನು ಸಂತೋಷಗೊಳಿಸಿ ಅವನು ಅನುಗ್ರಹ ಪೂರ್ವಕವಾಗಿ ಕಳಿಸಿಕೊಟ್ಟ ವಿಮಾನವನ್ನು ಆರೋಹಿಸಿ, ಸ್ವರ್ಗಲೋಕವನ್ನು ಕುರಿತು ಪ್ರಯಾಣಮಾಡಿದನು. ಭಗವಂತನ ಅನುಗ್ರಹದಿಂದ ತ್ರಿಲೋಕ ಜ್ಞಾನಿಯಾದ ಬಲ್ಲಾಳನು ಹೇಳಿದಂತೆ ಇಂದುಮತಿಯು ಆ ಜನ್ಮವನ್ನು ನೀಗಿ ಕಮಲೆ ಎಂಬ ಹೆಸರಿನಿಂದ ಹುಟ್ಟಿದಳು ವಲ್ಲಭರಾಜನನ್ನು ಕೈ ಹಿಡಿದು ಪಟ್ಟಮಹರ್ಷಿಯಾದಳು. ಕಲ್ಯಾಣಶೆಟ್ಟಿಯು, ರಾಜಕುಮಾರನಾದರೂ ರೋಗಿಷ್ಠನಾಗಿ ದಕ್ಷನೆಂಬ ಹೆಸರಿನಿಂದ ಜನ್ಮವೆತ್ತಿದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಭವಿಷ್ಯಕಥನ ಎಂಬ ಇಪ್ಪತ್ತಮೂರನೇ ಅಧ್ಯಾಯ ಮುಗಿದುದು*

—o—

**ಭೀಮ :-** ಮುನಿವರ್ಯ, ರಾಜಪುತ್ರನಾಗಿ ಜನಿಸಿದ ದಕ್ಷನು ಎಲ್ಲಿ ಕುಳಿತು, ಯಾರನ್ನು ಕುರಿತು, ಹೇಗೆ ತಪಸ್ಸನ್ನು ಆಚರಿಸಿದನು ? ಗಣಪತಿಯ ಮೂಲ ಮಂತ್ರವನ್ನೂ ಅವನಿಗೆ ಯಾರು ಉಪದೇಶಿಸಿದರು ?

**ವಿಶ್ವಾಮಿತ್ರ :-** ಕೌಂಡಿಣ್ಯ ಎಂಬ ಪಟ್ಟಣಕ್ಕೆ ಸಮೀಪದಲ್ಲಿಯೇ ನಿಬಿಡವಾದ ಒಂದು ದೊಡ್ಡ ಅರಣ್ಯವಿರುವದು. ಬಗೆ-ಬಗೆಯ ಬಳ್ಳಿ, ನಿಬಿಡವಾದ ಮರಗಳ ಗುಂಪು, ತುಂಬ ತಾವರೆಗಳಿಂದ ಶೋಭಿಸುವ ದೊಡ್ಡ ದೊಡ್ಡ ಸರೋವರಗಳು, ಕ್ರೂರ ಸ್ವಭಾವದ ಅನೇಕ ವನ್ಯ ಮೃಗಗಳು ಮೊದಲಾದವುಗಳಿಂದ ಅದು ಒಂದು ರಮಣೀಯವಾದ ಏಕಾಂತ ವನಾಂತರವಾಗಿದ್ದಿತು. ಅಲ್ಲಿ ಒಂದು ಪುರಾತನವಾದ ಶಿಥಿಲ ದೇವಾಲಯದಲ್ಲಿ ಗಣಪತಿಯ ದಿವ್ಯ ಮೂರ್ತಿಯೊಂದು, ದಿವ್ಯದೇಹದಿಂದ ಪ್ರಕಾಶಪ್ರಮಾನವಾಗಿತ್ತು.

ದಕ್ಷನು ಅಲ್ಲಿ ನಿಂತು ಕಠಿಣವಾದ ಉಗ್ರತಪಸ್ಸನ್ನು ಮಾಡಿದನು. ಮುದ್ಗಲಮುನಿಯು ಅವನಿಗೆ ಗಣಪತಿಯ ಏಕಾಕ್ಷರದ ಬೀಜ ಮಂತ್ರವನ್ನು ಉಪದೇಶಿಸಿದ್ದನು. ಹೀಗೆ ದಕ್ಷನು ಹನ್ನೆರಡು ವರ್ಷಗಳವರೆಗೆ, ಏಕಾಗ್ರಮನಸ್ಸಿನಿಂದ ಘೋರ ತಪಸ್ಸನ್ನು ಮಾಡಿದನು. ಅನಂತರವಾದರೂ ಅವನು ದಿನ ದಿನವೂ ಅಭಿಷೇಕ, ವಸ್ತ್ರ, ದಿವ್ಯಗಂಧ, ಧೂಪ, ದೀಪ, ನೈವೇದ್ಯಗಳಿಂದ ಅರ್ಚಿಸಿ, ಮೂಲಮಂತ್ರವನ್ನು ಜಪಿಸಿ ಪೂಜಿಸುತ್ತಿದ್ದನು. ಹೀಗೆ ಏಕಾಗ್ರಮನಸ್ಸಿನಿಂದ ೨೧ ದಿನಗಳವರೆಗೆ ಭಗವಂತನನ್ನು ಅರ್ಚಿಸಿದ ಬಳಿಕ ಬೆಳಗಿನ ಜಾವದಲ್ಲಿ ಅವನಿಗೆ ಒಂದು ಕನಸು ಬಿದ್ದಿತು. ಕನಸಿನಲ್ಲಿ ಅವನಿಗೆ ಒಂದು ಮದ್ದಾನೆಯು ಬಂದು ತನ್ನ ಕೊರಳಿಗೆ ರತ್ನಹಾರವನ್ನು ಹಾಕಿತು. ಮತ್ತು ತನ್ನನ್ನು ಹೆಗಲಮೇಲೆ ಕೂಡಿಸಿಕೊಂಡು ನಗರವನ್ನು ಪ್ರವೇಶಿಸಿತು.

ಇಷ್ಟರಲ್ಲಿ ದಕ್ಷನಿಗೆ ಎಚ್ಚರವಾಯಿತು. ಅವನು ಎದ್ದು ತನ್ನ ತಾಯಿಗೆ ಈ ತನ್ನ ಸ್ವಪ್ನ ವಾರ್ತೆಯನ್ನು ಅರುಹಿದನು. ಅದನ್ನು ಕೇಳಿ ಅವನ ತಾಯಿಯಾದ ಕುಮಲೆಯು ''ಮಗು, ಗಣೇಶನ ಅನುಗ್ರಹದಿಂದ ನೀನು ದೊರೆಯಾಗುವೆ. ರಾಜ್ಯವನ್ನಾಳುವೆ. ರಾಜನಾದರೂ ನೀನು ಆ ಭಗವಂತನಾದ ಗಣಪತಿಯ ಸೇವೆಯನ್ನು ಬಿಡಬೇಡ. ದೇವ ಬ್ರಾಹ್ಮಣರ ಆರಾಧನೆಯನ್ನು ತಪ್ಪಿಸಬೇಡ. ಧಾರ್ಮಿಕನಾಗಿಯೇ ಭಾಗ್ಯವಂತನೂ ದೀರ್ಘಾಯುಷ್ಯ-ವಂತನಾಗಿ, ಸುಖವಾಗಿ ಬಾಳು ಎಂದು ಹೃದಯ ತುಂಬಿ ಹರಸಿದಳು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಸ್ವಪ್ನ ಕಥನ ಎಂಬ ಇಪ್ಪತ್ತನಾಲ್ಕನೇ ಅಧ್ಯಾಯ ಮುಗಿದುದು*

—o—

## ಉತ್ತರಾಧಿಕಾರಿ ಆಯ್ಕೆಯ ಉಪಾಯ ಸೂಚನೆ | ಅಧ್ಯಾಯ - ೨೫

**ವಿಶ್ವಾಮಿತ್ರ :-** ರಾಜನೆ, ಕೌಂಡಿಣ್ಯ ಪಟ್ಟಣವನ್ನು ನೀತಿವಂತನೂ ಬುದ್ಧಿವಂತನೂ, ಗುಣವಂತನೂ, ಶೌರ್ಯವಂತನೂ ಆದ ಚಂದ್ರಸೇನ ಎಂಬ ರಾಜನು ಧರ್ಮದಿಂದ ಆಳುತ್ತಲಿದ್ದನು. ಅವನು ಕಾಲಪ್ರಾಪ್ತವಾದ ಮೃತ್ಯುವನ್ನು ಮುಪ್ಪಿನ ಕಾಲದಲ್ಲಿ ಹೊಂದಿದನು. ಪುಣ್ಯಾತ್ಮನಾದ ಅವನನ್ನು ಕರೆದೊಯ್ಯಲು ದೇವಲೋಕದಿಂದ ದಿವ್ಯವಿಮಾನವೊಂದು ಬಂದಿತು. ಅದರಲ್ಲಿ ಕುಳಿತು ಅವನು ಸ್ವರ್ಗಾರೋಹಣ ಮಾಡಿದನು.

ಮಹಾರಾಜನ ಆಕಸ್ಮಿಕವಾದ ಮರಣದ ಸುದ್ಧಿಯನ್ನು ಕೇಳಿ ನಾಗರಿಕರು, ಮಂತ್ರಿಗಳು ದಿಗ್ಭ್ರಾಂತರಾದರು, ಹಾಹಾಕಾರ ಮಾಡಿದರು. ಪಟ್ಟಮಹಿಷಿಯಾದ ಸುಲಭಾ ದೇವಿಯು ದುಃಸ್ಸಹವಾದ ದುಃಖದಿಂದ ದೀನದೀನಳಾಗಿ ವಿಲಾಪ ಮಾಡಿದಳು. ಅದರಂತೆ ಮಹಾರಾಜನ ಸುಮಂತನು, ಮನೋರಂಜನ ಎಂಬ ಇಬ್ಬರು ಮುಖ್ಯಮಂತ್ರಿಗಳು ದುಃಖಾತಿರೇಕದಿಂದ ಶೋಕಿಸಿದರು. ಮುಂದೆ ಏನು ಗತಿ ? ಎಂಬ ಚಿಂತೆ ಅವರನ್ನು ಕಾಡತೊಡಗಿತು. ಈ ರಾಷ್ಟ್ರವು ಅನಾಥವಾಗುವ ಪ್ರಸಂಗ ಬಂದಿತು. ವೈರಿಗಳು ಆಕ್ರಮಣ ಮಾಡಿದರೆ ಈ ರಾಜ್ಯವನ್ನು ಪಾಲಿಸುವವರು ಯಾರು ಎಂದು ಅವರು ಹಲುಬಿದರು. ಆಗ ಅತ್ಯಂತ ಬುದ್ಧಿಶಾಲಿಯೂ, ಸಮಯೋಚಿತ ಕರ್ತವ್ಯ ಕರ್ಮವನ್ನು ಅರಿತವನೂ ಆದ ಒಬ್ಬ ವಿಪ್ರನು, ಅವರೆಲ್ಲರನ್ನು ಸಂತೈಸಿ, ಮಹಾರಾಣಿ ಸುಲಭಾದೇವಿಗೂ ಸಮಾಧಾನವನ್ನು ಹೇಳಿ, ಕಾಲಪ್ರಾಪ್ತವಾದ ಮಹಾರಾಜನ ಮರಣಕ್ಕೆ ಯಾರೂ ದುಃಖಿಸದೆ ರಾಜನ ಅಂತ್ಯ ಸಂಸ್ಕಾರವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿ ಎಂದು ಹೇಳಿದನು.

ಬ್ರಾಹ್ಮಣೋತ್ತಮನ ಉಪದೇಶದಂತೆ ಮಹಾರಾಣಿಯು, ಮಂತ್ರಿಗಳೂ, ನಾಗರಿಕರೂ, ದುಃಖವನ್ನು ಕಡಿಮೆ ಮಾಡಿಕೊಂಡು ಮಹಾರಾಜನಿಗೆ ಮಾಡಬೇಕಾದ ಔರ್ಧ್ವದೇಹಿಕ ವಿಧಿ-ವಿಧಾನಗಳನ್ನೆಲ್ಲ ಸಾಂಗವಾಗಿ ನೆರವೇರಿಸಿದರು. ೧೩ ದಿನಗಳವರೆಗೆ ಮರಣೋತ್ತರ ಕಾರ್ಯಕ್ರಮಗಳನ್ನೆಲ್ಲ ವಿಧಿಪೂರ್ವಕ ನೆರವೇರಿಸಿ ಮೃತನಾದ ರಾಜನ ಹೆಸರಿನಿಂದ ಗೋದಾನ, ಭೂದಾನ, ಗೃಹದಾನ, ಸುವರ್ಣದಾನ, ವಸ್ತ್ರದಾನ ಮೊದಲಾದವುಗಳನ್ನು ಧಾರಾಳವಾಗಿ ಮಾಡಿ ಮೃತ ಮಹಾರಾಜನಿಗೆ ಸದ್ಗತಿ ದೊರಕುವಂತೆ ಮಾಡಿದರು.

ಅನಂತರ ಮುಂದೆ ಏನು ? ರಾಜ್ಯದ ವ್ಯವಸ್ಥೆ ಹೇಗೆ ? ಮಕ್ಕಳಿಲ್ಲದ ಮಹಾರಾಜನ ಅನಂತರ ಈ ರಾಜ್ಯಕ್ಕೆ ವಾರಸುದಾರರು ಯಾರು ? ಎಂಬ ಚಿಂತೆ ಎಲ್ಲರನ್ನು ಕಾಡತೊಡಗಿತು. ಆಗ ಕೌಂಡಿಣ್ಯಪಟ್ಟಣಕ್ಕೆ ಅಕಸ್ಮಾತ್ತಾಗಿ ಮುದ್ಗಲಮಹರ್ಷಿಗಳು ದಯಮಾಡಿಸಿದರು. ಅವರು ಚಿಂತಾಕ್ರಾಂತರಾದ ಮಹಾರಾಣಿ ಮತ್ತು ಮಂತ್ರಿ ಮಹೋದಯರಿಗೆಲ್ಲ ಹೀಗೆ ಹೇಳಿದರು.

**ಮುದ್ಗಲಮುನಿ :-** ಮಹನೀಯರೆ, ಈ ರಾಜ್ಯದ ಗಹನ ಎಂಬ ಹೆಸರಿನ ಪಟ್ಟದ ಆನೆಯು ಗತಿಸಿದ ಮಹಾರಾಜರ ಅಭಿಪ್ರಾಯವನ್ನು ಚೆನ್ನಾಗಿ ತಿಳಿದಿರುತ್ತದೆ. ಅದರ

ಕೈಯಲ್ಲಿ ಕಮಲಪುಷ್ಪಗಳಿಂದ ಮಾಡಿದ ಒಂದು ಮಾಲೆಯನ್ನು ಕೊಡಿರಿ. ಆ ಪಟ್ಟದಾನೆಯು ಕಮಲ ಪುಷ್ಪದ ಮಾಲೆಯನ್ನು ಯಾರ ಕೊರಳಿಗೆ ಹಾಕುವದೋ ಅವನನ್ನೆ ಈ ರಾಜ್ಯಕ್ಕೆ ದೊರೆಯನ್ನಾಗಿ ಮಾಡಿಕೊಳ್ಳಿರಿ.

ಮುದ್ಗಲಮುನಿಯ ಸಮಯೋಚಿತವಾದ ಆ ಉಕ್ತಿಯು ಸರಿಯಾದ ಯುಕ್ತಿ, ದೊರೆಯನ್ನು ಆಯ್ದುಕೊಳ್ಳಲು ಎಂದು ಎನ್ನಿಸಿತು ಎಲ್ಲ ಜನರಿಗೂ. ಅವರೆಲ್ಲ ಆ ಮಾತಿಗೆ ಸಂತೋಷದಿಂದ ಒಪ್ಪಿ ಮುದ್ಗಲಮುನಿಯನ್ನು ಪೂಜಿಸಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ರಾಜ್ಯದ ಉತ್ತರಾಧಿಕಾರಿ ಆಯ್ಕೆಯ ಉಪಾಯಸೂಚನೆ ಎಂಬ ಇಪ್ಪತ್ತೆದನೇ ಅಧ್ಯಾಯ ಮುಗಿದುದು*



## ಭೀಮಮಹಾರಾಜನ ಪ್ರಾರ್ಥನೆ

**ಅಧ್ಯಾಯ - ೨೬**

**ವಿಶ್ವಾಮಿತ್ರ :-** ಮಂತ್ರಿ ಮಹೋದಯರು ಮತ್ತು ಮಹಾರಾಣಿ ಸುಲಭಾದೇವಿಯು ಮುದ್ಗಲ ಮುನಿಯ ಮಾತಿನಂತೆ ಒಂದು ಶುಭಮುಹೂರ್ತದಲ್ಲಿ ಪಟ್ಟದ ಆನೆಯನ್ನು ಶೃಂಗರಿಸಿ, ಅರಮನೆಯ ಮುಂದೆ ತಂದು ನಿಲ್ಲಿಸಿದರು. ಸುಲಭಾರಾಣಿಯು ರತ್ನ ಖಚಿತವಾದ ಪುಷ್ಪಮಾಲೆಯೊಂದನ್ನು ಆನೆಯ ಕೈಯಲ್ಲಿ ಕೊಟ್ಟು ಕೈ ಮುಗಿದು, "ಗಜರಾಜ, ಈ ರಾಜ್ಯಕ್ಕೆ ಯೋಗ್ಯನಾದ ದೊರೆಯನ್ನು ನೀನೆ ಹುಡುಕಿ, ಅರ್ಹನಾದವನ ಕೊರಳಿಗೆ ಈ ಮಾಲೆಯನ್ನು ಹಾಕು" ಎಂದು ಬೇಡಿಕೊಂಡಳು. ರಾಣಿಯ ಆಜ್ಞೆಯನ್ನು ಶಿರಸಾ ವಹಿಸಿದಂತೆ ಆ "ಗಹನ" ಎಂಬ ಪಟ್ಟದ ಆನೆಯು ತನ್ನ ತಲೆಯನ್ನು ತೂಗಿ ಮಾಲೆಯನ್ನು ಎತ್ತಿಕೊಂಡು ನಗರದಲ್ಲಿ ಸಂಚರಿಸತೊಡಗಿತು. ದಾರಿಗುಂಟ, ಅನೇಕ ನಾಗರಿಕರು, ರಾಜಕಾರಣಿಗಳು, ಪಂಡಿತರು, ಶ್ರೀಮಂತರು, ಧೀಮಂತರು ತಮಗೆ ರಾಜ್ಯವು ದೊರೆಯಲಿ ಎಂಬ ಆಸೆಯಿಂದ ಊರ ತುಂಬ ಓಣಿ ತುಂಬ ಓಡಾಡತೊಡಗಿದರು. ಜನರಿಂದ ಕಿಕ್ಕಿರಿದು ತುಂಬಿದ ಎಲ್ಲ ಮಹಾಜನರನ್ನು ಆನೆಯು ದೂರಿಂದಲೆ ಮೂಸಿ ಮುಖ ತಿರುಗಿಸಿಕೊಂಡು ಮುಂದೆ ಮುಂದೆ ನಡೆಯಿತು. ಯಾರ ಕೊರಳಿಗೂ ಮಾಲೆ ಹಾಕಲಿಲ್ಲ. ಪಟ್ಟಣವನ್ನು ದಾಟಿ, ನಗರವನ್ನು ನಾಗರಿಕರನ್ನು ಬಿಟ್ಟು ಮುಂದೆ ಹೋದ ಆನೆಯು, ಆ ಕೌಂಡಿಣ್ಯನಗರದ ಸಮೀಪದ ಒಂದು ಅರಣ್ಯವನ್ನು ಪ್ರವೇಶಿಸಿತು. ಅಲ್ಲಿ ಧ್ಯಾನಾಸಕ್ತನಾಗಿ ಕುಳಿತು ಗಣಪತಿಯನ್ನು ಭಕ್ತಿಯಿಂದ ಪೂಜಿಸುತ್ತಿದ್ದ ಕಮಲೆಯ ಮಗನಾದ ದಕ್ಷನನ್ನು ನೋಡಿತು. ಅವನನ್ನು ಕಂಡ ಕೂಡಲೆ ಬಹಳ ಉತ್ಸಾಹದಿಂದ ಆ ಗಜೇಂದ್ರನು ಅವನ ಬಳಿಗೆ ಧಾವಿಸಿ ಬಂದು ತನ್ನ ಶುಂಡಾದಂಡದಲ್ಲಿದ್ದ ಪುಷ್ಪಮಾಲೆಯನ್ನು ಅವನ ಕೊರಳಿಗೆ ಹಾಕಿತು. ಕೂಡಲೆ, ರಾಜ್ಯದ ಮುಖ್ಯಸಚಿವರು ಹಾಗೂ ಸೇವಕರು ದಕ್ಷನನ್ನೇ ತಮ್ಮ ಮುಂದಿನ ಮಹಾರಾಜ ಎಂದು ತಿಳಿದು ಅವನಿಗೆ ಆನೆಯ ಸಂಗಡ ತಾವು ತಂದ ದಿವ್ಯ ವಸ್ತ್ರ, ಹಾರ, ರತ್ನಾಭರಣಗಳನ್ನು ಒಪ್ಪಿಸಿದರು. ಅವನನ್ನು ಅದೇ ಆನೆಯ ಮೇಲೆ ಕೂಡಿಸಿಕೊಂಡು ಅರಮನೆಗೆ ಕರೆದುಕೊಂಡು ಹೋದರು. ಅವನ ತಾಯಿಯಾದ ಕಮಲಾದೇವಿಯನ್ನು ಪೂಜಿಸಿ, ಮೆಲ್ಲಗೆ

ಕೂಡಿಸಿಕೊಂಡು ಮೆರವಣಿಗೆಯಲ್ಲಿ ಕರೆದೊಯ್ದರು. ದಕ್ಷನನ್ನು ಸಿಂಹಾಸನದ ಮೇಲೆ ಕೂಡಿಸಿ ವಿಧಿಪೂರ್ವಕವಾಗಿ ಪಟ್ಟಾಭಿಷೇಕವನ್ನು ಮಾಡಿದರು. ದಕ್ಷನು ಸಿಂಹಾಸನಾರೂಢನಾದ ಬಳಿಕ ತನಗೆ ಮಂತ್ರೋಪದೇಶವನ್ನು ಇತ್ತು, ಈ ಉನ್ನತ ಸ್ಥಿತಿಗೆ ಬರಲು ಕಾರಣವಾದ ಮುದ್ಗಲಮಹರ್ಷಿಯನ್ನು ರಾಜಮರ್ಯಾದೆಯಿಂದ ಕರೆತರಲು ತನ್ನ ಮುಖ್ಯಮಂತ್ರಿಯಾದ ಸುಮಂತುವನ್ನು ಕಳುಹಿಸಿಕೊಟ್ಟನು.

ರಾಜನ ಪ್ರಾರ್ಥನೆಯಂತೆ ಅರಮನೆಗೆ ದಯಮಾಡಿಸಿದ ಆ ಮಹಾಮಹರ್ಷಿಯನ್ನು ದಕ್ಷನು ಸಂಭ್ರಮದಿಂದ ಸ್ವಾಗತಿಸಿ ತನ್ನ ಸಿಂಹಾಸದಲ್ಲಿ ಕೂಡಿಸಿ ಸತ್ಕರಿಸಿದನು. ಮತ್ತು ಅವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ''ಪೂಜ್ಯರೆ, ನಿಮ್ಮ ಅನುಗ್ರಹದಿಂದ ನನ್ನ ದೇಹದಲ್ಲಿ ನೆಲೆಸಿದ್ದ ಭಯಂಕರವಾದ ರೋಗಗಳು ನಾಶವಾದವು. ಕಳೆದು ಹೋದ ಇಂದ್ರಿಯ ಪಾಟವವೂ ಮರಳಿಬಂದಿತು. ಅಲ್ಲದೆ ಅನಿರೀಕ್ಷಿತವಾದ ರಾಜ್ಯಾಧಿಕಾರವೂ ಲಭಿಸಿತು. ತಮ್ಮ ಮಹಿಮೆ ಅಗಾಧ. ತಮ್ಮ ಕರುಣೆ ಅಪಾರ. ನಿಜವಾಗಿಯೂ ನೀವು ಮಹಾಗಣಪತಿಯ ಸ್ವರೂಪವೇ ಆಗಿರುವಿರಿ. ನಿಮ್ಮ ಅಮೃತಹಸ್ತವನ್ನು ನನ್ನ ತಲೆಯ ಮೇಲೆ ಇರಿಸಿರಿ. ನನ್ನನು ಹರಿಸರಿ, ಪೂರ್ಣ ಅನುಗ್ರಹವನ್ನು ಮಾಡಿರಿ. ಎಂದು ಬೇಡಿಕೊಂಡರು.

**ಮುದ್ಗಲಮುನಿ :-** ರಾಜನೆ, ನಿನಗೆ ಎಂದಿಗೂ ಶತ್ರುಗಳಿಂದ ಭೀತಿ ಉಂಟಾಗುವುದಿಲ್ಲ. ನೀನು ಬಯಸಿದ ಇಷ್ಟಾರ್ಥಗಳೆಲ್ಲವೂ ಪೂರ್ಣವಾಗುವುವು. ಜಗದೀಶ್ವರನಾದ ಗಜಾನನನ ಸಂಪೂರ್ಣ ಅನುಗ್ರಹ ನಿನ್ನ ಮೇಲೆ ನಿರಂತರವೂ ಇರುವುದು.

ಹೀಗೆ ಹೃತ್ಪೂರ್ವಕವಾಗಿ ಅಶೀರ್ವದಿಸಿದ ಮುದ್ಗಲ ಮಹಾಮುನಿಗೆ ದಕ್ಷ ಮಹಾರಾಜನು ದಿವ್ಯವಸ್ತ್ರ, ದ್ರವ್ಯ ಮೊದಲಾದವುಗಳನ್ನು ದಾನ, ದಕ್ಷಿಣೆಯಾಗಿ ಇತ್ತು, ಅನೇಕ ಗ್ರಾಮಗಳನ್ನು ಬಳುವಳಿಯಾಗಿ ಕೊಟ್ಟನು ಮತ್ತು ಉಳಿದೆಲ್ಲ ಬ್ರಾಹ್ಮಣೋತ್ತಮರಿಗೂ ಗೋದಾನ, ಭೂದಾನ, ವಸ್ತ್ರದಾನಗಳನ್ನು ಉದಾರ ದೃಷ್ಟಿಯಿಂದ ನೀಡಿದನು. ಅರಮನೆಯಂತೆ ದಿವ್ಯ ಭವ್ಯವಾದ ಒಂದು ಗಣಪತಿಯ ಮಂದಿರವನ್ನು ಕಟ್ಟಿಸಿದನು. ಆ ನಗರದಲ್ಲಿ ಪುರಾತನ ದೇವಾಲಯಗಳನ್ನೆಲ್ಲ ಜೀರ್ಣೋದ್ಧಾರ ಮಾಡಿದನು.

ರೋಗಿಷ್ಠನಾಗಿ, ತನ್ನ ತಾಯಿಯಾದ ಕಮಲೆಯ ಜೊತೆಗೆ ಊರು ಬಿಟ್ಟು ಹೊರಗೆ ಹಾಕಿಸಿಕೊಂಡ ದಕ್ಷನು ಮಹಾಮಹಿಮರಾದ ಮುದ್ಗಲ ಮುನಿಪುಂಗವರ ಕೃಪೆಯಿಂದ ಆರೋಗ್ಯವಂತನೂ, ಭಾಗ್ಯವಂತನೂ ಆಗಿ ಕೌಂಡಿಣ್ಯ ಪಟ್ಟಣಕ್ಕೆ ರಾಜನಾಗಿರುವನು ಎಂಬ ಸುದ್ದಿಯನ್ನು ಕರ್ಣಾಕರ್ಣಿಕೆಯಿಂದ ವಲ್ಲಭ ಮಹಾರಾಜನು ಕೇಳಿದನು. ಅವನಿಗೆ ರೋಗಾರ್ತನಾದ ತನ್ನ ಮಗನನ್ನೂ ಪತಿವ್ರತೆಯಾದ ತನ್ನ ಮಡದಿ ಕಮಲೆಯನ್ನೂ ಮನೆ ಬಿಟ್ಟು ಹೊರಗೆ ಹಾಕಿದ್ದಕ್ಕಾಗಿ ಪಶ್ಚಾತ್ತಾಪವೆನ್ನಿಸಿತು. ಅವನು ಕೌಂಡಿಣ್ಯನಗರಕ್ಕೆ ಆಶ್ಚರ್ಯ, ಆನಂದಗಳಿಂದ ಒಡಗೂಡಿ, ಧಾವಿಸಿಬಂದನು. ದಕ್ಷ ಮತ್ತು ಕಮಲೆಯರು ಹಿಂದಿನದೆಲ್ಲವನ್ನು ಮರೆತು, ಮಹಾರಾಜರನ್ನು ತುಂಬು ಹೃದಯದಿಂದ ಸ್ವಾಗತಿಸಿದರು. ದಕ್ಷನು ಹಾಗೂ ಕಮಲೆಯು ತಮ್ಮ ಪಿತ ಹಾಗೂ ಪತಿಯಾದ ಮಹಾರಾಜನೊಂದಿಗೆ ಪುನರ್ಮಿಲನಹೊಂದಿ ಆನಂದದಿಂದ ಇದ್ದರು.

ದಕ್ಷ ಕೀರ್ತಿಯು ಮೂರು ಲೋಕಗಳಲ್ಲಿಯೂ ಪ್ರಸಾರ ಹೊಂದಿತು. ಆ ಕಾಲದಲ್ಲಿ ವೀರಸೇನನೆಂಬ ಮಹಾರಾಜನಿಗೆ ಗಣೇಶನು ಸ್ವಪ್ನದಲ್ಲಿ ಹೋಗಿ ದಕ್ಷನಿಗೆ ನಿನ್ನ ಮಗಳನ್ನು ಕೊಡು ಎಂದು ಆಜ್ಞೆ ಮಾಡಿದನು. ಅದರಂತೆ ವೀರಸೇನ ಮಹಾರಾಜನು, ಕೌಂಡಿಣ್ಯ ಪಟ್ಟಣಕ್ಕೆ ಬಂದನು. ತ್ರಿಲೋಕ ಸುಂದರಿಯಾದ ತನ್ನ ಮಗಳನ್ನು ದಕ್ಷನಿಗೆ ಕೊಟ್ಟು ವೈಭವದಿಂದ ವಿವಾಹ ನೆರವೇರಿಸಿದನು.

ವೀರಸೇನ ಪುತ್ರಿಯಲ್ಲಿ ದಕ್ಷ ಮಹಾರಾಜನಿಗೆ ಬೃಹದ್ಭಾನು ಎಂಬ ಪ್ರಖ್ಯಾತನಾದ ಪುತ್ರನು ಜನಿಸಿದನು. ಬೃಹದ್ಭಾನುವಿಗೆ ಖಡ್ಗಧರನೂ, ಖಡ್ಗಧರನಿಗೆ ಸುಲಭನೂ ಮಕ್ಕಳಾಗಿ ಜನಿಸಿದರು. ಸುಲಭನ ಮಗನೆ ಪದ್ಮಾಕರ. ಪದ್ಮಾಕರನ ಸುಪುತ್ರ ಪುರ್ದೀಪ್ತ. ಪುರ್ದೀಪ್ತ ಮಹಾರಾಜನಿಗೆ ಚಿತ್ರಸೇನ ಎಂಬ ಮುತ್ತಿನಂಥ ಮಗನು ಹುಟ್ಟಿದನು. ಆ ಚಿತ್ರಸೇನ ಮಹಾರಾಜನೇ ನಿನ್ನ ತಂದೆ.

ವಿಶ್ವಾಮಿತ್ರ ಮಹರ್ಷಿಗಳ ಮುಖದಿಂದ ಚಿತ್ರಸೇನ ಮಹಾರಾಜನ ಮಗನಾದ ಭೀಮರಾಜನು ತನ್ನ ವಂಶ ಪರಂಪರೆಯ ಚರಿತ್ರೆ ಕೇಳಿ ಸಂತೋಷಭರಿತನಾದನು.

ಭೀಮಮಹಾರಾಜನಿಗೆ ತನ್ನ ಪೂರ್ವಜರಾದ ರಾಜರು ಮಹಾಗಣಪತಿಯ ವರಪ್ರಸಾದದಿಂದ ತಮಗೆ ಬಂದ ಸಕಲವಿಧವಾದ ಕಷ್ಟನಷ್ಟಗಳಿಂದ ಪಾರಾಗಿ, ಹೊಸಹೊಸ ರಾಜ್ಯಗಳನ್ನುಗಳಿಸಿ ಕೀರ್ತಿವಂತರಾದರು. ಇಂಥ ಮಹನೀಯರ ವಂಶದಲ್ಲಿ ಹುಟ್ಟಿದರೂ ನಾನು ನನ್ನ ಹಿಂದಿನ ಜನ್ಮದಲ್ಲಿ ಅವಿವೇಕದಿಂದ ನಡೆಸಿದ ಅಚಾತುರ್ಯದ ಪರಿಣಾಮವಾಗಿ ಈಗ ಸಂತತಿ ಇಲ್ಲದೆ ದುಃಖಿಸುತ್ತಿರುವೆನು. ಇನ್ನಾದರೂ ದೇವೋತ್ತಮನಾದ ಶ್ರೀ ಗಣೇಶನನ್ನು ಸಾಕ್ಷಾತ್ಕರಿಸಿಕೊಂಡು ಮುಂದೆ ಬರಬಹುದಾದ ದುಃಖಗಳಿಂದ ಪಾರಾಗಬೇಕು ಎಂದು ಬಯಸಿದನು. ಋಷಿಪುಂಗವರಾದ ವಿಶ್ವಾಮಿತ್ರರನ್ನು ಕುರಿತು ಕೇಳಿಕೊಂಡನು.

**ಭೀಮಮಹಾರಾಜ :-** ಮುನಿವರ್ಯರೆ, ದೇವೇಶನಾದ ಗಣೇಶನು ನನಗೆ ಹೇಗೆ ಪ್ರಸನ್ನನಾಗುವನು ? ಅದಕ್ಕಾಗಿ ನಾನು ಯಾವ ಉಪಾಯವನ್ನು ಕೈಕೊಳ್ಳಬೇಕು ? ದಯಮಾಡಿ ಆ ಭಗವಂತನ ಸಾಕ್ಷಾತ್ಕಾರಕ್ಕೆ ನಾನು ಮಾಡಬೇಕಾದ ಉಪಾಯವನ್ನು ತಿಳಿಸಿರಿ, ಎಂದು ವಿನಯದಿಂದ ಪ್ರಾರ್ಥಿಸಿದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಭೀಮಮಹಾರಾಜನ ಪ್ರಾರ್ಥನೆ ಎಂಬ ಇಪ್ಪತ್ತಾರನೇ ಅಧ್ಯಾಯ ಮುಗಿದುದು*

—o—

**ವೇದವ್ಯಾಸ :-** ಪಿತಾಮಹನೇ, ವಿಶ್ವಾಮಿತ್ರನು ಧೀರ, ಧೀಮಂತ, ಕರುಣಾಶಾಲಿ. ಅವನು ಭೀಮರಾಜನಿಗೆ ಗಣನಾಯಕನು ತ್ವರಿತದಲ್ಲಿ ಪ್ರತ್ಯಕ್ಷ ಗೋಚರನಾಗುವ ಯಾವ ಉಪಾಯವನ್ನು ಹೇಳಿದನು ? ಅದನ್ನು ನನಗೆ ವಿವರಿಸು, ನನ್ನ ಮೇಲೆ ದಯೆ ತೋರು.

ಪ್ರಾಣಿಗೆ ಮೃತ್ಯುಕಾಲವು ಸನ್ನಿಹಿತವಾದರೆ ಅದು ಧಿಗ್ಭ್ರಾಂತವಾಗಿ ಹೇಗೆ ತೊಳಲಾಡುವದೋ ಅದರಂತೆ ನನ್ನ ಮನಸ್ಸು ಕೂಡ ತಳಮಳಿಸುತ್ತದೆ. ಮೃತರು ಅಮೃತಪಾನದಿಂದ ಪುನರುಜ್ಜೀವನಗೊಳ್ಳುವಂತೆ ಈ ಕಥಾಮೃತಪಾನದಿಂದ ನನ್ನ ಮನಸ್ಸು ಕಳವಳವನ್ನು ಕಳೆದುಕೊಂಡು ಪ್ರಸನ್ನವಾಗುವದು.

**ಬ್ರಹ್ಮ :-** ತಪ್ಪಸಿದ್ಧವಾದ ವಿಶ್ವಾಮಿತ್ರ ಮಹಾಋಷಿಯು ಭೀಮಮಹಾರಾಜನಿಗೆ ಹೇಳಿದ ಉಪಾಯವನ್ನು ನಾನು ನಿನಗೆ ವಿವರಿಸುತ್ತೇನೆ. ಸಾವಧಾನಚಿತ್ತದಿಂದ ಆಲಿಸು. ಮುನಿಯು ಒಂದೇ ಅಕ್ಷರವಾದ 'ಗಂ' ಎಂಬ ಗಣೇಶನ ಮೂಲ ಮಹಾಮಂತ್ರವನ್ನು ಭೀಮನಿಗೆ ಉಪದೇಶಿಸಿದನು. ಆ ಸಂಗತಿಯನ್ನೆಲ್ಲಾ ನಾನು ನಿನಗೆ ವಿಸ್ತರಿಸಿ ಹೇಳುತ್ತೇನೆ ಕೇಳು.

**ವಿಶ್ವಾಮಿತ್ರ :-** ''ರಾಜನೇ, ನಿನ್ನ ಪೂರ್ವಜನಾದ ದಕ್ಷ ಪ್ರಜಾಪತಿಯು ನಿರ್ಮಿಸಿದ ಶ್ರೀಗಣೇಶನ ದೇವಾಲಯದಲ್ಲಿ ನೀನು ವಾಸಮಾಡು. ಅಲ್ಲಿ ಇರುವ ಗಣನಾಯಕನನ್ನು ಆರಾಧಿಸಿ, ಏಕಾಕ್ಷರ ಮೂಲಮಂತ್ರವನ್ನು ಭಕ್ತಿಯಿಂದ ಜಪ ಮಾಡು. ಅದರಿಂದ ವಿನಾಯಕ ದೇವನು ಪ್ರಸನ್ನನಾಗಿ ನಿನಗೆ ಧರ್ಮ, ಅರ್ಥ, ಕಾಮ ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ನೀಡುವನು. ನಿನಗೆ ಮತ್ತೆ ಬೇರೆ ಯಾವುದಾದರೂ ಅಪೇಕ್ಷೆಯಿದ್ದರೆ ಅದನ್ನು ಕೂಡ ಪೂರೈಸುವನು. ನೀನು ಈಗ ನಿನ್ನ ರಾಜಧಾನಿಗೆ ತೆರಳು, ಯಾವ ಚಿಂತೆಯನ್ನು ಮಾಡಬೇಡ.''

ವಿಶ್ವಾಮಿತ್ರರ ಈ ಹಿತಕರವಾದ ನುಡಿಯನ್ನು ಕೇಳಿ ಭೀಮರಾಜ ದಂಪತಿಗಳು ಅವರಿಗೆ ನಮಸ್ಕಾರಮಾಡಿ, ತಮ್ಮ ರಾಜಧಾನಿಗೆ ಮರಳಿದರು. ರಾಜಧಾನಿಯಲ್ಲಿ ರಾಜದಂಪತಿಗಳನ್ನು ಮಂತ್ರಿಗಳು, ನಾಗರೀಕರು ಆದರದಿಂದ ಎದುರುಗೊಂಡು ಸ್ವಾಗತಿಸಿ ಗೌರವಿಸಿದರು. ಭೀಮರಾಜನು ಮತ್ತು ಮಹಾರಾಣಿ ಚಾರುಹಾಸಿನಿಯು ನಾಗರೀಕರೂ, ಮಂತ್ರಿಸೇನಾಪತಿಗಳೂ ತಮಗೆ ನೀಡಿದ ಸ್ವಾಗತ, ಮಾಡಿದ ಸತ್ಕಾರಗಳಿಂದ ಹಾಗೂ ಪ್ರಜರು ಮಾಡಿದ ತಮ್ಮ ಗುಣಗಾನದಿಂದ ಪರಮಸಂತುಷ್ಟರಾದರು.

ಪೂರ್ವಕಾಲದಲ್ಲಿ ದಕ್ಷ ಪ್ರಜಾಪತಿಯು ನಿರ್ಮಿಸಿದ, ಹಾಗೂ ಕೌಂಡಿಣ್ಯ ಪಟ್ಟಣದಲ್ಲಿ ಸ್ಥಾಪಿಸಿದ ಶ್ರೀ ಗಣೇಶನ ದೇವಾಲಯಕ್ಕೆ ಶುಭಮುಹೂರ್ತದಲ್ಲಿ ಮಹಾರಾಜನು ಚಿತ್ತೈಸಿದನು. ಪ್ರಭು ಗಣಾಧೀಶನ ಆ ಮೂರ್ತಿಯನ್ನು ಉಪವಾಸವಿದ್ದು, ಗಣೇಶನ ಏಕಾಕ್ಷರ ಮೂಲಮಹಾಮಂತ್ರವನ್ನು ಭಕ್ತಿಯಿಂದ ಜಪಿಸತೊಡಗಿದನು. ಕೂತಾಗ, ನಿಂತಾಗ,

ಭೋಜನ ಮಾಡುವಾಗ, ನಡೆಯುವಾಗ, ನುಡಿಯುವಾಗ, ಆ ಭೀಮಮಹಾರಾಜನು ಗಣೇಶ ಮಂತ್ರ ಜಪವನ್ನು ಮಾಡುತ್ತಲೇ ಇದ್ದನು. ಭಕ್ತವತ್ಸಲನಾದ ವಿನಾಯಕ ಮಹಾಪ್ರಭುವು ಏಕಾಗ್ರಚಿತ್ತದ ಆ ರಾಜನ ಧ್ಯಾನೋಪಾಸನಗಳಿಗೆ ಮೆಚ್ಚಿದನು. ಅವನು ಪ್ರತ್ಯಕ್ಷ ಗೋಚರನಾದನು. 'ಬೇಕಾದ ವರ ಬೇಡಿಕೋ' ಎಂದು ಹೇಳಿದನು. ಅದಕ್ಕೆ ಭೀಮಮಹಾರಾಜನು ನಿಸ್ಪೃಹನಾಗಿ ''ನಿನ್ನ ಚರಣಕಮಲದಲ್ಲಿ ನಿರಂತರ ಭಕ್ತಿಯ ಹೊರತು ನನಗೆ ಬೇರೆ ಏನೂ ಬೇಡ'' ಎಂದು ಹೇಳಿದನು.

ಮಹಾರಾಜನ ನಿಷ್ಕಾಮ ಸೇವೆಗೆ ಸಂತುಷ್ಟನಾದ ಗಣಾಧ್ಯಕ್ಷನು ''ಮಹಾರಾಜ, ನಿನಗೆ ಸುಂದರಾಕಾರನಾದ ಓರ್ವ, ಸದ್ಗುಣ ಪುತ್ರನು ಜನಿಸುವನು. ನೀನು ನಿನ್ನ ಅರಮನೆಗೆ ತೆರಳು. ದೇವಬ್ರಾಹ್ಮಣರ ಆರಾಧನೆಯಲ್ಲಿ ಆಸಕ್ತನಾಗು'' ಎಂದು ಅನುಗ್ರಹಿಸಿದನು.

ಗಣೇಶನ ವಚನದಂತೆ ಮಹಾರಾಜನಿಗೆ ಓರ್ವ ಗಂಡು ಮಗು ಹುಟ್ಟಿತು. ಬಂಗಾರ ಬಣ್ಣದಿಂದ ಕಂಗೊಳಿಸುವ ಆ ಕುಮಾರನ ದೇಹಕಾಂತಿಗೆ ರಾಜನು ಅನುಗುಣವಾಗುವಂತೆ **''ರುಕ್ಮಾಂಗದ''** ಎಂದು ಹೆಸರಿಟ್ಟನು. ರಾಜಕುಮಾರನಾದ ರುಕ್ಮಾಂಗದನು ಗುರುಕುಲದಲ್ಲಿ ಅಭ್ಯಾಸಮಾಡಿ ಸರ್ವವಿದ್ಯಾಪಾರಂಗತನಾದನು. ವ್ಯಾಯಾಮ ಅಂಗಸಾಧನೆಯನ್ನು ಮಾಡಿ, ದೈಹಿಕ ಶಕ್ತಿಯನ್ನೂ ಶಸ್ತ್ರ, ಶಾಸ್ತ್ರಾಭ್ಯಾಸಮಾಡಿ ಬುದ್ಧಿಶಕ್ತಿಯನ್ನೂ ಪಡೆದನು. ಅವನು ಪ್ರೌಢವಯಸ್ಸಿಗೆ ಬಂದ ಬಳಿಕ ಭೀಮಮಹಾರಾಜನು, ಮಂತ್ರಿ, ಪುರೋಹಿತ, ಪ್ರಜೆಗಳ ಅಭಿಪ್ರಾಯದಂತೆ ಸಿಂಹಾಸನದಮೇಲೆ ಕೂಡಿಸಿ ಯೌವ್ವರಾಜ್ಯಾಭಿಷೇಕವನ್ನು ಮಾಡಿದನು.

ಯೌವ್ವರಾಜ್ಯದಲ್ಲಿ ಪಟ್ಟಾಭಿಷಿಕ್ತನಾದ ರುಕ್ಮಾಂಗದನು ತನ್ನ ತಂದೆಯಿಂದ ಮಹಾಗಣಪತಿಯ ಏಕಾಕ್ಷರ ಮೂಲ ಮಹಾಮಂತ್ರವನ್ನು ಉಪದೇಶ ಪಡೆದನು. ಪ್ರತಿದಿನವು ಭಕ್ತಿಯಿಂದ ಜಪಿಸುತ್ತಾ ಇದ್ದನು.

ಒಂದು ದಿನ ಯುವರಾಜನು ಬೇಟೆಗಾಗಿ ಒಂದು ಕಾಡಿನಲ್ಲಿ ಹೊಕ್ಕು ಕ್ರೂರಮೃಗಗಳನ್ನು ಕೊಂದು ಮೃಗಯಾವಿಹಾರವನ್ನು ಮಾಡಿದನು. ಕಾಡುಬಿಟ್ಟು, ನಾಡಿಗೆ ನುಗ್ಗಿ, ಪ್ರಜಾಜನರನ್ನು ಹಿಂಸಿಸುತ್ತಲಿರುವ ಕ್ರೂರ ಶ್ವಾಪದಗಳನ್ನೆಲ್ಲಾ ಕೊಂದು ಕೊಚ್ಚಿ ಹಾಕಿದನು. ಈ ಬೇಟೆಯಿಂದ ಅವನಿಗೆ ಬಳಲಿಕೆಯಾಯಿತು. ಹೊತ್ತು ನೆತ್ತಿಗೆ ಏರಿದಾಗ ಬಿಸಿಲಿನ ಬೇಗೆಯಿಂದ ಬಾಯಾರಿ ಬಸವಳಿದನು. ಸುತ್ತಲೂ ದೃಷ್ಟಿ ಹಾಯಿಸಿ ನೋಡಿದಾಗ ಅವನಿಗೆ ಒಂದು ಋಷಿಯ ಆಶ್ರಮವು ಕಾಣಿಸಿತು. ಆ ಆಶ್ರಮದ ಸುತ್ತಲೂ ಬಗೆಬಗೆಯ ಬಳ್ಳಿ, ಮರಗಳು ಬೆಳೆದು ಅದೊಂದು ಗಾಢಗೂಢವಾದ ಏಕಾಂತ ಪರ್ಣಕುಟೀರವಾಗಿ ಕಂಗೊಳಿಸುತ್ತಿತ್ತು. ಅಲ್ಲಿಯ ಮಹಾಮುನಿಗಳ ತಪೋಮಹಿಮೆಯಿಂದ ಅಲ್ಲಿ ವಾಸಿಸುವ ಕ್ರೂರ ಪ್ರಾಣಿಗಳು ತಮ್ಮ ಜಾತಿವೈರವನ್ನು ಮರೆತು ಪರಸ್ಪರ ಪ್ರೀತಿಯಿಂದ ಬೆರತು ಸ್ನೇಹದಿಂದ ಕ್ರೀಡಿಸುತ್ತಿದ್ದವು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಯಾವ್ವರಾಜ್ಯಾಭಿಷೇಕ ವರ್ಣನೆ ಎಂಬ ಇಪ್ಪತ್ತೇಳನೇ ಅಧ್ಯಾಯ ಮುಗಿದುದು*

—o—

## ಮಹಾರಾಜನ ಪ್ರಾಯೋಪವೇಶನ

**ಅಧ್ಯಾಯ - ೨೮**

ಯುವರಾಜನಾದ ರುಕ್ಮಾಂಗದನು ಆ ಪುಣ್ಯಾಶ್ರಮದಲ್ಲಿ ವಾಸಮಾಡಿದ ವಾಚಕ್ನವಿ ಎಂಬ ಋಷಿ ಪುಂಗವನನ್ನೂ ಅವನ ಮಡದಿಯಾದ ಮುಕುಂದಾ ಎಂಬ ಮಂಜುಭಾಷಿಣಿಯಾದ ಮಹಿಳೆಯನ್ನೂ ನೋಡಿದನು. ಅವರಿಬ್ಬರಿಗೂ ರಾಜನು ನಮಸ್ಕರಿಸಿದನು. ಅನಂತರ ಮುನಿಯು ತನ್ನ ಸ್ನಾನ ಆನ್ಹಿಕಗಳನ್ನು ನೇರವೇರಿಸಲು ನದಿಗೆ ಹೋದನು. ಮಹಾರಾಜನಿಗೆ ಗಂಟಲುಆರಿ ಬಾಯಾರಿಕೆ ಬಹಳವಾಗಿತ್ತು. ಅವನು "ತಾಯಿ, ನನಗೆ ನೀರಡಿಕೆಯಾಗಿದೆ. ತಣ್ಣಗಿನ ನೀರನ್ನು ಕುಡಿಯಲು ಕೊಡು" ಎಂದು ಮುನಿಯ ಮಡದಿಗೆ ಕೇಳಿದನು.

ರಾಜಕುಮಾರ ರುಕ್ಮಾಂಗದ ರೂಪದಿಂದ ಚೆಲುವಿನ ಚಂದ್ರಾಮ, ಕಂದರ್ಪನಂತೆ ಕಮನೀಯ. ಅವನ ನಿಲವು, ಚೆಲುವುಗಳನ್ನು ಕಂಡು ಮುಕುಂದೆಯು ಮೋಹಗೊಂಡಳು. ಕಾಮಾತುರಳಾದ ಅವಳು ಲಜ್ಜೆಗೆಟ್ಟು ಅವನಲ್ಲಿ ಪ್ರಣಯ ಭಿಕ್ಷೆ ಬೇಡಿದಳು. ಕಾಮೋನ್ಮಾದದಿಂದ ಉತ್ತೇಜಿತಳಾದ ಅವಳು ಬಾಯಿಬಿಟ್ಟು ಹೇಳಿದಳು "ಮಹಾರಾಜ, ನೀನು ಮನ್ಮಥನಿಗಿಂತ ಚೆಲುವ, ಸುರ, ಅಸುರ ಯಕ್ಷಗಂಧರ್ವರಲ್ಲಿಯೂ ನಿನ್ನಂಥ ಸರ್ವಾಂಗ ಸುಂದರ ಪುರುಷನನ್ನು ನಾನು ಕಂಡಿಲ್ಲ. ನಿನ್ನ ಸಹಣೀಯವಾದ ರೂಪ ಸಿರಿಯನ್ನು ಕಂಡು ನನ್ನ ಮನಸ್ಸು ಮುಗ್ಧವಾಗಿದೆ. ನಾನು ಕಾಮಾಗ್ನಿಯಿಂದ ದಹಿಸಿ ಹೋಗುತ್ತಿದ್ದೇನೆ. ನಿನ್ನ ಗಾಢಾಲಿಂಗನ ಅಮೃತಪಾನದಿಂದ ನನ್ನ ಮನಸ್ಸನ್ನು ಸಂತೋಷಗೊಳಿಸು" ಎಂದು ಕೇಳಿದಳು.

ಆದರೆ ರಾಜಕುಮಾರ ಜಿತೇಂದ್ರಿಯ, ಧರ್ಮ, ಅಧರ್ಮಗಳ ಮರ್ಮವನ್ನು ಅರಿತ ದೈವಭಕ್ತ. ಅವನು ಮುಕುಂದೆಯ ಮಾತಿಗೆ ಮರುಳಾಗದೆ ಸ್ಪಷ್ಟವಾಗಿ ನುಡಿದ. "ತಾಯಿ, ನೀನು ಮಹಾತಪಸ್ವಿಯಾದ ವಾಚಕ್ನವಿ ಮುನಿಯ ಧರ್ಮಪತ್ನಿಯಲ್ಲವೇ! ನೀನು ಸ್ವಯಂ ತಪಸ್ವಿನಿ. ನೀನು ಉತ್ತಮಳು. ನಾನು ಕ್ಷತ್ರಿಯ, ನನ್ನೊಡನೆ ನೀನು ಕಾಮಭೋಗವನ್ನು ಬಯಸಿದರೆ ನೀ ಪತಿತಳಾಗುವೆ. ನಾನು ನಿನಗಿಂತ ವಯಸ್ಸಿನಲ್ಲಿ ಚಿಕ್ಕವ. ನನ್ನ ಮೇಲೆ ಪುತ್ರಪ್ರೇಮವನ್ನು ಇಡು. ಈ ಕಾಮಪ್ರೇಮವನ್ನು ಸುಡು, ಪರಸ್ತ್ರೀ ಗಮನ ಅತ್ಯಂತ ನಿಂದ್ಯ. ಅದಕ್ಕೆ ಎಂದೆಂದಿಗೂ ನನ್ನ ಮನಸ್ಸು ಒಡಂಬಡಲಾರದು. ನಾನು ಇಷ್ಟು ಹೇಳಿದರೂ ನೀನು ದುಷ್ಟವೃತ್ತಳಾದರೆ ನಾನು ನಿನ್ನ ಕೈಯಿಂದ ನೀರನ್ನು ಕೂಡ ಕುಡಿಯಲಾರೆ" ಎಂದು ಹೇಳಿ ರುಕ್ಮಾಂಗದನು ಅಲ್ಲಿಂದ ಹೊರಡಲು ಸಿದ್ಧನಾದನು. ಆದರೂ ಕಾಮಾಂಧೆಯಾದ ಮುಕುಂದೆಯು,

**"ಬಲಾತ್ಕಾರೇಣ ಯೋಽನ್ಯಸ್ಯ ಸ್ತ್ರಿಯಂ ಧರ್ಷಿತುಮಿಚ್ಛತಿ ॥**
**ಸಏವ ನರಕಂ ಯಾತಿ ನ ಸ್ವಯಂ ಯಾತಿ ತಾಮಪಿ"**

ಬಲತ್ಕಾರದಿಂದ ಯಾವನು ಪರಸ್ತ್ರೀಯನ್ನು ಭೋಗಿಸಲು ಇಚ್ಚಿಸುವನೋ ಅವನಿಗೆ ಮಾತ್ರ ನರಕ. ತಾನಾಗಿ ಕಾಮಾತುರಳಾಗಿ ಬಂದ ಕಾಮಿನಿಯೊಡನೆ ಕೂಡಿದರೆ ಪುರುಷನಿಗೆ ಯಾವ ದೋಷವೂ ಇಲ್ಲ. ಕೃತಯುಗದಲ್ಲಿಯೂ ತ್ರೇತಾಯುಗದಲ್ಲಿಯೂ ಬ್ರಹ್ಮದೇವರು ಸ್ತ್ರೀಯರಿಗೆ ಸ್ವಾತಂತ್ರ್ಯ ಕೊಟ್ಟಿದ್ದಾರೆ. ಕಾಮಾತುರಳಾಗಿ ನಿನ್ನಲ್ಲಿ ಪ್ರೇಮಭಿಕ್ಷೆಯನ್ನು ಬೇಡುವ ನನ್ನ ಭೋಗಾಪೇಕ್ಷೆಯನ್ನು ಪೂರ್ಣಮಾಡದಿದ್ದರೆ ನಿನ್ನನ್ನು ಶಾಪಕೊಟ್ಟು ಸುಟ್ಟು ಹಾಕುವೆನು. ಅಧಮ ! ನಿನ್ನ ಇಂಥ ಸುಂದರವಾದ ಆಕಾರವನ್ನು ನಾನೇಕೆ ನಾಶಗೊಳಿಸಲಿ ! ರಾಜ್ಯಭ್ರಷ್ಟನಾಗಿ, ಕಾಡಿನಲ್ಲಿ ತಿರುಗುವ ಭಿಕಾರಿಯನ್ನಾಗಿ ನಿನ್ನನ್ನು ಮಾಡುವೆನು''

ಹೀಗೆ ಹೇಳಿ ಮುಕುಂದೆಯು ಮೋಹಾಂಧಳಾಗಿ ಹಿಂದು ಮುಂದಿನ ಆಲೋಚನೆಯಿಲ್ಲದೆ ರುಕ್ಮಾಂಗದನನ್ನು ಬಲಾತ್ಕಾರದಿಂದ ಬಿಗಿದಪ್ಪಿದಳು. ರುಕ್ಮಾಂಗದನು ತಪ್ಪಿಸಿಕೊಳ್ಳಲು ಎಷ್ಟು ಪ್ರಯತ್ನ ಮಾಡಿದರೂ ಬಿಡದೇ ಅವನ ಸುಂದರ ಮುಖವನ್ನು ಅನೇಕ ಸಲ ಚುಂಬಿಸಿದಳು. ರುಕ್ಮಾಂಗದನು ಈ ಅಸಹ್ಯ ಕೃತ್ಯವನ್ನು ಸಹಿಸಲಾರದೆ ಅವಳನ್ನು ಹಿಂದಕ್ಕೆ ನೂಕಿದನು. ಅವಳು ಅವನಿಂದ ದೊಡಲ್ಪಟ್ಟು ಬಿರುಗಾಳಿಯ ಹೊಡೆತಕ್ಕೆ ಬುಡಸಹಿತವಾಗಿ ಕೆಳಗೆ ಉರುಳಿದ ಬಾಳೆಗಿಡದಂತೆ ನೆಲಕ್ಕೆ ಬಿದ್ದು ಮೂರ್ಛಿತಳಾದಳು. ಕೆಲ ನಿಮಿಷದ ಬಳಿಕ ಚೇತರಿಸಿಕೊಂಡು ಮೇಲಕ್ಕೆ ಎದ್ದ ಆ ಋಷಿಪತ್ನಿಯು ತನ್ನ ಭಗ್ನಪ್ರಣಯದಿಂದ ನಿರಾಶಳಾಗಿ ಹೆಡೆ ತುಳಿದ ಹಾವಿನಂತೆ ಫೂತ್ಕರಿಸುತ್ತಾ ನುಡಿದಳು. ''ಮಹಾರಾಜ, ಕಾಮಕೆರಳಿ, ಪ್ರೇಮಅರಳಿ, ಪ್ರಣಯ ಭಿಕ್ಷೆಯನ್ನು ಬೇಡಿಬಂದ ನಾರಿಯನ್ನು ನಿರಾಕರಿಸುವ ನೀನು ಗಂಡಸೇ ಅಲ್ಲ. ಷಂಢ. ಕಾಮಬಾಧೆಯನ್ನು ತಾಳದೆ ಸಂತಪ್ತಳಾದ ನನ್ನ ಪ್ರಣಯಯಾಚನೆಯನ್ನು ತಿರಸ್ಕರಿಸುವದಿಂದ ನೀನು ರೋಗಿಯಾಗಿ ನರಳು ! ಎಂದು ಕೋಪೋದ್ರೇಕದಿಂದ ಶಾಪಕೊಟ್ಟಳು.

ಈ ದುರ್ಘಟನೆಯಿಂದ ನೊಂದುಕೊಂಡ ರುಕ್ಮಾಂಗದನು ಕಾಮೋದ್ರೇಕದಿಂದ ಬುದ್ಧಿ ಕಳೆದುಕೊಂಡ. ಆ ಮುಕುಂದೆಯನ್ನು ಧಿಕ್ಕರಿಸಿ ಆಶ್ರಮವನ್ನು ಬಿಟ್ಟು ಬೇಗನೆ ಹೊರಟು ಹೋದನು. ಅವಳ ಶಾಪದಿಂದ ರುಕ್ಮಾಂಗದನ ಸುಂದರ ಶರೀರಕ್ಕೆ ಕುಷ್ಠರೋಗ ಹಿಡಿಯಿತು. ಬಕಪಕ್ಷಿಯಂತೆ ಅವನ ದೇಹ ಬಿಳಿಚಿ ಹೋಯಿತು. ಆಗ ಮಹಾರಾಜನ ದೇಹ ಹಿರಿ ಬೇನೆಯಿಂದ ಅಂದಗೆಟ್ಟಿತು. ವಿಲಕ್ಷಣ ವೇದನೆಯನ್ನು ಉಂಟುಮಾಡುವ ಆ ರೋಗವನ್ನು ನೋಡಿ ಮನಸ್ಸು ಚಿಂತಾಗ್ರಸ್ತವಾಯಿತು. ಅವನು ತನ್ನ ಆರಾಧ್ಯ ದೇವನಾದ ಗಣೇಶನಿಗೆ ಶರಣು ಹೋದನು.

''ಪ್ರಭು ಗಜಾನನ, ನಾನು ನಿನ್ನ ಏಕಾಂತ ಭಕ್ತ. ನಾನು ನಿನ್ನ ವಿಷಯದಲ್ಲಿ ಮಾಡಿದ ಅಪರಾಧವೇನು ? ಮುನಿಪತ್ನಿಯಾದರೂ ಜಾರಿಣಿಯಾದ ಮುಕುಂದೆಯ ಮನೋರಥವನ್ನು ಪೂರ್ಣಮಾಡದಿರುವುದು ನನ್ನ ತಪ್ಪೇ ? ಬಂಗಾರದ ಬಣ್ಣದಿಂದ ಬೆಳಗುವ ನನ್ನ ಈ ಶರೀರಕ್ಕೆ ತೊನ್ನು ರೋಗವು ಹಿಡಿದು ಈ ದುರವಸ್ಥೆ ಬರಲು ಕಾರಣವೇನು ? ವಿಕಾರವಾದ ಈ ನನ್ನ ದೇಹವನ್ನೂ ಕಳೆಗೆಟ್ಟ ಈ ನನ್ನ ಮುಖವನ್ನೂ ಪ್ರಜಾಜನತೆಗೆ ತೋರಿಸಲಾರೆ. ನಾನು ಇಲ್ಲಿಯೇ ಪ್ರಾಯೋಪವೇಶನವನ್ನು ಕೈಗೊಳ್ಳುವೆ.

ಆಮರಣ ಉಪವಾಸವಿದ್ದು ನಿನ್ನನ್ನು ಧ್ಯಾನ ಮಾಡುತ್ತಲೇ ಈ ದೇಹವನ್ನು ಕೊನೆಗಾಣಿಸುವೆ.'' ಎಂದು ಆರ್ತನಾಗಿ ಗಣಪತಿಯನ್ನು ಪ್ರಾರ್ಥಿಸಿ ಅಲ್ಲಿಯೇ ಒಂದು ವಟವೃಕ್ಷದ ಬುಡದಲ್ಲಿ ಕುಳಿತುಕೊಂಡನು. ರಾಜಭಟರು ತಮ್ಮ ದೊರೆಯನ್ನು ಎಲ್ಲಾ ಕಡೆಗೂ ಹುಡುಕಾಡಿದರು. ಅವನನ್ನು ಕಾಣದೆ ಮಿಡುಕಾಡಿದರು. ರಾತ್ರಿಯವರೆಗೆ ಅವರಿಗೆ ದೊರೆ ದೊರೆಯದಾದಾಗ ನಿರಾಶರಾಗಿ ನಿಟ್ಟುಸಿರು ಬಿಡುತ್ತಾ ರಾಜಧಾನಿಗೆ ಮರಳಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಮಹಾರಾಜನ ಪ್ರಾಯೋಪವೇಶನ ಎಂಬ ಇಪ್ಪತ್ತೆಂಟನೇ ಅಧ್ಯಾಯ ಮುಗಿದುದು*



## ನಾರದರ ಆಗಮನ

**ಅಧ್ಯಾಯ - ೨೯**

ರುಕ್ಮಾಂಗದನು ಚಿಂತಾಕ್ರಾಂತನಾಗಿ ಅಡವಿಯಲ್ಲಿ ಗಿಡದಡಿಯಲ್ಲಿ ಕುಳಿತುಕೊಂಡ. ಒಂದಾನೊಂದು ದಿವಸ ಅಲ್ಲಿಗೆ ನಾರದರು ಬಂದರು. ಅವರಿಗೆ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದ ಪೂಜೆ ಮಾಡಿದ. ತನ್ನ ಪೂರ್ವದ ವೃತ್ತಾಂತವನ್ನೆಲ್ಲಾ ತಿಳಿಸಿದ. ಕಾಮತಪ್ತಳಾದ ಮುಕುಂದೆಯು ತನ್ನ ಮೇಲೆ ಆಕ್ರಮಣ ಮಾಡಿ, ಬಲತ್ಕಾರದಿಂದ ತನ್ನನ್ನು ಆಲಿಂಗಿಸಿ, ಮುಖದ ತುಂಬ ಮುದ್ದು ಸುರಿಸಿದ್ದನ್ನೂ, ತಾನು ತಿರಸ್ಕರಿಸಿ ದೂಡಿದಾಗ ಕ್ರುದ್ಧಳಾಗಿ ಶಾಪ ಕೊಟ್ಟಿದ್ದನ್ನೂ, ಅವಳ ಶಾಪದಿಂದ ತನ್ನ ದೇಹಕ್ಕೆ ತೊನ್ನು ಹಿಡಿದಿದ್ದನ್ನೂ ತೋರಿಸಿದ. ''ಮುಂದೆ ಇದಕ್ಕೆ ಏನು ಉಪಾಯ,'' ಎಂದು ಕೇಳಿದನು ನಾರದರಿಗೆ. ರುಕ್ಮಾಂಗದನ ಈ ಕರುಣ ಕಥೆಯನ್ನು ಕೇಳಿ ಕರುಳು ಕರಗಿದ ನಾರದರು ಆ ಮಹಾರಾಜನ ಕುಷ್ಠರೋಗ ಪರಿಹಾರಕ್ಕೆ ಉಪಾಯವನ್ನು ತಿಳಿಸಿದರು.

**ನಾರದರು :-** ರಾಜನೇ, ನಾನು ಲೋಕಸಂಚಾರ ಕೈಗೊಂಡಾಗ ಮಾರ್ಗದಲ್ಲಿ ಒಂದು ಅತ್ಯಾಶ್ಚರ್ಯಕರವಾದ ಸಂಗತಿ ಕಂಡೆ. ವಿದರ್ಭದೇಶದಲ್ಲಿ ಕದಂಬ ಎಂಬ ಒಂದು ಪಟ್ಟಣವಿದೆ. ಅಲ್ಲಿಯ ಅರಮನೆಯಲ್ಲಿ ದಿವ್ಯಮಂಗಳಕರವಾದ ಒಂದು ವಿನಾಯಕನ ಮೂರ್ತಿಯು ಪ್ರತಿಷ್ಠಿತವಾಗಿದೆ. ಆ ವಿನಾಯಕ ಮೂರ್ತಿಯು ಆರಾಧಿಸುವವರ ಮನೋರಥಗಳನ್ನೆಲ್ಲಾ ಪೂರ್ಣಮಾಡುವುದರಿಂದ **''ಚಿಂತಾಮಣಿ ವಿನಾಯಕ''** ಎಂದು ಹೆಸರಾಗಿದೆ. ಆ ಮೂರ್ತಿಯ ಎದುರಿಗೆ ಗಣೇಶ ಕುಂಡ ಎಂಬ ಒಂದು ಪುಷ್ಕರಣಿ ಇದೆ.

ಹಿಂದೆ ಕುಷ್ಠರೋಗಿಯಾದ ಒಬ್ಬ ಶೂದ್ರನು ತೀರ್ಥಯಾತ್ರೆ ಮಾಡುತ್ತಾ ಆ ಕದಂಬ ನಗರಕ್ಕೆ ಬಂದನು. ಈ ಗಣೇಶ ಕುಂಡದಲ್ಲಿ ಮಿಂದನು. ಇದರಲ್ಲಿ ಸ್ನಾನ ಮಾಡಿದ ತಕ್ಷಣದಲ್ಲಿ ಅತಿ ಆಶ್ಚರ್ಯಕರವಾದ ರೀತಿಯಲ್ಲಿ ಅವನ ಕುಷ್ಠರೋಗವೆಲ್ಲವೂ ಮಾಯವಾಯಿತು. ಅವನ ದೇಹವನ್ನು ಅಪ್ಪಿಹಿಡಿದಿದ್ದ ಮುಪ್ಪು ಕೂಡ ಹೊರಟುಹೋಗಿ ನವತಾರುಣ್ಯದಿಂದ ಅವನ ದೇಹ ಕಂಗೊಳಿಸಿತು. ಸ್ನಾನಶುದ್ಧನಾದ ಆ ಶೂದ್ರನಿಗೆ ದಿವ್ಯದೇಹ ಬಂದಿತ್ತು. ಗಜಾನನನ ಭಕ್ತಗಣದವರು ಮುಗಿಲ ಮಂದಿರದಿಂದ ಇಳಿದು ಅಲ್ಲಿಗೆ ಬಂದು ತಮ್ಮ ವಿಮಾನದಲ್ಲಿ ಗಣೇಶ ಕುಂಡ ಸ್ನಾನದಿಂದ ಶುದ್ಧನಾಗಿ ದೈವೀದೇಹವನ್ನು ಪಡೆದ ಆ ಶೂದ್ರನನ್ನು ಕೂಡಿಸಿಕೊಂಡರು.

ಗಣೇಶನನ್ನು ಧ್ಯಾನಿಸುತ್ತಾ ಆ ಶೂದ್ರನು ದಿವ್ಯಲೋಕಕ್ಕೆ ಪ್ರಯಾಣ ಮಾಡಿದನು. ಇದು ನಾನು ಪ್ರತ್ಯಕ್ಷ ಕಂಡ ಅದ್ಭುತ ದೃಶ್ಯ. ಅದರಂತೆ ನೀನಾದರೂ ಈ ಗಣೇಶ ಪುಷ್ಕರಣಿಯಲ್ಲಿ ಸ್ನಾನಮಾಡು, ಚಿಂತಾಮಣಿ ವಿನಾಯಕನನ್ನು ಧ್ಯಾನಮಾಡು. ಚಿನ್ಮಯಮೂರ್ತಿಯಾದ ಚಿಂತಾಮಣಿ ವಿನಾಯಕನನ್ನು ಭಕ್ತಿಯಿಂದ ಪೂಜೆಮಾಡು. ಅದರಿಂದ ನಿನ್ನ ರೋಗವು ಕಳೆದುಹೋಗುವದು. ಪಾಪವೆಲ್ಲಾ ತೊಳೆದುಹೋಗುವದು. ಗಣೇಶನ ದಯೆಯಿಂದ ನಿನಗೂ ದಿವ್ಯ ದೇಹವು ಪ್ರಾಪ್ತವಾಗುವದು.''

ನಾರದರ ಈ ನುಡಿಯನ್ನು ಕೇಳಿ ರುಕ್ಮಾಂಗದನ ಮನಸ್ಸಿನಲ್ಲಿ ಸಂತಸ ಹುಟ್ಟಿತು. ಆನಂದಾಶ್ರುಗಳು ಕಣ್ಣಿನಿಂದ ಉದುರಿದವು. ಯುವರಾಜನು ಆ ಮಹಾಮುನಿಗಳ ಅಡಿದಾವರೆಗಳಿಗೆ ನಮಿಸಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು. ಭಕ್ತಿಯಿಂದ ಕೈ ಜೋಡಿಸಿ ಕೇಳಿದನು.

**ರುಕ್ಮಾಂಗದ :-** ''ಪೂತಾತ್ಮರೇ, ಈ ಕದಂಬ ಕ್ಷೇತ್ರದಲ್ಲಿ ಈ ಮೊದಲು ಯಾರಾದರೂ ತಪಸ್ಸುಮಾಡಿ ಸಿದ್ಧಿಯನ್ನು ಪಡೆದಿರುವರೇ ? ಮಂಗಲಕರವಾದ ವಿನಾಯಕನನ್ನು ಯಾರು ಪ್ರತಿಷ್ಠೆಗೈದರು ? ತಿಳಿಸಿರಿ.'' ರುಕ್ಮಾಂಗದನ ಈ ಪ್ರಶ್ನೆಗೆ ನಾರದರು ಸಂತೋಷದಿಂದ ತೃಪ್ತರಾಗಿ ಉತ್ತರಿಸತೊಡಗಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ನಾರದ ಆಗಮನ ಎಂಬ ಇಪ್ಪತ್ತೊಂಬತ್ತನೇ ಅಧ್ಯಾಯ ಮುಗಿದುದು*



## ಅಹಲ್ಯಾ ದರ್ಶನ

ಅಧ್ಯಾಯ - ೩೦

**ನಾರದ :-** ನಾನು ಒಮ್ಮೆ ಸ್ವರ್ಗಲೋಕಕ್ಕೆ ಹೋಗಿದ್ದೆ. ಅಲ್ಲಿ ದೇವೇಂದ್ರ ನನ್ನನ್ನು ಆದರದಿಂದ ಬರಮಾಡಿಕೊಂಡ. ಕೌತುಕದಿಂದ ಪ್ರಶ್ನೆಮಾಡಿದ. ''ಮುನಿಗಳೇ, ನೀವು ತ್ರಿಲೋಕ ಸಂಚಾರಿಗಳು. ನಿಮ್ಮ ಅನುಭವದ ಆಗರ ಬ್ರಹ್ಮಾಂಡದಷ್ಟೇ ವಿಸ್ತಾರ. ನೀವು ಎಲ್ಲಿಯಾದರೂ ಏನಾದರೂ ಆಶ್ಚರ್ಯದ ಸಂಗತಿಯನ್ನು ನೋಡಿದರೆ ನನಗೆ ವಿವರಿಸಿರಿ.''

ಸುರರಾಜನ ಪ್ರಶ್ನೆಗೆ ನೇರವಾಗಿ ಉತ್ತರಿಸಿದರು ನಾರದರು.

''ಶಚೀಪತಿಯೇ, ಮನುಷ್ಯ ಲೋಕದಲ್ಲಿ ನಾನೊಂದು ಆಶ್ಚರ್ಯದ ಘಟನೆಯನ್ನು ಕಂಡೆ. ಮರ್ತ್ಯಲೋಕದಲ್ಲಿ ದೀರ್ಘತಮ ಮುನಿಯ ಪುತ್ರರಾದ ಗೌತಮಮುನಿಯ ಆಶ್ರಮ. ನಿಸರ್ಗದ ಚೆಲುವು ಅಲ್ಲಿ ತಾನೇ ತಾನಾಗಿ ವಿಜೃಂಭಿಸಿದೆ. ಅಹಲ್ಯೆ ಗೌತಮರ ಧರ್ಮಪತ್ನಿ. ಅವಳ ಚೆಲುವು ಅಮರಾವತಿಯ ಅಪ್ಸರೆಯನ್ನು ನಾಚಿಸುವಂತಹದು. ನಿನ್ನ ಊರಿನ ಊರ್ವಶಿ, ಮೇನಕಾ, ರಂಭಾ ಇವರೆಲ್ಲರನ್ನೂ ನಿವಾಳಿಸಿ ಒಗೆಯಬೇಕು. ಆ ಸೌಂದರ್ಯದ ಖಣಿಯನ್ನು ನೋಡಿ ನನ್ನಂಥ ನೈಷ್ಠಿಕ ಬ್ರಹ್ಮಚಾರಿಯ ಮನಸ್ಸು ಕೂಡ ಮೋಹಗೊಂಡಿತ್ತು. ಇಂಥ ರೂಪರಾಶಿಯುಳ್ಳ ಆ ರಸಿಕ ರಮಣಿಯು ಕಡುಬಡವನಾದ, ಆ ಗುಡಿಸಲ ಗೃಹಸ್ಥನಾದ ಗೌತಮನ ಧರ್ಮಪತ್ನಿಯಾಗುವದಕ್ಕಿಂತ ನಿನ್ನಂಥ ನಾಕನಾಥನ ಧರ್ಮಪತ್ನಿಯಾಗಲು ಅರ್ಹಳಾಗಿದ್ದಾಳೆ.''

ಇಷ್ಟು ಹೇಳಿ ನಾರದರು ಲೋಕ ಸಂಚಾರಕ್ಕೆ ತೆರಳಿದರು. ನಾರದರು ವರ್ಣಿಸಿದ ಅಹಲ್ಯೆಯ ಚಿತ್ರ ಇಂದ್ರನ ಚಿತ್ತಭಿತ್ತಿಯಲ್ಲಿ ನಿಚ್ಚಳವಾಗಿ ಅಚ್ಚೊತ್ತಿ ನಿಂತಿತು. ಹೇಗಾದರೂ ಮಾಡಿ ನರಲೋಕದ ಆ ರೂಪರಾಣಿಯನ್ನು ಭೋಗಿಸಬೇಕು ಎಂಬ ಹೆಬ್ಬಯಕೆಯು ಹುಚ್ಚು ಹಂಬಲವಾಗಿ ಅವನ ಹೃದಯದಲ್ಲಿ ತುಂಬಿಕೊಂಡಿತು. ಕಾಮಾತುರನಾದ ಆ ಸುರಪತಿಯು ನೇರವಾಗಿ ಭೂಮಿಗೆ ಬಂದ. ಗೌತಮರ ಆಶ್ರಮಕ್ಕೆ ಐತಂದ. ಮುನಿಗಳು ಸ್ನಾನಕ್ಕಾಗಿ ನದೀ ತೀರಕ್ಕೆ ತೆರಳಿದ್ದರು. ಕಾಮುಕನಾದ ಪುರಂದರನ ಮನಸ್ಸಿಗೆ ಈ ಕಾಲ ತನ್ನ ಕಾರಸ್ಥಾನಕ್ಕೆ ಅನುಕೂಲವೆನಿಸಿತು. ಕೂಡಲೇ ಅವನು ಗೌತಮರ ರೂಪಧರಿಸಿದ. ಅಹಲ್ಯೆಯ ಅಂತಃಪುರಕ್ಕೆ ಪ್ರವೇಶಿಸಿದ. ಪಾಪ! ಅಹಲ್ಯೆ ಒಳಗೆ ಬಂದವ ತನ್ನ ಪತಿಯೇ ಎಂದು ನಂಬಿದಳು. ''ಸ್ನಾನಕ್ಕೆ ತೆರಳಿದವರು ಹಾಗೇ ಏಕೆ ಮರಳಿ ಬಂದಿರಿ, ಸ್ನಾನ ಏಕೆ ಮಾಡಲಿಲ್ಲ'' ಎಂದು ಕೇಳಿದಳು.

ಇಂದ್ರನ ಕಟ್ಟುಕಥೆ ಸಿದ್ಧವಾಗಿತ್ತು. ''ರಾಣಿ, ನಾನು ನದೀ ತೀರಕ್ಕೆ ಹೋದಾಗ ಅಲ್ಲೊಂದು ರಸಪ್ರಸಂಗ ನಡೆದಿತ್ತು. ಅಮರಾವತಿಯ ಐದು ಅಪ್ಸರೆಯರು ನದಿಗೆ ಮೀಯಲೆಂದು ಬಂದಿದ್ದರು. ನಾನು ನೋಡನೋಡುತ್ತಿರುವಂತೆಯೇ ಮೈಮೇಲಿನ ಬಟ್ಟೆಗಳನ್ನೆಲ್ಲಾ ಬಿಚ್ಚಿಟ್ಟು ಬಯಲಾಗಿ ನೀರಿಗೆ ಇಳಿದರು. ಹುಟ್ಟಿದ ಮಹರ್ದೆಸೆಯಲ್ಲಿಯೇ ನಗ್ನರಾಗಿ ನೀರಿನಲ್ಲಿ ಜಲಕೇಳಿಯನ್ನು ಆಡುವ ನಾರಿಯರನ್ನು ನೋಡಿ ನನ್ನ ಮನಸ್ಸಿನ ಕಾಮ ಕೆರಳಿತು. ಅಮರಾಂಗನೆಯರ ಬೆತ್ತಲೆ ದೇಹದ ಉಬ್ಬು ತಗ್ಗುಗಳನ್ನು ಕಂಡು ನನ್ನ ಹೃದಯದಲ್ಲಿ ಕಾಮ ಪ್ರೇಮಗಳ ಸುಗ್ಗಿಯೇ ನುಗ್ಗಿ ಬಂದಿತು. ಆಗ ನನಗೆ ನೆನಪಾದದ್ದು ನಿನ್ನ ಲಾವಣ್ಯ. ನಿನ್ನ ತಾರುಣ್ಯ ತುಂಬಿ ತುಳುಕುವ ಲಾವಣ್ಯದ ನೆನಪಾಗಿ ಭೋಗದಾಸೆಯಿಂದ ಮನೆಗೆ ಬಂದಿದ್ದೇನೆ. ನನ್ನ ಮನೋರಥವನ್ನು ಪೂರ್ಣಮಾಡು''. ಎಂದು ಅಂಗಲಾಚಿದ.

ಪ್ರೇಮಾತುರನಾಗಿ ಕಾಮ ಕೇಳಿಗೆಂದು ಮನೆಗೆ ಬಂದ ಕಾಂತನ ಪ್ರಣಯದ ಪ್ರಾರ್ಥನೆಯನ್ನು ನಿಷೇಧಿಸಲಾಗದೇ ಆ ನಾರೀಮಣಿಯು ಅವನ ಕರೆಗೆ ಓಗೊಟ್ಟಳು. ರಸನಿಮಿಷದಲ್ಲಿ ಇಬ್ಬರೂ ಮೈ ಮರೆತಾಗ ದೇವೇಂದ್ರನ ಮೈಯಿಂದ ದಿವ್ಯಗಂಧವು ಸೂಸತೊಡಗಿತು. ಅದರಿಂದ ಅಹಲ್ಯೆಗೆ ಸಂದೇಹ ಬಂದಿತು. ಅವನು ನಡೆಸಿದ ವಿಹಾರದಲ್ಲಿ ವೈಚಿತ್ರ್ಯವೂ ಅವಳ ಸಂದೇಹವನ್ನು ಬಲಪಡಿಸಿತು. ಪತಿಯ ವೇಷದಲ್ಲಿ ಯಾವನೋ.ಒಬ್ಬ ಕಾಮಿಯು ತನ್ನನ್ನು ಕೆಡಿಸಿದ್ದಾನೆಂದು ಅವಳಿಗೆ ಮನದಟ್ಟಾಯಿತು. ಕೂಡಲೇ ಅವಳು ಕೆರಳಿದ ಕೇಸರಿಣಿಯಂತೆ ಕ್ರುದ್ಧಳಾಗಿ ಗದ್ದರಿಸಿ ಕೇಳಿದಳು. ''ಪಾಪಿಯೇ, ನನ್ನ ಪತಿ ಗೌತಮರ ವೇಷದಿಂದ ಬಂದ ನೀನು ಯಾರು ? ಪರಮ ಪತಿವ್ರತೆಯಾದ ನನ್ನನ್ನು ಜಾರಿಣಿಯನ್ನಾಗಿ ಮಾಡಿದ ಜಾಲ್ಮಾ, ನೀನು ಯಾರು ? ಎಂಬುದನ್ನು ಈಗಲೇ ತಿಳಿಸು. ಇಲ್ಲದಿದ್ದರೆ ಘೋರಶಾಪಕೊಟ್ಟು ನಿನ್ನನ್ನು ಸುಟ್ಟು ಹಾಕುವೆನು''.

ಅಹಲ್ಯೆಯ ಗದರಿಕೆಗೆ ಬೆದರಿದ ಶಚೀಪತಿಯು ಅವಳಿಗೆ ತನ್ನ ನಿಜರೂಪವನ್ನು ತೋರಿಸಿದ. ಮತ್ತು ಅವಳನ್ನು ರಮಿಸುತ್ತಾ ಹೇಳಿದ. ''ಲೋಕೈಕ ಸುಂದರಿಯಾದ ಮುನಿಪತ್ನಿಯೇ, ನಿನ್ನ ಸೌಂದರ್ಯದ ಕೀರ್ತಿಯನ್ನು ಕೇಳಿ ವಾಸವನಾದ ನನ್ನ ಮನಸ್ಸಿನಲ್ಲಿ

ಕಾಮವಾಸನೆ ಮೂಡಿತು. ನನ್ನ ನಿಜರೂಪದಲ್ಲಿ ಬಂದರೆ ನೀನು ಕೋಪದಿಂದ ಶಾಪಿಸಬಹುದು ಎಂದು ಬಗೆದು ನಿನ್ನ ಪತಿ ವೇಷದಿಂದಲೇ ಬಂದೆ. ನಿನ್ನೊಡನೆ ಗುಟ್ಟಾಗಿ ರಮಿಸಿದೆ. ಈಗ ಆದ ಪ್ರಮಾದವಾದರೂ ಏನು ? ನರಲೋಕದ ನಾರಿಯಾದ ನಿನಗೆ ಸುರೇಂದ್ರನೊಡನೆ ಸಂಗಮದ ಸುಪ್ರಸಂಗ ಒದಗಿ ಬಂದಿದೆ ಎಂದೇ ತಿಳಿ. ಸಾವಿರಾರು ವರ್ಷ ತಪಸ್ಸು ಮಾಡಿ ಮಾನವರು ದಿವ್ಯಭೋಗಗಳನ್ನೂ ದೇವತಾ ಸಂಪರ್ಕವನ್ನೂ ಪಡೆಯುತ್ತಾರೆ. ನಿನ್ನ ಜನ್ಮಾಂತರದ ಪುಣ್ಯದಿಂದಲೇ ನನಗೆ ನಿನ್ನಲ್ಲಿ ರಾಗಾನುರಾಗಗಳು ಹುಟ್ಟಿವೆ. ಆದರಿಂದ ದೈವೀಪುರುಷನೊಡನೆ ಭೋಗವನ್ನು ಪಡೆದು ನೀನು ಧನ್ಯಳಾಗಿರುವೆ. ಇದನ್ನು ಚೆನ್ನಾಗಿ ಪರ್ಯಾಲೋಚಿಸು. ಧರ್ಮಮೌಢ್ಯವನ್ನು ತೊರೆದು ನನ್ನಲ್ಲಿ ಅನುರಾಗವನ್ನು ಮಾಡಿ ನಿರಂತರ ಸ್ವಚ್ಛಂದ ಭೋಗವನ್ನು ಅನುಭವಿಸು.''

ನಾಕಲೋಕದ ಅರಸನು ನಾಚಿಕೆ ಬಿಟ್ಟು ಹೀಗೆ ನುಡಿದದ್ದನ್ನು ಕೇಳಿ ಆ ಮುನಿಪತ್ನಿಗೆ ಕ್ರೋಧವು ನೆತ್ತಿಗೇರಿತು. ಕ್ರೋಧೋದ್ರೇಕದಿಂದ ಅವಳ ಮುಖ ಕೆಂಪಗಾಯಿತು. ಬೆಂಕಿಯ ಕಿಡಿಯಂತೆ ಬಿರುನುಡಿಗಳು ಅವಳ ಮುಖದಿಂದ ತೂರಿಬಂದವು. ''ಅಧಮ, ನೀನು ಎಂಥ ಘೋರ ಕೃತ್ಯವನ್ನು ಮಾಡಿದೆ ! ನನ್ನಂಥ ಪತಿವ್ರತೆಯ ಶೀಲಭ್ರಂಶವನ್ನು ಮಾಡಿದೆ. ಸ್ವರ್ಗದಲ್ಲಿ ಸುಖದಿಂದ ಇದ್ದ ನೀನು ಕಾಮಾತುರನಾಗಿ ಎಂಥ ಅಧಮಕಾರ್ಯವನ್ನು ಮಾಡಿದೆ ! ಮೂರ್ಖ, ನನ್ನ ಗಂಡ ಬಂದರೆ ನಿನ್ನ ಗತಿ ಏನು ? ನಿನ್ನಿಂದಾಗಿ ಪಾತಿವ್ರತ್ಯವನ್ನು ಕಳೆದುಕೊಂಡು ಪತಿತಳಾದ ನನಗೆ ಪತಿಯ ಶಾಪದಿಂದ ಎಂತಹ ದುರವಸ್ಥೆ ಪ್ರಾಪ್ತವಾಗುವದೋ ಏನೋ ! ಸ್ವರ್ಗಪತಿಯಿಂದ ನಾನು ಎಂಥ ದುರ್ಗತಿಯನ್ನು ಹೊಂದುವಂತಾಯಿತು ! ಇದಕ್ಕೇನು ಉಪಾಯ'' ಎಂದು ದುಃಖಾತೀರೇಕದಿಂದ ಆ ಗೌತಮರ ಧರ್ಮಪತ್ನಿ ಗೋಳಾಡಿದಳು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಅಹಲ್ಯಾದರ್ಶನ ಎಂಬ*
*ಮೂವತ್ತನೇಯ ಅಧ್ಯಾಯ ಮುಗಿದುದು*

—o—

**ನಾರದ :-** ನಿಜವಾದ ಗೌತಮರು ನದಿಗೆ ಸ್ನಾನಕ್ಕೆ ಹೋಗಿದ್ದರು. ನದಿಯಲ್ಲಿ ಮಿಂದು ಮಡಿಯಿಂದ ತಮ್ಮ ಆಶ್ರಮಕ್ಕೆ ಮರಳಿ ಬಂದರು. ದಿನದಂತೆ ಅವರು ಸ್ನಾನ ಮಾಡಿ ಬಂದ ಕೂಡಲೇ ಅಹಲ್ಯೆಯು ಎದ್ದು ಬಂದು ಅವರಿಗೆ ಕಾಲಿಗೆ ನೀರನ್ನು ನೀಡಲಿಲ್ಲ. ಎದುರುನಿಂತು ಮಾತನಾಡಲಿಲ್ಲ. ಹೆದರಿಕೆ, ನಾಚಿಕೆ, ಕಳವಳದಿಂದ ಪತಿಗೆ ಮುಖತೋರಿಸಲು ಆಗದೆ ಮರೆಯಲ್ಲಿಯೇ ನಿಂತುಕೊಂಡಳು. ಆಗ ಗೌತಮರು ಅವಳನ್ನು 'ಹೀಗೇಕೆ' ಎಂದು ಕೇಳಿದರು. ಆಗ ಅವಳು ದುಃಖಾರ್ತಳಾಗಿ ದೈನ್ಯದಿಂದ ಅವರ ಮುಂದೆ ಅಡ್ಡಬಿದ್ದು ಅವರ ಅಡಿಯ ಹುಡಿಯಲ್ಲಿ ಹೊರಳಾಡಿದಳು. ಕಣ್ಣು ತುಂಬ ನೀರು ತಂದು ಕೈ ಜೋಡಿಸಿ ಅಂಜಿಕೆ, ಕಳವಳ, ಕಾತರ, ದೈನ್ಯ, ದುಃಖ ಎಲ್ಲ ನುಗ್ಗಿಬಂದಂತಾಗಿ ಕಂಬನಿಯ ಕೋಡಿ ಹರಿಸಿ ಬಿಕ್ಕುತ್ತಾ ನಡೆದ ಸಂಗತಿಯನ್ನೆಲ್ಲಾ ನಿವೇದಿಸಿದಳು. ''ದುಷ್ಟನಾದ ದೇವೇಂದ್ರನು ತದ್ರೂಪ ನಿಮ್ಮ ವೇಷದಿಂದಲೇ ಬಂದು ನನ್ನನ್ನು ವಂಚಿಸಿದ. ನಿಮ್ಮದೇ ಆಕಾರ, ಚೆಲುವು, ನಿಮ್ಮದೆ ನಡೆ, ನಿಮ್ಮದೇ ನುಡಿ. ಎಲ್ಲವೂ ನಿಮ್ಮಂತೆ ಇದ್ದುದರಿಂದ ನಾನು ಮೋಸಹೋದೆ. ನಿಜವಾದ ನೀವೇ ಎಂದು ತಿಳಿದು ನನ್ನ ಮೈಯನ್ನು ಒಪ್ಪಿಸಿದೆ. ವಿಹಾರದ ಕೊನೆಯಲ್ಲಿ ಅವನ ದೇಹದಲ್ಲಿ ದಿವ್ಯಗಂಧವು ಸೂಸತೊಡಗಿತು. ನನಗೆ ಸಂಶಯ ಬಂದಿತು. ಅವನು ನೀವು ಅಲ್ಲ ಎಂದು ನಿಶ್ಚಯವು ಆಯಿತು. ''ಪಾಪಿ, ನೀನು ಯಾರು ಹೇಳು. ಇಲ್ಲದಿದ್ದರೆ ನನ್ನ ಸಿಟ್ಟಿನಿಂದ ನಿನ್ನನ್ನು ಸುಟ್ಟು ಬೂದಿಮಾಡುವೆ'' ಎಂದು ಹೇಳಿದೆ. ನನ್ನ ಗರ್ಜನೆ ತರ್ಜನೆಗಳನ್ನು ಕೇಳಿ ಭಯಭ್ರಾಂತನಾದ ಆ ದೇವಲೋಕದ ದುರಾತ್ಮ ತನ್ನ ನೀಚಕೃತ್ಯದ ನಿಜರೂಪವನ್ನು ಪ್ರಕಟಗೊಳಿಸಿದ. ಅಷ್ಟರಲ್ಲಿ ತಾವು ಬಂದಿರಿ. ತಿಳಿಯದೇ ಆದ ತಪ್ಪಿಗಾಗಿ ನನ್ನನ್ನು ಕ್ಷಮಿಸಿರಿ.'' ಎಂದು ನುಡಿದು ಆ ಗೌತಮ ಕುಟುಂಬನಿಯು ಕಣ್ಣೀರಿನ ಕಾದಂಬಿನಿಯಾಗಿ ನಮಿಸಿ ನಾಚಿಕೆಯಿಂದ ಹಾಗೂ ಶಾಪದ ಭಯದಿಂದ ನಡುಗುತ್ತಾ ನಿಂತುಕೊಂಡಳು.

ತನ್ನ ಮನೆಯಲ್ಲಿಯೇ ನಡೆದ ಈ ದುರಂತ ಘಟನೆಯನ್ನು ಕೇಳಿ ಮುನಿಯ ಕ್ರೋಧ ಕೆರಳಿತು. ಶಾಪ ನುಡಿ ಕಿಡಿಯಾಗಿ ಸಿಡಿಯಿತು. ''ನೀನು ಇಷ್ಟುದಿನ ನನ್ನೊಡನೆ ಸಂಸಾರ ಮಾಡಿರುವೆ. ಆದರೂ ನನ್ನ ಸ್ವಭಾವ, ಶೀಲಗಳನ್ನು ತಿಳಿಯದೇ ಹೋದೆಯಾ ! ಇದು ನಂಬಬಹುದಾದ ಸಂಗತಿಯೇ ! ನಿಜವಾಗಿ ನೀನು ಅತಿ ಕಾಮುಕೆ. ಪರಪುರುಷನ ಜೊತೆಗೆ ಸಂಗಸುಖವನ್ನು ಅನುಭವಿಸಬೇಕೆಂಬ ದುರ್ಬುದ್ಧಿಯಿಂದಲೇ ಇಂದ್ರನ ಜೊತೆಗೆ ವಿಹರಿಸಿರುವೆ. ''ಗುರುತು ಆಗಲಿಲ್ಲ. ಅವನನ್ನು ಗಂಡ ಎಂದೇ ತಿಳಿದೆ. ಪರಪುರುಷನೆಂದೂ ಅರಿವಾಗಲಿಲ್ಲ'' ಎಂಬುದು ಒಂದು ನೆಪ ಮಾತ್ರ. ಯೌವ್ವನದ ಹುಚ್ಚಿನಲ್ಲಿ, ಕಾಮನೆಯ ಪ್ರವಾಹದಲ್ಲಿ ಕೊಚ್ಚಿಕೊಂಡ ಹೋದ ನೀನು ಕಲ್ಲಾಗಿ ಬೀಳು. ಮುಂದೆ ದಶರಥಪುತ್ರನಾದ ಶ್ರೀರಾಮನು ಈ ಕಾಡಿನಲ್ಲಿ ಸಂಚರಿಸುವಾಗ ಅವನ ಪಾದಸ್ಪರ್ಶದಿಂದ ನಿನ್ನ ಇಂದಿನ ಶಾಪ ವಿಮೋಚನವಾಗುವುದು. ಮತ್ತೆ ಮರಳಿ ನಿನ್ನ ಸ್ವರೂಪವನ್ನು ಪಡೆಯುವೆ. ನಿನ್ನ ಮಾತೇ ನಿಜವಾದರೆ ನೀನು ನಿರಪರಾಧಿ, ದೇವೇಂದ್ರನ

ಕಾಮಕ ಸ್ವಭಾವವೇ ಈ ಎಲ್ಲ ಅನರ್ಥಕ್ಕೆ ಕಾರಣ ಎಂದಾಗುವುದು. ಅದಕ್ಕಾಗಿಯೇ ನಿನಗೆ ಶಾಪದ ಜೊತೆಗೆ ಉಶ್ಶಾಪವನ್ನೂ ಕೊಟ್ಟಿದ್ದೇನೆ. ಶ್ರೀರಾಮ ಸ್ವಯಂ ಸಾಕ್ಷಾತ್ ನಾರಾಯಣ. ಅವನ ಕಾಲಿನ ಒಂದು ಧೂಳೀಕಣ ತಾಗಿದರೂ ಸಾಕು. ಎಂಥೆಂಥ ಪಾಪಗಳು ಕೂಡ ಪರಿಹಾರ ಕಾಣುವವು. ಅದರಂತೆ ನೀನಾದರೂ ಕೂಡ ಆ ಪತಿತಪಾವನನ ಪಾದ ಸ್ಪರ್ಶದಿಂದ ಪೂತಾವದಾತಳಾಗಿ ಈ ಗೌತಮನ ಬಳಿ ಬರುವೆಯಂತೆ.'' ಎಂದು ನುಡಿದು ತಮ್ಮ ಮಡದಿಯ ಮೇಲೆ ನಿಗ್ರಹವನ್ನೂ ಶಾಪ ವಿಮೋಚನೆಯಾಗುವದೆಂಬ ಅನುಗ್ರಹವನ್ನೂ ತೋರಿದರು.

ಮಹಾತಪಸ್ವಿಯಲ್ಲವೇ ಆ ಗೌತಮ ! ಅವರ ಶಾಪ ತಕ್ಷಣದಲ್ಲಿಯೇ ಪರಿಣಾಮ ತೋರಿತು. ಆ ಗೌತಮ ಕುಟುಂಬಿನಿಯು ಕುಳಿತಲ್ಲಿಯೇ ಕಲ್ಲಾಗಿ ಬಿದ್ದಳು.

ಈ ದೃಶ್ಯವನ್ನು ನೋಡಿ ನಡುಗಿಹೋದ ಆ ನಾಕನಾಯಕ. ತಾನು ಕಣ್ಣಿಗೆ ಬಿದ್ದರೆ ಋಷಿಯ ಕೋಪಶಾಪಗಳಿಗೆ ತುತ್ತಾಗಬೇಕಾಗುವದು ಎಂದು ಬೆಕ್ಕಿನರೂಪ ಧರಿಸಿ ಓಡಬಯಸಿದ. ಸೂಕ್ಷ್ಮಗ್ರಾಹಿ ಆಗಿತ್ತು ಮುನಿಯ ಕಣ್ಣು. ಅರೆಚಣದಲ್ಲಿ ಕಂಡುಹಿಡಿದರು ಬೆಕ್ಕಿನ ರೂಪದಲ್ಲಿದ್ದ ಪುಕ್ಕಲು ದೇವೇಂದ್ರನನ್ನು. ''ಶಚಿಪತಿಯೆ, ನನ್ನ ಕಣ್ಣು ತಪ್ಪಿಸಿ ಎಲ್ಲಿ ಓಡುವೆ ! ನಿನ್ನನ್ನು ಅಪರಾಧಿಯೆಂದು ಗೊತ್ತಾದರೂ ನಾನು ಶಪಿಸಿ ಭಸ್ಮವನ್ನಾಗಿ ಮಾಡುವುದಿಲ್ಲ. ಎಷ್ಟೆಂದರೂ ನೀನು ದೇವತೆಗಳ ಸ್ವಾಮಿ, ಸುರೋತ್ತಮ. ಆದರೂ ನಿನ್ನನ್ನು ಹಾಗೇ ಬಿಡಲಾರೆ. ಶಾಪ ಕೊಡುತ್ತೇನೆ. ನಿನ್ನ ಮೈತುಂಬ ಸಾವಿರ ಯೋನಿಗಳು ಮೂಡಲಿ'' ಎಂದು ಶಪಿಸಿದರು.

ಕೂಡಲೇ ಕಾರ್ಯರೂಪದಲ್ಲಿ ಬಂದಿತು ಮುನಿಯ ಶಾಪ. ದೇವೇಂದ್ರನ ಮೈಯೆಲ್ಲಾ ಯೋನಿಮಯವಾಯಿತು. ತನ್ನ ಅವಸ್ಥೆಯನ್ನು ನೋಡಿ ದೇವೇಂದ್ರನಿಗೆ ನಾಚಿಕೆ, ಪಶ್ಚಾತ್ತಾಪವೂ ಆಯಿತು. ಅವನು ತನ್ನ ಮನಸ್ಸಿನಲ್ಲಿಯೇ ತನ್ನನ್ನು ಹೀಗಳೆದ. ''ನಾನು ನಾರದರ ಮಾತನ್ನು ಕೇಳಿ ನೀತಿಭ್ರಷ್ಟನಾದೆ. ಈ ಮಾತಿನಲ್ಲಿ ನಾನು ಯಾವ ಹಿರಿಯರನ್ನು ವಿಚಾರಿಸಲಿಲ್ಲ. ಪರಮ ಪತಿವ್ರತೆಯಾದ ಅಹಲ್ಯೆಯನ್ನು ಶೀಲಗೆಡಸಿ ನಾನು ಕೆಟ್ಟೆ. ದಿವ್ಯಲೋಕದಲ್ಲಿದ್ದು ಇಂತಹ ದುಷ್ಕೃತ್ಯವನ್ನು ಎಸೆಗಿದ ನನಗೆ ಧಿಕ್ಕಾರವಿರಲಿ. ಈ ದೇವೇಂದ್ರರೂಪದಲ್ಲಿ ಇಷ್ಟು ವಿಕಾರ ಉಂಟಾದ ಬಳಿಕ ಇಂತಹ ಆ ದುರ್ದೇಹವನ್ನು ಹೊತ್ತುಕೊಂಡು ನಾನು ದೇವಲೋಕಕ್ಕೆ ಹೇಗೆ ಹೋಗಲಿ ? ದೇವತೆಗಳಿಗೆ ಮುಖ ಹೇಗೆ ತೋರಿಸಲಿ ? ನನ್ನ ಮಡದಿಯಾದ ಶಚೀದೇವತೆಗೆ ನನ್ನ ಯೋನಿಮಯವಾದ ಮೈಯನ್ನು ಹೇಗೆ ತೋರಲಿ ? ಸುರ, ನರ ಯಾವ ರೂಪದಲ್ಲಿ ಇರಲಿಕ್ಕೂ ನನಗೆ ಅಸಹ್ಯ ಬಂದಿದೆ. ಯಾವುದಾದರೂ ಕ್ರಿಮಿಕೀಟದ ದೇಹವನ್ನು ಧರಿಸಿ ನನ್ನ ಪಾಪವನ್ನು ಹೋಗಲಾಡಿಸಿ ಕೊಳ್ಳುವೆನು'' ಎಂದು ನಿರ್ಧರಿಸಿ ದೇವೇಂದ್ರನು ಇಂದ್ರಗೋಪಕ ಎಂಬ ಮಿಣುಕು ಹುಳದ ರೂಪವನ್ನು ಧರಿಸಿ ತಾವರೆಹೂವಿನ ನಟ್ಟನಡುವೆ ತಲೆಮರೆಸಿಕೊಂಡು ಇದ್ದುಬಿಟ್ಟನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಇಂದ್ರ ಶಾಪವರ್ಣನೆ ಎಂಬ ಮೂವತ್ತೊಂದನೇ ಅಧ್ಯಾಯ ಮುಗಿದುದು*

—o—

**ನಾರದ :-** ಮಹೇಂದ್ರನು ಮಿಣುಕುಹುಳದ ರೂಪದಿಂದ ಕಮಲಕೋಶದಲ್ಲಿ ಕುಳಿತುಕೊಂಡ ಬಳಿಕ ನಾನು ಸ್ವರ್ಗಲೋಕಕ್ಕೆ ಹೋದೆನು. ದೇವತೆಗಳಿಗೆಲ್ಲಾ ಈ ದುರಂತ ಘಟನೆಯನ್ನು ತಿಳಿಸಿದೆನು. ಸುರಲೋಕದ ಸಾರ್ವಭೌಮನು ಮಿಣುಕುಹುಳವಾಗಿ ಕಮಲಗರ್ಭದಲ್ಲಿ ಅಡಗಿ ಕುಳಿತಿರುವ ಸಮಾಚಾರವನ್ನು ಕೇಳಿ ದೇವತೆಗಳೆಲ್ಲರೂ ತಲ್ಲಣಿಸಿದರು. ಶಚೀದೇವಿಯು ಹೌಹಾರಿದಳು. ಸುರಪುರದ ನಾಗರಿಕರೆಲ್ಲರೂ ಸಂಭ್ರಾಂತರಾದರು. ದುಃಖಾತಿರೇಕದಿಂದ ಅಮರಾವತಿಯ ಅಂಗನೆಯರೆಲ್ಲರೂ ಬಿಕ್ಕಿ ಬಿಕ್ಕಿ ಅತ್ತರು. ಅವರಿಗೆ ಮುಂದೆ ಏನು ಮಾಡಬೇಕು ಎಂಬುದು ತಿಳಿಯಲಿಲ್ಲ. ಹೇಗಾದರೂ ಮಾಡಿ ದೇವಲೋಕದ ತಮ್ಮ ದೊರೆಯನ್ನು ಈ ದುರವಸ್ಥೆಯಿಂದ ಪಾರು ಮಾಡಬೇಕೆಂದು ಉಪಾಯವನ್ನು ಚಿಂತಿಸಿದರು. ಕೊನೆಗೆ ಅಹಲ್ಯೆ ಮತ್ತು ದೇವೇಂದ್ರ ಇಬ್ಬರಿಗೂ ಶಾಪ ಹಾಕಿದ ಗೌತಮಮುನಿಗೆ ಶರಣು ಹೋಗಬೇಕೆಂದು ನಿರ್ಧರಿಸಿದರು. ತಮ್ಮೊಡನೆ ಬರಲು ನನಗೂ ಕೇಳಿಕೊಂಡರು. ನಾನು ಆ ದೇವತೆಗಳೊಂದಿಗೆ ಸ್ವರ್ಗಲೋಕದಿಂದ ಇಳಿದು ಮುಗಿಲು ಮಂಟಪದಿಂದ ನೆಲದ ಅಂಚಿನವರೆಗೆ ಪಯಣ ಬೆಳೆಸಿದೆವು. ಭೂಲೋಕದಲ್ಲಿಯ ಅನೇಕ ಬೆಟ್ಟ, ಬಯಲು, ಸಾನು, ಕಾನು, ಗಹನ, ಗುಹೆ ನದೀ-ತಟಾಕಗಳನ್ನು ದಾಟಿ ಗೌತಮ ಋಷಿಯ ಆಶ್ರಮಕ್ಕೆ ಬಂದೆವು. ಆಗ ದೇವತೆಗಳು ಮುಂದಾಗಿ ಗೌತಮರಿಗೆ ಶರಣುಹೋಗಿ ಅನೇಕ ಸ್ತುತಿ ವಾಕ್ಯಗಳಿಂದ ಅವರನ್ನು ಹೊಗಳಿ ಹಾಡತೊಡಗಿದರು.

**ದೇವತೆಗಳು :-** ''ಮಹಾತ್ಮರೇ, ಮುಗಿಲಲ್ಲಿಯ ಚುಕ್ಕೆಗಳನ್ನು ಎಣಿಸಬಹುದು. ಸಾಗರ ತೀರದ ಮಳಲಕಣಗಳನ್ನು ಎಣಿಸಬಹುದು. ಆದರೆ ನಿಮ್ಮ ಗುಣಗಳನ್ನು ಮಾತ್ರ ಎಣಿಸುವದು ಸಾಧ್ಯವಿಲ್ಲ. ಹಿಂದೆ ಭಯಂಕರ ಬರ ಬಂದಾಗ ಅನೇಕ ಮಹರ್ಷಿಗಳನ್ನು ಸಾಕಿ ಸಲುಹಿದ ಔದಾರ್ಯ ನಿಮ್ಮದು. ಆ ಮುನಿಮಂಡಲಕ್ಕೆಲ್ಲ ಯಥೇಚ್ಛ ಭೋಜನವನ್ನು ಹಾಕಿ ಕಾಪಾಡಿದಿರಿ. ಅವರ ಭೋಜನಕ್ಕಾಗಿ ನಿಮ್ಮ ತಪಸ್ಸಿನ ಶಕ್ತಿಯಿಂದ ಬೆಳಿಗ್ಗೆ ಬಯಲ ಭೂಮಿಯಲ್ಲಿ ಬೀಜ ಬಿತ್ತಿ ಮಧ್ಯಾಹ್ನ ಊಟದ ಹೊತ್ತಿಗೆ ಸಮೃದ್ಧವಾದ ಧಾನ್ಯ ಬೆಳೆದು ಬರುವಂತೆ ಮಾಡಿದಿರಿ. ಮುನಿಮಹರ್ಷಿಗಳಿಗಲ್ಲದೆ ಇಂಥ ತಪಸ್ಸು ಸಿದ್ಧಿಯು ಇನ್ನು ಯಾರಲ್ಲಿ ಉಂಟು ! ಹಿಂದೆ ವಾಲಖಿಲ್ಯ ಮುನಿಗಳು ಯಜ್ಞ ಮಾಡಿ ಬೇರೊಬ್ಬ ಹೊಸ ಇಂದ್ರನನ್ನೇ ನಿರ್ಮಾಣಮಾಡಿದರು. ಲೋಪಾಮುದ್ರೆಯ ಗಂಡನಾದ ಅಗಸ್ತ್ಯರು ಸಮಗ್ರ ಸಾಗರವನ್ನೇ ಏಕಾಪೋಷಣೆಯಿಂದ ಪಾನ ಮಾಡಿ ಒಣಗಿಸಿಬಿಟ್ಟರು. ವಿಶ್ವಾಮಿತ್ರರು ಜನ್ಮದಿಂದ ಕ್ಷತ್ರಿಯರಾದರೂ ತಪಸ್ಸಿನಿಂದ ಬ್ರಾಹ್ಮಣರಾದರು. ಕೊನೆಗೆ ಬ್ರಹ್ಮಋಷಿಯೂ ಆದರು. ತ್ರಿಶಂಕು ರಾಜನಿಗಾಗಿ ಬೇರೊಂದು ಸ್ವರ್ಗವನ್ನೇ ನಿರ್ಮಿಸಿದರು. ಚ್ಯವನ ಋಷಿಗಳು ಶರ್ಯಾತಿರಾಜನಿಂದ ಯಜ್ಞಮಾಡಿಸಿ ಅಶ್ವಿನೀ ದೇವತೆಗಳಿಗೆ ಆಹುತಿ ಸಿಗುವಂತೆಮಾಡಿದರು. ಇಂದ್ರನು ಸಿಟ್ಟಾಗಿ ಅವರ ಮೇಲೆ

ವಜ್ರಾಯುಧವನ್ನು ಪ್ರಯೋಗಿಸಲು ಹೊರಟಾಗ ತಮ್ಮ ತಪಶ್ಶಕ್ತಿಯಿಂದ ಅವನ್ನು ಸ್ತಂಭನ ಮಾಡಿ ಕೈಕಾಲು ಅಲುಗಾಡಿಸದಂತೆ ಮಾಡಿದರು. ಮುನಿಮಹರ್ಷಿಗಳು ಮನಸ್ಸು ಮಾಡಿದರೆ ಯಾವುದು ತಾನೇ ಅಸಾಧ್ಯ ! ಅದೇ ಯೋಗ್ಯತೆಯುಳ್ಳ ತಾವು ಕೂಡ ದೀನದಲಿತರಿಗಾಗಿ ಉಪಕಾರವನ್ನು ಮಾಡಲು ನಿಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದೀರಿ. ತಮ್ಮ ಪಾದಸ್ಪರ್ಶನ, ದೇಹಸಂದರ್ಶನ, ಸೇವೆ, ಶುಶ್ರೂಷೆಗಳನ್ನು ಮಾಡುವದರಿಂದ ಪಾಪಗಳೆಲ್ಲವೂ ಪರಿಹಾರವಾಗುವವು. ದೇವೇಂದ್ರನು ತಮ್ಮ ಪತ್ನಿಯ ವಿಷಯದಲ್ಲಿ ಘೋರ ಅನ್ಯಾಯ ಮಾಡಿದ್ದಾನೆ. ಅವನನ್ನು ಕರುಣೆಯಿಂದ ಉದ್ಧರಿಸಿ ಶಾಪದಿಂದ ಮುಕ್ತನನ್ನಾಗಿ ಮಾಡಲು ವಿಜ್ಞಾಪಿಸಿಕೊಳ್ಳಬೇಕೆಂದು ನಾವು ಇಲ್ಲಿಗೆ ಬಂದಿದ್ದೇವೆ. ತಾವು ನಮ್ಮ ಪ್ರಾರ್ಥನೆಯನ್ನು ಉದಾರ ಮನಸ್ಸಿನಿಂದ ನಡೆಸಿಕೊಟ್ಟು ಅನುಗ್ರಹಿಸಬೇಕು. ಮಹಾಸಾಧ್ವೀ ಶಿಖಾಮಣಿಯಾದ ಅಹಲ್ಯೆಯನ್ನು ವಂಚಿಸಿ ದಾರಿತಪ್ಪುವಂತೆ ಮಾಡಿದ್ದರೂ ಆ ಮಹೇಂದ್ರನನ್ನು ನೀವು ನಿಮ್ಮ ಶಾಪದಿಂದ ಸುಟ್ಟು ಹಾಕಲಿಲ್ಲ. ಇದು ನಿಮ್ಮ ಉದಾರ ಗುಣದ ಹಾಗೂ ಕ್ಷಮಾ ಗುಣದ ನಿದರ್ಶನವಾಗಿದೆ. ಈಗ ದೇವೇಂದ್ರನು ಕ್ರಿಮಿಕೀಟರೂಪದಿಂದ ಎಲ್ಲಿಯೋ ಕಣ್ಮರೆಯಾಗಿ ಹೋಗಿದ್ದರಿಂದ ಸ್ವರ್ಗವು ಅನಾಥವಾಗಿದೆ. ಅಮರಾವತಿಯು ಹಾಳುಸುರಿಯುತ್ತಿದೆ. ಮೂರುಲೋಕದ ಒಡೆಯನಾದ ಆ ಪುರಂದರನು ಇಲ್ಲದಿದ್ದರೆ ಪ್ರಪಂಚದ ಸ್ಥಿತಿಯೇ ಏರು ಪೇರಾಗಬಹುದು. ಆದುದರಿಂದ ನಮ್ಮ ಒಡೆಯನಾದ ಇಂದ್ರನು ತನ್ನ ದಿವ್ಯರೂಪವನ್ನು ಹೊಂದಿ ಸ್ವರ್ಗಸಿಂಹಾಸನವನ್ನು ಅಲಂಕರಿಸಲು ಅರ್ಹನಾಗುವಂತೆ ಮಾಡಿರಿ.

**ಗೌತಮ :-** ಅಪರಾಧ ಮಾಡಿ ಪತಿತನಾಗಿರುವ ಆ ಅಧಮನ ಹೆಸರನ್ನು ಕೂಡ ಉಚ್ಚರಿಸಬಾರದು. ಅವನು ದುಷ್ಟ, ಭ್ರಷ್ಟ, ಪಾಪಿಷ್ಠ, ಗರ್ವಿಷ್ಠ, ಘೋರ ಪಾಪವನ್ನು ಮಾಡಿದರೂ ಅವನಿಗೆ ಪಶ್ಚಾತ್ತಾಪವಾಗಿಲ್ಲ. ಇಂತಹ ಮಹಾಪಾತಕಿಗೆ ಪ್ರಾಯಶ್ಚಿತ್ತವೇ ಇಲ್ಲ. ಪುನರುದ್ಧಾರವಂತೂ ಇಲ್ಲವೇ ಇಲ್ಲ. ಆದರೂ ಇಂದ್ರಲೋಕದ ವಂದನೀಯ ವೃಂದಾರಕರಾದ ತಾವೆಲ್ಲರೂ ನನ್ನ ಆಶ್ರಮಕ್ಕೆ ಬಂದದ್ದೇ ಒಂದು ಭಾಗ್ಯ. ನಿಮ್ಮಂತವರ ಸಂದರ್ಶನವೇ ಮಹಾಪುಣ್ಯ. ''ಬಹಳ ಜನ ಮಹಾತ್ಮರ, ದೊಡ್ಡವರ ಅನುಗ್ರಹಕ್ಕೆ ಪಾತ್ರನಾದವನು ತನ್ನ ಪಾಪಗಳನ್ನೆಲ್ಲಾ ಕಳೆದುಕೊಂಡು ಪೂತಾತ್ಮನಾಗುವನು'' ಎಂದು ಶಾಸ್ತ್ರ ವಚನವಿದೆ. ನೀವು ದೊಡ್ಡವರು. ನೀವು ಹೇಳಿದಂತೆ ನಾನು ಮಾಡದಿದ್ದರೆ ನೀವು ಸಿಟ್ಟಾಗಿ ಶಾಪಕೊಡಲಿಕ್ಕೂ ಸಾಕು. ಆದುದರಿಂದ ನಾನು ಪಾಪಿಷ್ಠನಾದ ಆ ದೇವೇಂದ್ರನನ್ನು ಕ್ಷಮಿಸುತ್ತೇನೆ. ಅವನ ಮಹಾಪಾತಕ ಪರಿಹಾರಕ್ಕಾಗಿ ಒಂದು ಉಪಾಯವನ್ನು ಹೇಳುತ್ತೇನೆ.

ಗಣೇಶನು ವಿಘ್ನರಾಜ, ದೇವತೆಗಳಿಗೆಲ್ಲಾ ಅಧಿದೇವ. **''ಓಂ ನಮೋ ಗಣೇಶಾಯ''** ಎಂಬ ಆರು ಅಕ್ಷರವುಳ್ಳ ಮೂಲಮಂತ್ರವು ಸಕಲ ಸಿದ್ಧಿಗಳನ್ನು ಒದಗಿಸಿಕೊಡುವದು. ಚರಾಚರಾತ್ಮಕವಾದ ಸಕಲ ಪ್ರಪಂಚವನ್ನು ಸೃಷ್ಟಿಸುವವನು, ಪಾಲಿಸುವವನು, ಸಂಹರಿಸುವವನು ಆ ಗಣೇಶನೇ. ಆ ವಿನಾಯಕ ಷಡಕ್ಷರ ಮಂತ್ರವನ್ನು ನಾನು ನಿನಗೆ ಉಪದೇಶಿಸುವೆನು. ನೀವು ದೇವೇಂದ್ರನಿಗೆ ಉಪದೇಶಿಸಿರಿ. ಅವನು ಅದನ್ನು ಜಪಿಸಲಿ. ಆ ಜಪದಿಂದ ಸಿದ್ಧಿಯನ್ನು ಪಡೆದುಕೊಳ್ಳಲಿ. ಅದರಿಂದ ಅವನಿಗೆ ಮೊದಲಿನ

ದಿವ್ಯ ದೇಹ ಪ್ರಾಪ್ತವಾಗುವದು. ಈ ನನ್ನ ಶಾಪದಿಂದ ಅವನಿಗೆ ಮೂಡಿದ ಯೋನಿಚಿಹ್ನೆಗಳೆಲ್ಲವೂ ಮಾಯವಾಗಿ ಕಣ್ಣುಗಳಾಗಿ ಮಾರ್ಪಡುವವು. ಸಹಸ್ರನೇತ್ರನಾದ ಅವನು ಮೊದಲಿನಂತೆ ಮಹೇಂದ್ರಪದವಿಯನ್ನು ಪಡೆಯುವನು ಎಂದು ಹೇಳಿ ತಮ್ಮ ಮಾತು ಮುಗಿಸಿ ತಪೋನುಷ್ಠಾನದಲ್ಲಿ ತೊಡಗಿದರು.

ದೇವತೆಗಳಿಗೆ ಪರಮಾನಂದವಾಯಿತು. ಅವರು ಸಂತೋಷದಿಂದ ಗೌತಮರನ್ನು ಪ್ರದಕ್ಷಿಣೆ ಹಾಕಿ, ನಮಸ್ಕಾರಮಾಡಿ ಅವರ ಅಪ್ಪಣೆ ಪಡೆದು ತಮ್ಮ ಸ್ಥಾನಗಳಿಗೆ ತೆರಳಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಮಂತ್ರಕಥನ ಎಂಬ ಮೂವತ್ತೆರಡನೇ ಅಧ್ಯಾಯ ಮುಗಿದುದು*



## ಇಂದ್ರಶಾಪ ವಿಮೋಚನೆ

**ಅಧ್ಯಾಯ - ೩೩**

ದೇವೇಂದ್ರನ ಶಾಪ ವಿಮೋಚನೆಗೆ ಸುಲಭವಾದ ಗಣೇಶ ಷಡಕ್ಷರ ಮಂತ್ರವನ್ನು ಉಪದೇಶಿಸಿದ ಗೌತಮ ಮುನಿಗಳ ಕರುಣಾಳು ಸ್ವಭಾವವನ್ನು ದೇವತೆಗಳೆಲ್ಲರೂ ಪ್ರಶಂಸಿದರು. ಅವರೆಲ್ಲರೂ ಆ ಸ್ವರ್ಗಾಧಿಪತಿಯು ಅಡಗಿಕೊಂಡು ಕಣ್ಮರೆಯಾಗಿ ಕುಳಿತ ಕೊಳದ ಕಡೆಗೆ ಬಂದರು. ಅಲ್ಲಿ ಕುಳಿತ ದೇವೇಂದ್ರನಿಗೆ ಎದ್ದು ಬರಲು ಹೇಳಿದರು. ''ದೇವೇಂದ್ರ, ನೀನು ಕೂಡಲೇ ಕಮಲಕೋಶವನ್ನು ಬಿಟ್ಟು ಎದ್ದು ಹೊರಗೆ ಬಾ. ದೇವಋಷಿಯಾದ ನಾರದರು ಇಲ್ಲಿಯೇ ಇರುತ್ತಾರೆ. ಅವರ ಎದುರು ನಿನ್ನ ತಪ್ಪನ್ನು ಒಪ್ಪಿಕೋ. ಮಾಡಿದ ತಪ್ಪನ್ನು ಮುಚ್ಚಿಟ್ಟರೆ ದೋಷವು ವೃದ್ಧಿಯಾಗುವುದು. ಜನರೆಲ್ಲರ ಎದುರು ಬಹಿರಂಗ ಗೊಳಿಸಿದರೆ ಯಾರಿಂದಲಾದರೂ ಅದಕ್ಕೆ ಪರಿಹಾರ ದೊರೆತು, ಆ ದೋಷವು ಸಂಪೂರ್ಣವಾಗಿ ನಾಶವಾಗಬಹುದು.

**''ದೋಷೇ ಜಾತೇ ಸ್ವಯಂಸಂತಃ ಖ್ಯಾಪಯಂತೇ ಜನೇಷ್ಟು ತಮ್॥**
**ಆಚ್ಛಾದನೇ ದೋಷವೃದ್ಧಿಃ ಖ್ಯಾಪನೇ ತು ಲಯೋ ಭವೇತ್॥''**

ಎಂದು ಹಿರಿಯರು ಹೇಳಿದ್ದಾರೆ. ಆದುದರಿಂದ ನೀನು ನಿನ್ನ ತಪ್ಪನ್ನು ಬಚ್ಚಿಡದೇ ನಾರದರ ಎದುರು ಬಿಚ್ಚಿಡು. ಗೌತಮ ಮುನಿಗಳ ಮಹಾಸೂಚನೆಯಂತೆ ನಾರದರಿಂದ ಆ ವಿನಾಯಕ ಮಂತ್ರದ ಉಪದೇಶ ಪಡೆ. ಅದರ ಪ್ರಭಾವ ಅತ್ಯದ್ಭುತ.

''ಹಿಂದೆ ಪಾರ್ವತಿಯ ವಿವಾಹ ಸಮಯದಲ್ಲಿ ಬ್ರಹ್ಮಾದಿ ದೇವತೆಗಳು ಬಂದಿದ್ದರು. ಗಂಗಾಧರನ ಅರ್ಧಾಂಗಿಯಾದ ಆ ಸರ್ವಮಂಗಳೆಯ ಲೋಕೋತ್ತರವಾದ ಚೆಲುವು ಚಾರಿಮೆಗಳು ಚತುರ್ಮುಖನ ಚಿತ್ತವನ್ನು ಚಂಚಲಗೊಳಿಸಿದವು. ಅವನು ಕಾಮವಿಕಾರಕ್ಕೆ ಒಳಗಾದ. ಕೂಡಲೇ ಶಕ್ತಿಪಾತವಾಯಿತು. ಅದರಿಂದ ಅವನು ತನ್ನಲ್ಲಿಯೇ ನಾಚಿ ತಲೆತಗ್ಗಿಸಿ ನಿಂತುಕೊಂಡಾಗ ಸರ್ವಜ್ಞನಾದ ಪರಶಿವ ಅದನ್ನು ತಿಳಿದ. ಅವನು ಬ್ರಹ್ಮದೇವನಿಗೆ ಸರಿಯಾದ ಉಪಾಯವನ್ನು ಸೂಚಿಸಿದ. ಪ್ರಜಾಪತಿಯ ಪಾಪಪ್ರಕ್ಷಾಲನೆ ಮಾಡಿದ. ನಿನಗಾದರೂ ನಿನ್ನ ಪ್ರಮಾದದಿಂದ ನಡೆದುಹೋದ ಪಾಪಪರಿಹಾರಕ್ಕಾಗಿ

ಗೌತಮರು ಗಣೇಶಮಂತ್ರ ಜಪ ರೂಪ ಉಪಾಯವನ್ನು ಸೂಚಿಸಿದ್ದಾರೆ. ಆ ಮಂತ್ರಜಪವನ್ನು ಮಾಡಿ ನೀನು ನಿನ್ನ ಪಾಪವನ್ನು ತೊಳೆದುಕೋ. ದೋಷವನ್ನು ಕಳೆದುಕೋ'' ಹೀಗೆ ಸುರಸತ್ತಮರೆಲ್ಲರೂ ಇಂದ್ರನಿಗೆ ಉಪಾಯವನ್ನು ಸೂಚಿಸಿದರು.

ದೇವತೆಗಳ ಮಾತನ್ನು ಕೇಳಿ ಇಂದ್ರನು ಕಮಲಪುಷ್ಪದಿಂದ ಎದ್ದು ಹೊರಗೆ ಬಂದನು. ಅವನ ದೇಹ ದುರ್ಗಂಧದಿಂದ ನಾರುತ್ತಿತ್ತು. ಆಗ ದೇವತೆಗಳು ಅವನಿಗೆ ಸುಗಂಧ ಸಲಿಲದಿಂದ ಸ್ನಾನ ಮಾಡಿಸಿದರು. ಆಗ ಸುರಕುಲದ ಆಚಾರ್ಯರಾದ ಬೃಹಸ್ಪತ್ಯಾಚಾರ್ಯರು ಮುಂದೆ ಬಂದು ಮಹಾಗಣಪತಿಯ ಮೂಲಮಂತ್ರವನ್ನು ಇಂದ್ರನಿಗೆ ಉಪದೇಶಿಸಿದರು. ದೇವೇಂದ್ರನು ಆಚಮನಮಾಡಿ ಭಕ್ತಿಯಿಂದ ಆ ಮಂತ್ರವನ್ನು ಗ್ರಹಣ ಮಾಡಿದ. ಆ ಮೂಲಮಹಾಮಂತ್ರದ ಮಹಿಮೆ ಅತ್ಯದ್ಭುತ. ಮಂತ್ರೋಪದೇಶದ ಮರುಕ್ಷಣದಲ್ಲಿಯೇ ಅವನ ದೇಹ ತನ್ನ ಮೊದಲಿನ ದಿವ್ಯಕಾಂತಿಯನ್ನು ಪಡೆಯಿತು. ಶರೀರದ ತುಂಬ ಪಾಪ ಚಿಹ್ನೆಗಳಾಗಿ ಅಂಟಿಕೊಂಡಿದ್ದ ಭಗಚಿನ್ಹೆಗಳೆಲ್ಲವೂ ಸಾವಿರ ಕಣ್ಣುಗಳಾಗಿ ಮಾರ್ಪಟ್ಟವು. ಆ ಸುರರಾಜ ಸಹಸ್ರ ನೇತ್ರನಾಗಿ ಸೂರ್ಯನಂತೆ ಕಂಗೊಳಿಸಿದ. ಅವನು ಬೃಹಸ್ಪತ್ಯಾಚಾರ್ಯರನ್ನು, ನಾರದ ಮಹರ್ಷಿಗಳನ್ನು ವಂದಿಸಿದ. ತನ್ನ ಎಂದಿನ ದಿವ್ಯದೇಹವನ್ನು ಧರಿಸಿದ.

ಶಚೀಪತಿಯು ಶಾಪಮುಕ್ತನಾಗಿ ತನ್ನ ಎಂದಿನ ದಿವ್ಯಕಾಂತಿಯನ್ನು ಪಡೆದದ್ದು ನೋಡಿ ದೇವತೆಗಳೆಲ್ಲರೂ ಸಂತೋಷಭರಿತರಾಗಿ ಅಮರಾವತಿಗೆ ಹೋಗೋಣ ನಡೆ ಎಂದು ಹೇಳಿದರು. ಇಂದ್ರನು ಅದಕ್ಕೆ ಸಮ್ಮತಿಸಲಿಲ್ಲ. ''ಮಹಾಗಣಪತಿಯ ಪೂಜೆ ಮಾಡಿ ಅವನ ವರಪ್ರಸಾದವನ್ನು ಪಡೆಯುವವರೆಗೆ ನಾನು ನನ್ನ ರಾಜಧಾನಿಯನ್ನು ಪ್ರವೇಶಿಸುವುದಿಲ್ಲ. ನೀವೆಲ್ಲರೂ ನಿಮ್ಮ ನಿಮ್ಮ ಮನೆಗೆ ತೆರಳಿರಿ. ನಿಮ್ಮೆಲ್ಲರಿಗೂ ನನ್ನನ್ನು ಮತ್ತೆ ಮೊದಲಿನ ಮಹೇಂದ್ರನನ್ನಾಗಿ, ಸಹಸ್ರಾಕ್ಷನನ್ನಾಗಿ ಮಾಡಿದುದಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಇಂದ್ರಶಾಪ ವಿಮೋಚನೆ ಎಂಬ ಮೂವತ್ತಮೂರನೇ ಅಧ್ಯಾಯ ಮುಗಿದುದು*

—o—

**ನಾರದ :-** ರುಕ್ಮಾಂಗದ, ಇಂದ್ರನ ಮುಂದಿನ ವೃತ್ತಾಂತವನ್ನು ಹೇಳುತ್ತೇನೆ ಕೇಳು. ಜಂಭವೈರಿಯಾದ ದೇವೇಂದ್ರನು ಒಂದು ಕದಂಬ ವೃಕ್ಷದ ಕೆಳಗೆ ಪದ್ಮಾಸನದಲ್ಲಿ ಕುಳಿತ. ಏಕಾಗ್ರಮನಸ್ಸಿನಿಂದ ಆರು ಅಕ್ಷರವುಳ್ಳ ಶ್ರೀ ಗಣನಾಥನ ಮಂತ್ರವನ್ನು ಜಪಿಸತೊಡಗಿದನು. ಮೂಗಿನ ತುದಿಯಲ್ಲಿ ದೃಷ್ಟಿಯನ್ನು ನೆಟ್ಟನು. ನಿದ್ದೆಯನ್ನು ಮರೆತನು. ಆಹಾರವನ್ನು ತೊರೆದನು. ಒಂದು ಸಾವಿರ ವರ್ಷ ತಪಸ್ಸನ್ನು ಮಾಡಿದನು. ಅದರಿಂದ ಅವನಿಗೆ ಗಣಪತಿಯ ಸಾಕ್ಷಾತ್ಕಾರವಾಯಿತು. ಆನೆಯ ಮುಖದ ಸ್ಥೂಲಗಾತ್ರದ ಸೂಕ್ಷ್ಮನೇತ್ರದ ಆ ತೇಜಃಪುಂಜವಾದ ಆಕಾರವನ್ನು ಕಂಡು ಮೊದಲು ಮಹೇಂದ್ರನು ಹೆದರಿದನು. ವಿಘ್ನೇಶ್ವರನನ್ನು ಕುರಿತು ತಾನು ಕೈಕೊಂಡ ತಪೋನುಷ್ಠಾನಕ್ಕೆ ದೊಡ್ಡ ವಿಘ್ನವೇ ಬಂದಿತೆಂದು ಭಾವಿಸಿ ನಡುಗತೊಡಗಿದನು. ಆಗ ಗಣಾಧಿಪತಿಯು ಹೆದರಿಹೋದ ಸುರರಾಜನನ್ನು ಸಂತೈಸುತ್ತಾ ನುಡಿದನು. ''ದೇವರಾಜ, ಹೆದರಬೇಡ. ಯಾರ ಸಾಕ್ಷಾತ್ಕಾರಕ್ಕಾಗಿ ನೀನು ಸಾವಿರ ವರ್ಷ ತಪಸ್ಸನ್ನು ಮಾಡಿರುವೆಯೋ ಅಂತಹ ಮಹಾಗಣಪತಿಯೇ ನಾನು. ನಿನ್ನ ತಪಸ್ಸಿಗೆ ಮೆಚ್ಚಿ ನಿನಗೆ ನಾನು ಗೋಚರಿಸಿರುವೆನು. ಇಂದಿಗೆ ನಿನ್ನ ತಪಸ್ಸು ಸಿದ್ಧಿಸಿದೆ. ಬೇಕಾದ ವರಗಳನ್ನು ಕೇಳು'' ಎಂದು ಅನುಗ್ರಹಪೂರ್ವಕವಾಗಿ ನುಡಿದನು.

ಆಗ ದೇವೇಂದ್ರನು ಗಡಿಬಿಡಿಯಿಂದ ಎದ್ದು ಭಕ್ತಿಯಿಂದ ವಿನಾಯಕನಿಗೆ ನಮಸ್ಕಾರ ಮಾಡಿದನು. ಮತ್ತು ಕೈ ಮುಗಿದು ಬಿನ್ನವಿಸಿದನು.

**ಇಂದ್ರ :-** ಮಹಾಪ್ರಭು, ಹರಿಹರ ಬ್ರಹ್ಮಾದಿ ದೇವತೆಗಳು ಕೂಡ ನಿನ್ನ ಗುಣಗಳನ್ನು ಪೂರ್ಣವಾಗಿ ತಿಳಿಯಲಾರರು. ನೀನೇ ಪ್ರಪಂಚಕ್ಕೆಲ್ಲಾ ಮೂಲಾಧಾರ. ನಿನಗೆ ನಾಶವಿಲ್ಲ. ನೀನು ಅಕ್ಷರ. ನಿನ್ನ ಧ್ಯಾನಮಾಡಿ ಸನಕ, ಸನಂದನ, ಸನತ್ಕುಮಾರ, ಸನತ್‌ಸುಜಾತರೆಂಬ ಬ್ರಹ್ಮಮಾನಸಪುತ್ರರು ನಿನ್ನನ್ನು ಸಾಕ್ಷಾತ್ಕರಿಸಿಕೊಂಡು ಮುಕ್ತರಾದರು. ಗೌತಮರು ಉಪದೇಶಿಸಿದ ಗಣೇಶ ಮಂತ್ರದ ಜಪಾನುಷ್ಠಾನದಿಂದ ನೀನು ನನ್ನ ಕಣ್ಣಿಗೆ ಗೋಚರನಾಗಿರುವೆ. ಈ ಮಂತ್ರವನ್ನು ನನಗೆ ಚತುರ್ಮುಖ ಬ್ರಹ್ಮದೇವನು ಕೃಪೆ ಮಾಡಿ ಉಪದೇಶಿಸಿದ್ದ. ಈ ಮೂಲಮಂತ್ರವನ್ನು ನೀನು ಭಕ್ತಿಯಿಂದ ಜಪಮಾಡುವವರೆಗೆ ನಿನ್ನ ಸ್ಥಾನಮಾನಗಳಿಗೆ ಎಂದೂ ಚ್ಯುತಿ ಉಂಟಾಗುವುದಿಲ್ಲ. ಈ ಮಂತ್ರವನ್ನು ನೀನು ಮದದಿಂದ ಮರೆತರೆ ನೀನು ನಿನ್ನ ಸ್ಥಾನದಲ್ಲಿ ಉಳಿಯವುದಿಲ್ಲ ! ಎಂದು ಆ ಪಿತಾಮಹ ಮಂತ್ರೋಪದೇಶ ಮಾಡುವಾಗಲೇ ಎಚ್ಚರಿಕೆ ಕೊಟ್ಟಿದ್ದರು. ಆದರೆ ಸುಖಲೋಲುಪನಾದ ನನಗೆ ಅದೆಲ್ಲವೂ ಮರೆತುಹೋಯಿತು. ಕಾಮಾತುರನಾದ ನಾನು ಮುನಿಪತ್ನಿಯನ್ನು ವಂಚಿಸಿ ಅವಳನ್ನು ಕೆಡಿಸಿದೆ. ನಾನು ಕೆಟ್ಟೆ. ಪ್ರಭು, ಸುರಗುರು ಬೃಹಸ್ಪತ್ಯಾಚಾರ್ಯರು ಆ ಮೂಲಮಂತ್ರವನ್ನು ಮತ್ತೆ ನನಗೆ ಉಪದೇಶಿಸಿ ಅನುಗ್ರಹಿಸಿದರು. ಅದರ ಪ್ರಭಾವದಿಂದ ನಾನು ಸಹಸ್ರನೇತ್ರನಾಗಿದ್ದೇನೆ.

ಮಂತ್ರಜಪದಿಂದ ನೀನು ಸುಪ್ರಸನ್ನನಾಗಿದ್ದರೆ ನಿನ್ನಲ್ಲಿ ಒಂದು ವರವನ್ನು ಬೇಡುತ್ತೇನೆ. ನಾನು ತಪಸ್ಸು ಮಾಡಿದ ಈ ಕದಂಬ ಕ್ಷೇತ್ರವು **ಚಿಂತಾಮಣಿಪುರ** ಎಂದು ಪ್ರಸಿದ್ಧವಾಗಲಿ. ನನ್ನ ಮನಸ್ಸು ಯಾವಾಗಲೂ ನಿನ್ನನ್ನೇ ಧ್ಯಾನಿಸುತ್ತಾ ಇರಲಿ. ನಾನು ತಪಿಸಿದ ಈ ಸರೋವರವು **ಚಿಂತಾಮಣಿತೀರ್ಥ** ಎಂದು ಪ್ರಖ್ಯಾತವಾಗಲಿ. ಇಲ್ಲಿ ಸ್ನಾನಮಾಡಿದವರ ಮನೋರಥಗಳೆಲ್ಲವೂ ಪೂರ್ಣವಾಗಲಿ.''

ದೇವೇಂದ್ರನ ಕೋರಿಕೆಗಳಿಗೆಲ್ಲಾ ತಥಾಸ್ತು ಎಂದು ಹೇಳಿದ ಆ ಗಣನಾಥ. ಮತ್ತು ''ದೇವೇಂದ್ರ, ನೀನು ಪ್ರಾರ್ಥಿಸಿದುದೆಲ್ಲವೂ ಸಿದ್ಧಿಸುವದು. ಇಂದ್ರಪದವಿಯಲ್ಲಿ ನೀನು ಸ್ಥಿರವಾಗಿ ನಿಂತು ಮೂರುಲೋಕದ ಆಧಿಪತ್ಯವನ್ನು ನಿರಂತರವಾಗಿ ನಡೆಸುವಂತೆ ಮತ್ತೊಂದು ವರವನ್ನು ಕರುಣಿಸುತ್ತೇನೆ. ನಿನಗೆ ಎಂದೂ ನನ್ನ ವಿಸ್ಮರಣ ಆಗದಿರಲಿ. ನಿನಗೆ ಎಂದಾದರೂ ಏನಾದರೂ ಸಂಕಟ ಬಂದರೆ ನನ್ನನ್ನು ಸ್ಮರಿಸು. ನಿನ್ನ ಅಪೇಕ್ಷೆಯಂತೆ ನೀನು ತಪಸ್ಸು ಮಾಡಿದ ಈ ಸ್ಥಳದಲ್ಲಿಯೇ **ಚಿಂತಾಮಣಿ ವಿನಾಯಕ** ಎಂಬ ಹೆಸರಿನಿಂದ ನಾನು ನೆಲೆಸುತ್ತೇನೆ.'' ಎಂದು ಅನುಗ್ರಹಪೂರ್ವಕವಾಗಿ ಹೇಳಿದನು.

ಅನಂತರ ಸುರಪತಿಯು ಆ ಪರಬ್ರಹ್ಮನು ಪ್ರಾದುರ್ಭೂತನಾದ ಸ್ಥಳದಲ್ಲಿಯೇ ಸ್ಫಟಿಕಮಯವಾದ ಮಹಾಗಣಪತಿಯ ಸುಂದರ ಮೂರ್ತಿಯನ್ನು ಸ್ಥಾಪಿಸಿದನು. ಆ ವಿನಾಯಕನಿಗೆ ಒಂದು ದಿವ್ಯವಾದ ರತ್ನಖಚಿತವಾದ ಮಂದಿರವನ್ನೂ ನಿರ್ಮಿಸಿದನು.

ರುಕ್ಮಾಂಗದ, ನೀನಾದರು ಈಗ ಈ ಚಿಂತಾಮಣಿ ಸರೋವರದಲ್ಲಿ ಸ್ನಾನ ಮಾಡಿ ಈ ಜಲದಿಂದಲೇ ವಿನಾಯಕನನ್ನು ಅಭಿಷೇಕಮಾಡು. ಭಕ್ತಿಯಿಂದ ಆ ದೇವರನ್ನು ಅರ್ಚಿಸು. ಅವನ ಧ್ಯಾನೋಪಾಸನೆಯಿಂದ ನಿನ್ನ ಕುಷ್ಠರೋಗವು ನಷ್ಟವಾಗಿ ಹೋಗುವುದು. ನಿನ್ನ ದೇಹವು ದಿವ್ಯಕಾಂತಿಯಿಂದ ಕಂಗೊಳಿಸುವಂತೆ ಆಗುವುದು.''

ರೋಗಾಕ್ರಾಂತನಾದ ರುಕ್ಮಾಂಗದ ಮಹಾರಾಜನಿಗೆ ನಾರದ ಮಹಾಋಷಿಗಳು ಚಿಂತಾಮಣಿ ವಿನಾಯಕನ ಮಹಾಮಹಿಮೆಯನ್ನು ತಿಳಿಸಿ ಆಶೀರ್ವದಿಸಿ ಅಲ್ಲಿಂದ ಪ್ರಯಾಣ ಬೆಳೆಸಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಚಿಂತಾಮಣಿ ತೀರ್ಥವರ್ಣನೆ ಎಂಬ ಮೂವತ್ತನಾಲ್ಕನೇ ಅಧ್ಯಾಯ ಮುಗಿದುದು*

—o—

## ಅಧ್ಯಾಯ - ೩೫

ನಾರದರು ರುಕ್ಮಾಂಗದ ರಾಜನಿಗೆ ರೋಗಮುಕ್ತನಾಗುವ ಉಪಾಯವನ್ನು ತಿಳಿಸಿ 'ಚಿಂತಾಮಣಿ ಕ್ಷೇತ್ರಕ್ಕೆ ಹೋಗಿ ವಿನಾಯಕನ ಆರಾಧನೆಯನ್ನು ಮಾಡು' ಎಂದು ಹೇಳಿ ಹೊರಟು ಹೋದ ಬಳಿಕ ಮಹಾರಾಜನು ಅದೇ ವಿಷಯವನ್ನು ಚಿಂತಿಸುತ್ತಾ ಕುಳಿತುಕೊಂಡಿದ್ದನು. ಅಷ್ಟರಲ್ಲಿ ಅವನನ್ನು ಹುಡುಕಿಕೊಂಡು ಸೈನಿಕರು. ರಾಜಪರಿವಾರದವರು ಅಲ್ಲಿಗೆ ಬಂದರು. ಮೈಯೆಲ್ಲಾ ಕುಷ್ಠರೋಗ ಹಿಡಿದ ತಮ್ಮ ರಾಜನನ್ನು ಕಂಡು ಅವರೆಲ್ಲರಿಗೂ ಆಶ್ಚರ್ಯದ ಆಘಾತವೇ ಆಯಿತು. ಬಂಗಾರ ಬಣ್ಣದ ಮನ್ಮಥನಂತಿದ್ದ ತಮ್ಮ ದೊರೆ ಹೀಗೇಕೆ ತೊನ್ನು ಹಿಡಿದು ದೇಹ ಕೆಟ್ಟು ಕುರೂಪಿಯಾಗಿ ಕುಳಿತುಕೊಂಡಿದ್ದಾನೆ ಎಂದು ಕಳವಳಿಸಿದರು. ಕಾತುರದಿಂದ ಹೀಗೇಕೆ ಆಯಿತೆಂದು ಕೇಳಿದರು. ಆಗ ರಾಜನು ತಾನು ನೀರಡಿಸಿ ವಾಚಕ್ನವಿ ಋಷಿಗಳ ಆಶ್ರಮಕ್ಕೆ ಹೋಗಿದ್ದನ್ನು, ಅಲ್ಲಿ ಮುನಿಪತ್ನಿಯಾದ ಮುಕುಂದೆಯ ಕಾಮಚೇಷ್ಟೆಯನ್ನು, ಪ್ರೇಮಭಿಕ್ಷೆಯನ್ನು ಅವಳ ಕಾಮಯಾಚನೆಯನ್ನು, ತಾನು ತಿರಸ್ಕರಿಸಿದಾಗ ಕೋಪದಿಂದ ಅವಳು ಕೊಟ್ಟ ಶಾಪದ ಪರಿಣಾಮವಾಗಿ ತನಗೆ ಈ ಭಯಂಕರವಾದ ಕುಷ್ಠರೋಗ ತಗುಲಿದ್ದನ್ನು, ಅದಕ್ಕಾಗಿ ಮರಗಿ ಕೊರಗಿ ಕುಳಿತುಕೊಂಡ ತನಗೆ ನಾರದರ ಉಪದೇಶವನ್ನು, ಚಿಂತಾಮಣಿ ಕ್ಷೇತ್ರದ ವಿನಾಯಕನ ಮಹಾಮಹಿಮೆಯನ್ನೂ ವಿವರವಾಗಿ ತಿಳಿಸಿ ಹೇಳಿದನು. ಅನಂತರ ಮಹಾರಾಜನು ತನ್ನ ಸೈನಿಕರಿಗೆ ''ನಾನು ಆ ಚಿಂತಾಮಣಿ ವಿನಾಯಕನ ಕ್ಷೇತ್ರಕ್ಕೆ ತೆರಳುವೆನು. ನೀವೂ ನಮ್ಮ ಜೊತೆಗೆ ಬನ್ನಿರಿ'' ಎಂದೂ ತಿಳಿಸಿದರು.

ಇಂಥ ಸುಸಂಧಿ ಸಂದರ್ಭವನ್ನು ಕಳೆದುಕೊಳ್ಳಬಾರದೆಂದು, ಮಂತ್ರಿಗಳು, ಸೈನಿಕರು ಅವನೊಡನೆ ಚಿಂತಾಮಣಿಯತೀರ್ಥ ಎಂದು ಹೆಸರಾದ ವಿನಾಯಕತೀರ್ಥಕ್ಕೆ ತೆರಳಿದರು. ಆ ಗಣೇಶ ತೀರ್ಥವನ್ನು ನೋಡಿದ ಕೂಡಲೇ ರುಕ್ಮಾಂಗದನ ದೇಹಕ್ಕೆ ತಗುಲಿದ ರೋಗವೆಲ್ಲವೂ ಮಾಯವಾಯಿತು. ಕುಷ್ಠರೋಗವು ನಷ್ಟವಾಗಿ ಮೊದಲಿನಂತೆ ದಿವ್ಯಕಾಂತಿಯು ಅವನ ದೇಹದಲ್ಲಿ ಕಳಕಳಿಸತೊಡಗಿತು. ಆ ಗಣೇಶ ತೀರ್ಥದಲ್ಲಿ ಮಹಾರಾಜನು ವಿದ್ಯುಕ್ತವಾಗಿ ಸ್ನಾನ ಮಾಡಿದನು. ಬಗೆಬಗೆಯ ದಾನದಕ್ಷಿಣೆಗಳನ್ನು ನೀಡಿದನು. ಅತ್ಯಂತ ಭಕ್ತಿಯುಕ್ತವಾದ ಮನಸ್ಸಿನಿಂದ, ಏಕಾಗ್ರಚಿತ್ತದಿಂದ ಚಿಂತಾಮಣಿ ವಿನಾಯಕನನ್ನು ಆರಾಧಿಸಿದನು.

ಮಹಾರಾಜನು ಮಾಡಿದ ನಿರಂತರ ಧ್ಯಾನೋಪಾಸನೆಗಳ ಫಲವು ತಕ್ಷಣ ಕಂಡು ಬಂದಿತು. ಗಣೇಶ ವ್ರತದ ಪುಣ್ಯದಿಂದ ದಿವ್ಯವಾದ ವಿಮಾನವು ಬಂದಿತು. ಅದರಿಂದ ವಿನಾಯಕನ ಸೇವಕರು ಇಳಿದು ಬಂದು ರಾಜನಿಗೆ ಹೇಳಿದರು. ''ಮಹಾರಾಜ, ನಿನ್ನ ಸೇವೆಯಿಂದ ಪ್ರೀತನಾದ ವಿನಾಯಕ ಭಗವಂತನು ತನ್ನ ವಿಮಾನದಲ್ಲಿ ನಿನ್ನನ್ನು ಕರೆದುಕೊಂಡು ಬರಲು ನಮ್ಮನ್ನು ಕಳಿಸಿಕೊಟ್ಟಿದ್ದಾನೆ. ನೀನು ಈಗಲೇ ಈ ವಿಮಾನವನ್ನು ಆರೋಹಣಮಾಡು. ನೀನು ನಮ್ಮೊಡನೆ ಗಣೇಶ ಸನ್ನಿಧಿಗೆ ನಡೆ'' ಎಂದು ಹೇಳಿದರು.

ಆಗ ರುಕ್ಮಾಂಗದ ಮಹಾರಾಜನು ಅತ್ಯಂತ ಭಕ್ತಿಯಿಂದ ಆ ಗಣನಾಯಕರಿಗೆ ವಂದಿಸಿ ಕೈ ಮುಗಿದು ಹೇಳಿದ. "ಪೂಜ್ಯರೇ, ನಾನು ಧನ್ಯ, ಧನ್ಯ. ನಾನು ಜನ್ಮಾಂತರದಲ್ಲಿ ಮಾಡಿದ ಪುಣ್ಯಗಳು ಇಂದು ಫಲಿಸಿವೆ. ಹಗಲು-ರಾತ್ರಿ ಪ್ರತಿಕ್ಷಣದಲ್ಲಿಯೂ ಆ ಗಣಪತಿಯ ದರ್ಶನವನ್ನು ಪಡೆಯುತ್ತಲಿರುವ ನೀವು ನಿಜವಾಗಿಯೂ ಧನ್ಯರೂ, ಮಾನ್ಯರೂ, ಪೂಜನೀಯರೂ ಆಗಿದ್ದೀರಿ. ನನಗೆ ಆ ಗಣಪತಿಯ ಲೋಕಕ್ಕೆ ಬರಲು ವಿಮಾನವನ್ನು ತೆಗೆದುಕೊಂಡು ಬಂದಿದ್ದೀರಿ. ಆದರೆ ನನ್ನ ತಂದೆ ಭೀಮರಾಜ ತಾಯಿ ಚಾರುಹಾಸಿನಿ ಇಬ್ಬರೂ ಪರಮ ಗಣೇಶಭಕ್ತರು. ಅವರಿಬ್ಬರನ್ನು ಬಿಟ್ಟು ನಾನು ಹೇಗೆ ಬರಲಿ" ಎಂದು ಬೆಸಗೊಂಡ.

ಆಗ ಗಣಾಧೀಶನು ನಸುನಕ್ಕು ನುಡಿದನು. "ಮಹಾರಾಜ ಹಾಗಿದ್ದರೆ ನೀನು ನಿನ್ನ ತಂದೆ-ತಾಯಿಗಳ ಹೆಸರಿನಿಂದ ನೀನು ಮತ್ತೊಮ್ಮೆ ಈ ಗಣೇಶತೀರ್ಥದಲ್ಲಿ ಸ್ನಾನಮಾಡು. ಸ್ನಾನದಿಂದ ಬರುವ ಪುಣ್ಯವನ್ನು ಭೀಮಮಹಾರಾಜ ಮತ್ತು ಚಾರುಹಾಸಿನಿಯರಿಗೆ ಧಾರೆ ಎರೆದುಕೊಡು. ಆ ಪುಣ್ಯ ಪ್ರಭಾವದಿಂದ ಪರಿಪೂತರಾದ ನಿನ್ನ ಮಾತಾ-ಪಿತೃಗಳನ್ನು ಕೂಡ ಈ ವಿಮಾನದಲ್ಲಿ ಕೂಡಿಸಿಕೊಂಡು ಕರೆದುಕೊಂಡು ಹೋಗುವೆವು. ಅದಕ್ಕಾಗಿ ದರ್ಭೆಯಿಂದ ಅವರ ಪ್ರತಿಮೆಗಳನ್ನು ಮಾಡಿ ಅವರವರ ಹೆಸರನ್ನು ಉಚ್ಚರಿಸಿ ಅವುಗಳನ್ನು ಹಿಡಿದುಕೊಂಡು ನೀನು ಸ್ನಾನ ಮಾಡು. ನೀನು ಯಾರ ಯಾರ ಹೆಸರಿನಿಂದ ದರ್ಭೆಯ ಮೂರ್ತಿಗಳನ್ನು ಮಾಡಿ ಅವುಗಳಲ್ಲಿ ಆಹ್ವಾನವನ್ನು ಮಾಡಿ ಅವುಗಳನ್ನು ಹಿಡಿದುಕೊಂಡು ಸ್ನಾನ ಮಾಡುವೆಯೋ ಅವರೆಲ್ಲರೂ ಪೂತಾವದಾತರಾಗುವರು. ನೀನು ಹಾಗೂ ನಿನ್ನ ತಾಯಿ ತಂದೆ ಮತ್ತು ನೀನು ದರ್ಭದ ಮೂರ್ತಿಗಳನ್ನು ಮಾಡಿ ಸ್ನಾನ ಮಾಡಿಸಿದ ಎಲ್ಲರನ್ನೂ ನಾವು ಗಣೇಶ ಲೋಕಕ್ಕೆ ಈ ವಿಮಾನದಲ್ಲಿ ಕರೆದು ಒಯ್ಯುತ್ತೇವೆ." ಎಂದು ಹೇಳಿದರು.

ಆಗ ರುಕ್ಮಾಂಗದ ರಾಜನು ಮೊದಲು ತನ್ನ ತಾಯಿ ಚಾರುಹಾಸಿನಿ, ಮತ್ತು ತಂದೆ ಭೀಮರಾಜರ ದರ್ಭೆಯ ಪ್ರತಿಮೆಗಳನ್ನು ಮಾಡಿ ಅವುಗಳಲ್ಲಿ

**"ಕುಶೋಽಸಿ ಕುಶಪುತ್ರೋಽಸಿ ಬ್ರಹ್ಮಣಾ ನಿರ್ಮಿತಃ ಪುರಾ ।**
**ತ್ವಯಿ ಸ್ನಾತೇ ತು ಸ್ನಸ್ನಾತೋ ಯಸ್ಯೇದಂ ಗ್ರಂಥಿ ಬಂಧನಂ"**

ಎಂಬ ಮಂತ್ರವನ್ನು ಉಚ್ಚರಿಸಿ ಆ ದರ್ಭೆಯ ಮೂರ್ತಿಗಳಿಗೆಲ್ಲಾ ಪವಿತ್ರದ ಗಂಟು ಹಾಕಿದ. ತನ್ನ ಸ್ನಾನ ಮಾಡಿದ ಪುಣ್ಯವನ್ನೆಲ್ಲ ಧಾರೆಯೆರೆದುಕೊಟ್ಟನು. ಆ ಪವಿತ್ರ ಗ್ರಂಥಿಗಳನ್ನೆಲ್ಲಾ ಹಿಡಿದುಕೊಂಡು ಸ್ನಾನಮಾಡಿದನು. ಅವುಗಳಿಗೂ ಸ್ನಾನಮಾಡಿಸಿದನು.

ಅನಂತರ ರುಕ್ಮಾಂಗದ ರಾಜನು ತನ್ನ ಸೈನಿಕರು, ಹಾಗೂ ಮಂತ್ರಿಗಳೊಂದಿಗೆ ತನ್ನ ರಾಜಧಾನಿಯಾದ ಕೌಂಡಿಣ್ಯಪುರಕ್ಕೆ ತೆರಳಿದನು. ಅಲ್ಲಿ ತನ್ನ ತಂದೆ ಭೀಮಮಹಾರಾಜ ಮತ್ತು ತಾಯಿ ಚಾರುಹಾಸಿನಿದೇವಿಯವರಿಗೂ, ಪ್ರಜಾಪರಿವಾರಕ್ಕೂ ತಾನು ಮಾಡಿದ ಗಣೇಶತೀರ್ಥದ ಸ್ನಾನದ ಪುಣ್ಯವನ್ನು ಹಂಚಿಕೊಟ್ಟನು. ರುಕ್ಮಾಂಗದನು ಸ್ನಾನದ ದಿವ್ಯಫಲ ಕೊಟ್ಟ ಮಾತ್ರದಿಂದಲೇ ಅವರೆಲ್ಲರಲ್ಲಿಯೂ ಗಣೇಶನ ಬಗೆಗೆ ತೀವ್ರವಾದ ಅತ್ಯುತ್ಕೃಷ್ಟವಾದ ಭಕ್ತಿ ಉಕ್ಕಿತು. ಅವರೆಲ್ಲರೂ ಗಣೇಶನ ಏಕಾಂತಭಕ್ತರಾಗಿ ಅವನ ಧ್ಯಾನೋಪಾಸನೆಗಳನ್ನು ಏಕಾಗ್ರಚಿತ್ತದಿಂದ ಮಾಡಿದರು. ಅವರೆಲ್ಲರಿಗೂ ದಿವ್ಯದೇಹ

ಪ್ರಾಪ್ತವಾಯಿತು. ಅವರೆಲ್ಲರನ್ನು ಕರೆಯಲು ಗಣೇಶಲೋಕದಿಂದ ಬಂದ ವಿಮಾನಗಳನ್ನು ಏರಿಕೊಂಡು ಗಣೇಶನ ಸನ್ನಿಧಿಯನ್ನು ಕುರಿತು ತೆರಳಿದರು. ರುಕ್ಮಾಂಗದ ರಾಜ, ಭೀಮರಾಜ, ಚಾರುಹಾಸಿನಿಯರು ಮಾತ್ರವಲ್ಲದೆ ಕೌಂಡಿಣ್ಯಪುರದ ಸ್ತ್ರೀಯರು, ಬಾಲಕರು, ತರುಣರೂ, ವೃದ್ಧರೂ, ಚಂಡಾಲರೂ, ಬ್ರಾಹ್ಮಣರೂ ಎಲ್ಲರೂ ವಿನಾಯಕನ ದಿವ್ಯಲೋಕವನ್ನು ಪಡೆದರು.

ಗಣೇಶತೀರ್ಥದಲ್ಲಿ ಸ್ನಾನಮಾಡಿದವನು ರುಕ್ಮಾಂಗದ ರಾಜ ಒಬ್ಬನೇ ಆದರೂ ಅಲ್ಲಿ ಸ್ನಾನ ಮಾಡಿದ ಪುಣ್ಯಫಲವನ್ನು ದಾನ ಮಾಡಿದ ಮಾತ್ರದಿಂದಲೇ ಸ್ನಾನಮಾಡದ ಅವನ ತಾಯಿ-ತಂದೆ ಪ್ರಜಾಪರಿವಾರ ಎಲ್ಲರೂ ಆ ವಿನಾಯಕನ ದಿವ್ಯಲೋಕಕ್ಕೆ ಪ್ರಯಾಣ ಬೆಳೆಸಿದರು. ಈ ಗಣೇಶಮಹಿಮೆಯನ್ನು ಹೇಳಿದವರು. ಕೇಳಿದವರು ಸದ್ಗತಿಯನ್ನು ಹೊಂದುವರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಕದಂಬಕ್ಷೇತ್ರಮಹಿಮೆ ಎಂಬ ಮೂವತ್ತೈದನೇ ಅಧ್ಯಾಯ ಮುಗಿದುದು*



## ಗೃತ್ಸಮದ ಉಪಾಖ್ಯಾನ

**ಅಧ್ಯಾಯ - ೩೬**

**ವೇದವ್ಯಾಸ :-** ಪೂಜ್ಯನಾದ ಪಿತಾಮಹ, ಗಣೇಶತೀರ್ಥದ ಮಹಿಮೆಯನ್ನು ರುಕ್ಮಾಂಗದನ ಚರಿತ್ರೆಯನ್ನು, ಕೌಂಡಿಣ್ಯ ಪುರವಾಸಿಗಳ ಪುಣ್ಯಲೋಕ ಪ್ರಾಪ್ತಿಯನ್ನೂ ನಿಮ್ಮ ಮುಖದಿಂದ ಕೇಳಿ ಧನ್ಯನಾದೆ. ಆದರೆ ಮುಂದೆ ಆ ಮುಕುಂದೆಯ ಗತಿ ಏನಾಯಿತು. ಅವಳ ಚರಿತ್ರೆಯನ್ನು ವಿವರಿಸಿರಿ.

**ಬ್ರಹ್ಮ :-** ರುಕ್ಮಾಂಗದನು ಮುಕುಂದೆಯ ದುರ್ನಡತೆಗೆ ಹೇಸಿ, ರೋಸಿ ಹೊರಟು ಹೋದ ಬಳಿಕ ಮುಕುಂದೆಯು ಕಾಮಾಗ್ನಿಯಿಂದ ಉರಿದೆದ್ದಳು. ಮಂದ ಮಾರುತದಿಂದ ತೊನೆದಾಡುವ ಗಿಡಬಳ್ಳಿಗಳಿಂದ ಸುಂದರವಾದ ಆ ವನದ ನಿಸರ್ಗ ಸೌಂದರ್ಯವನ್ನು ನೋಡಿ ಅವಳಿಗೆ ಕಾಮಾಗ್ನಿಯು ಉದ್ರಿಕ್ತವಾಯಿತು. ರುಕ್ಮಾಂಗದನಲ್ಲಿ ಅವಳ ಮನಸ್ಸು ನೆಟ್ಟು ಹೋಗಿತ್ತು. ಕಾಮಾತುರತೆಯಿಂದ ಕಳವಳಗೊಂಡ ಅವಳು ಅನ್ನ, ನೀರು ಬಿಟ್ಟಳು. ಕಾನನದ ಕುಂಜವನದಲ್ಲಿ ಅತ್ತಿತ್ತ ಗೊತ್ತುಗುರಿಯಿಲ್ಲದೆ ತಿರುಗಾಡತೊಡಗಿದಳು.

ಆಗ ಆಕಸ್ಮಾತ್ತಾಗಿ ಅಲ್ಲಿಗೆ ದೇವೇಂದ್ರನು ಬಂದ. ಅವನು ನವತಾರುಣ್ಯದಿಂದ ನಳನಳಿಸುವ ಮುಕುಂದೆಯನ್ನು ನೋಡಿದ. ಅವನ ಮನ್ಸಸು ಮುಗ್ಧವಾಯಿತು. ಅವನು ರುಕ್ಮಾಂಗದನ ರೂಪವನ್ನು ಧರಿಸಿದ. ಮುಕುಂದೆಯ ಬಳಿಗೆ ಬಂದ. ತನ್ನನ್ನು ಧಿಕ್ಕರಿಸಿ ಹೋದ ರುಕ್ಮಾಂಗದನು ತನ್ನ ರೂಪಕ್ಕೆ ಮರುಳಾಗಿ ಮರಳಿ ಬಂದಿದ್ದಾನೆ ಎಂದು ತಿಳಿದಳು. ರುಕ್ಮಾಂಗದ ರೂಪಧಾರಿಯಾದ ದೇವೇಂದ್ರನೊಂದಿಗೆ ಆನಂದದಿಂದ ಸ್ವಚ್ಛಂದ ವಿಹಾರಗೈದಳು. ರಸಿಕನಾದ ಆ ಸುರರಾಜನಾದರು ತನ್ನ ಗುಟ್ಟನ್ನು ಬಿಟ್ಟುಕೊಡದೆ ರತಿಯಂತೆ ರೂಪಸಿಯಾದ ಮಾನವಿ ಮುಕುಂದೆಯೊಡನೆ ರತಿಕೇಳಿಯಾಡಿ ಕೃತಾರ್ಥನಾಗಿ ಹೊರಟುಹೋದ.

ಅನಂತರ ಮುಕುಂದೆಯು ವ್ಯತ್ಯಸ್ತವಾದ ತನ್ನ ವಸ್ತ್ರವನ್ನು ಸರಿಪಡಿಸಿಕೊಂಡು ಉಲ್ಲಾಸದಿಂದ ಮನೆಗೆ ಮರಳಿದಳು. ವಾಚಕ್ನವಿ ಮುನಿಗೆ ಇದಾವುದೂ ಗೊತ್ತಾಗಲೇ ಇಲ್ಲ. ಅವನು ಎಂದಿನಂತೆ ಮುಕುಂದೆಯೊಡನೆ ಸಂಸಾರ ಮಾಡತೊಡಗಿದ. ಮುಕುಂದೆಯು ದೇವೇಂದ್ರನಿಂದ ಗರ್ಭಧರಿಸಿದಳು. ಸುಂದರನಾದ ಒಂದು ಗಂಡುಮಗುವಿಗೆ ಜನ್ಮವಿತ್ತಳು. ವಾಚಕ್ನವಿ ಮುನಿಯು ಅದು ತನ್ನದೇ ಮಗು ಎಂದು ತಿಳಿದು ಬಹಳ ಸಂತೋಷವಾಯಿತು. ಅವನು ಉತ್ಸಾಹದಿಂದ ಮಗುವಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದನು. ಗೃತ್ಸಮದ ಎಂಬ ಮುದ್ದಾದ ಹೆಸರನ್ನು ಇಟ್ಟನು. ಮುಂದೆ ಸಕಾಲದಲ್ಲಿ ಅವನಿಗೆ ಉಪನಯನಮಾಡಿ ಯಥಾಸಾಂಗವಾಗಿ ವೇದ ಅಧ್ಯಾಯನ ಮಾಡಿಸಿದನು.

ಪ್ರಬುದ್ಧ ಪಂಡಿತನಾದ ತನ್ನ ಪುತ್ರನಿಗೆ ಸಿದ್ಧಿಪ್ರದವಾದ **'ಗಣಾನಾಂತ್ವಾ'** ಎಂಬ ಮಹಾಮಂತ್ರವನ್ನು ಉಪದೇಶಿಸಿದನು. ''ಆಗಮಗಳಲ್ಲಿ ಉಕ್ತವಾದ ಎಲ್ಲ ಮಂತ್ರಗಳಿಗಿಂತಲೂ ಈ 'ಗಣಾನಾಂತ್ವಾ' ಎಂಬ ಮಂತ್ರವು ಶ್ರೇಷ್ಠವಾದದ್ದು. ಈ ಮಂತ್ರವನ್ನು ಜಪಿಸಿ, ತಪಸ್ಸನ್ನು ಮಾಡಿ ಗಜಾನನ ದೇವನನ್ನು ಪ್ರಸನ್ನಗೊಳಿಸು''. ಎಂದು ಹೇಳಿದನು.

ತಂದೆಯು ಆದೇಶಿಸಿ ಉಪದೇಶಿಸಿದಂತೆ ಗೃತ್ಸಮದನು ಗಣೇಶ ಮಂತ್ರವನ್ನು ಜಪಿಸುತ್ತಾ ಬಹುಕಾಲ ತಪಸ್ಸನ್ನು ಮಾಡಿದನು. ಹೀಗೆ ಬಹುಕಾಲ ಕಳೆದವು. ಮಗಧ ದೇಶದಲ್ಲಿ ಮಗಧ ಎಂಬ ಹೆಸರಿನ ರಾಜನು ಇದ್ದ. ಅವನು ಶೂರನಿದ್ದಂತೆ ದಾನಿಯೂ ಆಗಿದ್ದ, ಮಾನಿಯೂ ಆಗಿದ್ದ, ವೈರಿಭಯಂಕರನೂ ಆಗಿದ್ದ. ಅವನಿಗೆ ಬುದ್ಧಿಮತ್ತೆಯಲ್ಲಿ ಬೃಹಸ್ಪತಿಯನ್ನು ಮೀರಿಸುವ ಇಬ್ಬರು ಮಂತ್ರಿಗಳಿದ್ದರು. ಅವನ ಮಹಾರಾಣಿಯಾದ ಅಂಜಿಕೆ ಸತೀಶಿರೋಮಣಿ. ರೂಪದಲ್ಲಿ ರತಿ, ಗುಣದಲ್ಲಿ ಸತಿ.

ಒಂದು ದಿನ ಮಗಧ ಭೂಪಾಲನು ತನ್ನ ತಂದೆಯ ಶ್ರಾದ್ಧಕ್ಕಾಗಿ ವಶಿಷ್ಠ, ಅತ್ರಿ ಮೊದಲಾದ ಮಹರ್ಷಿಗಳನ್ನು ಆಮಂತ್ರಿಸಿದ್ದ. ಅಂದಿನ ಶ್ರಾದ್ಧ ಭೋಜನಕ್ಕೆ ಗೃತ್ಸಮದನಿಗೂ ಆಮಂತ್ರಣ ಇದ್ದುದರಿಂದ ಅವನು ಹೋಗಿ ಮುನಿಮಂಡಲದ ಮಧ್ಯದಲ್ಲಿ ಕುಳಿತುಕೊಂಡ. ಋಷಿಗಳ ಬಳಗವು ಸೇರಿದಾಗ ವೇದವೇದಾಂತದ ವಾಕ್ಯಾರ್ಥ ನಡೆಯಿತು. ತರುಣ ತಪಸ್ವಿಯಾದ ಗೃತ್ಸಮದ ತನ್ನ ಪಾಂಡಿತ್ಯದ ಅಭಿಮಾನದಿಂದ ಆ ವಾಕ್ಯಾರ್ಥಗೋಷ್ಠಿಯಲ್ಲಿ ಭಾಗವಹಿಸಿ ಒರಟುತನದಿಂದ ನುಡಿದ. ಮಹಾಮಹಾಮುನಿಗಳಾದ ಅತ್ರಿ, ವಶಿಷ್ಠ ಮುಂತಾದ ಹಿರಿಯ ತಪಸ್ವಿಗಳ ಮಾತನ್ನು ಅಲ್ಲಗಳೆದು ವಾದವೇದಿಕೆಯಲ್ಲಿ ಔದ್ಧತ್ಯದಿಂದ ವಾದಿಸಿದ. ತನ್ನದೇ ಸರಿ ಎಂದು ಸಾಧಿಸಿದ.

ಅದರಿಂದ ಅತ್ರಿಮುನಿಗಳಿಗೆ ಕೋಪ ಬಂದು ಅವರು ಕೆರಳಿ ನುಡಿದರು. ''ಗೃತ್ಸಮದ, ನಿನಗೆ ಧಿಕ್ಕಾರವಿರಲಿ . ನೀನು ಈ ಮುನಿಮಂಡಲದಲ್ಲಿ ಕೂಡಲಿಕ್ಕೆ ಅರ್ಹನಲ್ಲ. ನೀನು ನಿನ್ನ ತಂದೆಯ ಮಗನೇ ಅಲ್ಲ. ನೀನು ಮುನಿಯಂತೂ ಸರ್ವಥಾ ಅಲ್ಲ. ನಮ್ಮ ಎದುರು ನಿನಗೆ ಕೂಡಲು ಯೋಗ್ಯತೆಯಿಲ್ಲ. ನೀನು ಬುದ್ಧಿವಂತನಾದರೆ ಇಲ್ಲಿಂದ ಎದ್ದು ನಿನ್ನ ಮನೆಗೆ ಹೋಗು.''

ಅತ್ರಿಋಷಿಗಳ ಈ ನಿರ್ಭರ್ತ್ಸನೆಯನ್ನು ಕೇಳಿ ಸಂತಾಪದಿಂದ ಗೃತ್ಸಮದನು ಕುದಿದು ಹೋದ. ಮತ್ತು ವಶಿಷ್ಠಾದಿ ಋಷಿಗಳನ್ನು ಕೋಪಾಟೋಪದಿಂದ ನೋಡಿ ನುಡಿದ.

''ಮುನಿಗಳೇ, ನಾನು ಮನೆಗೆ ಹೋಗಿ ವಿಚಾರಿಸುವೆ. ನಾನು ವಾಚಕ್ನವಿ ಮುನಿಗಳ ಔರಸ ಮಗನು ನಿಜವಾಗಿದ್ದರೆ ಶಾಪಕೊಟ್ಟು ನಿಮ್ಮೆಲ್ಲರನ್ನು ಸುಟ್ಟು ಬಿಡುವೆನು'' ಎಂದು ಹೇಳಿ ರಭಸದಿಂದ ಮನೆಗೆ ಬಂದನು.

ಮನೆಯಲ್ಲಿ ಗೃಹಕಾರ್ಯದಲ್ಲಿ ಮಗ್ನಳಾದ ಮುಕುಂದೆಯನ್ನು ಗದರಿಸಿ ಕೇಳಿದನು. ''ಕಾಮಾಂಧಳಾದ ದುಷ್ಟಳೇ, ನಿಜ ಹೇಳು. ನನ್ನ ತಂದೆ ಯಾರು ? ಇಲ್ಲದಿದ್ದರೆ ನಿನ್ನನ್ನು ಸುಟ್ಟು ಬೂದಿಮಾಡುವೆ.''

ಮಗನ ಅಬ್ಬರವನ್ನು ಕೇಳಿ ನಡುಗಿಹೋದಳು ಮುನಿ ಮಾನಿನಿಯಾದ ಆ ಮುಕುಂದೆ. ದೀನಳಾಗಿ ಕೈ ಜೋಡಿಸಿ ಹೇಳಿದಳು.

''ವತ್ಸಾ, ಬಹಳ ದಿನಗಳ ಹಿಂದೆ ಈ ಪುಣ್ಯಾರಣ್ಯದಲ್ಲಿ ಇರುವ ನಮ್ಮ ಆಶ್ರಮಕ್ಕೆ ರುಕ್ಮಾಂಗದ ಎಂಬ ರಾಜನು ಬಂದಿದ್ದನು. ಬೇಟೆಯ ನಾದದಿಂದ ಪರಿವಾರವನ್ನೆಲ್ಲಾ ಹಿಂದೆ ಬಿಟ್ಟು ಬಂದ ಆ ಮಹಾರಾಜನು ನನಗೆ ತ್ರಿಲೋಕ ಸುಂದರನಾಗಿ ಕಂಡ. ವಾಚಕ್ನವಿ ಮುನಿಗಳು ನದಿಗೆ ಸ್ನಾನಾನುಷ್ಠಾನಗಳಿಗಾಗಿ ಹೋಗಿದ್ದರು. ಆಗ ಆಶ್ರಮದ ಉಪವನದಲ್ಲಿ ಮನ್ಮಥನಂತಿದ್ದ ಆ ತರುಣ ರಾಜಕುಮಾರನೊಂದಿಗೆ ನಾನು ವಿಹರಿಸಿದೆ. ಆ ರುಕ್ಮಾಂಗದ ರಾಜನೇ ನಿನಗೆ ನಿಜವಾದ ತಂದೆ.''

ತನ್ನ ತಾಯಿಯ ಸ್ವೈರಾಚಾರಕ ಕಥೆಯನ್ನೂ, ತನ್ನ ಜನ್ಮರಹಸ್ಯವನ್ನೂ ಕೇಳಿದ ಗೃತ್ಸಮದನಿಗೆ ರೋಷರೊಚ್ಚು ತಲೆಗೇರಿತು. ಅವನು ಹುಚ್ಚೆದ್ದು ಹರಿದಾಡಿದ. ಸಂತಾಪದಿಂದ ತಲೆ ತಲೆ ಚಚ್ಚಿಕೊಂಡ. ''ಭ್ರಷ್ಟಳೇ, ನೀನು ನಿರ್ಜನವಾದ ಅರಣ್ಯದಲ್ಲಿ ಮುಳ್ಳು ಗಿಡವಾಗಿ ಹುಟ್ಟು. ನಿನ್ನ ಸಮೀಪಕ್ಕೂ ಕೂಡ ಯಾವ ಪ್ರಾಣಿಗಳೂ ಸುಳಿಯದಿರಲಿ'' ಎಂದು ಶಾಪಿಸಿದ. ಆಗ ಕ್ರುದ್ಧಳಾದ ಮುಕುಂದೆಯು ತನ್ನ ಮಗನಿಗೆ ಪ್ರತಿಶಾಪಕೊಟ್ಟಳು.

''ಮೂರ್ಖ, ನಾನು ನಿನಗೆ ಜನ್ಮವಿತ್ತ ತಾಯಿ ಎನ್ನುವದನ್ನು ಮರೆತು ನೀನು ನನಗೆ ಮುಳ್ಳುಗಿಡವಾಗಲೆಂದು ಶಪಿಸಿದೆ. ಅದಕ್ಕಾಗಿ ನಿನಗೂ ನಿನ್ನಂಥ ಕ್ರೂರ ಸ್ವಭಾವದ ರಾಕ್ಷಸನೇ ಪುತ್ರನಾಗಿ ಜನಿಸಲಿ. ನೀನು ನನ್ನನ್ನು ಹಿಂಸಿಸಿದಂತೆ ಅವನು ನಿನ್ನನ್ನು ಪೀಡಿಸಲಿ''. ಹೀಗೆ ತಾಯಿ ಮಗ ಇಬ್ಬರೂ ಪರಸ್ಪರ ಶಾಪಾಕ್ಷರಗಳನ್ನೂ ಎಸೆದಾಡಿ ಇಬ್ಬರೂ ಬವಣೆ ಬಟ್ಟರು.

ಮುಕುಂದೆಯು ಕೂಡಲೇ ತನ್ನ ನಾರೀ ದೇಹವನ್ನು ಬಿಟ್ಟು ಮುಳ್ಳು ತುಂಬಿದ ಕಾಡುಕಂಟಿಯಾಗಿ ನಿಂತುಕೊಂಡಳು. ಯಾವ ಪಶುಪಕ್ಷಿ ಪ್ರಾಣಿಗಳು ಕೂಡ ಆ ಗಿಡದ ಸಮೀಪಕ್ಕೆ ಬರುತ್ತಿರಲಿಲ್ಲ.

ಆ ಸಮಯದಲ್ಲಿ ಆತ್ಯಾಶ್ಚರ್ಯಕರವಾದ ಒಂದು ಸಂಗತಿ ನಡೆಯಿತು. ಒಮ್ಮೆಲೇ ''ಗೃತ್ಸಮದನು ದೇವೇಂದ್ರನಿಂದ ಉತ್ಪನ್ನನಾಗಿದ್ದಾನೆ'' ಎಂದು ಆಕಾಶವಾಣಿಯಾಯಿತು. ಅದನ್ನು ಕೇಳಿ ಗೃತ್ಸಮದನು ''ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು'' ಎಂದು ತನ್ನ ನಿಜಸ್ವರೂಪವನ್ನು ತಿಳಿದುಕೊಂಡು ತಪಸ್ಸಿಗೆ ಹೋದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಗೃತ್ಸಮದಉಪಾಖ್ಯಾನ ಎಂಬ ಮೂವತ್ತಾರನೇ ಅಧ್ಯಾಯ ಮುಗಿದುದು*

—o—

ಗೃತ್ಸಮದ ಮುನಿಯು ಆಕಾಶವಾಣಿಯ ನುಡಿಯನ್ನು ಕೇಳಿ ಪ್ರಶಾಂತ ವಾತಾವರಣವುಳ್ಳ ಪುಷ್ಪಕ ಎಂಬ ವನಪ್ರದೇಶಕ್ಕೆ ಬಂದ. ಅಲ್ಲಿ ಏಕಾಗ್ರಚಿತ್ತದಿಂದ ವರಸಿದ್ಧಿವಿನಾಯಕನನ್ನು ಧ್ಯಾನಿಸುತ್ತಾ ವಾಚಕ್ನವಿ ಮುನಿಯು ತನಗೆ ಉಪದೇಶಿಸಿದ ಮೂಲಮಂತ್ರವನ್ನು ಜಪಿಸತೊಡಗಿದನು. ಆಹಾರ ನಿದ್ದೆಗಳನ್ನು ತೊರೆದು ಒಣಗಿ ಉದುರಿಬಿದ್ದ ಒಂದೊಂದು ತರಗೆಲೆಯನ್ನು ಒಂದೊಂದು ದಿನದ ಆಹಾರವನ್ನಾಗಿ ತಿನ್ನುತ್ತಾ ಸ್ಥಿರಚಿತ್ತದಿಂದ, ದೃಢಭಕ್ತಿಯಿಂದ ಹದಿನೈದು ಸಾವಿರ ವರ್ಷ ತಪಸ್ಸನ್ನು ಆಚರಿಸಿದನು. ಅವನ ಈ ಅತ್ಯುಗ್ರವಾದ ತಪಸ್ಸಿಗೆ ಪ್ರಸನ್ನನಾಗಿ ಗಜಾನನನು ಅವನಿಗೆ ಪ್ರತ್ಯಕ್ಷ ಗೋಚರನಾದನು. ಸುಂದರವಾದ ಸೊಂಡಿಲು, ನೆತ್ತಿಯಲ್ಲಿ ಭಾಲಚಂದ್ರ, ಹತ್ತು ಭುಜಗಳು, ಸರ್ಪರಾಜನ ಯಜ್ಞೋಪವೀತ, ಸಿಂಹವಾಹನ. ಸೊಂಡಿಲಲ್ಲಿ ಕಮಲನಾಳ, ಎಡಬಲದಲ್ಲಿ ಸಿದ್ಧಿ ಬುದ್ಧಿ ಎಂಬ ಬ್ರಹ್ಮ ಮಾನಸ ಪುತ್ರಿಯರು, ಕೋಟಿಸೂರ್ಯರಿಗಿಂತ ಅಧಿಕವಾದ ದೇಹಪ್ರಭೆ. ಕುಂಕುಮ, ಕೇಸರ ಕಸ್ತೂರಿ ಮೊದಲಾದ ದಿವ್ಯ ಲೇಪನಗಳಿಂದ ಗಂಧಾಢ್ಯವಾದ ಆ ವಿನಾಯಕನ ಸ್ವರೂಪವನ್ನು ಗೃತ್ಸಮದನು ಸಾಕ್ಷಾತ್ಕರಿಸಿಕೊಂಡ. ಆ ದಿವ್ಯಮೂರ್ತಿಯ ದೇಹದೀಪ್ತಿಯಿಂದ ಗೃತ್ಸಮದನ ಕಣ್ಣು ಕುಕ್ಕಿದಂತಾಗಿ ಅವನು ಆ ದೇವದೇವನ ಎದುರು ಬಿದ್ದು ಸಾಷ್ಟಾಂಗ ಪ್ರಣಾಮ ಮಾಡಿದನು. ಆಗ ಸಿದ್ಧಿವಿನಾಯಕನು ಅಂತಃಕರಣ ತುಂಬಿ ತನ್ನನ್ನು ನೋಡಿ ಗಾಬರಿಯಾಗಿ ನಿಂತುಕೊಂಡ ಗೃತ್ಸಮದನಿಗೆ ವಾತ್ಸಲ್ಯದಿಂದ ಹೇಳಿದನು. ''ವತ್ಸ, ನಾನು ನಿನಗೆ ಅನುಗ್ರಹವನ್ನು ಮಾಡುವದಕ್ಕಾಗಿ ಬಂದ ಗಣಾಧೀಶ್ವರ. ನಿನ್ನ ತಪ್ಪಸ್ಸಿನಿಂದ ನಾನು ಸುಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು.''

ಆ ದೇವೋತ್ತಮನ ನುಡಿಯನ್ನು ಕೇಳಿ ಗೃತ್ಸಮದನಿಗೆ ಅತ್ಯಂತ ಸಂತೋಷವಾಯಿತು. ಅವನು ಕೈಮುಗಿದು ಕೇಳಿಕೊಂಡ. ''ದೇವೋತ್ತಮ, ನೀನು ಸರ್ವಾಂತರ್ಯಾಮಿ. ನಿನಗೆ ನಾನು ಶರಣು ಬಂದಿದ್ದೇನೆ. ನೀನೇ ಜಗದೀಶ್ವರ, ನನಗೆ ಭಯಂಕರ ದುಃಖವು ಪ್ರಾಪ್ತವಾಗಿದೆ. ಅತ್ರಿ ಮುನಿಯು ನನಗೆ ''ಮುನಿಗಳ ಪಂಕ್ತಿಯಲ್ಲಿ ಕೂಡಲು ಅಯೋಗ್ಯನಾಗಿರುವೆ'' ಎಂದು ಹೇಳಿದ ಮಾತು ನನ್ನ ಮನಸ್ಸನ್ನು ಸುಡುತ್ತಲಿದೆ. ಅದಕ್ಕಾಗಿ ನಾನು ನಿನ್ನನ್ನು ಕುರಿತು ಈ ಘೋರ ತಪಸ್ಸನ್ನು ಆಚರಿಸಿದೆ. ನೀನು ನನಗೆ ಪ್ರತ್ಯಕ್ಷ ದರ್ಶನ ಕೊಟ್ಟಿದ್ದರಿಂದ ನನ್ನ ತಪಸ್ಸು ಸಫಲವಾಯಿತು. ನನಗೆ ನಾಲ್ಕು ವರಗಳನ್ನು ನೀಡು. ನಿನ್ನಲ್ಲಿ ಅವಿಚ್ಛಿನ್ನವಾದ ಭಕ್ತಿ. ಮಾನವರು, ದೇವತೆಗಳು ನನಗೆ ನಮಸ್ಕರಿಸುವಷ್ಟು ಮಹಾಮಹಿಮೆ. ಹಾಗೂ ದಿವ್ಯವಾದ ಬ್ರಹ್ಮಜ್ಞಾನ ಎಂಬ ಮೂರು ವರಗಳನ್ನು ದಯಪಾಲಿಸು. ನಾಲ್ಕನೆಯದಾಗಿ ನಾನು ನಿನ್ನನ್ನು ಕುರಿತು ತಪಸ್ಸು ಮಾಡಿದ ಈ ಪುಷ್ಪಕಪುರವು ಗಣೇಶಪುರ ಎಂದು ಜಗತ್ತಿನಲ್ಲಿ ಪ್ರಸಿದ್ಧವಾಗಲಿ.''

ಅದಕ್ಕೆ ಗಣೇಶನು ತಥಾಸ್ತು ಎಂದು ಹೇಳಿ ಭಕ್ತಾಗ್ರೇಸರನಾದ ಗೃತ್ಸಮದ ಮುನಿಗೆ ಪ್ರೀತಿಯಿಂದ ನುಡಿದನು. ''ಬ್ರಾಹ್ಮಣೋತ್ತಮ, ನೀನು ಬೇಡಿದ ವರಗಳೆಲ್ಲವನ್ನೂ

ನೀಡಿದ್ದೇನೆ. ನಿನ್ನ ಅಪೇಕ್ಷೆಗಳೆಲ್ಲವನ್ನು ಪೂರ್ಣಗೊಳಿಸಿದ್ದೇನೆ. 'ಗಣಾನಾಂತ್ವಾ' ಎಂಬ ಮಂತ್ರವನ್ನು ಏಕಾಗ್ರಚಿತ್ತದಿಂದ ಜಪಮಾಡಿ ನೀನು ಸಿದ್ಧಿಯನ್ನು ಪಡೆದಿರುವೆ. ಆದ್ದರಿಂದ ಆ ವೇದಮಂತ್ರಕ್ಕೆ ನೀನೇ ಋಷಿಯಾಗು. ದೇವದಾನವ ಮಾನವರಲ್ಲಿ ಯಾರೇ ಆಗಲಿ ಕಾರ್ಯಪ್ರಾರಂಭಕ್ಕೆ ನನಗಿಂತ ಮೊದಲು ನಿನ್ನನ್ನು ಭಕ್ತಿಯಿಂದ ಸ್ಮರಿಸಬೇಕು. ಅಂದರೆ ಮಾತ್ರ ಅವರ ಕಾರ್ಯಗಳು ನಿರ್ವಿಘ್ನದಿಂದ ಕೈಗೂಡುವವು. ನಿನಗೆ ಅತ್ಯಂತ ಬಲಿಷ್ಠನಾದ ಪುತ್ರನು ಜನಿಸುವನು. ಮಹಾದೇವನ ಹೊರತು ಬೇರೆ ಯಾರೂ ಅವನನ್ನು ಜಯಿಸಲು ಸಮರ್ಥರಾಗಲಾರರು. ಅವನು ನನ್ನ ಏಕಾಂತಭಕ್ತ. ಕೃತಯುಗದಲ್ಲಿ 'ಪುಷ್ಪಕಪುರ' ಎಂದು ಹೆಸರಾದ ಈ ನಿನ್ನ ತಪೋಭುವಿಯು ತ್ರೇತಾಯುಗಲ್ಲಿ ಮಣಿಪುರ ಎಂದು, ದ್ವಾಪರಯುಗದಲ್ಲಿ ಭಾನಕ ಎಂದು ಕಲಿಯುಗದಲ್ಲಿ ಭದ್ರಕ ಎಂದು ಪ್ರಖ್ಯಾತಿ ಪಡೆಯುವುದು'' ಹೀಗೆ ಹೇಳಿ ಗಣಾಧೀಶ್ವರನು ಅಲ್ಲಿಯೇ ಅದೃಶ್ಯನಾದನು.

ಅನಂತರ ಗೃತ್ಸಮದನು ತನಗೆ ಆ ದೇವದೇವನು ಪ್ರತ್ಯಕ್ಷನಾದ ಸ್ಥಳದಲ್ಲಿಯೇ ಗಜಾನನನ ಸುಂದರವಾದ ಮೂರ್ತಿಯೊಂದನ್ನು ಸ್ಥಾಪಿಸಿದನು. ಅದಕ್ಕಾಗಿ ದಿವ್ಯ ಭವ್ಯ ಮಂದಿರವನ್ನು ಕಟ್ಟಿಸಿದನು. ಆ ದೇವನ ಮೂರ್ತಿಗೆ **ವರದ ಗಣಪತಿ** ಎಂದು ಹೆಸರಿಟ್ಟನು. ಮುಂದೆ ಆ ಗಣಪತಿಯ ವರಪ್ರಸಾದದಿಂದ ಸಿದ್ಧಿಸ್ಥಳವೆಂದು ಭಕ್ತರ ಅಭೀಷ್ಟಗಳನ್ನು ಈಡೇರಿಸಿಕೊಡುವದರಿಂದ ಪುಷ್ಪಕ ಎಂದು ಪ್ರಸಿದ್ಧವಾಯಿತು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಗೃತ್ಸಮದನಿಗೆ ವರಪ್ರದಾನ ಎಂಬ ಮೂವತ್ತೇಳನೆಯ ಅಧ್ಯಾಯ ಮುಗಿದುದು*



## ವರಪ್ರದಾನ

**ಅಧ್ಯಾಯ - ೩೮**

ವರದಗಣಪತಿಯ ಅನುಗ್ರಹದಿಂದ ಮತ್ತು ವರದಿಂದ ಗೃತ್ಸಮದನು ಲೋಕಪೂಜ್ಯನಾದನು. ಯಜ್ಞಯಾಗ ಮಾಡುವಾಗ, ದೀಕ್ಷಿತರು, ಯಜಮಾನರು ಅವನನ್ನು ಕರೆದು ಅಗ್ರಸ್ಥಾನವನ್ನು ಕೊಡುತ್ತಿದ್ದರು. ಸರ್ವಕಾರ್ಯಗಳಲ್ಲಿಯೂ ಗೃತ್ಸಮದನನ್ನು ಪೂಜಿಸಿ ನಂತರ ಗಣೇಶನನ್ನು ಪೂಜಿಸತೊಡಗಿದರು. ಗೃತ್ಸಮದನು ಹೀಗೆ ಸಿದ್ಧಿಪ್ರಸಿದ್ಧಿಗಳನ್ನು ಪಡೆದಿದ್ದರೂ ಗರ್ವಿಷ್ಠನಾಗಲಿಲ್ಲ. ಏಕಾಗ್ರಚಿತ್ತದಿಂದ ಗಣೇಶನ ಮೂಲಮಂತ್ರವನ್ನು ಸದಾ ಜಪಿಸುತ್ತಲೇ ಇದ್ದನು.

ಒಂದು ದಿನ ಗೃತ್ಸಮದ ಮುನಿಯು ಉತ್ತರಾಭಿಮುಖವಾಗಿ ಕುಳಿತುಕೊಂಡಾಗ ಗಟ್ಟಿಯಾಗಿ ಸೀನಿದನು. ಆದರಿಂದ ಘೋರಾಕಾರದ ಒಬ್ಬ ಬಾಲಕನು ಜನಿಸಿ ಎದುರಿಗೆ ನಿಂತುಕೊಂಡನು. ಸುಂದರ ಮುಖ, ತಾವರೆಗಣ್ಣು, ಬಂಗಾರದ ಬಣ್ಣ, ದಿವ್ಯಕಿರೀಟದಿಂದ ಭೂಷಿತವಾದ ತಲೆ, ರತ್ನಖಚಿತ ಉಡುದಾರಗಳಿಂದ ಶೋಭಿಸುವ ಆ ಮಗುವನ್ನು ಕಂಡು ''ನೀನು ಯಾರು'' ಎಂದು ಕೇಳಿದನು. ಆಗ ಆ ಮಗು ಕೈ ಜೊಡಿಸಿ ''ಮಹಾತ್ಮನೇ, ನೀನೇ ನನಗೆ ತಂದೆ. ನೀನು ತ್ರಿಕಾಲಜ್ಞಾನಿಯಲ್ಲವೇ ! ನನ್ನನ್ನು ಏಕೆ ಕೇಳುವೆ ! ಆದರೂ ನಿನ್ನ ಆಜ್ಞೆಯಾಗಿರುವದರಿಂದ ಹೇಳುತ್ತೇನೆ. ನೀನು ಇದೀಗ ಶೀನಿದೆಯಲ್ಲವೇ ! ಆದರಿಂದ

ನಾನು ಹುಟ್ಟಿದೆ. ನನ್ನನ್ನು ನೀನು ಕೆಲವು ದಿನ ರಕ್ಷಣೆ ಮಾಡು. ಮುಂದೆ ನಾನು ಮೂರುಲೋಕಗಳನ್ನು ಕೂಡ ಆಕ್ರಮಿಸಿ ದೇವೇಂದ್ರನನ್ನು ಕೂಡ ನನ್ನ ಅಧೀನನ್ನಾಗಿ ಮಾಡಿಕೊಳ್ಳುವೆ. ಸ್ವಲ್ಪ ಕಾಲ ಕಳೆದ ಬಳಿಕ ನಿನಗೆ ನನ್ನ ಶಕ್ತಿ ಪರಾಕ್ರಮಗಳ ಅನುಭವ ಬರುವದು'' ಎಂದು ಹೇಳಿದನು.

ಇದನ್ನು ಕೇಳಿ ಗೃತ್ಸಮದನಿಗೆ ಸಂತೋಷವಾಯಿತು. ಆಗ ಅವನು ತನ್ನ ಮಗನಿಗೆ **'ಗಣಾನಾಂತ್ವಾ'** ಎಂಬ ವೇದೋಕ್ತವಾದ ಗಣೇಶಮಂತ್ರವನ್ನು ಉಪದೇಶಿಸಿದನು. ಅವನಿಂದ ಉಪದೇಶ ಪಡೆದ ನಂತರ ಆ ಪುತ್ರನು ನಿರ್ಜನವಾದ ಅರಣ್ಯಕ್ಕೆ ಹೋಗಿ ತಂದೆಯಂತೆ ಗಣೇಶನನ್ನು ಧ್ಯಾನಿಸುತ್ತಾ ಮೂಲಮಂತ್ರಗಳನ್ನು ಜಪಿಸತೊಡಗಿದನು. ಹದಿನೈದು ಸಾವಿರ ವರ್ಷ ನಿರಂತರವಾಗಿ ನಿರ್ವಿಘ್ನವಾಗಿ ನಡೆಯಿತು ಅವನ ಘೋರ ತಪಸ್ಸು. ಆದರಿಂದ ಅವನ ಮುಖದಿಂದ ಅಗ್ನಿಜ್ವಾಲೆಯು ಹೊರಟು ದಶದಿಕ್ಕುಗಳನ್ನು ಸುಡತೊಡಗಿತು. ಅವನ ಉಗ್ರತಪಸ್ಸಿಗೆ ಗಜಾನನನು ಪ್ರತ್ಯಕ್ಷನಾಗಿ ಅವನ ಕಣ್ಣಿನ ಎದುರಿಗೆ ನಿಂತುಕೊಂಡನು. ಅವನ ಗರ್ಜನೆಯನ್ನು ಕೇಳಿ ಬಾಲಕನು ಕಳವಳಗೊಂಡು ಭಯಭ್ರಾಂತನಾಗಿ ಗಣೇಶನ ಆ ಉಗ್ರರೂಪವನ್ನು ನೋಡಿದನು. ಒಂದು ಕೈಯಲ್ಲಿ ಗಂಡುಕೊಡಲಿ. ಇನ್ನೊಂದರಲ್ಲಿ ಕಮಲಪುಷ್ಪ, ಕೊರಳಲ್ಲಿ ಸುಗಂಧಪುಷ್ಪದ ಹಾರ. ಮತ್ತೊಂದರಲ್ಲಿ ಮೋದಕ. ನಾಲ್ಕನೆಯ ಕೈಯಲ್ಲಿ ಪಾಶಾಂಕುಶ. ಹೀಗೆ ನಾಲ್ಕು ಭುಜಗಳಿಂದ ಹಾಗು ನಾಲ್ಕು ಅಲಂಕಾರಗಳಿಂದ ಶೋಭಿಸುವ ಆ ಪರಾತ್ಪರ ಪರಮಾತ್ಮನನ್ನು ನೋಡಿ ಅವನ ಕಣ್ಣು ಕುಕ್ಕುವ ಕಾಂತಿಯಿಂದ ಧರ್ಷಿತಾಕರ್ಷಿತನಾದ ಆ ಗೃತ್ಸಮದನ ಕುಮಾರನು ಅವನನ್ನು ಪ್ರಾರ್ಥಿಸಿದನು.

''ದೇವೋತ್ತಮ, ನಾನು ನಿನ್ನ ಏಕಾಂತ ಭಕ್ತನಲ್ಲವೇ ! ನಾನು ನಿನಗೆ ಶರಣು ಹೊಂದಿರುವೆನು. ಸೌಮ್ಯರೂಪವನ್ನು ತಳೆದು ನನ್ನ ಬೇಡಿಕೆಗಳನ್ನು ಈಡೇರಿಸು.''

ಬಾಲಕನ ಬೇಡಿಕೆ, ಕೋರಿಕೆಯಂತೆ ಗಣೇಶನು ಸೌಮ್ಯ ಸುಂದರವಾದ ಸ್ವರೂಪವನ್ನು ಧರಿಸಿ ಪ್ರೀತಿಯಿಂದ ನುಡಿದನು. ''ಭಕ್ತಾಗ್ರೇಸರ, ನಿನ್ನ ಉಗ್ರತಪಸ್ಸಿಗೆ ಮೆಚ್ಚಿ ನಾನು ಪ್ರಸನ್ನನಾಗಿ ಪ್ರತ್ಯಕ್ಷನಾಗಿ ಬಂದು ನಿಂದಿರುವೆನು. ನಿನಗೆ ಬೇಕಾದ ವರಗಳನ್ನು ಬೇಡಿಕೋ. ನಿನ್ನ ಮನೋರಥಗಳನ್ನು ಪೂರ್ಣಮಾಡುವೆನು.''

ಆಗ ಆ ಭಕ್ತ ಬಾಲಕನು ಬಗ್ಗಿ ನಿಂತು ವರಗಳನ್ನು ಬೇಡಿಕೊಂಡನು. ''ಪ್ರಭು, ಮೂರು ಲೋಕಗಳನ್ನು ವಶೀಕರಿಸಿಕೊಳ್ಳುವ ಶಕ್ತಿಯನ್ನು ನನಗೆ ದಯಪಾಲಿಸು. ದೇವ, ದಾನವ, ಮಾನವ, ಗಂಧರ್ವ, ಯಕ್ಷ ರಾಕ್ಷಸರೆಲ್ಲರೂ ನನಗೆ ವಶವರ್ತಿಗಳಾಗಬೇಕು. ನಾನು ಮನಸ್ಸಿನಲ್ಲಿ ಚಿಂತಿಸಿದ್ದೆಲ್ಲವೂ ವಿಳಂಬವಿಲ್ಲದೆ ಸಿದ್ಧಿಸಬೇಕು. ಇಂದ್ರಾದಿ ಲೋಕಪಾಲಕರು ನನ್ನ ಸೇವೆಯನ್ನು ಮಾಡುವಂತಾಗಬೇಕು. ಇಹಲೋಕದಲ್ಲಿ ಎಲ್ಲ ಭೋಗ ಭಾಗ್ಯಗಳನ್ನು ಕರುಣಿಸು. ಕೊನೆಗೆ ಮುಕ್ತಿಯನ್ನು ನೀಡು. ಮತ್ತು ನಾನು ತಪಸ್ಸು ಮಾಡಿದ ಈ ಪುರವು ಗಣೇಶಪುರವೆಂದು ಪ್ರಸಿದ್ಧವಾಗಲಿ.

**ಗಣೇಶ** :- ವತ್ಸ, ನೀನು ಬೇಡಿದ ವರಗಳೆಲ್ಲವನ್ನೂ ನೀಡಿದ್ದೇನೆ. ಮೂರು ಲೋಕಗಳನ್ನು ನೀನು ಆಕ್ರಮಿಸಿ ವಿಜಯವನ್ನು ಪಡೆಯುವೆ. ನಿನಗೆ ಯಾರಿಂದಲೂ

ಭಯವಿಲ್ಲ. ಎಲ್ಲರೂ ನಿನ್ನ ಅಧೀನರಾಗುವರು. ನಿನಗೆ ಕಬ್ಬಿಣ, ಬೆಳ್ಳಿ, ಬಂಗಾರದಿಂದ ನಿರ್ಮಿತವಾದ ಮೂರು ಪಟ್ಟಣಗಳನ್ನು ಕೊಡುತ್ತೇನೆ. ತ್ರಿಪುರ ಎಂದು ನಿನಗೆ ಹೊಸ ಹೆಸರು ಬರುವದು. ಆ ಮೂರು ಪಟ್ಟಣ ಅಚ್ಛೇದ್ಯ ಅಭೇದ್ಯ ಅವು ಮನಬಂದಲ್ಲಿ ಸ್ವೈರ ಸಂಚಾರ ಮಾಡಲು ಸಮರ್ಥವಾಗಿರುವವು. ಆ ಮೂರುಪಟ್ಟಣಗಳನ್ನು ಮಹಾದೇವನು ಒಂದೇ ಬಾಣದಿಂದ ಹೊಡೆದು ಸೀಳಿದಾಗ ನಿನಗೆ ಮುಕ್ತಿಯಾಗುವದು. ನನ್ನ ಅನುಗ್ರಹದಿಂದ ನಿನ್ನ ಸರ್ವಮನೋರಥಗಳು ಪೂರ್ಣವಾಗುವವು.'' ಹೀಗೆ ಹೇಳಿ ದೇವೇಶನಾದ ಗಣೇಶನು ಅಲ್ಲಿಯೇ ಅಂತರ್ಧಾನ ಹೊಂದಿದನು.

ತಾನು ಬೇಡಿದ ಎಲ್ಲ ವರಗಳನ್ನು ನೀಡಿ ಗಣೇಶನು ಅನುಗ್ರಹಿಸಿದ್ದರಿಂದ ಆ ಗೃತ್ಸಮದ ಕುಮಾರನಿಗೆ ಪರಮ ಸಂತೋಷವಾಯಿತು. ಅವನು ಉತ್ಸಾಹದಿಂದ ಉಬ್ಬಿದನು. ಗರ್ವದಿಂದ ಕೊಬ್ಬಿದನು. ಮೂರು ಲೋಕಗಳ ಮೇಲೆ ವಿಜಯವನ್ನು ಸಾಧಿಸಲು ಪ್ರಯತ್ನಿಸತೊಡಗಿದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ವರಪ್ರದಾನ ಎಂಬ ಮೂವತ್ತೆಂಟನೆಯ ಅಧ್ಯಾಯ ಮುಗಿದುದು*



## ಇಂದ್ರ ಪರಾಜಯ

**ಅಧ್ಯಾಯ - ೩೯**

ಗೃತ್ಸಮದನ ಕುಮಾರನು ಗಣೇಶ ದೇವನಿಂದ ತ್ರಿಪುರ ಎಂಬ ಹೊಸ ಹೆಸರನ್ನು ಪಡೆದು ಮದಾಂಧನಾಗಿ ಮೂರು ಲೋಕಗಳನ್ನು ಆಕ್ರಮಿಸುವ ಉದ್ಯೋಗವನ್ನು ನಡೆಸಿದನು. ದೇವದೇವನಿಂದ ಅಭೇದ್ಯವಾದ ಮೂರು ಪಟ್ಟಣಗಳನ್ನು ಪಡೆದು ತನ್ನ ಧೈರ್ಯ, ಶೌರ್ಯ, ಕ್ರೌರ್ಯಗಳಿಂದ ತ್ರಿಪುರಾಸುರ ಎಂದು ಪ್ರಸಿದ್ಧಿಯನ್ನು ಹೊಂದಿದನು. ಅವನು ಕಾಶ್ಮೀರ ದೇಶದಲ್ಲಿ ದೊರೆಯುವ ಉತ್ತಮವಾದ ಕಲ್ಲಿನಿಂದ ತಾನು ತಪಸ್ಸು ಮಾಡಿ ಸಿದ್ಧಿಪಡೆದ ಸ್ಥಳದಲ್ಲಿಯೇ ಭವ್ಯ ಸುಂದರವಾದ ಗಣಪತಿಯ ಮೂರ್ತಿಯನ್ನು ಸ್ಥಾಪಿಸಿದನು. ಅದಕ್ಕಾಗಿ ರತ್ನಗಳನ್ನು ಕೆತ್ತಿದ, ಮುತ್ತುಗಳು ಮೆತ್ತಿದ ಸುಂದರವಾದ ಸುವರ್ಣಮಂದಿರವನ್ನು ಕಟ್ಟಿಸಿದನು. ಆ ಸ್ಥಾನವು ಗಣೇಶಪುರವೆಂದು ವಂಗದೇಶದಲ್ಲಿ ಪ್ರಸಿದ್ಧವಾಯಿತು.

ಅನಂತರ ವೀರ ಧೀರನಾದ ತ್ರಿಪುರಾಸುರನು ತನ್ನ ಚತುರಂಗ ಸೈನ್ಯವನ್ನು ತೆಗೆದುಕೊಂಡು ದೇಶ ದಿಗ್ವಿಜಯಕ್ಕೆ ಹೊರಟನು. ಕೆಲವೇ ಸಮಯದಲ್ಲಿ ಅಖಂಡ ಭೂಮಂಡಲವನ್ನೆಲ್ಲಾ ತನ್ನ ಪ್ರಬಲ ಪ್ರತಾಪದಿಂದ ಪಾದಾಕ್ರಾಂತವನ್ನಾಗಿ ಮಾಡಿಕೊಂಡನು. ಭೀಮಕಾಯ ಎಂಬ ಧೀರ ದೈತ್ಯನನ್ನು ಭೂಲೋಕದ ಸಾಮ್ರಾಜ್ಯದಲ್ಲಿ ಪಟ್ಟಗಟ್ಟಿದನು.

ಅನಂತರ ಪಾತಾಳ ಲೋಕದ ದಿಗ್ವಿಜಯವನ್ನು ಮಾಡಿಕೊಂಡು ಆ ಅಧೋಲೋಕವನ್ನೆಲ್ಲಾ ವಶಪಡಿಸಿಕೊಂಡನು. ಅಲ್ಲಿ ವಜ್ರದಂತ ಎಂಬ ಬಲಿಷ್ಠನಾದ ದೈತ್ಯನನ್ನು ರಸಾತಳದ ಅಧಿಪತಿಯನ್ನಾಗಿ ನೇಮಿಸಿದನು.

ಹೀಗೆ ಭೂಲೋಕ, ಪಾತಾಳಲೋಕ ಎರಡನ್ನು ಆಕ್ರಮಿಸಿ ತನ್ನ ಅನುಚರರಾದ ಅಸುರವೀರರನ್ನು ಈ ಎರಡು ಲೋಕದ ಸಾಮ್ರಾಜ್ಯ ಸಿಂಹಾಸನದಲ್ಲಿ ಕೂಡಿಸಿ ತಾನು ತನ್ನ ಚತುರಂಗ ಸೇನೆಯೊಂದಿಗೆ ಸ್ವರ್ಗಕ್ಕೆ ಲಗ್ಗೆಯಿಟ್ಟನು. ಮೊದಲು ಆ ತ್ರಿಪುರಾಸುರನು ದೇವೇಂದ್ರನಿಗೆ ತನ್ನ ದೂತನಿಂದ ಹೇಳಿಕಳಿಸಿದನು. ''ದೇವೇಂದ್ರ, ನೀನು ಸುರಸಾಮ್ರಾಜ್ಯವನ್ನೆಲ್ಲಾ ನನಗೆ ಒಪ್ಪಿಸಿ ಶರಣು ಬಾ. ಕೂಡಲೇ ಅಮರಾವತಿಯನ್ನು ತೆರವು ಮಾಡು. ನಿನಗೆ ಇರಲು ಯಮಲೋಕವನ್ನು ಕೊಟ್ಟಿದ್ದೇನೆ. ನೀನು ಅಲ್ಲೆ ವಾಸಿಸು. ಇದು ನಿನಗೆ ಒಪ್ಪಿಗೆಯಾಗದಿದ್ದಲ್ಲಿ ಯುದ್ಧಕ್ಕೆ ಸಿದ್ಧನಾಗು.''

ಮದೋನ್ಮತ್ತನಾದ ದೈತ್ಯದೂತನ ಈ ಮಾತನ್ನು ಕೇಳಿ ಆ ಸ್ವರ್ಗದ ರಾಜನು ಕುದಿದೆದ್ದನು. ರಣಾಂಗಣದಲ್ಲಿ ತನ್ನ ದೇವಸೇನೆಯೊಂದಿಗೆ ತ್ರಿಪುರಾಸುರನನ್ನು ಎದುರಿಸಿದನು. ದೈತ್ಯವೀರರಿಗೂ, ದೇವಪುರದವರಿಗೂ ಘನ ಘೋರವಾದ ಸಂಗ್ರಾಮವು ಮಸಗಿತು. ಸ್ವಯಂ ತ್ರಿಪುರಾಸುರನು ಐರಾವತವನ್ನು ಏರಿಕೊಂಡು ಬಂದ ಸುರರಾಜನೊಂದಿಗೆ ಸೆಣಿಸಿದನು. ಯುದ್ಧದಲ್ಲಿ ಒಮ್ಮೆ ತ್ರಿಪುರಾಸುರನು ತನ್ನ ಕೈಯಲ್ಲಿದ್ದ ಖಡ್ಗದಿಂದ ಇಂದ್ರನ ಕೈಗೆ ಒಂದು ಬಲವಾದ ಏಟನ್ನು ಕೊಟ್ಟನು. ಇಂದ್ರನ ಕೈಯಲ್ಲಿರುವ ವಜ್ರಾಯುಧವು ಕೆಳಗೆ ಬಿದ್ದಿತು. ತ್ರಿಪುರನು ಕೆಳಗೆ ಬಿದ್ದ ಆ ವಜ್ರಾಯುಧವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಐರಾವತಕ್ಕೆ ಹೊಡೆದನು. ಅಸುರನ ವಜ್ರಾಯುಧದ ಪ್ರಹಾರವನ್ನು ತಾಳಲಾರದೆ ಐರಾವತವು ಕಿರ್ರನೇ ಕಿರಿಚಿ ದಿಕ್ಕೆಟ್ಟು ಓಡಲಾರಂಭಿಸಿತು. ಆಗ ಇಂದ್ರನು ಕೆಳಗೆ ಧುಮುಕಿ ಆ ದೈತ್ಯನೊಂದಿಗೆ ಮಲ್ಲಯುದ್ಧಕ್ಕೆ ಅಣಿಯಾದನು. ಇಂದ್ರ ಮತ್ತು ತ್ರಿಪುರ ಇಬ್ಬರೂ ಮಹಾಬಲಿಷ್ಠರು. ಇಬ್ಬರೂ ತಮ್ಮ ಪ್ರಾಣಗಳನ್ನು ಪಣಕ್ಕೆ ಹಚ್ಚಿ ಘೋರವಾಗಿ ಹೋರಾಡಿದರು. ಶೂರನಾದ ಸುರಪತಿಯು ದ್ವಂದ್ವಯುದ್ಧದ ಮಧ್ಯದಲ್ಲಿ ತನ್ನ ಕಾಲಿನಿಂದ ಬಲವಾಗಿ ತ್ರಿಪುರನನ್ನು ಒದ್ದು ಹಾಕಿದನು. ದೇವೇಂದ್ರನ ಪಾದಾಘಾತದಿಂದ ತತ್ತರಿಸಿ ಹೋದ ತ್ರಿಪುರಾಸುರನು ಆ ಪಾದ ಪ್ರಹಾರವನ್ನು ಹೇಗೋ ತಾಳಿಕೊಂಡು ಸಾವರಿಸಿಕೊಂಡು ಪುಟಿದೆದ್ದನು. ಅದರಿಂದ ಅತ್ಯಂತ ಕ್ರುದ್ಧನಾಗಿ ಇಂದ್ರನ ಎರಡೂ ಕಾಲುಗಳನ್ನು ತನ್ನ ಕೈಗಳಿಂದ ಭದ್ರವಾಗಿ ಹಿಡಿದು ಚಕ್ರದಂತೆ ಗರಗರ ತಿರುಗಿಸಿ ಯಾರಿಗೂ ಕಾಣದಷ್ಟು ದೂರ ಅತಿದೂರದಲ್ಲಿ ಬಿಸುಟಿ ಒಗೆದುಬಿಟ್ಟನು. ಮತ್ತು ದೇವೇಂದ್ರನ ವಾಹನವಾದ ಐರಾವತವನ್ನು ತಾನೇ ಏರಿ ದೇವತೆಗಳನ್ನು ಸದೆ ಬಡೆದನು. ತಮ್ಮ ರಾಜನಾದ ಇಂದ್ರನನ್ನು ಕಾಣದೇ ದೇವತೆಗಳು ದೈತ್ಯರಾಜನ ದಾಳಿಯ ರಭಸವನ್ನು ತಾಳಲಾರದೆ ದಿಕ್ಕೆಟ್ಟು ಓಡಿ ಹೋದರು. ಹಿಮಾಲಯದ ಗುಹೆಗಳನ್ನುಸೇರಿ ತಲೆಮರೆಯಿಸಿಕೊಂಡರು.

ತ್ರಿಪುರಾಸುರನು ಬೀಸಿ ತೂರಿ ಒಗೆದ ದೇವೇಂದ್ರನು ಬಹಳ ಹೊತ್ತಿನ ಮೇಲೆ ಚೇತರಿಸಿಕೊಂಡು ಎದ್ದನು. ಹಿಮಾಲಯ ಪರ್ವತದ ಗಿರಿ ಗವ್ಹರಗಳಲ್ಲಿ ಅವಿತುಕೊಂಡ ಅಮರವೀರರನ್ನು ಹುಡುಕಿಕೊಂಡು ಅವರೊಡನೆ ಕೂಡಿಕೊಂಡನು. ಕಾಣೆಯಾದ ತಮ್ಮ ಅರಸನನ್ನು ಕಂಡ ದೇವತೆಗಳಿಗೆ ಪರಮ ಸಂತೋಷವಾಯಿತು. ತ್ರಿಪುರಾಸುರನ ಯುದ್ಧದಲ್ಲಿ ಗಾಯಗೊಂಡ ತಮ್ಮ ಒಡೆಯನಿಗೆ ಗಾಳಿಹಾಕಿ, ಶೈತ್ಯೋಪಾಚಾರ

ಮಾಡಿದರು. ಮತ್ತು ರಾಕ್ಷಸ ರಾಜನ ಭಯದಿಂದ ಎಲ್ಲ ದೇವತೆಗಳು ಗುಪ್ತವೇಷಗಳನ್ನು ಧರಿಸಿ ಆ ಪರ್ವತ ಪ್ರಾಂತಗಳಲ್ಲಿ ಗುಹಾವಾಸಿಗಳಾಗಿ ವನೇಚರರಾದ ಭಿಲ್ಲ ಜನರಂತೆ ವಾಸಮಾಡತೊಡಗಿದರು.

ವಿಜಯಶಾಲಿಯಾದ ತ್ರಿಪುರಾಸುರನು ವಿಜಯೋನ್ಮಾದದಿಂದ ಅಮರಾವತಿಯನ್ನು ಪ್ರವೇಶಿಸಿದನು. ಇಂದ್ರ ಸಿಂಹಾಸನದಲ್ಲಿ ಕುಳಿತು ದೇವತೆಗಳ ಸುಧರ್ಮಾ ಸಭೆಯಲ್ಲಿ ತನ್ನ ಅನುಚರರಾದ ದೈತ್ಯರನ್ನು ಕೂಡಿಸಿ, ಗೌರವಿಸಿ, ಸ್ವರ್ಗಸಾಮ್ರಾಜ್ಯವನ್ನು ಆಳತೊಡಗಿದನು. ಈ ಹೊಸ ಸುರಲೋಕದ ಒಡೆಯನನ್ನು ಗಂಧರ್ವರು ಗಾಯನಮಾಡಿ ಸಂತೋಷಗೊಳಿಸಿದರು. ರಂಭಾ, ಊರ್ವಶಿ ಮುಂತಾದ ಅಪ್ಸರಾ ರಮಣಿಯರು ಹಾಡಿ ಪಾಡಿ ಕೊಂಡಾಡಿ ಕುಣಿದು ತಮ್ಮ ಸಂಗೀತ ನರ್ತನ ಸೇವೆಯಿಂದ ಓಲೈಸತೊಡಗಿದರು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಇಂದ್ರ ಪರಾಜಯ ಎಂಬ*
*ಮೂವತ್ತೊಂಬತ್ತನೇ ಅಧ್ಯಾಯ ಮುಗಿದುದು*



## ಸ್ತೋತ್ರನಿರೂಪಣ

**ಅಧ್ಯಾಯ - ೪೦**

ಸ್ವರ್ಗದ ವಿಜಯದಿಂದ ತ್ರಿಪುರನಿಗೆ ವಿಜಯದ ಮದತಲೆಗೇರಿತ್ತು. ಸ್ವರ್ಗ ಲೋಕವನ್ನೆಲ್ಲಾ ಗೆದ್ದು ವಶಪಡಿಸಿಕೊಂಡಿದ್ದ ಆ ದೈತ್ಯರಾಜನ ದೃಷ್ಟಿಯು ಸತ್ಯಲೋಕದ ಕಡೆ ತಿರುಗಿತು. ಸ್ವರ್ಗಲೋಕಕ್ಕೆ ಆ ದೈತ್ಯನಿಂದ ಬಂದ ದುರವಸ್ಥೆಯನ್ನು ಕಂಡು ಬ್ರಹ್ಮದೇವನು ಹೆದರಿ ತನ್ನ ಸತ್ಯಲೋಕವನ್ನು ತೆರವು ಮಾಡಿ ಮಹಾವಿಷ್ಣುವಿನ ಬಳಿಗೆ ಹೋದನು. ಆಗ ವಿಷ್ಣುವಾದರೂ ತನ್ನ ವೈಕುಂಠಲೋಕವನ್ನು ಬಿಟ್ಟು ಕ್ಷೀರಸಮುದ್ರವನ್ನು ಸೇರಿಕೊಂಡನು. ಸತ್ಯಲೋಕ, ವೈಕುಂಠಲೋಕ ಎರಡೂ ದುಷ್ಟ ಬಲಿಷ್ಠನಾದ ತ್ರಿಪುರಾಸುರನಿಗೆ ಕೈವಶವಾದವು. ತ್ರಿಪುರನಿಗೆ ಚಂಡ, ಪ್ರಚಂಡ ಎಂಬ ಇಬ್ಬರೂ 'ಮಾನಸಪುತ್ರರು, ಇದ್ದರು. ಪ್ರಚಂಡನನ್ನು ಬ್ರಹ್ಮಲೋಕಕ್ಕೂ, ಚಂಡನನ್ನು ವೈಕುಂಠಲೋಕಕ್ಕೂ ಪ್ರಸ್ಥಾಪನೆ ಮಾಡಿ ಪಟ್ಟಾಭಿಷೇಕ ಮಾಡಿ ಅಧಿರಾಜರನ್ನಾಗಿ ನಿಯಮಿಸಿದನು.

ಅನಂತರ ದರ್ಪೋದ್ಧತನಾದ ಆ ದುರಳ ದಾನವನು ಕೈಲಾಸಲೋಕಕ್ಕೆ ಹೋದನು. ತನ್ನ ತುಂಬುದೋಳುಗಳಿಂದ ಗಟ್ಟಿಯಾಗಿ ಹಿಡಿದು ಬಾನುದ್ದ ಬೆಳೆದು ನಿಂತ ಬೃಹದಾಕಾರದ ಆ ಬೆಟ್ಟವನ್ನು ಅಲುಗಾಡಿಸಿದನು. ಅದರಿಂದ ಹೆದರಿ ಹೌಹಾರಿದ ಪಾರ್ವತಿಯು ಭಯಭ್ರಾಂತಳಾಗಿ ತನ್ನ ಪತಿಯಾದ ಪರಮೇಶ್ವರರನ್ನು ಬಿಗಿದಪ್ಪಿದಳು. ಆ ಪರ್ವತ ನಂದಿನಿಯು ತನ್ನನ್ನು ಸ್ವಯಂ ಸಂತೋಷದಿಂದ ಆಲಿಂಗನಮಾಡಿ ಕೊಂಡಿದ್ದರಿಂದ ಪಾರ್ವತೀಪತಿಗೆ ಸಂತೋಷವಾಯಿತು. ಅವನು ತಾನೇ ತ್ರಿಪುರಾಸುರನ ಎದುರು ಬಂದು ನಿಂತು "ದೈತೇಂದ್ರ, ನಿನ್ನ ಪರಾಕ್ರಮದಿಂದ ನಾನು ಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು, ನೀಡುತ್ತೇನೆ" ಎಂದು ಪ್ರೀತಿ ತುಂಬಿ ಹೇಳಿದನು. ಆಗ ನಿರ್ಲಜ್ಜನಾದ ಆ ದೈತ್ಯಾಧಮನು "ಪರಮೇಶ್ವರನೇ ನೀನು ನನ್ನ ಮೇಲೆ ನಿಜವಾಗಿ ಪ್ರೀತನಾಗಿದ್ದರೆ ನಿನ್ನ ಕೈಲಾಸಲೋಕವನ್ನೇ ನನಗೆ ಕೊಟ್ಟುಬಿಡು. ನೀನು ನಿನ್ನ ಮಡದಿ

ಮಕ್ಕಳು ಪರಿವಾರದೊಂದಿಗೆ ಈ ಕೈಲಾಸ ಬಿಟ್ಟು ಮಂದರ ಪರ್ವತಕ್ಕೆ ಹೋಗಿ ವಾಸಮಾಡು.'' ಎಂದು ಹೇಳಿದನು.

ಮೊದಲೇ ಬೇಡಿದ್ದನ್ನು ಕೊಡುತ್ತೇನೆಂದು ಹೇಳಿ ಪರಮೇಶ್ವರನು ಕೈಕಟ್ಟಿಸಿಕೊಂಡಿದ್ದ. ಈಗ ಅವನ ಬಾಯಿಯು ಕಟ್ಟಿಹೋಯಿತು. ವಚನಬದ್ಧನಾದ ಆ ಪಾರ್ವತೀಪತಿಯು ಮಾತನಾಡದೇ ತನ್ನ ಭೂತಪ್ರೇತ ಪರಿವಾರದೊಡನೆ ಮಂದಾರಚಲಕ್ಕೆ ತೆರಳಿದ.

ಹೀಗೆ ತ್ರಿಪುರಾಸುರನು ಅನಾಯಾಸವಾಗಿ ಕೈಲಾಸಲೋಕವನ್ನು ವಶಪಡಿಸಿಕೊಂಡು ಹಿಗ್ಗಿನಿಂದ ಕುಣಿದಾಡಿದ. ಅನಂತರ ಆ ದುಷ್ಟನಾದ ದೈತ್ಯನು ಭೂಲೋಕಕ್ಕೆ ಬಂದ. ಇಲ್ಲಿಯ ರಾಜರನ್ನೆಲ್ಲಾ ಕಾರಾಗೃಹಕ್ಕೆ ಅಟ್ಟಿದ. ಋಷಿಗಳನ್ನು ಬಂಧಿಸಿದ. ಆಶ್ರಮಗಳನ್ನು ಕಿತ್ತಿಹಾಕಿದ. ಪರ್ಣಶಾಲೆಗಳನ್ನು ಮುರಿದುಬಿಟ್ಟಿದ. ಹೋಮಕುಂಡಗಳನ್ನು ಒಡೆದುಹಾಕಿದ. ಎಲ್ಲಿಯೂ ಯಜ್ಞಯಾಗಾದಿಗಳು ನಡೆಯದಂತೆ, ಪುಣ್ಯಕಾರ್ಯಗಳು ನೇರವೇರದಂತೆ ಪ್ರತಿಬಂಧಕಾಜ್ಞೆಯನ್ನು ಹೊರಡಿಸಿದ.

ಇದರಂತೆ ತ್ರಿಪುರಾಸುರನ ಅನುಚರನಾದ ವಜ್ರದಂಷ್ಟನು ಜಾತ್ಯಾದುಷ್ಟ. ಮಹಾಕ್ರೂರ. ಅವನು ತನ್ನ ಶೌರ್ಯ ಧೈರ್ಯಗಳಿಂದ ತಲ, ಅತಲ, ವಿತಲ, ಸುತಲ, ರಸಾತಲ, ಪಾತಾಳ, ತಲಾತಲ ಎಂಬ ಕೆಳಗಿನ ಏಳು ಲೋಕಗಳನ್ನು ಗೆದ್ದು ಸ್ವಾಧೀನಪಡೆದು ಕೊಂಡು ಆದಿಶೇಷ ವಾಸುಕಿ, ತಕ್ಷಕ ಮೊದಲಾದ ಸರ್ಪರಾಜರನ್ನು ತನ್ನ ಅಡಿಯಾಳು ಗಳನ್ನಾಗಿ ಮಾಡಿಕೊಂಡ. ಅಲ್ಲಿಯ ನಾಗಕನ್ಯೆಯರನ್ನು ತ್ರಿಪುರಾಸುರನ ಭೋಗಕ್ಕಾಗಿ ಕಳಿಸಿ ತಾನೂ ಅವನೊಡನೆ ಸ್ವಚ್ಛಂದ ಕಾಮ ಕೇಳೀ ವಿಹಾರಗಳನ್ನು ಮಾಡುತ್ತಿದ್ದ.

ಇತ್ತ ಕಾಡು ಕೊಂಪೆಗಳಲ್ಲಿ ಕೊಳ್ಳಕಂದರಗಳಲ್ಲಿ ತಲೆಮರೆಸಿಕೊಂಡು ದೇವತೆಗಳು ಅತಿ ದುಃಖದಿಂದ ಜೀವಿಸುತ್ತಿದ್ದರು. ಅವರೆಲ್ಲರೂ ಮುಂದೇನು ಗತಿ ಎಂದು ಯೋಚಿಸಲು ಒಂದೆಡೆ ಸಭೆ ಸೇರಿದಾಗ ಅಲ್ಲಿಗೆ ತ್ರಿಲೋಕ ಸಂಚಾರಿಗಳಾದ ನಾರದರು ಬಂದರು. ಅವರ ಎದುರು ತಮ್ಮ ದುಃಖವನ್ನು ತೋಡಿಕೊಂಡು ''ಈ ತ್ರಿಪುರಾಸುರನ ಉಪಟಳದಿಂದ ಪಾರಾಗಲು ಏನಾದರು ಉಪಾಯ ಉಂಟೇ'' ಎಂದು ಕೇಳಿದರು. ಆಗ ನಾರದರು ದೇವತೆಗಳನ್ನು ಸಂತೈಸುತ್ತಾ ನುಡಿದರು. ''ಸುರೋತ್ತಮರೇ ಆ ತ್ರಿಪುರಾಸುರನು ದೇವಮಾನದಿಂದ ಒಂದು ಸಾವಿರ ವರ್ಷ ಘೋರವಾದ ತಪಸ್ಸನ್ನು ಮಾಡಿ ಗಣೇಶನನ್ನು ಆರಾಧಿಸಿದ್ದಾನೆ. ದೇವಕುಲದ ನಾಯಕನಲ್ಲವೇ ವಿನಾಯಕ ! ಆ ಗಣೇಶಪ್ರಭುವು ಆ ದೈತ್ಯನಿಗೆ ಜಗತ್ತಿಗೆ ಭಯಂಕರವಾದ ವರಗಳನ್ನು ಕೊಟ್ಟಿದ್ದಾನೆ. ಅದರಿಂದ ಆ ದೈತ್ಯನಿಗೆ ದೇವ, ರಾಕ್ಷಸ, ಮಾನವ, ಯಕ್ಷ, ನಾಗ ಯಾರಿಂದಲೂ ಭಯವಿಲ್ಲ. ಪರಮೇಶ್ವರನ ಹೊರತಾಗಿ ನಿನಗೆ ಬೇರೆ ಯಾರಿಂದಲೂ ಭಯವಿಲ್ಲ. ಅಪಾಯವಿಲ್ಲ. ಮರಣವಿಲ್ಲ. ಎಂದು ಅವನಿಗೆ ವರವನ್ನು ಕರುಣಿಸಿದ್ದಾನೆ ಆ ಗಜಾನನ. ಆದುದರಿಂದ ನೀವೆಲ್ಲರೂ ಗಜಮುಖನಾದ ಆ ವಿಘ್ನೇಶ್ವರನನ್ನೇ ಆರಾಧಿಸಿರಿ. ನಿಮಗೆ ನಾನು ಏಕಾಕ್ಷರ ಗಣೇಶಮಂತ್ರವನ್ನು ಉಪದೇಶ ನೀಡುತ್ತೇನೆ. ನೀವೆಲ್ಲರೂ ಸ್ಥಿರಮನಸ್ಸಿನಿಂದ ಆ ಗಣೇಶಮಂತ್ರವನ್ನು ಜಪಾನುಷ್ಠಾನ ಮಾಡಿರಿ. ಪ್ರಸನ್ನನಾದ ಗಣಪತಿಯು ನಿಮಗೆ ಆ ದೈತ್ಯನ ವಧದ ಉಪಾಯವನ್ನು ಹೇಳುವನು. ಇದರ ಹೊರತು ಬೇರೆ ದಾರಿಯೇ ಇಲ್ಲ'' ಎಂದು ಹೇಳಿ ನಾರದರು ದೀನರಾದ ದೇವತೆಗಳಿಗೆ

ಗಣೇಶಮಂತ್ರವನ್ನು ಉಪದೇಶಿಸಿದರು. ಅನಂತರ ಮಹತೀ ಎಂಬ ತಮ್ಮ ವೀಣೆಯನ್ನು ಬಾರಿಸುತ್ತಾ, ಭಗವನ್ ನಾಮಗಳನ್ನು ಗಾಯನ ಮಾಡುತ್ತ ಹೊರಟು ಹೋದರು.

ಅನಂತರ ದೇವತೆಗಳಲ್ಲಿ ಕೆಲವರು ಒಂಟಿಗಾಲಲ್ಲಿ ನಿಂತು, ಹಲವರು ಪದ್ಮಾಸನದಲ್ಲಿ ಕುಳಿತು ಮತ್ತು ಇತರರು ಕಣ್ಣು ಮುಚ್ಚಿಕೊಂಡು ಕುಳಿತು ಎಲ್ಲರೂ ಗಣೇಶನ ಧ್ಯಾನೈಕತಾನಲೀನಮಾನಸರಾಗಿ ಅನನ್ಯ ಭಕ್ತಿಯಿಂದ ಗಣೇಶ ಮಂತ್ರದ ಪುನಶ್ಚರಣವನ್ನು ಮಾಡಿದರು. ಮಂತ್ರ ಜಪರೂಪವಾದ ದೇವತೆಗಳ ದೀರ್ಘಕಾಲೀನವಾದ ತಪೋನುಷ್ಠಾನದಿಂದ ಗಣೇಶನು ಸುಪ್ರಸನ್ನನಾಗಿ ಅವರಿಗೆ ಪ್ರತ್ಯಕ್ಷ ಗೋಚರನಾದನು. ತಲೆಯ ಮೇಲೆ ಹೊಳೆಯುವ ಕಿರೀಟ, ಕಿವಿಯಲ್ಲಿ ರತ್ನದ ಮಣಿಕುಂಡಲಗಳು, ಒಂದು ಕೈಯಲ್ಲಿ ಗದೆ. ಇನ್ನೊಂದರಲ್ಲಿ ಪಾಶ, ಮತ್ತೊಂದರಲ್ಲಿ ಅಂಕುಶ, ಮತ್ತೊಂದರಲ್ಲಿ ತಾವರೆಹೂ, ಹಣೆಯ ಮೇಲೆ ಕಸ್ತೂರಿತಿಲಕ, ಮೈಗೆಲ್ಲಾ ರಕ್ತಚಂದನ. ಗಂಡಸ್ಥಳದಲ್ಲಿ ಸಿಂಧೂರಚೂರ್ಣ, ಕಿರೀಟದಲ್ಲಿ ಅರ್ಧಚಂದ್ರನನ್ನು ಧರಿಸಿಕೊಂಡು ಆ ಗಣನಾಯಕನು ಕಣ್ಣುಕೊರೈಸುವ ಕಾಂತಿಯಿಂದ ಮಿಂಚುತ್ತಿದ್ದನು. ದೇವತೆಗಳು ಅವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಅವನ ಚರಣಗಳಿಗೆ ಶರಣು ಹೋದರು. ಮತ್ತು ಭಕ್ತಿಯಿಂದ ಬಗೆಬಗೆಯಿಂದ ಅವನನ್ನು ಹೊಗಳಿ ಸ್ತೋತ್ರ ಮಾಡಿದರು.

## ಸಂಕಷ್ಟನಾಶನ ಸ್ತೋತ್ರ

ನಮೋ ನಮಸ್ತೇ ಪರಮಾರ್ಥರೂಪ ।
ನಮೋ ನಮಸ್ತೇಽಖಿಲಕಾರಣಾಯ ॥
ನಮೋ ನಮಸ್ತೇಽಖಿಲಕಾರಕಾಯ
ಸರ್ವೇಂದ್ರಿಯಾಣಾಮಧಿವಾಸಿನೇಽಪಿ ॥

ನಮೋ ನಮೋ ಭೂತಮಯಾಯ ತೇಽಸ್ತು,
ನಮೋ ನಮೋ ಭೂತಕೃತೇ ಸುರೇಶ ॥
ನಮೋ ನಮಃ ಸರ್ವಧಿಯಾಂ ಪ್ರಬೋಧ ನಮೋನಮೋ ವಿಶ್ವಲಯೋದ್ಭವಾಯ ॥
ನಮೋ ನಮೋ ವಿಶ್ವಭೃತೇಽಖಿಲೇಶ, ನಮೋ ನಮಃ ಕಾರಣಕಾರಣಾಯ ॥

ನಮೋ ನಮೋ ವೇದವಿದಾಮದೃಶ್ಯ
ನಮೋ ನಮಃ ಸರ್ವವರಪ್ರದಾಯ ॥
ನಮೋ ನಮೋ ವಾಗವಿಚಾರಭೂತ
ನಮೋ ನಮೋ ವಿಘ್ನನಿವಾರಣಾಯ ॥

ನಮೋ ನಮೋಽಜ್ಞಾನವಿನಾಶನಾಯ
ನಮೋ ನಮೋ ಭಕ್ತವಿಭೂತಿದಾಯ ॥
ನಮೋ ನಮೋಽಭಕ್ತವಿಭೂತಿಹಂತ್ರೇ,
ನಮೋ ನಮೋ ಭಕ್ತ ವಿಮೋಚನಾಯ ॥

ನಮೋ ನಮೋ ದೈತ್ಯವಿನಾಶಹೇತೋ
ನಮೋ ನಮಃ ಸಂಕಟನಾಶಕಾಯ ॥
ನಮೋ ನಮಃ ಕಾರಣಕೋತ್ತಮಾಯ
ನಮೋ ನಮೋ ಜ್ಞಾನಮಯಾಯ ತೇಽಸ್ತು ॥

ನಮೋ ನಮೋ ಭಕ್ತವಿಬಂಧನಾಯ
ನಮೋ ನಮಸ್ತೇ ಪ್ರವಿಭಕ್ತಮೂರ್ತೇ ॥
ನಮೋನಮಸ್ತತ್ತ್ವವಿಬೋಧಕಾಯ
ನಮೋನಮಸ್ತತ್ತ್ವವಿದುತ್ತಮಾಯ ॥
ನಮೋ ನಮಸ್ತೇಽಖಿಲಕರ್ಮಸಾಕ್ಷಿಣೇ,
ನಮೋ ನಮಸ್ತೇ ಗಣನಾಯಕಾಯ ॥

''ಪರಮಾರ್ಥತಃ ಸತ್‌ಸ್ವರೂಪನೂ ಎಲ್ಲ ಜಗತ್ತಿಗೆ ಕಾರಣನೂ ಸಕಲಕಾರ್ಯಗಳಿಗೆ ಪ್ರೇರಕನೂ ಕಾರಕನೂ, ಇಂದ್ರಿಯನಿಯಾಮಕನೂ, ಸರ್ವಪ್ರಾಣಿಗಳ ಅಂತರ್ಯಾಮಿಯೂ, ಪಂಚಮಹಾಭೂತಗಳನ್ನು ಸೃಷ್ಟಿಸಿದವನೂ ಸರ್ವಬುದ್ಧಿಪ್ರಚೋದಕನೂ, ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಕಾರಣನೂ, ಸಕಲ ಜಗದಾಧಾರನೂ, ಕಾರಣಕಾರಣನೂ, ವೇದವಿದ್ವಾಂಸರಿಗೂ ಅಗೋಚರನೂ, ಎಲ್ಲರಿಗೂ ವರನೀಡುವವನೂ. ಮಾತಿನ ಮಿತಿ ಮೀರಿದವನೂ, ವಿಘ್ನನಿವಾರಕನೂ, ದೈತ್ಯನಾಶಕನೂ, ಸಂಕಟ ಪರಿಹಾರಕನೂ, ಪರಮ ಕಾರುಣಿಕನೂ, ಜ್ಞಾನ ಸ್ವರೂಪಿಯೂ, ಅಜ್ಞಾನ ನಾಶಕನೂ, ಭಕ್ತರಿಗೆ ಐಶ್ವರ್ಯದಾಯಕನೂ, ಭಕ್ತರಾಗದವರ ಐಶ್ವರ್ಯವನ್ನು ನಾಶಪಡಿಸುವವನೂ, ಭಕ್ತರ ಬಂಧವಿಮೋಚಕನೂ, ಭಕ್ತರ ಸಾಂಸಾರಿಕ ಬಂಧನವನ್ನು ಬಿಡಿಸುವವನೂ, ಸಗುಣರೂಪನೂ, ತತ್ವಬೋಧಕನೂ, ತತ್ವಜ್ಞಾನಿಗಳಲ್ಲಿ ಶ್ರೇಷ್ಠನೂ, ಎಲ್ಲ ಕರ್ಮಗಳ ಸಾಕ್ಷೀಭೂತನೂ ಆದ ಗಣಾನಾಯಕನಾದ ಸಿದ್ಧಿವಿನಾಯಕ ನಿನಗೆ ನಮೋ ನಮಃ, ನಮೋನಮಃ ಎಂದು ಆ ಭಗವಂತನನ್ನು ಸ್ತೋತ್ರ ಮಾಡಿ ಮತ್ತೆ ಮತ್ತೆ ನಮಸ್ಕರಿಸಿದರು. ಮತ್ತು ಆ ಗಣಾನಾಯಕನ ಎದುರು ತಮ್ಮ ದುಃಖವನ್ನೆಲ್ಲ ಹೇಳಿಕೊಂಡು 'ಭಗವನ್, ತ್ರಿಪುರಾಸುರನು ನಿನ್ನ ವರದಿಂದಲೇ ಬಲಿಷ್ಠನಾಗಿ, ಉನ್ಮತ್ತನಾಗಿ ನಮ್ಮನ್ನು ನಮ್ಮ ಸ್ಥಾನಗಳಿಂದ ಹೊರದಬ್ಬಿದ್ದಾನೆ. ನಾವು ಸ್ಥಾನಭ್ರಷ್ಟರಾಗಿ ಅಡವಿಪಾಲು ಆಗಿದ್ದೇವೆ. ಅನಾಥರಾಗಿ, ಅಗತಿಕರಾಗಿ ನಿನ್ನನ್ನೇ ಶರಣುಹೊಂದಿದ್ದೇವೆ. ಘೋರವಾದ ಸಂಕಟದಲ್ಲಿ ಬಿದ್ದು ದುಃಖಪಡುತ್ತಿರುವ ಎಲ್ಲ ಸುರಸಂದೋಹವನ್ನು ದುಃಖದಿಂದ ಪಾರುಮಾಡುವ ದೇವೋತ್ತಮನು ನೀನೊಬ್ಬನೇ. ಸ್ವರ್ಗವಾಸಿಗಳಾದ ನಮ್ಮನ್ನೆಲ್ಲ ದುಃಖದ ದಳ್ಳುರಿಯಲ್ಲಿ ದೂಡಿದ ಆ ದುರ್ಾತನನ್ನು ನೀನೇ ಮೊದಲು ಕೊಲ್ಲು. ನಮ್ಮನ್ನು ಈ ದೈನ್ಯ ದುರವಸ್ಥೆಯಿಂದ ಪಾರುಮಾಡು'' ಎಂದು ಅಂಗಲಾಚಿ ಬೇಡಿಕೊಂಡರು.

ದೇವತೆಗಳ ಈ ಭಕ್ತಿಯುಕ್ತವಾದ ಪ್ರಾರ್ಥನೆಯನ್ನು, ಬೇಡಿಕೆಯನ್ನು ಕೇಳಿ ಸಂತುಷ್ಟನಾದ ವಿನಾಯಕ ದೇವನು ಅವರನ್ನೆಲ್ಲ ಸಂತೈಸುತ್ತಾ ನುಡಿದನು. ''ದೇವತೆಗಳೇ,

ನಿಮ್ಮ ಸ್ತೋತ್ರದಿಂದ ನಾನು ಪ್ರೀತನಾಗಿದ್ದೇನೆ. ನಿಮ್ಮ ಘೋರತರವಾದ ಸಂಕಟವನ್ನು ಪರಿಹಾರಮಾಡುತ್ತೇನೆ. ಇನ್ನು ನಿಮಗೆ ಯಾವ ಭಯವೂ ಬೇಡ. ನೀವು ಮಾಡಿದ ಈ ಸ್ತೋತ್ರವು **''ಸಂಕಷ್ಟನಾಶನ''** ಸ್ತೋತ್ರವೆಂದು ಜಗತ್ತಿನಲ್ಲಿ ಪ್ರಸಿದ್ಧವಾಗುವದು. ಈ ಸಂಕಷ್ಟನಾಶನ ಸ್ತೋತ್ರವನ್ನು ಮುಂಜಾನೆ, ಮಧ್ಯಾಹ್ನ, ಸಾಯಂಕಾಲ ಮೂರು ಹೊತ್ತು ಪಠಣ ಮಾಡುವವರಿಗೆ ಎಂದೂ ಯಾವ ವಿಧವಾದ ಸಂಕಟವೂ ಬರುವದಿಲ್ಲ.'' ಹೀಗೆ ಗಣಪತಿಯು ದೇವತೆಗಳಿಗೆ ಅಭಯದಾನಮಾಡಿ ಅಂತರ್ಧಾನವನ್ನು ಹೊಂದಿದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಸಂಕಷ್ಟನಾಶನ ಸ್ತೋತ್ರನಿರೂಪಣ ಎಂಬ ನಲವತ್ತನೇ ಅಧ್ಯಾಯ ಮುಗಿದುದು*

—o—

## ಕಲಾಧರ ಬ್ರಾಹ್ಮಣನ ಕಾರ್ಯಸಾಧನೆ | ಅಧ್ಯಾಯ - ೪೧

ಪ್ರಸನ್ನನಾದ ಗಣಪತಿಯು ದೇವತೆಗಳಿಗೆ 'ನಿಮ್ಮ ಸಂಕಟಗಳನ್ನು ಪರಿಹರಿಸುತ್ತೇನೆ. ತ್ರಿಪುರಾಸುರನನ್ನು ಸಂಹರಿಸುತ್ತೇನೆ. ನೀವು ಭಯಪಡಬೇಡಿರಿ.'' ಎಂದು ಆಶ್ವಾಸನೆಯನ್ನು ಇತ್ತು ಅಂತರ್ಧಾನ ಹೊಂದಿದನು. ದೇವತೆಗಳಿಗೆ ಕೊಟ್ಟ ಆಶ್ವಾಸನದಂತೆ ಆ ವಿನಾಯಕನು ಬ್ರಾಹ್ಮಣನ ವೇಷವನ್ನು ಧರಿಸಿಕೊಂಡನು. ತ್ರಿಪುರಾಸುರನ ಪಟ್ಟಣವನ್ನು ಪ್ರವೇಶಮಾಡಿದನು. ಅಲ್ಲಿ ರಾಜಗೃಹದ ಮಧ್ಯಭಾಗದಲ್ಲಿ ಸಿಂಹಾಸನದಲ್ಲಿ ಕುಳಿತುಕೊಂಡ ತ್ರಿಪುರಾಸುರನು ಬ್ರಾಹ್ಮಣ ವೇಷಧಾರಿಯಾದ ಗಣಪತಿಯನ್ನು ನೋಡಿದನು. ಅವನ ಮುಖದಲ್ಲಿ ಉಕ್ಕುವ ತೇಜವನ್ನು, ಕಣ್ಣಿನ ಕಾಂತಿಯನ್ನೂ, ದಿವ್ಯ ವರ್ಚಸ್ಸನ್ನೂ ನೋಡಿ ದೈತ್ಯರಾಜನು ಮರುಳಾದ. ಸಿಂಹಾಸನದಿಂದ ಎದ್ದು ಬಂದು ಆ ವಿಪ್ರೋತ್ತಮನನ್ನು ತನ್ನ ಆಸನದಲ್ಲಿ ಕೂಡಿಸಿದ. ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದ. ಮತ್ತು ಕೈಮುಗಿದು ''ಬ್ರಾಹ್ಮಣೋತ್ತಮನೇ, ನೀನು ಎಲ್ಲಿಂದ ಬಂದೆ ? ನಿನ್ನ ಹೆಸರೇನು ? ನನ್ನಿಂದ ನಿನಗೆ ಏನಾದರೂ ಕಾರ್ಯವಾಗಬೇಕಿದ್ದರೆ ತಿಳಿಸು'' ಎಂದು ವಿನಯದಿಂದ ಕೇಳಿಕೊಂಡ.

ಅದಕ್ಕೆ ಆ ಬ್ರಾಹ್ಮಣನು ''ದೈತ್ಯೇಂದ್ರ, ನಾವು ಸಾಯಂಗೃಹಿಗಳಾದ ಯತಿಗಳು. ಹಗಲು ಹೊತ್ತು ಸಂಚಾರಮಾಡಿ ಸಾಯಂಕಾಲವಾದೊಡನೆ ಯಾವುದಾದರು ಒಂದು ಮನೆಯನ್ನು ಆಶ್ರಯಿಸುತ್ತೇನೆ. ಕಲಾಧರ ಎಂದು ನನ್ನ ಹೆಸರು. ನಿನ್ನ ವೈಭವಾತಿಶಯವನ್ನು ನೋಡಿ ನಿನ್ನ ಮನೆಗೆ ಬಂದಿದ್ದೇವೆ.'' ಎಂದು ಉತ್ತರ ಕೊಟ್ಟನು.

ಆಗ ತ್ರಿಪುರಾಸುರನು ಆ ಬ್ರಾಹ್ಮಣನಿಗೆ ''ವಿಪ್ರೋತ್ತಮನೇ, ನಿನ್ನ ಹೆಸರು ಕಲಾಧರ ಎಂದು ಹೇಳಿದೆ. ನಿನ್ನ ಕಲಾಧರ ಎಂಬ ಹೆಸರು ಅನ್ವರ್ಥಕವಾಗಿದ್ದರೆ ನಿನ್ನಲ್ಲಿರುವ ಕಲೆಯ ಚಮತ್ಕಾರವನ್ನು ನನಗೆ ತೋರಿಸು. ನಿನ್ನ ಕಲೆಯ ವೈಭವವನ್ನು ತೋರಿಸಿ ನನ್ನನ್ನು ಸಂತೋಷಪಡಿಸಿದರೆ, ನಾನು ನಿನಗೆ ಅಪೇಕ್ಷಿಸಿದ ವಸ್ತುವನ್ನು ತಂದುಕೊಡುತ್ತೇನೆ.'' ಎಂದು ಹೇಳಿದನು.

ತ್ರಿಪುರಾಸುರನ ಈ ಮಾತನ್ನು ಕೇಳಿ ಕಲಾಧರ ವಿಪ್ರನು ತನ್ನ ಶಕ್ತಿಯಿಂದ ಚಿನ್ನ, ಬೆಳ್ಳಿ, ಕಬ್ಬಿಣಗಳಿಂದ ರಚಿತವಾದ ತ್ರಿಪುರಾಸುರನ ಪಟ್ಟಣದಂತೆಯೇ ಇರುವ ಅಚ್ಛೇದ್ಯ,

ಅಭೇದ್ಯವಾದ ತ್ರಿಪುರಾ ಪಟ್ಟಣವನ್ನು ನಿರ್ಮಿಸಿ ತೋರಿಸಿದನು. ಮತ್ತು ಅದರಿಂದ ಆಶ್ಚರ್ಯಚಕಿತನಾಗಿ ನಿಂತುಕೊಂಡ ತ್ರಿಪುರಾಸುರನಿಗೆ 'ದೈತ್ಯರಾಜ, ನಾನು ನಿರ್ಮಿಸಿದ ಈ ಪಟ್ಟಣವು ಕಾಮಗಾಮಿ ಆಗಿರುವದು. ಇದರಲ್ಲಿ ಕುಳಿತು ನೀನು ಎಲ್ಲಿ ಬೇಕು ಅಲ್ಲಿಗೆ ಸಂಚಾರಕ್ಕೆ ಹೋಗಬಹುದು. ಇದನ್ನು ದೇವದಾನವರಲ್ಲಿ ಯಾರೂ ಭೇದಿಸಲಾರರು, ಎಂದೂ ಭೇದಿಸಲಾರರು. ಆದರೆ ಮಹಾದೇವರನ್ನು ನೀನು ಕೆಣಕಿದೆಯಾದರೆ ಅವನು ಕ್ರುದ್ಧನಾಗಿ ಒಂದೇ ಬಾಣದಿಂದ ಈ ಮೂರು ಪಟ್ಟಣಗಳನ್ನು ಸೀಳಿ ಹಾಕುವನು. ಆ ಮಹಾದೇವನನ್ನು ನೀನು ಎದುರು ಹಾಕಿಕೊಳ್ಳದಿದ್ದರೆ ಚಿರಕಾಲ ಅಮರಾವತಿಯಂತೆ ಇದ್ದ ಈ ಪಟ್ಟಣದಲ್ಲಿ ನಿನಗೆ ಬೇಕಾದ ಸುಖೋಪಭೋಗಗಳನ್ನು ಇಲ್ಲಿ ಇದ್ದು ಅನುಭವಿಸಬಹುದು'' ಎಂದು ಹೇಳಿ ತನ್ನ ಪಟ್ಟಣ ನಿರ್ಮಾಣದ ಕಲಾಚಮತ್ಕಾರವನ್ನು ತೋರಿಸಿದನು.

ಇದರಿಂದ ಆ ತ್ರಿಪುರಾಸುರನಿಗೆ ಪರಮಸಂತೋಷವೂ ಅತ್ಯಂತ ಆಶ್ಚರ್ಯವೂ ಏಕಕಾಲಕ್ಕೆ ಉಂಟಾದವು. ಮತ್ತು ಕಲಾಧರ ಬ್ರಾಹ್ಮಣನ ಬಗ್ಗೆ ಅತಿಶಯಿತವಾದ ಗೌರವಾದರಗಳು ಅವನಲ್ಲಿ ಹುಟ್ಟಿದವು. ಅವನ ಕಲಾಪ್ರದರ್ಶನದಿಂದ ಉಬ್ಬಿ ಉತ್ಸಾಹಗೊಂಡ ತ್ರಿಪುರಾಸುರನು ಸುಪ್ರೀತನಾಗಿ ಹೇಳಿದನು. ''ಬ್ರಾಹ್ಮಣೋತ್ತಮ, ನಿನ್ನ ಕಲಾಶಕ್ತಿಯನ್ನು ನಾನು ಮೆಚ್ಚಿದ್ದೇನೆ. ನಿನಗೆ ಏನು ಬೇಕು ಹೇಳು. ಎಂತಹ ದುರ್ಲಭವಾಗಿದ್ದರೂ ನೀನು ಕೇಳಿದ್ದನ್ನು ನಾನು ತಂದುಕೊಡುತ್ತೇನೆ. ಸಂಕೋಚಬೇಡ.'' ಎಂದು ನುಡಿದನು.

ಅಸುರರಾಜನ ಆ ವಿಶ್ವಾಸದ ನುಡಿಯನ್ನು ಕೇಳಿ ಪರಿತುಷ್ಟನಾದ ಆ ಕಲಾಧರ ವಿಪ್ರನು ನಕ್ಕು ನುಡಿದ. ''ನೀನು ನನ್ನ ಅಪೇಕ್ಷಿತ ವಸ್ತುವನ್ನು ತಂದು ಕೊಡುವುದಾದರೆ ಕೈಲಾಸಪರ್ವತದಲ್ಲಿ ಪರಮೇಶ್ವರನ ಸಮೀಪದಲ್ಲಿರುವ ಸುಂದರವಾದ ಗಣೇಶನ ಮೂರ್ತಿಯನ್ನು ತಂದುಕೊಡು. ಅದು ಅತ್ಯಂತ ದುರ್ಲಭವಾದ ವಸ್ತು. ಆ ದಿವ್ಯ ಮೂರ್ತಿಯಲ್ಲಿ ನನ್ನ ಮನಸ್ಸು ಆಸಕ್ತವಾಗಿದೆ. ಅದನ್ನು ನಾನು ಪಡೆದರೆ ಕೃತಾರ್ಥನಾಗುತ್ತೇನೆ. ದೇವದುರ್ಲಭವಾದ ಆ ವಸ್ತುವನ್ನು ನೀನು ನನಗೆ ತಂದುಕೊಟ್ಟರೆ ಮೂರು ಲೋಕಗಳಲ್ಲಿಯೂ ನಿನ್ನ ಕೀರ್ತಿಯನ್ನು ಪ್ರಚಾರ ಮಾಡುತ್ತೇನೆ'' ಎಂದು ಹೇಳಿದನು.

ಕಲಾಧರ ಬ್ರಾಹ್ಮಣನ ಕೋರಿಕೆಯನ್ನು ತ್ರಿಪುರಾಸುರನು ತಕ್ಷಣ ಮಾನ್ಯ ಮಾಡಿದ. ''ಕೈಲಾಸದಲ್ಲಿರುವ ಗಣೇಶಮೂರ್ತಿಯನ್ನು ಹೇಗಾದರೂ ಮಾಡಿ ತಂದು ಕೊಡುತ್ತೇನೆ'' ಎಂದು ವಚನ ಇತ್ತ, ಮತ್ತು ಆ ಕಲಾಧರ ಬ್ರಾಹ್ಮಣನಿಗೆ ಮುತ್ತು, ರತ್ನ, ನೆಲಕ್ಕೆ ಹಾಸುವ ರತ್ನಗಂಬಳಿ. ಒಳ್ಳೆಯ ಕುದುರೆ, ರಥ, ಧನ, ಕನಕ, ವಾಹನ ಮೊದಲಾದವುಗಳನ್ನು ಕೊಟ್ಟು ಮೇಲೆ ಹತ್ತು ಗ್ರಾಮಗಳನ್ನು ದಾನವಾಗಿ ನೀಡಿದನು. ಇದರಿಂದ ಸಂತುಷ್ಟನಾದ ಕಲಾಧರ ಬ್ರಾಹ್ಮಣ ವೇಷಧಾರಿಯಾದ ಗಣೇಶನು ಸಂತೋಷದಿಂದ ತನ್ನ ಸ್ಥಾನಕ್ಕೆ ತೆರಳಿದನು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಕಲಾಧರ ಬ್ರಾಹ್ಮಣನ ಕಾರ್ಯಸಾಧನೆ ಎಂಬ ನಲವತ್ತೊಂದನೆ ಅಧ್ಯಾಯ ಮುಗಿದುದು*

——○——

## ತ್ರಿಪುರಾಸುರ ಪರಮೇಶ್ವರರ ಸಮರೋದ್ಯಮ

**ಅಧ್ಯಾಯ - ೪೨**

ಕಲಾಧರ ಬ್ರಾಹ್ಮಣನು ಮರಳಿಹೋದ ಬಳಿಕ ತ್ರಿಪುರಾಸುರನು ಕೈಲಾಸದಿಂದ ಕಲಾಧರನು ಅಪೇಕ್ಷಪಟ್ಟ ಗಣೇಶಮೂರ್ತಿಯನ್ನು ತರುವದು ಹೇಗೆ ಎಂದು ಯೋಚನೆ ಮಾಡಿದ. ಸೌಮ್ಯೋಪಾಯದಿಂದಲೇ ತನ್ನ ಕಾರ್ಯವನ್ನು ಸಾಧಿಸಿಕೊಳ್ಳಬೇಕೆಂದು ಯೋಚಿಸಿದ. ತನ್ನ ದೂತರನ್ನು ಕಳಿಸಿ ಮಹಾದೇವನಿಗೆ ''ಚಿಂತಾಮಣಿರತ್ನಕ್ಕೆ ಸರಿದೂಗುವ ಗಣೇಶ ಮೂರ್ತಿಯನ್ನು ನನಗೆ ನೀನೇ ಬಂದು ತಂದುಕೊಡು. ನೀನು ಸರಳಮಾರ್ಗದಿಂದ ತಂದುಕೊಡದಿದ್ದರೆ ಬಲಾತ್ಕಾರದಿಂದ ನಾನು ಆ ಮೂರ್ತಿಯನ್ನು ಕಸಿದುಕೊಳ್ಳುತ್ತೇನೆ. ನನ್ನನ್ನು ಎದುರು ಹಾಕಿಕೊಂಡರೆ ಇಂದ್ರಾದಿ ದೇವತೆಗಳಂತೆ ನೀನು ಬಹಳ ಕ್ಲೇಶಕ್ಕೆ ''ಗುರಿಯಾಗಬೇಕಾಗುವದು. ಇದರ ಮೇಲೆ ನಿನ್ನ ಇಷ್ಟ'' ಎಂದು ಹೇಳಿ ಕಳಿಸಿದ.

ದೈತ್ಯಾಧಮನ ಕೀಳು ನುಡಿಗಳಿಗೆ ಪ್ರತಿಯಾಗಿ ಮಹಾದೇವನು ''ಗಣೇಶ ಮೂರ್ತಿಯನ್ನು ಸರ್ವಥಾ ಕೊಡುವದಿಲ್ಲ. ಶಕ್ತಿಯಿದ್ದರೆ ನನ್ನೊಡನೆ ಯುದ್ಧ ಮಾಡಿ ಆ ಗಣೇಶಮೂರ್ತಿಯನ್ನು ತೆಗೆದುಕೊಂಡು ಹೋಗು'' ಎಂದು ಸ್ಪಷ್ಟವಾಗಿ ಹೇಳಿಕಳಿಸಿದನು.

ದೂತರು ಬಂದು ಮಹಾದೇವನ ಪ್ರತಿಸಂದೇಶವನ್ನು ತಿಳಿಸಿದ ಕೂಡಲೇ ಸಿಟ್ಟಿನಿಂದ ಉರಿದೆದ್ದ ಆ ತ್ರಿಪುರಾಸುರ. ತನ್ನ ಚತುರಂಗ ಸೈನ್ಯವನ್ನು ಸಜ್ಜುಗೊಳಿಸಿಕೊಂಡು ತನ್ನ ಸೇನಾಪತಿಗಳಿಂದ ಕೂಡಿಕೊಂಡು ಯುದ್ಧಕ್ಕಾಗಿ ಮಂದರಪರ್ವತಕ್ಕೆ ನಡೆದ. ಅಭೇದ್ಯವಾದ ಉಕ್ಕಿನ ಕವಚಗಳನ್ನು ಮೈಯಲ್ಲಿ ತೊಟ್ಟು, ಕೊರಳಲ್ಲಿ ಅನೇಕ ಮುತ್ತಿನ ಮಾಲೆಗಳನ್ನೂ, ರತ್ನ ಹಾರಗಳನ್ನೂ ಧರಿಸಿ ರಣೋತ್ಸಾಹದಿಂದ ಸಿಂಹನಾದ ಮಾಡಿದ.

ಅದರಿಂದ ಎಚ್ಚತ್ತುಕೊಂಡ ಮಹಾದೇವನು ತಾನೂ ಯುದ್ಧಕ್ಕೆ ಸಿದ್ಧನಾದ. ಯುದ್ಧದಲ್ಲಿ ತನಗೆ ಗೆಲವು ಬರಬೇಕು ಎಂಬ ಉದ್ದೇಶದಿಂದ ಪರಬ್ರಹ್ಮಸ್ವರೂಪಿಯಾದ ಗಣಪತಿಯನ್ನು ಭಕ್ತಿಭಾವದಿಂದ ಅರ್ಚಿಸಿದ. ಪ್ರದಕ್ಷಿಣ ನಮಸ್ಕಾರದಿಂದ ಪೂಜಿಸಿದ. ಗಣೇಶನಿಂದ ಅನುಗ್ರಹೀತನಾಗಿ ಯುದ್ಧಭೂಮಿಗೆ ಪ್ರಯಾಣ ಮಾಡಿದ. ತನ್ನ ಪ್ರಮಥ ಗಣಕ್ಕೆ ರಾಕ್ಷಸ ಸೇನೆಯ ಮೇಲೆ ಬೀಳಲು ಆಜ್ಞೆ ಮಾಡಿದ. ಶಿವಸೇನೆ, ಅಸುರಸೇನೆಗಳ ನಡುವೆ ಭಯಂಕರವಾದ ಯುದ್ಧವು ನಡೆಯಿತು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಸಮರ ಆರಂಭ ಎಂಬ ನಲವತ್ತೆರಡನೇಯ ಅಧ್ಯಾಯ ಮುಗಿದುದು*

—o—

ಶಿವನಸೈನ್ಯ ಮತ್ತು ತ್ರಿಪುರಾಸುರನ ಸೈನ್ಯಗಳ ಹಾಗೂ ಸೇನಾಪತಿಗಳ ನಡುವೆ ಮೊದಲು ಸಂಕುಲಯುದ್ಧವು ಆಗಿ ಅನಂತರ ಎರಡೂ ಪಕ್ಷಗಳ ವೀರ ವರೇಣ್ಯರ ನಡುವೆ ದ್ವಂದ್ವ ಯುದ್ಧವು ನಡೆಯಿತು. ಕೈಲಾಸಪತಿಯು ತ್ರಿಪುರಾಸುರನ ಜೊತೆಗೂ, ಷಣ್ಮುಖನು ತ್ರಿಪುರನ ಮಗನಾದ ಪ್ರಚಂಡನ ಜೊತೆಗೂ, ನಂದಿಕೇಶ್ವರನು ತ್ರಿಪುರ ಪುತ್ರನಾದ ಚಂಡನ ಜೊತೆಗೂ ದ್ವಂದ್ವ ಯುದ್ಧಮಾಡಿದರು. ಇದರಂತೆ ಪುಷ್ಪದಂತ ಭೀಮಕಾಯ, ಭುಶುಂಢಿ ಕಾಲಕೂಟ, ವೀರಭದ್ರ-ವಜ್ರದಂಷ್ಟ್ರ, ಬೃಹಸ್ಪತಿ, ಶುಕ್ರಾಚಾರ್ಯ, ಜಯಂತ ಪ್ರಚಂಡ, ಮುಂತಾದವರು ಒಬ್ಬರೊಬ್ಬರನ್ನು ಸೆಣೆಸಿ ಕಲಿತನದಿಂದ ಕಾದಾಡಿದರು.

ಪರಶಿವನ ದಯೆಯಿಂದ ಅವನ ಪಕ್ಷದ ಪ್ರಮಥ ಗಣದವರು, ದೇವತೆಗಳೂ ಬಲಿಷ್ಠರಾಗಿ ತಮ್ಮ ಎದುರಾಳಿಗಳನ್ನೆಲ್ಲ ಪರಾಕ್ರಮದಿಂದ ಹೊಡೆದು ಬಡೆದು ಓಡಿಸಿದರು. ತಮ್ಮ ಶಸ್ತ್ರಾಸ್ತ್ರಗಳ ಭೀಕರವಾದ ಪ್ರಹಾರವನ್ನು ತಾಳದೆ ಓಡುತ್ತಿರುವ ರಾಕ್ಷಸರನ್ನು, ಪ್ರಮಥ ಗಣದವರೂ, ದೇವತೆಗಳೂ ಬೆನ್ನಟ್ಟಿ ಹೋಗಿ ಹೊಡೆದು ಹಾಕಿದರು. ದೈತ್ಯರ ರುಂಡ ದಂಡಗಳನ್ನು ಕಡಿದು ಚೆಲ್ಲಿದರು. ದೈತ್ಯಸೇನೆಯ ಪರಾಜಯ ಹಾಗೂ ಪಲಾಯನವನ್ನು ಕಂಡು ಕನಲಿ ಕೆಂಡವಾದ ತ್ರಿಪುರಾಸುರನು ತಾನೇ ಏರಿಬಂದು ಮಹಾದೇವರೊಡನೆ ಶಸ್ತ್ರಯುದ್ಧವನ್ನು ಮಾಡತೊಡಗಿದನು. ಪರಶಿವನ ಮೇಲೆ ಘೋರವಾದ ವಾರುಣಾಸ್ತ್ರವನ್ನು ಪ್ರಯೋಗಿಸಿದನು. ಅದರ ಪರಿಣಾಮವಾಗಿ ಘೋರವಾದ ಮಳೆಯು ಕುಂಭದ್ರೋಣಾಕಾರದಿಂದ ಸುರಿಯತೊಡಗಿತು.

ಅದಕ್ಕೆ ಪ್ರತಿಯಾಗಿ ಮಹಾದೇವನು ವಾಯವ್ಯಾಸ್ತ್ರವನ್ನು ಅಭಿಮಂತ್ರಿಸಿ ದೈತ್ಯಸೇನೆಯ ಮೇಲೆ ಪ್ರಯೇಗಿಸಿದನು. ಅದರ ಮಹಿಮೆಯಿಂದ ಭಯಂಕರ ಬಿರುಗಾಳಿ ಎದ್ದು ನಭೋಮಂಡಲವನ್ನು ಆವರಿಸಿದ್ದ ಮೇಘಗಳೆಲ್ಲವೂ ಚಲ್ಲಾಪಿಲ್ಲಿಯಾಗಿ ಚದುರಿ ಹೋದವು. ಪ್ರಚಂಡಚಂಡಮಾರುತ ಬೀಸಿ ಅದರ ರಭಸಕ್ಕೆ ದೈತ್ಯಸೇನೆಯ ಆನೆ- ಕುದುರೆ ರಥ, ಕಾಲಾಳುಗಳು ಹಾರಿಹೋಗಿ ಪರ್ವತಗಳಿಗೆ ಅಪ್ಪಳಿಸಿ ಪುಡಿ ಪುಡಿಯಾಗಿ ಬಿದ್ದವು.

ಅದಕ್ಕೆ ಪ್ರತಿಯಾಗಿ ತ್ರಿಪುರಾಸುರನು ಸರ್ಪಾಸ್ತ್ರವನ್ನು ಬಿಟ್ಟನು. ಅದರಿಂದ ಕೋಟ್ಯಾವಧಿ ಉಗ್ರಸರ್ಪಗಳು ಹುಟ್ಟಿ ಎಲ್ಲೆಡೆಗೂ ಹರಿದಾಡಿ ವಾಯವ್ಯಾಸ್ತ್ರದ ಗಾಳಿಯನ್ನೆಲ್ಲಾ ಕುಡಿದುಬಿಟ್ಟವು. ಅಷ್ಟಕ್ಕೆ ನಿಲ್ಲದೆ ಆ ದೈತ್ಯನು ಶಿವಸೇನೆಯ ಮೇಲೆ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಮೇಘಮಂಡಲದಿಂದ ಕೆಂಡದ ಮಳೆಯೇ ಸುರಿಯತೊಡಗಿತು. ಆ ಅಗ್ನಿವೃಷ್ಟಿಯಿಂದ ಉಭಯಪಕ್ಷದ ದೈತ್ಯರೂ, ದೇವತೆಗಳೂ ಸುಟ್ಟು ಬೆಂದು ಕರಕಾಗಿ ಹೋದರು.

ಈ ಭೀಕರವಾದ ಯುದ್ಧದ ಮಧ್ಯದಲ್ಲಿ ತ್ರಿಪುರಾಸುರನ ಮಾಯೆಯಿಂದ ಒಬ್ಬ ಭೀಕರಾಕಾರದ ದೈತ್ಯ ಪುರುಷನು ಎದ್ದು ನಿಂತನು. ಅವನ ಕಾಲು ನೆಲದ ಮೇಲೆ ಇದ್ದರೆ ತಲೆ ಮುಗಿಲು ಮುಟ್ಟಿತ್ತು. ಭಯಂಕರವಾದ ಗುಹೆಯಂತಿರುವ ಅವನ ಬಾಯಿಯಲ್ಲಿ ನೂರು ಯೋಜನ ಉದ್ದವಾದ ನಾಲಿಗೆ ಅಲುಗಾಡುತ್ತಿತ್ತು. ಗಹನವಾದ ಗುಹೆಗಳಂತಿರುವ

ಅವನ ಮೂಗಿನ ಹೊರಳೆಗಳಿಂದ ಬೀಸಿಬರುವ ಶ್ವಾಸೋಚ್ಛ್ವಾಸದ ಗಾಳಿಯಿಂದ ಯುದ್ಧರಂಗದಲ್ಲಿದ್ದ ಆನೆ ಕುದುರೆ ರಥಗಳು ಕೂಡ ಹಾರಾಡಿ ಹೋದವು. ಗರಡನು ಹಾವುಗಳನ್ನು ನುಂಗುವಂತೆ ತ್ರಿಪುರಾಸುರನ ಆಗ್ನೇಯಾಸ್ತ್ರದಿಂದ ಮೂಡಿಬಂದ ಆ ದುರ್ದಾನವನು ಶಿವನ ಸೈನಿಕರನ್ನು ಗುಳುಗುಳು ನುಂಗತೊಡಗಿದನು. ಬೆಂಕಿಯ ಬಣಿವೆಯಂತಿರುವ ಆ ಅಗ್ನಿಪುತ್ರನಿಗೆ ಹೆದರಿ ಓಡಿದ ಸೈನಿಕರು ಮಹಾದೇವನ ಬೆನ್ನಿಗೆ ಬಿದ್ದು ''ಭಗವಂತ ರಕ್ಷಿಸು, ರಕ್ಷಿಸು'', ಎಂದು ಆರ್ತನಾದ ಮಾಡುತ್ತಾ ಶಿವಚರಣಗಳಿಗೆ ಶರಣು ಬಂದರು. ಆಗ ಕರುಣಾನಿಧಿಯಾದ ಪಾರ್ವತೀಪತಿಯು ತನ್ನ ಶಿವಸೇನೆಗೆ ಅಭಯವನ್ನು ನೀಡಿ ಪರ್ಜನ್ಯಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಅಗ್ನಿಕುಮಾರನಂತಿದ್ದ ಆ ದುಷ್ಟದೈತ್ಯಪುರುಷನು ನೆಲಕ್ಕೆ ಉರುಳಿಬಿದ್ದನು. ಆದರೆ ಮರುಚಣದಲ್ಲಿಯೇ ಚೇತರಿಸಿಕೊಂಡು ಎದ್ದು ಅತ್ಯಂತ ಕ್ರುದ್ಧನಾಗಿ ರೋಷ ರೊಚ್ಚುಗಳಿಂದ ಹುಚ್ಚೆದ್ದು ಪ್ರಮಥಗಣದವರನ್ನೂ, ದೇವತಾಗಣದವರನ್ನೂ, ಹರಿಹಾಯ್ದು, ತಂದು ಮುರಿದು ತಿನ್ನತೊಡಗಿದ. ಆಗ ಅವರೆಲ್ಲರೂ ದಿಕ್ಕಾಪಾಲಾಗಿ ದಿಕ್ಕೆಟ್ಟು ಓಡಿಹೋದರು. ಮಹಾದೇವನಿಗೂ ಏನೂ ಮಾಡಬೇಕು ತೋಚಲಿಲ್ಲ. ಅವನ ಸೈನಿಕರೆಲ್ಲರೂ ಓಡಿ ಹೋದುದರಿಂದ ಏಕಾಕಿಯಾಗಿ ಅಸಹಾಯಕನಾಗಿ ಏನೂ ತೋಚದೆ ಶ್ರೀಹರಿಯಾದ ನಾರಾಯಣನ ಸಮೀಪಕ್ಕೆ ಹೋಗಿ ದೈತ್ಯರ ದಾಳಿಯನ್ನು ತಪ್ಪಿಸಿಕೊಂಡ. ಷಣ್ಮುಖ ಮೊದಲಾದ ವೀರರೆಲ್ಲರೂ ಆ ಕೈಲಾಸಪತಿಯನ್ನು ಅನುಸರಿಸಿ ತಾವು ನಾರಾಯಣನನ್ನೇ ಶರಣುಹೋದರು.

ಹೀಗೆ ಶಿವನೂ, ದೇವಸೇನಾಧಿಪತಿಗಳು, ಪ್ರಮಥಗಣಾಧಿಪತಿಗಳೂ ಹೋದ ಬಳಿಕ ಉದ್ದಾಮರಾದ ರಾಕ್ಷಸರನ್ನು ಪ್ರತಿಭಟಿಸುವ ಧೈರ್ಯಶಾಲಿಗಳೂ, ಸಮರ್ಥರೂ ಯಾರೂ ಇಲ್ಲದಂತಾಯಿತು. ಈ ಸುಸಂಧಿಯನ್ನು ಉಪಯೋಗಿಸಿಕೊಂಡು ಆ ತ್ರಿಪುರಾಸುರನು ಕೈಲಾಸ ಶಿಖರದಲ್ಲಿ ಒಂಟಿಯಾಗಿ ಸಿಕ್ಕಿಬಿದ್ದಿರುವ ಪಾರ್ವತೀದೇವಿಯನ್ನು ಅಪಹರಿಸುವ ದುರ್ವಿಚಾರವನ್ನು ಮಾಡಿದನು.

ಅವನು ಕೂಡಲೇ ರಣಕ್ಷೇತ್ರ ಬಿಟ್ಟು ಕೈಲಾಸಪರ್ವತಕ್ಕೆ ಹೋಗಿ ಪಾರ್ವತಿಯನ್ನು ಹುಡುಕಿದನು. ಅಲ್ಲಿ ಅವಳನ್ನು ಕಾಣದೆ ಮಂದರ ಪರ್ವತಕ್ಕೆ ಓಡಿದನು. ತನ್ನ ಕಡೆ ದುರಾಸೆಯಿಂದ ಓಡಿಬರುವ ದೈತ್ಯಾಧಮನನ್ನು ಕಂಡು ಗಿರಿಜಾಮಾತೆಯು ಭಯಭ್ರಾಂತಳಾಗಿ ಬಿರುಗಾಳಿಗೆ ಸಿಕ್ಕಿದ ಎಳೆಯ ಬಾಳೆಯ ಬಳ್ಳಿಯಂತೆ ನಡುಗಿ ಹೋದಳು. ಮಗಳ ಈ ದುರವಸ್ಥೆಯನ್ನು ಕಂಡು ಕರಗಿಹೋದ ಹಿಮಮಂತನು ತನ್ನ ಒಂದು ದುರ್ಗಮವಾದ ಗುಹೆಗೆ ಅವಳನ್ನು ಕರೆದೊಯ್ದನು. ಪಾಪಿಯಾದ ತ್ರಿಪುರಾಸುರನು ಮಂದರಪರ್ವತವನ್ನು ಪಾರ್ವತಿಗಾಗಿ ಶೋಧಿಸಿದ. ಅವಳು ಎಲ್ಲಿಯೂ ಕಾಣದಿರಲು ಹಿಮಾಲಯ ಪರ್ವತಕ್ಕೆ ಬಂದ. ಕೈಲಾಸ ಪರ್ವತದ ತುಂಬ ಗಿರಿ ಕಂದರ ಗುಹಾ ಗಹನ ವನಾಂತರಗಳಲ್ಲಿ ಹುಡುಕಾಡಿದ. ಪಾರ್ವತಿಯನ್ನು ಸೂಕ್ಷ್ಮವಾಗಿ ಆ ಶ್ರೀ ಶೈಲದ ಸಂದಿ ಮೂಲೆಗಳಲ್ಲಿ ಹೊಕ್ಕು ಹುಡುಕುವಾಗ ಅವನಿಗೆ ಚಿಂತಾಮಣಿ ವಿನಾಯಕ ಮೂರ್ತಿಯು ಗೋಚರಿಸಿತು. ಸಾವಿರ ಸಾವಿರ ಸೂರ್ಯರ ಕಾಂತಿಯಿಂದ ಕಂಗೊಳಿಸುವ ಆ ಸುಂದರ ಗಣೇಶಮೂರ್ತಿಯನ್ನು ಕಂಡು ''ಕಲಾಧರನು ಅಪೇಕ್ಷಿಸಿದ ಮೂರ್ತಿಯು ಇದೆ'' ಎಂದು ಅವನಿಗೆ ಹೊಳೆದು ಹೋಯಿತು. ಕೂಡಲೇ ಅವನು ಪಾರ್ವತಿಯ ವಿಚಾರವನ್ನು ಬಿಟ್ಟು

ಆ ಚಿಂತಾಮಣಿ ವಿನಾಯಕಮೂರ್ತಿಯನ್ನು ತೆಗೆದುಕೊಂಡು ತನ್ನ ಸ್ಥಳಕ್ಕೆ ತೆರಳಿದನು. ರಾಕ್ಷಸ ಪರಿವಾರದವರು ತಮ್ಮ ಪ್ರಭು ಕಾರ್ಯಸಾಧಿಸಿ ವಿಜಯಶಾಲಿ ಆಗಿ ಬಂದುದನ್ನು ಕಂಡು ಆನಂದಭರಿತರಾಗಿ ಜಯಘೋಷವನ್ನು ಮಾಡತೊಡಗಿದರು. ಅನಂತರ ವಿಜಯೋನ್ಮತ್ತನಾದ ತ್ರಿಪುರಾಸುರನು ಆ ಗಣೇಶನಮೂರ್ತಿಯನ್ನು ಕೈಯಲ್ಲಿ ಎತ್ತಿಕೊಂಡು ಪಾತಾಳಲೋಕದ ಕಡೆ ಹೊರಟನು.

ಮೂರ್ತಿಯ ಲಾಭದಿಂದ ಅತಿಶಯ ಸಂತೋಷವಾಗಿ ಕುಣಿದು ಕುಪ್ಪಳಿಸುತ್ತಾ ಮದದಿಂದ ಮೈಮರೆತು ತೂಗಾಡುತ್ತಾ ಹೋಗುತ್ತಲಿರುವಾಗ ಆ ರಾಕ್ಷಸನ ಕೈಯಲ್ಲಿದ್ದ ಚಿಂತಾಮಣಿ ಮೂರ್ತಿಯು ಇದ್ದಕ್ಕಿದ್ದಂತೆ ಅದೃಶ್ಯವಾಯಿತು. ಮೂರ್ತಿಯು ಒಮ್ಮೆಲೆ ಮಾಯವಾದುದನ್ನು ಕಂಡು ಎಲ್ಲರಿಗೂ ಆಶ್ಚರ್ಯಉಂಟಾಯಿತು.

ಇದರಿಂದ ತ್ರಿಪುರಾಸುರನ ಮನಸ್ಸಿಗೆ ಆಘಾತವಾಯಿತು. ಮಂಗಲಕರವಾದ ವಿನಾಯಕಮೂರ್ತಿಯು ಒಮ್ಮೆಲೆ ಕಾಣೆಯಾದದ್ದು ತನಗೊಂದು ಅಪಶಕುನ ಎಂದು ಆ ದೈತ್ಯನು ಭಾವಿಸಿದನು. ''ಕಲಾಧರನಿಗೆ ಕೊಟ್ಟ ವಾಗ್ದಾನವನ್ನು ನಾನು ಹೇಗೆ ನೇರವೇರಿಸಲಿ.'' ಎಂಬ ಗಹನತರವಾದ ಚಿಂತೆಯಿಂದ ಆಕ್ರಾಂತನಾಗಿ ಯಾರೊಡನೆಯೂ ಮಾತನಾಡದೇ ಮರಳಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು ಆ ತ್ರಿಪುರಾಸುರ.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಯುದ್ಧವರ್ಣನೆ ಎಂಬ ನಲವತ್ತಮೂರನೆಯ ಅಧ್ಯಾಯ ಮುಗಿದುದು*



## ಶಿವನ ತಪೋವರ್ಣನೆ

**ಅಧ್ಯಾಯ - ೪೪**

ತ್ರಿಪುರಾಸುರನಿಂದ ಪರಾಜಯ ಹೊಂದಿದ ಪರಶಿವನಿಗೆ ಮುಂದೆ ಏನು ಮಾಡಬೇಕು ಎಂಬುದೇ ತಿಳಿಯದಂತಾಯಿತು. ಹೀಗೆ ಗಿರಿಜಾವಲ್ಲಭನು ಚಿಂತಾಕ್ರಾಂತನಾಗಿ ಕುಳಿತುಕೊಂಡಾಗ ಅಲ್ಲಿಗೆ ನಾರದರು ಬಂದರು. ಅವರು ಪರಮೇಶ್ವರನ ದುಗುಡ ದುಮ್ಮಾನಗಳನ್ನು ತಿಳಿದು ''ಚಂದ್ರಶೇಖರ, ನೀನು ತ್ರಿಪುರಾಸುರನೊಡನೆ ಯುದ್ಧಮಾಡುವ ಮುನ್ನ ಗಣಪತಿಯನ್ನು ಚೆನ್ನಾಗಿ ಪೂಜಿಸಲಿಲ್ಲ. ಸಾಮಾನ್ಯಪೂಜೆಯಿಂದ ಆ ದೇವದೇವನು ಪ್ರಸನ್ನನಾಗುವದಿಲ್ಲ. ಆದುದರಿಂದ ನೀನು ಆತ್ಯಂತಿಕನಾದ ಭಕ್ತಿಯುಕ್ತನಾಗಿ ಏಕಾಗ್ರಮನಸ್ಸಿನಿಂದ ಆ ಗಣನಾಯಕನನ್ನು ಪೂಜಿಸು'' ಎಂದು ಹೇಳಿದರು.

ಆಗ ಆ ಪಾರ್ವತೀಪತಿಯು ''ನಾರದ, ನೀನು ಹೇಳಿದ್ದು ನಿಜ. ಯುದ್ಧದ ಗಡಿಬಿಡಿಯಲ್ಲಿ ನಾನು ಗಣೇಶಮಂತ್ರವನ್ನು ಶ್ರದ್ಧಾತಿಶಯದಿಂದ ಜಪಿಸಲಿಲ್ಲ. ಈ ಮೊದಲೇ ಗಣನಾಯಕನು ನನಗೆ ಆರು ಬೀಜಾಕ್ಷರ ಮತ್ತು ಒಂದು ಬೀಜಾಕ್ಷರದಿಂದ ಕೂಡಿದ ಎರಡು ಗಣಪತಿ ಮಂತ್ರಗಳನ್ನು ಹೇಳಿದ್ದ. ಸಮರದ ಸಂಭ್ರಮದಲ್ಲಿ ನಾನು ಅವೆರಡೂ ಗಣಪತಿ ಮಂತ್ರಗಳ ಜಪಮಾಡುವದನ್ನು ಮರೆತು ಬಿಟ್ಟೆ. ಅದಕ್ಕಾಗಿಯೇ ನನಗೆ ಸಮರಾಂಗಣದಲ್ಲಿ ಸೋಲು ಉಂಟಾಯಿತು. ಇನ್ನು ನಾನು ಆ ಗಣೇಶ ಮಂತ್ರವನ್ನೇ ಜಪಿಸುತ್ತೇನೆ'' ಎಂದು ಹೇಳಿದನು.

ಅನಂತರ ಆ ಕೈಲಾಸಪತಿಯು ದಂಡಕಾರಣ್ಯದ ಒಂದು ಗಹನವಾದ ಏಕಾಂತಸ್ಥಳಕ್ಕೆ ಹೋಗಿ ಗಣಪತಿ ಮಂತ್ರವನ್ನು ಜಪಿಸುತ್ತ ಉಗ್ರವಾದ ತಪಸ್ಸನ್ನು ಮಾಡಿದನು.

ಉಗ್ರತರವಾದ ತಪೋನುಷ್ಠಾನದಲ್ಲಿ ತೊಡಗಿದ ಶಂಕರನ ಮುಖದಿಂದಲೇ ಐದು ಮುಖದ ಹತ್ತು ಬಾಹುಗಳ ಗಣೇಶನು ಪ್ರಾದುರ್ಭೂತನಾದನು. ಹಣೆಯಲ್ಲಿ ಚಂದ್ರ, ಕೊರಳನ್ನು ರುಂಡಮಾಲೆ, ಕಂಠದಲ್ಲಿ ಸರ್ಪಹಾರಗಳು ಶೋಭಿಸುತ್ತಿದ್ದವು. ಚಂದ್ರಸೂರ್ಯರಗಿಂತ ಮಿಗಿಲಾದ ದಿವ್ಯತೇಜಸ್ಸಿನಿಂದ ಗಣಾಧ್ಯಕ್ಷನು ಒಪ್ಪುತ್ತಿದ್ದನು. ಅವನು ಮಹಾದೇವನನ್ನು ಕುರಿತು ''ಚಂದ್ರಚೂಡ, ನಿನ್ನ ತಪಸ್ಸಿಗೆ ನಾನು ಸುಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರಗಳನ್ನು ಕೇಳಿಕೋ. ಜಗತ್ತಿನ ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡುವ ನಾನೇ ಪರಬ್ರಹ್ಮ. ನೀನು ಉಗ್ರನಷ್ಟೇ ! ನೀನು ಮಾಡಿದ ಉಗ್ರತಪಸ್ಸಿನಿಂದ ಪರಿತುಷ್ಟನಾಗಿ ನಾನು ನಿನ್ನ ಎದುರು ನಿನ್ನಮನೋರಥಗಳನ್ನು ಪೂರ್ಣಮಾಡಲಿಕ್ಕಾಗಿ ಪ್ರಾದುರ್ಭೂತನಾಗಿದ್ದೇನೆ. ನೀನು ಬಯಸಿದ್ದನ್ನು ನೀಡುವೆನು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಶಿವನ ತಪೋವರ್ಣನೆ ಎಂಬ ನಲವತ್ತು ನಾಲ್ಕನೇ ಅಧ್ಯಾಯ ಮುಗಿದುದು*

—o—

## ವರದಾನ

## ಅಧ್ಯಾಯ - ೪೫

ತನ್ನ ತಪಸ್ಸಿಗೆ ಪ್ರೀತನಾಗಿ ಪ್ರತ್ಯಕ್ಷಗೋಚರನಾದ ಆ ಗಣೇಶನನ್ನು ಮಹಾದೇವನು ಭಕ್ತಿಯಿಂದ ಸ್ತೋತ್ರ ಮಾಡಿದನು. ''ಪ್ರಭೋ ಗಣಾಧ್ಯಕ್ಷ, ನಿನ್ನ ಪರಮಮಂಗಳಕರವಾದ ದಿವ್ಯವಿಗ್ರಹವನ್ನು ಕಂಡು ನಾನು ಧನ್ಯನಾದೆ. ಬ್ರಹ್ಮಾದಿದೇವತೆಗಳು ನಿನ್ನಿಂದಲೇ ಪ್ರಸೂತರಾಗಿದ್ದಾರೆ. ತ್ರಿಗುಣಾತ್ಮಕನಾದ ನೀನು ಸತ್ವಗುಣದಿಂದ ಸೃಷ್ಟಿಯನ್ನೂ ರಜೋಗುಣದಿಂದ ಸಂರಕ್ಷಣೆಯನ್ನೂ ತಮೋಗುಣದಿಂದ ಸಂಹಾರವನ್ನೂ ಮಾಡುವೆ. ನಿನಗೆ ನನ್ನ ನಮಸ್ಕಾರ. ನಾನು ತಪಸ್ಸು ಮಾಡಿದ ಈ ಸ್ಥಳ ಮಣಿಪುರ ಎಂದು ಪ್ರಸಿದ್ಧವಾಗಲಿ'' ರುದ್ರದೇವರು ಹೀಗೆ ಗಣೇಶನನ್ನು ಸ್ತುತಿಸಿದ ಬಳಿಕ ಬ್ರಹ್ಮ ದೇವರು ಅಲ್ಲಿ ಪ್ರಾದುರ್ಭೂತನಾದ ಪರಮಾತ್ಮ ತತ್ವಕ್ಕೆ ಗಣೇಶ ಎಂದೇ ನಾಮಕರಣ ಮಾಡಿದರು. ಮಹಾದೇವರು ಆ ಗಣೇಶನಿಗೆ ಒಂದು ಸುಂದರವಾದ ಮಂದಿರವನ್ನು ನಿರ್ಮಿಸಿ ಅಲ್ಲಿ ಪ್ರತಿಷ್ಠೆಗೈದರು. ಮತ್ತು ಆ ಗಣೇಶನಿಗೆ ವರಕೇಳಿಕೊಂಡರು. ''ಗಣೇಶ ಪ್ರಭುವೆ, ನಾನು ತ್ರಿಪುರಾಸುರನ ಜೊತೆಗೆ ಯುದ್ಧಕ್ಕೆ ಹೊರಡುವ ಮುನ್ನ ನಿನ್ನನ್ನು ಮನಃಪೂರ್ವಕವಾಗಿ ಪೂಜಿಸಲಿಲ್ಲ. ಅದಕ್ಕಾಗಿಯೇ ನನಗೆ ಪರಾಜಯ ಪ್ರಾಪ್ತವಾಯಿತು. ಆ ತಪ್ಪಿಗಾಗಿ ಮತ್ತೆ ನಿನ್ನನ್ನು ಕುರಿತು ಸುದೀರ್ಘ ತಪಸ್ಸನ್ನು ಮಾಡಿ ನಿನ್ನನ್ನು ಪ್ರತ್ಯಕ್ಷೀಕರಿಸಿಕೊಂಡಿದ್ದೇನೆ. ನಿನ್ನನ್ನು ಕಾರ್ಯಾರಂಭದಲ್ಲಿ ಪೂಜಿಸಿದವರ ಕಾರ್ಯಗಳೆಲ್ಲವೂ ನಿರ್ವಿಘ್ನವಾಗಿ ನೆರವೇರಲಿ. ಪೂಜಿಸದವರ ಕಾರ್ಯಗಳು ನೆರವೇರದೆ ಹೋಗಲಿ. ಸಂಗ್ರಾಮಾರಂಭದಲ್ಲಿ ನಿನ್ನನ್ನು ಮನಸ್ಸುಗೊಟ್ಟು ಪೂಜಿಸದ ನನ್ನ ಅಪರಾಧವನ್ನು ಕ್ಷಮಿಸು. ಯುದ್ಧದಲ್ಲಿ ಜಯವು ನನಗೆ ದೊರಕುವಂತೆ ಮಾಡು.''

ಮಹೇಶನ ಬೇಡಿಕೆಗೆ ಗಣೇಶನು 'ತಥಾಸ್ತು' ಎಂದು ಹೇಳಿ ''ಪರಮೇಶ್ವರ, ನೀನು ತ್ರಿಪುರಾಸುರನ ಜೊತೆಗೆ ಮತ್ತೆ ಯುದ್ಧ ಹೂಡು. ನನ್ನ ಬೀಜಾಕ್ಷರದಿಂದ ಅಭಿಮಂತ್ರಣ ಮಾಡಿ ಬಾಣ ಬಿಡು. ಆ ಬೀಜಾಕ್ಷರದಲ್ಲಿ ನಾನು ಅಂತರ್ಗತನಾಗಿ ಇದ್ದುಕೊಂಡು ಆ ದೈತ್ಯನನ್ನು ಸಂಹರಿಸುತ್ತೇನೆ. ಮತ್ತು ನಿನಗೆ ನನ್ನ ಗಣೇಶ ಸಹಸ್ರನಾಮವನ್ನು ಹೇಳುತ್ತೇನೆ.

ಆ ಚಿಂತಾಮಣಿ ವಿನಾಯಕಮೂರ್ತಿಯನ್ನು ತೆಗೆದುಕೊಂಡು ತನ್ನ ಸ್ಥಳಕ್ಕೆ ತೆರಳಿದನು. ರಾಕ್ಷಸ ಪರಿವಾರದವರು ತಮ್ಮ ಪ್ರಭು ಕಾರ್ಯಸಾಧಿಸಿ ವಿಜಯಶಾಲಿ ಆಗಿ ಬಂದುದನ್ನು ಕಂಡು ಆನಂದಭರಿತರಾಗಿ ಜಯಘೋಷವನ್ನು ಮಾಡತೊಡಗಿದರು. ಅನಂತರ ವಿಜಯೋನ್ಮತ್ತನಾದ ತ್ರಿಪುರಾಸುರನು ಆ ಗಣೇಶನಮೂರ್ತಿಯನ್ನು ಕೈಯಲ್ಲಿ ಎತ್ತಿಕೊಂಡು ಪಾತಾಳಲೋಕದ ಕಡೆ ಹೊರಟನು.

ಮೂರ್ತಿಯ ಲಾಭದಿಂದ ಅತಿಶಯ ಸಂತೋಷವಾಗಿ ಕುಣಿದು ಕುಪ್ಪಳಿಸುತ್ತಾ ಮದದಿಂದ ಮೈಮರೆತು ತೂಗಾಡುತ್ತಾ ಹೋಗುತ್ತಲಿರುವಾಗ ಆ ರಾಕ್ಷಸನ ಕೈಯಲ್ಲಿದ್ದ ಚಿಂತಾಮಣಿ ಮೂರ್ತಿಯು ಇದ್ದಕ್ಕಿದ್ದಂತೆ ಅದೃಶ್ಯವಾಯಿತು. ಮೂರ್ತಿಯು ಒಮ್ಮೆಲೆ ಮಾಯವಾದುದನ್ನು ಕಂಡು ಎಲ್ಲರಿಗೂ ಆಶ್ಚರ್ಯಉಂಟಾಯಿತು.

ಇದರಿಂದ ತ್ರಿಪುರಾಸುರನ ಮನಸ್ಸಿಗೆ ಆಘಾತವಾಯಿತು. ಮಂಗಲಕರವಾದ ವಿನಾಯಕಮೂರ್ತಿಯು ಒಮ್ಮೆಲೆ ಕಾಣೆಯಾದದ್ದು ತನಗೊಂದು ಅಪಶಕುನ ಎಂದು ಆ ದೈತ್ಯನು ಭಾವಿಸಿದನು. ''ಕಲಾಧರನಿಗೆ ಕೊಟ್ಟ ವಾಗ್ದಾನವನ್ನು ನಾನು ಹೇಗೆ ನೇರವೇರಿಸಲಿ.'' ಎಂಬ ಗಹನತರವಾದ ಚಿಂತೆಯಿಂದ ಆಕ್ರಾಂತನಾಗಿ ಯಾರೊಡನೆಯೂ ಮಾತನಾಡದೇ ಮರಳಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು ಆ ತ್ರಿಪುರಾಸುರ.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಯುದ್ಧವರ್ಣನೆ ಎಂಬ ನಲವತ್ತಮೂರನೆಯ ಅಧ್ಯಾಯ ಮುಗಿದುದು*



## ಶಿವನ ತಪೋವರ್ಣನೆ

## ಅಧ್ಯಾಯ - ೪೪

ತ್ರಿಪುರಾಸುರನಿಂದ ಪರಾಜಯ ಹೊಂದಿದ ಪರಶಿವನಿಗೆ ಮುಂದೆ ಏನು ಮಾಡಬೇಕು ಎಂಬುದೇ ತಿಳಿಯದಂತಾಯಿತು. ಹೀಗೆ ಗಿರಿಜಾವಲ್ಲಭನು ಚಿಂತಾಕ್ರಾಂತನಾಗಿ ಕುಳಿತುಕೊಂಡಾಗ ಅಲ್ಲಿಗೆ ನಾರದರು ಬಂದರು. ಅವರು ಪರಮೇಶ್ವರನ ದುಗುಡ ದುಮ್ಮಾನಗಳನ್ನು ತಿಳಿದು ''ಚಂದ್ರಶೇಖರ, ನೀನು ತ್ರಿಪುರಾಸುರನೊಡನೆ ಯುದ್ಧಮಾಡುವ ಮುನ್ನ ಗಣಪತಿಯನ್ನು ಚೆನ್ನಾಗಿ ಪೂಜಿಸಲಿಲ್ಲ. ಸಾಮಾನ್ಯಪೂಜೆಯಿಂದ ಆ ದೇವದೇವನು ಪ್ರಸನ್ನನಾಗುವದಿಲ್ಲ. ಆದುದರಿಂದ ನೀನು ಆತ್ಯಂತಿಕನಾದ ಭಕ್ತಿಯುಕ್ತನಾಗಿ ಏಕಾಗ್ರಮನಸ್ಸಿನಿಂದ ಆ ಗಣನಾಯಕನನ್ನು ಪೂಜಿಸು'' ಎಂದು ಹೇಳಿದರು.

ಆಗ ಆ ಪಾರ್ವತೀಪತಿಯು ''ನಾರದ, ನೀನು ಹೇಳಿದ್ದು ನಿಜ. ಯುದ್ಧದ ಗಡಿಬಿಡಿಯಲ್ಲಿ ನಾನು ಗಣೇಶಮಂತ್ರವನ್ನು ಶ್ರದ್ಧಾತಿಶಯದಿಂದ ಜಪಿಸಲಿಲ್ಲ. ಈ ಮೊದಲೇ ಗಣನಾಯಕನು ನನಗೆ ಆರು ಬೀಜಾಕ್ಷರ ಮತ್ತು ಒಂದು ಬೀಜಾಕ್ಷರದಿಂದ ಕೂಡಿದ ಎರಡು ಗಣಪತಿ ಮಂತ್ರಗಳನ್ನು ಹೇಳಿದ್ದ. ಸಮರದ ಸಂಭ್ರಮದಲ್ಲಿ ನಾನು ಅವೆರಡೂ ಗಣಪತಿ ಮಂತ್ರಗಳ ಜಪಮಾಡುವವದನ್ನು ಮರೆತು ಬಿಟ್ಟೆ. ಅದಕ್ಕಾಗಿಯೇ ನನಗೆ ಸಮರಾಂಗಣದಲ್ಲಿ ಸೋಲು ಉಂಟಾಯಿತು. ಇನ್ನು ನಾನು ಆ ಗಣೇಶ ಮಂತ್ರವನ್ನೇ ಜಪಿಸುತ್ತೇನೆ'' ಎಂದು ಹೇಳಿದನು.

ಅನಂತರ ಆ ಕೈಲಾಸಪತಿಯು ದಂಡಕಾರಣ್ಯದ ಒಂದು ಗಹನವಾದ ಏಕಾಂತಸ್ಥಳಕ್ಕೆ ಹೋಗಿ ಗಣಪತಿ ಮಂತ್ರವನ್ನು ಜಪಿಸುತ್ತ ಉಗ್ರವಾದ ತಪಸ್ಸನ್ನು ಮಾಡಿದನು.

ಉಗ್ರತರವಾದ ತಪೋನುಷ್ಠಾನದಲ್ಲಿ ತೊಡಗಿದ ಶಂಕರನ ಮುಖದಿಂದಲೇ ಐದು ಮುಖದ ಹತ್ತು ಬಾಹುಗಳ ಗಣೇಶನು ಪ್ರಾದುರ್ಭೂತನಾದನು. ಹಣೆಯಲ್ಲಿ ಚಂದ್ರ, ಕೊರಳನ್ನು ರುಂಡಮಾಲೆ, ಕಂಠದಲ್ಲಿ ಸರ್ಪಹಾರಗಳು ಶೋಭಿಸುತ್ತಿದ್ದವು. ಚಂದ್ರಸೂರ್ಯರಗಿಂತ ಮಿಗಿಲಾದ ದಿವ್ಯತೇಜಸ್ಸಿನಿಂದ ಗಣಾಧ್ಯಕ್ಷನು ಒಪ್ಪುತ್ತಿದ್ದನು. ಅವನು ಮಹಾದೇವನನ್ನು ಕುರಿತು "ಚಂದ್ರಚೂಡ, ನಿನ್ನ ತಪಸ್ಸಿಗೆ ನಾನು ಸುಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರಗಳನ್ನು ಕೇಳಿಕೋ. ಜಗತ್ತಿನ ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡುವ ನಾನೇ ಪರಬ್ರಹ್ಮ. ನೀನು ಉಗ್ರನಷ್ಟೇ ! ನೀನು ಮಾಡಿದ ಉಗ್ರತಪಸ್ಸಿನಿಂದ ಪರಿತುಷ್ಟನಾಗಿ ನಾನು ನಿನ್ನ ಎದುರು ನಿನ್ನಮನೋರಥಗಳನ್ನು ಪೂರ್ಣಮಾಡಲಿಕ್ಕಾಗಿ ಪ್ರಾದುರ್ಭೂತನಾಗಿದ್ದೇನೆ. ನೀನು ಬಯಸಿದ್ದನ್ನು ನೀಡುವೆನು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಶಿವನ ತಪೋವರ್ಣನೆ ಎಂಬ ನಲವತ್ತು ನಾಲ್ಕನೇ ಅಧ್ಯಾಯ ಮುಗಿದುದು*



## ವರದಾನ

**ಅಧ್ಯಾಯ - ೪೫**

ತನ್ನ ತಪಸ್ಸಿಗೆ ಪ್ರೀತನಾಗಿ ಪ್ರತ್ಯಕ್ಷಗೋಚರನಾದ ಆ ಗಣೇಶನನ್ನು ಮಹಾದೇವನು ಭಕ್ತಿಯಿಂದ ಸ್ತೋತ್ರ ಮಾಡಿದನು. "ಪ್ರಭೋ ಗಣಾಧ್ಯಕ್ಷ, ನಿನ್ನ ಪರಮಮಂಗಳಕರವಾದ ದಿವ್ಯವಿಗ್ರಹವನ್ನು ಕಂಡು ನಾನು ಧನ್ಯನಾದೆ. ಬ್ರಹ್ಮಾದಿದೇವತೆಗಳು ನಿನ್ನಿಂದಲೇ ಪ್ರಸೂತರಾಗಿದ್ದಾರೆ. ತ್ರಿಗುಣಾತ್ಮಕನಾದ ನೀನು ಸತ್ವಗುಣದಿಂದ ಸೃಷ್ಟಿಯನ್ನೂ ರಜೋಗುಣದಿಂದ ಸಂರಕ್ಷಣೆಯನ್ನೂ ತಮೋಗುಣದಿಂದ ಸಂಹಾರವನ್ನೂ ಮಾಡುವೆ. ನಿನಗೆ ನನ್ನ ನಮಸ್ಕಾರ. ನಾನು ತಪಸ್ಸು ಮಾಡಿದ ಈ ಸ್ಥಳ ಮಣಿಪುರ ಎಂದು ಪ್ರಸಿದ್ಧವಾಗಲಿ" ರುದ್ರದೇವರು ಹೀಗೆ ಗಣೇಶನನ್ನು ಸ್ತುತಿಸಿದ ಬಳಿಕ ಬ್ರಹ್ಮ ದೇವರು ಅಲ್ಲಿ ಪ್ರಾದುರ್ಭೂತನಾದ ಪರಮಾತ್ಮ ತತ್ವಕ್ಕೆ ಗಣೇಶ ಎಂದೇ ನಾಮಕರಣ ಮಾಡಿದರು. ಮಹಾದೇವರು ಆ ಗಣೇಶನಿಗೆ ಒಂದು ಸುಂದರವಾದ ಮಂದಿರವನ್ನು ನಿರ್ಮಿಸಿ ಅಲ್ಲಿ ಪ್ರತಿಷ್ಠೆಗೈದರು. ಮತ್ತು ಆ ಗಣೇಶನಿಗೆ ವರಕೇಳಿಕೊಂಡರು. "ಗಣೇಶ ಪ್ರಭುವೆ, ನಾನು ತ್ರಿಪುರಾಸುರನ ಜೊತೆಗೆ ಯುದ್ಧಕ್ಕೆ ಹೊರಡುವ ಮುನ್ನ ನಿನ್ನನ್ನು ಮನಃಪೂರ್ವಕವಾಗಿ ಪೂಜಿಸಲಿಲ್ಲ. ಅದಕ್ಕಾಗಿಯೇ ನನಗೆ ಪರಾಜಯ ಪ್ರಾಪ್ತವಾಯಿತು. ಆ ತಪ್ಪಿಗಾಗಿ ಮತ್ತೆ ನಿನ್ನನ್ನು ಕುರಿತು ಸುದೀರ್ಘ ತಪಸ್ಸನ್ನು ಮಾಡಿ ನಿನ್ನನ್ನು ಪ್ರತ್ಯಕ್ಷೀಕರಿಸಿಕೊಂಡಿದ್ದೇನೆ. ನಿನ್ನನ್ನು ಕಾರ್ಯಾರಂಭದಲ್ಲಿ ಪೂಜಿಸಿದವರ ಕಾರ್ಯಗಳೆಲ್ಲವೂ ನಿರ್ವಿಘ್ನವಾಗಿ ನೆರವೇರಲಿ. ಪೂಜಿಸದವರ ಕಾರ್ಯಗಳು ನೆರವೇರದೆ ಹೋಗಲಿ. ಸಂಗ್ರಾಮಾರಂಭದಲ್ಲಿ ನಿನ್ನನ್ನು ಮನಸ್ಸುಗೊಟ್ಟು ಪೂಜಿಸದ ನನ್ನ ಅಪರಾಧವನ್ನು ಕ್ಷಮಿಸು. ಯುದ್ಧದಲ್ಲಿ ಜಯವು ನನಗೆ ದೊರಕುವಂತೆ ಮಾಡು."

ಮಹೇಶನ ಬೇಡಿಕೆಗೆ ಗಣೇಶನು 'ತಥಾಸ್ತು' ಎಂದು ಹೇಳಿ "ಪರಮೇಶ್ವರ, ನೀನು ತ್ರಿಪುರಾಸುರನ ಜೊತೆಗೆ ಮತ್ತೆ ಯುದ್ಧ ಹೂಡು. ನನ್ನ ಬೀಜಾಕ್ಷರದಿಂದ ಅಭಿಮಂತ್ರಣ ಮಾಡಿ ಬಾಣ ಬಿಡು. ಆ ಬೀಜಾಕ್ಷರದಲ್ಲಿ ನಾನು ಅಂತರ್ಗತನಾಗಿ ಇದ್ದುಕೊಂಡು ಆ ದೈತ್ಯನನ್ನು ಸಂಹರಿಸುತ್ತೇನೆ. ಮತ್ತು ನಿನಗೆ ನನ್ನ ಗಣೇಶ ಸಹಸ್ರನಾಮವನ್ನು ಹೇಳುತ್ತೇನೆ.

ಈ ಸಹಸ್ರನಾಮಸ್ತೋತ್ರವನ್ನು ಪಠಿಸುತ್ತ ನೀನು ಯುದ್ಧ ಮಾಡಿದರೆ ಎದುರಾಳಿಗಳಾದ ರಾಕ್ಷಸರನ್ನೆಲ್ಲ ನಾನು ಬೇಗನೆ ಸಂಹರಿಸುತ್ತೇನೆ. ಈ ಸ್ತೋತ್ರವನ್ನು ಮೂರು ಸಂಧ್ಯಾಕಾಲದಲ್ಲಿ ಯಾರು ಪಠಿಸುವರೋ ಅವರ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವವು.

ಆ ಕಾಲದಲ್ಲಿ ಅಲ್ಲಿಗೆ ಎಲ್ಲ ದೇವತೆಗಳೂ ಬಂದಿದ್ದರು. ಅವರೆಲ್ಲರಿಗೂ ಗಣಾಧೀಶನು ಮಹಾರುದ್ರದೇವರಿಗೆ ತ್ರಿಪುರಾಸುರಸಂಹಾರದ ಆಶ್ವಾಸನೆ ಕೊಟ್ಟಿದ್ದನ್ನು ಕೇಳಿ ಪರಮಸಂತೋಷವಾಯಿತು. ಅವರೆಲ್ಲರೂ ಗಣಪತಿಯನ್ನು ವಂದಿಸಿ ಅಭಿನಂದಿಸಿದರು. ಅನಂತರ ಗಣಾಧ್ಯಕ್ಷನು ಅದೃಶ್ಯನಾದನು. ಬಳಿಕ ದೇವತೆಗಳು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಮಹಾದೇವರು ತನ್ನ ಪ್ರಮಥಗಣದೊಂದಿಗೆ ಕೈಲಾಸಕ್ಕೆ ಮರಳಿದನು. ಅಷ್ಟರಲ್ಲಿ ಹಿಮವಂತನು ಗೌರಿಯನ್ನು ಕರೆದುಕೊಂಡು ಅಲ್ಲಿಗೆ ಬಂದಿದ್ದನು. ಶಿವನು ಭವಾನಿಗೆ ನಡೆದ ಸಂಗತಿಯನ್ನೆಲ್ಲ ತಿಳಿಸಿದನು. ತನ್ನ ಮೇಲೆ ಗಣಪತಿಯು ಮಾಡಿದ ವಿಶೇಷಾನುಗ್ರಹವನ್ನು ಹೇಳಿದನು. ಅದನ್ನು ಕೇಳಿ ಗಿರಿಜೆಗೆ ಪರಮಸಂತೋಷವಾಯಿತು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ವರದಾನ ಎಂಬ ನಲವತ್ತೈದನೇ ಅಧ್ಯಾಯ ಮುಗಿದುದು*

—o—

## ಗಣೇಶ ಸಹ್ರನಾಮ ಕಥನ — ಅಧ್ಯಾಯ - ೪೬

ಮಹಾಗಣಪತಿಯು ಮಹಾದೇವನಿಗೆ ಉಪದೇಶಿಸಿದ ಸ್ತೋತ್ರವು ಗಣೇಶಸಹಸ್ರನಾಮ ಸ್ತೋತ್ರ ಎಂದು ಪ್ರಸಿದ್ಧವಾಗಿದೆ. ಇದಕ್ಕೆ ಗಣೇಶ ಸಹಸ್ರನಾಮ ಮಾಲಾಮಂತ್ರ ಎನ್ನುವರು. ಇದಕ್ಕೆ ''ಗಣೇಶೋ ಋಷಿಃ, ಮಹಾಗಣಪತಿರ್ದೇವತಾ, ನಾನಾ ವಿಧಾನಿ ಛಂದಾಸಿ. ಗಂ ಇತಿ ಬಿಜಂ. ತುಂಡಮಿತಿ ಶಕ್ತಿಃ, ಸ್ವಾಹಾ ಕೀಲಕಮ್. ಸಕಲ ವಿಘ್ನನಾಶನ ದ್ವಾರಾ ಮಹಾಗಣಪತಿ ಪ್ರೀತ್ಯರ್ಥೆ. ಜಪೇ ವಿನಿಯೋಗಃ'' ಎಂದು ಋಷಿ ದೇವತಾ ಛಂದಸ್ಸು ಬೀಜಾಕ್ಷರಗಳನ್ನು ಹೇಳಿ ಗಣೇಶ ಸಹಸ್ರನಾಮಸ್ತೋತ್ರವನ್ನು ಪಠಿಸಬೇಕು.

ಓಂ ಗಣೇಶ್ವರೋಗಣಕ್ರೀಡೋ ಗಣನಾಥೋ ಗಣಾಧಿಪಃ
ಏಕದಂಷ್ಟ್ರೋ ವಕ್ರತುಂಡೋ ಗಜವಕ್ತ್ರೋ ಮಹೋದರಃ ॥
ಲಂಬೋದರೋ ಧೂಮ್ರವರ್ಣೋ ವಿಕಟೋ ವಿಘ್ನನಾಯಕಃ ।

ಸುಮುಖೋ ದುರ್ಮುಖೋ ಬುದ್ಧೋ ವಿಘ್ನರಾಜೋಽಘನಾಶನಃ ।
ಭೀಮಃ ಪ್ರಮೋದ ಆಮೋದಃ ಸುರಾನಂದೋ ಮದೋತ್ಕಟಃ

ಹೇರಂಬಃ ಶರಭಃ ಶಂಭುಃ ಲಂಬಕರ್ಣೋ ಮಹಾಬಲಃ
ನಂದನೋ ಲಂಪಟೋಽಭೀಮೋ ಮೇಘನಾದೋ ಗಣಂಜಯಃ

ವಿನಾಯಕೋ ವಿರೂಪಾಕ್ಷೋ ಧೀರಃ ಶೂರೋ ವರಪ್ರದಃ
ಮಹಾಗಣಪತಿರ್ಬುದ್ಧಿಪ್ರಿಯಃ ಕ್ಷಿಪ್ರಪ್ರಸಾದನಃ
ರುದ್ರಪ್ರಿಯೋ ಗಣಾಧ್ಯಕ್ಷ ಉಮಾಪುತ್ರೋಽಘನಾಶನಃ

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಸಂಕ್ಷಿಪ್ತ ಗಣೇಶ ಸಹ್ರನಾಮ ಕಥನ ಎಂಬ ನಲವತ್ತಾರನೇ ಅಧ್ಯಾಯ ಮುಗಿದುದು*

—o—

ಈ ಗಣೇಶ ಸಹಸ್ರನಾಮ ಮಂತ್ರಸ್ತೋತ್ರವನ್ನು ಜಪಿಸುತ್ತಲೇ ಶಂಕರನು ತ್ರಿಪುರಾಸುರನನ್ನು ಯುದ್ಧಕ್ಕೆ ಆಹ್ವಾನಿಸಿದನು. ತ್ರಿಪುರಾಸುರನ ದೈತ್ಯಸೇನೆ ಹಾಗೂ ದೇವಸೇನೆಗಳ ನಡುವೆ ಘನಘೋರವಾದ ಸಂಗ್ರಾಮ ನಡೆಯಿತು. ಕ್ರುದ್ಧನಾದ ತ್ರಿಪುರಸುರನು ಶಿವನ ಪ್ರಮಥಗಣದವರನ್ನೂ ದೇವಸೈನಿಕರನ್ನೂ ಹೊಡೆದು ಕೊಚ್ಚಿಹಾಕಿದನು. ಇಂದ್ರನೂ ಕೂಡ ತ್ರಿಪುರನಿಂದ ಸೋತು ತಣ್ಣಗಾದ. ಶಿವ ಹೌಹಾರಿದ. ಆಗ ನಾರದರು ಅಲ್ಲಿಗೆ ಬಂದು ಪರಮೇಶ್ವರನಿಗೆ ''ಗಣಪತಿ ಸಹಸ್ರನಾಮವನ್ನು ಜಪಿಸುತ್ತ ಯುದ್ಧ ಮಾಡು. ಬೀಜಾಕ್ಷರದಿಂದ ಅಭಿಮಂತ್ರಣ ಮಾಡಿ ಬಾಣ ಹೂಡು. ತ್ರಿಪುರಾಸುರನು ಅದರಿಂದ ನಿಶ್ಚಿತವಾಗಿಯೂ ಸಾಯುತ್ತಾನೆ'' ಎಂದು ಹೇಳಿ ಹೊರಟು ಹೋದರು.

ಅನಂತರ ಪರಮೇಶ್ವರನು ಮಹಾಚಂಡಪ್ರಚಂಡನಾದ ಆ ದೈತ್ಯಾಧಮನನ್ನು ವಧಿಸಲಿಕ್ಕೆ ಸಕಲವಿಧವಾದ ಸನ್ನಾಹವನ್ನು ಮಾಡಿಕೊಂಡನು. ಸಪ್ತದ್ವೀಪವತಿಯಾದ ಪೃಥಿವಿಯನ್ನೆ ತನ್ನ ರಥವನ್ನಾಗಿಯೂ, ಸೂರ್ಯಚಂದ್ರರನ್ನು ರಥದ ಗಾಲಿಗಳನ್ನಾಗಿಯೂ ಮಾಡಿಕೊಂಡನು. ಮತ್ತು ಮೇರುಪರ್ವತವನ್ನೇ ಧನುಸ್ಸನ್ನಾಗಿ ಸಜ್ಜುಗೊಳಿಸಿಕೊಂಡು ಅಶ್ವಿನೀದೇವತೆಗಳನ್ನು ರಥದ ಕುದುರೆಗಳನ್ನಾಗಿ ಯೋಜಿಸಿಗೊಂಡನು. ಮತ್ತು ವಿಷ್ಣುವನ್ನೇ ಬಾಣವನ್ನಾಗಿ ಕಲ್ಪಿಸಿಕೊಂಡನು.

ಆಚಮನ ಮಾಡಿ ಗಣೇಶಸಹಸ್ರನಾಮ ಮಂತ್ರವನ್ನು ಜಪಿಸಿದ ಹಾಗೂ ಗಣೇಶನು ಸ್ವಯಂ ತಾನೇ ತನಗೆ ಉಪದೇಶಿಸಿದ 'ಗಂ' ಎಂಬ ಏಕಾಕ್ಷರದ ಮೂಲಮಂತ್ರದಿಂದ ವಿಷ್ಣುರೂಪ ಬಾಣವನ್ನು ಅಭಿಮಂತ್ರಿಸಿ ತ್ರಿಪುರಾಸುರನ ಮೇಲೆ ಪ್ರಯೋಗಿಸಿದ.

ಪರಶಿವನ ಧನುಷ್ಟಂಕಾರದ ಬ್ರಹ್ಮಾಂಡಭೇದಿಯಾದ ಭಯಂಕರ ಶಬ್ದದಿಂದ ಅಖಂಡ ಭೂಮಂಡಲವೂ ಅದನ್ನು ಹೊತ್ತ ಆದಿಶೇಷನೂ ಅಷ್ಟದಿಗ್ಗಜಗಳೂ ಚರಾಚರ ಪ್ರಾಣಿಗಳೂ ಗಡಗಡನಡುಗಿಹೋದವು. ದೇವತೆಗಳೂ ದಾನವರೂ ಮಾನವರೂ ಎಲ್ಲರೂ ಭಯಭ್ರಾಂತರಾದರು. ಧೂರ್ಜಟಿಯ ಧನುಸ್ಸಿನಿಂದ ಹೊರಟ ಆ ನಾರಾಯಣಾಸ್ತ್ರವು ಭಯಂಕರ ಶಬ್ದದೊಂದಿಗೆ ಉರಿಯತೆರೆಗಳನ್ನು ತೂರುತ್ತ ದಶದಿಕ್ಕುಗಳನ್ನು ಸುಡುತ್ತ ತ್ರಿಪುರಾಸುರನ ಕಡೆಗೆ ಉರಿಯುತ್ತ ಬಂದಿತು. ಬೆಂಕಿಯ ಬಣಿವೆಯಂತೆ ತನ್ನ ಮೇಲೆ ತೂರಿ ಬರುವ ಪಿನಾಕಪಾಣಿಯ ಪ್ರಾಣಾಂತಿಕ ಬಾಣದ ರಭಸವನ್ನು ಕಂಡು ಆ ದೈತ್ಯನು ಗದಗುಟ್ಟಿ ನಡುಗಿಹೋದ. ಕಣ್ಣು-ಕತ್ತಲಗೂಡಿ ಕೆಳಗೆ ಕುಸಿದು ನೆಲದ ಮೇಲೆ ಬಿದ್ದ. ಆ ವೈಷ್ಣವಾಸ್ತ್ರವು ನೇರವಾಗಿ ಬಂದು ತ್ರಿಪುರಾಸುರನನ್ನು ಸುಟ್ಟು ಹಾಕಿತು. ಅವನ ಅಚ್ಛೇದ್ಯಅಭೇದ್ಯವಾದ ಮೂರೂಪಟ್ಟಣಗಳೂ ನಿಮಿಷಾರ್ಧದಲ್ಲಿ ಉರಿದು ಬೂದಿಯಾಗಿ ಹೋದವು.

ದೇವತೆಗಳೂ ದೈತ್ಯದಾನವರೂ ಭಯಭ್ರಾಂತರಾಗಿ ನೋಡನೋಡುತ್ತಿರುವಂತೆಯೇ ಆ ದೈತ್ಯರಾಜನ ದೇಹದಿಂದ ಹೊರಟ ಆತ್ಮಜ್ಯೋತಿಯು ಪರಮೇಶ್ವರನ ದೇಹದಲ್ಲಿ ಪ್ರವೇಶಿಸಿ ಲೀನವಾಗಿ ಹೋಯಿತು. ಆಗ ಅಂತರಿಕ್ಷದಿಂದ ''ಮಹೇಶ್ವರನಿಂದ ಮರಣ ಹೊಂದಿದ ಮಹಾದೈತ್ಯ ಮುಕ್ತನಾದ'' ಎಂದು ಆಕಾಶವಾಣಿ ಆಯಿತು. ಅದನ್ನು ಕೇಳಿ

ದೇವತೆಗಳೂ ಗಂಧರ್ವರೂ ಋಷಿಮುನಿಗಳೂ ಭಕ್ತಿಯಿಂದ ಮಹೇಶನನ್ನು ಸ್ತುತಿಸಿ ಹೊಗಳಿ ಹಾಡಿ ಪಾಡಿ ಕೊಂಡಾಡಿದರು. ದೇವದುಂದುಭಿಗಳು ಮೊಳಗಿದವು. ಚಾರಣರು ಗಂಧರ್ವರೂ ಹಾಡಿದರು. ಅಪ್ಸರೆಯರು ನರ್ತನಮಾಡಿದರು. ಇಂದ್ರಾದಿದೇವತೆಗಳೂ ನಾರದಾದಿ ದೇವರ್ಷಿಗಳೂ ಪುಷ್ಪವೃಷ್ಟಿಯನ್ನು ಮಾಡಿದರು. ಋಷಿ ಮುನಿಗಳೆಲ್ಲರೂ ಗಂಗಾಧರನನ್ನು ವಂದಿಸಿ ತಮ್ಮತಮ್ಮ ಆಶ್ರಮಗಳಿಗೆ ತೆರಳಿ ಜಪತಪೋನುಷ್ಠಾನಗಳಲ್ಲಿ ತೊಡಗಿದರು. ಭೂಲೋಕದಲ್ಲಿರುವ ಜನರೆಲ್ಲರೂ ತಮಗೆ ಬಂದ ಕುತ್ತು ಪರಿಹಾರವಾಯಿತೆಂದು ಸಂತಸದುಂಬಿ ತಮ್ಮ ಯಜ್ಞ, ಯಾಗ, ವ್ರತ, ನಿಯಮ, ಪುಣ್ಯಕಾರ್ಯಗಳನ್ನು ನಿರ್ಭಯವಾಗಿ ಆಚರಿಸತೊಡಗಿದರು. ಶಂಕರನಾದರೂ ತಾನು ಯುದ್ಧಕ್ಕಾಗಿ ಬಳಸಿದ ವಸ್ತುಗಳನ್ನೆಲ್ಲ ಆ ಆ ಸ್ಥಾನಗಳಲ್ಲಿರಿಸಿ ಜಯ ಘೋಷದೊಂದಿಗೆ ನಂದಿಯನ್ನು ಆರೋಹಣ ಮಾಡಿ ಕೈಲಾಸಗಿರಿಗೆ ತೆರಳಿದನು. ಅಂದಿನಿಂದ ಶಿವನಿಗೆ ತ್ರಿಪುರಾರಿ ಎಂಬ ಹೆಸರು ಬಂದಿತು. ಇದೆಲ್ಲವೂ ಗಣೇಶ ಸಹಸ್ರನಾಮದ ಪ್ರಭಾವ.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಶಿವವಿಜಯ ಎಂಬ ನಲವತ್ತೇಳನೆ ಅಧ್ಯಾಯ ಮುಗಿದುದು*



## ಪಾರ್ವತಿಯ ಪ್ರಾರ್ಥನೆ — ಅಧ್ಯಾಯ - ೪೮

ಹಿಂದೆ ತ್ರಿಪುರಾಸುರನು ಹಿಡಿಯ ಬಂದಾಗ ಅವನ ಭಯದಿಂದ ಬೆದರಿ ಬೇಡಿಕೊಂಡ ಗಿರಿಜೆಯನ್ನು ಅವಳ ತಂದೆ ಹಿಮವಂತನು ಬಂದು ಗಹನಾರಣ್ಯದ ಒಂದು ಗುಹೆಯಲ್ಲಿ ತಂದಿಟ್ಟಿದ್ದ. ದುಷ್ಟನಾದ ಮಹಾಕಾಮಿ ದೈತ್ಯನು ತನ್ನ ಪತಿಯಿಂದ ಹತಪತಿತನಾಗಿ ಬೆಂದು ಬೂದಿಯಾಗಿ ಹೋದನೆಂಬ ಸಮಾಚಾರವನ್ನು ಕೇಳಿ ಆ ಶಾಂಕರಿಯು ಗಹನತರವಾದ ಗುಹಾಗರ್ಭದಿಂದ ಹೊರಟು ಹೊರಗೆ ಬಂದಳು. ಅವಳ ಕಣ್ಣಿಗೆ ಅತ್ಯಂತ ಘೋರತರವೂ ಹುಲಿ ಕರಡಿ ಸಿಂಹ ಮುಂತಾದ ಕ್ರೂರಶ್ವಾಪದಗಳಿಂದ ಭಯಂಕರವೂ ಆದ ಗೊಂಡಾರಣ್ಯವು ಬಿದ್ದಿತು. ಗಾಬರಿಯಾಯಿತು. ಪತಿಪರಮೇಶ್ವರ ಮತ್ತು ತಂದೆ ಹಿಮವಂತ ಇಬ್ಬರೂ ತನ್ನನ್ನು ಮರೆತು ಬಿಟ್ಟರೇ ಎಂದು ಹಲಬಿದಳು. ''ಪತಿಪರಮೇಶ್ವರ, ನೀನು ಸರ್ವಜ್ಞನಲ್ಲವೆ ! ನನ್ನ ಈ ದುರವಸ್ಥೆಯನ್ನು ತಿಳಿದಿಲ್ಲವೇ ! ನಿನ್ನದಿವ್ಯ ದರ್ಶನ ನನಗೆ ಎಂದು ದೊರಕೀತು ? ನಾನು ನಿನ್ನ ವಿರಹವನ್ನು ತಾಳಲಾರೆ. ನೀನು ದರ್ಶನ ಕೊಡದಿದ್ದರೆ ನಾನು ಬದುಕಿ ಉಳಿಯಲಾರೆ. ತಂದೆ ಹಿಮವಂತನೆ, ನೀನಾದರೂ ಬೇಗ ಬಂದು ನನ್ನನ್ನು ಆ ಕೈಲಾಸಪತಿಯ ಬಳಿಗೆ ಕಳಿಸು. ಇಲ್ಲದಿದ್ದರೆ ನಾನು ಇಲ್ಲಿಯೆ ನಿನ್ನ ಈ ದೊಡ್ಡ ಗುಡ್ಡದ ಒಂದು ಕೊಳ್ಳದಲ್ಲಿ ಬಿದ್ದು ಪ್ರಾಣನೀಗುವೆನು'' ಹೀಗೆ ಆರ್ತ ವಿಲಾಪಗೈಯುತ್ತ ಕಾಡಿನಲ್ಲಿ ಹುಚ್ಚಿಯಂತೆ ತಿರುಗುತ್ತಿರುವ ಆ ಭವಾನಿಯನ್ನು ಓರ್ವ ವನೇಚರನಾದ ಬೆಸ್ತನು ಕಂಡ. ಅವನು ಕೂಡಲೇ ಓಡುತ್ತ ಬಂದು ಹಿಮವಂತನಿಗೆ ಈ ಸುದ್ದಿ ಮುಟ್ಟಿಸಿದ. ಆ ಕ್ಷಣದಲ್ಲಿ ಹಿಮವಂತ ಮಗಳಿದ್ದಲ್ಲಿಗೆ ಧಾವಿಸಿದ. ಅವಳನ್ನು ಸಂತೈಸಿ ತನ್ನ ಅರಮನೆಗೆ ಕರೆತಂದ. ಅವನ ಹೆಂಡತಿಯಾದ ಮೇನೆಗೆ ಮಗಳನ್ನು ಕಂಡು ಸಂತೋಷ ಮೇರೆ ಮೀರಿತು. ತಾಯಿ ತಂದೆಗಳು ಅವಳನ್ನು ಅತ್ಯಂತ ಪ್ರೀತಿಯಿಂದ ಮನೆಯಲ್ಲಿ ಇಟ್ಟುಕೊಂಡು ಅವಳ ಮೇಲೆ ಪ್ರೇಮವೃಷ್ಟಿಯನ್ನೇ ಕರೆದರು.

ಆಗ ಗೌರಿಯು ಅವರಿಗೆ ದೈನ್ಯದಿಂದ ಹೇಳಿದಳು "ಪೂಜ್ಯರೇ, ನನಗೆ ನನ್ನ ಪ್ರಾಣವಲ್ಲಭನಾದ ಪರಮೇಶ್ವರನನ್ನು ಕಾಣಬೇಕಾಗಿದೆ. ಆ ಪರಶಿವನು ನನಗೆ ಪ್ರಾಪ್ತನಾಗಬೇಕಾದರೆ ನಾನು ಏನು ಮಾಡಬೇಕು ? ಯಾವ ವ್ರತ, ಯಾವ ಜಪ, ಯಾವ ನಿಯಮ ಯಾವ ತಪ ನನ್ನನ್ನು ಆ ವಿರೂಪಾಕ್ಷನೊಂದಿಗೆ ಕೂಡಿಸಬಲ್ಲದು ! ಅಂಥ ಒಂದು ಪ್ರಿಯಕರ ಪ್ರಾಪ್ತಿಯ ಉಪಾಯವನ್ನು ದಯವಿಟ್ಟು ಹೇಳಿರಿ. ಅದು ಎಷ್ಟೇ ಕಠಿಣವಾದರೂ ನಾನು ಅದನ್ನು ಮಾಡಿ ಪರಮೇಶ್ವರನ ಸಾನ್ನಿಧ್ಯವನ್ನು ಸಾಧಿಸುವೆನು."

ಆಗ ಹಿಮವಂತನು ತುಸು ವಿಚಾರಿಸಿ ಹೇಳಿದನು "ಮಗಳೇ, ನಿನಗೆ ಪತಿಪ್ರಾಪ್ತಿಗಾಗಿ ಒಂದು ಶ್ರೇಷ್ಠ ಉಪಾಯವನ್ನು ಹೇಳುವೆನು. ಕೇಳು. ನೀನು ಭಕ್ತಿಯಿಂದ ವಿಘ್ನರಾಜನಾದ ಗಣಪತಿಯನ್ನು ಆರಾಧಿಸು. ಪರಿತುಷ್ಟನಾದ ಆ ದೇವ ಸರ್ವಾಭೀಷ್ಟಪ್ರದ. ಅವನನ್ನು ಆರಾಧಿಸಿಯೆ ಇಂದ್ರ ಇಂದ್ರಪದವಿ ಹೊಂದಿದ್ದಾನೆ. ಬ್ರಹ್ಮ ಜಗತ್ತಿನ ಸೃಷ್ಟಿ ಮಾಡುವ ಸಾಮರ್ಥ್ಯ ಹೊಂದಿದ್ದಾನೆ. ನೀನೂ ಅವನನ್ನು ಧ್ಯಾನಿಸಿ ಪತಿಯ ಸಾನ್ನಿಧ್ಯವನ್ನು ಪಡೆ.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಪಾರ್ವತಿಯ ಪ್ರಾರ್ಥನೆ ಎಂಬ ನಲವತ್ತೆಂಟನೇಯ ಅಧ್ಯಾಯ ಮುಗಿದುದು*



## ಗಣೇಶ ಪೂಜಾವಿಧಾನ — ಅಧ್ಯಾಯ - ೪೯

**ಹಿಮವಂತ :-** ಮಗಳೇ, ಮಹಾಗಣಪತಿಯ ಉಪಾಸನೆ ಮಾಡುವ ಕ್ರಮವನ್ನು ಹೇಳುತ್ತೇನೆ ಕೇಳು. ಗಣೇಶಭಕ್ತನಾದವನು ಪ್ರಾತಃಕಾಲದಲ್ಲಿ ಎದ್ದು ಬಹಿರ್ದೆಸೆಗೆ ಹೋಗಿ ಬಂದು ಮೃತ್ತಿಕಾಶೌಚಾದಿಗಳನ್ನು ಮಾಡಿಕೊಂಡು ನದೀ, ಸರೋವರ, ಬಾವಿ ಮುಂತಾದ ಜಲಾಶಯಗಳಲ್ಲಿ ವಿಧಿಪೂರ್ವಕ ಸ್ನಾನ ಮಾಡಬೇಕು. ಅನಂತರ ಶುದ್ಧದೇಶದಿಂದ ಮಣ್ಣನ್ನು ತೆಗೆದು ಅದರಿಂದ ಸಿದ್ಧಿ ವಿನಾಯಕನಮೂರ್ತಿಯನ್ನು ಸುಂದರವಾಗಿ ಮಾಡಿ ಅದನ್ನು ದಿವ್ಯ ಪೀಠದಲ್ಲಿ ಪ್ರತಿಷ್ಠಾಪಿಸಬೇಕು. ಪೂಜೆಗೆ ಬೇಕಾಗುವ ಗಂಧ, ಪುಷ್ಪ, ಧೂಪ, ದೀಪ, ಐದು ವಿಧ ಪತ್ರಗಳನ್ನೂ ತಂದು ಇಟ್ಟುಕೊಳ್ಳಬೇಕು. ಈ ಐದು ವಿಧ ಪತ್ರಗಳು ಒಂದೊಂದು ಇಪ್ಪತ್ತೊಂದಿಪ್ಪತೊಂದಿರಬೇಕು. ಅದರಂತೆ ನೂರ ಎಂಟು ವಿಧವಾದ ಬಿಳಿ ಹಸಿರು ಬಣ್ಣದ ನೂರಎಂಟು ನೂರ ಎಂಟು ಗರಿಕೆಗಳನ್ನು ಸಿದ್ಧಪಡಿಸಿ, ಮೋದಕ ಪಾಯಸ ಲಾಡು ಮುಂತಾದವುಗಳನ್ನು ನೈವೇದ್ಯಕಾಗಿ ತಯಾರಿಸಿ ಇಟ್ಟುಕೊಳ್ಳಬೇಕು. ಇವಲ್ಲದೆ ತುಪ್ಪ ಸಕ್ಕರೆಗಳಿಂದ ಮಾಡಿದ ಬಗೆಬಗೆಯ ಭಕ್ಷ್ಯಭೋಜ್ಯ ಪಕ್ವಾನ್ನಗಳನ್ನು ಮಾವು, ನೇರಳೆ, ತೆಂಗು, ಪೇರಳ, ಹಲಸು, ದ್ರಾಕ್ಷಿ, ರಸಬಾಳೆ ಮುಂತಾದ ಹಣ್ಣು ಹಂಪಲುಗಳನ್ನೂ ಯಾಲಕ್ಕಿ ಲವಂಗ ಪಚ್ಚಕರ್ಪೂರಗಳಿಂದ ಕೂಡಿದ ಸುಗಂಧಿ ತಾಂಬೂಲವನ್ನೂ ಗಣೇಶನಿಗೆ ನಿವೇದಿಸಲು ಅಣಿಮಾಡಿ ಇರಿಸಿಕೊಳ್ಳಬೇಕು. ಎರಡೂ ಕಡೆ ಎಣ್ಣೆ, ತುಪ್ಪ ದೀಪಗಳನ್ನು ಹಚ್ಚಿಡಬೇಕು. ಹೀಗೆ ಎಲ್ಲ ಸಿದ್ಧತೆ ಮಾಡಿಕೊಂಡು ಶುಚಿಯಾದ ಸ್ಥಳದಲ್ಲಿ ದರ್ಭಾಸನ ಅಥವಾ ಕೃಷ್ಣಾಜಿನದ ಮೇಲೆ ಕುಳಿತುಕೊಂಡು ಆಚಮನ ಪ್ರಾಣಾಯಾಮ ಸಂಧ್ಯೆ, ನಿತ್ಯಾಪೂಜಾದಿಗಳನ್ನು ಮಾಡಿಕೊಂಡು ಗಣೇಶಪೂಜೆಯನ್ನು ಪ್ರಾರಂಭಿಸಬೇಕು.

ಮೊದಲು ಗಣಪತಿಮೂರ್ತಿಯಲ್ಲಿ ಮಂತ್ರೋಚ್ಚಾರಣ ಪೂರ್ವಕವಾಗಿ ಪ್ರಾಣಪ್ರತಿಷ್ಠಾಪನೆ ಮಾಡಿ ತತ್ವನ್ಯಾಸ ಮಾತೃಕಾನ್ಯಾಸ ಷಡಂಗನ್ಯಾಸಾದಿಗಳನ್ನು ಶಾಸ್ತ್ರೋಕ್ತ ಕ್ರಮದಿಂದ ಮಾಡಬೇಕು.

''ಸ್ವರ್ಣಸಿಂಹಾಸನಂ ದತ್ತಂ ತತ್ರ ತ್ವಂ ಸಮುಪಾವಿಶ''

''ಬಂಗಾರದ ಆಸನವನ್ನು ನೀಡಿದ್ದೇನೆ. ಗಣಾಧ್ಯಕ್ಷನೇ ನೀನು ಅಲ್ಲಿ ಕೂಡು'' ಎಂದು ಪ್ರಾರ್ಥಿಸಬೇಕು. ಅನಂತರ ಅರ್ಘ್ಯ ಪಾದ್ಯಾದಿಗಳನ್ನು ಇತ್ತು ಹಾಲು ಮೊಸರು ತುಪ್ಪ, ಜೇನುತುಪ್ಪ ಸಕ್ಕರೆ ಬಾಳೆಹಣ್ಣು ಮುಂತಾದವುಗಳಿಂದ ಗಣಪತಿಯಮೂರ್ತಿಗೆ ಪಂಚಾಮೃತಸ್ನಾನವನ್ನು ಮಾಡಿಸಬೇಕು. ಬಳಿಕ ಶುದ್ಧೋದಕ ಸ್ನಾನಮಾಡಿಸಿ ಕೆಂಪುಬಣ್ಣದ ಜೋಡು ಬಟ್ಟೆಗಳನ್ನು ಉಡಿಸಿ ತೊಡಿಸಬೇಕು. ಅನಂತರ ಬಂಗಾರದ ಎಳೆಗಳಿಂದ ಮಾಡಿದ ಜನಿವಾರವನ್ನು ಗಣೇಶಮೂರ್ತಿಯ ಕೊರಳಿಗೆ ಹಾಕಿ ನಾನಾವಿಧವಾದ ಚಿನ್ನದ ಹಾಗೂ ಮುತ್ತುರತ್ನದ ಆಭರಣಗಳನ್ನು ಅರ್ಪಿಸಬೇಕು. ಎಂಟು ವಿಧ ಸುವಾಸಿತ ದ್ರವ್ಯಗಳಿಂದ ನಿರ್ಮಿಸಿದ ರಕ್ತಚಂದನನ್ನು ಗಣಾಧ್ಯಕ್ಷನ ಮೂರ್ತಿಗೆ ಲೇಪಿಸಿ ಸಿಂದೂರ ತಿಲಕವನ್ನು ಹಣೆಯಮೇಲೆ ಇರಿಸಬೇಕು. ಜಾಜಿ, ಮಲ್ಲಿಗೆ, ಬಕುಲ, ಕಮಲ, ಶೇವಂತಿಗೆ, ಪಾಟಲ, ಮಾಲತೀ ಮುಂತಾದ ಬಗೆಬಗೆಯ ಸುಗಂಧಿ ಹೂಗಳನ್ನು ಗಣಪತಿಗೆ ಏರಿಸಬೇಕು. ಬಿಲ್ವ ಪತ್ರಗಳನ್ನು ನಡುನಡುವೆ ಜೋಡಿಸಿ ಕಟ್ಟಿದ ಕಮಲ ಕುಸುಮಗಳ ಮಾಲೆಗಳನ್ನು ಗಜಮುಖನ ಶ್ರೀಕಂಠದಲ್ಲಿ ಹಾಕಬೇಕು. ದಶಾಂಗಗುಗ್ಗುಳಯುಕ್ತವಾದ ಧೂಪಾರತಿಯನ್ನು ಮಾಡಿ ನೈವೇದ್ಯ ಸಮರ್ಪಣ ಮಾಡಬೇಕು. ಕರ್ಪೂರವೀಳ್ಯವನ್ನು **'ಕೇಸರಾನ್ವಿತಂ ತಾಂಬೂಲಂ ಪರಿಗೃಹ್ಯತಾಂ'** ಎಂದು ಅರ್ಪಿಸಬೇಕು. ಅನಂತರ ಪಂಚಾರತಿ ಮಂಗಳಾರತಿಗಳನ್ನು ಬೆಳಗಿ ಕೈ ಮುಗಿದು ಪ್ರಾರ್ಥನೆಯನ್ನು ಸಲ್ಲಿಸಬೇಕು.

''ದೀನಾಧೀಶ ದಯಾನಿಧೇ ಸುರಗಣೈಃ ಸಂಸೇವ್ಯಮಾನ ದ್ವಿಜ
ಬ್ರಹ್ಮೇಶಾನ ಮಹೇಂದ್ರ ಶೇಷ ಗಿರಿಜಾ ಗಂಧರ್ವಸಿದ್ಧೈ ಸ್ತುತ ॥
ಸರ್ವಾರಿಷ್ಟನಿವಾರಣೈಕ ನಿಪುಣ ತ್ರೈಲೋಕ್ಯನಾಥ ಪ್ರಭೋ
ಭಕ್ತಿಂ ಮೇ ಸಫಲಾಂ ಕುರುಷ್ವ ಸಕಲಾಂ ಕ್ಷಾಂತ್ವಾಪರಾಧಾನ್ ಮಮ॥

ದಯಾಸಮುದ್ರನಾದ ಪ್ರಭು ಗಣೇಶ, ನೀನು ದೀನದಲಿತರಿಗೆಲ್ಲ ನಾಥನು. ನಿನ್ನನ್ನು ಬ್ರಹ್ಮ, ಶಿವ, ಇಂದ್ರ, ಪಾರ್ವತಿ, ಆದಿಶೇಷ, ಗಂಧರ್ವ, ಸಿದ್ಧರೇ ಮೊದಲಾದ ದೇವತಾಗಣದವರೂ ನಾರದರೇ ಮುಂತಾದ ಬ್ರಹ್ಮರ್ಷಿಗಳೂ ಅತ್ಯಂತ ಭಕ್ತಿಯಿಂದ ಸ್ತೋತ್ರ ಮಾಡುವರು. ಭಕ್ತರಿಗೆ ಬರುವ ಸಂಕಟ, ಅರಿಷ್ಟಗಳನ್ನು ನಾಶಮಾಡುವಲ್ಲಿ ನೀನೊಬ್ಬನೇ ಸಮರ್ಥನು. ನನ್ನಲ್ಲಿರುವ ಸಾವಿರಾರು ತಪ್ಪುಗಳನ್ನು ಕ್ಷಮಿಸು. ನಾನು ನಿನ್ನಲ್ಲಿ ಇಟ್ಟಿರುವ ಭಕ್ತಿಯನ್ನು ಸಫಲಗೊಳಿಸು''. ಹೀಗೆ ಪ್ರಾರ್ಥನೆಗೈದು ಗಣೇಶಮೂಲಮಂತ್ರವನ್ನು ಜಪಿಸಬೇಕು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಗಣೇಶ ಪಾರ್ಥಿವಪೂಜಾವಿಧಾನ ಎಂಬ ನಲವತ್ತೊಂಬತ್ತನೇ ಅಧ್ಯಾಯ ಮುಗಿದುದು*

—o—

**ಹಿಮವಂತ :-** ಪುತ್ರಿಪಾರ್ವತಿ, ಗಣೇಶಮೂಲಮಂತ್ರ ಎಂದರೆ 'ಗಂ' ಎಂಬ ಏಕಾಕ್ಷರ ಮೂಲಮಂತ್ರ. ಇದನ್ನು ಒಂದು ಲಕ್ಷ ಜಪ ಮಾಡಬೇಕು. ಗಣೇಶಾಯ ನಮಃ ಎಂಬ ಗಣೇಶ ಷಡಕ್ಷರ ಮಂತ್ರವನ್ನು ಒಂದು ಲಕ್ಷ ಹನ್ನೊಂದು ಸಾವಿರ ಸಲ ಜಪಿಸಬೇಕು. ಭಾದ್ರಪದ ಶುಕ್ಲ ಚತುರ್ಥೀದಿನದಿಂದ ಈ ಗಣೇಶಮಂತ್ರ ಜಪಾನುಷ್ಠಾನವನ್ನು ನೀನು ಪ್ರಾರಂಭಿಸು. ಇದನ್ನು ನೀನು ಒಂದು ತಿಂಗಳು ಮಾತ್ರ ಆಚರಿಸಿದರೆ ಸಾಕು. ನೀನು ನಿನ್ನ ಪತಿಯಾದ ಪರಮೇಶ್ವರನ ಸಾನ್ನಿಧ್ಯ, ಸಹವಾಸ, ಸಂದರ್ಶನ, ಸಂಗ, ಸಂಭಾಷಣಾದಿ ಸುಖವನ್ನು ನಿಶ್ಚಿತವಾಗಿಯೂ ಹೊಂದುವೆ. ಈ ಪ್ರಪಂಚದಲ್ಲಿ ಸ್ತ್ರೀಯಾಗಲಿ, ಪುರುಷನಾಗಲಿ ಮಣ್ಣಿನಿಂದ ಮಾಡಿದ ಗಣೇಶನ ಮೂರ್ತಿಯನ್ನು ಪೂಜಿಸಿದರೆ ಅವರ ಮನೋರಥಗಳೆಲ್ಲ ಸಿದ್ಧಿಸುವವು. ಒಂದು ಮೃತ್ತಿಕಾ ಗಣೇಶ ಮೂರ್ತಿಯ ಪೂಜೆಯಿಂದ ಪಶು, ಧನ, ಧಾನ್ಯ ಸಂತಾನ ಸುಖ ಪ್ರಾಪ್ತಿಯಾಗುವದು. ಹೀಗೆ ಎರಡು ನಾಲ್ಕು, ಹತ್ತು, ನೂರು, ಸಾವಿರ, ಲಕ್ಷ ಮೃತ್ತಿಕಾ ಗಣೇಶಮೂರ್ತಿಗಳನ್ನು ಪೂಜಿಸುವವರು ದುರ್ಲಭವಾದ ಸಿದ್ಧಿಗಳನ್ನು ಪಡೆದು ಇಂದ್ರಾದಿ ದೇವತೆಗಳಿಂದ ಸೇವಿಸಲ್ಪಡುವರು. ಬದುಕಿ ಇರುವವರೆಗೆ ಒಂದು ಮೃತ್ತಿಕಾ ಗಣೇಶಮೂರ್ತಿಯನ್ನು ತಪ್ಪದೇ ಪೂಜಿಸುವವನು ಸಾಕ್ಷಾದ್ ಗಣಪತಿಯೆಂದೇ ತಿಳಿ. ಇಂಥ ಭಕ್ತನನ್ನು ಪೂಜಿಸಿದರೆ ಗಣೇಶನಿಗೆ ತನ್ನನ್ನೂ ಪೂಜಿಸಿದ್ದಕ್ಕಿಂತ ಹೆಚ್ಚಿಗೆ ಪ್ರೀತಿ ಉಂಟಾಗುವದು. ಮಣ್ಣಿನ ಗಣೇಶಮೂರ್ತಿಯಂತೆ ತಾಮ್ರ, ಕಂಚು, ಬೆಳ್ಳಿ, ಚಿನ್ನ, ಯಾವುದೇ ಧಾತುವಿನಿಂದ ನಿರ್ಮಿಸಿದ ಗಣಪತಿ ವಿಗ್ರಹವನ್ನಾಗಲಿ ಅಥವಾ ಮುತ್ತು ಹವಳ ರತ್ನಗಳಿಂದ ನಿರ್ಮಿಸಿದ ಗಣೇಶ ಪ್ರತಿಮೆಗಳನ್ನಾಗಲಿ ಭಕ್ತಿಯಿಂದ ಪೂಜಿಸಿದರೆ ಸರ್ವಾಭೀಷ್ಟ ಸಿದ್ಧಿಯಾಗುವದು.

ಭಾದ್ರಪದ ಶುದ್ಧ ಚತುರ್ಥೀ ದಿನದಂದು ಶಾಸ್ತ್ರೋಕ್ತ ವಿಧಾನದಿಂದ ಸಿದ್ಧಿ ವಿನಾಯಕ ಪ್ರತಿಷ್ಠೆ ಪಂಚೋಪಚಾರ, ಷೋಡಶೋಪಚಾರ, ರಾಜೋಪಚಾರ ಪೂಜೆಗಳನ್ನು ಮಾಡಿ ಅಂದು ರಾತ್ರಿಕಾಲದಲ್ಲಿ ವಾದ್ಯಗಾಯನ, ಭಜನ, ಕೀರ್ತನಾದಿಗಳಿಂದ ಜಾಗರಣವನ್ನು ಮಾಡಬೇಕು. ಮರುದಿನ ಹಿಂದಿನ ದಿನದಂತೆ ಕಲ್ಪೋಕ್ತ ಪೂಜೆಯನ್ನು ಮಾಡಿ ಮಹಾಗಣಪತಿ ಹೋಮವನ್ನು ಮಾಡಬೇಕು. ಜಪಸಂಖ್ಯೆಯ ಹತ್ತನೆಯ ಭಾಗದಷ್ಟು ಗಣನೆಯಿಂದ ಆಹುತಿ ಹಾಕಿ ಗಣಹೋಮ ಮಾಡಬೇಕು. ವಿದ್ಯುಕ್ತ ಪ್ರಕಾರ ಬಲಿದಾನಾದಿಗಳನ್ನು ಮಾಡಿ ಪೂರ್ಣಾಹುತಿಯನ್ನು ಕೊಡಬೇಕು. ಅನಂತರ ಹೋಮದ ಆಚಾರ್ಯನನ್ನು ಪೂಜಿಸಿ ವಸ್ತ್ರ, ಭೂಮಿ, ಗೋ, ಧನ ದಾನಾದಿಗಳನ್ನು ನೀಡಿ ತೃಪ್ತಿಪಡಿಸಬೇಕು. ಬಳಿಕ ಸಾಧ್ಯವಾದಷ್ಟು ಬ್ರಾಹ್ಮಣರಿಗೆ ಸುಗ್ರಾಸ ಭೋಜನ ಮಾಡಿಸಬೇಕು. ಸಿದ್ಧಿಬುದ್ಧಿಯರೊಡನೆ ವಿರಾಜಿಸುವ ಶ್ರೀ ಗಣನಾಥನ ತೃಪ್ತಿಗಾಗಿ ಹೋಮಹವನ ಜಪ, ಅನುಷ್ಠಾನ, ಅನ್ನದಾನ, ವಸ್ತ್ರದಾನ, ಸುವರ್ಣದಾನ, ದಕ್ಷಿಣಾದಾನಾದಿಗಳನ್ನು ಮಾಡಬೇಕು.

ಮಾರನೆಯ ದಿನ ವಿನಾಯಕನ ಮೂರ್ತಿಯನ್ನು ರಥ, ಪಲ್ಲಕ್ಕಿ, ಮೇಣೆ ಯಾವುದಾದರೊಂದರಲ್ಲಿ ಕೂಡಿಸಿ ಊದಿಸುತ್ತ ಬಾರಿಸುತ್ತ ಮೆರವಣಿಗೆ ಮಾಡಿಸಬೇಕು. ಛತ್ರ ಚಾಮರ ಧ್ವಜ ಪತಾಕೆಗಳನ್ನು ಹಾರಿಸುತ್ತ ನಗರದ ಬೀದಿಗಳಲ್ಲಿ ಸುತ್ತಾಡಿಸುತ್ತ ಉತ್ಸವದಿಂದ ಸಾಗಿ ಊರ ಸಮೀಪದ ನದಿ, ಕೆರೆ, ಕಾಲುವೆ ಮುಂತಾದ ಜಲಾಶಯದಲ್ಲಿ ಆ ಮಣ್ಣಿನ ಗಣೇಶಮೂರ್ತಿಯನ್ನು ವಿಸರ್ಜನೆ ಮಾಡಬೇಕು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಚತುರ್ಥೀವ್ರತ ಕಥನ ಎಂಬ ಐವತ್ತನೆ ಅಧ್ಯಾಯ ಮುಗಿದುದು*

—o—

## ಹಿಮವಂತ ಪಾರ್ವತಿ ಸಂವಾದ

**ಅಧ್ಯಾಯ - ೫೧**

ಹಿಂದೊಮ್ಮೆ ಪರಮೇಶ್ವರನು ತನ್ನ ಮಡದಿ ದಾಕ್ಷಾಯಣಿಯೊಂದಿಗೆ, ಕೈಲಾಸ ಪರ್ವತದಲ್ಲಿ ಕುಳಿತುಕೊಂಡಾಗ ಷಣ್ಮುಖ ಅಲ್ಲಿಗೆ ಬಂದ. ವೇದಮಂತ್ರಗಳಿಂದ ತಂದೆಯನ್ನು ಸ್ತುತಿಸಿ ನಮಸ್ಕರಿಸಿ ಪರಮೇಶ್ವರನಿಗೆ "ಸರ್ವರ ಸರ್ವಮನೋರಥಗಳನ್ನು ಪೂರ್ಣ ಮಾಡುವ ಯಾವುದಾದರೂ ಒಂದು ವ್ರತವನ್ನು ದಯವಿಟ್ಟು ತಿಳಿಸು" ಎಂದು ಬೇಡಿಕೊಂಡ.

ಆಗ ಆ ವೃಷಭಧ್ವಜನು ಮಂದಹಾಸಗೈದು ನುಡಿದ "ವತ್ಸ, ಭೂಲೋಕದಲ್ಲಿ ಮಹಾಸಿದ್ಧಿಗಳನ್ನೆಲ್ಲ ಸುಲಭವಾಗಿ ಸಾಧ್ಯವಾಗಿ ಮಾಡುವ ಏಕೈಕ ವ್ರತ ಎಂದರೆ ಸಿದ್ಧಿವಿನಾಯಕ ವ್ರತವೊಂದೇ. ಬ್ರಹ್ಮಹತ್ಯಾ, ಸುರಾಪಾನ, ಸುವರ್ಣ ಚೌರ್ಯ, ಗುರುಪತ್ನೀ ಗಮನ, ಮುಂತಾದ ಪಂಚಮಹಾ ಪಾತಕಗಳೂ ಕೂಡ ಈ ವಿನಾಯಕ ವ್ರತಾನುಷ್ಠಾನದಿಂದ ಪರಿಹಾರವಾಗುವವು. ಈ ಮಹಾವ್ರತವನ್ನು ಗುರುಗಳ ಅಪ್ಪಣೆ ಪಡೆದು ಭಾದ್ರಪದ ಶುಕ್ಲ ಚತುರ್ಥಿಯದಿನ ಪ್ರಾರಂಭಿಸಬೇಕು. ಗಣಪತಿಯ ಆರು ಅಕ್ಷರಗಳಿಂದ ಕೂಡಿದ ಮೂಲಮಹಾಮಂತ್ರವನ್ನು ಅಥವಾ ಒಂದು, ಎರಡು, ನಾಲ್ಕು ಅಕ್ಷರಗಳುಳ್ಳ ಅದರಂತೆ ಹತ್ತು ಅಕ್ಷರಗಳುಳ್ಳ ಗಣೇಶ ಮೂಲಮಂತ್ರವನ್ನು, ಲಕ್ಷ, ಅರ್ಧಲಕ್ಷ, ಕಾಲುಲಕ್ಷ, ಹತ್ತು ಸಾವಿರ, ಕನಿಷ್ಠ ಐದುಸಾವಿರ ಜಪಗಳನ್ನಾದರೂ ಮಾಡಬೇಕು. ಜಪಸಂಖ್ಯೆಯ ಹತ್ತನೆಯ ಒಂದು ಭಾಗದಷ್ಟು ಹೋಮವನ್ನು ಮಾಡಬೇಕು. ನಾಲ್ಕು ಸುವರ್ಣದ ತೂಕ ಅಥವಾ ಮೂರು ನೂರಾ ಇಪ್ಪತ್ತು ಗುಂಜಿ ತೂಕದ ಚಿನ್ನಕ್ಕೆ ಒಂದು **'ಪಲ'** ಎಂದು ಹೆಸರು. ಒಂದು ಪಲದ ಅರ್ಧ ಪ್ರಮಾಣದಲ್ಲಿ ಬಂಗಾರದಿಂದ ಗಣೇಶನ ಮೂರ್ತಿಯನ್ನು ನಿರ್ಮಿಸಬೇಕು. ನವಿಲಿನ ಮೇಲಾಗಲಿ, ಇಲಿಯ ಮೇಲಾಗಲಿ ಕುಳಿತಂತಿರಬೇಕು. ಮಂಟಪದ ಮಧ್ಯಭಾಗದಲ್ಲಿ ಧಾನ್ಯರಾಶಿಯನ್ನು ಹರಡಿ, ಚಿನ್ನ, ಬೆಳ್ಳಿ ಅಥವಾ ತಾಮ್ರದ ಕಲಶವನ್ನು ಅದರ ಮೇಲೆ ಇರಿಸಬೇಕು. ಕಲಶಕ್ಕೆ ಒಂದು ಜೊತೆ ಹೊಸಬಟ್ಟೆಯನ್ನು ಹೊದಿಸಿ ಅದರಲ್ಲಿ ಐದು ಚಿಗುರುಗಳನ್ನೂ, ಐದು ರತ್ನಗಳನ್ನೂ ಹಾಕಬೇಕು. ಚಿನ್ನ ಅಥವಾ ತಾಮ್ರದ ಹರಿವಾಣವನ್ನು ಕಲಶದ ಮೇಲೆ ಇರಿಸಿ, ಗಣೇಶನಮೂರ್ತಿಯನ್ನು ಆ ಹರಿವಾಣದಲ್ಲಿ ಸ್ಥಾಪಿಸಬೇಕು. ಅನಂತರ ಆ ದೇವದೇವನಿಗೆ ಆಸನ, ಅರ್ಘ್ಯ, ಪಾದ್ಯ, ಆಚಮನೀಯಗಳನ್ನು ಅರ್ಪಿಸಿ, ಪಂಚಾಮೃತ ಅಭಿಷೇಕ ಮಾಡಿ, ಸುಗಂಧೀ ಜಲದಿಂದ ಶುದ್ಧೋದಕ ಸ್ನಾನ ಮಾಡಿಸಬೇಕು. ಕೆಂಪುಬಣ್ಣದ ರೇಷ್ಮೆ ಬಟ್ಟೆಯನ್ನು ಅರ್ಪಿಸಬೇಕು. ಬಂಗಾರದ ಎಳೆಗಳಿಂದ

ಮಾಡಿದ ಯಜ್ಞೋಪವೀತವನ್ನೂ ಬಗೆಬಗೆಯ ಸುವರ್ಣ ರತ್ನಾಭರಣಗಳನ್ನೂ ಅರ್ಪಿಸಬೇಕು. ರಕ್ತಚಂದನ, ಅಕ್ಷತೆ, ಧೂಪ-ದೀಪಗಳಿಂದ ಪೂಜಿಸಿ ವಡೆ, ಅನಾರಸ, ಉಂಡಿ, ಕೇಸರಅನ್ನ, ಪಾಯಸ ಮೊದಲಾದ ಅನೇಕ ಬಗೆಯ ಷಡ್ರಸಗಳಿಂದ ಕೂಡಿದ ಮಧುರ ಆಹಾರವನ್ನು ದೇವದೇವನಿಗೆ ಭಕ್ತಿಯಿಂದ ನೈವೇದ್ಯ ತೋರಿಸಬೇಕು. ಸುವರ್ಣ ನಾಣ್ಯವನ್ನು ದಕ್ಷಿಣೆಯಾಗಿ ನೀಡಬೇಕು. ರಾತ್ರಿ ತಾಳ, ಮೇಳ, ವಾದ್ಯ, ಗೀತೆಗಳೊಡನೆ ಜಾಗರಣವನ್ನು ಮಾಡಬೇಕು.

ಮಾರನೆಯ ದಿನ ಸ್ನಾನ, ಆಹ್ನೀಕಗಳನ್ನು ಮುಗಿಸಿ, ಹಿಂದಿನ ದಿನದಂತೆಯೇ ಗಜಾನನನನ್ನು ಪೂಜಿಸಿ, ಹೋಮವನ್ನು ಮಾಡಬೇಕು. ಬ್ರಾಹ್ಮಣರಿಗೆ ವಿಪುಲವಾಗಿ ದಾನ, ದಕ್ಷಿಣೆಗಳನ್ನು ಇತ್ತು, ನೂರಾಎಂಟು ಬ್ರಾಹ್ಮಣರಿಗೆ ಇಚ್ಛಾ ಭೋಜನ ಮಾಡಿಸಬೇಕು. ಯೋಗ್ಯತೆ ಇಲ್ಲದಿದ್ದರೆ, ಕೊನೆಯಪಕ್ಷ ಇಪ್ಪತ್ತೊಂದು ಬ್ರಾಹ್ಮಣರಿಗೂ, ದೀನ, ಊನರಾದ ಕುರುಡ ಕುಂಟರಿಗೂ, ಕಡುಬಡವರಿಗೂ ಪಾಯಸದ ಊಟ ಹಾಕಬೇಕು. ಈ ವ್ರತದ ಸಂಬಂಧವಾಗಿ ಹಿಂದೆ ಒಂದು ಅದ್ಭುತವಾದ ಘಟನೆ ನಡೆಯಿತು. ಅದನ್ನು ನಿನಗೆ ಹೇಳುತ್ತೇನೆ, ಕೇಳು.

ಬಹುಪೂರ್ವಕಾಲದಲ್ಲಿ ಕರ್ದಮ ಎಂಬ ಹೆಸರಿನ ಓರ್ವ ಧರ್ಮಿಷ್ಠ ರಾಜನು ಇರುತ್ತಿದ್ದ. ಅವನ ಆಸ್ಥಾನಕ್ಕೆ ಒಮ್ಮೆ ಭೃಗುಮುನಿಗಳು ದಯಮಾಡಿಸಿದರು. ಅವರಿಗೆ ಅರ್ಘ್ಯ, ಪಾದ್ಯಾದಿಗಳನ್ನಿತ್ತು, ಸತ್ಕರಿಸಿ, ಉಚ್ಚಪೀಠದಲ್ಲಿ ಕೂಡಿಸಿದ ಬಳಿಕ, ಮಹಾರಾಜನು ಕೈ ಮುಗಿದು ಕೇಳಿದನು.

**ಕರ್ದಮ :-** ''ಪೂಜ್ಯರೇ, ತಾವು ಮಹಾಜ್ಞಾನಿಗಳು. ಹಿಂದೆ ಆದುದನ್ನು ಮುಂದೆ ಆಗಲಿರುವದನ್ನು, ದಿವ್ಯದೃಷ್ಟಿಯಿಂದ ನೀವು ಆರಿಯಬಲ್ಲಿರಿ. ಪೂರ್ವಜನ್ಮದಲ್ಲಿ ನಾನು ಯಾರು ? ನಾನು ಆಗ ಮಾಡಿದ ಪುಣ್ಯ ವಿಶೇಷ ಏನು ? ಈ ಜನ್ಮದಲ್ಲಿ ನಾನು ನಿಷ್ಕಂಟಕನಾದ ಈ ವಿಶಾಲ ಸಾಮ್ರಾಜ್ಯವನ್ನು, ಅಧಿಕಾರವನ್ನು, ಐಶ್ವರ್ಯವನ್ನು ಪಡೆದಿದ್ದೇನೆ. ನನ್ನ ಭಂಡಾರಗಳಲ್ಲಿ ಮುತ್ತು, ರತ್ನ, ಹವಳ, ವಜ್ರಗಳನ್ನು ಒಟ್ಟಲಾಗಿದೆ. ಕುಬೇರನ ಐಶ್ವರ್ಯಕ್ಕೆ ಸರಿದೂಗುತ್ತದೆ ನನ್ನ ಸಂಪತ್ತು. ನಾನು ಮುಟ್ಟಿದ್ದೆಲ್ಲಾ ಚಿನ್ನ, ಬಯಸಿದ್ದೆಲ್ಲಾ ಕೂಡಲೇ ಸಿದ್ಧವಾಗುತ್ತದೆ. ಇಷ್ಟೆಲ್ಲಾ ಸಿರಿ, ಸೌಭಾಗ್ಯ, ಸಂಪತ್ತು ನನಗೆ ಈಗ ಒದಗಿ ಬರಬೇಕಾದರೆ, ನಾನು ಜನ್ಮಾಂತರದಲ್ಲಿ ಎಂಥಾ ಪುಣ್ಯವಿಶೇಷ ಮಾಡಿರಬಹುದು ? ಅದನ್ನು ನೀವು ತಿಳಿದು, ನನಗೂ ತಿಳಿಸಿರಿ. ಅದನ್ನು ಈ ಜನ್ಮದಲ್ಲಿಯೂ ನಾನು ಮಾಡಿ, ಮುಂದಿನ ಜನ್ಮದಲ್ಲೂ ಕೂಡ, ದೇವದುರ್ಲಭವಾದ ಇಂಥ ಭೋಗೈಶ್ವರ್ಯಗಳನ್ನು ಪಡೆಯಲು ಪ್ರಯತ್ನಿಸುತ್ತೇನೆ.''

**ಭೃಗು :-** 'ರಾಜೇಂದ್ರ, ನೀನು ಪೂರ್ವಜನ್ಮದಲ್ಲಿ ಅತ್ಯಂತ ಶುಚಿರ್ಭೂತನಾದ ಓರ್ವ ದುರ್ಬಲ ಕ್ಷತ್ರಿಯನಾಗಿದ್ದೆ. ನಿನ್ನ ಕುಟುಂಬವನ್ನು ರಕ್ಷಸಲಿಕ್ಕಾಗಿ ನಾನಾರೀತಿಯ ಉದ್ಯೋಗಗಳನ್ನು, ವ್ಯಾಪಾರ, ವ್ಯವಸಾಯಗಳನ್ನು ನೀನು ಮಾಡಿದೆ. ಆದರೆ ಯಾವುದರಿಂದಲೂ ನಿನಗೆ ಪರ್ಯಾಪ್ತವಾದ ಧನಪ್ರಾಪ್ತಿ ಆಗಲಿಲ್ಲ. ನಿನ್ನದು ದೊಡ್ಡ ಕುಟುಂಬ ಇದ್ದಿತು. ಕುಟುಂಬದ ಭಾರವನ್ನು ಸರಿಯಾಗಿ ಹೊರಲು, ನಿನ್ನಿಂದ

ಸಾಧ್ಯವಾಗಲಿಲ್ಲ. ಆದುರಿಂದ ಅಸಮರ್ಥನಾದ ನಿನ್ನನ್ನು ನಿನ್ನ ಮಡದಿ, ಮಕ್ಕಳು ಕಾಡಿ ಪೀಡಿಸತೊಡಗಿದರು. ನೀನು ಸ್ವಭಾವದಿಂದ ದುಃಖ ಸಹಿಷ್ಣುಆಗಿದ್ದೆ ಆದರೂ ಪತ್ನೀ-ಪುತ್ರರ ಉಪಟಳ, ಉಪದ್ರವಗಳು ಅತಿಯಾಗಿ ಮಿತಿಮೀರಿದವು. ಆಗ ಅವರೊಡನೆ ನಿನಗೆ ಬಾಳಲಿಕ್ಕೂ, ಅವರ ಪೀಡೆಯನ್ನು ತಡೆಯಲಿಕ್ಕೂ ಆಗದೆ, ನೀನು ಮನೆಬಿಟ್ಟು ಗಹನವಾದ ಒಂದು ಗೊಂಡಾರಣ್ಯಕ್ಕೆ ಹೊರಟು ಹೋದೆ. ಅಲ್ಲಿ ನಿನಗೆ ಶಿಷ್ಯರಿಗೆ ಮಹಾವಿದ್ಯೆಯನ್ನು ಉಪದೇಶಿಸುತ್ತಲಿರುವ ಸೌಭರಿ ಋಷಿಗಳು ನಿನ್ನ ಕಣ್ಣಿಗೆಬಿದ್ದರು. ನೀನು ಆ ಮುನಿಗಳ ಮುಂದೆ ನಿನ್ನ ದಯನೀಯ ಪರಿಸ್ಥಿತಿಯನ್ನು ಅರಿಕೆಮಾಡಿಕೊಂಡೆ. 'ನಾನು ನಿರಲಸ ಬುದ್ಧಿಯಿಂದ ಕಷ್ಟಪಟ್ಟು, ಕುಟುಂಬ ಪೋಷಣೆ ಮಾಡುತ್ತಲಿದ್ದೆ. ಆದರೆ ನನ್ನ ಪರಿಮಿತವಾದ ಆದಾಯದಿಂದ ನನ್ನ ಮಡದಿ, ಮಕ್ಕಳು ತೃಪ್ತರಾಗದೆ, ನನ್ನನ್ನು ನಿಂದಿಸಿದರು. ವಾಗ್ಬಾಣಗಳಿಂದ ತಿವಿದರು. ಕುಹಕ, ಕಟಕಿ, ಅಪಹಾಸ, ಉಪಾಲಂಭನೆಗಳಿಂದ ನನ್ನನ್ನು ಅವಮಾನಿಸಿದರು. ಇಷ್ಟಾದರೂ ನನಗೆ ಆ ಪತ್ನೀಪುತ್ರ ವಿಷಯದಲ್ಲಿ ವೈರಾಗ್ಯ ಹುಟ್ಟಲಿಲ್ಲ. ಅವರ ಮೇಲೆ ನನಗೆ ಇನ್ನೂ ಸ್ನೇಹ ಇದೆ, ಮೋಹ ಇದೆ. ನನ್ನ ಮೇಲೆ ಮಾತ್ರ ಅವರಿಗೆ ಲವಲೇಶವೂ ಪ್ರೀತಿಯಿಲ್ಲ. ಇದಕ್ಕೆ ಕಾರಣವೇನು ? ಮತ್ತು ಅಷ್ಟದರಿದ್ರನಾದ ನಾನು ಹಸಿವು ಬಾಯಾರಿಕೆಗಳಿಂದ ಬಳಲುತ್ತಿದ್ದೇನೆ. ಬಿಸಿಲು, ಮಳೆ, ಗಾಳಿ, ಚಳಿ ಮೊದಲಾದವುಗಳನ್ನು ಸಹಿಸಿ, ಸಹಿಸಿ ನಾನು ಬಳಲಿ ಬೆಂಡಾಗಿದ್ದೇನೆ' ಈ ದುಃಖಸಾಗರದಿಂದ ಪಾರಾಗುವ ಒಂದು ಉಪಾಯವನ್ನು ನನಗೆ ಹೇಳಿರಿ.'

**ಸೌಭರಿ** :- ನಿನಗೆ ಗಣೇಶ್ವರನ ವ್ರತದ ವಿಧಾನವನ್ನು ಹೇಳುತ್ತೇನೆ. ಹಿಂದೆ ಚತುರ್ಮುಖ ಬ್ರಹ್ಮ ದೇವನು ಒಂದು ನೂರು ವರುಷ ಉಗ್ರವಾದ ತಪಸ್ಸನ್ನು ಮಾಡಿ, ಮಹಾಗಣಪತಿಯನ್ನು ಪ್ರಸನ್ನೀಕರಿಸಿಕೊಂಡನು. ಅವನಿಗೆ ನಾನಾವಿಧವಾದ ದಿವ್ಯ ರತ್ನಗಳನ್ನು ಫಲಗಳನ್ನು ಅರ್ಪಿಸಿ ಪೂಜೆಮಾಡಿದನು. ತನ್ನ ಮನಸ್ಸಿನಿಂದ ಸೃಷ್ಟಿ ಮಾಡಿದ ಸಿದ್ಧಿ-ಬುದ್ಧಿ ಎಂಬ ಇಬ್ಬರು ದೇವಕನ್ಯೆಯರನ್ನು ಗಣೇಶನಿಗೆ ಉಪಾಯನವಾಗಿ ಕೊಟ್ಟನು. ಆ ಮಹಾಗಣಪತಿಯನ್ನು ಭಗವಾನ್ ನಾರಾಯಣನು ಈ ಮಹಾವ್ರತದ ಮೂಲಕ ಒಂದು ವರುಷಕಾಲ ಪೂಜಿಸಿ, ಜಗತ್ಪಾಲನ ಮಾಡುವ ಸಾಮರ್ಥ್ಯ ಹೊಂದಿದನು. ಅವನಿಂದ ಉಪದಿಷ್ಟವಾದ ಗಣೇಶಮೂಲಮಂತ್ರವನ್ನು ಬ್ರಹ್ಮದೇವನು ಪಡೆದು, ಸ್ವಲ್ಪವೂ ಆಯಾಸವಿಲ್ಲದೆ, ಬ್ರಹ್ಮಾಂಡ ಸೃಷ್ಟಿ ಮಾಡಿದನು. ಗಣೇಶನ ಮಹಿಮೆ ಇಷ್ಟು ಅತ್ಯದ್ಭುತವಾಗಿದೆ. ಗಣೇಶ ಮಹಾವ್ರತವನ್ನು ಶ್ರಾವಣ ಬಹುಳ ಚತುರ್ಥಿದಿನದಿಂದ ಆರಂಭಿಸಿ, ಭಾದ್ರಪದ ಶುದ್ಧ ಚತುರ್ಥಿಯವರೆಗೆ ಭಕ್ತಿಯಿಂದ ಆಚರಿಸಬೇಕು. ಮೊದಲು ಮಹಾಗಣಾಧಿಪತಿಗೆ ಹದಿನಾರು ವಿಧವಾದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. (೧) ಧ್ಯಾನ (೨) ಆವಾಹನ (೩) ಪಾದ್ಯ (೪) ಅರ್ಘ್ಯ (೫) ಆಚಮನೀಯ (೬) ಸ್ನಾನ (೭) ವಸ್ತ್ರ (೮) ಉಪವೀತ (೯) ಗಂಧ (೧೦) ಪುಷ್ಪ (೧೧) ಧೂಪ (೧೨) ದೀಪ (೧೩) ನಿವೇದನ (ನೈವೇದ್ಯ) (೧೪) ತಾಂಬೂಲ (೧೫) ಪ್ರದಕ್ಷಿಣಾ ನಮಸ್ಕಾರ (೧೬) ಪ್ರಾರ್ಥನಾ ಹೀಗೆ ಹದಿನಾರು ಬಗೆಯ ಉಪಚಾರಗಳಿಂದ ಗಣನಾಯಕನ ಪಾರ್ಥಿವ ಮೂರ್ತಿಯನ್ನು ಪೂಜಿಸಬೇಕು. ಅನಂತರ ಬ್ರಾಹ್ಮಣರಿಗೆ ಯಥಾಶಕ್ತಿ ಇಚ್ಛಾ ಭೋಜನವನ್ನು ಮಾಡಿಸಬೇಕು. ನೀನು ಭಕ್ತಿಯಿಂದ ಇದನ್ನೆಲ್ಲವನ್ನೂ ಆಚರಿಸು. ಇದರಿಂದ ನೀನು ಇಷ್ಟಾರ್ಥಗಳನ್ನು ಪಡೆಯುವೆ.

ಜನ್ಮಾಂತರದಲ್ಲಿ ದುರ್ಬಲ ಕ್ಷತ್ರಿಯನಾದ ನೀನು, ಸೌಭರಿ ಋಷಿಗಳ ಆದೇಶದಂತೆ ಈ ವಿನಾಯಕ ವ್ರತವನ್ನು, ಸೌಭರಿ ಋಷಿಗಳ ಆಶ್ರಮದಲ್ಲಿಯೇ ವಿಧಿಪೂರ್ವಕವಾಗಿ ಆಚರಿಸಿದಿ. ನೀನು ಆಶ್ರಮದಲ್ಲಿ ಆ ವ್ರತಾನುಷ್ಠಾನವನ್ನು ಮಾಡುತ್ತಿರುವಾಗಲೇ ಅತ್ತ ನಿನ್ನ ಮುರುಕು ಮನೆಯು ಮಹಾಗಣಪತಿಯ ಮಹಿಮಾ ವಿಶೇಷದಿಂದ, ದಿವ್ಯ ಭವ್ಯವಾದ ಅರಮನೆಯಾಗಿ ಮಾರ್ಪಟ್ಟಿತು. ದಾಸ-ದಾಸಿಯರಿಂದಲೂ, ವೇದ, ಪಾಠಕ ಘನಪಾಠಿಗಳಿಂದಲೂ ನಿನ್ನ ಮನೆ ತುಂಬಿಹೋಗಿತ್ತು. ನಿನ್ನ ಕೊಟ್ಟಿಗೆಯು ಗೋಧನದಿಂದ ತುಂಬಿತು. ನಿನ್ನ ಮಡದಿಯು ದಿವ್ಯವಸ್ತ್ರಾಭರಣಗಳನ್ನು ಉಟ್ಟು, ತೊಟ್ಟು, ಅನೇಕ ಅಲಂಕಾರಗಳಿಂದ ಪರಿಶೋಭಿಸಿದಳು. ನಿನ್ನ ಮಡದಿ ಮಕ್ಕಳು ನಿನ್ನ ದಾರಿಯನ್ನು ಕಾಯುತ್ತಾ, ಬಾಗಿಲಲ್ಲಿ ನಿಂತುಕೊಂಡಿದ್ದರು. ಮನೆಗೆ ಬಂದ ನಿನ್ನನ್ನು ಅವರೆಲ್ಲರೂ ಬಾಗಿಲಿನಲ್ಲಿಯೇ ಸ್ವಾಗತಿಸಿ, ಹೃತ್ಪೂರ್ವಕವಾಗಿ ಆದರಿಸಿದರು. ಈ ಮಹಾವೈಭವವೆಲ್ಲವೂ ಮಹಾಗಣಪತಿಯ ಅನುಗ್ರಹದ ಫಲ ಎಂಬುದನ್ನು ನೀನು ಅರಿತುಕೊಂಡೆ. ನೀನು ಹಿಂದಿನ ಜನ್ಮದಲ್ಲಿ ಮಾತ್ರವಲ್ಲದೆ, ಈ ಜನ್ಮದಲ್ಲೂ ಕೂಡ ಆ ಗಣೇಶ ವ್ರತದ ಪ್ರಭಾವದಿಂದ ಇಷ್ಟೆಲ್ಲ ರಾಜ್ಯ, ಸಂಪತ್ತು, ಭೋಗ, ಸೌಭಾಗ್ಯಗಳನ್ನು ಪಡೆದು, ಸಾಮ್ರಾಜ್ಯಾಧಿಕಾರವನ್ನು ಹೊಂದಿರುವೆ.

ಹೀಗೆ ಭೃಗುಮಹಾಋಷಿಯು ಜನ್ಮಾಂತರದ ತನ್ನ ಕಥೆಯನ್ನು ಹೇಳಿದ್ದನ್ನು ಕೇಳಿ, ಕರ್ದಮ ಮಹಾರಾಜನಿಗೆ ಅತ್ಯಂತ ಹರ್ಷವಾಯಿತು. ಭೃಗುಮುನಿಯು ಹೇಳಿದಂತೆ ವಿನಾಯಕ ವ್ರತವನ್ನು ಸಾಂಗೋಪಾಂಗವಾಗಿ, ಶ್ರದ್ಧಾ ಭಕ್ತಿಗಳಿಂದ ಆಚರಿಸಿದನು. ಈ ವ್ರತದ ಪ್ರಭಾವದಿಂದ ಕರ್ದಮ ಮಹಾರಾಜನು ವೈರಾಗ್ಯವನ್ನು ಹೊಂದಿ, ಆತ್ಮಜ್ಞಾನವನ್ನು ಪಡೆದನು. ಇಹಲೋಕದಲ್ಲಿ ಸಕಲ ಭೋಗ-ಭಾಗ್ಯಗಳನ್ನು ಯಥೇಷ್ಟವಾಗಿ ಅನುಭವಿಸಿದನು. ಅನಂತರ ತನ್ನ ಮಕ್ಕಳಿಗೆ ರಾಜ್ಯಾಡಳಿತ ಸೂತ್ರ ಕೊಟ್ಟು, ಮಹಾಗಣಪತಿಯ ಜಪತಪೋನುಷ್ಠಾನ ತತ್ಪರನಾಗಿ ಅನನ್ಯ ಲಭ್ಯವಾದ ಮಹಾಗಣಪತಿಯ ಪರಂಧಾಮವನ್ನು ಹೊಂದಿದನು. ಪೂರ್ವಕಾಲದಲ್ಲಿ ನಳಮಹಾರಾಜನೂ, ಇಂದುಮತಿಯೂ, ಚಂದ್ರಾಂಗದ ರಾಜನೂ ಈ ಮಹಾವ್ರತದ ಅನುಷ್ಠಾನದಿಂದ ಸಕಲೈಶ್ವರ್ಯಗಳನ್ನೂ, ಸಕಲೇಷ್ಟಗಳನ್ನೂ ಹೊಂದಿ, ಅಂತ್ಯದಲ್ಲಿ ಗಣೇಶ ಸಾನಿಧ್ಯವನ್ನು ಪಡೆದರು.

**ಹಿಮವಂತ** :- ''ಪುತ್ರಿ, ಪಾರ್ವತಿ, ವಿನಾಯಕವ್ರತ ವಿಧಾನವನ್ನೂ, ಇತಿಹಾಸವನ್ನೂ ಮಹಾದೇವನು ಸ್ಕಂದನಿಗೆ ನಿರೂಪಿಸಿದಂತೆ ನಾನು ನಿನಗೆ ವಿವರಿಸಿರುವೆನು. ನೀನಾದರೂ ಕೂಡ ಮಗಳೇ, ಈ ವಿನಾಯಕ ವ್ರತವನ್ನು ಭಕ್ತಿಯಿಂದ ಆಚರಿಸು. ಈ ವ್ರತವನ್ನು ನೀನು ಆಚರಿಸಿದರೆ ಬೇಗನೇ ಪರಶಿವನ ಸಾನ್ನಿಧ್ಯವನ್ನು ಖಂಡಿತವಾಗಿಯೂ ಹೊಂದುವೆ.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಹಿಮವಂತ ಪಾರ್ವತಿ ಸಂವಾದ ಎಂಬ ಐವತ್ತೊಂದನೇ ಅಧ್ಯಾಯ ಮುಗಿದುದು*

—o—

**ಪಾರ್ವತಿ :-** ತಂದೆಯೇ, ಹಿಂದೆ ಈ ವಿನಾಯಕ ವ್ರತವನ್ನು ನಳಮಹಾರಾಜನು ಆಚರಿಸಿದನು ಎಂದು ಹೇಳಿದೆಯಲ್ಲವೇ ? ಆ ಚರಿತ್ರೆ ಏನು ? ಆ ನಳನು ಯಾರು ? ಅದನ್ನೆಲ್ಲವನ್ನೂ ವಿಸ್ತಾರವಾಗಿ ಹೇಳು.

**ಹಿಮವಂತ :-** ಮಗಳೇ, ಪೂರ್ವಕಾಲದಲ್ಲಿ ನಿಷಧ ದೇಶದಲ್ಲಿ ನಳಚಕ್ರವರ್ತಿ ಎಂಬ ಮಹಾರಾಜನು ಪರಮ ಪ್ರಖ್ಯಾತಿಯನ್ನು ಪಡೆದಿದ್ದನು. ಅತ್ಯಂತ ಸೌಂದರ್ಯ ಶಾಲಿನಿಯಾದ ದಮಯಂತಿ ಎಂಬ ರಮಣೀಮಣಿಯು ಅವನಿಗೆ ಸಹಧರ್ಮಿಣಿಯಾಗಿದ್ದಳು. ಪದ್ಮಹಸ್ತ ಎಂಬ ಓರ್ವ ಪ್ರತಿಭಾಶಾಲಿಯು ನಳನ ಮಂತ್ರಿಯಾಗಿದ್ದನು. ಒಂದು ದಿನ ಮಹಾರಾಜನು ತನ್ನ ಒಡ್ಡೋಲಗದಲ್ಲಿ ವಿರಾಜಮಾನನಾಗಿದ್ದಾಗ ಅಲ್ಲಿಗೆ ಮಹಾಮಹರ್ಷಿಗಳಾದ ಗೌತಮ ಮುನಿಗಳು ದಯಮಾಡಿಸಿದರು. ಅವರನ್ನು ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ, ಕೈ ಮುಗಿದು ಕೇಳಿದ, ''ಮುನಿಗಳೇ, ನನಗೆ ಈ ಜನ್ಮದಲ್ಲಿ ಅಧಿಕಾರ, ಐಶ್ವರ್ಯ, ಭೋಗ, ಭಾಗ್ಯ, ವೈಭವ ಎಲ್ಲವೂ ಪೂರ್ಣಪ್ರಮಾಣದಲ್ಲಿ ದೊರೆತಿವೆ. ಇಂಥಾ ಅಪಾರ ಐಶ್ವರ್ಯವು ನನಗೆ ಪ್ರಾಪ್ತವಾಗಲು ನಾನು ಹಿಂದೆ, ಯಾವ ಪುಣ್ಯವನ್ನು ಮಾಡಿದ್ದೆ ? ಮನುಷ್ಯಲೋಕ ದುರ್ಲಭವಾದ ಈ ಎಲ್ಲಾ ವಿಪುಲೈಶ್ವರ್ಯವು ನನ್ನ ಹಿಂದಿನ ಯಾವ ತಪೋನುಷ್ಠಾನದ ಫಲ ? ಅದನ್ನು ಹೇಳಿರಿ. ಹಿಂದಿನ ಜನ್ಮದಲ್ಲಿ ನಾನು ಏನು ಆಗಿದ್ದೆ ? ಯಾವ ಸುಕೃತ ವಿಶೇಷವನ್ನು ಮಾಡಿದ್ದೆ ? ಇದೆಲ್ಲವನ್ನೂ ದಯವಿಟ್ಟು ತಿಳಿಸಿರಿ.

**ಗೌತಮ :-** ಗೌಡ ದೇಶವನ್ನು ದಾಟಿದ ಬಳಿಕ ಪಿಪ್ಪಲ ಎಂಬ ಪ್ರಸಿದ್ಧ ಗ್ರಾಮ ಇದೆ. ಅಲ್ಲಿ ನೀನೊಬ್ಬ ದರಿದ್ರ ಕ್ಷತ್ರಿಯನಾಗಿ ಹುಟ್ಟಿದ್ದೆ. ನಿನ್ನ ಆಚಾರ, ವಿಚಾರ, ವ್ಯವಹಾರ ಜ್ಞಾನ, ಶೀಲ, ಯಾವುದರಲ್ಲಿಯೂ ದೋಷವಿರಲಿಲ್ಲ. ಆದರೂ ನಿನ್ನ ಹೆಂಡತಿ, ಮಕ್ಕಳು ಮತ್ತು ಮಿತ್ರರು, ಪರಿವಾರದವರು. 'ಆಲಸೀ' ಕುಟುಂಬದ ಭರಣವನ್ನು ಮಾಡಲು ಕೈಲಾಗದ ಕಡುಹೇಡಿ' ಎಂದು ಹೀಗಳೆದು ಹೀಯಾಳಿಸಿ ನಿನ್ನನ್ನು ಹಳಿಯುತ್ತಿದ್ದರು. ಅವರ ದುರುಕ್ತಿ ನಿರ್ಭರ್ಥನೆಗಳಿಂದ ನೊಂದುಹೋದ ನೀನು, ಮನೆ, ಮಾರು, ಮಡದಿ, ಮಕ್ಕಳು ಇವೆಲ್ಲವನ್ನೂ ತೊರೆದು, ಘೋರವಾದ ಒಂದು ಗೊಂಡಾರಣ್ಯವನ್ನು ಪ್ರವೇಶಿಸಿದೆ. ಆ ಅರಣ್ಯದಲ್ಲಿ ನೀನು ಬಳಲಿ ಬೆಂಡಾಗಿ, ಅಂಡಲೆಯುತ್ತಿರುವಾಗ, ನಿನ್ನ ಕಣ್ಣಿಗೆ ಕೌಶಿಕಮುನಿಯ ಆಶ್ರಮವು ಬಿದ್ದಿತು. ಪರಮದಯಾಶಾಲಿಯಾದ ಆ ಕೌಶಿಕಮುನಿಯು ನಿನ್ನನ್ನು ಸಂತೈಸಿ, ''ನಿನ್ನ ದುಃಖವೆಲ್ಲವೂ ನನಗೆ ತಿಳಿದಿದೆ. ನಿನ್ನ ಈ ದುಃಖ, ದೈನ್ಯ, ದಾರಿದ್ರ್ಯ, ದುರವಸ್ಥೆಗಳು ದೂರವಾಗಲು ನಾನೊಂದು ಉಪಾಯವನ್ನು ಹೇಳುತ್ತೇನೆ ಕೇಳು. ಮಹಾಗಣಪತಿಯ ವ್ರತವನ್ನು ಭಕ್ತಿಯಿಂದ ಒಂದು ತಿಂಗಳಕಾಲ ಆಚರಿಸು. ಮಣ್ಣಿನಿಂದ ಗಣಪತಿಯ ಮೂರ್ತಿಯನ್ನು ಮಾಡಿ. ವಿಧಿಪೂರ್ವಕವಾಗಿ ಪೂಜೆಯನ್ನು ಮಾಡು.'' ಹೀಗೆ ಹೇಳಿ ಕೌಶಿಕ ಮುನಿಯು ಆ ದರಿದ್ರ ಕ್ಷತ್ರಿಯನಿಗೆ ಪೂಜೆಯ ವಿಧಿ ವಿಧಾನಗಳನ್ನೆಲ್ಲ ವಿವರವಾಗಿ ಹೇಳಿಕೊಟ್ಟನು.

ಮತ್ತು ಮಹಾಗಣಪತಿಯ ನಿರ್ಗುಣ, ನಿರಾಕಾರ, ನಿರಂಜನ, ನಿತ್ಯಬುದ್ಧ ಮುಕ್ತರೂಪವಾದ ಪರಬ್ರಹ್ಮ ಸ್ವರೂಪವನ್ನು ತಿಳಿಸಿ ಹೇಳಿದನು.

ಕೌಶಿಕಮುನಿಯ ಉಪದೇಶದಂತೆ, ನಳಚಕ್ರವರ್ತಿಯೇ, ನೀನು ಶಾಸ್ತ್ರೋಕ್ತ ರೀತಿಯಿಂದ ಮಹಾಗಣಪತಿಯ ಮೃಣ್ಮಯ ಮೂರ್ತಿಯನ್ನು ನಿರ್ಮಾಣ ಮಾಡಿ, ವಿಧ್ಯುಕ್ತ ರೀತಿಯಿಂದ ಪೂಜೆಯನ್ನು ಮಾಡಿದೆ. ಆ ಜನ್ಮದಲ್ಲಿ ನೀನು ಮಾಡಿದ ಶ್ರದ್ಧಾಭಕ್ತಿಯುಕ್ತವಾದ ಶಾಸ್ತ್ರೋಕ್ತ ಮಹಾಗಣಪತಿ ಪೂಜೆಯಿಂದ ನೀನು ಜನ್ಮಾಂತರವನ್ನು ಪಡೆದು, ನಿಷಧ ದೇಶಕ್ಕೆ ಚಕ್ರವರ್ತಿಯಾಗಿ ಹುಟ್ಟಿ ಬಂದಿರುವೆ. ನಳ ಎಂಬ ನಿನ್ನ ಹೆಸರು ಮೂರುಲೋಕದಲ್ಲಿಯೂ ಪ್ರಸಿದ್ಧವಾಗಿದೆ.

**ಹಿಮವಂತ :-** ಹೀಗೆ ಹೇಳಿ ಗೌತಮ ಋಷಿಗಳು ತಮ್ಮ ಆಶ್ರಮಕ್ಕೆ ಹೊರಟುಹೋದ ಮೇಲೆ, ನಳ ಚಕ್ರವರ್ತಿಯು ಗೌತಮ ಮುನಿಗಳ ಆದೇಶದಂತೆ ಮಹಾಗಣಪತಿ ವ್ರತವನ್ನು ಭಕ್ತ್ಯುದ್ರೇಕದಿಂದ ಆಚರಿಸಿದನು. ಪೂರ್ವಜನ್ಮದಲ್ಲಿ ಮಾಡಿದ ವ್ರತದ ಪುಣ್ಯದಿಂದ ಗೌತಮನಂತಹ ಮಹಾತ್ಮರು ತಾವಾಗಿಯೇ ರಾಜನಿದ್ದಲ್ಲಿಗೆ ಬಂದು ಗಣೇಶವ್ರತವನ್ನು ಉಪದೇಶವಿತ್ತರು. ಅವರಿಂದ ಉಪದೇಶ ಪಡೆದು ಗಣೇಶವ್ರತಾನುಷ್ಠಾನ ಮಾಡಿ, ನಳಮಹಾರಾಜನು ಕೃತಕೃತ್ಯನಾದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಐವತ್ತೆರಡನೇ ಅಧ್ಯಾಯ ಮುಗಿದುದು*



## ಚಂದ್ರಾಂಗದ ಉಪಾಖ್ಯಾನ

ಅಧ್ಯಾಯ - ೫೩

**ಹಿಮವಂತ :-** ಪಾರ್ವತಿಯೇ, ಚಂದ್ರಾಂಗದ ಎಂಬ ಒಬ್ಬ ರಾಜನು ತನ್ನ ಮಡದಿಯಾದ ಇಂದುಮತಿ ದೇವಿಯಿಂದ ಕೂಡಿಕೊಂಡು ಈ ವಿನಾಯಕ ವ್ರತವನ್ನು ಭಕ್ತಿಯಿಂದ ಆಚರಿಸಿದನು. ಅವನ ಚರಿತ್ರವನ್ನು ಹೇಳುತ್ತೇನೆ ಕೇಳು.

ಮಾಲವ ದೇಶದಲ್ಲಿ ಕರಣ ಎಂಬ ಒಂದು ಪಟ್ಟಣವಿದ್ದಿತು. ಅಲ್ಲಿ ಚಿತ್ರಾಂಗದ ಎಂಬ ಪರಮ ಪರಾಕ್ರಮಿಯಾದ ರಾಜನು ಪ್ರಸಿದ್ಧನಾಗಿ ಶಾಸನವನ್ನು ಮಾಡುತ್ತಲಿದ್ದನು. ಅವನಿಗೆ ರೂಪಸಂಪನ್ನಳೂ, ಶೀಲಸಂಪನ್ನಳೂ, ಪರಮಪತಿವ್ರತೆಯೂ ಆದ ಇಂದುಮತಿಯೆಂಬ ರಮಣೀಮಣಿಯಿದ್ದಳು. ಆ ಮಹಾರಾಜನು ಪರಮ ಧರ್ಮಿಷ್ಠನಾದರೂ, ಅವನಿಗೆ ಬೇಟೆಯಾಡುವ ಹವ್ಯಾಸ, ವ್ಯಸನವಾಗಿ ಅಂಟಿಕೊಂಡಿತ್ತು. ಅವನು ಒಂದು ದಿನ ಘೋರವಾದ ಅರಣ್ಯದಲ್ಲಿ ಬೇಟೆಯಾಡುವ ಉದ್ದೇಶದಿಂದ ಪ್ರವೇಶ ಮಾಡಿದನು. ವಾಯುವೇಗದಿಂದ ಓಡುವ ಕುದುರೆಯನ್ನೇರಿಕೊಂಡು, ಅನೇಕ ಹೆಬ್ಬುಲಿಗಳನ್ನು, ಕಾಡುಹಂದಿ, ಕಾಡಾನೆಗಳನ್ನು ಬೇಟೆಯಾಡುತ್ತಾ ತನ್ನ ವೀರಮಿತ್ರರಿಂದಲೂ, ಅಮಾತ್ಯರಿಂದಲೂ, ಸೇವಕರಿಂದಲೂ ಕೂಡಿಕೊಂಡು ಅನೇಕ ಕ್ರೂರ ಶ್ವಾಪದಗಳನ್ನು ಕೊಂದು ಹಾಕಿದನು. ಅಕಸ್ಮಾತ್ತಾಗಿ ಆ ರಾಜ ಪರಿವಾರದವರು, ಅದೇ ಏಕಾಂತ ವನಾಂತ ಪ್ರಾಂತದಲ್ಲಿ ನಿರಂತರವಾಗಿ ನೆಲೆಸಿನಿಂತ ರಾಕ್ಷಸರ ಕಣ್ಣಿಗೆ ಬಿದ್ದರು. ಆ ಎಲ್ಲ ರಾಕ್ಷಸರು ಘೋರಾಕಾರದಿಂದ ಭೀಕರರಾಗಿ ತೋರುತ್ತಿದ್ದರು.

ಅವರೆಲ್ಲರೂ ಮಹಾಬಲಿಷ್ಠರೂ, ದರ್ಪಿಷ್ಠರೂ, ದುಷ್ಟರೂ ಆಗಿದ್ದರು. ಆ ರಾಕ್ಷಸರನ್ನು ಕಂಡಕೂಡಲೇ ರಾಜನ ಮಿತ್ರಪರಿವಾರದವರು, ಸೇವಕವರ್ಗದವರೂ ದಿಕ್ಕಾಪಾಲಾಗಿ ಓಡಿಹೋದರು. ಕೆಲವರು ಮೂರ್ಛೆಹೊಂದಿ ನೆಲದ ಮೇಲೆ ಬಿದ್ದರು.

ಆ ರಾಕ್ಷಸರ ಗುಂಪಿನಲ್ಲಿ ಕ್ರೂರಳಾದ ರಕ್ಕಸಿ ಒಬ್ಬಳಿದ್ದಳು. ಅವಳು ಚಾರುಚೆಲುವಿಕೆಯಿಂದ ಹೊಳೆಯುವ ಚಂದ್ರಾಂಗದನನ್ನು ನೋಡಿ ವಿಕಾರವಶಳಾದಳು. ಮಹಾರಾಜನ ಸರ್ವಾಂಗ ಸುಂದರವಾದ ದೇಹದ ನಿಲುವು, ಚೆಲುವುಗಳು ಆ ರಾಕ್ಷಸಿಯಲ್ಲಿ ಕಾಮವನ್ನು ಕೆರಳಿಸಿದವು. ಅವಳು ಭರದಿಂದ ಬಂದು ಚಂದ್ರಾಂಗದನನು ಗಟ್ಟಿಯಾಗಿ ಆಲಿಂಗಿಸಿಕೊಂಡಳು. ದುರ್ಗಂಧಮಯವಾದ ತನ್ನ ಕೋರೆಯಂತಹ ಹಲ್ಲುಗಳಿಂದ ಮಹಾರಾಜನ ಮೃದುಲ ಕಪೋಲಗಳನ್ನು ಚುಚ್ಚುತ್ತಾ ಬಾರಿ ಬಾರಿಗೂ ಚುಂಬಿಸಿದಳು. ಆ ರಾಕ್ಷಸಿಯು ರಾಜನ ಮಂತ್ರಿ ಪರಿವಾರದವರನ್ನೆಲ್ಲ ಗುಪ್ತಪ್ರದೇಶದಲ್ಲಿ ಇರಿಸಿಕೊಂಡು, ಸೇವಕರನ್ನೆಲ್ಲ ಒಬ್ಬೊಬ್ಬರನ್ನಾಗಿ ತಿನ್ನಲು ಆರಂಭಿಸಿದಳು. ಆಗ ಚಿತ್ರಾಂಗದರಾಜನು ಇದನ್ನೆಲ್ಲ ನೋಡಿ ದಿಙ್ಮೂಢನಾಗಿ ನಿಂತುಕೊಂಡನು. ಏನು ಮಾಡಬೇಕು ಎಂದು ತಿಳಿಯದೆ, ಯಾವುದೂ ಹೊಳೆಯದೆ ಅವನು ಅಲ್ಲಿಂದ ಪಲಾಯನ ಮಾಡಿದನು. ಆದರೂ ಅವನಿಗೆ ಅಂಜಿಕೆ, ಆ ರಾಕ್ಷಸಿ ಎಲ್ಲಿ ತನ್ನ ಬೆನ್ನಟ್ಟಿ ಬರುವಳೋ, ಎಲ್ಲಿ ತನ್ನನ್ನು ಹಿಡಿದುಕೊಳ್ಳುವಳೋ ಎಂದು, ಭಯಭ್ರಾಂತನಾಗಿ ಓಡುತ್ತಾ ಓಡುತ್ತಾ ದಾರಿಯಲ್ಲಿ ಕಂಡ ಒಂದು ಪುಷ್ಕರಣಿಯಲ್ಲಿ ಬಿದ್ದು ಬಿಟ್ಟನು. ರಾಜನ ಅದೃಷ್ಟವೂ ಒಳ್ಳೆಯದಿದ್ದಿತು. ರಾಜನ ಸೈನಿಕರನ್ನು ನುಂಗಿ ಹಾಕುವುದರಲ್ಲಿ ತೊಡಗಿದ್ದ ರಾಕ್ಷಸಿಯು, ರಾಜನು ಓಡಿಹೋದುದನ್ನೂ, ಪುಷ್ಕರಣಿಯ ನೀರಿನಲ್ಲಿ ಮುಳುಗಿದುದನ್ನೂ ಗಮನಿಸಲಿಲ್ಲ. ಆಗ ಆ ಕೊಳದಲ್ಲಿ ನಾಗಕನ್ನಿಕೆಯರು ಜಲಕ್ರೀಡೆಯಾಡುತ್ತಿದ್ದರು. ತರುಣ ರಾಜಕುಮಾರನೊಬ್ಬನು ತಾನಾಗಿ ಬಂದು ನೀರಿನಲ್ಲಿ ಬಿದ್ದುದನ್ನು ಕಂಡು, ಅವರು ಆ ರಾಜನನ್ನು ತಮ್ಮ ಪಾತಾಳಲೋಕಕ್ಕೆ ಕರೆದೊಯ್ದರು.

ತಮ್ಮ ನಾಗಲೋಕದಲ್ಲಿ ಆ ರಾಜನಿಗೆ ವಿವಿಧ ವಸ್ತ್ರಗಳನ್ನು, ತಮಗೆ ತೃಪ್ತಿಯಾಗುವಂತೆ ಉಡಿಸಿದರು. ಭೂಷಣಗಳನ್ನು ಇಡಿಸಿದರು. ತಮ್ಮ ಮನಸ್ಸಿಗೆ ಒಪ್ಪಿಗೆಯಾಗುವಂತ ಅಲಂಕಾರಗಳನ್ನು ತೊಡಿಸಿದರು. ನಾಗಕನ್ನಿಕೆಯರ ಆದರೋಪಚಾರಗಳಿಂದ ಮಹಾರಾಜ ಚೇತರಿಸಿಕೊಂಡ. ಸುತ್ತಲೂ ನೋಡಿದ. ಸುತ್ತಮುತ್ತ ಚೆಲುವಿನ ಚಿಟ್ಟೆಗಳಂತಿದ್ದ ನಾಗವೇಣಿಯರು ನಿಂತಿದ್ದರು. ಅವರೆಲ್ಲರೂ ರಾಜನಿಗೆ ಕೌತುಕದಿಂದ ಪ್ರಶ್ನೆ ಮಾಡಿದರು.

''ನೀನು ಯಾರು ? ನಿನ್ನ ಹೆಸರೇನು ? ಎಲ್ಲಿಂದ ಬಂದಿರುವೆ ? ಸತ್ಯ ಸಂಗತಿಯನ್ನು ನಮಗೆ ತಿಳಿಸು.'' ಆಗ ರಾಜನು ಅವರಿಗೆ ಹೇಳಿದ. ''ಶುಭಾಂಗಿನಿಯರಾದ ಗಾಂಗನೆಯರೇ, ನನ್ನ ತಂದೆ ಹೇಮಾಂಗದ. ಅವನ ಮಗನಾದ ನಾನು ಚಂದ್ರಾಂಗದ. ಮಾಲವ ದೇಶದ ಕರಣ ಎಂಬ ಪಟ್ಟಣವು ನನ್ನ ರಾಜಧಾನಿ. ರಾಕ್ಷಸಸ್ತ್ರೀಯಿಂದ ಉಂಟಾದ ಭಯದಿಂದ ನಾನು ಭ್ರಾಂತನಾಗಿ ಹೇಗಾದರೂ ಮಾಡಿ ಬದುಕಬೇಕೆಂದು ನಾನು ಮೇಲಿನ ತಿಳಿನೀರಿನ ಕೊಳದಲ್ಲಿ ಪ್ರವೇಶಿಸಿದೆ. ನೀವೆಲ್ಲರೂ ಸೇರಿ ನನ್ನನ್ನು ಇಲ್ಲಿಗೆ ಕರೆತಂದಿರಿ ನಾನು ಬೇಟೆಯಾಡುವುದರಲ್ಲಿ ನಿರತನಾದಾಗ ಅನಂತರ ನಾನು ಅಂಜಿ ಓಡಿಹೋಗಿ ಕೊಳದಲ್ಲಿ ಧುಮುಕಿದ ನಂತರ ಆ ರಾಕ್ಷಸಿಯು ನನ್ನ ಅನುಯಾಯಿಗಳನ್ನೆಲ್ಲ ಕೊಂದು, ತಿಂದು

ಹಾಕಿದಳು. ಆ ಸರೋವರದ ಪುಣ್ಯದಿಂದ ನಾನು ಮಾತ್ರ ಬದುಕಿ ಜೀವಂತ ಉಳಿದಿದ್ದೇನೆ'' ಎಂದ ತನ್ನ ಕತೆಯನ್ನೆಲ್ಲ ಹೇಳಿದ.

ಚಂದ್ರಾಂಗದನು ತನ್ನ ವೃತ್ತಾಂತವನ್ನೆಲ್ಲ ಸತ್ಯವಾಗಿ ಅರುಹಿದ್ದನ್ನು ಕೇಳಿ ನಾಗಕನ್ಯೆಯರು ನುಡಿದರು - ''ರಾಜೇಂದ್ರ, ದೈವವು ನಮಗೆ ಇದೊಂದು ಸುಯೋಗವನ್ನೇ ಒದಗಿಸಿದೆ. ನಿನಗೆ ಒದಗಿದ ವಿಪತ್ತಿಗಾಗಿ ನೀನು ಚಿಂತಿಸಬೇಡ. ನೀನು ನಮ್ಮೆಲ್ಲರನ್ನೂ ವಿವಾಹವಾಗು. ವಿಧಿಪೂರ್ವಕವಾಗಿ ಪತ್ನಿಯರನಾಗಿ ನಮ್ಮನ್ನು ಪರಿಗ್ರಹಿಸು. ಅದರಿಂದ ನಿನ್ನ ಮನೋವಾಂಛಿತಗಳೆಲ್ಲವೂ ಪೂರ್ಣವಾಗುವವು. ನಾಗಕನ್ಯೆಯರಾದ ನಮಗೆ ಇತರ ಸಕಲ ವಿಧ ಸೌಕರ್ಯಗಳೂ ಸಾಕಷ್ಟು ಇವೆ. ಆದರೆ ನಾಗಕನ್ನಿಕೆಯರಾದ ನಮಗೆ ಮನುಷ್ಯಲೋಕ ಸುಲಭವಾದ ಕಾಮಭೋಗವು ಮಾತ್ರ ಅತ್ಯಂತ ದುರ್ಲಭವಾಗಿದೆ. ನೀನು ಅದನ್ನು ನಮಗೆ ಅನುಗ್ರಹಿಸು.''

ಆ ನಾಗವೇಣಿಯರ ಮಾತುಗಳನ್ನು ಕೇಳಿ ಚಂದ್ರಾಂಗದ ಮಹಾರಾಜನಿಗೆ ಬಹಳ ಕೆಡಕು ಎನಿಸಿತು. ಅತ್ಯಂತ ಶೀಲವಂತನೂ, ಗುಣವಂತನೂ, ವಿನಯವಂತನೂ ಆದ ಆ ಮಹಾರಾಜನು ಆ ನಾಗಲೋಕದ ನಾರಿಯರಿಗೆ ನಯ-ವಿನಯದಿಂದಲೇ ನುಡಿದ. ''ಮಾನನೀಯರಾದ ಮಾನಿನೀ ಮಣಿಗಳೇ, ನಾನು ಹೇಳುವುದನ್ನು ದಯವಿಟ್ಟು ಕೇಳಿರಿ. ನಾನು ಏಕಪತ್ನೀ ವ್ರತಸ್ಥನಾಗಿದ್ದೇನೆ. ನನ್ನ ಧರ್ಮಪತ್ನಿಯಾದ ಇಂದುಮತಿಯನ್ನು ಬಿಟ್ಟು ಬೇರೆ ಯಾವ ಸ್ತ್ರೀಯರನ್ನೂ ನಾನು ಕಣ್ಣೆತ್ತಿ ಕೂಡಾ ನೋಡುವದಿಲ್ಲ. ನನ್ನ ಪತ್ನಿಯ ಹೊರತು ಉಳಿದೆಲ್ಲ ಪ್ರಮಿಳೆಯರು, ನನಗೆ ಮಾತೃಸ್ವರೂಪರು. ಓ ! ತಾಯಿಯರೇ, ಏಕಪತ್ನೀವ್ರತವನ್ನು ನಾನು ಹೇಗೆ ತ್ಯಜಿಸಲಿ ? ಚಂದ್ರವಂಶದಲ್ಲಿ ಜನಿಸಿರುವ ನಾನು ಧರ್ಮ ಮರ್ಯಾದೆ ಮೀರಿ ಹೇಗೆ ನಡೆಯಲಿ ? ನಮ್ಮ ಚಂದ್ರವಂಶದ ರಾಜರೆಲ್ಲರಿಗೂ ನಾಲ್ಕು ಮುಖ್ಯ ಧರ್ಮಗಳು ಇರುತ್ತವೆ. ವೇದಾಧ್ಯಯನ, ಯಜ್ಞ-ಯಾಗ, ಶರಣು ಬಂದವರ ಸಂರಕ್ಷಣಾ, ಶಾಸ್ತ್ರಶುದ್ಧ ಆಚರಣ - ಇವು ನಾಲ್ಕು ನಮ್ಮ ಮನೆತನದ ಮುಖ್ಯ ಕರ್ತವ್ಯ ಆಗಿರುತ್ತವೆ. ಮತ್ತು ಈ ಚಂದ್ರವಂಶದ ರಾಜರು ಎಂದೂ ಪರದ್ರವ್ಯವನ್ನು ಅಪಹರಿಸುವದಿಲ್ಲ. ಎಂದೂ ಪರದ್ರೋಹವನ್ನು ಎಸಗುವದಿಲ್ಲ. ಎಂದೂ ಪರಸ್ತ್ರೀಯರನ್ನು ಕಾಮಿಸುವದಿಲ್ಲ. ಎಂದೂ ಪರನಿಂದೆಯನ್ನು ಮಾಡುವದಿಲ್ಲ. ಇವು ನಾಲ್ಕು ನಮ್ಮ ವಂಶದ ಜನರಿಗೆ ವರ್ಜ್ಯವಾಗಿರುತ್ತವೆ. ನಾನು ಅದೇ ವಂಶದಲ್ಲಿ ಹುಟ್ಟಿದ ಬಳಿಕ, ಧರ್ಮದ ಈ ಲಕ್ಷ್ಮಣ ರೇಖೆಯನ್ನು ಹೇಗೆ ಮೀರಬಲ್ಲೆನು? ನೀವು ನನಗೆ ಧರ್ಮಭಗಿನಿಯರು ಆಗಿರುತ್ತೀರಿ. ಸೋದರಿಯರೇ, ನೀವು ನನ್ನಲ್ಲಿ ಪ್ರೀತಿ, ವಿಶ್ವಾಸಯಿರಿಸಿ, ನಾನು ಧರ್ಮಭ್ರಷ್ಟನಾಗದಿರುವಂತೆ ಸದವಕಾಶವನ್ನು ಕಲ್ಪಿಸಿಕೊಡಿರಿ ಎಂದು ಸೆರಗೊಡ್ಡಿ ಬೇಡುವೆನು.''

ಪ್ರಣಯಭಂಗದಿಂದ ಭಗ್ನಕಾಮರಾದಆ ನಾಗವೇಣಿಯರಿಗೆ ಮಹಾರಾಜನ ಧರ್ಮ, ನೀತಿಯ ಮಾತನ್ನು ಕೇಳಿ, ಸಿಟ್ಟು ಬಂದಿತು. ಅವರು ಅತಿಯಾಗಿ ಕಾಮವಿಹ್ವಲೆಯರಾಗಿದ್ದರು. ಆದುದರಿಂದ ಅವರು, ಅವನು ಹೇಳಿದುದರ ಯುಕ್ತಾಯುಕ್ತತೆಯನ್ನು ಸ್ವಲ್ಪವೂ ಗಮನಕ್ಕೆ ತಾರದೆ - ''ನೀನು ಬಹುದೀರ್ಘಕಾಲ ನಿನ್ನ ಪತ್ನಿಯಿಂದ ವಿಯುಕ್ತನಾಗಿ ಬಳಲು'' ಎಂದು ಶಾಪವನ್ನು ಕೊಟ್ಟರು. ಇಷ್ಟು ಶಾಪಕೊಟ್ಟರೂ, ಕಾಮಾಂಧರಾದ ಕಾಮಿನಿಯರಿಗೆ ಸಮಾಧಾನವಾಗಲಿಲ್ಲ. ಅವರು ಚಿತ್ರಾಂಗದನ ಮೋಹನೀಯ ಲಾವಣ್ಯ, ಕಾಂತಿಯುಕ್ತವಾದ ತಾರುಣ್ಯಗಳನ್ನು ನೋಡಿ, ಮುಗ್ಧರಾಗಿದ್ದರು. ಇವನ್ನು ಬಿಟ್ಟುಕೊಟ್ಟರೆ,

ಇವನು ತಮ್ಮಿಂದ ಬಹಳ ದೂರ ಹೋಗಿ ತಮಗೆ ಎಂದೂ ದೊರೆಯದಂತಾಗುತ್ತಾನೆ. ಇವನನ್ನು ಬಂಧನದಲ್ಲಿಟ್ಟಿದ್ದರೆ, ಇವನು ಇಂದಿಲ್ಲಾ ನಾಳೆಯಾದರೂ ಅಥವಾ ಮುಂದೆ ಎಂದಾದರೂ ಒಂದು ದಿನ ನಮ್ಮ ಮಾತಿಗೆ ಒಪ್ಪಬಹುದು. ನಮ್ಮ ಕಾಮನೆಗಳನ್ನು ಪೂರ್ಣಮಾಡಬಹುದು ಎಂದು ಭಾವಿಸಿ, ಆ ಚಿತ್ರಾಂಗದನನ್ನು ಹೆಡಮುರಿಗೆ ಕಟ್ಟಿ. ಅಲ್ಲಿಯೇ ತಮ್ಮ ನಾಗಲೋಕದಲ್ಲಿ ಒಂದು ಕಡೆ ಗುಪ್ತವಾಗಿ ಇರಿಸಿದರು.

ಇತ್ತ ರಾಕ್ಷಸಿಯು ತನ್ನ ಸುತ್ತಮುತ್ತ ಇದ್ದ ರಾಜನ ಪರಿವಾರದವರನ್ನು, ವೀರಸೈನಿಕರನ್ನೂ ಗಬಗಬ ತಿಂದು, ನುಂಗಿ ನೀರು ಕುಡಿದು, ಹಿಂದೆ ತಿರುಗಿ ನೋಡಿದಳು. ರಾಜನು ಕಾಣಲಿಲ್ಲ. ಆ ಕೊಳದಲ್ಲಿಯೇ ಇರಬಹುದೆಂದು ಅವನು ಹಾರಿಕೊಂಡ ಸರೋವರಕ್ಕೆ ಬಂದು ನೋಡಿದಳು. ಆ ಕೊಳದಲ್ಲಿ ಹೊಕ್ಕು ರಾಜನು ಎಲ್ಲಿಯೂ ಕಾಣದ್ದಕ್ಕಾಗಿ, ಏನಾದರೂ, ಎಲ್ಲಿದ್ದರೂ ಆ ರಾಜನನ್ನು ಕಂಡುಹಿಡಿಯಬೇಕೆಂದು ಆ ರಕ್ಕಸಿಯು ಆ ಸರೋವರದಲ್ಲಿದ್ದ ಅಪಾರವಾದ ಸಲಿಲವನ್ನೆಲ್ಲ ಸೆಳೆದು ಹೀರಿಬಿಟ್ಟಳು. ರಕ್ಕಸಿಯು ಕುಡಿದು ಕೊಳದ ಜಲವನ್ನೆಲ್ಲ ಹೀರುವಾಗ, ಅಲ್ಲಿದ್ದ ಜಲಚರ ಪ್ರಾಣಿಗಳೆಲ್ಲ ಅದರ ನೀರಿನೊಡನೆ ರಕ್ಕಸಿಯ ಹೊಟ್ಟೆಗೆ ಗ್ರಾಸವಾದವು. ಇಷ್ಟಾದರೂ ಆ ರಾಕ್ಷಸಿಗೆ ತೃಪ್ತಿಯಾಗಲಿಲ್ಲ. ದುರಾಶಾಗ್ರಸ್ತರ ಹಣೇಬರಹವೇ ಇಷ್ಟು.

ಇತ್ತ, ಚಂದ್ರಾಂಗದನ ಧರ್ಮಪತ್ನಿಯಾದ ಇಂದುಮತಿಯು ಇದಾವ ಸುದ್ಧಿಯೂ ಗೊತ್ತಾಗದೆ, ಅಂತಃಪುರದಲ್ಲಿ ಮಂಚದ ಮೇಲೆ ಕುಳಿತಿದ್ದಳು. ರಾಕ್ಷಸಿಯ ಗಿಳಂಕರಣದ ಪ್ರಕರಣದಿಂದ ಹೇಗೋ ಕಣ್ತಪ್ಪಿಸಿ ಉಳಿದುಕೊಂಡು ಬಂದ ಕೆಲವು ಸೈನಿಕರು ಇಂದುಮತಿ ರಾಣಿಗೆ, ನಡೆದ ಸಮಾಚಾರವನ್ನೆಲ್ಲ ತಿಳಿಸಿದರು. ಅವಳ ಪತಿ ಚಿತ್ರಾಂಗದನು ರಾಕ್ಷಸಿಯ ಭಯದಿಂದ ಸಂಭ್ರಾಂತನಾಗಿ ಸರೋವರದಲ್ಲಿ ಮುಳುಗಿ ಹೋದದ್ದನ್ನು ದುಃಖದಿಂದ ಮಹಾರಾಣಿಗೆ ತಿಳಿಸಿದರು. ಅದನ್ನು ಕೇಳಿದ ತಕ್ಷಣ ಮಹಾರಾಣಿಯು ಮೂರ್ಛಾಕ್ರಾಂತಳಾಗಿ ನೆಲದ ಮೇಲೆ ಉರುಳಿಬಿದ್ದಳು. ಅವಳು ತನ್ನ ಪತಿ ಸರೋವರದಲ್ಲಿ ಮುಳುಗಿ ಮರಣವನ್ನೇ ಹೊಂದಿದ್ದಾನೆಂದು ತಿಳಿದು, ಎದೆ ಎದೆ ಬಡಿದುಕೊಂಡು ರೋದನ ಮಾಡತೊಡಗಿದಳು. ''ಓ, ಪತಿಯೇ, ಪ್ರಿಯಮಾತನಾಡುವ ನನ್ನನ್ನು ಬಿಟ್ಟು ನೀನೆಲ್ಲಿಗೆ ಹೋದೆ? ನಿನ್ನನ್ನು ಬಿಟ್ಟು ನಾನು ಹೇಗೆ ಬದುಕಲಿ? ನಿನ್ನ ಹೊರತು ಇನ್ನು ಈ ಪ್ರಜಾಪಾಲನ ಕಾರ್ಯವನ್ನು ಯಾರು ಮಾಡುವರು? ಸೌಂದರ್ಯ, ಸೌಜನ್ಯ, ಸೌಶೀಲ್ಯ, ಪ್ರಾಣಿದಯಾ ಮೊದಲಾದ ಗುಣಗಳಿಗೆ ಖಣಿಯೂ, ಪ್ರತಾಪದ ನಿಧಿಯೂ, ಸೌಂದರ್ಯದ ಸಾಕಾರಮೂರ್ತಿಯೂ, ಆಗಿದ್ದ ನನ್ನ ಪತಿಯು ಸೂರ್ಯನಂತೆ ಪ್ರಕಾಶಿಸುತ್ತಿದ್ದ. ಇಂದು ಅಕಾಲದಲ್ಲಿ ಅವನು ಅಸ್ತಂಗತನಾದನೇ? ಸಮಸ್ತ ದಿಕ್ಕುಗಳು ಇಂದು ನನಗೆ ಶೂನ್ಯವಾಗಿವೆ.'' - ಹೀಗೆ ದೀನದೀನಳಾಗಿ ವಿಲಾಪಗೈಯುತ್ತ, ಆ ಇಂದುಮತಿಯು ಶೋಕಿಸುತ್ತಾ, ವಿಹ್ವಲಳಾಗಿ ಮೈಮೇಲೆ ಧರಿಸಿದ ಒಡವೆಗಳನ್ನೆಲ್ಲ ಕಿತ್ತು, ಕಿತ್ತು ದೂರದಲ್ಲಿ ಎಸೆದಳು. ಕೈಯಲ್ಲಿದ್ದ ಕಂಕಣಗಳನ್ನು ಒಡೆದು ಚೂರುಚೂರುಮಾಡಿ, ಹಾಕಿ ಪುನಃಮೂರ್ಛೆಯನ್ನು ಹೊಂದಿದಳು. ಆಗ ಅವಳು ಉನ್ಮತ್ತಳಂತಾಗಿದ್ದಳು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಚಂದ್ರಾಂಗದ ಉಪಾಖ್ಯಾನ ಎಂಬ ಐವತ್ತಮೂರನೇ ಅಧ್ಯಾಯ ಮುಗಿದುದು*

—o—

**ಹಿಮವಂತ :-** ರಾಜನಂದಿನಿ, ಕೇಳು. ರಾಜಮಹಿಷಿಯು ಮೂರ್ಛಿತಳಾಗಿ ಬಿದ್ದು, ಶೈತ್ಯೋಪಚಾರದ ನಿಮಿತ್ತ, ಎದ್ದು ಕುಳಿತ ಬಳಿಕ, ರಾಜಧಾನಿಯ ಕೆಲವು ವಯೋವೃದ್ಧರು ಮಹಾರಾಣಿಯನ್ನು ಬಗೆಬಗೆಯಾಗಿ ಸಂತೈಯಿಸಿದರು. ವೇದಾಂತ ಉಪದೇಶದ ಹಿತವಚನಗಳನ್ನು ಹೇಳಿದರು - "ತಾಯಿ, ಮೇಲಕ್ಕೇಳು, ಶೋಕವನ್ನು ತಾಳಿಕೋ, ನಿನ್ನ ಪುತ್ರನ ಯೋಗಕ್ಷೇಮದಲ್ಲಿ ಮನಸ್ಸನಿಡು. ಬಂಧುಜನರ ಕಣ್ಣೀರು, ಸತ್ತುಹೋದವನಿಗೆ ಮತ್ತಷ್ಟು ಹೆಚ್ಚು ಸಂಕಟ ಉಂಟುಮಾಡುವದೆಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಆದುದರಿಂದ ನೀನು ಕಣ್ಣೀರಿಡದೆ, ಮೃತನಾದ ನಿನ್ನ ಪತಿಗೆ ಹಿತವನ್ನು ಉಂಟುಮಾಡು. ಮಾನವರೆಲ್ಲರೂ ಜನನ-ಮರಣ ಪಾಶದಿಂದ ಬದ್ಧರಾಗಿದ್ದಾರೆ. ಮಾನವರಲ್ಲಿ ಸಾಯದೇ ಇರುವವನು ಒಬ್ಬನೂ ಇಲ್ಲ. ಈ ಜಗತ್ತಿನಲ್ಲಿ ಜನರು ಹಳೆಯ ಬಟ್ಟೆಯನ್ನು ಬಿಸುಟು, ಹೊಸಬಟ್ಟೆಯನ್ನು ಧರಿಸುವಂತೆ, ದೇಹಾಭಿಮಾನಿಯಾದ ಜೀವಾತ್ಮನು ಬೇರೆ ಒಂದು ಶರೀರವನ್ನು ತೆಗೆದುಕೊಳ್ಳುತ್ತಾನೆ. ನಿತ್ಯನಾದ, ಸತ್ಯನಾದ ಜೀವಾತ್ಮನಿಗೆ ಮರಣವೆಂದರೆ ದೇಹಾಂತರ ಪ್ರಾಪ್ತಿ. ಅದಕ್ಕಾಗಿ ಶೋಕವೇಕೆ ? ಈ ಚರಾಚರಾತ್ಮಕವಾದ ಪ್ರಪಂಚದಲ್ಲಿ ಚತುರ್ಮುಖ ಬ್ರಹ್ಮನನ್ನು ಒಳಗೊಂಡು ಗಿಡಬಳ್ಳಿಗಳವರೆಗೂ ಎಲ್ಲವೂ ನಶ್ವರ, ಅಶಾಶ್ವತ. ಅಥವಾ ಸ್ವಯಂಶೂರನಾದ ನಮ್ಮ ಮಹಾರಾಜನ ಸಹಾಯವನ್ನು ಹಿಂದೆ ಅನೇಕ ಸಲ ದೇವತೆಗಳು ಬಯಸಿದ್ದಾರೆ. ಈಗಲೂ ಅವರೇ ಅವನನ್ನು ತಮಗೆ ಜಯವನ್ನು ತಂದುಕೊಡಲು ಸ್ವರ್ಗಕ್ಕೆ ಕರೆದುಕೊಂಡು ಹೋಗಿರಬಹುದು. ಆ ದೇವತಾಕಾರ್ಯ ಮುಗಿದ ಬಳಿಕ ಅವನು ನಿಶ್ಚಿತವಾಗಿಯೂ ಇಲ್ಲಿಗೆ ಬರುವನು. ಇಷ್ಟಕ್ಕಾಗಿ ನೀನೇಕೆ ಇಷ್ಟು ದುಃಖಪಡುವೆ ?"

ಹಿರಿಯರ ಉಪದೇಶದಿಂದ ಇಂದುಮತಿಗೆ ಸಮಾಧಾನವಾಗದಿದ್ದರೂ, ಅವಳು, ಅವರ ಮಾತನ್ನು ಮನ್ನಿಸಿ, ಒಡನೆಯೇ ಮೇಲೆದ್ದು, ವಸ್ತ್ರದಿಂದ ಕಣ್ಣೀರನ್ನು ಒರೆಸಿಕೊಂಡಳು. ತನ್ನನು ಮಾತಾಡಿಸಲು ಬಂದ ಪೌರರನ್ನೆಲ್ಲ ಅವರವರ ಮನೆಗೆ ಕಳುಹಿಸಿದಳು. ಸೌಭಾಗ್ಯ ಚಿಹ್ನೆಗಳನ್ನು ತೆಗೆದುಹಾಕಿದಳು. ನಿದ್ದೆ, ನೀರು, ಆಹಾರ ವಿಹಾರ ಎಲ್ಲವನ್ನೂ ಸಂಪೂರ್ಣವಾಗಿ ತ್ಯಜಿಸಿದಳು. ಸೊರಗಿ ಕೃಶಳಾದಳು. ಅಳುತ್ತಾ, ಶೋಕಪಡುತ್ತಾ, ನಿಟ್ಟುಸಿರುಬಿಡುತ್ತಾ ಪದೇ ಪದೇ ಮೂರ್ಛೆಯನ್ನು ಹೊಂದುತ್ತಿದ್ದಳು.

ಹೀಗೆ ಹನ್ನೆರಡು ವರುಷ ಕಳೆದುಹೋದವು. ಆಗ ಅಕಸ್ಮಾತ್ತಾಗಿ ಒಂದು ದಿನ ನಾರದರು ಅಲ್ಲಿಗೆ ದಯಮಾಡಿಸಿದರು. ಅವರು ವಿಧವೆಯ ವೇಷದಿಂದ ವಿಹ್ವಲಳಾಗಿ ಮಹಾರಾಜನನ್ನು ನೆನೆದು, ಕಣ್ಣೀರಿನ ಕೋಡಿ ಹರಿಸುತ್ತಿದ್ದ ಮಹಾರಾಣಿಯನ್ನು ಕಂಡು, ವ್ಯಥಿತಚಿತ್ತರಾದರು. ಅವರ ಅಂತಃಕರಣ ಕರಗಿ, ಕಣ್ಣಿನಿಂದ ನೀರು ಧಾರಾಕಾರವಾಗಿ ಹರಿಯಿತು. ಅವರು ಮೊದಲು ಇಂದುಮತಿ ದೇವಿಗೆ, ಚಿತ್ರಾಂಗದ ಮಹಾರಾಜನ ಕ್ಷೇಮ ಸಮಾಚಾರವನ್ನು ತಿಳಿಸಿ, ರಾಣಿಯ ಉದ್ವೇಗವನ್ನು ತಡೆಗಟ್ಟುವದಕ್ಕಾಗಿ ನಿಜಾಂಶವನ್ನು ಹೇಳಿದರು.

**ನಾರದ** :- ಸೌಭಾಗ್ಯವತಿಯಾದ ಸಾಮ್ರಾಜ್ಞೆ, ನಿನ್ನ ಪ್ರೀತಿಯ ಪತಿಯು ಜೀವಂತನಾಗಿರುತ್ತಾನೆ. ಸುರಕ್ಷಿತನಾಗಿಯೂ ಇರುತ್ತಾನೆ. ನೀನು ಶೋಕವನ್ನು ಬಿಡು. ಕಾರಣಾಂತರದಿಂದ ಅವನು ಕೆಲವು ಕಾಲ ಯಾರ ದೃಷ್ಟಿಗೂ ಬೀಳವಂತಿಲ್ಲ. ಅವನಿಗೆ ಯಾವ ವಿಪತ್ತು ಸಂಭವಿಸಿಲ್ಲ. ಅವನಿಗಾಗಿ ನೀನು ವೃಥಾ ದುಃಖಿಸಿ, ನೊಂದು ಬೆಂದು ಹೋಗಬೇಡ. ಮಹಾರಾಣಿ ಮೊದಲು ನೀನು ಈ ಅಮಂಗಲ ವೇಷವನ್ನು ತೆಗೆದು ಬಿಸುಡು. ಸುಮಂಗಲೆಯರ ಆಭರಣಗಳನ್ನು, ವಸ್ತ್ರಗಳನ್ನು ಧರಿಸು. ಕೈಗಳಿಗೆ ಕಂಕಣ, ಹಣೆಗೆ ಕುಂಕುಮ, ಕಿವಿಗಳಲ್ಲಿ, ಕರ್ಣಭೂಷಣ, ಕಂಠದಲ್ಲಿ ಮಂಗಳಸೂತ್ರಗಳನ್ನು ಮೊದಲು ಧರಿಸು. ನಿನ್ನ ಸೌಮಂಗಲ್ಯಕ್ಕೆ ಯಾವ ಚ್ಯುತಿಯೂ ಉಂಟಾಗಿಲ್ಲ. ನೀನು ನನ್ನ ಮಾತಿನಲ್ಲಿ ವಿಶ್ವಾಸವಿಡು.''

ತ್ರಿಕಾಲದರ್ಶಿಯೂ, ಸತ್ಯವಾದಿಯೂ, ಪರಮಪೂಜ್ಯರೂ, ಲೋಕಹಿತೈಷಿಗಳೂ ಆದ ನಾರದರ ಮಾತಿನಲ್ಲಿ ಅವಳಿಗೆ ವಿಶ್ವಾಸವೆನಿಸಿತು. ತನ್ನ ಪತಿ ಬದುಕಿದ್ದಾನೆ ಎಂಬ ಸುದ್ದಿ ಕೇಳಿ ಅವಳು ಆನಂದತುಂದಿಲಳಾದಳು. ಅವರ ಸೂಚನೆಯಂತೆ, ಇಂದುಮತಿಯು ಕುಂಕುಮ, ಕಂಕಣ, ಕರ್ಣಾಭರಣ, ಮಂಗಳಸೂತ್ರಗಳನ್ನು ಧರಿಸಿದಳು. ಮೊದಲು ನಾರದರನ್ನು ಅನಂತರ ವಿದ್ವಾಂಸರಾದ ವಿಪ್ರೋತ್ತಮರನ್ನು ಕರೆದು ಪೂಜಿಸಿ, ಗೋ, ಭೂಮಿ, ಚಿನ್ನ, ರತ್ನ, ಮುತ್ತು ಮೊದಲಾದ ಅನರ್ಘ್ಯ ಪದಾರ್ಥಗಳನ್ನು ಸಂತೋಷದಿಂದ ದಾನಮಾಡಿದಳು. ಮನೆಮನೆಗೆ ಸಕ್ಕರೆ ಹಂಚಿಸಿದಳು. ಮಂಗಳವಾದ್ಯಗಳು ಭೋರ್ಗರೆಯವಂತೆ ಮಾಡಿದಳು.

ಅನಂತರ ಮಹಾರಾಣಿಯು ನಾರದರಿಗೆ ನಮಸ್ಕರಿಸಿ-''ಮಹಾತ್ಮರೇ, ನನ್ನ ಪ್ರಾಣಪದಕರಾದ ಪತಿರಾಜರು ಪ್ರಕೃತ ಎಲ್ಲಿ ಇರುವರು? ಎಂತಹ ಪರಿಸ್ಥಿತಿಯಲ್ಲಿ ಇರುವರು? ನನಗೆ ಅವರ ಸಂದರ್ಶನ ಹೇಗೆ ಲಭಿಸೀತು ? ನಾನು ಯಾವ ಕಠಿಣ ತಪಸ್ಸು, ದಾನ, ವ್ರತಗಳನ್ನು ಆಚರಿಸಿದರೆ ನನಗೆ ಅವರ ದರ್ಶನವಾಗುವದು ? ದಯವಿಟ್ಟು ಹೇಳಿರಿ.''

**ನಾರದ** :- ಮಹಾರಾಣಿ, ನೀನು ಮಹಾಗಣಪತಿಯ ವ್ರತವನ್ನು ಭಕ್ತಿಯಿಂದ ಆಚರಿಸು. ನಿನ್ನ ಕಷ್ಟಗಳೆಲ್ಲವೂ ಪರಿಹಾರವಾಗುವವು. ಚಿಂತಿಸಬೇಡ. ಶ್ರಾವಣ ಶುದ್ಧ ಚತುರ್ಥಿಯಿಂದ ಪ್ರಾರಂಭಿಸಿ, ಭಾದ್ರಪದ ಶುದ್ಧ ಚತುರ್ಥಿಯ ತಿಥಿಯವರೆಗೂ ಈ ವಿನಾಯಕ ವ್ರತವನ್ನು ನೀನು ಆಚರಿಸು. ಒಂದು ತಿಂಗಳು ಉಪವಾಸವಿದ್ದು, ಗೀತ, ವಾದ್ಯ, ನೃತ್ಯ, ಬ್ರಾಹ್ಮಣ ಭೋಜನಗಳ ಮೂಲಕ ಆ ವಿನಾಯಕನಿಗೆ ಸಂತೋಷ ಉಂಟುಮಾಡು. ನಿನ್ನ ಪತಿಯು ಪಾತಾಳಲೋಕದಲ್ಲಿ ಆ ನಾಗಕನ್ಯೆಯರ ಬಂಧನಕ್ಕೆ ಒಳಗಾಗಿ ಜೀವಂತನಾಗಿದ್ದಾನೆ. ಈಗ ನಾನು ನಿನಗೆ ಉಪದೇಶಿಸಿದ ವಿನಾಯಕ ವ್ರತವು ನಿನ್ನ ಪತಿಯನ್ನು ಬಂಧನದಿಂದ ಬಿಡಿಸಿ, ನಿನ್ನೊಡನೆ ಸೇರಿಸುವದು.'' ಇಷ್ಟು ಹೇಳಿ ನಾರದರು ಹೊರಟು ಹೋದರು. ಕೆಲವು ದಿನಗಳೊಳಗಾಗಿಯೇ ಶ್ರಾವಣಮಾಸವು ಬಂದಿತು. ಮಹಾರಾಣಿಯು ಶ್ರಾವಣ ಶುದ್ಧ ಚತುರ್ಥಿಯಿಂದ ಶುರುಮಾಡಿ, ಭಾದ್ರಪದ ಶುಕ್ಲ ಚತುರ್ಥಿಯವರೆಗೂ ನಾರದರು ಹೇಳಿದ ವಿಧಿವಿಧಾನಗಳಲ್ಲಿ ಒಂದಕ್ಕೂ ಚ್ಯುತಿ ಬರದಂತೆ ವಿಜೃಂಭಣೆಯಿಂದ ವಿನಾಯಕವ್ರತವನ್ನು ಆಚರಿಸಿದಳು. ದಿವ್ಯಗಂಧ, ದಿವ್ಯವಸ್ತ್ರ, ದಿವ್ಯಕುಸುಮ, ದಿವ್ಯಷಡ್ರಸೋಪೇತ ಭಕ್ಷ್ಯಭೋಜ್ಯಗಳನ್ನು ಭಕ್ತಿಯಿಂದ ಸಮರ್ಪಿಸಿದಳು. ಧೂಪ-ದೀಪ, ಪುಷ್ಪಾಂಜಲಿ, ಪ್ರದಕ್ಷಿಣೆ, ನಮಸ್ಕಾರ, ನಾಮಸ್ಮರಣೆ ಪ್ರಾರ್ಥನೆಗಳಿಂದ

ಪ್ರಭು ಗಣೇಶನನ್ನು ಸಂತೋಷಗೊಳಿಸಿದಳು. ಗೀತ, ವಾದ್ಯ, ನೃತ್ಯಗಳಿಂದ ದೇವೇಶನನ್ನು ತೃಪ್ತಿಪಡಿಸಿ, ಬ್ರಾಹ್ಮಣರಿಗೆ ಇಚ್ಛಾಭೋಜನದಿಂದ ಸಂತೋಷಪಡಿಸಿದಳು. ತಾನು ಮಾತ್ರ ಅರ್ಧ ಪಾವು ಮಾತ್ರ ಹಾಲನ್ನು ಕುಡಿದು, ಉತ್ತಮೋತ್ತಮ ಕಲ್ಪದಲ್ಲಿ ಈ ವಿನಾಯಕ ವ್ರತವನ್ನು ಆಚರಿಸಿದಳು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಇಂದುಮತಿ - ನಾರದ ಸಂವಾದ ಎಂಬ ಐವತ್ತನಾಲ್ಕನೇ ಅಧ್ಯಾಯ ಮುಗಿದುದು*



## ಗಣಪತಿವ್ರತದ ಮಹಾತ್ಮ್ಯೆ

ಅಧ್ಯಾಯ - ೫೫

**ಹಿಮವಂತ :-** ಮಹಾರಾಣಿಯಾದ ಇಂದುಮತಿ ದೇವಿಯು, ನಾರದರ ಉಪದೇಶದಂತೆ, ಮಹಾಗಣಪತಿ ವ್ರತವನ್ನು ಮಾಡಿ ಮುಗಿಸಿದಳು. ಗಣೇಶ ವ್ರತದ ಮಹಿಮೆಯು ಅತ್ಯದ್ಭುತವಾದುದು. ಆ ವ್ರತಾನುಷ್ಠಾನದ ಪುಣ್ಯಪ್ರಭಾವದಿಂದ, ಪಾತಾಳಲೋಕದಲ್ಲಿ ಚಿತ್ರಾಂಗದ ರಾಜನನ್ನು ಕಟ್ಟಿ ಕಾರಾಗೃಹ ಬಂಧನದಲ್ಲಿ ಇಟ್ಟ ನಾಗನಾರಿಯರ ಮನಸ್ಸು ಒಮ್ಮೆಲೇ ಪರಿವರ್ತನೆ ಹೊಂದಿತು. ತಾವು ಕಾಮಾತುರರಾಗಿ, ಸ್ವಾರ್ಥಸಾಧನೆಯ ದುರಾಸೆಯಿಂದ ಮಹಾರಾಜ ಚಿತ್ರಾಂಗದನನ್ನು ಹೆಡಮುರಿಗೆ ಹಾಕಿ ಕಟ್ಟಿ ಒಗೆದದ್ದು, ಬಂಧನದಲ್ಲಿ ಇರಿಸಿದ್ದು ತಪ್ಪು ಎನಿಸಿತು. ತಾವು ಮಹಾರಾಜನನ್ನು ಬಿಡುಗಡೆ ಮಾಡಿ ಬೇಗನೆ ಅವನ ರಾಜಧಾನಿಗೆ ಕಳಿಸದಿದ್ದರೆ ಅವನ ಸತೀಕುಲಶಿರೋಮಣಿ ಮಡದಿಯಾದ ಇಂದುಮತಿಯು ತಮಗೆ ಶಾಪಕೊಡಬಹುದೆಂಬ ಭಯವೂ ಅವರನ್ನು ಬಾಧಿಸತೊಡಗಿತು. ಕೂಡಲೇ ಅವರು ಚಿತ್ರಾಂಗದನನ್ನು ಬಂಧಿಸಿ ಇಟ್ಟ ಕಾರಾಗೃಹಕ್ಕೆ ಬಂದರು. ಅವನನ್ನು ಬಂಧನದಿಂದ ಬಿಡುಗಡೆ ಮಾಡಿದರು. ತಾವು ಅವನಿಂದ ಕಿತ್ತುಕೊಂಡ ವಸ್ತ್ರ, ಅಲಂಕಾರಗಳನ್ನೆಲ್ಲ ಅವನಿಗೆ ಮರಳಿಕೊಟ್ಟರು. ತಾವು ಎಸಗಿದ ಮಹಾಪರಾಧಕ್ಕಾಗಿ ತಮ್ಮನ್ನು ಮನ್ನಿಸಬೇಕೆಂದು ಅಂಗಲಾಚಿ ಬೇಡಿಕೊಂಡರು. ಪಾತಾಳಲೋಕದಲ್ಲಿ ತಮ್ಮ ಬಳಿ ಇರುವ ಅನರ್ಘ್ಯವಾದ ಮುತ್ತು, ರತ್ನದ ಆಭರಣಗಳನ್ನು ಕೊಟ್ಟು, ಚಿತ್ರಾಂಗದನನ್ನು ಸಂತೋಷಪಡಿಸಿದರು. ಮತ್ತು ಅವನನ್ನು ತಾವು ಸೆಳೆದುಕೊಂಡು ಬಂದ ಸರೋವರದಿಂದ ಮೇಲಕ್ಕೆ ತಂದುಬಿಟ್ಟರು. ಹಾಗೂ ಮನೋವೇಗವುಳ್ಳ ಕುದುರೆಯೊಂದನ್ನು ಕೊಟ್ಟರು. ಅವನ ರಾಜಧಾನಿಯಾದ ಕರಣಪುರದ ಸಮೀಪದಲ್ಲಿಯೇ ಇದ್ದ ಒಂದು ದೊಡ್ಡ ಸರೋವರದ ಮೂಲಕ ರಾಜನು ಮೇಲೆ ಎದ್ದು ಬಂದನು. ಆ ಕರಣಪುರಿಯ ಅನೇಕ ಜನನಾಗರೀಕರು ಸ್ನಾನ, ಬಟ್ಟೆ ಒಗೆಯಲಿಕ್ಕಾಗಿ ಅಲ್ಲಿಗೆ ಬಂದರು. ಅವರೆಲ್ಲರಿಗೂ ಚಿತ್ರಾಂಗದನ ಗುರುತು ಹತ್ತದೆ, ಈ ತೇಜಃಪುಂಜನಾದ ತರುಣ ಯುವಕನು ಯಾವನಿರಬಹುದು ಎಂದು ಸಂಶಯ ಉಂಟಾಯಿತು. ರಾಜನ ಮುಖದ ಮೇಲಿನ ರಾಜತೇಜ ಕುತೂಹಲಭರಿತರಾದ ಕಂಡು ಮತ್ತು ಕಳೆಶಾಂತಿಯನ್ನು ಕೆಲವರು ಅವನಿಗೆ ನಮಸ್ಕರಿಸಿ "ನೀನು ಯಾರು ?" ಎಂದು ಪ್ರಶ್ನೆ ಮಾಡಿದರು.

ಆಗ ಚಿತ್ರಾಂಗದನು "ನಾನು ಈ ಊರಿನ ಅರಸ ಚಿತ್ರಾಂಗದ. ನನ್ನ ಮಹಾರಾಣಿ ಇಂದುಮತಿ ದೇವಿಯು ಕ್ಷೇಮದಿಂದ ಇರುವಳೇ ?" ಎಂದು ಕೇಳಿದ. ಅವನ ಉತ್ತರವನ್ನು ಕೇಳಿ ಆ ನಾಗರಿಕರಿಗೆಲ್ಲ ಹರ್ಷವಾಗಿ ಅವರೆಲ್ಲರೂ ಅಲ್ಲಿಯೇ ಕುಣಿದಾಡಿದರು. ಕೆಲವರು ಬಂದು ಮಹಾರಾಜನನ್ನು ಬರಸೆಳೆದು ಬಿಗಿದಪ್ಪಿದರು. ಮತ್ತು ಅವನಿಗೆ ಹೇಳಿದರು. 'ಪ್ರಭು, ಮಹಾರಾಣಿಯವರು ಸ್ವಲ್ಪವೇಳೆಯ ಮುಂಚೆ ಸ್ನಾನ ಮಾಡಿ ಅರಮನೆಗೆ ತೆರಳಿದರು. ತಾವು ಸುರಕ್ಷಿತವಾಗಿ ಬೇಗನೇ ಮರಳಿ ಬರಬೇಕೆಂದು ಒಂದು ಮಹಾವ್ರತವನ್ನು ಕೈಗೊಂಡಿರುತ್ತಾರೆ. ಅದು ಬಹಳ ತೀಕ್ಷ್ಣವಾದ ವ್ರತ. ಮಹಾರಾಣಿಯು ಆಹಾರವನ್ನೇ ಸ್ವೀಕರಿಸುವುದಿಲ್ಲ. ಆದರಿಂದ ಅವರ ದೇಹವು ಸೊರಗಿ, ಕೊರಗಿ ಕೃಶವಾಗಿ ಹೋಗಿದೆ. ತಮ್ಮ ವಂಶದ ಕುಡಿಯಾದ ಪುತ್ರನ ಅಭಿವೃದ್ಧಿಯಲ್ಲಿ ದೃಷ್ಟಿಯಿರಿಸಿ ಜೀವಧಾರಣ ಮಾಡಿಕೊಂಡಿದ್ದಾರೆ" ಎಂದು ಹೇಳಿದರು.

ಅಷ್ಟರಲ್ಲಿ ಕೆಲವರು ಓಡುತ್ತಾ ಅರಮನೆಗೆ ಹೋಗಿ, ಮಹಾರಾಣಿಗೆ ಮಹಾರಾಜನು ಬಂದ ಸುದ್ದಿಯನ್ನು ತಿಳಿಸಿದರು. ಅದು ನಿಜವೋ, ಅಲ್ಲವೋ ಎಂದು ಅವಳು ಮೀನಮೇಷ ಮಾಡುತ್ತಿರುವಾಗ ಮತ್ತೆ ಕೆಲವರು ಆ ಪ್ರಿಯ ಸುದ್ದಿ ತಂದು ಬಿತ್ತರಿಸಿದರು. ಆಗ ಅವಳಿಗೆ ತನ್ನ ಪತಿ ಬಂದುದು ನಿಜವೆನಿಸಿ ಸುಖ-ದುಃಖ ಎರಡೂ ಉಮ್ಮಳಿಸಿ ಬಂದವು. ಆನಂದ ಸಾಗರದಲ್ಲಿ ಮುಳುಗಿದಳು. ಸಂತಸದ ಉದ್ವೇಗ ಕೊಂಚ ಕಡಿಮೆಯಾದ ಕೂಡಲೇ, ಅವಳು ರಾಜ್ಯದ ಮುಖ್ಯಮಂತ್ರಿಯ ನೇತೃತ್ವದಲ್ಲಿ ರಾಜನನ್ನು ಎದುರುಗೊಳ್ಳಲು ಸೈನ್ಯವನ್ನು ಕಳುಹಿಸಿದಳು. ಸಾರಣೆ, ಕಾರಣೆ, ಧ್ವಜ, ಪತಾಕೆಗಳಿಂದ ಪಟ್ಟಣವನ್ನು ಶೃಂಗರಿಸಲು ಆಜ್ಞೆ ಮಾಡಿದಳು. ಬ್ರಾಹ್ಮಣರಿಗೆ, ಭೂಮಿ, ಹಸು, ಹಿರಣ್ಯ, ಮುಂತಾದ ದಾನಗಳನ್ನು ಕೊಟ್ಟು, ಗಾನ, ವಾದ್ಯಗಳ ಮಂಗಳ ಧ್ವನಿಯೊಡನೆ, ಮಹಾರಾಜನನ್ನು ಎದುರುಗೊಳ್ಳಲು ಆ ಸರೋವರದ ಸಮೀಪಕ್ಕೆ ಬಂದಳು. ರಾಜ-ರಾಣಿಯರಿಗೆ ಹನ್ನೆರಡು ವರುಷಕಾಲ ಭೇಟಿಯೇ ಇರದಿದ್ದರಿಂದ ಪುನಃ ಸಂಧಿಸುವ ಸಂದರ್ಭದಲ್ಲಿ, ಸಮಾಚರಿಸಬೇಕಾದ ಶಾಸ್ತ್ರ ವಿಧಿಯನ್ನು ಪುರೋಹಿತರು ಮೊದಲು ನಡೆಯಿಸಿದರು. ಅನಂತರ ಮೊದಲು ಗಣೇಶನನ್ನು ಪೂಜಿಸಿ ಪುಣ್ಯಾಹವಾಚನವನ್ನು ಮಾಡಿ, ಶಂಕರನನ್ನು ಅರ್ಚಿಸಿ, ಚಿತ್ರಾಂಗದನು ಬ್ರಾಹ್ಮಣರಿಗೆ ದಾನ, ದಕ್ಷಿಣೆಗಳನ್ನು ನೀಡಿದನು. ಅರಿಷ್ಟ ಪರಿಹಾರಕ್ಕಾಗಿ ಒಂದು ಬಿಲ್ವದ ಹಣ್ಣನ್ನು ಒಡೆದು, ಬಿಸಾಡಿ, ಚಿತ್ರಾಂಗದನು ಮುಂದೆ ಬಂದು ತನ್ನ ಮಡದಿಯಾದ ಇಂದುಮತಿ ದೇವಿಯನ್ನು ನೋಡಿದನು. ಅವಳು ಹನ್ನೆರಡುವರ್ಷಕಾಲ ಪತಿವಿರಹ ದುಃಖದಿಂದ ಮರಗಿ, ಕೊರಗಿ, ಸೊರಗಿ ಒಂದೇ ಕಲೆಯಿಂದ ಕ್ಷೀಣಕಾಂತಿಯುಳ್ಳ ಚಂದ್ರನಂತೆ ಅತ್ಯಂತ ಕೃಶಳಾಗಿ ತೋರಿದಳು. ಆದರೂ ಸ್ವಾಭಾವಿಕ ಸೌಂದರ್ಯದಿಂದ ಆ ಕೃಶಾಂಗಿಯು ಮಹಾರಾಜನಿಗೆ ಅತ್ಯಂತ ಮನೋಹರಳಾಗಿಯೇ ಕಾಣಿಸಿದಳು.

ಪತಿವ್ರತಾ ಶಿರೋಮಣಿಯಾದ ಇಂದುಮತಿ ದೇವಿಯು ಪರಮ ಸಂಭ್ರಮದಿಂದ ಬೇರೆ ಸುವಾಸಿನೀ ಸ್ತ್ರೀಯರೊಂದಿಗೆ ರಾಜನಿಗೆ ಆರತಿ ಎತ್ತಿದಳು. ಅವನ ಮೇಲೆ ಅರಳುಗಳನ್ನು ತೂರಿದಳು. ಹೂವುಗಳನ್ನುಹಾರಿಸಿ ಪುಷ್ಪವೃಷ್ಟಿಯನ್ನು ಕರೆದಂತೆ ಮಾಡಿದಳು. ಪತಿಯನ್ನು ಕಂಡು ರಾಣಿಗೆ ಆನಂದದ ಉದ್ರೇಕವಾಯಿತು. ಕಣ್ತುಂಬ ಕಂಬನಿಗಳು ತುಂಬಿ ದೃಷ್ಟಿ ಮಸುಕಾಗಿ, ಇಬ್ಬರಿಗೂ ಪರಸ್ಪರ ಒಂದು ನಿಮಿಷ

ಕಾಣದಂತಾಯಿತು. ಮತ್ತೆ ತಮ್ಮ ಕೈಗಳಿಂದ ಕಣ್ಣುಗಳನ್ನುಜ್ಜಿಕೊಂಡು ಪರಸ್ಪರ ನೋಡಿದರು. ಅವರ ಕಣ್ಣುಗಳು ಪರಸ್ಪರ ಮಾತನಾಡಿಕೊಂಡವು. ಗದ್ಗದ ಕಂಠದಿಂದ ಅವರು ತೊದಲುತ್ತಾ ಮಾತನಾಡಿದರು. ತಮಗೆ ಒದಗಿದ ದೀರ್ಘದುಃಖವನ್ನೂ ಆ ವಿರಹಾವಸ್ಥೆಯಲ್ಲಿ ತಾವು ಪಟ್ಟ ಸಂಕಟವನ್ನೂ ಪರಸ್ಪರ ಹೇಳಿಕೊಂಡರು. ದುಃಖದ ಆವೇಗವು ಕಡಿಮೆಯಾದ ಬಳಿಕ ಒಬ್ಬರಿಗೊಬ್ಬರು ಸಮಾಧಾನ ಪಡಿಸಿಕೊಂಡರು.

ಮಹಾರಾಜನ ಮಂತ್ರಿ, ಸೇನಾಪತಿಗಳು ಅರಮನೆಯ ಪಟ್ಟದಾನೆಯ ಮೇಲೆ ಬಂಗಾರದ ಅಂಬಾರಿ ಹಾಕಿ, ಅದರಲ್ಲಿ ರಾಜದಂಪತಿಗಳನ್ನು ಕೂಡಿಸಿ ಮೆರವಣಿಗೆ ಮಾಡಿದರು. ಗಜಾರೂಢರಾದ ರಾಜರ ಅಂಬಾರಿಯ ಮೇಲೆ ಶ್ವೇತಛತ್ರವು ವಿರಾಜಿಸುತ್ತಿತ್ತು. ಆನೆಗೆ ನಾಲ್ಕು ಗಂಟೆಗಳನ್ನು ಕಟ್ಟಿದ್ದರು. ಪದಾತಿ ಸೈನ್ಯವು ಆನೆಯನ್ನು ಸುತ್ತುವರೆದಿತ್ತು. ಮದ್ದುಗುಂಡುಗಳ ಸೈನ್ಯದವರೂ, ಕುದುರೆ ಸೈನ್ಯದವರೂ, ರಥಾರೋಹಿಗಳೂ, ಬೇರೆ ಬೇರೆ ವೇಷಭೂಷಣಗಳನ್ನು ಧರಿಸಿ ಮೆರವಣಿಗೆಯ ಉಭಯ ಪಾರ್ಶ್ವಗಳಲ್ಲಿ ನಡೆದು ಬರುತ್ತಿದ್ದರು. ಮೆರವಣಿಗೆಯಲ್ಲಿ ಒಂದು ಲಕ್ಷ ಕುದುರೆಗಳಿದ್ದವು. ಎಲ್ಲಕ್ಕೂ ಮುಂದೆ ವಂದಿಮಾಗಧರು, ನಟನಟಿಯರು, ಗಾಯಕ, ನರ್ತಕಿಯರು ಸಂಭ್ರಮದಿಂದ ನಡೆದಿದ್ದರು. ಅರಮನೆಯ ಮುಂಭಾಗದಲ್ಲಿ ಮೆರವಣಿಗೆ ಮುಗಿದು, ಒಡ್ಡೋಲಗದಲ್ಲಿ ಸಿಂಹಾಸನದಲ್ಲಿ ಮಂಡಿಸಿದ ಮಹಾರಾಜನಿಗೆ ಮಂತ್ರಿಗಳು, ಪುರೋಹಿತರು, ಸೇನಾಧಿಪತಿಗಳು ಬಿನ್ನವತ್ತಳೆಗಳನ್ನು ಅರ್ಪಿಸಿದರು. ಸಾಮಂತರಾಜರು, ಸಿರಿವಂತರು, ಗಣ್ಯವ್ಯಕ್ತಿಗಳು ಅನರ್ಘ್ಯವಾದ ಮುತ್ತು ರತ್ನಾದಿಗಳ ಕಾಣಿಕೆಯನ್ನು ತಂದು ಅರ್ಪಿಸಿದರು. ಆಸ್ಥಾನ ಪಂಡಿತರು, ಪುರೋಹಿತರು ಮಹಾರಾಜನ ಅಭಿನಂದನ ಭಾಷಣವನ್ನು ಮಾಡಿ ಮಹಾಗಣಪತಿಯ ವಿಶೇಷ ಅನುಗ್ರಹದಿಂದ ರಾಜನಿಗೆ ದೀರ್ಘಾಯುಷ್ಯವನ್ನು ಕೋರಿದರು. ಆಗ ಮಹಾರಾಜ ಚಿತ್ರಾಂಗದನು ಅವರೆಲ್ಲರಿಗೂ ಪ್ರತಿವಂದನೆಗಳನ್ನು ಸಲ್ಲಿಸಿ, ಆಸ್ಥಾನ ವಿದ್ವಾಂಸರಿಗೂ, ಪುರೋಹಿತರಿಗೂ, ಸಾಮಂತರ ಅರಸರಿಗೂ, ಸರದಾರರಿಗೂ, ಅಧಿಕಾರಿಗಳಿಗೂ ಉಡುಗೊರೆಗಳನ್ನಿತ್ತು ಸನ್ಮಾನಿಸಿದನು. ಪ್ರಜಾಜನರಿಗೆಲ್ಲಾ ವಸ್ತ್ರ, ತಾಂಬೂಲಗಳನ್ನು ನೀಡಿದನು. ಅನಂತರ ಬ್ರಾಹ್ಮಣರಿಗೂ, ಬಡವರಿಗೂ, ದೀನದಲಿತರಿಗೂ ಸುಗ್ರಾಸ ಭೋಜನಮಾಡಿಸಿ, ಮಹಾರಾಣಿಯೊಡನೆ ತಾನೂ ಭೋಜನ ಮಾಡಿದನು.

ಮಹಾರಾಣಿಯು ತನಗೆ ಆಕಸ್ಮಿಕವಾಗಿ ಒದಗಿಬಂದ ಪತಿಯ ವಿರಹದಿಂದ ಕಂಗೆಟ್ಟು ಕುಳಿತಾಗ, ನಾರದರ ಉಪದೇಶದಂತೆ, ಗಣೇಶ ವ್ರತವನ್ನು ಮಾಡಿದುದಾಗಿಯೂ, ಅದರ ಪುಣ್ಯಪ್ರಭಾವದಿಂದ ತಮ್ಮಿಬ್ಬರ ಮಧುರಮಿಲನ ಆಗಿರುವದೆಂದೂ ತಿಳಿಸಿದಳು. ಅದನ್ನು ಕೇಳಿದ ಮಹಾರಾಜ ಚಿತ್ರಾಂಗದನು ಶ್ರಾವಣಮಾಸವು ಬಂದ ಕೂಡಲೇ ಚತುರ್ಥಿಯಿಂದ ಆರಂಭಿಸಿ, ಭಾದ್ರಪದ ಶುದ್ಧ ಚತುರ್ಥಿವರೆಗೆ ಸಿದ್ಧಿ ವಿನಾಯಕ ವ್ರತವನ್ನು ಮಡದಿಯೊಡನೆ ಮಹೋತ್ಸಾಹದಿಂದ ಮಹೋತ್ಸವವನ್ನಾಗಿ ಆಚರಿಸಿದನು.

ಹಿಮಗಿರಿ ನಂದಿನಿಯಾದ ಪಾರ್ವತಿಯು ತನ್ನ ತಂದೆ ಹಿಮವಂತನು ಹೇಳಿದ ಚಿತ್ರಾಂಗದ ಮತ್ತು ಇಂದುಮತಿಯರ ಪವಿತ್ರ ಚರಿತ್ರವನ್ನು ಕೇಳಿ ಅತ್ಯಂತ ಸಂತೋಷಗೊಂಡಳು. ತಾನೂ ಕೂಡ ಆ ವಿನಾಯಕ ವ್ರತವನ್ನು ಭಕ್ತಿಯಿಂದ ಆಚರಿಸಿದಳು.

ವಿಧಿಗೆ ಅನುಸಾರವಾಗಿ ಗಣೇಶನ ಮಣ್ಣಿನಮೂರ್ತಿಯನ್ನು ನಿರ್ಮಿಸಿದಳು. ವಿನಾಯಕ ಮೃತ್ತಿಕಾ ಮೂರ್ತಿಯ ಯಥಾಸಾಂಗ ಪೂಜೆಯನ್ನು ವಿಧಿಪೂರ್ವಕವಾಗಿ ನೆರವೇರಿಸಿದಳು. ಆ ವ್ರತಕಾಲದಲ್ಲಿ ಹಾಲನ್ನು ಮಾತ್ರ ಆಹಾರವಾಗಿ ತೆಗೆದುಕೊಂಡು ಯಾವಾಗಲೂ ಗಣೇಶನನ್ನೇ ಧ್ಯಾನಿಸುತ್ತಿದ್ದಳು.

ಕಠಿಣಾತ್ ಕಠಿಣತರವಾದ ವಿನಾಯಕನ ವ್ರತವನ್ನು ಶ್ರದ್ಧಾತಿಶಯದಿಂದ ಪಾರ್ವತಿಯು ಮಾಡಿದಂತೆಲ್ಲ, ತಪೋನಿರತನಾದ ಪರಮೇಶ್ವರನ ಮನಸ್ಸು ಕೊಂಚಕೊಂಚವಾಗಿ ಚಲಿಸಿ ಬಹಿರ್ಮುಖವಾಯಿತು. ಅವನು ಪಾರ್ವತಿಯನ್ನು ಹುಡುಕುತ್ತ ಅವಳು ಇದ್ದ ಆಶ್ರಮಕ್ಕೆ ಬಂದನು.

ಅಂದು ಭಾದ್ರಪದ ಶುದ್ಧ ಚತುರ್ಥೀ ತಿಥಿ. ಪಾರ್ವತಿ ದೇವಿಯ ವಿನಾಯಕ ವ್ರತದ ಸಮಾಪ್ತಿಯ ದಿನ. ಅದರ ಮುಕ್ತಾಯದ ಸಂದರ್ಭದಲ್ಲಿ ಪರಶಿವನು ಸಾಕ್ಷಾತ್ ಆಗಿ ಅವಳಿಗೆ ಪ್ರತ್ಯಕ್ಷ ಗೋಚರನಾದ. ಆ ಮಂಗಳ ಮುಹೂರ್ತದಲ್ಲಿ ವ್ರತಕರ್ಶಿತಳಾದ ಗಿರಿಜೆಯು ನಂದಿವಾಹನನಾದ ಚಂದ್ರಶೇಖರನನ್ನು ಸಂದರ್ಶಿಸಿದಳು. ಗಿರಿಜೆಯು ಥಟ್ಟನೆ ಎದ್ದು ಪತಿಪರಮೇಶ್ವರನ ಪಾದಕಮಲಗಳಿಗೆ ಪೊರಮಟ್ಟಳು. ಅವಳಿಗೆ ಅತ್ಯಂತ ಸಂತೋಷವಾಗಿತ್ತು. ಲೋಕಮಂಗಳಕರನಾದ ಆ ವೃಷಭಧ್ವಜನನ್ನು ಅವಳೂ ವಿದ್ಯುಕ್ತವಾಗಿ ಅರ್ಚಿಸಿದಳು. ಪ್ರೇಮ ವಿಹ್ವಲಳಾದ ಪಾರ್ವತಿ ದೇವಿಯು ಪ್ರಣಯಕೋಪವನ್ನು ನಟಿಸುತ್ತಾ ಆಕ್ಷೇಪಿಸಿದಳು.

**ಪಾರ್ವತಿ :-** "ನಾಥಾ, ಇದೇನು ? ನೀನು ನನ್ನನ್ನು ಬಿಟ್ಟು ಎಷ್ಟು ದಿನ ದೂರ ಹೊರಟು ಹೋಗಿದ್ದೆಯಲ್ಲಾ ! ನನ್ನನ್ನು ಸಂಪೂರ್ಣವಾಗಿ ಮರೆತು ಬಿಟ್ಟಿದ್ದೆಯಾ ! ನಿನ್ನ ವಿರಹದಲ್ಲಿ ಒಂದೊಂದು ಕ್ಷಣವೂ ನನಗೆ ಒಂದು ಒಂದು ಯುಗವಾದಂತಾಗಿತ್ತು. ನನ್ನ ತಂದೆಯಾದ ಹಿಮವಂತನು ಗಣೇಶನ ವ್ರತವನ್ನು ಉಪದೇಶಿಸದೇ ಇದಿದ್ದರೆ, ನಿನ್ನನ್ನು ಕಾಣುವ ಯೋಗವು ನನಗೆ ಇಷ್ಟು ಬೇಗ ಒದಗುತ್ತಿರಲಿಲ್ಲ. ಅಂತಃಕರಣಿಯಾದ ನನ್ನ ತಂದೆಯು ವಿನಾಯಕ ವ್ರತವನ್ನು ಉಪದೇಶಿಸಿದ. ನಾನದನ್ನು ಭಕ್ತಿಯಿಂದ ಆಚರಿಸಿದೆ. ಅದರ ಫಲವಾಗಿ ನಿನ್ನನ್ನು ಪಡೆದೆ. ನಿನ್ನ ದರ್ಶನವನ್ನು ಪಡೆದೆ, ಅದರ ಫಲವಾಗಿ ನಿನ್ನ ಆಶೀರ್ವಾದವನ್ನೂ ಪಡೆದೆ.

ಹೀಗೆ ಪಾರ್ವತಿ ಪರಮೇಶ್ವರರು ಮಾತನಾಡುತ್ತಾ ಕುಳಿತಾಗಲೇ ಹಿಮವಂತನು ಅಲ್ಲಿಗೆ ಬಂದನು. ಶಿವಸತಿಯರು ಇರುವುದನ್ನು ನೋಡಿ ಆ ಹಿಮಾಲಯ ಪರ್ವತರಾಜನಿಗೆ ಮತ್ತೊಮ್ಮೆ ಕನ್ಯಾದಾನ ಮಾಡೋಣವೆಂದು ಉತ್ಸಾಹ ಉಕ್ಕಿ ಬಂದಿತು. ಕೂಡಲೇ, ಅವನು ಮುಂದೆ ಬಂದು ತನ್ನ ಮಗಳ ಕೈಯನ್ನು ಶಿವನ ಕೈಯಲ್ಲಿಟ್ಟನು. ಆ ದೃಶ್ಯವು ಹಿಮವಂತನಿಗೆ ಮಾತ್ರವಲ್ಲ, ದೇವಾಧಿದೇವತೆಗಳಿಗೂ, ಮಾನವರಿಗೂ, ಆನಂದದಾಯಕವಾಗಿ ರೋಮಾಂಚಕಾರಕವಾಯಿತು. ಇಂಥ ಸನ್ನಿವೇಶವನ್ನು ಒದಗಿಸಿಕೊಟ್ಟದ್ದಕ್ಕಾಗಿ ದೇವತೆಗಳೂ, ಗಂಧರ್ವರೂ, ಗಣಪತಿಯನ್ನು ಭಕ್ತಿಯಿಂದ ಪೂಜಿಸಿದರು. ದಂಪತಿಗಳಾದ ಶಿವ-ಪಾರ್ವತಿಯರು ಒಂದುಗೂಡಿದ್ದಕ್ಕಾಗಿ ದೇವದುಂದುಭಿಗಳು ಮೊಳಗಿದವು. ಆಕಾಶದಿಂದ ಪುಷ್ಪವೃಷ್ಟಿಯಾಯಿತು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಐವತ್ತೈದನೇ ಅಧ್ಯಾಯ ಮುಗಿದುದು*

—o—

## ದೇವೇಂದ್ರ, ಶೂರಸೇನ ಸಂವಾದ

ಅಧ್ಯಾಯ - ೫೬

**ವೇದವ್ಯಾಸ :-** ಬ್ರಹ್ಮನೇ, ನೀನು ಹೇಳಿದ ಗಣೇಶನ ಉತ್ತಮವಾದ ಕಥೆಗಳನ್ನು ಕೇಳಿದೆ. ಆ ಸಚ್ಚರಿತ್ರೆಯನ್ನು ಮತ್ತೆ ಮತ್ತೆ ಕೇಳಬೇಕು ಎಂಬ ಆಸೆ ನನಗೆ. ವಿಘ್ನೇಶ ಕಥಾ ಚರಿತ್ರೆಯ ಕುತೂಹಲ ನನ್ನಲ್ಲಿ ವರ್ಧಿಸುತ್ತಿದೆ. ಆದುದರಿಂದ ಅತ್ಯುತ್ತಮವಾದ ಆ ಗಣಪತಿಯ ಲೀಲಾಕಥೆಗಳನ್ನು ವಿಸ್ತಾರವಾಗಿ ಹೇಳಿರಿ.

**ಬ್ರಹ್ಮ :-** ಶೂರಸೇನ ಮೊದಲಾದವರು ಅನುಭವಿಸಿದ ಗಜಾನನನ ಮತ್ತೊಂದು ಚರಿತ್ರೆಯನ್ನು ಹೇಳುತ್ತೇನೆ ಕೇಳು. ಆ ವಿಘ್ನೇಶವಾರ್ತೆಯು ಕುತೂಹಲಭರಿತವಾಗಿದೆ. ಭಾರತದ ಮಧ್ಯದೇಶದಲ್ಲಿ **'ಸಹಸ್ರ'** ಎಂಬ ಹೆಸರಿನ ಒಂದು ರಮ್ಯವಾದ ಪಟ್ಟಣವಿದೆ. ಅದರ ರಾಜ ಶೂರಸೇನ. ಮಹಾಬಲಿಷ್ಠ. ಮೇಲೆ ವೇದವೇದಾಂಗಗಳಲ್ಲಿ ಪಾರಂಗತ. ಅವನ ಗುಣಕ್ಕೆ ಲುಬ್ಧವಾಗಿ ಹಣ ಹೇರಳವಾಗಿ ಅವನಲ್ಲಿ ಶೇಖರಿತವಾಗಿತ್ತು. ದಾನಿಯಾದ ಆ ರಾಜನು ಹಣವನ್ನೆಲ್ಲ ದಾನ ನೀಡಿ ತನ್ನ ಐಸಿರಿಗೆ ಸಾರ್ಥಕ್ಯವನ್ನು ತಂದುಕೊಟ್ಟಿದ್ದ. ಅನೇಕ ಹೋಮ ಹವನಗಳಿಗೆ ಅವನು ಹೋತಾರ. ಪ್ರಜಾಜನರಿಗೆಲ್ಲ ಪಿತೃನಿರ್ವಿಶೇಷವಾಗಿ ಪಾತಾರ. ಅವನು ತನ್ನ ಶೌರ್ಯಪರಾಕ್ರಮದಿಂದ ಅಖಂಡ ಭೂಮಂಡಲವನ್ನೆಲ್ಲ ತನ್ನ ವಶದಲ್ಲಿ ಇರಿಸಿಕೊಂಡಿದ್ದ. ಅವನ ರಾಜಧಾನಿಯು ಇಂದ್ರನ ಅಮರಾವತಿಗಿಂತ ವಿಶೀಷ್ಟವಾದ ಶೋಭೆಯಿಂದ ಭೂಮಂಡಲಕ್ಕೆ ಭೂಷಣಪ್ರಾಯವಾಗಿತ್ತು.

ಅವನ ಮಡದಿ ಪುಣ್ಯಶೀಲಾ ಹೆಸರಿಗೆ ತಕ್ಕಂತೆ ಅವಳು ಪುಣ್ಯಶಾಲಿನಿ, ಸದ್ಗುಣಮಾಲಿನಿಯೂ ಆಗಿದ್ದಳು. ಯಾರು ಲೋಕದಲ್ಲಿಯೇ ಅವಳ ಸೌಂದರ್ಯಕ್ಕೆ ಸದೃಶವಾದ ರೂಪವತಿ ಹೆಣ್ಣು ಇರಲಿಲ್ಲ. ಅವಳ ಪಾತಿವ್ರತ್ಯ ಗುಣವನ್ನು ಕಂಡರೆ ಅರುಂಧತಿಗೂ ಅಸೂಯೆಯ ಆಗುತ್ತಿತ್ತು. ಅವಳಲ್ಲಿ ಮಾತ್ರ ಅಸೂಯೆಯ ಸೋಂಕು ಇರಲಿಲ್ಲ. ಅವಳು ಗುಣದಲ್ಲಿ ಅನಸೂಯೆಯೇ ಆಗಿದ್ದಳು.

ಆ ಮಹಾರಾಜನು ಮಂತ್ರಿ ಸೇನಾಪತಿಗಳಿಂದ ಕೂಡಿಕೊಂಡು ತನ್ನ ಒಡ್ಡೋಲಗದಲ್ಲಿ ಮಂಡಿಸಿದ್ದನು. ಆಗ ಮುಗಿಲಿನಲ್ಲಿ ಹಾರಾಡುವ ಒಂದು ವಿಮಾನವು ಅಲ್ಲಿಗೆ ಬಂದಿತು. ಅದು ಬೆಂಕಿಯಂತೆ ಹೊಳೆಯುತ್ತಿದ್ದು, ನೋಡುವವರ ಕಣ್ಣನ್ನು ಕುಕ್ಕುತ್ತಿತ್ತು. ಆ ರಾಜ ಸಭೆಯಲ್ಲಿ ಮಂತ್ರಿ ಮಹಾರಾಜ ಎಲ್ಲರೂ ಗಾಯಕಿಯರ ಸಂಗೀತಶ್ರವಣದಲ್ಲಿ ಆಸಕ್ತರಾಗಿದ್ದರು.

ಆಗ ಎಲ್ಲರೂ ನಭಸ್ಥಳದ ನಕ್ಷತ್ರವೇ ಇಳಿದು ಬಂದಂತಿರುವ ಆ ವಿಮಾನವನ್ನು ಕಂಡು ''ಇದು ಏನು ? ಇದು ಏನು ?'' ಎಂದು ಕೌತುಕಾಕ್ರಾಂತರಾದರು. ''ಅದು ಏನು ತಿಳಿದುಕೊಂಡು ಬನ್ನಿರಿ'' ಎಂದು ದೂತರನ್ನು ಕಳಿಸಿದರು. ಆ ರಾಜದೂತರಲ್ಲಿ ಒಬ್ಬ ವೈಶ್ಯನ ಮಗನು ಇದ್ದ. ಆ ವೈಶ್ಯಕುಮಾರ ಕುಷ್ಠರೋಗಿಷ್ಠ. ಆ ಕುಷ್ಠಿಯ ದೃಷ್ಟಿಪಾತದಿಂದ ಆ ಶ್ರೇಷ್ಠವಾದ ವಿಮಾನವು ನೆಲಕಚ್ಚಿತ್ತು.

ಅದನ್ನು ಕಣ್ಣಿನಿಂದ ನೋಡಿಬಂದ ಉಳಿದ ರಾಜದೂತರು ರಾಜನಿಗೆ ''ಮಹಾರಾಜ, ಇದೊಂದು ಅದ್ಭುತವಾದ ದೇವತಾವಿಮಾನ. ಅದರಲ್ಲಿ ಪುಣ್ಯಪುರುಷರಾದ ಅನೇಕ ದೇವತೆಗಳು ಕುಳಿತಿದ್ದಾರೆ. ಒಬ್ಬ ಕುಷ್ಠರೋಗಿಷ್ಠನ ದೃಷ್ಟಿಪಾತದಿಂದ ಅದು ಬಾನಿನಿಂದ ಭೂಮಿಗೆ ಬಿದ್ದಿದೆ.'' ಎಂದು ಹೇಳಿದರು.

ಇದನ್ನು ಕೇಳಿದಕೂಡಲೆ ಕುತೂಹಲ ವಶನಾದ ಶೂರಸೇನನು ಕುದುರೆಯ ಬೆನ್ನೇರಿ ಬಿದ್ದಿರುವ ವಿಮಾನದ ಬಳಿಗೆ ಹೋದ. ವಿಮಾನದಿಂದ ದೇವೇಂದ್ರ, ಮೊದಲಾದ ದೇವತೆಗಳು ಇಳಿದು ಕೆಳಗೆ ನಿಂತುಕೊಂಡಿದ್ದರು. ಮಹಾರಾಜನು ಪರಿವಾರದೊಂದಿಗೆ ಆ ಸುರಸಾರ್ವಭೌಮನಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿದ. ಮತ್ತು ಕೇಳಿದ. ''ಮಹಾಪ್ರಭು, ತಾವು ಸ್ವರ್ಗದಿಂದ ಎಲ್ಲಿಗೆ ಪ್ರಯಾಣ ಹೊರಟಿದ್ದೀರಿ ? ತಾವು ಬಂದದ್ದು ಸ್ವರ್ಗದಿಂದಲೋ ಅಥವಾ ಮತ್ತಾವುದಾದರೂ ಸ್ಥಾನದಿಂದಲೋ ? ತಮ್ಮ ಗಂತವ್ಯ ಯಾವುದು ? ದಯವಿಟ್ಟು ಹೇಳಿರಿ.''

ಆಗ ದೇವೇಂದ್ರನು ಶೂರಸೇನರಾಜನಿಗೆ ಹಿಂದೆ ನಾರದರಿಗೂ ತನಗೂ ನಡೆದ ಸಂಭಾಷಣೆಯನ್ನು ವಿವರಿಸಿದ. ಆಗ ನಾರದರು ದೇವೇಂದ್ರನನ್ನು ಕುರಿತು ಅತ್ಯಾಶ್ಚರ್ಯ ಕರವಾದ ಒಂದು ಸಂಗತಿಯನ್ನು ತಿಳಿಸಿದರು. ಅದನ್ನು ನಾನು ನಿನಗೆ ಹೇಳುತ್ತೇನೆ ಕೇಳು.

**ನಾರದ :-** ದೇವೇಂದ್ರ, ನನ್ನ ವಿಚಿತ್ರವಾದ ಅನುಭವವನ್ನು ನಿನಗೆ ಹೇಳುತ್ತೇನೆ. ಏಕಾಗ್ರಚಿತ್ತದಿಂದ ಆಲಿಸು. ನಾನು ತ್ರಿಲೋಕಸಂಚಾರಿ ಎಂಬುದು ನಿನಗೆ ತಿಳಿದೇ ಇದೆ. ಹಿಂದೆ ಒಮ್ಮೆ ನಾನು ಮರ್ತ್ಯಲೋಕದ ಸಂಚಾರವನ್ನು ಕೈಕೊಂಡಿದ್ದೆ. ಆಗ ಅಕಸ್ಮಾತ್ತಾಗಿ ನಾನು ಭೃಷುಂಡಿಮಹರ್ಷಿಗಳ ಆಶ್ರಮಕ್ಕೆ ಹೋದೆನು. ಆ ಭೃಷುಂಡಿ ಮುನಿಯು ಗಣೇಶನ ಏಕಾಂತಭಕ್ತ. ಅವನು ಹಗಲಿರುಳು ಗಣೇಶನ ಮೂಲಮಂತ್ರವನ್ನು ಜಪಿಸುತ್ತಿದ್ದ. ಅದರಿಂದ ಮಂತ್ರಸಿದ್ಧಿಯನ್ನೂ ಪಡೆದಿದ್ದ. ಗಣೇಶನ ನಿರಂತರವಾದ ಧ್ಯಾನೋಪಾಸನೆ ಮೂಲಮಂತ್ರಜಪದ ಪರಿಣಾಮವಾಗಿ ಅದರ ಪ್ರಭಾವದಿಂದ ಭೃಷುಂಡಿ ಮುನಿಗೆ ಗಣೇಶ ಸ್ವರೂಪ ಸಿದ್ಧಿಯೇ ಆಗಿತ್ತು ಸಾಕ್ಷಾತ್ ಗಣಪತಿ ಸ್ವರೂಪನೇ. ಆ ಭೃಷುಂಡಿ ಮಹರ್ಷಿಯನ್ನು ಕಂಡು ನಾನು ಕೌತುಕದ ಕೊನೆಯನ್ನು ಏರಿ ನಿಂತೆ. ನನ್ನನೇ ಆದ ಜನ್ಮದಲ್ಲಿ ಇದೂ ಒಂದು ಅತ್ಯಾಶ್ಚರ್ಯಕರವಾದ ಘಟನೆ. ನಾನು ನನ್ನ ಜನ್ಮದಲ್ಲಿಯೇ ಗಣಪತಿಯ ಸಾರೂಪ್ಯವನ್ನು ಹೊಂದಿದ ಅದ್ಭುತ ದೇವತಾವ್ಯಕ್ತಿಯನ್ನು ದೈವೀಶಕ್ತಿಯನ್ನು ಕಂಡಿಲ್ಲ. ನೀನು ಕೂಡ ಆ ದೇವಮುನಿಯ ದಿವ್ಯ ದರ್ಶನವನ್ನು ತೆಗೆದುಕೊಂಡು ಬಾ, ಎಂದು ನಾರದರು ಹೇಳಿದರು.

ಅವರ ಮಾತನ್ನು ಕೇಳಿ ನಾನು ಕೂಡ ಕುತುಹಲಾಕ್ರಾಂತನಾಗಿ ಭೂಲೋಕದಲ್ಲಿರುವ ಭೃಷುಂಡಿ ಮಹರ್ಷಿಯ ಆಶ್ರಮಕ್ಕೆ ಹೋಗಿದ್ದೆ. ಅಲ್ಲಿ ಅವರನ್ನು ಕಂಡು ಮಾತನಾಡಿಸಿ ಅವರ ಪೂಜೆಯನ್ನು ಮಾಡಿದೆ. ಅವರು ಕೂಡ ನನಗೆ ವಿಶೇಷ ಸತ್ಕಾರವನ್ನು ಮಾಡಿದರು. ಅದನ್ನು ಸ್ವೀಕರಿಸಿಕೊಂಡು ನಾನು ದೇವತಾಪರಿವಾರದೊಂದಿಗೆ ಮರಳಿ ಅಮರಾವತಿಗೆ ಹೊರಟಿದ್ದೆ. ಆ ವಿಮಾನವು ನಿನ್ನ ರಾಜಧಾನಿಯ ಸಮೀಪಕ್ಕೆ ಬಂದಾಗ ಮಹಾಪಾಪಿಷ್ಟನಾದ ಒಬ್ಬ ಕುಷ್ಠರೋಗಿಯ ಕಣ್ಣಿಗೆ ಬಿದ್ದಿತು. ಅದರಿಂದ ಕೂಡಲೇ ಆ ವಿಮಾನವು ನೆಲಕ್ಕೆ ಕುಸಿಯಿತು.'' ದೇವೇಂದ್ರನು ಹೇಳಿದ ಈ ಕೌತುಕದ ಕತೆಯನ್ನು ಕೇಳಿ ಶೂರಸೇನ ರಾಜನಿಗೆ ಇನ್ನೂ ಕುತೂಹಲ ಇಮ್ಮಡಿಸಿತು. ಆಗ ಅವನು ಕೈಮುಗಿದು ಆ ನಾಕನಾಥನಿಗೆ ಕೇಳಿಕೊಂಡ. ''ಪೂಜ್ಯನಾದ ಪುರಂದರನೇ, ಸಿದ್ಧಿವಿನಾಯಕನ ಸಾರೂಪ್ಯವನ್ನು ಹೊಂದಬೇಕಾದರೆ ಆ ಭೃಷುಂಡಿ ಮುನಿಯು ಎಂಥ ಘೋರ ತಪಸ್ಸನ್ನು ಆಚರಿಸಿದ ? ಅವನಂತೆ ಮತ್ತೆ ಬೇರೆ ಯಾರಿಗಾದರೂ ಆ ದೇವ ದೇವನ ಸ್ವರೂಪವನ್ನು ಸಾರೂಪ್ಯವನ್ನು ಹೊಂದಲು ಸಾಧ್ಯವೆ? ಇದನ್ನೆಲ್ಲಾ ನನಗೇ ಹೇಳಿರಿ ಎಂದು ಕೇಳಿಕೊಂಡ.

*ಇತಿ ಗಣೇಶ ಪುರಾಣ ಉಪಾಸನಾ ಖಂಡ ದೇವೇಂದ್ರ, ಶೂರಸೇನ ಸಂವಾದ ಎಂಬ ಐವತ್ತಾರನೇ ಅಧ್ಯಾಯ ಮುಗಿದುದು*

**ದೇವೇಂದ್ರ:-** ದಂಡಕಾರಣ್ಯದ ಮಧ್ಯಪ್ರದೇಶದಲ್ಲಿ ನಂದಾರ ಎಂಬ ಒಂದು ಗ್ರಾಮ. ಆ ಊರಿನಲ್ಲಿ ನಾಮ ಎಂಬ ಹೆಸರಿನ ಮೀನುಗಾರ. ಅವನು ಮಹಾದುಷ್ಟ. ಬಾಲ್ಯದಿಂದಲೇ ಅವನಿಗೆ ಕಳ್ಳತನದ ಚಟ. ತಾರುಣ್ಯದಲ್ಲಿ ಪರಸ್ತ್ರೀಸಂಗದ ವ್ಯಸನ. ಮಹಾಧೂರ್ತ, ಅತ್ಯಂತ ಸ್ವಾರ್ಥಿ ಆ ಮತ್ಸ್ಯಾಜೀವ. ಜನರ ಕಣ್ಣು ತಪ್ಪಿಸಿ ಒಮ್ಮೊಮ್ಮೆ ಕುಶಲತೆಯಿಂದ ಕಳ್ಳತನವನ್ನು ಮಾಡುತ್ತಿದ್ದ. ಚೌರ್ಯದ ಹಣದಿಂದ ಮದ್ಯವನ್ನು ಕುಡಿಯುತ್ತಿದ್ದ ಮತ್ತು ಜೂಜಾಟ ಆಡುತ್ತಿದ್ದ. ಕಂಡಕಂಡವರನ್ನೆಲ್ಲ ಹೊಡೆದು ಬಡೆದು ದರೋಡೆ ಮಾಡುತ್ತಿದ್ದ.

ಇವನ ದಾಳಿ ಹಾವಳಿಗಳನ್ನು ತಾಳಲಾರದೇ ಜನರು ರಾಜದೂತರ ಸಹಾಯದಿಂದ ಅವನನ್ನು ಹಿಡಿದರು. ಮೈಮುರಿ ಹೊಡೆದರು. ಊರು ಬಿಟ್ಟು ದೂರ ಓಡಿಸಿದರು.

ಅವನು ದಟ್ಟಡವಿಯನ್ನು ಸೇರಿದ. ಅಲ್ಲಿಯ ಕಾಡಿನ ಗೂಡಿನಲ್ಲಿ ಗುಟ್ಟಾಗಿ ಮಡದಿ ಮಕ್ಕಳೊಡನೆ ವಾಸಮಾಡಿದ. ಅಲ್ಲಿಯೂ ಅವನು ತನ್ನ ಕಳ್ಳತನದ ಧಂದೆಯನ್ನು ಯಥಾಪ್ರಕಾರ ಮುಂದುವರೆಸಿದ. ಅವನ ಚೌರ್ಯದೊಡನೆ ಧೈರ್ಯವು ಒಂದುಗೂಡಿದ್ದರಿಂದ ಶೌರ್ಯವೂ ಅವನಲ್ಲಿ ಸ್ವಾಭಾವಿಕವಾಗಿ ಇದ್ದುದರಿಂದ ಅವನ ಕಳ್ಳತನದ ಕಾರ್ಯ ನಿರಾತಂಕವಾಗಿ ಸಾಗಿತ್ತು. ಆ ಅಡವಿಯ ಮಾರ್ಗದಲ್ಲಿ ಕಂಡವರನ್ನೆಲ್ಲ ಹಿಡಿದು, ಹೊಡೆದು ಬಡಿದು ಅವರ ಹಣವನ್ನೆಲ್ಲ ದೋಚುತ್ತಿದ್ದ. ಬಟ್ಟೆ, ಬರೆ, ಧನ, ಕನಕ, ನಗ ನಾಣ್ಯ ಎಲ್ಲವನ್ನೂ ಬಾಚುತ್ತಿದ್ದ. ಇದರಿಂದ ಅವನಿಗೆ ಅಪಾರವಾದ ಸಂಪತ್ತು, ಅಪರಿಮಿತ ಐಶ್ವರ್ಯ ಪ್ರಾಪ್ತವಾಯಿತು. ಮಡದಿ ಮಕ್ಕಳ ಮೈತುಂಬ ಮುತ್ತು ರತ್ನಗಳ ಅಲಂಕಾರ ಆಭರಣಗಳನ್ನು ಇಡಿಸಿ ತೊಡಿಸಿ ಸಂತೋಷಪಟ್ಟ. ಕೊಲೆ ಅವನ ವೃತ್ತಿ. ಕಳ್ಳತನವೇ ಪ್ರವೃತ್ತಿ. ನಿರ್ದಯನಾಗಿ ಕತ್ತಿ, ಕಠಾರಿ, ಹಗ್ಗ, ದೊಣ್ಣೆ, ಬಿಲ್ಲು ಬಾಣಗಳಿಂದ ಜನರನ್ನು ಹಿಂಸಿಸಿ ಅವರಲ್ಲಿ ಇರುವ ವಸ್ತು ಒಡವೆಗಳನ್ನು, ಅಮೌಲ್ಯವಾದ ದ್ರವ್ಯಗಳನ್ನು ಅಪಹರಿಸುತ್ತಿದ್ದ.

ಹೀಗೆ ಅವನ ಚೌರ್ಯವೃತ್ತಿಯು ನಿರಾತಂಕವಾಗಿ ಸಾಗಿದಾಗ ಅವನಿಗೆ ಆ ಗೊಂಡಾರಣ್ಯದ ಮಧ್ಯದಲ್ಲಿ ಓರ್ವ ಪ್ರವಾಸಿಯು ಗೋಚರಿಸಿದ. ಅವನನ್ನು ಅವನ ಸರ್ವಸ್ವವನ್ನು ಅಪಹರಿಸಬೇಕೆಂದು ಈ ಪಾಪಿಯು ಹೊಂಚುಹಾಕಿದ. ಆದರೆ ಆ ಪ್ರವಾಸಿಯು ಸಮರ್ಥನಿದ್ದ. ಆದರೂ ಪ್ರಾಣಭೀತಿಯಿಂದ ಓಡತೊಡಗಿದ. ಈ ಕಳ್ಳಕದೀಮನು ಅವನನ್ನು ಬಿಡಬಾರದೆಂದು ಬೆನ್ನುಹತ್ತಿದ. ಅವನು ಮುಂದೆ ಮುಂದೆ, ಇವನು ಹಿಂದೆ ಹಿಂದೆ. ಆ ಅಡವಿಯಲ್ಲಿ ಇವರಿಬ್ಬರ ವೇಗದ ಓಟದ ಮೇಲಾಟವೇ ನಡೆಯಿತು. ವೇಗದಿಂದ ಓಡುತ್ತಿರುವಾಗ ಕಳ್ಳನು ಅಕಸ್ಮಾತ್ತಾಗಿ ಒಂದು ಕಲ್ಲನ್ನು ಎಡವಿ ಕೆಳಗೆ ಬಿದ್ದನು. ಮೆಲ್ಲಮೆಲ್ಲನೆ ಎದ್ದನು. ಆದರೆ ಅಷ್ಟರಲ್ಲಿ ಪ್ರವಾಸಿಯು ಮುಂದೆ ಓಡಿ ಪಾರಾಗಿದ್ದನು. ಚೋರನು ಸಾವರಿಸಿಕೊಂಡು ಮೆಲ್ಲಮೆಲ್ಲನೆ ಅಡವಿಯಲ್ಲಿ ಮುನ್ನಡೆದನು. ದಾರಿಯಲ್ಲಿ ಅವನಿಗೆ ಗಣೇಶತೀರ್ಥವೊಂದು ಗೋಚರಿಸಿತು. ಆ ಪವಿತ್ರವಾದ ತೀರ್ಥದಲ್ಲಿ

ಕಳ್ಳಕೈವರ್ತನು ಸ್ನಾನ ಮಾಡಿದನು. ಅನಂತರ ಅವನು ಮೆಲ್ಲನೆ ಮುಂದುವರೆದಾಗ ದಾರಿಯಲ್ಲಿ ಧ್ಯಾನಾರೂಢನಾಗಿ ಕುಳಿತ ಮುದ್ಗಲಮುನಿಯನ್ನು ನೋಡಿದನು. ಆ ಮಹಾಮುನಿಯು ಗಣಪತಿ ಮೂಲಮಂತ್ರವನ್ನು ಜಪಿಸುತ್ತ ಕುಳಿತುಕೊಂಡಿದ್ದನು. ಪಾಪಿಯಾದ ಕಳ್ಳನು ಆ ಮುದ್ಗಲಮುನಿಯನ್ನು ಕೊಲ್ಲಬೇಕೆಂದು ಖಡ್ಗಎತ್ತಿಕೊಂಡು ಮುನಿಯ ಬಳಿಗೆನುಗ್ಗಿ ಬಂದ. ಆಗೊಂದು ಚಮತ್ಕಾರ ನಡೆಯಿತು.

ನಾಮ ಎಂಬ ಹೆಸರಿನ 'ಆ ಕಳ್ಳನು ಕೈಯಲ್ಲಿ ಹಿಡಿದ ಶಸ್ತ್ರಾಸ್ತ್ರಗಳೆಲ್ಲವೂ ಕೆಳಗೆ ಬಿದ್ದವು. ಮುಷ್ಟಿಯಲ್ಲಿ ಗಟ್ಟಿಯಾಗಿ ಹಿಡಿದ ಖಡ್ಗವು ಕೂಡ ಕಳಚಿ ಕೆಳಗೆ ಬಿದ್ದಿತು. ಅವನ ಬುದ್ಧಿಯೂ ಬದಲಾವಣೆಯಾಯಿತು. ಅವನು ಸ್ತಬ್ಧನಾಗಿ ಭ್ರಾಂತನಾಗಿ ಹೊಡೆಯದೆ ಮುನಿಯನ್ನು ಬಡೆಯದೆ ನಿಶ್ಚೇಷ್ಟನಾಗಿ ನಿಂತುಕೊಂಡ.

ಅದನ್ನು ನೋಡಿ ಆ ಮುದ್ಗಲಮುನಿಯು ನಕ್ಕು "ಹೀಗೇಕೆ ಸ್ತಬ್ಧನಾಗಿ ನಿಂತುಕೊಂಡೆ ? ಕೈಯಲ್ಲಿರುವ ಶಸ್ತ್ರಾಸ್ತ್ರಗಳ ಏಕೆ ಕಳಚಿಬಿದ್ದವು ? ನಿನ್ನ ಮನಸ್ಸಿನಲ್ಲಿ ಏನು ಪರಿವರ್ತನೆಯಾಗಿದೆ ?" ಎಂದು ಕೇಳಿದನು. ಅದಕ್ಕೆ ಆ ನಾಮ ಕಳ್ಳನು ಕೈ ಮುಗಿದು "ಪೂಜ್ಯರೇ, ನಾನು ನಾಮ ಎಂಬ ದುಷ್ಟ ಕಳ್ಳ.ಚೌರ್ಯವೇ ನನ್ನ ವೃತ್ತಿ. ಕ್ರೌರ್ಯವೇ ನನ್ನ ಪ್ರವೃತ್ತಿ. ಇಂದು ನಾನು ಕಾಡಿನಲ್ಲಿ ಕಂಡ ಒಬ್ಬ ಬ್ರಾಹ್ಮಣ ಪಥಿಕನನ್ನು ಕೊಲ್ಲಬೇಕೆಂದು ಅಟ್ಟಿಸಿಕೊಂಡು ಬಂದೆ. ದಾರಿಯಲ್ಲಿ ಕಲ್ಲು ಎಡವಿ ಕೆಳಗೆ ಬಿದ್ದೆ. ಸಾವರಿಸಿಕೊಂಡು ಎದ್ದು ಸಮೀಪದಲ್ಲಿ ಇದ್ದ ತೀರ್ಥದಲ್ಲಿ ಸ್ನಾನಮಾಡಿದೆ. ಅದರಿಂದ ನನ್ನಲ್ಲಿದ್ದನೋವೆಲ್ಲ ಮಾಯವಾಯಿತು. ಮುಂದೆ ಬಂದು ತಮ್ಮನ್ನು ಕಂಡೆ. ಹೊಡೆಯಬೇಕೆಂದು ಶಸ್ತ್ರ ಎತ್ತಿದಾಗ ತಮ್ಮ ಪ್ರಭಾವದಿಂದ ಶಸ್ತ್ರಾಸ್ತ್ರಗಳು ಕಳಚಿಬಿದ್ದವು. ನಿಮ್ಮ ದರ್ಶನದಿಂದ ನನ್ನ ಮನಸ್ಸಿನಲ್ಲಿಯೂ ಪರಿವರ್ತನೆಯಾಯಿತು. ಹಿಂದೆ ನನಗೆ ಹೀಗೆ ಎಂದೂ ಆಗಿಲ್ಲ. ನನ್ನ ಕ್ರೂರಬುದ್ಧಿಯು ಕ್ರೌರ್ಯಚೌರ್ಯದಿಂದ ಎಂದೂ ವಿಮುಖವಾಗಿಲ್ಲ. ಆದರೆ ಇಂದು ಮಾತ್ರ ಈ ಪರಿವರ್ತನೆಯಾದದ್ದು ತಮ್ಮ ದರ್ಶನದ ಪ್ರಭಾವ. ನಾನು ಇನ್ನು ಮುಂದೆ ಎಂದೂ ಶಸ್ತ್ರಾಸ್ತ್ರ ಹಿಡಿಯಲಾರೆ. ಯಾರನ್ನೂ ಹೊಡೆಯಲಾರೆ. ತಾವು ನನ್ನನ್ನು ಅನುಗ್ರಹಿಸಿರಿ. ಉದ್ಧರಿಸಿರಿ.

ಮೀನುಗಾರನ ದೀನನುಡಿಯನ್ನು ಕೇಳಿ ಮುದ್ಗಲ ಮಹರ್ಷಿಗೆ ದಯೆವುಂಟಾಯಿತು. ಅವರು ಹಿಂದೆ ಕಳ್ಳನಾಗಿದ್ದ ಕೈವರ್ತನಿಗೆ **ಶ್ರೀ ಗಣೇಶಾಯ ನಮಃ** ಎಂಬ ಗಣೇಶನಾಮ ಮಂತ್ರವನ್ನು ಉಪದೇಶಿಸಿದರು. ಅನಂತರ ತಮ್ಮ ಕೈಯಲ್ಲಿ ಇರುವ ಒಂದು ಕಟ್ಟಿಗೆಯ ಕೋಲನ್ನು ನೆಲದ ಮೇಲೆ ನೆಟ್ಟು ಅವನಿಗೆ ಹೇಳಿದರು "ನಾಮ ನಾಮಕನಾದ ಕೈವರ್ತನೇ, ನಾನು ಇಲ್ಲಿ ನೆಟ್ಟ ಒಣಗಿದ ಕಟ್ಟಿಗೆಯ ಕೋಲು ಚಿಗುರುವವರೆಗೂ ನೀನು ಗಣೇಶಮಂತ್ರವನ್ನು ಜಪಿಸುತ್ತಾ ಇರು. ಈ ಮೂಲ ಮಂತ್ರಜಪಧ್ಯಾನವನ್ನು ಎಂದಿಗೂ ಯಾವ ಪ್ರಸಂಗದಲ್ಲಿಯೂ ಬಿಡಬೇಡ. ಏಕಾಗ್ರಚಿತ್ತದಿಂದ ಏಕಾಸನದಲ್ಲಿ ಕುಳಿತು ಏಕಾಂತಭಕ್ತಿಯಿಂದ ಗಣೇಶಮಂತ್ರವನ್ನು ಜಪಿಸು. ಪ್ರತಿದಿನ ಸಂಜೆಮುಂಜಾವಿನ ವೇಳೆಯಲ್ಲಿ ಈ ಕಟ್ಟಿಗೆಯ ಕೋಲಿನ ಬುಡದಲ್ಲಿ ನೀರನ್ನು ಹಾಕು." ಹೀಗೆ ಅಪ್ಪಣೆಕೊಟ್ಟ ಮುದ್ಗಲಮಹರ್ಷಿಯು ಅದೃಶ್ಯರಾದರು. ನಾಮ ಎಂಬ ಆ ಮೀನುಗಾರನು ಮುದ್ಗಲಮಹರ್ಷಿಯು ಹೇಳಿದಂತೆ ಜಪಮಾಡುತ್ತಲೆ ಇರುವಾಗ ವರ್ಷ ಪೂರ್ತಿಯಾದ ಕೂಡಲೇ ಒಣಗಿದ ಆ ಕಾಷ್ಠದಂಡವು ಪಲ್ಲವಿಸಿ ಚಿಗುರಿ, ಹೊಗರೇರಿ ನಿಂತಿತು.

ಆ ನಾಮನ ಮೈಮೇಲೆಲ್ಲ ಹುತ್ತವೂ ಹುತ್ತದ ಮೇಲೆ ಅನೇಕ ಬಳ್ಳಿಗಳೂ ಬೆಳೆದವು. ಅಷ್ಟರಲ್ಲಿ ಮುದ್ಗಲಮುನಿಯು ದೈವಯೋಗದಿಂದ ಅಲ್ಲಿಗೆ ಬಂದರು. ತಾನು ನೆಟ್ಟ ಒಣಕಟ್ಟಿಗೆಯ ಕೋಲನ್ನು ಹುಡುಕಿದರು. ಅಲ್ಲಿಯೇ ಒಂದೆಡೆ ಅದು ಚಿಗುರೊಡೆದು ಹಸಿರಾಗಿ ಕಂಗೊಳಿಸುತ್ತಿತ್ತು. ಅಲ್ಲಿಯೇ ಇದ್ದ ಹುತ್ತದಲ್ಲಿ ಎರಡು ಕಾಜಿನ ಗುಂಡುಗಳು ಹೊಳೆಯುತ್ತಿದ್ದವು. ಅವು ಅದೇ ಹುತ್ತದಲ್ಲಿ ಹೂತ ನಾಮನ ಕಣ್ಣುಗಳು ಎಂದು ಮಹರ್ಷಿಯು ಗುರುತಿಸಿದರು. ಮೈಮೇಲಿನ ಬಳ್ಳಿ, ಹುತ್ತ ಎಲ್ಲವನ್ನೂ ಕಿತ್ತಿ ಒಗೆದರು. ಕೈ ಹಿಡಿದು ನಾಮನನ್ನು ಎಬ್ಬಿಸಿದರು. ಅಭಿಮಂತ್ರಿತವಾದ ತನ್ನ ಕಮಂಡಲುವಿನ ಜಲವನ್ನು ಅವನ ಮೇಲೆ ಪ್ರೋಕ್ಷಿಸಿದರು. ಅದರಿಂದ ಅವನಿಗೆ ದಿವ್ಯ ದೇಹವುಂಟಾಯಿತು. ಗಜಾನನನ ಅತ್ಯುತ್ತಮವಾದ ದೇಹವನ್ನೇ ಅವನು ಪಡೆದಿದ್ದನು.

ಮುದ್ಗಲಮುನಿಯು ಕಣ್ಣು ತೆರೆಯುವಂತೆ ನಾಮನಿಗೆ ಸೂಚಿಸಿದರು. ನಾಮನು ಕಣ್ಣು ತೆರೆದಾಗ ಅವನ ನೇತ್ರದಿಂದ ಹೊರಟ ತಪೋಜ್ವಾಲೆಯು ಗಗನಮಂಡಲಕ್ಕೆ ಹಾರಿತು. ಆಗಸದ ಅಂಗಳದಲ್ಲಿ ಮಿಂಚಿನ ಗೊಂಚಲಿನಂತೆ ಹಾರಿ ಬೆಳಗುವ ಮತ್ತು ಲೋಕವನ್ನು ಸುಡುವ ಪ್ರದೀಪ್ತವಾದ ಆ ತೇಜಸ್ಸನ್ನು ಮುದ್ಗಲಮುನಿಯು ತನ್ನ ತಪಸ್ಸಿನಿಂದ ಶಾಂತಗೊಳಿಸಿದನು.

ಅನಂತರ ನಾಮ ಎಂಬ ನಾಮವುಳ್ಳ ಆ ಮೀನುಗಾರನು ತನಗೆ ಗಣೇಶಮಂತ್ರವನ್ನು ಉಪದೇಶಿಸಿ ಗುರುವಾದ ಮುದ್ಗಲಮುನಿಗೆ ಸಾಷ್ಟಾಂಗ ಪ್ರಣಾಮ ಮಾಡಿದನು. ಮುದ್ಗಲ ಮುನಿಯು ಗಣೇಶನ ಸರೂಪ ರೂಪವುಳ್ಳ ಸುಸ್ವರೂಪಿಯಾದ ಆ ನಾಮನನ್ನು ಆಲಿಂಗಿಸಿ, ಅವನನ್ನು ಗೌರವಿಸಿ, ಸತ್ಕರಿಸಿ ನಾಮಕರಣ ಎಂಬ ಶುಭ ಸಂಸ್ಕಾರವನ್ನು ಮಾಡಿದನು. ಗಣೇಶರೂಪಿಯಾದ ನಾಮನ ಎರಡು ಹುಬ್ಬುಗಳ ಮಧ್ಯದಿಂದ ಸೊಂಡೆಯು ಉದ್ಭವಿಸಿ ಗಣೇಶ ಸ್ವರೂಪವು ಎದ್ದು ತೋರುತ್ತಿತ್ತು. ಅದನ್ನು ನೋಡಿ ಮುನಿಯು ಭ್ರೂ-ಷುಂಡಿ ಎಂದು ಹೆಸರಿಟ್ಟನು. ಅನಂತರ ಆ ಭ್ರುಷುಂಡಿಗೆ ಏಕಾಕ್ಷರದ ಗಣೇಶ ಮೂಲಮಂತ್ರವನ್ನು ಉಪದೇಶಿಸಿದನು. ಮತ್ತು ಇಂದ್ರಾದಿದೇವತೆಗಳಿಂದಲೂ ಪೂಜಿತನಾಗು ಎಂದು ಆಶೀರ್ವದಿಸಿದನು.

ಈ ವಾರ್ತೆಯು ನರಲೋಕ ಸುರಲೋಕ ಎರಡುಕಡೆಗೂ ಹಬ್ಬಿತು. ಇಂದ್ರಾದಿ ದೇವತೆಗಳು ಬಂದು ಅವನನ್ನು ಪೂಜಿಸಿದರು. ಅಲ್ಲಿಯೇ ಭ್ರುಷುಂಡಿಮುನಿಯು ಗಣೇಶನ ಮೂರ್ತಿಯೊಂದನ್ನು ಪ್ರತಿಷ್ಠಾಪಿಸಿ, ಗಣಪತಿಯ ಏಕಾಕ್ಷರ ಮಂತ್ರವನ್ನು ಜಪಿಸುತ್ತಾ ತಪಸ್ಸನ್ನು ಆಚರಿಸಿದನು. ನೂರುವರ್ಷಕಾಲ ತಪಸ್ಸನ್ನು ಮಾಡಿದ ಬಳಿಕ ಗಜಾನನನು ಪ್ರಸನ್ನನಾಗಿ ಅವನಿಗೆ ವರವನ್ನು ಕೊಟ್ಟು, ನೀನು ತಪಸ್ಸು ಮಾಡಿದ. ಈ ಕ್ಷೇತ್ರವು ನಿನ್ನ ನಾಮ ಎಂಬ ಮೊದಲಿನ ಹೆಸರಿನಿಂದ **ನಾಮಲ** ಎಂದು ಪ್ರಸಿದ್ಧವಾಗುವುದು ಎಂದು ಹೇಳಿ ಅನುಗ್ರಹಗೈದನು. ಭ್ರುಷುಂಡಿಯು ಸ್ಥಾಪಿಸಿದ ಆ ಗಣೇಶಮೂರ್ತಿಯನ್ನು ಸಂದರ್ಶಿಸುವವರು ಪುನರ್ಜನ್ಮವಿಲ್ಲದೆ ದಿವ್ಯ ಸದ್ಗತಿಯನ್ನು ಹೊಂದುವರು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಭ್ರುಷುಂಡಿ ಆಖ್ಯಾನ ಎಂಬ ಐವತ್ತೇಳನೇ ಅಧ್ಯಾಯ ಮುಗಿದುದು*

—o—

**ಶೂರಸೇನ** :- ದೇವೇಂದ್ರ, ನಿನ್ನ ವಿಮಾನವು ಕುಷ್ಠರೋಗಿಯ ಕಟಾಕ್ಷಪಾತ ಮಾತ್ರದಿಂದ ನೆಲಕ್ಕೆ ಬಿದ್ದಿದೆಯಲ್ಲವೆ ? ಇದು ಈ ವಿಮಾನವು ಮತ್ತೆ ಗಗನಕ್ಕೆ ಏರಿ ಮೊದಲಿನಂತೆ ಸಂಚಾರ ಮಾಡಬೇಕಾದರೆ ಏನು ಉಪಾಯ ಮಾಡಬೇಕು ಹೇಳು.

**ಇಂದ್ರ** :- ಶೂರಸೇನ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಯಾವನೇ ಆಗಲಿ ಸಂಕಷ್ಟಹರ ಚತುರ್ಥೀವ್ರತವನ್ನು ಆಚರಿಸುವವನು ತನ್ನ ವ್ರತಾನುಷ್ಠಾನದ ಪುಣ್ಯವನ್ನು ಧಾರೆಯೆರೆದು ಕೊಟ್ಟರೆ ನನ್ನ ವಿಮಾನವು ಯಥಾಪ್ರಕಾರ ಗಗನಗಾಮಿಯಾಗಿ ಪುನಃಸಂಚಾರದ ಶಕ್ತಿಯನ್ನು ಪಡೆಯುವುದು.

**ಶೂರಸೇನ** :- ಸಂಕಷ್ಟಹರ ಚತುರ್ಥೀವ್ರತ ಎಂದರೇನು ? ಆ ವ್ರತವನ್ನು ಆಚರಿಸುವ ಬಗೆ ಎಂತು ? ಅದರಿಂದ ಬರುವ ಫಲ ಯಾವ ವಿಧವಾದದ್ದು ? ಇದೆಲ್ಲವನ್ನೂ ಹೇಳು ? ಈ ಮಹಾವ್ರತವನ್ನು ಹಿಂದೆ ಯಾರಾದರೂ ಮಾಡಿರುವರೋ ? ಮಾಡಿದ್ದರೆ ಆ ಪುಣ್ಯಾತ್ಮರ ಚರಿತ್ರೆಯನ್ನು ನನಗೆ ಹೇಳು.

**ಇಂದ್ರ** :- ಪೂರ್ವಕಾಲದಲ್ಲಿ ಭೂಮಂಡಲದಲ್ಲಿ ಮಹಾಪರಾಕ್ರಮಶಾಲಿಯಾದ ಕೃತವೀರ್ಯ ಎಂಬ ರಾಜನು ಇದ್ದನು. ಅವನಿಗೆ ಸುಗಂಧಾ ಎಂಬ ಪರಮ ಪತಿವ್ರತೆಯಾದ ಧರ್ಮಪತ್ನಿ ಇದ್ದಳು. ಮದುವೆಯಾಗಿ ಬಹಳ ವರುಷಗಳಾದರೂ ಅವರಿಗೆ ಸಂತಾನ ಆಗಲಿಲ್ಲ. ಅದರಿಂದ ದುಃಖಿತರಾದ ಆ ರಾಜದಂಪತಿಗಳು ಅರಣ್ಯಕ್ಕೆ ಹೋಗಿ ತಪಸ್ಸನ್ನು ಮಾಡತೊಡಗಿದರು. ಅತ್ಯುಗ್ರವಾದ ಕಠಿಣತರ ತಪಸ್ಸನ್ನು ಉಪವಾಸವ್ರತದಿಂದ ಮಾಡತೊಡಗಿದ ಆ ದಂಪತಿಗಳು ಕೊರಗಿ ಸೊರಗಿ ಸಾಯುವ ಪರಿಸ್ಥಿತಿ ಬಂತು. ಈ ಸುದ್ಧಿಯನ್ನು ಪಿತೃಲೋಕದಲ್ಲಿ ಆನಂದದಿಂದ ಇದ್ದ ಕೃತವೀರ್ಯನ ತಂದೆಗೆ ನಾರದರು ತಿಳಿಸಿದರು. ''ಮಹಾರಾಜ, ನಿನ್ನ ಮಗನಾದ ಕೃತವೀರ್ಯನು ಸಂತಾನದ ಸಲುವಾಗಿ ಭೂಲೋಕದಲ್ಲಿ ರಾಣಿಯೊಡನೆ ಪ್ರಾಯೋಪವೇಶನಕ್ಕೆ ಕುಳಿತಿದ್ದಾನೆ. ಅವರಿಗೆ ಮುಂದೆ ಮಕ್ಕಳಾಗುವರು ಎಂಬ ಆಶ್ವಾಸನೆಯಾದರೂ ದೊರೆತರೆ ಅದರ ಆಶೆಯಿಂದ ಅವರು ಬದುಕಿ ಉಳಿಯುವರು.'' ಹೀಗೆ ಹೇಳಿ ನಾರದರು ಭೂಲೋಕದಲ್ಲಿ ನಡೆಯುವ ಅದ್ಭುತವನ್ನು ನೋಡಲು ಅಲ್ಲಿಂದ ಹೊರಟುಹೋದರು.

ಇದರಂತೆ ಭ್ರೂಷುಂಡಿಯ ತಂದೆ, ತಾಯಿ, ಮಡದಿ, ಮಕ್ಕಳು ಎಲ್ಲರೂ ಕುಂಭೀಪಾಕ ನರಕದಲ್ಲಿ ಭಯಂಕರವಾದ ಯಮಯಾತನೆಯನ್ನು ಅನುಭವಿಸುತ್ತಿದ್ದರು. ಯಮದೂತರು ಅವರನ್ನು ದಯೆಯಿಲ್ಲದೇ ಹೊಡೆಯುತ್ತಿದ್ದರು. ಆ ಯಮದೂತರ ಭೀಕರವಾದ ಪ್ರಹಾರವನ್ನು ತಾಳಲಾರದೇ ಆ ಭ್ರುಷುಂಡಿಯ ಪರಿವಾರದವರು ಕೆಟ್ಟದನಿಯಿಂದ ಚೀರುತ್ತಿದ್ದರು. ಆ ಆರ್ತನಾದವು ಭೂಲೋಕದಲ್ಲಿ ಸಂಚರಿಸುತ್ತಿದ್ದ ನಾರದರಿಗೆ ಕೇಳಿಸಿತು. ಅವರು ಆ ಧ್ವನಿಯನ್ನು ಅನುಸರಿಸಿ ನರಕಲೋಕಕ್ಕೆ ಹೋದರು. ಅದನ್ನು ನೋಡಿ ತಿಳಿದುಬಂದು ಭ್ರುಷುಂಡಿಮುನಿ ಇದ್ದಲ್ಲಿಗೆ ಬಂದು ತಿಳಿಸಿದರು. ಅದರಿಂದ ಭ್ರುಷುಂಡಿಗೆ

ಸಂತಾಪವಾಯಿತು. ಅವನು ತನ್ನ ಜ್ಞಾನದೃಷ್ಟಿಯಿಂದ ಎಲ್ಲವನ್ನೂ ತಿಳಿದು ತಾನು ಮಾಡಿದ ಸಂಕಷ್ಟಹರಚತುರ್ಥಿವ್ರತದ ಪುಣ್ಯವನ್ನೆಲ್ಲ ಧಾರೆಯೆರೆದನು. ವರಸಿದ್ಧಿವಿನಾಯಕನನ್ನು ಮನಸ್ಸಿನಲ್ಲಿ ಧ್ಯಾನಿಸಿ ''ಓ ಗಣನಾಥನೇ, ಸಂಕಷ್ಟಹರಚತುರ್ಥಿ ವ್ರತವನ್ನು ನಾನು ಏನಾದರೂ ಮಾಡಿದ್ದರೆ ಆ ಪುಣ್ಯದಿಂದ ನನ್ನ ತಾಯಿ ತಂದೆ, ಮಡದಿ ಮಕ್ಕಳು, ಪರಿವಾರವರ್ಗದವರು ಕುಂಭೀಪಾಕದಿಂದ ಉದ್ಧಾರಹೊಂದುವಂತೆ ಅನುಗ್ರಹಿಸು. ಯಮನ ಬಾಧೆಯಿಂದ ಅವರನ್ನು ಬಿಡುಗಡೆ ಮಾಡಿಸು'' ಎಂದು ಹೇಳಿ ತಾನು ಮಾಡಿದ ವ್ರತದ ಪುಣ್ಯವನ್ನು ಧಾರೆಯೆರೆದು ಗಣೇಶನ ಕೈಯಲ್ಲಿ ನೀರನ್ನು ಹಾಕಿದನು. ಅದರಿಂದ ತಕ್ಷಣವೇ ಭ್ರಷುಂಡಿಯ ಪಿತೃಪರಿವಾರದವರೆಲ್ಲರೂ ಘೋರನರಕದಿಂದ ಉದ್ಧೃತರಾದರು. ಅವರೆಲ್ಲರಿಗೂ ದಿವ್ಯದೇಹ ಬಂದಿತು. ದೇವಲೋಕದಿಂದ ಬಂದ ವಿಮಾನವನ್ನು ಏರಿ ಅವರೆಲ್ಲರೂ ಗಣಪತಿಯ ದಿವ್ಯಸ್ಥಾನವನ್ನು ಹೊಂದಿದರು.

*ಇತಿ ಗಣೇಶಪುರಾಣದ ಉಪಾಸನಾ ಖಂಡದಲ್ಲಿ ಸಂಕಷ್ಟಹರ ಚತುರ್ಥೀ ವ್ರತ ಕಥನ ಎಂಬ ಐವತ್ತೆಂಟನೇ ಅಧ್ಯಾಯ ಮುಗಿದುದು*



## ಸಂಕಷ್ಟಹರಚತುರ್ಥೀವ್ರತ ಕಥನ — ಅಧ್ಯಾಯ - ೫೯

**ಶೂರಸೇನ :-** ದೇವೇಂದ್ರ, ಸಂಕಷ್ಟಹರಚತುರ್ಥೀವ್ರತದ ಪುಣ್ಯದಿಂದ ಭ್ರುಷುಂಡಿಯ ಪಿತೃಗಳೂ ಹಾಗೂ ಪರಿವಾರದವರೂ ನರಕದಿಂದ ಉದ್ಧೃತರಾಗಿ ಸ್ವರ್ಗವನ್ನು ಸೇರಿದ್ದೇನೋ ಸರಿ. ಪ್ರಕೃತ ಕೃತವೀರ್ಯಮಹಾರಾಜನ ಪರಿಸ್ಥಿತಿ ಏನಾಯಿತು ? ನಾರದರ ಬಾಯಿಂದ ತನ್ನ ಮಗಸೊಸೆಯಂದಿರ ಮುಮೂರ್ಷಾವಸ್ಥೆಯ ಸುದ್ದಿಯನ್ನು ಕೇಳಿದ ಅವನ ತಂದೆಯು ಯಾವ ಉಪಾಯವನ್ನು ಮಾಡಿದನು ?

**ಇಂದ್ರ :-** ಕೃತಿವೀರ್ಯನ ತಂದೆಯು ಮಗನ ಹಾಗೂ ಸೊಸೆಯ ಈ ದುರವಸ್ಥೆಯನ್ನು ಕೇಳಿ ಬಹಳ ದುಃಖಿತನಾದನು. ಅವನು ಪುಣ್ಯಶಾಲಿಯಾದುದರಿಂದ ಪಿತೃಲೋಕದಿಂದ ನೇರವಾಗಿ ಬ್ರಹ್ಮಲೋಕಕ್ಕೆ ಹೋದನು. ಬ್ರಹ್ಮದೇವರಿಗೆ ''ನನ್ನ ಮಗನ ಈ ಶೋಚನೀಯವಾದ ಪರಿಸ್ಥಿತಿಗೆ ಕಾರಣವೇನು ? ನಮ್ಮ ವಂಶವು ವಿಚ್ಛೇದವಾಗಲು ಕಾರಣವಾದರೂ ಯಾವುದು ?'' ಎಂದು ಕೇಳಿದನು.

**ಬ್ರಹ್ಮ :-** ನಿನ್ನ ಮಗ ಜನ್ಮಾಂತರದಲ್ಲಿ ಸಾಮ ಎಂಬ ಹೆಸರಿನ ಅಂತ್ಯಜನಾಗಿ ಜನಿಸಿದ್ದ. ಅವನು ಮಹಾಕ್ರೂರ, ಚೋರ, ಅವಿಚಾರಿ, ದುಷ್ಕರ್ಮಿ ಆಗಿದ್ದ. ಒಮ್ಮೆ ಅವನು ಹಣದ ಲೋಭದಿಂದ ಹನ್ನೆರಡು ಜನ ಬ್ರಾಹ್ಮಣ ಪಥಿಕರನ್ನು ಕೊಂದು ಹಾಕಿದ. ಅವರ ದೇಹಗಳನ್ನು ಯಾರಿಗೂ ಕಾಣದಂತೆ ಒಂದು ಗುಹೆಯಲ್ಲಿ ಬಿಸಾಕಿದ. ಅವರಲ್ಲಿದ್ದ ಹೇರಳವಾದ ಹಣವನ್ನೆಲ್ಲ ದೋಚಿಕೊಂಡು ರಾತ್ರಿ ಕಗ್ಗತ್ತಲು ಕವಿದ ಮೇಲೆ ತನ್ನ ಮನೆಗೆ ಬಂದ. ಅಂದು ಮಾಘಕೃಷ್ಣಚತುರ್ಥಿದಿನ. ಆಗತಾನೇ ಚಂದ್ರೋದಯ ಆಗುತ್ತಲಿದ್ದಿತು. ಸಾಮನು ತನ್ನ ಮಗನಿಗೆ ಗಣೇಶ ಎಂದು ಹೆಸರಿಟ್ಟಿದ್ದ. ಮನೆಗೆ ಬಂದ ಕೂಡಲೇ ಗಣೇಶ, ಗಣೇಶ ಎಂದು ಮಗನನ್ನು ಕೂಗಿ ಕರೆದ. ಮಗನ ಮೇಲಿನ ವಾತ್ಸಲ್ಯದಿಂದ ಆ ದಿನ ಅವನು

ಪುತ್ರ ಗಣೇಶನನ್ನು ನೂರಾರು ಸಲ ಕರೆದುಕೂಡಿಸಿ ಮುದ್ದಾಡಿದ. ಹೀಗೆ ಕೆಲಕಾಲದ ಅನಂತರ ಆ ಸಾಮನೆಂಬ ಚಂಡಾಲನು ಕೃಷ್ಣಪಕ್ಷ ಚತುರ್ಥಿಯ ದಿನ ರಾತ್ರಿ ಚಂದ್ರೋದಯ ಸಮಯದಲ್ಲಿಯೇ ಮೃತನಾದ. ಮರಣಕಾಲದಲ್ಲಿ ಅವನು ತನ್ನ ಮಗನ ಮೇಲಿನ ಮೋಹದಿಂದ ಗಣೇಶ, ಗಣೇಶ, ಗಣೇಶ ಎಂದು ಜಪಿಸುತ್ತಲೇ ಪ್ರಾಣಬಿಟ್ಟ. ಅಂದು ಬೆಳಗಿನಿಂದ ಅವನಿಗೆ ಶ್ವಾಸಕೂಡಿತ್ತು. ಸಾಯುವೆನೆಂಬ ಹೆದರಿಕೆಯಿಂದ ಅವನು ಅನ್ನ, ನೀರು ಮುಟ್ಟದೇ ಉಪವಾಸವೇ ಇದ್ದ. ಅದರಿಂದ ಅವನು ತನಗೆ ತಿಳಿಯದಂತೆಯೇ ಸಂಕಷ್ಟಹರಚತುರ್ಥೀವ್ರತವನ್ನು ಆಚರಿಸಿದಂತಾಗಿತ್ತು. ಗಣೇಶನಾಮಸ್ಮರಣವನ್ನು ಮಾಡುತ್ತಲೇ ಅವನಿಗೆ ಮರಣವು ಒದಗಿಬಂದಿತ್ತು. ಆ ಪುಣ್ಯಪ್ರಭಾವದಿಂದ ಅವನಿಗೆ ವಿನಾಯಕ ಸ್ಥಾನವು ಪ್ರಾಪ್ತವಾಗಿತ್ತು. ವಿಮಾನದಲ್ಲಿ ಕುಳಿತು ಅವನು ದಿವ್ಯಲೋಕವನ್ನು ಹೊಂದಿದನು. ಅದೇ ಸಾಮನೆಂಬ ಚಂಡಾಲನು ಈಗ ಕೃತವೀರ್ಯ ಎಂಬ ಹೆಸರಿನಿಂದ ನಿನಗೆ ಮಗನಾಗಿ ಹುಟ್ಟಿದ್ದಾನೆ. ಜನ್ಮಾಂತರದಲ್ಲಿ ಅವನು ಮಾಡಿದ ಪಾಪರಾಶಿ ಅಪರಿಮಿತ. ಆ ಪಾಪರಾಶಿಯು ಕ್ಷಯಿಸುವವರೆಗೆ ಅವನಿಗೆ ಈ ಜನ್ಮದಲ್ಲಿ ಸಂತಾನವಾಗುವುದು ಸಾಧ್ಯವಿಲ್ಲ.

ಇದನ್ನು ಕೇಳಿ ಕೃತವೀರ್ಯನ ತಂದೆಗೆ ಬಹಳ ದುಃಖವಾಯಿತು. ಅವನು ಬ್ರಹ್ಮದೇವರಿಗೆ ಕೈ ಮುಗಿದು ಕೇಳಿಕೊಂಡ. ''ಪೂಜ್ಯಪಿತಾಮಹ, ನನ್ನ ಮಗನು ಹಿಂದಿನ ಜನ್ಮದಲ್ಲಿ ಹನ್ನೆರಡು ಜನ ಬ್ರಾಹ್ಮಣರನ್ನು ಕೊಂದು ಘೋರವಾದ ಬ್ರಹ್ಮಹತ್ಯಾ ಪಾಪವನ್ನು ಪಡೆದಿದ್ದಾನೆ. ಆ ಪಾಪವೆಲ್ಲವೂ ಪರಿಹಾರವಾಗುವ ಬಗೆ ಯಾವುದು?''

**ಬ್ರಹ್ಮ :-** 'ಸಂಕಷ್ಟಹರಚತುರ್ಥೀವ್ರತವನ್ನು ಮಾಡುವೆನು ಎಂಬುದಾಗಿ ಮೊದಲು ನಿನ್ನ ಮಗನು ಸಂಕಲ್ಪ ಮಾಡಲಿ. ಆ ಸಂಕಲ್ಪ ಮಾತ್ರದಿಂದಲೇ ಅವನ ಜನ್ಮಾಂತರದ ಪಾಪರಾಶಿಯೆಲ್ಲವೂ ಭಸ್ಮವಾಗಿ ಹೋಗುವುದು. ಅನಂತರ ಅವನಿಗೆ ಸಂಕಷ್ಟಹರ ಚತುರ್ಥೀವ್ರತವನ್ನು ಮಾಡಲು ಅರ್ಹತೆ ಬರುವದು. ಆ ವ್ರತದ ಯಥಾಸಾಂಗ ಆಚರಣೆಯ ವಿಧಿಯನ್ನು ಹೇಳುತ್ತೇನೆ ಕೇಳು. ಮಾಘಕೃಷ್ಣಪಕ್ಷ ಚತುರ್ಥೀ ದಿನ ಮಂಗಳವಾರ ಬಂದಿರಬೇಕು. ಆ ದಿನ ಚಂದ್ರೋದಯ ಸಮಯದಲ್ಲಿ ಈ ಸಂಕಷ್ಟಹರ ಚತುರ್ಥೀವ್ರತವನ್ನು ಆರಂಭಿಸಬೇಕು. ಬೆಳಿಗ್ಗೆ ಹಲ್ಲು ತಿಕ್ಕಿಕೊಂಡು ಇಪ್ಪತ್ತೊಂದು ಸಲ ನದಿ ಅಥವಾ ಪುಷ್ಕರಣಿಯಲ್ಲಿ ಸ್ನಾನ ಮಾಡಬೇಕು. ಅನಂತರ ಗಣೇಶ ಮೂಲಮಂತ್ರವನ್ನು ಜಪಿಸಬೇಕು. ಅಂದು ಉಪವಾಸವಿರಬೇಕು. ಮೌನವ್ರತವನ್ನು ಆಚರಿಸಬೇಕು. ಅತ್ಯಲ್ಪ ಆಹಾರವನ್ನು ಅಲ್ಪ ಜಲವನ್ನು ಮಾತ್ರ ಸ್ವೀಕರಿಸಬೇಕು. ಅಂದಿನ ಸಂಜೆಯ ವೇಳೆಯಲ್ಲಿ ಎಳ್ಳು ನೆಲ್ಲಿ ಇವುಗಳ ಚೆಟ್ಟು ಹಚ್ಚಿಕೊಂಡು ಮತ್ತೆ ಸ್ನಾನ ಮಾಡಬೇಕು. ಗಣಪತಿಯ ಮೂಲಮಂತ್ರವನ್ನು ಗಣೇಶ ಪರವಾದ ವೈದಿಕ ಮಂತ್ರವನ್ನು ಜಪಿಸಬೇಕು. ಷೋಡಶೋಪಚಾರಗಳಿಂದ ಗಣೇಶನನ್ನು ಪೂಜಿಸಬೇಕು. ಮೋದಕ, ಅಪೂಪ, ಚಕ್ಕಲಿ, ಲಾಡು, ವಡೆ, ಪಾಯಸ ಮುಂತಾದವುಗಳನ್ನು ನೈವೇದ್ಯ ತೋರಿಸಬೇಕು. ಇಪ್ಪತ್ತೊಂದು ದೂರ್ವಾಂಕುರಗಳಿಂದ ಗಣೇಶದೇವನನ್ನು ಪೂಜಿಸಬೇಕು. ಧೂಪದೀಪ, ನೈವೇದ್ಯ, ಮಂತ್ರಪುಷ್ಪ, ನೃತ್ಯಗೀತ, ಮೊದಲಾದ ಸಮಸ್ತ ರಾಜೋಪಚಾರಗಳಿಂದ ಪೂಜಿಸಬೇಕು. ಅಂದು ರಾತ್ರಿ ಚಂದ್ರೋದಯ ಸಮಯದಲ್ಲಿ ಚಂದ್ರನಿಗೂ,

ಗಣೇಶನಿಗೂ, ಚತುರ್ಥೀತಿಥಿಗೂ ಅರ್ಘ್ಯಗಳನ್ನು ನೀಡಬೇಕು. ಅನಂತರ ಯಥಾಶಕ್ತಿ ಇಪ್ಪತ್ತೊಂದು, ಹನ್ನೆರಡು, ಕೊನೆಯ ಪಕ್ಷ ಹತ್ತು ಜನ ಬ್ರಾಹ್ಮಣರಿಗಾದರೂ ಭೋಜನ ಮಾಡಿಸಬೇಕು. ದಾನದಕ್ಷಿಣೆಗಳನ್ನು ನೀಡಬೇಕು. ಅಂದಿನ ರಾತ್ರಿ ಭಜನೆ, ಗೀತ, ವಾದ್ಯ, ಧ್ಯಾನ ಮುಂತಾದವುಗಳಿಂದ ಜಾಗರಮಾಡಬೇಕು. ನಿದ್ರಿಸಬಾರದು. ಹೀಗೆ ಒಂದು ವರ್ಷಕಾಲ ಈ ಸಂಕಷ್ಟಹರ ಚತುರ್ಥೀವ್ರತವನ್ನು ಆಚರಿಸಿದರೆ ಅವರ ಮನೋರಥಗಳೆಲ್ಲವೂ ಪೂರ್ತಿಯಾಗುವವು. ಶ್ರಾವಣ ಮೊದಲಾದ ಮಾಸಗಳಿಂದ ವ್ರತ ಪ್ರಾರಂಭಿಸುವವರು ತುಪ್ಪ, ಲಾಡು ಮೊದಲಾದ ಬೇರೆ ಬೇರೆ ವಸ್ತುಗಳನ್ನು ಆಹಾರವಾಗಿ ವರ್ಷದ ಕೊನೆಯವರೆಗೂ ಉಪಯೋಗಿಸಬಹುದು. ಶ್ರಾವಣಮಾಸದಲ್ಲಿ ಎಳು ಉಂಡಿಗಳನ್ನು, ಭಾದ್ರಪದ ಮಾಸದಲ್ಲಿ ಬರೀ ಮೊಸರನ್ನು, ಆಶ್ವೀನದಲ್ಲಿ ಕಠಿಣವಾದ ಉಪವಾಸವನ್ನು, ಕಾರ್ತೀಕದಲ್ಲಿ ಹಾಲು ಪಾನಕ, ಮಾರ್ಗಶೀರ್ಷದಲ್ಲಿ ನಿರಾಹಾರ, ಪುಷ್ಯದಲ್ಲಿ ಗಂಜಳದ ಪಾನಕ, ಮಾಘದಲ್ಲಿ ಎಳ್ಳಿನ ಪದಾರ್ಥ, ಫಾಲ್ಗುಣದಲ್ಲಿ ತುಪ್ಪ ಸಕ್ಕರೆಯ ವಸ್ತು, ಚೈತ್ರದಲ್ಲಿ ಪಂಚಗವ್ಯ, ವೈಶಾಖದಲ್ಲಿ ಹೂವಿನ ಎಲೆಗಳನ್ನು ಬೇಯಿಸಿ ಮಾಡಿದ ವಸ್ತುಗಳು, ಜೇಷ್ಠದಲ್ಲಿ ತುಪ್ಪದಿಂದ ಪಕ್ವವಾದ ವಸ್ತು, ಆಷಾಢದಲ್ಲಿ ಜೇನುತುಪ್ಪವನ್ನು ಉಪಯೋಗಿಸಿ ಈ ವ್ರತವನ್ನು ಮಾಡಬೇಕು.

**ಕೃತವೀರ್ಯನ ತಂದೆ :-** ಕೃಷ್ಣಪಕ್ಷ ಚತುರ್ಥಿಯು ಸಂಕಷ್ಟಿವ್ರತಕ್ಕೆ ವಿಹಿತವೂ, ಶುಭಕರವೂ ಆಗಲು ಕಾರಣವೇನು ? ಅದನ್ನು ಹೇಳಿರಿ.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಚತುರ್ಥೀವ್ರತಕಥನ ಎಂಬ ಐವತ್ತೊಂಬತ್ತನೇ ಅಧ್ಯಾಯ ಮುಗಿದುದು*



## ಚಿಂತಾಮಣಿ ಕ್ಷೇತ್ರ ವರ್ಣನೆ

**ಅಧ್ಯಾಯ - ೬೦**

**ಬ್ರಹ್ಮ :-** ರಾಜನೇ, ಮಂಗಳವಾರದಿಂದ ಸಹಿತವಾದ ಚತುರ್ಥೀತಿಥಿಯ ಮಹಾತ್ಮೆಯನ್ನು ಕೇಳು.

ಮಹಾರಾಜ, ಅವಂತಿ ನಗರದಲ್ಲಿ ಹಿಂದೆ ಭಾರದ್ವಾಜ ಎಂಬ ಮಹರ್ಷಿ ಇದ್ದ. ಅವನು ಒಂದು ದಿನ ನದಿಗೆ ಸ್ನಾನಕ್ಕೆ ಹೋದಾಗ ಅಲ್ಲಿಗೆ ಜಲ ವಿಹಾರಕ್ಕಾಗಿ ದೇವಲೋಕದಿಂದ ಬಂದ ಒಬ್ಬ ಅಪ್ಸರೆಯನ್ನು ನೋಡಿದ. ಅವಳು ತನ್ನ ಅಂಗಾಂಗಗಳನ್ನು ಪ್ರದರ್ಶನಮಾಡುತ್ತಾ ಜಲಕ್ರೀಡೆಯಾಡುವುದನ್ನು ನೋಡಿ ಭಾರದ್ವಾಜನ ಮನಸ್ಸಿನಲ್ಲಿ ಕಾಮಸಂಚಾರವಾಯಿತು. ಅದರಿಂದ ಆ ಮುನಿಗೆ ಶಕ್ತಿಪಾತವಾಯಿತು. ಅದರಿಂದ ಒಂದು ಮಗು ಹುಟ್ಟಿತು. ಕೆಂಪುದಾಸವಾಳದ ಹೂವಿನಂತೆ ಇದ್ದ ಆ ಸುಂದರವಾದ ಮಗುವನ್ನು ನೋಡಿ ಭೂಮಿತಾಯಿಗೆ ಪ್ರೀತಿ ಉಕ್ಕಿ ಬಂದಿತು. ಅವಳು ಆ ಮಗುವನ್ನು ಪ್ರೀತ್ಯಾದರದಿಂದ ತಾನೇ ಪರಿಪಾಲಿಸಿದಳು. ಆ ಮಗು ಏಳು ವರ್ಷದ್ದು ಆದ ಬಳಿಕ ಕುತೂಹಲದಿಂದ ತನ್ನ ತಾಯಿಯನ್ನು ''ಅಮ್ಮ ನಾನು ಇಷ್ಟು ಕೆಂಪು ದೇಹವುಳ್ಳವನಾಗಲು ಕಾರಣವೇನು ? ನನ್ನ ತಂದೆ ಯಾರು ? ಹೇಳು ? ಎಂದು ಕೇಳಿತು.

- ಆಗ ಭೂದೇವಿಯು ಆ ಕೂಸಿಗೆ ಭರದ್ವಾಜ ಮುನಿಯಿಂದ ಜನಿಸಿದ ಸಮಾಚಾರವನ್ನು ತಿಳಿಸಿದಳು. ಆಗ ಆ ಕುಮಾರನು ತನ್ನ ತಾಯಿಗೆ ತಂದೆಯನ್ನು ತೋರಿಸು ಎಂದು ಅಂಗಲಾಚಿದನು. ಆಗ ವಾತ್ಸಲ್ಯಮೂರ್ತಿಯಾದ ಭೂದೇವಿಯು ಆ ಮಗನನ್ನು ಕರೆದು ಕೊಂಡು ಭಾರದ್ವಾಜ ಮುನಿಯಕಡೆಗೆ ಹೋದಳು. ಮತ್ತು ಮುನಿಗೆ ನಮಸ್ಕರಿಸಿ, ''ನಿನ್ನ ರೇತಸ್ಸಿನ ಪ್ರಭಾವದಿಂದ ಹುಟ್ಟಿದ ಈ ಮಗುವನ್ನು ನಾನು ಈ ಏಳುವರ್ಷ ಎತ್ತಿ ಆಡಿಸಿ ದೊಡ್ಡವನನ್ನಾಗಿ ಮಾಡಿದ್ದೇನೆ. ಪ್ರಕೃತ ನೀನು ಇವನನ್ನು ಸ್ವೀಕರಿಸು ಎಂದು ಹೇಳಿದಳು.

ಭಾರದ್ವಾಜ ಮುನಿಗೆ ಹಿಂದೆ ಒಂದು ದಿನ ತಾನು ನದಿಗೆ ಸ್ನಾನಕ್ಕೆ ಹೋದಾಗ ಅಲ್ಲಿಗೆ ಅಪ್ಸರಾಂಗನೆಯು ಜಲವಿಹಾರಕ್ಕೆ ಬಂದದ್ದು. ಅವಳ ಅಂಗಳನ್ನು ಕಂಡು ತನ್ನಲ್ಲಿ ಕಾಮವಿಕಾರವಾದದ್ದೂ, ಅದರಿಂದ ತನ್ನ ರೇತಃಪಾತವಾದದ್ದೂ ನೆನಪಾದವು. ಅದು ವ್ಯರ್ಥವಾಯಿತೆಂದು ಕೊರಗುತ್ತಿದ್ದ. ಅದರಿಂದ ಹುಟ್ಟಿದ್ದ ತನ್ನ ಕುಮಾರನು ಭೂದೇವಿಯಿಂದ ಸಂರಕ್ಷಿತನಾಗಿ ತನ್ನ ಬಳಿ ಬಂದದ್ದನ್ನು ನೋಡಿ ಆನಂದವಾಯಿತು. ಪ್ರೀತಿಯಿಂದ ಆ ಬಾಲಕನ ನೆತ್ತಿಯನ್ನು ಮೂಸಿ ನೋಡಿದನು. ಸುಮುಹೂರ್ತದಲ್ಲಿ ಉಪನಯನ ಸಂಸ್ಕಾರವನ್ನು ನೆರವೇರಿಸಿದನು. ವೇದಶಾಸ್ತ್ರಗಳನ್ನು ಸಾಂಗೋಪಾಂಗವಾಗಿ ಅಧ್ಯಯನ ಮಾಡಿಸಿದನು. ಗಣಪತಿಯ ಮೂಲಮಹಾಮಂತ್ರವನ್ನು ಉಪದೇಶಿಸಿದನು. ಅದರ ಅನುಷ್ಠಾನದ ಕ್ರಮವನ್ನು ಸಹ ಹೇಳಿಕೊಟ್ಟು ಅದರಂತೆ ಮಾಡಲು ನಿರ್ದೇಶಿಸಿದನು.

ತಂದೆಯ ಅಪ್ಪಣೆಯನ್ನು ಆ ಮುನಿಕುಮಾರನು ಆನಂದದಿಂದ ಅಂಗೀಕರಿಸಿದನು. ನರ್ಮದಾ ನದಿಯ ತೀರಕ್ಕೆ ಹೋಗಿ ಅಲ್ಲಿ ಪದ್ಮಾಸನದಲ್ಲಿ ಕುಳಿತು ಗಣೇಶಮೂಲ ಮಹಾ ಮಂತ್ರದ ಜಪಾನುಷ್ಠಾನವನ್ನು ಕೈಕೊಂಡನು. ಅತ್ಯಲ್ಪ ಆಹಾರ ಪಾನ ಮಾಡುತ್ತ ಒಂದು ಸಾವಿರ ವರ್ಷ ಅತ್ಯಂತ ದಾರುಣವಾದ ತಪಸ್ಸನ್ನು ಆಚರಿಸಿದನು. ಮಾಘಕೃಷ್ಣ ಚತುರ್ಥಿಯ ದಿನ ಶುಭ್ರವಾದ ಮುಗಿಲಿನಲ್ಲಿ ಚಂದ್ರ ಉದಯವಾದಾಗ ಆ ಗಣನಾಥನು ವಿಶ್ವವ್ಯಾಪಕವಾದ ತನ್ನ ದಿವ್ಯರೂಪವನ್ನು ಪ್ರದರ್ಶಿಸಿದನು. ಸುಂದರಾಕಾರವಾದ ಸೊಂಡಿಲು, ಹೊಳೆಯುವ ಕೊಂಬು, ಮೊರದಂತೆ ಅಗಲವಾದ ಕಿವಿ, ಹಣೆಯಲ್ಲಿ ಬಾಲಚಂದ್ರ, ಹಸ್ತಗಳಲ್ಲಿ ನಾನಾವಿಧ ಆಯುಧಗಳನ್ನು ಧರಿಸಿದ ಆ ಮಹಾಗಣಪತಿಯು 'ಕೋಟಿಸೂರ್ಯರಂತೆ ಹೊಳೆಯುವ ದೇಹಕಾಂತಿಯಿಂದ ಶೋಭಿಸುತ್ತಿದ್ದ. ಆ ಮುನಿಕುಮಾರನು ಎದ್ದು ದೇವದೇವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕೈಮುಗಿದು ಸ್ತೋತ್ರ ಮಾಡಿದ.

**ನಮಸ್ತೇ ವಿಘ್ನನಾಶಾಯ ನಮಸ್ತೇ ವಿಘ್ನಕಾರಿಣೇ**
**ಸುರಾಸುರಾರಾಮೀಶಾಯ ಸರ್ವಶಕ್ತ್ಯುಪಬೃಂಹಿಣೇ''**

ವಿಘ್ನಗಳನ್ನೆಲ್ಲ ನಾಶಮಾಡಬಲ್ಲ ಮತ್ತು ಭಕ್ತರಲ್ಲದವರಿಗೆ ವಿಘ್ನಗಳನ್ನು ತಂದು ಒಡ್ಡುವ ಪ್ರಭು ಪರಮೇಶ್ವರ ನಿನಗೆ ನಮಸ್ಕಾರ. ಸುರ ಅಸುರ ಎಲ್ಲರಿಗೂ ನೀನೇ ಒಡೆಯ. ಎಲ್ಲರಿಗೂ ಎಲ್ಲ ವಿಧವಾದ ಶಕ್ತಿಯನ್ನು ಪ್ರದಾನ ಮಾಡುವವನು ನೀನೇ. ನಿನಗೆ ನನ್ನ ಅನಂತ ವಂದನೆಗಳು.

ಆ ಮುನಿಕುಮಾರನ ಈ ಸ್ತೋತ್ರದಿಂದ ಗಣಪತಿಯು ಸುಪ್ರಸನ್ನನಾದನು. ''ನೀನು ಬಾಲಕನಾದರೂ ಉಗ್ರವಾದ ತಪಸ್ಸನ್ನು ಮಾಡಿ ಭಕ್ತಿಯಿಂದ ಸ್ತೋತ್ರಮಾಡಿದ್ದರಿಂದ ನಿನಗೆ ಅಪೇಕ್ಷಿತವಾದ ವರಗಳನ್ನು ನೀಡುತ್ತೇನೆ ಕೇಳು.'' ಎಂದು ಹೇಳಿದನು.

ಆಗ ಆ ಮುನಿಕುಮಾರನು ಕೈಮುಗಿದು "ಸ್ವಾಮಿ ಗಜಾನನ, ನನಗೆ ದೇವತೆಗಳೊಂದಿಗೆ ಅಮೃತಪಾನ ಮಾಡಬೇಕೆಂದು ಅಪೇಕ್ಷೆಯಿದೆ. ನನ್ನ ಈ ಹೆಸರು ಮಂಗಲ ಎಂಬ ಶುಭನಾಮವಾಗಿ ಪ್ರಸಿದ್ಧವಾಗಬೇಕು. ಮತ್ತು ಈ ಚತುರ್ಥಿಯ ದಿನ ನಿನ್ನ ಸಂದರ್ಶನ ನನಗೆ ಉಂಟಾಗುವುದರಿಂದ ಇದು ಎಲ್ಲರಿಗೂ ಪುಣ್ಯಪ್ರದವಾಗಲಿ. ಈ ಚತುರ್ಥೀವ್ರತವನ್ನು ಆಚರಿಸುವುದರಿಂದ ಜನರ ಸಂಕಷ್ಟಗಳೆಲ್ಲವೂ ಪರಿಹೃತವಾಗಿ ಅವರ ಇಷ್ಟಾರ್ಥಗಳೆಲ್ಲವೂ ಪೂರ್ಣವಾಗಲಿ" ಎಂದು ಬೇಡಿಕೊಂಡನು.

ಆಗ ಪ್ರಸನ್ನನಾದ ಗಣಪತಿಯು ಆ ಭಕ್ತನಿಗೆ ಅನುಗ್ರಹಿಸಿ "ವತ್ಸ, ಭೂಮಿನಂದನ, ನೀನು ದೇವತೆಗಳೊಂದಿಗೆ ಅಮೃತಪಾನವನ್ನು ಯಥೇಚ್ಛವಾಗಿ ಮಾಡು. ಭೂಮಿಯ ಸಂಪರ್ಕದಿಂದ ಜನಿಸಿದ್ದರಿಂದ ನಿನಗೆ ಭೌಮನೆಂದೂ ನೀನು ಜನರಿಗೆ ಶುಭವನ್ನುಂಟು ಮಾಡುವುದರಿಂದ ಮಂಗಲನೆಂದೂ ನಿನ್ನ ದೇಹವೆಲ್ಲವೂ ರಕ್ತದಂತೆ ಕೆಂಪುವರ್ಣದಿಂದ ಕೂಡಿದ್ದರಿಂದ ನಿನಗೆ ಅಂಗಾರಕನೆಂದೂ ಹೆಸರು ಬರುವವು. ಮಂಗಳವಾರದಿಂದ ಕೂಡಿದ ಚತುರ್ಥೀವ್ರತವನ್ನು ಆಚರಿಸಿದವರಿಗೆ ಎಂಟುವರ್ಷ ಬಿಡದೇ ಸಂಕಷ್ಟಹರ ಚತುರ್ಥೀವ್ರತವನ್ನು ಮಾಡಿದ ಪುಣ್ಯವು ಲಭಿಸುವದು. ನೀನು ಈ ವ್ರತವನ್ನು ಮಾಡಿದ್ದರಿಂದ ನೀನು ಮುಂದೆ ಅವಂತೀನಗರಕ್ಕೆ ರಾಜನಾಗುವೆ.

ಅನಂತರ ಆ ಅಂಗಾರಕನು ದಿವ್ಯವಾದ ಗಣಪತಿಯ ಮಂದಿರವನ್ನು ನಿರ್ಮಿಸಿ ಅದರಲ್ಲಿ ಗಣನಾಥನ ಸುಂದರವಾದ ಮೂರ್ತಿಯನ್ನು ಪ್ರತಿಷ್ಠಾಪಿಸಿದ. ಆ ಭವ್ಯಮೂರ್ತಿಗೆ ಮಂಗಲಮೂರ್ತಿ ಎಂದು ಹೆಸರಿಟ್ಟನು.

ಅನಂತರ ಕೆಲದಿನಗಳು ಕಳೆದ ಬಳಿಕ ವಿನಾಯಕನು ತನ್ನ ದಿವ್ಯವಾದ ವಿಮಾನವನ್ನು ತನ್ನ ಭೃತ್ಯರ ಮೂಲಕ ಕಳಿಸಿ ಸಶರೀರವಾಗಿಯೇ ಭೌಮನನ್ನು ತನ್ನ ಸನ್ನಿಧಿಗೆ ಕರೆಸಿಕೊಂಡನು. ಈವರೆಗೆ ಮಾನವಶರೀರದೊಡನೆ ದೇವಲೋಕಕ್ಕೆ ಹೋದವರೇ ಅಪರೂಪ. ಸಂಕಷ್ಟಹರಗಣಪತಿವ್ರತ ಪ್ರಭಾವದಿಂದ ಭೌಮನಿಗೆ ದೇವತೆಗಳೊಡನೆ ಅಮೃತಪಾನ, ಮತ್ತು ಸಶರೀರ ದಿವ್ಯಲೋಕ ಪ್ರಾಪ್ತಿ ಉಂಟಾದವು. ಮಂಗಲನು ತಪಸ್ಸನ್ನು ಮಾಡಿದ ಆ ಕ್ಷೇತ್ರಕ್ಕೆ ಚಿಂತಾಮಣಿಕ್ಷೇತ್ರ ಎಂದು ಹೆಸರಾಯಿತು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಚಿಂತಾಮಣಿ ಕ್ಷೇತ್ರ ವರ್ಣನೆ ಎಂಬ ಅರವತ್ತನೇ ಅಧ್ಯಾಯ ಮುಗಿದುದು*

—o—

# ಚಂದ್ರಶಾಪಾನುಗ್ರಹ ವರ್ಣನೆ

ಅಧ್ಯಾಯ - ೬೧

ಹಿಂದೆ ಒಮ್ಮೆ ಕೈಲಾಸಲೋಕದಲ್ಲಿ ಶಿವಪಾರ್ವತಿಯರು ಸ್ಕಂದ ಹಾಗೂ ಗಣಪತಿ ಎಂಬ ತಮ್ಮ ಇಬ್ಬರು ಮಕ್ಕಳೊಂದಿಗೆ ಕುಳಿತುಕೊಂಡಿದ್ದರು. ಆಗ ನಾರದರು ಅಲ್ಲಿಗೆ ಆಗಮಿಸಿದರು. ಅವರು ತಮ್ಮ ಕೈಯಲ್ಲಿಯ ಒಂದು ಅಮೃತಫಲವನ್ನು ಮಹಾದೇವರಿಗೆ ಕೊಟ್ಟರು. ಮತ್ತು ಅದನ್ನು ನಿನ್ನ ಪ್ರೀತಿಯ ಮಗನಾದ ಷಣ್ಮುಖನಿಗೆ ಕೊಡು ಎಂದು ಹೇಳಿದರು. ಆದರಿಂದ ಗಣಪತಿಗೆ ನಾರದರ ಮೇಲೆ ಬಹಳ ಕೋಪ ಬಂದಿತು. ಸಿಟ್ಟಿನ ಭರದಲ್ಲಿ ಅವನು ಸತ್ಯಲೋಕಕ್ಕೆ ಧಾವಿಸಿ ಬಂದನು. ನಾನು ನನ್ನ ಸತ್ಯಕಾರ್ಯವನ್ನು ಮುಂದುವರಿಸಬೇಕೆಂದಾಗ ಅದಕ್ಕೆ ಆ ವಿಘ್ನರಾಜನು ವಿಘ್ನವನ್ನು ತಂದು ಒಡ್ಡಿದನು. ಗಜಾನನನ ಆ ಉಗ್ರರೂಪ ಅತಿ ಭಯಂಕರವಾಗಿದ್ದಿತು. ವಿನಾಯಕನ ಆ ವಿಕಾರ ರೂಪವನ್ನು ಕಂಡು ಚಂದ್ರನು ಉಪಹಾಸ ಮಾಡಿ ಅಟ್ಟಹಾಸದಿಂದ ನಕ್ಕನು.

ಆಗ ಗಣಪತಿಯು ಕ್ರೋಧಾಂಧನಾಗಿ ''ದುರ್ಮದಾಂಧನಾದ ಚಂದ್ರನೇ, ನೀನು ಅತ್ಯಂತ ಸುಂದರನೆಂದು, ನಾನು ಕುರೂಪಿಯೆಂದು ಹಾಸ್ಯಮಾಡುವಿಯಲ್ಲವೆ ? ಇನ್ನು ಮೇಲೆ ನೀನು ಅದರ್ಶನೀಯನಾಗು. ಮೂರುಲೋಕದಲ್ಲಿ ಯಾರೂ ನಿನ್ನನ್ನು ನೋಡದಿರಲಿ'' ಎಂದು ಶಾಪವಿತ್ತನು. ಆ ಶಾಪದಿಂದ ಚಂದ್ರನು ಚಿಂತಾಕ್ರಾಂತನಾಗಿ ದುಃಖದಿಂದ ಚಿಂತಾಮಯ ಎಂಬ ಮಡುವಿನಲ್ಲಿ ಮುಳುಗಿದನು. ಅದರಿಂದ ದೇವತೆಗಳಿಗೆ ಬಹಳ ದುಃಖವಾಯಿತು. ತಾವೆಲ್ಲರೂ ಚಂದ್ರನ ಷೋಡಶಕಲೆಗಳನ್ನು ಆಸ್ವಾದಿಸುತ್ತಲಿರುವದರಿಂದ ತಮಗೆ ಇನ್ನು ಉಪವಾಸವಾಗುವದು ಎಂದು ಅವರು ಚಿಂತಾಕ್ರಾಂತರಾದರು. ಎಲ್ಲರೂ ಅಗ್ನಿ, ಇಂದ್ರ, ವರುಣ ಮೊದಲಾದ ದೇವತೆಗಳು ಗಜಾನನನು ಇದ್ದಲ್ಲಿಗೆ ಬಂದು ಪ್ರಾರ್ಥಿಸಿಕೊಂಡರು. ಅವರ ಪ್ರಾರ್ಥನೆಯನ್ನು ಲಾಲಿಸಿ ಭಗವಾನ್ ವಿಘ್ನೇಶ್ವರನು ಸಂತುಷ್ಟನಾದನು. ನಿಮಗೆ ಬೇಕಾದ ವರಗಳನ್ನು ಬೇಡಿರಿ ಎಂದು ಹೇಳಿದನು. ಆಗ ದೇವತೆಗಳು ಕೈ ಮುಗಿದು ನೀನು ಚಂದ್ರನ ಮೇಲೆ ಕುಪಿತನಾಗಿ ನೀನು ಯಾರ ಕಣ್ಣಿಗೂ ಕಾಣಿಸಬೇಡ ಎಂದು ಶಾಪಕೊಟ್ಟಿರುವೆ. ನೀನು ಅವನನ್ನು ಅನುಗ್ರಹಿಸು. ನೀನು ಅವನನ್ನು ಸಂತೋಷದಿಂದ ಅನುಗ್ರಹಿಸಿದರೆ ನಮ್ಮೆಲ್ಲರ ಮೇಲೆಯೂ ಅನುಗ್ರಹ ಮಾಡಿದಂತೆ ಆಗುವದು. ಇದೇ ನೀನು ನಮಗೆ ಕೊಡುವ ವರ.

ದೇವತೆಗಳ ಈ ವರ ಪ್ರಾರ್ಥನೆಗೆ ಪ್ರಸನ್ನನಾದ ವಿನಾಯಕನು ಸಂತಸದಿಂದ ನುಡಿದನು. ''ದೇವತೆಗಳೇ, ನೀವು ಬಹುವಿಧವಾಗಿ ಪ್ರಾರ್ಥನೆಮಾಡಿದ್ದರಿಂದ ನಾನು ಚಂದ್ರನಿಗೆ ಇತ್ತ ಶಾಪವನ್ನು ವಿಶಾಪಮಾಡುತ್ತೇನೆ. ಅವನು ವರ್ಷಕ್ಕೆ ಒಂದು ದಿನ ಭಾದ್ರಪದ ಶುಕ್ಲ ಚತುರ್ಥಿಯ ತಿಥಿಯಂದು ಅದರ್ಶನೀಯನಾಗಲಿ. ಅಂದು ಅವನನ್ನು ಯಾರೂ ನೋಡಬಾರದು. ಹಾಗೆ ಯಾರಾದರೂ ಚತುರ್ಥೀದಿನದಂದು ಚಂದ್ರನನ್ನು ನೋಡಿದರೆ ಅವರಿಗೆ ವೃಥಾ ಅಪವಾದವು ಬರುವುದು.''

ಅನಂತರ ದೇವತೆಗಳು ತಮ್ಮ ಸ್ವಸ್ಥಾನಕ್ಕೆ ಬಂದು ಚಂದ್ರನನ್ನು ಕರೆಸಿಹೇಳಿದರು. ''ಚಂದ್ರ, ನೀನು ಭಗವಂತನಾದ ಗಣಪತಿಯನ್ನು ನೋಡಿ ನಕ್ಕದ್ದು ಮಹಾಪರಾಧ. ಅದರಿಂದಲೇ ನೀನು ಮೂರು ಲೋಕದ ಜನರಿಗೆ ಅದರ್ಶನೀಯನಾಗಿರುವೆ. ನಾವು ಪರಿಪರಿಯಿಂದ ಪ್ರಾರ್ಥಿಸಿಕೊಂಡದ್ದರಿಂದ ಆ ಗಜಾನನನು ನಿನಗೆ ಉಶ್ಶಾಪವನ್ನು

ಕೊಟ್ಟಿದ್ದಾನೆ. ಈಗ ಅವನ ಶಾಪದಿಂದ ನಿನಗೆ ಕ್ಷಯ ಹಿಡಿದು ಕಳೆಗುಂದಿರುವೆ. ನಿನಗೆ ಕಾಡುಕುರೂಪವು ಬಂದಿರುವುದು. ನೀನು ಆ ಗಣನಾಯಕನನ್ನು ಆರಾಧಿಸು. ಜಪ ತಪೋನುಷ್ಠಾನದಿಂದ ಅವನನ್ನು ಪ್ರಸನ್ನಗೊಳಿಸು. ಅವನ ಅನುಗ್ರಹದಿಂದ ನಿನಗೆ ಮತ್ತೆ ಮೊದಲಿನಂತೆ ದಿವ್ಯದೇಹ ಪ್ರಾಪ್ತಿಯಾಗುವುದು.''

ಅನಂತರ ದೇವೇಂದ್ರನು ಚಂದ್ರನಿಗೆ ಗಣಪತಿಯ ಏಕಾಕ್ಷರಮಂತ್ರವನ್ನು ಉಪದೇಶಿಸಿದನು. ಚಂದ್ರನು ಭಕ್ತಿಯಿಂದ ಆ ಏಕಾಕ್ಷರಮಂತ್ರವನ್ನು ಜಪಿಸುತ್ತ ಗಣೇಶನನ್ನು ಕುರಿತು ತಪಸ್ಸನ್ನು ಮಾಡಿದನು. ಅವನ ತಪಸ್ಸಿನಿಂದ ಗಜಾನನನು ಸುಪ್ರೀತನಾಗಿ ಚಂದ್ರನಿಗೆ ತನ್ನ ದಿವ್ಯದರ್ಶನವನ್ನು ದಯಪಾಲಿಸಿದನು. ಅದನ್ನು ಕಂಡು ಧನ್ಯನಾದ ಚಂದ್ರನು ಭಕ್ತಿಯಿಂದ ಆ ಭಗವಂತನನ್ನು ಸ್ತೋತ್ರಮಾಡಿದನು.

**ನಮಾಮಿ ದೇವಂ ದ್ವಿರದಾನನಂ ತಂ ಯಸ್ಸರ್ವವಿಘ್ನಂ ಹರತೇ ಜನಾನಾಂ।**
**ಧರ್ಮಾರ್ಥಕಾಂಸ್ತನುಮಾಖಿಲಾನಾಂ ತಸ್ಮೈ ನಮೋ ವಿಘ್ನವಿನಾಶನಾಯ॥**

ಜನರ ವಿಘ್ನಗಳನ್ನೆಲ್ಲ ಪರಿಹರಿಸಿ ಭಕ್ತರಿಗೆ ಧರ್ಮಾರ್ಥ ಕಾಮಮೋಕ್ಷಾದಿಗಳನ್ನು ಕರುಣಿಸುವ ಗಜಮುಖನಾದ ಮತ್ತು ಭಕ್ತರ ವಿಘ್ನಗಳನ್ನು ನಿವಾರಿಸುವ ವಿಘ್ನೇಶನಿಗೆ ನಾನು ನಮಸ್ಕಾರಮಾಡುತ್ತೇನೆ.

ಚಂದ್ರನು ಮಾಡಿದ ಈ ಸ್ತೋತ್ರದಿಂದ ಪ್ರೀತನಾಗಿ ಗಣಪತಿಯು ಅವನಿಗೆ ''ಚಂದ್ರ, ನಾನು ನಿನ್ನ ತಪಸ್ಸು ಹಾಗೂ ಸ್ತೋತ್ರದಿಂದ ಪ್ರಸನ್ನನಾಗಿದ್ದೇನೆ. ನೀನು ಮೊದಲಿನಂತೆ ಆಹ್ಲಾದಕರವಾದ ದೇಹಕಾಂತಿಯನ್ನು ಪಡೆಯುವೆ. ಭಾದ್ರಪದ ಶುಕ್ಲ ಚತುರ್ಥಿಯ ದಿನ ಮಾತ್ರ ನೀನು ಜನರಿಗೆ ಅದರ್ಶನೀಯನಾಗುವೆ. ಆ ದಿನ ನಿನ್ನನ್ನು ನೋಡುವವನಿಗೆ ಭಯಂಕರ ಪಾಪವು, ವೃಥಾ ಅಪವಾದವು ಬರುವದು. ಪ್ರತಿಯೊಂದು ಕೃಷ್ಣಪಕ್ಷ, ಚತುರ್ಥಿ ರಾತ್ರಿ ನೀನು ಉದಯಿಸುವ ಸಮಯದಲ್ಲಿ ಯಾವನು ನನ್ನ ಸಂಕಷ್ಟಹರ ಚತುರ್ಥೀವ್ರತವನ್ನು ಆಚರಿಸುವನೋ ಅವನಿಗೆ ವಿಶೇಷ ಪುಣ್ಯಫಲವನ್ನು ನಾನು ಪ್ರದಾನ ಮಾಡುತ್ತೇನೆ. ಆ ದಿನ ಪ್ರಯತ್ನಪೂರ್ವಕವಾಗಿ ಜನರು ನಿನ್ನನ್ನು ನೋಡಲೇಬೇಕು. ಚಂದ್ರನೇ, ನೀನು ನನಗೆ ಬಹಳ ಪ್ರೀತ್ಯಾಸ್ಪದನಾದವನು. ನೀನು ನನ್ನ ಹಣೆಯಲ್ಲಿ ಒಂದು ಕಲೆಯಿಂದ ಒಡಗೂಡಿ ನಿರಂತರವಾಗಿ ನೆಲೆಸಿ ನನಗೆ ಒಂದು ಅಲಂಕಾರದಂತೆ ಇರು. ಪ್ರತಿ ತಿಂಗಳ ಶುಕ್ಲಪಕ್ಷದ ಬಿದಿಗೆ ದಿನ ಸಂಜೆ ನೀನು ಉದಯ ಹೊಂದಿದಾಗ ನಿನ್ನನ್ನು ಸಂದರ್ಶಿಸಿ ಎಲ್ಲರೂ ನಿನ್ನನ್ನು ನಮಸ್ಕರಿಸುವಂತಾಗಲಿ'' ಎಂದು ವರವನ್ನು ಇತ್ತನು.

ಗಣಪತಿಯ ಈ ವರದಿಂದ ಚಂದ್ರನು ಮತ್ತೆ ದಿವ್ಯವಾದ ತನ್ನ ಕಳೆಕಾಂತಿಗಳಿಂದ ಒಡಗೂಡಿ ಸುಂದರತರನಾಗಿ ಕಂಗೊಳಿಸತೊಡಗಿದನು. ಮತ್ತು ಒಂದು ಕಲೆಯಿಂದ ಗಣಪತಿಯ ಹಣೆಯಲ್ಲಿ ನೆಲೆನಿಂತನು. ಅದರಿಂದ ವಿನಾಯಕನಿಗೆ ಭಾಲ ಚಂದ್ರ ಎಂಬ ಹೆಸರು ಬಂದಿತು. ಅನಂತರ ಚಂದ್ರನು ಒಂದು ಸುವರ್ಣ ಮಂದಿರವನ್ನು ನಿರ್ಮಿಸಿ, ಅದರಲ್ಲಿ ವಿನಾಯಕನ ಒಂದು ಸುಂದರವಾದ ಮೂರ್ತಿಯನ್ನು ಪ್ರತಿಷ್ಠಾಪಿಸಿ ಭಕ್ತಿಯಿಂದ ಪೂಜಿಸಿದನು. ಮುಂದೆ ಆ ಸ್ಥಳವು ಸಿದ್ಧಿಕ್ಷೇತ್ರ ಎಂದು ಹೆಸರು ಪಡೆಯಿತು.

*ಇತಿ ಗಣೇಶಪುರಾಣದ ಉಪಾಸನಾ ಖಂಡದಲ್ಲಿ ಚಂದ್ರಶಾಪಾನುಗ್ರಹ ವರ್ಣನೆ ಎಂಬ ಅರವತ್ತೊಂದನೇ ಅಧ್ಯಾಯ ಮುಗಿದುದು.*

—o—

**ಕೃತವೀರ್ಯನ ತಂದೆ :-** ಕೃಷ್ಣಪಕ್ಷದ ಚತುರ್ಥಿಯ ದಿನ ಚಂದ್ರೋದಯ ಕಾಲದಲ್ಲಿ ಗಣಪತಿಯನ್ನು ಏಕೆ ಅರ್ಚಿಸಬೇಕು ? ಇಪ್ಪತ್ತೊಂದು ದೂರ್ವಾಂಕುರಗಳನ್ನು ಏಕೆ ಅರ್ಪಿಸಬೇಕು ? ದೂರ್ವಾಂಕುರವು ಗಣೇಶನಿಗೆ ಹೇಗೆ ಪ್ರೀತಿಕರವಾಯಿತು ? ಈ ವಿಷಯವನ್ನು ಹೇಳಿರಿ.

**ಬ್ರಹ್ಮ :-** ಭೂಮಂಡಲದ ದಕ್ಷಿಣಭಾಗದಲ್ಲಿ ಜಾಂಬಾ ಎಂಬ ಒಂದು ಪ್ರಸಿದ್ಧ ನಗರ ಇದೆ. ಅಲ್ಲಿ ಸುಲಭ ಎಂಬ ಒಬ್ಬ ಕ್ಷತ್ರಿಯ ರಾಜನಿದ್ದ. ಅವನಲ್ಲಿ ಐಶ್ವರ್ಯ, ಔದಾರ್ಯ, ಶೌರ್ಯ, ಧೈರ್ಯ ಮೊದಲಾದ ಸದ್ಗುಣಗಳು ಮೇಳವಿಸಿದ್ದವು. ಅವನಿಗೆ ಸಮುದ್ರಾ ಎಂಬ ಒಬ್ಬ ಮಡದಿ ಇದ್ದಳು. ಅವಳು ಅಪ್ಸರೆಯಂತೆ ರೂಪವತಿ, ಅರುಂಧತಿಯಂತೆ ಪತಿವ್ರತೆ ಆಗಿದ್ದಳು. ಒಂದು ದಿನ ಆ ಸುಲಭ ಸಮುದ್ರಾ ದಂಪತಿಗಳು ಸ್ನಾನಮಾಡಿ ಶುಚಿರ್ಭೂತರಾಗಿ ಕುಳಿತುಕೊಂಡಿದ್ದರು. ಆಗ ಮಧುಸೂಧನ ಎಂಬ ಬಡಬ್ರಾಹ್ಮಣ ಬಂದನು. ಭಿಕ್ಷಾಟನದಿಂದ ಉಪಜೀವಿಸುತ್ತಿದ್ದ ಆ ದರಿದ್ರಬ್ರಾಹ್ಮಣನ ಮೈಮೇಲಿನ ಬಟ್ಟೆಗಳೆಲ್ಲ ಹರಿದು ಚಿಂದಿಯಾದುದರಿಂದ ದಿಗಂಬರನಂತೆ ಕಾಣಿಸುತ್ತಿದ್ದನು. ಅವನನ್ನು ನೋಡಿ ಸುಲಭನು ಉಪಹಾಸಮಾಡಿ ಗಟ್ಟಿಯಾಗಿ ನಕ್ಕನು. ಅದರಿಂದ ಕುಪಿತನಾದ ಆ ಬ್ರಾಹ್ಮಣನು ''ಪಾಪಿಯೇ, ಬಡತನದ ಬೇಗೆಯಿಂದ ಬೆಂದು ಬಳಲಿರುವ ನನ್ನನ್ನು ನೋಡಿ ಉಪಹಾಸ ಮಾಡಿ ನಕ್ಕೆಯಲ್ಲವೆ ? ಅದಕ್ಕಾಗಿ ನನ್ನ ಶಾಪವನ್ನು ಅನುಭವಿಸು. ನೀನು ಹೊಲಗಳಲ್ಲಿ ಸರ್ವದಾ ಉಳುವ ಎತ್ತಾಗಿ ಜನಿಸು. ದುಃಖದಿಂದಲೇ ಭಾರ ಹೊತ್ತು ಬಾಳನ್ನು ಮಾಡು'' ಎಂದು ಶಾಪಕೊಟ್ಟನು. ಈ ಬಡಬ್ರಾಹ್ಮಣನು ಇತ್ತ ಶಾಪವನ್ನು ಕೇಳಿ ಪರಮಪತಿವ್ರತೆಯಾದ ಸಮುದ್ರೆಗೆ ಕೋಪಬಂದಿತು. ತುಳಿದ ನಾಗಿಣಿಯಂತೆ ರೋಷಾವೇಶದಿಂದ ಕೂಡಿದ ಆ ರಮಣಿಯು ''ನೀನು ಕತ್ತೆಯಾಗಿ ಜನಿಸು' ಎಂದು ಶಾಪಕೊಟ್ಟಳು. ಇದರಿಂದ ದರಿದ್ರಬ್ರಾಹ್ಮಣನಾದ ಆ ಮಧುಸೂದನನಿಗೆ ಮತ್ತಷ್ಟು ಕೋಪಬಂದು ''ನೀನು ಚಂಡಾಲಿನಿಯಾಗು. ಮಲ ಮೂತ್ರಗಳನ್ನು ಗುಡಿಸಿ ಅದನ್ನೇ ಭಕ್ಷಿಸಿ ಜೀವಿಸುವವಳಾಗು'' ಎಂದು ದಾರುಣತರವಾದ ಶಾಪವನ್ನು ಚೆಲ್ಲಿದನು. ಪರಸ್ಪರ ಶಾಪದಿಂದ ಆ ಮೂವರೂ ದುರ್ಲಭವಾದ ತಮ್ಮ ಮಾನವ ದೇಹವನ್ನು ತ್ಯಜಿಸಿದರು.

ಸುಲಭನು ನೇಗಿಲನ್ನು ಎಳೆಯುವ ಎತ್ತಾಗಿ ಜನಿಸಿದನು. ಮಧುಸೂದನನು ಬ್ರಾಹ್ಮಣ ದೇಹವನ್ನು ತ್ಯಜಿಸಿ ಸಮುದ್ರೆಯ ಶಾಪದಂತೆ ಕತ್ತೆಯಾಗಿ ಜನಿಸಿದನು. ಸುಲಭನ ಮಡದಿಯಾದ ಸಮುದ್ರೆಯು ಮಧುಸೂದನನ ಶಾಪದಿಂದ ಪ್ರಾಣಿಹಿಂಸಕಳಾದ. ದುಷ್ಟಸ್ವಭಾವದ ಚಂಡಾಲಿನಿಯಾಗಿ ಮಾರ್ಪಟ್ಟಳು. ಅವಳಿಗೆ ದಾರಿದ್ರ್ಯವೆಂಬ ಪಿಶಾಚಿಯು ಅಂಟಿತು. ಹೊಲಸು ಆಹಾರವನ್ನು ತಿನ್ನತೊಡಗಿದಳು. ಬಡತನ ಆಹಾರದ ಅಭಾವಗಳಿಂದ ಅವಳ ದೇಹ ಒಣಗಿ ಹೋಯಿತು. ಹಲ್ಲು ಹಾಯ್ದು, ದೇಹ ಕೃಶವಾಗಿ, ಮುಖ ವಿಕಾರವಾಗಿ ವಿದ್ರೂಪಗೊಂಡಳು.

ನಗರದ ದಕ್ಷಿಣದಿಗ್ಭಾಗದಲ್ಲಿ ಅವಳು ಅಲೆಯುತ್ತಿರವಾಗ ಗಣೇಶನ ಒಂದು ಮಂದಿರವನ್ನು ಕಂಡಳು. ಅಲ್ಲಿ ಎಷ್ಟೋ ಯೋಗಿಗಳು ಅನೇಕ ತಪಸ್ವಿಗಳು ಗಣೇಶನನ್ನು ಧ್ಯಾನಮಾಡುತ್ತ ಕುಳಿತುಕೊಂಡಿದ್ದರು. ಅಂದು ಭಾದ್ರಪದ ಮಾಸದ ಶುಕ್ಲಚತುರ್ಥಿಯ ಪವಿತ್ರವಾದ ದಿವಸ. ಆ ನಗರದ ಪ್ರತಿಯೊಂದು ಮನೆಯಲ್ಲಿಯೂ ಗಣನಾಯಕನ ಮಹೋತ್ಸವಗಳು ಆರಂಭವಾಗಿದ್ದವು. ಅಂದು ಕುಂಭದ್ರೋಣಾಕಾರದಿಂದ ಭಯಂಕರವಾದ ಮಳೆಯು ಸುರಿಯಿತು. ಶಾಪದಿಂದ ಚಂಡಾಲಿನಿಯಾಗಿದ್ದ ಸಮುದ್ರೆಯು ಧಾರಾಕಾರವಾಗಿ ಸುರಿಯುವ ಮಳೆಗೆ ಹೆದರಿ ಎಲ್ಲಿಯಾದರೂ ಆಶ್ರಯವನ್ನು ಹೊಂದಬೇಕೆಂದು ಮನೆಗಳಿರುವ ಸ್ಥಳಕ್ಕೆ ಓಡಿ ಬಂದಳು. ಇವಳ ಅಸಹ್ಯವೇಷ. ವಿಕಾರಮುಖ ಕಂಡು ಇವಳನ್ನು ಹೊಡೆದು ಹೊರಗೆ ಅಟ್ಟಿದರು. ಜಗಲಿಯ ಮೇಲೆ ಕುಳಿತುಕೊಳ್ಳಲೂ ಕೂಡ ಅವಳಿಗೆ ಸ್ಥಳವನ್ನು ಕೊಡಲಿಲ್ಲ. ಆಗ ಅವಳು ಓಡುತ್ತ ಗಣಪತಿಯ ಗುಡಿಗೆ ಬಂದಳು. ಆಗ ಅವಳು ಗುಡಿಯಲ್ಲಿ ಒಂದು ಮೂಲೆಯಲ್ಲಿ ಹುಲ್ಲುಹಾಕಿ ತನ್ನ ಕೈಯಲ್ಲಿಯ ಕೊಳ್ಳಿಯಿಂದ ಉರಿಹಚ್ಚಿ ಚಳಿಗೆ ನಡಗುತ್ತಿರುವ ತನ್ನ ಮೈಯನ್ನು ಕಾಯಿಸಿಕೊಳ್ಳತೊಡಗಿದಳು. ಆಗ ದೇವಾಲಯದಲ್ಲಿ ಇದ್ದ ಸಾಧುಗಳು, ತಪಸ್ವಿಗಳು ಆ ಚಂಡಾಲಿನಿಯನ್ನು ತಿರಸ್ಕರಿಸಿದರು. ಇದನ್ನು ತಿಳಿದು ಇತರ ಭಕ್ತರು ಅವಳನ್ನು ಹೊಡೆದರು. ಆಗ ಅಕಸ್ಮಾತ್ತಾಗಿ ಗಾಳಿ ಬೀಸಿತು. ದೈವಯೋಗದಿಂದ ಚಾಂಡಾಲಿನಿಯು ತಂದ ಹುಲ್ಲಿನ ಒಂದು ಎಲೆ ಗರಿಕೆಯು ಹಾರಿ ಹೋಗಿ ಗಣಪತಿಯ ವಿಗ್ರಹದ ಮೇಲೆ ಬಿದ್ದಿತು. ಅಷ್ಟರಲ್ಲಿ ಕತ್ತೆಯಾಗಿ ಜನಿಸಿದ ಮಧುಸೂದನನು ಮಳೆಗೆ ಸಿಕ್ಕಿ ನೆನೆದು, ಚಳಿಗೆ ಹೆದರಿ ಆ ದೇವಾಲಯಕ್ಕೆ ಓಡಿ ಬಂದಿತು. ಅದೇ ಸಮಯಕ್ಕೆ ಎತ್ತಾಗಿದ್ದ ಸುಲಭನೂ ಕೂಡ ನೇಗಿಲಿನ ಬಂಧನದಿಂದ ತಪ್ಪಿಸಿಕೊಂಡು ದೈವಮಾಯೆಯಿಂದ ಅದೇ ದೇವಾಲಯಕ್ಕೆ ಬಂದನು.

ಗಣೇಶನನ್ನು ಪೂಜಿಸಿ ನಿರ್ಮಾಲ್ಯವೆಂದು ಒಂದು ಕಡೆ ಗುಡ್ಡಿಹಾಕಿದ ದೂರ್ವೆಯು ಒಣಗಿದ್ದರಿಂದ ಒಣಹುಲ್ಲು ಎಂದು ತಿಳಿದು ಅದನ್ನು ಉರಿ ಮಾಡಿ ಮೈ ಕಾಯಿಸಿಕೊಳ್ಳಲು ಒಂದು ಕಡೆ ಶೇಖರಿಸಿಕೊಂಡಿದ್ದಳು. ಆ ದೂರ್ವಾಗಳನ್ನು ಒಣಹುಲ್ಲೆಂದು ಕತ್ತೆ ಮತ್ತು ಎತ್ತುಗಳಾದ ಮಧುಸೂದನ ಮತ್ತು ಸುಲಭರು ಹಸಿವೆ ನೀಗಿಸಿಕೊಳ್ಳಲು ಭಕ್ಷಣ ಮಾಡಿದರು. ಆ ಹುಲ್ಲಿಗಾಗಿ ಕತ್ತೆ ಎತ್ತುಗಳು ಕಾದಾಡತೊಡಗಿದವು. ಎತ್ತು ಕೊಂಬುಗಳಿಂದ ಇರಿದರೆ ಕತ್ತೆ ಹಿಂಗಾಲಿನಿಂದ ಒದೆಯಲು ಆರಂಭಿಸಿತು. ಈ ಹೋರಾಟವು ಗಣೇಶ ಮೂರ್ತಿಯ ಎದುರಿಗೇ ನಡೆಯಿತು. ಹೀಗೆ ಕಚ್ಚಾಡುತ್ತಿರುವಾಗಲೇ ಅವುಗಳು ಬಾಯಿಯಲ್ಲಿ ಕಚ್ಚಿ ಹಿಡಿದ ಎರಡು ಎಳೆ ದೂರ್ವೆಯ ಗರಿಕೆಗಳು ಜಾರಿ ಗಣಪತಿಯ ಸೊಂಡಿಲು ಮತ್ತು ಕಾಲಿನ ಮೇಲೆ ಬಿದ್ದವು.

ಇತ್ತ ಚಂಡಾಲಿನಿಯು ಆ ಕತ್ತೆ ಎತ್ತುಗಳ ಕಚ್ಚಾಟವನ್ನು ಇವು ತನ್ನನ್ನು ಎಲ್ಲಿ ಇರಿದು ನೋಡಿ ಒದೆಯುವವೋ ಎಂದು ಹೆದರಿದಳು. ಅಲ್ಲಿಯೇ ಇದ್ದ ಒಂದು ಕೋಲಿನಿಂದ ಎರಡನ್ನೂ ಹೊಡದು ಓಡಿಸಿದಳು. ಮತ್ತು ತಾನು ಗುಡಿಯ ಒಳಗೆ ಹೋಗಿ ಅಲ್ಲಿದ್ದ ಖಾದ್ಯವಸ್ತುಗಳನ್ನೆಲ್ಲ ತಿಂದುಬಿಟ್ಟಳು. ಈ ಗಲಾಟೆಯಲ್ಲಿ ಜನರು ಎಚ್ಚರಾದರು. ಒಳಗಿರುವ ಪವಿತ್ರ ಪದಾರ್ಥಗಳನ್ನು ನಿವೇದಿತ ಭಕ್ಷ್ಯಗಳನ್ನು ಮುಟ್ಟಿ ತಿನ್ನುತ್ತಲಿರುವ

ಚಂಡಾಲಿನಿಯನ್ನು ನೋಡಿದರು. ಮತ್ತು ಸಿಟ್ಟಿನಂದ ಕಲ್ಲು, ಮಣ್ಣು, ಮರಳು ತೂರಿ ಹೊಡೆದು ಅವಳನ್ನು ಓಡಿಸಿದರು.

ದೇವರ ಗುಡಿಯಲ್ಲಿ ಚಂಡಾಲಿನಿಯು ಪ್ರವೇಶಿಸಿ, ಪೂಜಾದ್ರವ್ಯವನ್ನು ಮುಟ್ಟಿ, ನೈವೇದ್ಯವನ್ನು ಭಕ್ಷಣ ಮಾಡಿದ್ದರಿಂದ ಗುಡಿಯು ಅಪವಿತ್ರವಾಯಿತೆಂದು ಪುಣ್ಯ ತೀರ್ಥದ ಪವಿತ್ರ ಉದಕದಿಂದ ಆ ದೇವಸ್ಥಾನದ ಸಂಪ್ರೋಕ್ಷಣೆ ವಿಧಿಯನ್ನು ಮಾಡಿದರು. ದುಷ್ಟರಾದ ಕೆಲವು ಕ್ರೂರಜನರು ಕೋಪಗೊಂಡರು. ಎತ್ತು, ಕತ್ತೆ ಮತ್ತು ಚಂಡಾಲಿನಿಯರನ್ನು ದೊಣ್ಣೆಗಳಿಂದಲೂ ಮತ್ತು ಕಲ್ಲುಗಳಿಂದಲೂ ಹೊಡೆಯತೊಡಗಿದರು. ಅವರ ಏಟುಗಳನ್ನು ತಪ್ಪಿಸಿಕೊಳ್ಳಲು ಅವು ಮೂವರೂ ಗುಡಿಯನ್ನು ಅನೇಕಬಾರಿ ಸುತ್ತು ಹಾಕಿದವು.

ದೈವಯೋಗದಿಂದ ಆ ಮೂವರು ಗಣೇಶನ ತಲೆ ಮೇಲೆ ದೂರ್ವೆಯನ್ನು ಏರಿಸಿ, ಅನೇಕಸಲ ಪ್ರದಕ್ಷಿಣೆಯನ್ನು ಹಾಕಿ ಅವನಿಗೆ ಅರ್ಪಿಸಿದ ದೂರ್ವಾಂಕುರವನ್ನು ನೈವೇದ್ಯವನ್ನು ಭಕ್ಷಿಸಿದ್ದರಿಂದ ಎತ್ತು, ಕತ್ತೆ, ಚಂಡಾಲಿನಿಯರು ತಮ್ಮ ದುರ್ಯೋನಿಯಿಂದ ಮುಕ್ತರಾದರು. ಅವರನ್ನು ಕರೆಯಲು ದೇವಲೋಕದಿಂದ ದಿವ್ಯವಾದ ವಿಮಾನಗಳು ಬಂದವು. ಗಣಪತಿಯ ಭೃತ್ಯರು ಮೂವರನ್ನು ದೇವಗಮ್ಯವಾದ ವಿಮಾನದಲ್ಲಿ ಕೂಡಿಸಿಕೊಂಡರು. ಮೂವರಿಗೂ ದಿವ್ಯದೇಹ ಬಂದಿತ್ತು. ಗಣೇಶನ ಆಜ್ಞಾನುಸಾರವಾಗಿ ಅವರನ್ನು ಉತ್ತಮಗತಿಗೆ ಕೊಂಡೊಯ್ದರು.

ಗಣೇಶನ ದೂತರು ದಿವ್ಯವಿಮಾನದಲ್ಲಿ ದಿವ್ಯದೇಹವನ್ನು ಧರಿಸಿ. ನಿಂತ ಎತ್ತು, ಕತ್ತೆ, ಚಂಡಾಲಿನಿಯರನ್ನು ದಿವ್ಯಲೋಕಕ್ಕೆ ಕರೆದೊಯ್ಯುವದನ್ನು ಕಂಡು ದೇವಾಲಯ ಸಮೀಪದಲ್ಲಿ ಬಹುಕಾಲದಿಂದ ಅನುಷ್ಠಾನನಿರತರಾದ ಋಷಿಗಳು ಪ್ರಶ್ನೆ ಮಾಡಿದರು.

**ಋಷಿಗಳು :-** ದೇವದೂತರೇ ಈ ಮೂವರು ಮಹಾಪಾಪಿಗಳು. ಇವರು ಯಾವ ಪುಣ್ಯಕೆಲಸವನ್ನೂ ತಮ್ಮ ಜನ್ಮದಲ್ಲಿ ಮಾಡಿಲ್ಲ. ಆದರೂ ಇವರಿಗೆ ಗಣೇಶನ ಪೂರ್ಣಾನುಗ್ರಹವಾಗಿ ದಿವ್ಯಲೋಕ ಪ್ರಾಪ್ತಿಯಾಯಿತು. ಅವರು ಮಾಡಿದ ತಪಸ್ಸೇನು ? ವ್ರತವೇನು ? ಅನುಷ್ಠಾನವೇನು ನಮಗೂ ತಿಳಿಸಿರಿ. ನಾವು ವಾಯುಭಕ್ಷಣವನ್ನು ಮಾಡುತ್ತ ಆ ದೇವನನ್ನೇ ನಿರಂತರ ಧ್ಯಾನ ಮಾಡುತ್ತಲಿದ್ದೇವೆ. ಕಠಿಣವಾಗಿ ತಪಿಸುತ್ತಲಿರುವ ನಮಗೆ ಆ ಗಜಾನನನ ಪರಮ ಪದವು ಎಂದಿಗೆ ಪ್ರಾಪ್ತವಾಗುವುದು. ತಿಳಿಸಿರಿ.''

ಋಷಿಗಳ ಬಿನ್ನಹವನ್ನು ಮನ್ನಿಸಿ ಗಣೇಶನ ದೂತರು ಗಣೇಶಪದಪ್ರಾಪ್ತಿಯ ಉಪಾಯವನ್ನು ಹೇಳತೊಡಗಿದರು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ದೂರ್ವಾಉಪಾಖ್ಯಾನದ ಎಂಬ ಆರವತ್ತೆರಡನೇ ಅಧ್ಯಾಯ ಮುಗಿದುದು*

—o—

**ಗಣೇಶದೂತರು :-** ಹಿಂದೆ ನಾರದರು ಮಹೇಂದ್ರನಿಗೆ ಹೇಳಿದ ದೂರ್ವಾಂಕುರದ ಮಹಿಮೆಯನ್ನು ಹೇಳುತ್ತೇನೆ ಕೇಳು. ಬಹಳ ಪೂರ್ವಕಾಲದಲ್ಲಿ ಸ್ಥಾವರ ಎಂಬ ಪಟ್ಟಣ. ಅಲ್ಲಿ ತಪಿಸುತ್ತಿರುವ ಕೌಂಪಿನ್ಯ ಒಬ್ಬ ಮಹಾಮುನಿ. ಅವನಿಗೆ ಆಶ್ರಯಾ ಎಂಬ ಮಡದಿ ಇದ್ದಳು. ಕೌಂಡಿನ್ನ ಮುನಿಯು ಪ್ರತಿದಿನವೂ ದೂರ್ವೆಗಳನ್ನು ಅರ್ಪಿಸಿ ಪೂಜೆ ಮಾಡುತ್ತಿದ್ದನು. ಅದನ್ನು ನೋಡಿ ಆಶ್ರಯೇಗೆ ಸಂಶಯ ಬಂದಿತು. ಅವಳು ತನ್ನ ಗಂಡನಿಗೆ ನುಡಿದಳು.

**ಆಶ್ರಯಾ :-** ಇದೇನು ? ನಿಮ್ಮ ದೇವರ ಪೂಜೆ ? ದೇವದೇವನಾದ ಗಣೇಶನ ಮೇಲೆ ಹುಲ್ಲಿನ ದೂರ್ವಿಗಳನ್ನು ಇಡುತ್ತಿರುವಿರಲ್ಲ ? ಹುಲ್ಲನ್ನು ಸಮರ್ಪಿಸಿದರೆ ಹುಳಗಳು ಕೂಡ ಮೆಚ್ಚುವದಿಲ್ಲ. ಆ ಭಗವಂತನು ಹುಲ್ಲುಗರಿಕೆಗಳ ಸಮರ್ಪಣೆಯಿಂದ ಹೇಗೆ ಪ್ರೀತನಾಗುವನು ?

**ಕೌಂಡಿಣ್ಯ :-** ಪ್ರಿಯೆ, ದೂರ್ವಾದಳದ ಮಹಾತ್ಮೆ ಅಮೋಘ, ಧರ್ಮ ಎಂಬ ನಗರದಲ್ಲಿ ಹಿಂದೆ ಒಂದು ಉತ್ಸವ ನಡೆಯಿತು. ಆ ಸಮಯದಲ್ಲಿ ಅಪ್ಸರಾಂಗನೆಯಾದ ತಿಲೋತ್ತಮೆಯು ಹಾವಭಾವವಿಲಾಸಗಳಿಂದ ನರ್ತನ ಮಾಡುತ್ತಿದ್ದಳು. ಅದನ್ನು ನೋಡಿ ಮೋಹಗೊಂಡ ಯಮದೇವನಿಗೆ ಕಾಮಬಾಧೆಯಿಂದ ಶಕ್ತಿಪಾತವಾಯಿತು. ಅವನ ವೀರ್ಯವತ್ತರವಾದ ಶಕ್ತಿಯಿಂದ ಜ್ವಾಲಾಮಾಲಿಯೆಂಬ ಕ್ರೂರ ರಕ್ಕಸನು ಉದ್ಭವಿಸಿದ. ಅವನು ತನ್ನ ಭಯಂಕರವಾದ ಧ್ವನಿಯಿಂದ ಮೂರುಲೋಕಗಳನ್ನೇ ನಡುಗಿಸಿದ. ತನ್ನ ಧೈರ್ಯ, ಶೌರ್ಯ ಕ್ರೌರ್ಯಗಳಿಂದ ಜಗತ್ತನ್ನೇ ಹಿಂಸಿಸತೊಡಗಿದ. ಆಗ ದೇವತೆಗಳೆಲ್ಲ ಉದ್ಭ್ಯಾಂತರಾಗಿ ನಾರಾಯಣನನ್ನು ಕರೆದುಕೊಂಡು ಮಹಾಗಣಪತಿಗೆ ಶರಣುಹೋದರು. ಆ ಗಜಾನನನನ್ನು ಬಗೆಬಗೆಯ ಸ್ತೋತ್ರಗಳಿಂದ ಪ್ರಾರ್ಥಿಸಿದರು. ಆಗ ಗಜಾನನನು ಅವರಿಗೆ ಸುಂದರ ಶಿಶುರೂಪದಿಂದ ಅವತರಿಸಿ ಅಭಯದಾನವನ್ನು ಮಾಡಿದನು. ಜ್ವಾಲಾಮಾಲಾಸುರ ಎಂದು ಹೆಸರಾದ ಅನಲಾಸುರನನ್ನು ವಧಿಸಲಿಕ್ಕಾಗಿಯೇ ಗಣಾಧಿಪತಿಯು ಈ ಶಿಶುರೂಪದಿಂದ ಬಂದಿರುವನು ಎಂದು ಭಾವಿಸಿದರು. ಈ ಸುದ್ದಿಯನ್ನು ಕೇಳಿ ಅನಲಾಸುರನು ಆ ಮಗುವನ್ನು ತಿಂದು ಬಿಡಬೇಕೆಂದು ಓಡೋಡಿ ಬಂದನು. ದೇವತೆಗಳು, ಋಷಿಗಳು, ಶಿಶುರೂಪಿಯಾದ ಗಣಪತಿಗೆ ''ಬಾಲಕ, ಬರುತ್ತಿದ್ದಾನೆ ಭೀಕರವಾದ ಅನಲಾಸುರ. ಅವನು ನಿನ್ನನ್ನೂ ಕೂಡ ಹೊಡೆದು ಬಡೆದು, ಕಡಿದು ಹಾಕುತ್ತಾನೆ. ನೀನು ಕೂಡ ಬದುಕಬೇಕೆಂದಿದ್ದರೆ ಇಲ್ಲಿಂದ ಓಡಿ ಹೋಗು'' ಎಂದು ಹೇಳಿ ಎಲ್ಲ ಋಷಿಗಳು ದೇವತೆಗಳು ಅಲ್ಲಿಂದ ಓಡಿಹೋದರು. ಆ ಬಾಲಕನು ಮಾತ್ರ ಜ್ವಾಲಾಮಾಲಿಯೆಂಬ ಆ ಅನಲಾಸುರನಿಗೆ ಸ್ವಲ್ಪವೂ ಬೆದರದೆ, ಬೆಚ್ಚದೆ ಧೈರ್ಯವಾಗಿ ಹಿಮಾಚಲದಂತೆ ಅಚಲನಾಗಿ ನಿಂತುಕೊಂಡ.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ದೂರ್ವಾಮಹಾತ್ಮ್ಯ ಎಂಬ ಅರವತ್ತಮೂರನೇ ಅಧ್ಯಾಯ ಮುಗಿದುದು*

**ಕೌಂಡಿನ್ಯ :-** ಆ ಅನಲಾಸುರನು ಬೆಂಕಿಯ ಉಂಡೆಗಳನ್ನು ಉಗುಳುತ್ತ ಆ ಬಾಲಕನ ಕಡೆ ನುಗ್ಗಿ ಬಂದನು. ಅವನ ಆ ಭೀಕರ ಆಕಾರದ ಅಬ್ಬರಕ್ಕೆ ಆ ಬಾಲಕನು ಹೆದರದೇ ಮಾಯಾಬಲದಿಂದ ಪ್ರಳಯಾಗ್ನಿಯ ಸ್ವರೂಪವನ್ನು ಧರಿಸಿ ಏರಿ ಬರುವ ಆ ದೈತ್ಯನನ್ನು ತನ್ನ ಎರಡೂ ಕೈಗಳಿಂದ ಎತ್ತಿ ಕೆಳಗೆ ಒಗೆದನು. ಮತ್ತು ತನ್ನ ದೇಹದ ತೀಕ್ಷ್ಣವಾದ ತೇಜಸ್ಸಿನಿಂದ ಆ ದೈತ್ಯದೇಹವೆಲ್ಲವೂ ಕರಗಿ ನೀರಾಗುವಂತೆ ಮಾಡಿ ಆ ದುಷ್ಟನ ದೇಹದ ಸಾರವನೆಲ್ಲ ಗಟಗಟಕುಡಿದುಬಿಟ್ಟ.

ಪ್ರಳಯಾಗ್ನಿಯ ಸ್ವರೂಪದಂತಿದ್ದ ಆ ಜ್ವಾಲಾಮಾಲಿಯ ದೇಹವು ಕರಗಿ ನೀರಾಗಿ ಬಾಲಕನ ಉದರದಲ್ಲಿ ಪ್ರವೇಶ ಮಾಡಿದರೂ ಆ ಬಾಲಕನ ಕುಕ್ಷಿಯಲ್ಲಿರುವ ಹದಿನಾಲ್ಕು ಲೋಕವನ್ನು ಸುಡತೊಡಗಿತು. ಆಗ ಗಣಪತಿಯು ಲೋಕವಿಡಂಬನಾರ್ಥವಾಗಿ ಈ ದೈತ್ಯನ ದೇಹಾಗ್ನಿಯಿಂದ ಜನರನ್ನೆಲ್ಲ ಕಾಪಾಡುವುದೆಂತು ?'' ಎಂದು ಚಿಂತಿಸತೊಡಗಿದನು. ಇದನ್ನು ತಿಳಿದುಕೊಂಡು ದೇವೇಂದ್ರನು ಚಂದ್ರಮಂಡಲವನ್ನು ಗಣಪತಿಯ ಭಾಲಪಟ್ಟದಲ್ಲಿ ಇರಿಸಿದನು. ಚತುರ್ಮುಖ ಬ್ರಹ್ಮನು ಸಿದ್ಧಿ ಬುದ್ಧಿ ಎಂಬ ಇಬ್ಬರು ತನ್ನ ಮಾನಸ ಪುತ್ರಿಯರನ್ನು ದೇವನಿಗೆ ಅರ್ಪಿಸಿದನು. ನಾರಾಯಣನು ಒಂದು ಕಮಲಪುಷ್ಪವನ್ನು ಕೊಟ್ಟನು. ಇದಾವುದರಿಂದಲೂ, ಅಂತರ್ದೇಹದಾಹವು ನಿಲ್ಲಲಿಲ್ಲ. ವರುಣನು ತನ್ನ ಶೀತಲಜಲದಿಂದ ಪ್ರೋಕ್ಷಿಸಿದನು. ಮಹಾದೇವನು ಸರ್ಪರಾಜನನ್ನು ಅವನ ಮೈಗೆ ಸುತ್ತಿದನು. ಆದರಿಂದಲೂ ಅವನ ಉರಿ ಶಾಂತವಾಗಲಿಲ್ಲ.

ಇದನ್ನು ತಿಳಿದು ಎಂಬತ್ತೆಂಟು ಸಾವಿರ ಮುನಿಗಳು ಆ ಗಣಪತಿಗೆ ಒಬ್ಬೊಬ್ಬರೂ ಇಪ್ಪತ್ತೊಂದರಂತೆ ದೂರ್ವಾಂಕುರಗಳನ್ನು ಗಣೇಶನಿಗೆ ಏರಿಸಿದರು. ಆದರಿಂದ ಗಣಾಧಿಪತಿಯ ಅಂತರ್ದೇಹದಾಹವು ಶಾಂತವಾಯಿತು. ಮತ್ತು ಗಣಪತಿಯು ಮುನಿಗಳನ್ನು ದೇವತೆಗಳನ್ನು ಉದ್ದೇಶಿಸಿ, ನನ್ನ ಭಕ್ತರು ನನ್ನನ್ನು ಇಪ್ಪತ್ತೊಂದು ದೂರ್ವಾಂಕುರಗಳಿಂದ ತಪ್ಪದೇ ಪೂಜಿಸಬೇಕು. ಅಷ್ಟು ಸಿಗದಿದ್ದರೆ ಒಂದು ದೂರ್ವಾಂಕುರವನ್ನಾದರೂ ಅರ್ಪಿಸಿ ನನ್ನನ್ನು ಪೂಜಿಸಬೇಕು. ದೂರ್ವೆಯಿಲ್ಲದ ಪೂಜೆಯನ್ನು ನಾನು ಎಂದೂ ಸ್ವೀಕರಿಸಲಾರೆ.'' ಅದನ್ನು ಕೇಳಿ ಎಲ್ಲ ದೇವತೆಗಳೂ ವಿಘ್ನಹರ ಎಂಬ ಗಣಪತಿಯ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿ ದೂರ್ವಾಂಕುರಗಳಿಂದ ಗಣಪತಿಯನ್ನು ಪೂಜಿಸಿದರು.

*ಇತಿ ಗಣೇಶಪುರಾಣದ ಉಪಾಸನಾ ಖಂಡದಲ್ಲಿ*
*ದೂರ್ವಾಮಹಾತ್ಮ್ಯೆ ಎಂಬ ಆರವತ್ತನಾಲ್ಕನೇ ಅಧ್ಯಾಯ ಮುಗಿದುದು*

—o—

## ಅಧ್ಯಾಯ - ೬೫

**ಕೌಂಡಿನ್ಯ :-** ಆಶ್ರಯಾದೇವಿಯೇ ಹಿಂದೆ ನಾರದರು ಗಜಾನನನಿಗೆ ಹೇಳಿದ ಒಂದು ಆಶ್ಚರ್ಯಕರವಾದ ಸಂಗತಿಯನ್ನು ಹೇಳುತ್ತೇನೆ ಕೇಳು.

ಮೈಥಿಲದೇಶದಲ್ಲಿ ಜನಕ ಎಂಬ ಓರ್ವ ಮಹಾರಾಜನು ಇದ್ದನು. ಅವನು ವೇದ ವೇದಾಂಗಗಳಲ್ಲಿ ಪಾರಂಗತನು. ಅವನು ನಿರಂತರವೂ ಅನ್ನದಾನವನ್ನು ಮಾಡುತ್ತಲಿದ್ದ. ಬ್ರಾಹ್ಮಣರನ್ನು ಕಂಡ ಕೂಡಲೇ ಬಗೆಬಗೆಯ ವಸ್ತ್ರ, ಅಲಂಕಾರ ದಕ್ಷಿಣೆಗಳನ್ನಿತ್ತು ಪೂಜೆ ಮಾಡುತ್ತಲಿದ್ದ. ದೀನರು, ದಲಿತರು, ಸ್ಖಲಿತರು, ಕುರುಡರು, ಕುಂಟರು, ಊನರು, ಹೀನರಾದವರಿಗೆ ಅನ್ನ, ಹಣ ಮತ್ತು ಇಷ್ಟವಾದ ಪದಾರ್ಥಗಳನ್ನಿತ್ತು ಸಂತೋಷ ಪಡಿಸುತ್ತಿದ್ದ. ಆದರೆ ಅವನು ತಾನೊಬ್ಬನೇ ಮಹಾಪಂಡಿತ, ದೊಡ್ಡ ಬ್ರಹ್ಮಜ್ಞಾನಿ, ಇತರೆಲ್ಲರೂ ಶುಂಠರು, ಶುಂಭರು ಎಂದು ತಿಳಿದು ದುರಭಿಮಾನದಿಂದ ಮೆರೆಯುತ್ತಿದ್ದ. ನಾರದರು ಅವನಿಗೆ ''ಜಗಜ್ಜನ್ಮಾದಿ ಕಾರಣನಾದ ಗಣೇಶನನ್ನು ಉಪಾಸಿಸು. ಗಣಪತಿಯು ಇಷ್ಟಪ್ರದ, ಕಷ್ಟನಾಶಕ'' ಎಂದು ಉಪದೇಶಿಸಿದರು. ಅದಕ್ಕೆ ಆ ಗರ್ವಿಷ್ಠನಾದ ಜನಕನು ''ನಾನೇ ಜಗತ್ಕಾರಣ ಕರ್ತ, ನನಗಿಂತ ಉತ್ತಮವಸ್ತು, ಅಥವಾ ದೇವತೆಯು ಯಾವುದೂ ಇಲ್ಲ'' ಎಂದು ಗರ್ವದಿಂದ ನುಡಿದ'' ಅದನ್ನು ನಾರದರು ಗಣಪತಿಗೆ ತಿಳಿಸಿದರು.

ಆಗ ಗಜಾನನನು ಜನಕರಾಜನ ಗರ್ವಭಂಗಮಾಡಲಿಕ್ಕಾಗಿ ಓರ್ವ ದಟ್ಟದರಿದ್ರ ರೋಗಿಷ್ಠ ವೃದ್ಧಬ್ರಾಹ್ಮಣನ ವೇಷ ಸ್ವೀಕರಿಸಿ ಜನಕರಾಜನ ಅರಮನೆಗೆ ಬಂದನು. ಅವನ ದೇಹದ ಗಾಯಗಳಿಂದ ಕೀವು ರಕ್ತಗಳು ಸುರಿಯುತ್ತಿದ್ದವು. ಕೊಳೆತ ಗಾಯಗಳಿಂದ ದುರ್ವಾಸನೆಯು ಬರುತ್ತಲಿತ್ತು. ಅವನನ್ನು ನೋಡಿದವರೆಲ್ಲರೂ ಮೂಗು ಮುಚ್ಚಿಕೊಂಡು ದೂರ ಹೋಗುತ್ತಿದ್ದರು. ಮೈಮೇಲಿನ ಬಟ್ಟೆಗಳೆಲ್ಲ ಹರಿದುಚಿಂದಿಗಳಾಗಿದ್ದವು.

ಜನಕರಾಜನ ಬಳಿಗೆ ಬಂದು ಅವನು ''ನನಗೆ ಬಹಳ ಹಸಿವೆಯಾಗಿದೆ. ಅನ್ನ ಕೊಡು. ನಾನು ಹೊಟ್ಟೆ ತುಂಬ ಅನ್ನ ಉಂಡು ಎಷ್ಟೋ ವರ್ಷಗಳಾಗಿವೆ. ನೀನು ಅನ್ನದಾನ ಮಾಡುವ ಉದಾರ ರಾಜ ಎಂದು ನಿನ್ನ ಬಳಿಗೆ ಬಂದಿದ್ದೇನೆ. ನನಗೆ ತೃಪ್ತಿಯಾಗುವಷ್ಟು ಅನ್ನವನ್ನು ನೀಡು.''

ಆಗ ಜನಕರಾಜನು ಕೊಳಕುಬಟ್ಟೆಯ ದುರ್ಗಂಧವಾಸನೆಯ ರೋಗಿಷ್ಠನಾದ ಆ ಮುದಿ ಬ್ರಾಹ್ಮಣನನ್ನು ಕಂಡು ಮರುಕಗೊಂಡನು. ದೇವರು ಯಾವ ರೂಪದಿಂದ ಎಂದು ಎಲ್ಲಿ ಬರುವನೋ ನೇಮವಿಲ್ಲ. ಹರಕು ಬಟ್ಟೆಯ ಈ ಕೊಳಕು ಬ್ರಾಹ್ಮಣನೇ ಭಗವಂತನು ಏಕಾಗಿರಬಾರದು ? ಎಂದು ಅವನನ್ನು ಕರೆದು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದ. ಅನಂತರ ಅವನಿಗೆ ಎಲೆ ಬಡಿಸಿ ಸೇವಕರಿಂದ ಅನ್ನವನ್ನು ಮುಂದೆ ಇರಿಸಿದ. ಬಡಿಸಿದ ಎಲ್ಲ ಆಹಾರವಸ್ತುಗಳನ್ನು ಆ ರೋಗಿಷ್ಠ ಬ್ರಾಹ್ಮಣ ಒಂದೇ ತುತ್ತಿನಲ್ಲಿ ಮುಗಿಸಿದ. ಮತ್ತೆ ಅನ್ನವನ್ನು ಬೇಡಿದ. ಸೇವಕರು ತಂದು ಹಾಕಿದ ಅಷ್ಟೂ ಅನ್ನವನ್ನು ಒಂದು ನಿಮಿಷದಲ್ಲಿ ಉಂಡು ಮುಗಿಸಿದ ಆ ವೃದ್ಧ ಬ್ರಾಹ್ಮಣ.

ರಾಜನ ಅಪ್ಪಣೆಯಿಂದ ಪರಿಚಾರಕರು ಮನೆಯಲ್ಲಿ ಮಾಡಿ ಇರಿಸಿದ ಸಾವಿರ ಜನರಿಗೆ ಸಾಕಾಗುವಷ್ಟು ಸಿದ್ಧ ಮಾಡಿಇಟ್ಟ ಅನ್ನವನ್ನೆಲ್ಲ ಆ ರೋಗಿಷ್ಠ ಬ್ರಾಹ್ಮಣನಿಗೆ ಬಡಿಸಿದರು. ಅದೆಲ್ಲವನ್ನೂ ಒಂದೇ ತುತ್ತಿನಲ್ಲಿ ಕಬಳಿಸಿಬಿಟ್ಟ ಆ ಭೂಪ. ಮತ್ತೆ ರಾಜನು ಲೆಕ್ಕವಿಲ್ಲದಷ್ಟು ಪಾತ್ರೆಗಳಲ್ಲಿ ಅಡಿಗೆ ಮಾಡಿಸಿ ಬಡಿಸಿದ. ಅಡಿಗೆ ಸಿದ್ಧವಾದಂತೆ ಪಾಚಕರು ಅವನಿಗೆ ಬಡಿಸುತ್ತಲೇ ಇದ್ದರು. ಅವರು ಕಷ್ಟಪಟ್ಟು ಮಾಡಿದ ಅಡಿಗೆಯನ್ನೆಲ್ಲ ಆ ಬಕಾಸುರನಂಥ ಬ್ರಾಹ್ಮಣ ಗಬಗಬ ತಿಂದು ಮುಗಿಸಿಬಿಡುತ್ತಲಿದ್ದ. ಅರಮನೆಯಲ್ಲಿ ಊರಿನ ಅಂಗಡಿಗಳಲ್ಲಿ ಇರುವ ಧಾನ್ಯಗಳೆಲ್ಲವೂ ಮುಗಿದವು. ಬೇರೆ ಹಳ್ಳಿ, ಪಟ್ಟಣಗಳಲ್ಲಿ ಇದ್ದ ಬಿದ್ದ ಧಾನ್ಯಗಳನ್ನೆಲ್ಲ ಬಳಿದುಕೊಂಡು ಬಂದು ಅಡಿಗೆಮಾಡಿ ಬಡಿಸಿದರು. ಅದರೂ ಆ ಬ್ರಾಹ್ಮಣನು ಅದೆಲ್ಲವನ್ನೂ ಉಂಡು ತಿಂದು ಇನ್ನೂ ಹಸಿವೆ, ಮತ್ತೂ ಬಡಿಸಿರಿ'' ಎನ್ನುತ್ತಿದ್ದ. ನಿರುಪಾಯನಾಗಿ ನಿಂತುಕೊಂಡ ರಾಜ ಮತ್ತು ಪರಿವಾರದವರಿಗೆ ಆ ಮುದಿ ಬ್ರಾಹ್ಮಣ ಹೇಳಿದ.

''ಜನಕರಾಜನು ಲೋಕಪ್ರಸಿದ್ಧನಾದ ಮಹಾ ಅನ್ನದಾನಿ'' ಎಂಬ ಕೀರ್ತಿಯನ್ನು ಕೇಳಿ ನಾನು ಇಲ್ಲಿ ಬಂದೆ. ಆದರೆ ಅವನಿಗೆ ನನಗೆ ತೃಪ್ತಿಯಾಗುವಷ್ಟು ಅನ್ನವನ್ನು ನೀಡಲಿಕ್ಕೆ ಆಗಲಿಲ್ಲ. ಆದುದರಿಂದ ನಾನು ಬೇರೆಡೆಗೆ ಹೋಗುತ್ತೇನೆ'' ಎಂದು ಹೇಳಿ ಅಲ್ಲಿಂದ ಹೊರಟ.

ಬಹುಭಕ್ಷಿಯಾದ ಆ ಬ್ರಾಹ್ಮಣ ಅರಮನೆಯಿಂದ ಹೊರಟು ಆಹಾರಕ್ಕಾಗಿ ಅತ್ತಿತ್ತ ಅಲೆಯುತ್ತ ತ್ರಿಷಿರ ಎಂಬ ಓರ್ವ ದರಿದ್ರ ಬ್ರಾಹ್ಮಣನ ಮನೆಗೆ ಬಂದ. ಅವನ ಹೆಂಡತಿ ವಿರೋಚನೆ ಪರಮ ಸಾಧ್ವಿ. ಅವನ ಮನೆಯಲ್ಲಿ ದಟ್ಟದಾರಿದ್ರ್ಯ. ಒಂದು ಮುಷ್ಟಿಧಾನ್ಯವೂ ಇರಲಿಲ್ಲ. ಅಡುಗೆ ಮಾಡುವ ಪಾತ್ರೆಗಳೂ ಇರಲಿಲ್ಲ.

*ಇತಿ ಗಣೇಶಪುರಾಣದ ಉಪಾಸನಾ ಖಂಡದಲ್ಲಿ*
*ಜನಕಪರೀಕ್ಷೆ ಎಂಬ ಆರವತ್ತೈದನೇ ಅಧ್ಯಾಯ ಮುಗಿದುದು*



**ಕೌಂಡಿನ್ಯ** :- ದಟ್ಟದರಿದ್ರನಾದ ಆ ಬಡಬ್ರಾಹ್ಮಣದಂಪತಿಗಳು ರೋಗಿಷ್ಠನಾದ ಆ ವೃದ್ಧಬ್ರಾಹ್ಮಣನನ್ನು ಆದರದಿಂದ ಪೂಜಿಸಿದರು. ಆ ಮನೆಯ ಮಧ್ಯದಲ್ಲಿ ಒಂದು ಗಣನಾಯಕನ ಮೂರ್ತಿಯನ್ನು ಪ್ರತಿಷ್ಠಿಸಿ ಅದನ್ನು ಹೂ, ಚಿಗುರುಗಳಿಂದ ಅಲಂಕರಿಸಿದ್ದರು. ಆಗ ಆ ರೋಗಿಷ್ಠ ಬ್ರಾಹ್ಮಣನು ಆ ದಂಪತಿಗಳಿಗೆ ''ನಿಮ್ಮ ಈ ಶುಷ್ಕಪೂಜೆಯನ್ನು ಸಾಕುಮಾಡಿರಿ. ನಾನು ಹಸಿದು ಕಕ್ರಾಂತನಾಗಿದ್ದೇನೆ. ಜನಕ ರಾಜನು ಮಹಾದಾನಿ ಎಂಬ ಹೆಸರನ್ನು ಕೇಳಿ ನಾನು ಅವನ ಮನೆಗೆ ಹೋಗಿದ್ದೆ. ಅವನಿಗೆ ನನಗೆ ತೃಪ್ತಿಯಾಗುವಷ್ಟು ಅನ್ನವನ್ನು ನೀಡಲಿಕ್ಕೆ ಆಗಲಿಲ್ಲ. ನನ್ನ ಹಸಿವು ಇಂಗಲಿಲ್ಲ. ಅದಕ್ಕಾಗಿ ನಾನು ನಿನ್ನ ಮನೆಗೆ ಬಂದಿದ್ದೇನೆ. ನನಗೆ ಏನಾದರೂ ಕೊಡು'' ಎಂದು ಅಂಗಲಾಚಿದನು.

ಆ ದರಿದ್ರಬ್ರಾಹ್ಮಣನು ದೀನದೀನನಾಗಿ ಕೈ ಮುಗಿದು ಹೇಳಿದ. ''ಪೂಜ್ಯರೇ, ನಾನು ಕಡುಬಡವ. ಸಮ್ರಾಟ ಸಾರ್ವಭೌಮನಾದ ಜನಕರಾಜನಿಗೆ ನಿಮಗೆ ತೃಪ್ತಿಯಾಗುವಷ್ಟು ಅನ್ನದಾನವನ್ನು ಮಾಡಲಿಕ್ಕೆ ಆಗಲಿಲ್ಲ ಎಂದು ಹೇಳಿದ್ದೀರಿ. ನಾನಂತೂ ಆಗರ್ಭದರಿದ್ರ. ಮನೆಯಲ್ಲಿ ಯಾವುದೇ ಕಾಳುಕಡಿ ಇರುವದಿಲ್ಲ. ಗಣಪತಿಯ ಪೂಜೆಗಾಗಿ ತಂದು ಇರಿಸಿದ ದೂರ್ವಿಯು ಮಾತ್ರ ಇರುತ್ತದೆ'' ಎಂದು ದೈನ್ಯದಿಂದ ಹೇಳಿದ.

ಅದಕ್ಕೆ ಆ ರೋಗಿಷ್ಠ ಬ್ರಾಹ್ಮಣನು ''ದಂಪತಿಗಳೆ, ಹಾಗಿದ್ದರೆ ಯೋಚಿಸುವದೇಕೆ ? ನಿಮ್ಮಲ್ಲಿ ಇರುವ ಒಂದು ದೂರ್ವಾಂಕುರವನ್ನೇ ನನಗೆ ಭಕ್ತಿಯಿಂದ ಅರ್ಪಿಸಿರಿ. ಅದರಿಂದಲೇ ನಾನು ತೃಪ್ತನಾಗುತ್ತೇನೆ'' ಎಂದು ಕೇಳಿದನು. ಆಗ ಆ ಬಡಬ್ರಾಹ್ಮಣನ ಮಡದಿಯಾದ ವಿರೋಚನೆಯು ಆ ರೋಗಿಷ್ಠ ಬ್ರಾಹ್ಮಣನನ್ನು ಕಣ್ಣು ತೆರೆದು ಒಮ್ಮೆ ನೋಡಿದಳು ಅವಳಿಗೆ ಏನು ಎನಿಸಿತೋ ಏನೋ ! ಗಣೇಶನ ಪೂಜೆಗಾಗಿ ತಂದು ಇರಿಸಿದ ಒಂದು ದೂರ್ವಿಯನ್ನು ಬಹಳ ಭಕ್ತಿಯಿಂದ ಆ ರೋಗಿಷ್ಠಬ್ರಾಹ್ಮಣನಿಗೆ ಕೊಟ್ಟು ಕೈ ಮುಗಿದಳು. ಆ ದೂರ್ವಾಂಕುರವನ್ನು ಸಮರ್ಪಿಸುವಾಗ ಅನ್ನ, ಪಾಯಸ, ಬಗೆಬಗೆಯ ಭಕ್ಷ್ಯಭೋಜ್ಯ ಅನೇಕ ವಿಧವಾದ ಶಾಕಪಾಕಗಳನ್ನೆಲ್ಲ ಆ ದೂರ್ವಾಂಕುರದಲ್ಲಿ ಅನುಸಂಧಾನಮಾಡಿ ''ಮಹಾಗಣಪತಿಃ ಪ್ರಿಯತಾಂ'' ಎಂದು ಸಂಕಲ್ಪಮಾಡಿ ಭಕ್ತಿಯಿಂದ ನೀರು ಬಿಟ್ಟು ಅರ್ಪಿಸಿದಳು.

ಸರ್ವಜ್ಞನಾದ ಆ ಭಗವಂತನು ವಿರೋಚನೆಯ ಏಕಾಗ್ರಭಕ್ತಿಗೆ ಮೆಚ್ಚಿದನು. ಆ ಸಾಧ್ವೀಮಣಿಯು ಆ ಹುಲ್ಲಿನ ಗರಿಕೆಯಲ್ಲಿ ಅನುಸಂಧಾನಮಾಡಿದ ಎಲ್ಲ ವಿಧವಾದ ಪಕ್ವಾನ್ನ ಮೃಷ್ಟಾನ್ನ, ಭಕ್ಷಭೋಜ್ಯಗಳನ್ನು ತಿನ್ನುವವನಂತೆ ಆ ದೂರ್ವಿಯನ್ನು ಸಂತೋಷ ದಿಂದ ಸವಿಮಾಡಿಕೊಂಡು ಭುಂಜಿಸಿದನು. ಆ ಭಕ್ತಿಯುತವಾದ ದೂರ್ವಾಂಕುರದಿಂದ ಭಗವಂತನ ಜಠರಾಗ್ನಿಯು ತಣಿಯಿತು. ಅವನ ಹಸಿವೆ ಹಿಂಗಿತು. ಅವನು ಪರಮ ಸಂತುಷ್ಟನಾದನು. ಮತ್ತು ಆ ತೃಷಿರ ಬ್ರಾಹ್ಮಣನನ್ನು ಆನಂದದಿಂದ ಬಿಗಿದಪ್ಪಿದನು.

ಆ ಕ್ಷಣದಲ್ಲಿ ರೋಗಿಷ್ಠ ಬ್ರಾಹ್ಮಣ ರೂಪದಲ್ಲಿ ಇದ್ದ ಗಜಾನನು ತನ್ನ ನಿಜರೂಪವನ್ನು ಧರಿಸಿನಿಂತನು. ಕೈಗಳಲ್ಲಿ ಕಮಲಪುಷ್ಪ, ಕೊಡಲಿ, ಮಾಲೆಕೊಂಬುಗಳನ್ನೂ, ತಲೆಯ ಮೇಲೆ ರತ್ನ ಖಚಿತಕಿರೀಟಗಳನ್ನೂ ಕಿವಿಗಳಲ್ಲಿ ಮಣಿಮಯದ ಕುಂಡಲಗಳನ್ನೂ ಧರಿಸಿದ್ದನು. ದಿವ್ಯಪೀತಾಂಬರವನ್ನು ಉಟ್ಟು ತೊಟ್ಟು ದಿವ್ಯಸುಗಂಧಿಗಂಧವನ್ನು ಲೇಪಿಸಿಕೊಂಡು ನಿಂತ ಮಹಾಗಣಾಧಿಪತಿಯು ಆ ಬಡಬ್ರಾಹ್ಮಣದಂಪತಿಗಳಿಗೆ ತನ್ನ ದಿವ್ಯಸುಂದರವಾದ ಭಗವತ್‌ಸ್ವರೂಪದ ಸಂದರ್ಶನವನ್ನಿತ್ತು ಅನುಗ್ರಹಿಸಿದನು. ಮತ್ತು ಸುಪ್ರಸನ್ನ ಮನಸ್ಸಿನಿಂದ ಆ ದಂಪತಿಗಳಿಗೆ ಹೇಳಿದನು.

**ಗಜಾನನ :-** ಭಕ್ತ ದಂಪತಿಗಳೇ, ನೀವು ನೀಡಿದ ದೂರ್ವಾಂಕುರ ದಾನದಿಂದ ನಾನು ಪರಿತುಷ್ಟನಾಗಿದ್ದೇನೆ. ನಿಮಗೆ ಬೇಕಾದ ವರವನ್ನು ಬೇಡಿರಿ.

ಆಗ ಆ ಬಡಬ್ರಾಹ್ಮಣ ದಂಪತಿಗಳು ''ದೇವ, ದೇವ, ನಮಗೆ ಜನ್ಮಜನ್ಮಾಂತರದಲ್ಲಿಯೂ ನಿನ್ನಲ್ಲಿ ಧೃಡವಾದ ಭಕ್ತಿ ಇರುವಂತೆ ಮಾಡು. ಮತ್ತು ನಮ್ಮನ್ನು ಈ ದುಸ್ತರವಾದ ಸಂಸಾರದಿಂದ ಪಾರು ಮಾಡು.

ದಂಪತಿಗಳು ಆಡಿದ ಈ ನಿಸ್ಪೃಹದನುಡಿಗಳನ್ನು ಕೇಳಿ ಗಜಾನನು ತಥಾಸ್ತು ಎಂದು ಹೇಳಿ ಅವರಿಗೆ ಅಭೀಷ್ಟವಾದ ವರಗಳನ್ನು ಕೊಟ್ಟು ಅನುಗ್ರಹಿಸಿದನು.

ಕೌಂಡಿನ್ಯರು ಪುಣ್ಯಶೀಲಳಾದ ಆಶ್ರಯಾ ಸಾಧ್ವೀಮಣಿಗೆ ಈ ದೂರ್ವಾಂಕುರ ಮಹಿಮೆಯನ್ನು ಹೇಳಿ ತಮ್ಮ ಮಡದಿಗೆ ಮತ್ತೆ ವಿಶ್ವಾಸಪೂರ್ವಕವಾಗಿ ಹೇಳಿದರು. ನಾನು ದೂರ್ವಾಂಕುರಗಳಿಂದ ಗಣಪತಿಯ ಪೂಜೆಯನ್ನು ಮಾಡುವದನ್ನುನೋಡಿ ನೀನು ಕೇಳಿದೆಯಷ್ಟೇ! ಈ ಹುಲ್ಲಿನ ಹೊರೆಯಭಾರವನ್ನು ಗಣಪತಿಯ ಮೇಲೆ ಏಕೆ ಹೇರುವಿರಿ? ಎಂದು ನಿನಗೆ ಸಂಶಯ ಬಂದಿದೆ. ಅದಕ್ಕಾಗಿ ನಾನು ನಿನಗೆ ದೂರ್ವಾಂಕುರ ಮಹಿಮಾಪೂರಿತವಾದ ಜನಕರಾಜನ ಉಪಾಖ್ಯಾನವನ್ನು ಹೇಳಿದ್ದೇನೆ. ಈಗ ನೀನು ಗಣಪತಿಗೆ ನಾನು ಸಮರ್ಪಿಸಿದ ದೂರ್ವಾದಳಗಳ ರಾಶಿಯಲ್ಲಿಯ ಒಂದು ದೂರ್ವೆಯನ್ನು ಕೈಯಲ್ಲಿ ತೆಗೆದುಕೋ. ಇಂದ್ರನ ಸಮೀಪಕ್ಕೆ ಹೋಗು, ಅವನಿಗೆ ಆಶೀರ್ವಾದ ಮಾಡು. ಅನಂತರ ಚಿನ್ನವನ್ನು ಯಾಚಿಸು. ನೀನು ಯಾಚಿಸುವ ಚಿನ್ನವು ಆ ದೂರ್ವಾಂಕುರದ ತೂಕದಷ್ಟೇ ಇರಬೇಕು. ಅದು ಹೆಚ್ಚಾಗಬಾರದು, ಕೊರೆಯಾಗಬಾರದು, ಕಡಿಮೆಯಾಗಬಾರದು. ಹೀಗೆ ನ್ಯೂನಾಧಿಕವಾಗದ, ದೂರ್ವಾಂಕುರ ತೂಕದ ಚಿನ್ನವನ್ನು ಇಂದ್ರನಿಂದ ಪಡೆದು ಅದನ್ನು ನಾನು ಇದ್ದಲ್ಲಿಗೆ ತೆಗೆದುಕೊಂಡು ಬಾ'' ಎಂದು ಹೇಳಿದನು.

ಪತಿಯ ಮಾತುಗಳನ್ನು ಕೇಳಿ ಪತಿವ್ರತಾಶಿರೋಮಣಿಯಾದ ಆಶ್ರಯೆಯು ತನ್ನ ಕೈಯಲ್ಲಿ ತನ್ನ ಪತಿಯಾದ ಕೌಂಡಿನ್ಯನು ಗಣಪತಿಗೆ ಏರಿಸಿದ ದೂರ್ವಿಗಳಲ್ಲಿ ಒಂದು ದೂರ್ವಿಯನ್ನು ಹಿಡಿದುಕೊಂಡು ಇಂದ್ರನ ಸಮೀಪಕ್ಕೆ ತೆರಳಿದಳು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಆರವತ್ತಾರನೇ ಅಧ್ಯಾಯ ಮುಗಿದುದು*

—o—

ಕೌಂಡಿಣ್ಯನ ಕುಟುಂಬಿನಿಯಾದ ಆಶ್ರಯೇಯು ದೂರ್ವಾಂಕುರವನ್ನು ಕೈಯಲ್ಲಿ ತೆಗೆದುಕೊಂಡು ಇಂದ್ರನ ಸಮೀಪಕ್ಕೆ ಬಂದಳು. ಹೃತ್ಪೂರ್ವಕವಾಗಿ ಅವನನ್ನು ಆಶೀರ್ವದಿಸಿದಳು. ಮತ್ತು ಕೇಳಿದಳು. ''ಸುರೇಶ್ವರ, ನಾನು ನನ್ನ ಪತಿಯ ಆಜ್ಞಾನುಸಾರವಾಗಿ ಸುವರ್ಣವನ್ನು ಯಾಚಿಸಲು ನಿನ್ನ ಹತ್ತಿರ ಬಂದಿದ್ದೇನೆ. ನನಗೆ ಸುವರ್ಣವನ್ನು ದಯಮಾಡಿ ನೀಡು'' ಎಂದು ಕೇಳಿದಳು. ಅದನ್ನು ಕೇಳಿ ದೇವೇಂದ್ರನು ಸತೀಮಣಿಯೇ, ಇಷ್ಟಕ್ಕಾಗಿ ಪ್ರಯಾಸಪಟ್ಟು ನೀನು ಸ್ವರ್ಗದವರೆಗೆ ಏಕೆ ಬಂದೆ ? ನೀನು ಅಲ್ಲಿಯೇ ಇದ್ದು ಹೇಳಿಕಳಿಸಿದ್ದರೆ ನಾನು ನಿನಗೆ ಬೇಕಾದಷ್ಟು ಬಂಗಾರವನ್ನು ಕೊಟ್ಟು ಕಳಿಸುತ್ತಿದ್ದೆ. ನೀನು ವ್ಯರ್ಥವಾಗಿ ಶ್ರಮಪಟ್ಟೆ'' ಎಂದು ನುಡಿದನು.

**ಆಶ್ರಯಾ** :- ಸುರರಾಜ, ನನಗೆ ಹೆಚ್ಚಿನ ಚಿನ್ನ ಬೇಕಾಗಿಲ್ಲ. ನಾನು ತಂದ ದೂರ್ವಾಂಕುರದ ತೂಕಕ್ಕೆ ಸಮಾನವಾಗುವಷ್ಟು ಚಿನ್ನವನ್ನು ನನಗೆ ಕೊಡು. ಇದರ ತೂಕಕ್ಕೆ ಕಿಂಚಿತ್ ಹೆಚ್ಚಾಗಬಾರದು. ಕೊಂಚವೂ ಕಡಿಮೆಯಾಗಬಾರದು. ಇಷ್ಟು ದೂರ್ವಾಪ್ರಮಾಣ ಪರಿಮಿತವಾದ ಚಿನ್ನವನ್ನು ಮಾತ್ರ ನನಗೆ ಕೊಡು.

ಅದನ್ನು ಕೇಳಿ ದೇವೇಂದ್ರನು ಒಬ್ಬ ದೂತನನ್ನು ಕೊಟ್ಟು ಆ ಆಶ್ರಯಾ ಸಾಧ್ವೀಮಣಿಯನ್ನು ಕುಬೇರನ ಕಡೆಗೆ ಕಳಿಸಿದನು. ತನ್ನ ದೂತನ ಮುಖಾಂತರ ''ಈ ಹೆಣ್ಣು ಮಗಳಿಗೆ ಅವಳು ತಂದ ದೂರ್ವಿಯ ತೂಕಾ ತೂಕ ಬಂಗಾರವನ್ನು ಕೊಡು ಎಂದು ನಿರೋಪವನ್ನು ಕಳಿಸಿದನು.

ಆಗ ಕುಬೇರನು ತನ್ನ ದೂತರಿಗೆ ಬಂಗಾರದ ಗಟ್ಟಿಗಳನ್ನು ಕೋಶಾಗಾರದಿಂದ ತರಲಿಕ್ಕೆ ಹೇಳಿದನು. ಅವರು ಬಹಳ ಭಾರವಾದ ಬಂಗಾರದ ಗಟ್ಟಿಗಳನ್ನು ತಕ್ಕಡಿಯ ಒಂದು ಪರಡಿಯಲ್ಲಿ ಇಟ್ಟರು. ಇನ್ನೊಂದು ಪರಡಿಯಲ್ಲಿ ಕೌಂಡಿಣ್ಯನು ಗಣಪತಿಗೆ ಏರಿಸಿದ ಅವನ ಹೆಂಡತಿ ಆಶ್ರಯೆಯ ಕೈಯಲ್ಲಿ ಹಿಡಿದುಕೊಂಡು ಬಂದ ದೂರ್ವಾಂಕುರವನ್ನು ಇಟ್ಟರು. ಎರಡನ್ನೂ ತೂಗಿದರು. ದೂತರು ತಂದು ಒಟ್ಟಿದ ಬಂಗಾರದ ಗಟ್ಟಿಗಳು ದೂರ್ವೆಯ ತೂಕಕ್ಕೆ ಏರಲಿಲ್ಲ. ಅನಂತರ ಕುಬೇರನು ಎಣ್ಣೆತೂಗುವ ದೊಡ್ಡ ತಕ್ಕಡಿಯನ್ನು ತರಿಸಿ ಆ ದೂರ್ವೆಯನ್ನು ತೂಗಿಸಿದನು. ತೂಕ ಸರಿಯಾಗಿ ಬರಲಿಲ್ಲ. ದೂರ್ವೆಯನ್ನು ಇಟ್ಟ ಪರಡಿಯು ನೆಲಕ್ಕೆ ಕುಳಿತಿತು. ಆಗ ಕುಬೇರನು ಚಿನ್ನ ಇರಿಸುವ ತಕ್ಕಡಿಯ ಪರಡಿಗೆ ಬಂಗಾರದ ಕಡಾಯಿಯನ್ನು ಕಟ್ಟಿಸಿ ಅದರಲ್ಲಿ ಮತ್ತೆ ಚಿನ್ನದ ಬಗೆಬಗೆಯ ಆಭರಣಗಳನ್ನು ಇರಿಸಿದನು. ಆದರೂ ದೂರ್ವೆಯನ್ನು ಇಟ್ಟ ಬಟ್ಟಲು ಮೇಲೆ ಏಳಲಿಲ್ಲ. ಕುಬೇರನು ತನ್ನ ಭಂಡಾರದಲ್ಲಿದ್ದ ತನ್ನ ಐಶ್ವರ್ಯವನ್ನೆಲ್ಲ ತಂದು ತಕ್ಕಡಿಯಲ್ಲಿ ತುಂಬಿಸಿಟ್ಟನು. ದೂರ್ವೆಯ ತೂಕ ಬರಲಿಲ್ಲ. ಕುಬೇರನಿಗೆ ಅತ್ಯಂತ ಆಶ್ಚರ್ಯವಾಯಿತು. ಅವನು ಆಗ ತನ್ನ ಹೆಂಡತಿಯಾದ ಬುದ್ಧಿಯನ್ನು ಕರೆದು ತನ್ನ ಮನೆಯಲ್ಲಿರುವ ಆಭರಣಗಳನ್ನೆಲ್ಲ ತರಿಸಿ ಹಾಕಿಸಿದನು. ಅದಕ್ಕೂ ತೂಕ ಬಾರದಾಗ ತಾವಿಬ್ಬರೂ ಗಂಡ ಹೆಂಡತಿ ಆ ಚಿನ್ನ ಒಟ್ಟುವ

ಪರಡಿಯಲ್ಲಿ ಕುಳಿತರು. ಆಗಲೂ ದೂರ್ವೆಯ ತೂಕ ಬಾರದಾಗ ಕುಬೇರನು ಗಾಬರಿಯಾಗಿ ಇಂದ್ರನಿಗೆ ಹೇಳಿ ಕಳಿಸಿದನು. ಆಗ ದೇವೇಂದ್ರನು ತನ ಸರ್ವಸ್ವವನ್ನೆಲ್ಲ ತೆಗೆದುಕೊಂಡು ಒಂದು ದೂರ್ವೆಯ ತೂಕಕ್ಕೆ ಇಟ್ಟನು. ಏನಾದರೂ ದೂರ್ವೆಯ ಪರಡಿ ನೆಲ ಬಿಟ್ಟು ಮೇಲೆ ಏಳಲಿಲ್ಲ. ಆಗ ದೇವೇಂದ್ರನು ಹರಿಹರರನ್ನು ಭಕ್ತಿಯಿಂದ ನೆನೆದನು. ಕೂಡಲೇ ಆ ಇಬ್ಬರೂ ದೇವತೆಗಳೂ ಕುಬೇರನ ಅಲಕಾವತಿಗೆ ಬಂದರು. ತಮ್ಮ ತಮ್ಮ ಲೋಕಗಳಾದ ವೈಕುಂಠ ಕೈಲಾಸಗಳೊಡನೆ ಆ ಚಿನ್ನದ ಕಡಾಯಿಯನ್ನು ಹತ್ತಿ ಕುಳಿತರು. ಇಷ್ಟಾದರೂ ಆ ದೂರ್ವೆಯ ತೂಕ ಬರಲೇ ಇಲ್ಲ. ಆಗ ಶಿವ, ವಿಷ್ಣು, ಕುಬೇರ, ಮೂವರೂ ಕಡಾಯಿಯಿಂದ ಕೆಳಗೆ ಇಳಿದು ವರುಣ, ಇಂದ್ರ, ಅಗ್ನಿ, ವಾಯು ಮೊದಲಾದ ದೇವತೆಗಳೊಡನೆ ಕೌಂಡಿನ್ಯ ಮುನಿಯ ಆಶ್ರಮಕ್ಕೆ ಬಂದರು. ಮತ್ತು ಅವನಿಗೆ ಹೇಳಿದರು.

**ದೇವತೆಗಳು :-** ಮಹಾತ್ಮನಾದ ಮುನಿವರ್ಯ, ನಿನ್ನ ಮಡದಿಯಾದ ಆಶ್ರಯೆಯು ನಮ್ಮೆಲ್ಲರ ಸತ್ವಮಹತ್ವದ ತೂಕವನ್ನು ತೂಗಿಬಿಟ್ಟಳು. ನಾವು ಯಾರೂ ನಮ್ಮ ಐಶ್ವರ್ಯ ನಮ್ಮ ಲೋಕಗಳೊಡನೆ ಕುಳಿತು ತೂಗಿಸಿಕೊಂಡರೂ ನಿನ್ನ ದೂರ್ವೆಯ ತೂಕಕ್ಕೆ ಏರಲಿಲ್ಲ. ನೀನು ಭಗವಂತನಾದ ಗಜಾನನನ ತಲೆಯಮೇಲೆ ಈ ದೂರ್ವೆಯನ್ನು ಭಕ್ತಿಪೂರ್ವಕವಾಗಿ ಸಮರ್ಪಿಸಿದ್ದೆ. ಆ ಒಂದು ದೂರ್ವೆಯ ತೂಕಕ್ಕೆ ಮೂರು ಲೋಕಗಳೂ, ಮೂರು ಲೋಕದ ಅಧೀಶ್ವರರೂ ಸರಿ ಎಂದು ತೂಗಲಾರದೇ ಹೋದವು. ಯಜ್ಞ, ದಾನ, ವ್ರತ, ತಪಸ್ಸು, ಸ್ವಾಧ್ಯಾಯ ಯಾವುದೂ ಈ ದೂರ್ವೆಯ ತೂಕಕ್ಕೆ ಸರಿ ಎನಿಸಲಾರವು.

ಹೀಗೆ ದೇವತೆಗಳೆಲ್ಲರೂ ಕೌಂಡಿನ್ಯಮುನಿಯನ್ನೂ ಅವನ ಪತ್ನಿಯಾದ ಆಶ್ರಯೆಯನ್ನು ಸ್ತೋತ್ರಮಾಡಿದರು. ಮತ್ತು ವೇದೋಕ್ತ ಸ್ತುತಿಗಳಿಂದ ಗಣಪತಿಯನ್ನು ವಂದಿಸಿ ತಮ್ಮ ತಮ್ಮ ಸ್ಥಾನಗಳಿಗೆ ಮರಳಿ ಹೋದರು.

ಇದನ್ನೆಲ್ಲ ನೋಡಿ ಆಶ್ರಯೆಗೆ ತನ್ನ ಪತಿಯ ವಾಕ್ಯದಲ್ಲಿ ವಿಶ್ವಾಸ ಉದಯಿಸಿತು. ಅವಳೂ ಕೂಡ ಭಕ್ತಿಯಿಂದ ಗಣಪತಿಯನ್ನು ಪೂಜಿಸಿದಳು. ತನ್ನ ಪತಿ ಕೌಂಡಿಣ್ಯಮುನಿ ಮಾಡಿದ ಗಜಾನನನ ದೂರ್ವಾಂಕುರ ಪೂಜೆಯು ಬಗ್ಗೆ ಸಂಶಯ ಪಟ್ಟದ್ದಕ್ಕೆ ಪಶ್ಚಾತ್ತಾಪ ಪಟ್ಟಳು. ಅದಕ್ಕಾಗಿ ಕ್ಷಮಿಸಬೇಕೆಂದು ಪತಿಯನ್ನು ಕೇಳಿಕೊಂಡಳು.

ಹೀಗೆ ಅವರು ದೂರ್ವಾಂಕುರದ ಮಹಾಮಹಿಮೆಯನ್ನು ಮನಗಂಡು ಯಜ್ಞ, ದಾನ, ವ್ರತ ಮಾಡುವದನ್ನೆಲ್ಲ ನಿಲ್ಲಿಸಿ ಕೇವಲ ಗಣಪತಿಯನ್ನೇ ದೂರ್ವಾಂಕುರಗಳಿಂದ ಅನುದಿನವೂ ಅನವರತವೂ ಪೂಜಿಸತೊಡಗಿದರು. ಗಣನಾಥನು ಇದನ್ನು ತಿಳಿದು ಅವರ ಮೇಲೆ ಪರಮಕೃಪೆಯನ್ನು ತೋರಿ ಆ ದಂಪತಿಗಳಿಗೆ ಅನನ್ಯ ಲಭ್ಯವಾದ ತನ್ನ ಪರಮಪದವಿಯನ್ನು ದಯಪಾಲಿಸಿ ಕರುಣಿಸಿದನು.

**ಗಣಾಧಿಪತಿಗಳು :-** ದೂರ್ವೆಯ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ವರ್ಣಿಸುವದಕ್ಕೆ ಹರಿಹರ ಬ್ರಹ್ಮಾದಿಗಳಿಗೂ ಶಕ್ಯವಿಲ್ಲ. ದೂರ್ವಾ ಎಂದು ಬಾಯಿಂದ ಉಚ್ಚರಿಸಿದ ಮಾತ್ರಕ್ಕೆ ಮಾನವರ ಕಾಯಿಕ, ವಾಚಿಕ, ಮಾನಸಿಕ ಮೂರೂ ಪಾಪಗಳು ನಾಶವಾಗುವವು. ಆದುದರಿಂದಲೇ ಮಹಾಗಣಪತಿಯು ತನ್ನ ದೂತರಾದ ನಮ್ಮ ಮೂಲಕ

ವಿಮಾನಗಳನ್ನು ಕತ್ತೆ, ಎತ್ತು ಚಂಡಾಲಿನಿ ಇರುವ ಈ ಸ್ಥಳಕ್ಕೆ ಕಳಿಸಿರುವನು. ಕತ್ತೆ, ಎತ್ತುಗಳು ಬಾಯಲ್ಲಿ ತಿಂದುಳಿದ ದೂರ್ವೆಗಳು ಅವುಗಳ ಗುದ್ದಾಟದಲ್ಲಿ ಕೆಳಕ್ಕೆ ಬೀಳುವಾಗ ಗಾಳಿಯಲ್ಲಿ ಹಾರಿ ಗಣಪತಿಯ ಸೊಂಡೆ ಮತ್ತು ಪಾದಗಳ ಮೇಲೆ ಬಿದ್ದವು. ಆ ಚಂಡಾಲಿನಿಯು ಚಳಿಯನ್ನು ಹೋಗಲಾಡಿಸಲಿಕ್ಕಾಗಿ ಬೆಂಕಿಯನ್ನು ಹೊತ್ತಿಸಲಿಕ್ಕಾಗಿ ಹುಲ್ಲಿನ ಹೊರೆ ಎಂದು ದೂರ್ವೆಯನ್ನು ಸಂಗ್ರಹಿಸಿದಳು. ಗಾಳಿಯಿಂದ ಆ ದೂರ್ವಾಂಕುರಗಳು ಗಜಾನನ ಮೂರ್ತಿಯ ಮೇಲೆ ಬಂದು ಬಿದ್ದವು. ಗಣಪತಿಗೆ ದೂರ್ವೆಯು ಬಹಳ ಪ್ರಿಯವಾದುದು. ಆ ಮೂವರಿಂದಲೂ ಪರ್ಯಾಯವಾಗಿ ದೂರ್ವಾಂಕುರ ಸಮರ್ಪಣೆಯು ಹೀಗೆ ಗಣಪತಿಗೆ ನಡೆದಿದ್ದರಿಂದ ಆ ಮೂವರೂ ಪಾಪದಿಂದ ಉದ್ಧೃತರಾದರು. ಅವರಿಗೆ ವಿಮಾನಗಳನ್ನು ಕಳಿಸಿಕರೆಯಿಸಿಕೊಂಡು ಗಣಪತಿಯು ಅವರಿಗೆ ತನ್ನ ಪದವಿಯನ್ನು ಇತ್ತು ಗೌರವಿಸಿದನು.

ಮತ್ತೆ ಜನಕರಾಜನು ತನ್ನ ದೂತರ ಮೂಲಕ ''ತ್ರಿಶಿರ ಬ್ರಾಹ್ಮಣನು ಭಕ್ತಿಯಿಂದ ನೀಡಿದ ದೂರ್ವಾಂಕುರದಿಂದಲೇ ಅತಿಥಿಯಾಗಿ ಬಂದ ಬ್ರಾಹ್ಮಣರೂಪಿ ಗಜಾನನನು ಸಂತುಷ್ಟನಾದ, ತೃಪ್ತನಾದ ಅವರಿಗೆ ತನ ವಿಶ್ವರೂಪವನ್ನು ತೋರಿಸಿದ. ಹಾಗೂ ಆ ತ್ರಿಶಿರ, ವಿರೋಚನಾ ದಂಪತಿಗಳನ್ನು ತನ ನಿಜಪದಕ್ಕೆ ಕರೆದೊಯ್ದು'', ಎಂಬ ಸಮಗ್ರಕಥೆಯನ್ನು ತಿಳಿದುಕೊಂಡ. ಅವನಿಗೆ ದೂರ್ವೆಯ ಅದ್ಭುತವಾದ ಮಹಾಮಹಿಮೆಯು ಮನದಟ್ಟಾಯಿತು. ರಾಜನನ್ನು ಆಶ್ರಯಿಸಿದ ಅನೇಕ ಋಷಿಗಳು, ಮುನಿಗಳು, ಅಗ್ನಿಹೋತ್ರಿಗಳು, ಗೃಹಸ್ಥರು, ನಾಗರಿಕರು ದೂರ್ವಾಮಾಹಾತ್ಮ್ಯವನ್ನು ಕೇಳಿ ಕೊಂಡಾಡಿ ಎಲ್ಲರೂ ಸ್ನಾನಮಾಡಿ ದೂರ್ವಾಂಕುರಗಳಿಂದ ಗಣೇಶನನ್ನು ಪೂಜಿಸಿದರು. ಆ ಕೂಡಲೇ ಅವರೆಲ್ಲರಿಗೂ ದಿವ್ಯದೇಹಗಳು ಪ್ರಾಪ್ತವಾದವು. ದೇವದುಂದುಭಿಗಳು ಮೊಳಗಿದವು. ದೇವವಿಮಾನಗಳು ಅಲ್ಲಿಗೆ ಬಂದವು ಎಲ್ಲರೂ ಪರಮಪದವಾದ ವಿನಾಯಕ ಲೋಕವನ್ನು ಸೇರಿದರು.

*ಇತಿ ಗಣೇಶಪುರಾಣ ಉಪಾಸನಾಖಂಡದಲ್ಲಿ*
*ದೂರ್ವಾಮಾಹಾತ್ಮ್ಯ ಎಂಬ ಅರವತ್ತೇಳನೇ ಅಧ್ಯಾಯ ಮುಗಿದುದು*

—o—

**ಶೂರಸೇನ :-** ದೇವೇಂದ್ರನೇ, ಕೃತವೀರ್ಯನ ತಂದೆಯು ಅನಂತರ ಕೈಗೊಂಡ ಕಾರ್ಯವು ಯಾವುದು ? ಮಹಾಗಣಪತಿಯ ಮಹಿಮೆಯನ್ನು ಬೋಧಿಸುವ ಮತ್ತೊಂದು ದೃಷ್ಟಾಂತಕಥೆಯನ್ನು ನಿರೂಪಣ ಮಾಡು.

**ಇಂದ್ರ :-** ಶೂರಸೇನರಾಜನೇ, ಚತುರ್ಮುಖ ಬ್ರಹ್ಮನು ಉಪದೇಶಿಸಿದ ಸಂಕಷ್ಟಹರ ಚತುರ್ಥಿಯ ಕಥೆಯನ್ನು, ದೂರ್ವಿಯ ಮಹಿಮೆಯನ್ನು ಕೇಳಿ ಆ ರಾಜನು ಚಿಂತಾಕ್ರಾಂತನಾದನು. ಮಕ್ಕಳಿಲ್ಲದವರಿಗೆ ಸದ್ಗತಿಯಿಲ್ಲವೆಂದು ಶಾಸ್ತ್ರಗಳು ಸಾರುತ್ತವೆ. ನನಗೆ ಪುತ್ರೋತ್ಸವ ಆಗುವ ಬಗೆ ಹೇಗೆಂದು ಧ್ಯಾನಿಸುತ್ತ ಮಲಗಿಕೊಂಡನು. ಮಲಗಿದಾಗ ಅವನ ಕನಸಿನಲ್ಲಿ ಹಿಂದೆ ಎಂದೋ ತೀರಿಕೊಂಡ ತಂದೆಯು ಕಾಣಿಸಿಕೊಂಡನು. ಸ್ವಪ್ನದಲ್ಲಿಯೇ ಪುತ್ರನನ್ನು ಸಂತೈಸುತ್ತ ತಂದೆಯು ನುಡಿದನು. ''ವತ್ಸ, ಸಂತಾನಕ್ಕಾಗಿ ನೀವು ದಂಪತಿಗಳಿಬ್ಬರೂ ಬಹಳ ಕಠೋರವಾದ ತಪಸ್ಸನ್ನು ಮಾಡುತ್ತ ಕೊರಗಿ ಸೊರಗಿದ್ದೀರಿ. ಎಂದು ನಾರದರು ನನಗೆ ತಿಳಿಸಿದರು. ನಾನು ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವರಿಗೆ ನನ್ನ ಪುತ್ರನಿಗೆ ಪುತ್ರನಾಗುವ ಬಗೆ ಎಂತು ?'' ಎಂದು ಕೇಳಿದನು. ಅದಕ್ಕೆ ಆ ಚತುರ್ಮುಖನು ''ನಿನ್ನ ಮಗನು ಸಂಕಷ್ಟಹರ ಚತುರ್ಥೀವ್ರತವನ್ನು ವಿಧಿಪೂರ್ವಕವಾಗಿ ಆಚರಿಸಿದರೆ ಅವನಿಗೆ ನಿಶ್ಚಿತವಾಗಿಯೂ ಪುತ್ರಸಂತಾನವಾಗುವದು'' ಎಂದು ಹೇಳಿ ಆ ವ್ರತದ ವಿಧಿವಿಧಾನಗಳನ್ನೆಲ್ಲ ನನಗೆ ವಿವರವಾಗಿ ತಿಳಿಸಿದನು. ಅದನ್ನೆಲ್ಲ ನಾನೂ ಒಂದು ಪುಸ್ತಕದಲ್ಲಿ ಬರೆದು ತಂದಿದ್ದೇನೆ. ಇದೋ ಇದೇ ಆ ಪುಸ್ತಕ'' ಎಂದು ಹೇಳಿ ಸ್ವಪ್ನದಲ್ಲಿ ಆ ತಂದೆಯು ಅದೃಶ್ಯನಾದನು.

ಕನಸಿನಿಂದ ಎಚ್ಚೆತ್ತ ಮಹಾರಾಜನ ಕೈಯಲ್ಲಿ ತಂದೆ ಕೊಟ್ಟ ಪುಸ್ತಕ ಹಾಗೆಯೇ ಇದ್ದಿತು. ಅವನಿಗೆ ಪರಮಾನಂದವಾಯಿತು. ಅವನು ತನ್ನ ಮಂತ್ರಿಗಳಿಗೂ ಆಸ್ಥಾನ ವಿದ್ವಾಂಸರಿಗೂ ಆ ಪುಸ್ತಕವನ್ನು ತೋರಿಸಿದನು. ಆ ಪುಸ್ತಕವನ್ನು ಆಸ್ಥಾನ ವಿದ್ವಾಂಸರು ಪರಿಶೀಲಿಸಿ ಇದೊಂದು ದೇವದತ್ತವಾದ ವರವೇ ಆಗಿದೆ. ಇದರಲ್ಲಿ ಹೇಳಿದಂತೆ ನೀನು ನಡೆದರೆ ನಿನಗೆ ಪುತ್ರಪ್ರಾಪ್ತಿಯಾಗುವುದರಲ್ಲಿ ಸಂದೇಹವಿಲ್ಲ ಎಂದು ಹೇಳಿದರು. ಅದನ್ನು ಕೇಳಿ ಆ ಕೃತವೀರ್ಯ ಮಹಾರಾಜನು ಭಾದ್ರಪದ ಶುದ್ಧ ಚತುರ್ಥಿಯ ದಿನ ಚಂದ್ರೋದಯ ಸಮಯಕ್ಕೆ ಸರಿಯಾಗಿ ಶ್ರೀ ಗಣೇಶಪೂಜೆಯನ್ನು ಭಕ್ತಿಯಿಂದ ಮಾಡಿದನು. ಅಂದು ಮಂಗಳವಾರ ವಾದದ್ದರಿಂದ ಚತುರ್ಥೀ ವ್ರತಾಚರಣಕ್ಕೆ ಅತ್ಯಂತ ಪ್ರಶಸ್ತವಾಗಿತ್ತು. ಇಪ್ಪತ್ತೊಂದು ದೂರ್ವಿಗಳನ್ನು ಏರಿಸಿ ಗಣಪತಿಯನ್ನು ಪೂಜಿಸಿದನು. ತನಗೆ ಸ್ವಪ್ನಲಬ್ಧವಾದ ಪುಸ್ತಕದಲ್ಲಿ ಹೇಳಿದಂತೆ ಯಥಾಸಾಂಗವಾಗಿ ಗಜಾನನನ ಪೂಜೆಯನ್ನು ಮಾಡಿವ್ರತಾಂಗವಾಗಿ ಅಂದಿನ ತಿಥಿ ಹಾಗೂ ದೇವತೆ ಮತ್ತು ಚಂದ್ರನಿಗೆ ಅರ್ಘ್ಯಪ್ರದಾನವನ್ನು ಮಾಡಿದನು. ಇಪ್ಪತ್ತೊಂದು ಜನ ಬ್ರಾಹ್ಮಣರನ್ನು ಕರೆದು ಭಕ್ಷ್ಯ ಭೋಜ್ಯಗಳನ್ನು ಹಾಕಿ ಭೋಜನ ಮಾಡಿಸಿದನು. ವಿಪುಲವಾಗಿ ದಾನದಕ್ಷಿಣೆಗಳನ್ನು ನೀಡಿದನು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಸಂಕಷ್ಟಹರ ವ್ರತ ನಿರೂಪಣ ಎಂಬ ಅರವತ್ತೆಂಟನೇ ಅಧ್ಯಾಯ ಮುಗಿದುದು*

## ಸಂಕಷ್ಟಹರ ಚತುರ್ಥೀವ್ರತ ನಿರೂಪಣ

ಅಧ್ಯಾಯ - ೬೯

**ಕೃತವೀರ್ಯ** :- ಕಮಲಾಸನ, ದೇವದೇವನಾದ ಗಣೇಶನನ್ನು ಹೇಗೆ ಪೂಜಿಸಬೇಕು ? ಅದರ ವಿಧಿವಿಧಾನಗಳನ್ನೆಲ್ಲ ನನಗೆ ತಿಳಿಸು.

**ಬ್ರಹ್ಮ** :- ರಾಜನೇ, ಮಂಗಳಸ್ನಾನದ ನಂತರ ವ್ರತವನ್ನು ಮಾಡುವವನು ತನ್ನ ನಿತ್ಯಕರ್ಮಾನುಷ್ಠಾನವನ್ನು ಮುಗಿಸಬೇಕು. ಚತುರ್ಥೀದಿನ ಚಂದ್ರೋದಯ ಸಮಯಕ್ಕೆ ಪೂಜೆಯ ಸ್ಥಳವನ್ನು ಗೋಮಯದಿಂದ ಸಾರಿಸಿ ಮೇಲೆ ಮಂಟಪವನ್ನು ರಚಿಸಬೇಕು. ಮಂಟಪದ ಮೇಲೆ ಉನ್ನತಪೀಠವನ್ನು ಇಡಬೇಕು. ಅದರ ಮೇಲೆ ಬೆಳ್ಳಿ, ಬಂಗಾರ, ಕಂಚು ಅಥವಾ ತಾಮ್ರದ, ಬಡವರಾದರೆ ಬಿದಿರಿನ ಪಾತ್ರೆಯನ್ನಾದರೂ ಕಲಶರೂಪದಿಂದ ಇರಿಸಬೇಕು. ಅದರಲ್ಲಿ ಪಂಚರತ್ನಗಳನ್ನು ಹಾಕಬೇಕು. ಅದರ ಮೇಲೆ ರಕ್ತಚಂದನದಿಂದ ಗಣೇಶನ ಯಂತ್ರವನ್ನು ಚಿತ್ರಿಸಿದ ವಸ್ತ್ರವನ್ನು ಹೊದಿಸಬೇಕು. ಆ ಯಂತ್ರದ ಮೇಲೆ ಗಣಪತಿಯ ಚಿನ್ನದ ಮೂರ್ತಿಯನ್ನು ಸ್ಥಾಪಿಸಬೇಕು. ಆ ಗಜಾನನ ಮೂರ್ತಿಗೆ ಪುರುಷಸೂಕ್ತದಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಧೂಪ ದೀಪಗಳನ್ನು, ಮೋದಕ ಕಜ್ಜಾಯ, ಲಾಡು ಸಕ್ಕರೆ ಪಾಯಸ, ಸಕ್ಕರೆ ತುಪ್ಪಗಳಿಂದ ಸಿದ್ಧಪಡಿಸಿದ ಇತರೆ ಪದಾರ್ಥಗಳನ್ನು ನೈವೇದ್ಯ ತೋರಿಸಬೇಕು. ಬಳಿಕ ಶಕ್ಯವಿದ್ದ ತೆಂಗು, ದ್ರಾಕ್ಷಿ, ಮಾವು ದಾಳಿಂಬೆ ಮೊದಲಾದ ಉತ್ತಮ ಪಕ್ವ ಹಣ್ಣುಗಳನ್ನು ನೈವೇದ್ಯ ತೋರಿಸಬೇಕು. ಅನಂತರ ತಾಂಬೂಲ ಸುವರ್ಣ ಪುಷ್ಪ ದಕ್ಷಿಣೆಗಳನ್ನು ಅರ್ಪಿಸಬೇಕು. ಅನಂತರ ಕರ್ಪೂರಜ್ಯೋತಿಯಿಂದ ಮಂಗಳಾರತಿ ಮಾಡಿ ಸಂಪಿಗೆ, ಅಶೋಕ, ಬಕುಲ, ಪಾರಿಜಾತ, ಮಲ್ಲಿಗೆ ಮುಂತಾದ ಹೂಗಳನ್ನು ಬೊಗಸೆಯಲ್ಲಿ ತುಂಬಿಕೊಂಡು ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಹೀಗೆ ಷೋಡಶೋಪಚಾರ ಪೂಜೆಯನ್ನು ಪುರುಷಸೂಕ್ತದಿಂದ ಮಾಡಿ ಕೈ ಮುಗಿದು ಗಣಪತಿಯನ್ನು ಪ್ರಾರ್ಥಿಸಬೇಕು.

**ಭಾಲಚಂದ್ರನಮಸ್ತುಭ್ಯಂ ನಮಃ ಪರಶುಧಾರಿಣೇ ।**
**ವಿಘ್ನಾಧಿಪ ನಮಸ್ತುಭ್ಯಂ ಸರ್ವವಿದ್ಯಾಪ್ರದಾಯಕ ॥**

ಹಣೆಯಲ್ಲಿ ಚಂದ್ರನು ಹೊಳೆಯುವ, ಕೊಡಲಿಯನ್ನುಧರಿಸಿದ, ಭಕ್ತರಿಗೆ ಎಲ್ಲ ವಿಧವಾದ ವಿದ್ಯೆಯನ್ನು ಕರುಣಿಸುವ, ವಿಘ್ನಗಳನ್ನು ಪರಿಹರಿಸುವ ಗಣಪತಿಗೆ ನಮೋ ನಮಃ ಎಂದು ಸ್ತೋತ್ರವನ್ನು ಮಾಡಿ ಆ ದೇವದೇವನನ್ನು ಪುನಃ ಪುನಃ ನಮಸ್ಕರಿಸಬೇಕು. ಬಳಿಕ ವ್ರತಿಯಾದವನು ಗಣಪತಿಯ ಮೂಲ ಮಂತ್ರಗಳಿಂದ ಒಂದು ನೂರಾ ಎಂಟು ಆಹುತಿಗಳನ್ನು ಇತ್ತು ಹೋಮ ಮಾಡಬೇಕು. ಇದೆಲ್ಲವೂ ಮುಗಿದ ಬಳಿಕ

**ತಿಥೀನಾಂ ಉತ್ತಮೇ ದೇವಿ, ಗಣೇಶಪ್ರಿಯವಲ್ಲಭೆ ।**
**ಸಂಕಟಹರಣೀ ದೇವಿ, ಗ್ರಹಾಣಾರ್ಘ್ಯಂ ನಮೋಽಸ್ತುತೇ ॥**

ಎಲ್ಲ ತಿಥಿಗಳಲ್ಲಿ ಉತ್ತಮವಾದ ಗಣೇಶನಿಗೆ ಪ್ರಿಯವಾದ ಚತುರ್ಥಿತಿಥಿಗೆ ಅಭಿಮಾನಿಯಾದ ದೇವಿಯೇ ನನ್ನ ಸಂಕಟವನ್ನು ದೂರಮಾಡು. ನಾನು ನೀಡುವ ಅರ್ಘ್ಯವನ್ನು ಸ್ವೀಕರಿಸು. ಎಂಬ ಮಂತ್ರವನ್ನು ಹೇಳಿ ಚತುರ್ಥೀತಿಥಿಯ ದೇವತೆಗೆ ನೀರಿನಿಂದ ಅರ್ಘ್ಯವನ್ನು ಬಿಡಬೇಕು.

ಅದರಂತೆ

**ಲಂಬೋದರ ನಮಸ್ತುಭ್ಯಂ ಸತತಂ ಮೋದಕಪ್ರಿಯ ।**
**ಸಂಕಟಂಹರ ಮೇ ದೇವ ಗ್ರಹಾಣಾರ್ಘ್ಯಂ ನಮೋಽಸ್ತು ತೇ ॥**

ಮೋದಕಪ್ರಿಯನಾದ ಲಂಬೋದರನೇ ನಿನಗೆ ನಮಸ್ಕಾರ. ನನ್ನ ಸಂಕಟವನ್ನು ಪರಿಹರಿಸು. ನಾನು ನೀಡಿದ ಅರ್ಘ್ಯವನ್ನು ಸ್ವೀಕರಿಸು. ನಿನಗೆ ನನ್ನ ವಂದನೆಗಳು.

ಗಣಪತಿಗೆ ಅರ್ಘ್ಯವನ್ನು ನೀಡಿದ ನಂತರ ಚಂದ್ರನಿಗೆ ಏಳು ಸಲ ಮುಂದೆ ಹೇಳಿದ ಮಂತ್ರದಿಂದ ಅರ್ಘ್ಯವನ್ನು ನೀರಿನಿಂದ ಬಿಡಬೇಕು.

**ಕ್ಷಿರೋದಾರ್ಣವ ಸಂಭೂತ ಅತ್ರಿಗೋತ್ರಸಮುದ್ಭವ ।**
**ಗ್ರಹಾಣಾರ್ಘ್ಯಂ ಮಯಾ ದತ್ತಂ ರೋಹಿಣ್ಯಾ ಸಹಿತಃ ಶಶಿನ್ ॥**

ಕ್ಷೀರ ಸಮುದ್ರದಲ್ಲಿ ಹುಟ್ಟಿದ, ಅತ್ರಿವಂಶದಲ್ಲಿ ಜನಿಸಿದ ಚಂದ್ರನೇ ರೋಹಿಣೀದೇವಿಯೊಂದಿಗೆ ನಾನು ನೀಡಿದ ಅರ್ಘ್ಯವನ್ನು ಸ್ವೀಕರಿಸು.

ಹೀಗೆ ಅರ್ಘ್ಯಪ್ರದಾನವನ್ನು ಮಾಡಿದ ಬಳಿಕ ಆ ದೇವ ದೇವನಲ್ಲಿ ಕ್ಷಮಾಪಣೆಯನ್ನು ಕೇಳಿಕೊಂಡು, ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ನಂತರ ತಾನು ಕೂಡ ಭೋಜನವನ್ನು ಮಾಡಬೇಕು. ಊಟವನ್ನು ಪ್ರಾರಂಭಿಸುವಾಗ ಮೊದಲಿನ ತುತ್ತುಗಳನ್ನು ಮಾತನಾಡದೇ ಮೌನದಿಂದ ಉಂಡು ಅನಂತರ ಯಥೇಚ್ಛ ಭೋಜನವನ್ನು ಮಾಡಬೇಕು. ಮೇಲೆ ಹೇಳಿದ ವಿಧಿಯಿಂದ ನಾಲ್ಕು ತಿಂಗಳ ಬಹುಳ ಚತುರ್ಥಿದಿವಸ ಮಹಾಗಣಪತಿಯ ಪ್ರೀತ್ಯರ್ಥವಾಗಿ ಸಂಕಟಹರಚತುರ್ಥೀ ವ್ರತವನ್ನು ಆಚರಿಸಬೇಕು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಸಂಕಷ್ಟಹರ ಚತುರ್ಥಿವ್ರತ ನಿರೂಪಣ ಎಂಬ ಆರವತ್ತೊಂಬತ್ತನೇ ಅಧ್ಯಾಯ ಮುಗಿದುದು*

—o—

**ಕೃತವೀರ್ಯ :-** ಪೂಜ್ಯನಾದ ಪಿತಾಮಹ, ಈ ವ್ರತವನ್ನು ಹಿಂದೆ ಯಾರು ಮಾಡಿದರು ? ಇದನ್ನು ಭೂಲೋಕದಲ್ಲಿ ಯಾರು ಪ್ರಚುರಪಡಿಸಿದರು ? ಹೇಳಿರಿ.

**ಬ್ರಹ್ಮ :-** ಪೂರ್ವಕಾಲದಲ್ಲಿ ಒಮ್ಮೆ ಯುದ್ಧಪ್ರಸಂಗದಲ್ಲಿ ದೇವಸೇನಾಪತಿಯಾದ ಸ್ಕಂದನು ಒಮ್ಮೆಲೇ ಕಾಣದಂತಾದನು. ಆಗ ತಾಯಿ ಪಾರ್ವತಿಯು ಪುತ್ರನಿಗಾಗಿ ಬಹಳ ಪರಿತಪಿಸತೊಡಗಿದಳು. ಅದನ್ನು ನೋಡಿ ಪರಶಿವನು ಈ ಚತುರ್ಥೀವ್ರತವನ್ನು ಮಾಡಲು ಉಪದೇಶಿಸಿದನು. ಆ ವ್ರತಾನುಷ್ಠಾನದ ಪ್ರಭಾವದಿಂದ ಐದನೇಯ ತಿಂಗಳು ಕಣ್ಮರೆಯಾದ ಕುಮಾರನು ಸುರಕ್ಷಿತವಾಗಿ ಮನೆಗೆ ಬಂದನು.

ಕಾಲಕೇಯ ಎಂಬ ದುಷ್ಟರಾಕ್ಷಸರನ್ನು ಅವರು ಅಡಗಿ ಕುಳಿತ ಸ್ಥಾನವನ್ನು ಹುಡುಕಲಿಕ್ಕಾಗಿ ದೇವತೆಗಳು ಅಗಸ್ತ್ಯಮುನಿಯನ್ನು ಪ್ರಾರ್ಥಿಸಿದರು. ಆ ಮಹಾಮುನಿಯು ಮೂರುತಿಂಗಳ ಕಾಲ ಈ ಸಂಕಷ್ಟಹರ ಚತುರ್ಥಿವ್ರತವನ್ನು ಆಚರಿಸಿ ಅಪಾರಸಾಗರವನ್ನೆಲ್ಲ ಅನಾಯಾಸವಾಗಿ ಪಾನ ಮಾಡಿದನು.

ವಿದರ್ಭದೇಶದ ರಾಜಕುಮಾರಿಯು ನಳರಾಜನ ಮಹಾರಾಣಿಯೂ ಆದ ದಮಯಂತಿಯು ಈ ವ್ರತವನ್ನು ಆರು ತಿಂಗಳು ಆಚರಿಸಿದಳು. ಆ ವ್ರತದ ಪ್ರಭಾವದಿಂದ ಕಾಣೆಯಾದ ಅವಳ ಪತಿ ಕಣ್ಣೆದುರು ಕಾಣಿಸಿಕೊಂಡ.

ಹಿಂದೆ ರುಕ್ಮಿಣೀದೇವಿಯು ತನ್ನ ಮಗನಾದ ಪ್ರದ್ಯುಮ್ನನನ್ನು ಹೆತ್ತು ಆರುದಿನಗಳಾಗಿದ್ದವು. ಆಗ ಮಾಯಾವಿಯಾದ ಶಂಬರಾಸುರನು ಆ ಶಿಶುವನ್ನು ಕದ್ದು ಒಯ್ದುಬಿಟ್ಟ. ಮಗುವನ್ನು ಕಾಣದೇ ಚಿಂತಾಕ್ರಾಂತಳಾದ ರುಕ್ಮಿಣೀದೇವಿಯು ಬಹುವರ್ಷಗಳ ಮೇಲೆ ಲೋಮಶ ಮಹರ್ಷಿಗಳನ್ನು ಭೆಟ್ಟಿಯಾಗಿ ಪುತ್ರಪ್ರಾಪ್ತಿಯ ಉಪಾಯವನ್ನು ಕೇಳಿದಳು. ಮುನಿಗಳು ಚತುರ್ಥಿವ್ರತವನ್ನು ಅವಳಿಗೆ ಬೋಧಿಸಿದರು. ಅದರಂತೆ ವ್ರತಾನುಷ್ಠಾನ ಮಾಡಿದ ಕೂಡಲೇ ಪ್ರದ್ಯುಮ್ನನು ಶಂಬರಾಸುರನನ್ನು ಕೊಂದು ತನ್ನ ಮಡದಿ ಮಾಯಾವತಿಯೊಂದಿಗೆ ಸುಲಭರೂಪವಾಗಿ ಮನೆಗೆ ಬಂದನು. ಮುಂದೆ ಅನೇಕ ವರ್ಷಗಳ ಅನಂತರ ಪ್ರದ್ಯುಮ್ನನ ಮಗನಾದ ಅನಿರುದ್ಧನನ್ನು ಸ್ವಪ್ನದಲ್ಲಿ ಕಂಡು ಉಷಾದೇವಿಯು ಮೋಹಿಸಿದಳು. ತನ್ನ ಗೆಳತಿ ಚಿತ್ರಲೇಖೆಯ ಮುಖಾಂತರ ಮಲಗಿದಲ್ಲಿಂದಲೇ ಆ ಅನಿರುದ್ಧನನ್ನು ತನ್ನ ಅಂತಃಪುರಕ್ಕೆ ಕರೆದೊಯ್ದಳು. ಅಲ್ಲಿ ಅವನೊಡನೆ ಗುಟ್ಟಾಗಿ ಗಾಂಧರ್ವ ವಿವಾಹ ಮಾಡಿಕೊಂಡಳು. ಇದನ್ನು ತಿಳಿದ ತಂದೆ ಬಾಣಾಸುರನು ಅವನನ್ನು ಬಂಧಿಸಿ ಬಂದೀಖಾನೆಯಲ್ಲಿ ಇರಿಸಿದನು. ಅದರಿಂದ ಪ್ರದ್ಯುಮ್ನನಿಗೆ ಬಹಳ ಚಿಂತೆಯಾಯಿತು. ಆಗ ಅವನ ತಾಯಿ ರುಕ್ಮಿಣೀದೇವಿಯು ತನ್ನ ಪುತ್ರ ಪ್ರದ್ಯುಮ್ನನಿಗೆ ''ವತ್ಸ, ನೀನು ಶಿಶುವಾಗಿದ್ದಾಗ ನಾನು ನಿನ್ನನ್ನು ಕಳೆದುಕೊಂಡಿದ್ದೆ. ಸಂಕಷ್ಟಚತುರ್ಥಿವ್ರತವನ್ನು ಆಚರಿಸಿದೆ. ಅದರಿಂದ ನೀನು

ಸುರಕ್ಷಿತವಾಗಿ ಮನೆಗೆ ಮರಳಿದೆ. ಈಗ ನೀನಾದರೂ ಆ ವ್ರತವನ್ನು ಆಚರಿಸು. ನಿನ್ನ ಮಗನು ಸುರಕ್ಷಿತವಾಗಿ ಮನೆಗೆ ಬರುವನು.''

ಇದರಂತೆ ಪ್ರದ್ಯುಮ್ನನು ತಾಯಿಯ ಆಜ್ಞೆಯಂತೆ ಆ ವ್ರತವನ್ನು ಆಚರಿಸಿದನು. ವ್ರತ ಸಮಾಪ್ತಿಕಾಲದಲ್ಲಿಯೇ ನಾರದರು ಬಂದು ಅನಿರುದ್ಧನು ಬಾಣಾಸುರನ ಅಂತಃಪುರದಲ್ಲಿ ಸ್ಥಾನಬದ್ಧತೆಯಲ್ಲಿ ಇರುವನೆಂದು ತಿಳಿಸಿದರು. ಆಗ ಶ್ರೀ ಕೃಷ್ಣನೂ ಕೂಡ ತನ್ನ ಯಾದವ ಸೈನ್ಯದೊಂದಿಗೆ ಬಾಣಾಸುರನೊಡನೆ ಯುದ್ಧಕ್ಕೆ ಹೊರಟನು. ಬಾಣಾಸುರನ ಆರಾಧ್ಯದೈವನಾದ ಪರಮೇಶ್ವರನು ತನ್ನ ಭಕ್ತನ ರಕ್ಷಣೆಗಾಗಿ ಅವನ ಪಕ್ಷದಲ್ಲಿ ಯುದ್ಧಕ್ಕೆ ಸಿದ್ಧನಾಗಿ ನಿಂತುಕೊಂಡಿದ್ದನು. ಹರಿಹರರಲ್ಲಿ ಹೋರಾಟ ಸುರುವಾಯಿತು. ಆಗ ಉದ್ಧವನ ಉಪದೇಶದಂತೆ ಶ್ರೀಕೃಷ್ಣನು ಸಂಕಷ್ಟವ್ರತಾಚರಣೆಯನ್ನು ಮಾಡಿದನು. ಅದರ ಪ್ರಭಾವದಿಂದ ಶ್ರೀಕೃಷ್ಣನು ವಿಜಯಶಾಲಿಯಾದನು. ಬಾಣಾಸುರನನ್ನು ಗೆದ್ದು ಉಷಾ ಅನಿರುದ್ಧರನ್ನು ಕರೆದುಕೊಂಡು ದ್ವಾರಕಾಪಟ್ಟಣಕ್ಕೆ ತೆರಳಿದನು.

ಮಹಾರಾಜ, ಎಲ್ಲ ದೇವತೆಗಳೂ, ದಾನವರೂ ತಮಗೆ ಸಂಕಟಬಂದಾಗೆಲ್ಲ ಈ ವ್ರತವನ್ನು ಆಚರಿಸುವರು. ಕೂಡಲೇ ಅದರಿಂದ ಅವರ ವಿಘ್ನ, ಚಿಂತೆ, ಸಂತಾಪ, ಕುತ್ತು ವಿಪತ್ತುಗಳೆಲ್ಲವೂ ತಾವಾಗಿಯೇ ಪರಿಹಾರ ಕಾಣುವವು. ಆದುದರಿಂದ ಮಹಾರಾಜ, ನೀನು ಈ ವ್ರತವನ್ನು ಭಕ್ತಿಯಿಂದ ಮಾಡು.

**ಸೂತ** :- ಚತುರ್ಮುಖ ಬ್ರಹ್ಮ ದೇವನ ಉಪದೇಶದಂತೆ ಕೃತವೀರ್ಯರಾಜನು ಆ ಸಂಕಷ್ಟವ್ರತದ ಪ್ರಭಾವವನ್ನು ಕೇಳಿ ತಾನೂ ವಿಧಿಪೂರ್ವಕವಾಗಿ ಆಚರಿಸಿದನು. ಆ ವ್ರತಾಚರಣೆಯ ಪ್ರಭಾವದಿಂದ ತನ್ನ ವೈರಿಗಳನ್ನೆಲ್ಲ ಸುಲಭವಾಗಿ ಸೋಲಿಸಿ ನಿಷ್ಕಂಟಕವಾದ ರಾಜ್ಯಭೋಗಗಳನ್ನು ಪುತ್ರ ಪೌತ್ರಾದಿ ಸಕಲ ಪರಿವಾರದೊಂದಿಗೆ ಪಡೆದು ಸುಖದಿಂದ ಅನುಭವಿಸಿದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ ಸಂಕಷ್ಟಹರ ಚತುರ್ಥಿವ್ರತಾಚರಣ ವಿಧಾನ ಎಂಬ ಎಪ್ಪತ್ತನೇ ಅಧ್ಯಾಯ ಮುಗಿದುದು*

—o—

ಕೃತವೀರ್ಯನ ವ್ರತಉದ್ಯಾಪನ

## ಅಧ್ಯಾಯ - ೭೧

**ಕೃತವೀರ್ಯ :-** ಪಿತಾಮಹ, ಸಂಕಷ್ಟಹರ ವ್ರತದ ಉದ್ಯಾಪನೆಯನ್ನು ಹೇಗೆ ಮಾಡಬೇಕು ? ತಿಳಿಸು.

**ಬ್ರಹ್ಮ :-** ವ್ರತದ ಉದ್ಯಾಪನೆಯನ್ನು ಮೊದಲನೇಯ, ಐದನೇಯ ಅಥವಾ ಏಳನೇಯ ತಿಂಗಳಲ್ಲಿ ಆಚರಿಸಿ ವ್ರತವನ್ನು ಸಾಂಗವಾಗಿ ಸಂಪೂರ್ಣಗೊಳಿಸಬೇಕು. ಹೂವುಗಳಿಂದ ಪೂಜಾಮಂಟಪವನ್ನು ಕಟ್ಟಿ, ಬಣ್ಣಬಣ್ಣದ ವಸ್ತ್ರಗಳಿಂದ ಅಲಂಕರಿಸಬೇಕು. ಮಂಟಪದ ಮಧ್ಯದಲ್ಲಿ ಹಿಂದೆ ಹೇಳಿದಂತೆ ಕಲಶವನ್ನು ಸ್ಥಾಪಿಸಿ, ಅದರ ಮೇಲೆ ಗಣಪತಿಯನ್ನು ಇಟ್ಟು ಪೂಜಿಸಬೇಕು. ತೆಂಗಿನಕಾಯಿಯ ನೀರಿನಿಂದ ಚತುರ್ಥಿತಿಥಿ ದೇವತೆಗೂ ಗಣಪತಿಗೂ ಕೆಳಗೆ ಹೇಳಿದ ಮಂತ್ರದಿಂದ ಅರ್ಘ್ಯವನ್ನು ಸಮರ್ಪಿಸಬೇಕು.

**ತಿಥೀನಾಂ ಉತ್ತಮೇ ದೇವೀ ಗಣೇಶಪ್ರಿಯವಲ್ಲಭೆ ।**
**ಸಂಕಟಹರ ಮೇದೇವೀ ಗ್ರಹಾಣಾರ್ಘ್ಯಂ ನಮೋಸ್ತುತೇ ॥**

ಎಂಬ ಮಂತ್ರದಿಂದ ಚತುರ್ಥಿತಿಥಿ ಅಧಿದೇವತೆಗೆ ಅರ್ಘ್ಯವನ್ನು ನೀಡಬೇಕು. ಅನಂತರ

**ಲಂಬೋದರ ನಮಸ್ತುಭ್ಯಂ ಸತತಂ ಮೋದಕಪ್ರಿಯ ।**
**ಸಂಕಷ್ಟಹರ ಮೇ ದೇವ ಗ್ರಹಾಣಾರ್ಘ್ಯಂ ನಮೋಸ್ತು ತೇ ॥**

ಎಂದು ಮಂತ್ರ ಹೇಳಿ ಗಣಪತಿಗೆ ಅರ್ಘ್ಯವನ್ನು ಸಮರ್ಪಿಸಬೇಕು. ಆ ಬಳಿಕ

**ಕ್ಷೀರೋದಾರ್ಣವಸಂಭೂತ ಅತ್ರಿಗೋತ್ರ ಸಮುದ್ಭವ ।**
**ಗ್ರಹಾಣಾರ್ಘ್ಯಂ ಮಯಾದತ್ತಂ ರೋಹಿಣ್ಯಾಸಹಿತಃ ಶಶಿನ್ ॥**

ಎಂಬ ಮಂತ್ರದಿಂದ ಚಂದ್ರನಿಗೂ ಅರ್ಘ್ಯವನ್ನು ನೀಡಬೇಕು. ಅನಂತರ ಬಗೆಬಗೆಯ ಭಕ್ಷ್ಯಭೋಜ್ಯ ಮೃಷ್ಟಾನ್ನ ಪಕ್ವಾನ್ನಗಳನ್ನು ನಾನಾವಿಧ ಹಣ್ಣು ಹಂಪಲಗಳನ್ನು ನೈವೇದ್ಯಕೊಟ್ಟು ಗಣಪತಿಗೆ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಬಳಿಕ **'ಗಣಾನಾಂತ್ವಾ'** ಎಂಬ ಮಂತ್ರದಿಂದ ಮುಖ್ಯಆಚಾರ್ಯರ ನೇತೃತ್ವದಲ್ಲಿ ಹತ್ತುಸಾವಿರ ಹೋಮಗಳನ್ನು ಮಾಡಬೇಕು. ಅಥವಾ ಮಹಾಗಣಪತಿಯ ಮೂಲಮಂತ್ರದಿಂದ ಒಂದು ಸಾವಿರ, ಐದು ನೂರು, ಅಥವಾ ಒಂದುನೂರಾ ಎಂಟು ಸಂಖ್ಯೆಯಲ್ಲಿ ಹೋಮವನ್ನು ಮಾಡಬೇಕು. ಭೂತಬಲಿ ಅನ್ನ ಬಲಿಗಳನ್ನು ಸಮರ್ಪಿಸಬೇಕು. ಕೆಂಪುವರ್ಣದ ವಸ್ತ್ರ ಪುಷ್ಪ, ಬಗೆಬಗೆಯ ಫಲ ಮಂಗಲದ್ರವ್ಯಗಳಿಂದ ಪೂರ್ಣಾಹುತಿಯನ್ನು ಕೊಟ್ಟು ಅನಂತರ ಯಥಾಶಕ್ತಿ ಇಪ್ಪತ್ತೊಂದು ಋತ್ವಿಜ ಸಹಿತ ಬ್ರಾಹ್ಮಣಸುವಾಸಿಯರ ಸಂತರ್ಪಣೆಯನ್ನು

ಮಾಡಬೇಕು. ಬಳಿಕ ವಿಪ್ರೋತ್ತಮರನ್ನು ಜೋಡಿವಸ್ತ್ರ, ಕಲಶ, ದಕ್ಷಿಣೆದಾನಾದಿಗಳನ್ನು ಕೊಟ್ಟು ಮುಖ್ಯ ಆಚಾರ್ಯನಿಗೂ ವಸ್ತ್ರಾಲಂಕಾರಗಳನ್ನಿತ್ತು ಪೂಜಿಸಬೇಕು. ವಾಯನದಾನವನ್ನು ಅವನಿಗೆ ಮಾಡಬೇಕು. ಒಂದು ಮೊರದಲ್ಲಿ ಪಾಯಸತುಂಬಿದ ಪಾತ್ರೆಯನ್ನು ಇಟ್ಟು ಅದನ್ನು ಕೆಂಪುವರ್ಣದಿಂದ ಮುಚ್ಚಬೇಕು. ಅದರೊಡನೆ ಚಿನ್ನದ ಗಣಪತಿಮೂರ್ತಿಯನ್ನು ದಕ್ಷಿಣಾಸಹಿತವಾಗಿ ಆಚಾರ್ಯನಿಗೆ ನೀಡಬೇಕು.

ಕೃತವೀರ್ಯ ಮಹಾರಾಜನು ಬ್ರಹ್ಮದೇವರು ಹೇಳಿದಂತೆ ವಿಧಿಪೂರ್ವಕವಾಗಿ ಸಂಕಷ್ಟಹರ ಚತುರ್ಥಿವ್ರತವನ್ನು ಆಚರಿಸಿ ಶಾಸ್ತ್ರೋಕ್ತಪ್ರಕಾರದಿಂದ ಉದ್ಯಾಪನೆಯನ್ನು ಆಚರಿಸಿದನು. ಅನಂತರ ಅಲ್ಲಿಗೆ ಬಂದ ಪಂಡಿತ್ತೋತ್ತಮರು ಹಾಗೂ ಪುರೋಹಿತರಿಂದ ಕೂಡಿಕೊಂಡು ಒಂದು ಸ್ವರ್ಣದ ಗಣಪತಿಯ ಮೂರ್ತಿಯನ್ನು ಭವ್ಯಮಂದಿರದಲ್ಲಿ ಸ್ಥಾಪಿಸಿದನು. ಋತ್ವಿಜರಿಗೂ, ವಿದ್ವಾಂಸರಿಗೂ ವಿಪುಲವಾದ ದಾನದಕ್ಷಿಣೆಗಳನ್ನಿತ್ತು ಅವರ **'ಪುತ್ರವಾನ್ ಭವ'** ಎಂಬ ಆಶೀರ್ವಾದವನ್ನು ಪಡೆದನು. ಅವರ ಆಶೀರ್ವಾದದ ಪ್ರಭಾವದಿಂದ ಅವನ ಧರ್ಮಪತ್ನಿಯು ಗರ್ಭಧಾರಣೆ ಮಾಡಿ ಒಂದು ಶುಭಮುಹೂರ್ತದಲ್ಲಿ ಸಕಲ ಸಲ್ಲಕ್ಷಣಗಳಿಂದ ಕೂಡಿದ ಪುತ್ರರತ್ನವನ್ನು ಹೆತ್ತಳು. ಆ ಪುತ್ರನಿಗೆ ಕೃತವೀರ್ಯಮಹಾರಾಜನು ಯಥೋಚಿತ ಕಾಲದಲ್ಲಿ ಉಪನಯನ, ವಿವಾಹ ಮೊದಲಾದ ಶಾಸ್ತ್ರೀಯ ಸಂಸ್ಕಾರಗಳನ್ನೆಲ್ಲ ಮಾಡಿದನು.

ಶಾಸ್ತ್ರಜ್ಞಾನ, ಶಸ್ತ್ರಜ್ಞಾನ, ಲೋಕಾನುಭವಗಳಿಂದ ಸರ್ವಸಮರ್ಥನಾದ ಆ ಮಗನನ್ನು ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡಿದನು. ಅವನಿಗೆ ರಾಜ್ಯಭಾರವನ್ನೆಲ್ಲ ಒಪ್ಪಿಸಿ ಅರಣ್ಯಕ್ಕೆ ಹೋಗಿ ತಪಸ್ಸನ್ನು ಮಾಡಿ ಕಾಲೋಚಿತ ಮರಣವನ್ನು ಹೊಂದಿ ಗಣಪತಿಯ ದಿವ್ಯ ಸನ್ನಿಧಾನವನ್ನು ಹೊಂದಿದನು.

*ಇತಿ ಗಣೇಶ ಪುರಾಣದ ಉಪಾಸನಾಖಂಡದಲ್ಲಿ*
*ಕೃತವೀರ್ಯನ ವ್ರತಉದ್ಯಾಪನ ಎಂಬ ೭೧ನೇ ಅಧ್ಯಾಯ ಮುಗಿದುದು*



## ಕಾರ್ತವೀರ್ಯನ ಅರಣ್ಯಗಮನ

ಅಧ್ಯಾಯ - ೭೧

**ಶೂರಸೇನ :-** ದೇವೇಂದ್ರ, ಸಂಕಷ್ಟಹರ ಗಣಪತಿಯ ವ್ರತವನ್ನು ಆಚರಿಸಿದ ಬಳಿಕ ಆ ಕೃತವೀರ್ಯ ದಂಪತಿಗಳಿಗೆ ಪುತ್ರಸಂತಾನ ಹೇಗೆ ಉಂಟಾಯಿತು. ಆ ವಿಷಯವನ್ನು ವಿಸ್ತಾರವಾಗಿ ಕೇಳಬೇಕೆಂದು ನನಗೆ ಅಪೇಕ್ಷೆಯಿದೆ. ದಯೆಯಿಟ್ಟು ಹೇಳಿರಿ.

**ಇಂದ್ರ :-** ಕೃತವೀರ್ಯನ ಮಹಾರಾಣಿಯು ಒಂಬತ್ತನೇಯ ತಿಂಗಳಲ್ಲಿ ಒಂದು ಮುದ್ದು ಮಗುವನ್ನು ಹಡೆದಳು. ಆ ಮಗುವಿನ ಮೈಮುಖ ಎಲ್ಲವೂ ಮುದ್ದಾಗಿಯೇ ಇದ್ದಿತು. ಆದರೆ ಆ ಮಗುವಿಗೆ ತೋಳುಗಳಾಗಲಿ, ಹಸ್ತಗಳಾಗಲಿ ಇರಲಿಲ್ಲ. ಅದನ್ನು ನೋಡಿ ರಾಜದಂಪತಿಗಳಿಗೂ ಮಂತ್ರಿಪರಿವಾರದವರಿಗೂ ಬಹಳ ದುಃಖವಾಯಿತು. ಸಾಮ್ರಾಜ್ಞಿಯು ಎದೆ ಎದೆ ಬಡಿದುಕೊಂಡು ''ದೇವೇಶ, ಇಂಥ ವಿಕಲಾಂಗನಾದ ಮಗನನ್ನು ನನಗೆ ಏಕೆ ಕೊಟ್ಟೆ ? ನಾನು ಬಂಜೆಯಾಗಿದ್ದರೂ ಒಳ್ಳೆಯದಿತ್ತು. ಇದು ನನ್ನ ಯಾವ ಜನ್ಮದ ಪಾಪದ ಫಲ ?' ಎಂದು ಅತ್ತು ಗೋಗರೆದು ಹಲುಬಿದಳು. ಮಹಾರಾಜನು ಕೂಡ ಬಹಳ ದುಃಖದಿಂದ ಬಿಕ್ಕಿ ಬಿಕ್ಕಿ ಅತ್ತನು. ಮಂತ್ರಿಗಳು ಮತ್ತು ಅರಮನೆಯ ವಿದ್ವಾಂಸರು ಅವನನ್ನು ಸಂತೈಸಿ ಕಾಲಕ್ರಮದಲ್ಲಿ ಈ ಶಿಶುವು ಸರಿಯಾದ ಅಂಗಸೌಷ್ಟವವನ್ನು ಪಡೆದು ರಾಜ್ಯಸೂತ್ರಗಳನ್ನು ಸಮರ್ಥರೀತಿಯಿಂದ ನಿರ್ವಹಿಸಬಲ್ಲನು. ಇದಕ್ಕೇಕೆ ಇಷ್ಟು ಚಿಂತೆ ? ಎಂದು ಹೇಳಿ ರಾಜನಿಗೆ ಧೈರ್ಯ ತುಂಬಿದರು.

ಆದರಿಂದ ಕೃತವೀರ್ಯನಿಗೆ ಸಮಾಧಾನವಾಗಿ ಹನ್ನೊಂದನೆಯ ದಿನ ಆ ಮಗುವಿಗೆ ಬಹಳ ಉತ್ಸಾಹದಿಂದ ಮತ್ತು ರಾಜೋಚಿತವಾಗಿ ವೈಭವದಿಂದ ನಾಮಕರಣ ಮಾಡಿ ಕಾರ್ತವೀರ್ಯ ಎಂದು ಹೆಸರಿಟ್ಟರು. ಹೀಗೆಯೇ ಆ ವ್ಯಂಗ್ಯ ಶಿಶುವಿಗೆ ಹನ್ನೆರಡು ವರ್ಷ ತುಂಬಿತು.

ಒಂದು ದಿನ ರಾಜನ ಅರಮನೆಗೆ ತ್ರಿಮೂರ್ತಿಗಳ ಸ್ವರೂಪನಾದ ಭಗವಾನ್ ದತ್ತಾತ್ರೇಯರು ದಯಮಾಡಿಸಿದರು. ಅವರನ್ನು ಮಹಾರಾಜನು ರಾಜೋಪಚಾರದಿಂದ ಪೂಜಿಸಿ ರತ್ನ ಸಿಂಹಾಸನದಲ್ಲಿ ಕೂಡಿಸಿ ಕೈ ಮುಗಿದು ಕೇಳಿದನು. ''ಪೂಜ್ಯರೇ, ನನಗೆ ಅಪರೂಪಕ್ಕೆ ಒಬ್ಬ ಮಗನು ಹುಟ್ಟಿದ್ದಾನೆ. ದುರ್ದೈವದಿಂದ ಅವನು ವಿಕಲಾಂಗನಾಗಿದ್ದಾನೆ. ಮುಖದ ಮೇಲ್ಭಾಗ ಅತ್ಯಂತ ಸುಂದರವಾಗಿದೆ. ಆದರೆ ಕೈಯಿಲ್ಲ, ಕಾಲಿಲ್ಲ, ತೋಳುಗಳಿಲ್ಲ, ಇಂಥ ಊನ ಹೀನನಾದ ಮಗನು ಹುಟ್ಟಲು ಕಾರಣವೇನು ?'' ಎಂದು ಅಂಗಲಾಚಿ ಕೇಳಿದನು.

**ದತ್ತಾತ್ರೇಯ :-** ''ಮಹಾರಾಜ, ನೀನು ಸಂಕಷ್ಟಹರ ಗಣಪತಿ ವ್ರತವನ್ನು ಆಚರಿಸಿದೆಯಷ್ಟೇ ? ಆ ವ್ರತಾಚರಣೆಯ ಕಾಲದಲ್ಲಿ ನೀನು ಮಧ್ಯದಲ್ಲಿ ನಿದ್ದೆ ಬಂದು ತೂಕಡಿಸಿ ಆಕಳಿಸಿದೆ. ಅನಂತರ ಆಚಮನವನ್ನು ಮಾಡದೇ ಹಾಗೆಯೇ ಆ ವ್ರತಾಚರಣವನ್ನು ಮುಂದುವರೆಸಿದೆ. ಇದು ಕಾಮ್ಯವ್ರತ. ಅದರಲ್ಲಿ ಏನಾದರೂ ಲೋಪಬಂದರೆ ಅದಕ್ಕೆ

ಅನಿಷ್ಟವಾಗುವದು. ಆಕಳಿಕೆಯ ನಂತರ ನೀನು ಶುದ್ಧಾಚಮನವನ್ನು ಮಾಡದ ದೋಷದಿಂದಾಗಿ ಆ ವ್ರತಸಾಂಗವಾಗಲಿಲ್ಲ. ಆದರಿಂದಲೇ ನಿನಗೆ ಹುಟ್ಟಿದ ಮಗ ಅಂಗಹೀನನಾದ. ಆದಕ್ಕೆ ಪರಿಹಾರದ ಉಪಾಯವನ್ನು ನಾನು ಹೇಳುತ್ತೇನೆ ಕೇಳು. ಆದರಂತೆ ನೀನು ಆಚರಿಸು'' ಎಂದು ಹೇಳಿ ದತ್ತಾತ್ರೇಯರು ಕೃತವೀರ್ಯರಾಜನಿಗೆ ಗಣಪತಿಯ ಏಕಾಕ್ಷರ ಮಂತ್ರವನ್ನು ಉಪದೇಶಿಸಿದರು. ಮತ್ತು ಈ ಗಣೇಶಮೂಲಮಂತ್ರದ ಪುರಶ್ಚರಣೆಯ ಪ್ರಭಾವದಿಂದ ನಿನ್ನ ಮಗನು ಸಾಂಗನೂ, ಸಮರ್ಥನೂ ಆಗಿ ಸಮ್ರಾಟ್ ಸಾರ್ವಭೌಮನೂ ಆಗಿ ಮೆರೆಯುವನು.'' ಎಂದು ಹೇಳಿ ದತ್ತಾತ್ರೇಯರು ಅಂತರ್ಧಾನವನ್ನು ಹೊಂದಿದರು. ಆದನ್ನು ಕೇಳಿ ಕೃತವೀರ್ಯನಿಗೆ ಸಂತೋಷವಾಯಿತು. ಅಂಗಹೀನನಾದ ಕಾರ್ತವೀರ್ಯನಲ್ಲಿ ಭಕ್ತಿ ಉತ್ಸಾಹಗಳು ಉಕ್ಕೇರಿದವು.

ದತ್ತಾತ್ರೇಯರ ಉಪದೇಶದಿಂದ ಪ್ರಭಾವಿತನಾದ ಕಾರ್ತವೀರ್ಯನು ತನ್ನ ತಂದೆಗೆ ನಮಸ್ಕರಿಸಿ ''ತಂದೆಯೇ, ನಾನು ಅರಣ್ಯಕ್ಕೆ ಹೋಗಿ ಗಣೇಶಮಹಾಮಂತ್ರವನ್ನು ಜಪಿಸಿ ತಪಸ್ಸನ್ನು ಮಾಡಿ ಆ ದೇವೇಶನನ್ನು ಪ್ರಸನ್ನೀಕರಿಸಿಕೊಳ್ಳುತ್ತೇನೆ.'' ಎಂದು ಬಿನ್ನವಿಸಿದನು.

ತಂದೆಯು ಎಷ್ಟು ಬೇಡವೆಂದರೂ ಅವನು ಕೇಳಲಿಲ್ಲ. ಹಟದಿಂದ ಅರಣ್ಯಕ್ಕೆ ಹೊರಟು ನಿಂತನು. ಆಗ ಮಹಾರಾಜನು ನಿರುಪಾಯನಾಗಿ ಒಂದು ಮೇಣೆಯಲ್ಲಿ ಕಾರ್ತವೀರ್ಯನನ್ನು ಕುಳ್ಳಿರಿಸಿ ಅರಣ್ಯಕ್ಕೆ ಕೊಟ್ಟು ಕಳಿಸಿದನು. ರಾಜಭಟರು ಒಂದು ವನಮಧ್ಯದಲ್ಲಿ ಒಂದು ಪರ್ಣಶಾಲೆಯನ್ನು ನಿರ್ಮಿಸಿ, ಅದರ ಮಧ್ಯದಲ್ಲಿ ಅಂಗಹೀನನಾದ ಆ ಕಾರ್ತವೀರ್ಯನನ್ನು ಕುಳ್ಳಿರಿಸಿ ಅವನ ಅಪ್ಪಣೆಯಿಂದ ತಾವು ರಾಜಧಾನಿಗೆ ಮರಳಿದರು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಕಾರ್ತವೀರ್ಯನ ಅರಣ್ಯಗಮನ ಎಂಬ ಎಪ್ಪತ್ತೆರಡನೇ ಅಧ್ಯಾಯ ಮುಗಿದುದು.*



**ಇಂದ್ರ** :- ಭಗವಾನ್ ದತ್ತಾತ್ರೇಯರು ಉಪದೇಶಿಸಿದ ಗಣೇಶ ಮೂಲಮಂತ್ರವನ್ನು ಕಾರ್ತವೀರ್ಯಾಜುನನು ಅತ್ಯಂತ ಭಕ್ತಿಯಿಂದ ಜಪಿಸುತ್ತ ಘೋರವಾದ ತಪೋನುಷ್ಠಾನವನ್ನು ಕೈಕೊಂಡನು. ಆಹಾರವನ್ನು ಬಿಟ್ಟನು. ನಿದ್ದೆಯನ್ನು ತೊರೆದನು. ಮಳೆಗೆ ಹೆದರದೆ, ಚಳಿಗೆ ಬೆದರದೆ, ಬಿಸಿಲಿಗೆ ಅಂಜದೆ ಅಚಲನಾಗಿ ನಿಂತುಕೊಂಡು ಏಕಾಗ್ರಚಿತ್ತದಿಂದ ಹನ್ನೆರಡು ವರ್ಷ ತಪಸ್ಸು ಮಾಡಿದನು. ಅವನ ದಾರುಣವಾದ ತಪಃಶ್ಚರ್ಯೆಯಿಂದ ಸುಪ್ರೀತನಾದನು ಆ ಮಹಾಗಣಪತಿ. ಕಾರ್ತವೀರ್ಯನು ತಪಸ್ಸಿಗೆ ಕುಳಿತ ಪರ್ಣಕುಟೀರದ ಎದುರು ಒಂದು ತಿಳಿನೀರಿನ ಪುಷ್ಕರಣಿ ಇದ್ದಿತು. ಆ ಸಲಿಲ ಮಧ್ಯದಿಂದ ಶ್ರೀಗಣೇಶನು ಹವಳದ ವಿಗ್ರಹರೂಪದಿಂದ ಎದ್ದು ನಿಂತು ಆ ಮಹಾರಾಜನಿಗೆ ತನ್ನ ದಿವ್ಯದರ್ಶನವನ್ನು ಇತ್ತನು. ಬೇಕಾದ ವರಬೇಡು'' ಎಂದು ಹೇಳಿದನು.

ಆಗ ಕಾರ್ತವೀರ್ಯಾರ್ಜುನನು ಆ ಭಗವಂತನಿಗೆ ಸಾಷ್ಟಾಂಗ ವಂದಿಸಿ ''ನನ್ನ ಅಂಗವಿಕಾರವನ್ನು ಪರಿಹರಿಸಿ ಸುಂದರವಾದ ದೇಹವನ್ನು ಕರುಣಿಸು. ಈ ವರವನ್ನು ನನ್ನ ತಂದೆ ತಾಯಿಯ ಮನಸ್ಸಿನ ಚಿಂತೆಯನ್ನು ಕಳೆಯುವದಕ್ಕೋಸ್ಕರ ಕೇಳಿಕೊಂಡಿದ್ದೇನೆ. ನನಗೆ ನಿನ್ನಿಂದ ಬೇಕಾದ ಮುಖ್ಯವಾದ ವರ ಎಂದರೆ ನಿನ್ನಲ್ಲಿ ಅಚಲ ಭಕ್ತಿ. ನನಗೆ ಬೇರೆ ಯಾವ ವರವೂ ಬೇಡ.'' ಎಂದು ಕೇಳಿಕೊಂಡನು.

ಸುಪ್ರಸನ್ನನಾದ ಗಣಾಧಿಪತಿಯು 'ತಥಾಸ್ತು' ಎಂದು ಹೇಳಿ ಸೂಕ್ಷ್ಮರೂಪವನ್ನು ತಳೆದು ಆ ಕಾರ್ತವೀರ್ಯಾರ್ಜುನನ ಉದರದಲ್ಲಿ ಪ್ರವೇಶ ಮಾಡಿದನು. ಅಂಗಹೀನವಾಗಿ ವಿಕೃತಗೊಂಡು ಅಸಹ್ಯವಾಗಿ ತೋರುವ ರಾಜಕುಮಾರನ ದೇಹವು ವಿಘ್ನೇಶ್ವರನ ಪ್ರವೇಶದಿಂದ ದಿವ್ಯದೀಪ್ತಿಯಿಂದ ದೇದೀಪ್ಯಮಾನವಾಗಿ ಕಂಗೊಳಿಸ ತೊಡಗಿತು. ತೋಳುಗಳೇ ಇಲ್ಲದ ಆ ದೇಹದಲ್ಲಿ ಒಮ್ಮೆಲೇ ಸಾವಿರ ತೋಳುಗಳು ಚಿಗಿತುನಿಂತವು. ದೇವ ದುಂದುಭಿಗಳು ಮೊಳಗಿದವು. ದೇವತೆಗಳು ಪುಷ್ಪವೃಷ್ಟಿಯನ್ನು ಗಣೇಶ ಹಾಗೂ ಕಾರ್ತವೀರ್ಯರ ಮೇಲೆ ಸುರಿಸಿದರು. ಎಲ್ಲ ಸುರಸತ್ತಮರು, ಗಂಧರ್ವರು ಕಾರ್ತವೀರ್ಯನನ್ನು ಹೊಗಳಿ ಹಾಡಿದರು. ಸಹಸ್ರಬಾಹುಗಳಿಂದ ಮಹಾಬಲಪರಾಕ್ರಮ ಶಾಲಿಯಾದ ಕಾರ್ತವೀರ್ಯನು ಗರ್ವಿಷ್ಠನಾಗಿ ಗರ್ಜಿಸಿದನು. ಅವನ ಸಿಂಹಗರ್ಜನೆಯಿಂದ ಭೂಮಂಡಲದಲ್ಲಿರುವ ಎಲ್ಲ ರಾಜರೂ ಗದಗುಟ್ಟಿ ನಡುಗಿದರು. ಆಗ ಬ್ರಹ್ಮದೇವನು ಸತ್ಯಲೋಕದಿಂದ ತನ್ನ ಹಂಸವಾಹನದಿಂದ ಇಳಿದು ಬಂದು ಕಾರ್ತವೀರ್ಯನನ್ನು ಹರಸಿ ''ನಿನ್ನ ಸ್ಮರಣಮಾತ್ರದಿಂದಲೇ ಜನರಿಗೆ ಕಳೆದುಹೋದ ವಸ್ತುಗಳು ದೊರಕಲಿ'' ಎಂದು ವರವನ್ನಿತ್ತನು. ಮತ್ತು ನಿನಗೆ ಸಹಸ್ರಾರ್ಜುನ ಎಂದು ಹೆಸರು ಬರಲಿ. ನಿನ್ನ ಕೀರ್ತಿಯು ಮೂರುಲೋಕಗಳಲ್ಲಿ ಬೆಳಗಲಿ. ಒಂದು ಕಲ್ಪಕಾಲದ ವರೆಗೆ ಅಖಂಡ ಭೂಮಂಡಲಕ್ಕೆಲ್ಲ ನೀನು ಏಕರಾಟ್ ಸಮ್ರಾಟ್ ಆಗಿ ಏಕಛತ್ರಾಧಿಪತಿಯಾಗಿ ಶತ್ರುಗಳನ್ನೆಲ್ಲ ಜಯಿಸಿ

ಭಾಗ್ಯವಂತನಾಗಿ ಬಾಳು'' ಎಂದು ವರಗಳನ್ನು ಇತ್ತರು. ದೇವತೆಗಳು ಕೂಡ ಬ್ರಹ್ಮದೇವರು ನೀಡಿದ ವರಗಳನ್ನು ತಾವೂ ಪುರ್ನರಪಿಚ್ಚರಿಸಿ ಅವನನ್ನು ಆಶೀರ್ವದಿಸಿದರು.

ಕಾರ್ತವೀರ್ಯಾರ್ಜುನನು ತಾನು ತಪಸ್ಸು ಮಾಡಿದ ಸ್ಥಳದಲ್ಲಿ ಹವಳದ ಗಣಪತಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿದನು. ಮೂರ್ತಿ ಪ್ರತಿಷ್ಠಾಪನೆಯ ಕಾಲದಲ್ಲಿ ಮಿಲಿತರಾದ ಬ್ರಾಹ್ಮಣರು ಅದನ್ನು ಪ್ರವಾಳ ಗಣಪತಿ ಎಂದು ಕರೆದರು. ಮತ್ತು ಆ ಸ್ಥಳವು ಪ್ರವಾಳ ಕ್ಷೇತ್ರ ಎಂದು ಪ್ರಸಿದ್ಧವಾಯಿತು. ಆದಿಶೇಷನು ಆ ಕ್ಷೇತ್ರದಲ್ಲಿ ತಪಸ್ಸು ಮಾಡಿ ಸಿದ್ಧಿ ಪಡೆದನು.

ಅನಂತರ ಸಾವಿರ ತೋಳುಗಳಿಂದ ಶೋಭಿಸುವ ಕಾರ್ತವೀರ್ಯಾರ್ಜುನನು ತಮ್ಮ ತಂದೆ ತಾಯಿಗಳ ಬಳಿಗೆ ಬಂದನು. ವಿಕಲಾಂಗನಾದ ಪುತ್ರನು , ಸಹಸ್ರಭುಜನಾಗಿ ಸರ್ವಾಂಗಸುಂದರನಾಗಿ ಬಂದದ್ದನ್ನು ನೋಡಿ ಸಂತೋಷಭರಿತರಾಗಿ ಮುಖ್ಯರಾದ ಕೆಲವು ಬ್ರಾಹ್ಮಣಶ್ರೇಷ್ಠರಿಗೂ ವಿದ್ವಾಂಸರಿಗೂ ಅನೇಕ ದಾನದಕ್ಷಿಣೆಗಳನ್ನು ನೀಡಿದರು.

ಕಾರ್ತವೀರ್ಯಾರ್ಜುನನು ಸಂಕಟಹರ ವ್ರತದ ಮಹಿಮೆಯಿಂದ ಅನೇಕ ವರ್ಷಗಳ ಕಾಲ ಈ ಲೋಕದಲ್ಲಿ ಸುಖ ಸಾಮ್ರಾಜ್ಯ ಶಾಂತಿ ಸೌಖ್ಯಗಳನ್ನು ರಾಜ್ಯಭೋಗಗಳನ್ನು ಒಂದು ಕಲ್ಪಕಾಲ ಅನುಭವಿಸಿ ದಿವ್ಯಲೋಕವನ್ನು ಹೊಂದಿದನು.

ಈ ವ್ರತದ ಮಹಿಮೆಯಿಂದ ರಾವಣನು ಮಹಾಜ್ಞಾನಿ ಎನಿಸಿದನು. ರಾಜ್ಯವನ್ನು ಕಳೆದುಕೊಂಡು ಕಾಡುಪಾಲಾಗಿದ್ದ ಪಾಂಡವರು ಈ ವ್ರತಾನುಷ್ಠಾನದಿಂದ ಮರಳಿ ತಮ್ಮ ರಾಜ್ಯವನ್ನು ಪಡೆದರು.'' ಹೀಗೇ ದೇವೇಂದ್ರನು ಶೂರಸೇನ ಮಾಹಾರಾಜನಿಗೆ ''ಮಹಾರಾಜ, ಈ ಸಂಕಷ್ಟಹರವ್ರತವನ್ನು ಸಾಂಗವಾಗಿ ನೆರವೇರಿಸಿ ಅದರಿಂದ ಲಭಿಸುವ ಪುಣ್ಯವನ್ನು ನನ್ನ ಕೈಯಲ್ಲಿ ಧಾರೆಯೆರೆದು ಕೊಟ್ಟರೆ ಕೂಡಲೇ ಈ ನನ್ನ ವಿಮಾನವು ಅಮರಾವತಿಯನ್ನು ಸೇರುವುದು.'' ಎಂದು ಹೇಳಿದನು.

ಆಗ ಶೂರಸೇನ ಮಹಾರಾಜನು ಪರಮಾನಂದ ಭರಿತನಾಗಿ ದೇವೇಂದ್ರನ ಅಡಿದಾವರೆಗಳಿಗೆ ಭಕ್ತಿಯಿಂದ ನಮಸ್ಕರಿಸಿದನು. ಮತ್ತು ಕೈ ಮುಗಿದು ಹೇಳಿದನು.

**ಶೂರಸೇನ :-** ''ದೇವರಾಜ, ಸಂಕಷ್ಟಹರಗಣಪತಿಯ ಮಹಾವ್ರತದ ಈ ಕಥೆಯನ್ನು ನಿಮ್ಮ ಮುಖಕಮಲದಿಂದ ಕೇಳಿ ನಾನು ಧನ್ಯನಾದೆ. ಈ ಕಥಾಮೃತವನ್ನು ಪಾನಮಾಡಿದ್ದರಿಂದ ಇಂದಿಗೆ ನನ್ನ ಜನ್ಮಾಂತರದ ಪುಣ್ಯಗಳೆಲ್ಲವೂ ಫಲೋನ್ಮುಖವಾಗಿವೆ.''

ಶೂರಸೇನನು ವ್ರತಮಹಿಮೆಯನ್ನು ಹೇಳಿದ ದೇವೇಂದ್ರನಿಗೆ ಅಭಿನಂದಿಸಿ, ಮತ್ತೆ ಮತ್ತೆ ವಂದಿಸಿ ಸ್ವಯಂ ತಾನೇ ಆ ವ್ರತವನ್ನು ಆಚರಿಸಲು ಮೊದಲು ಮಾಡಿದನು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಚತುರ್ಥಿವ್ರತದ ನಿರೂಪಣ ಎಂಬ ಎಪ್ಪತ್ತಮೂರನೇ ಅಧ್ಯಾಯ ಮುಗಿದುದು*

—o—

**ಬ್ರಹ್ಮ :-** ಶೂರಸೇನರಾಜನು "ಯಾರು ಈ ದಿವ್ಯವಾದ ವ್ರತರಾಜವನ್ನು ವಿಧಿಪೂರ್ವಕವಾಗಿ ಮಂತ್ರೋಚ್ಚಾರಣ ಪೂರ್ವಕ ಮಾಡಿಸಬಲ್ಲರೋ ಅಂಥ ವಿಪ್ರೋತ್ತಮರನ್ನು ಬೇಗ ಕರೆದುಕೊಂಡು ಬನ್ನಿರಿ." ಎಂದು ತನ್ನ ದೂತರಿಗೆ ಹೇಳಿ ರಾಜಧಾನಿಗೆ ಕಳಿಸಿದನು. ದೂತರು ರಾಜಾಜ್ಞೆಯಂತೆ ಓಡುತ್ತ ರಾಜಧಾನಿಗೆ ಹೋದರು. ಈ ವ್ರತವನ್ನು ಮಾಡಬಲ್ಲ ಮಹಿಮಾನ್ವಿತರಾದ ಮಹಾತ್ಮರನ್ನು ಮನೆಮನೆಗಳಲ್ಲಿ ಹೊಕ್ಕು ಹುಡುಕತೊಡಗಿದರು. ಹೀಗೆ ಹುಡುಕುತ್ತ ಬರುವಾಗ ಅಲ್ಲಿ ಒಂದು ಸುಂದರವಾದ ದಿವ್ಯವಿಮಾನವು ಅವರಿಗೆ ಕಂಡಿತು.

ಆ ರಾಜಧಾನಿಯಲ್ಲಿ ಒಬ್ಬ ಚಂಡಾಲ ಸ್ತ್ರೀಯು ಇದ್ದಳು. ಘೋರವಾದ ಮಹಾರೋಗವು ಅವಳ ದೇಹವನ್ನು ನಖಶಿಖಾಂತವಾಗಿ ವ್ಯಾಪಿಸಿತ್ತು. ಮುಖದಿಂದ ದುರ್ಗಂಧಜೋಲ್ಲು ಸೋರುತ್ತಲಿತ್ತು. ಮೈತುಂಬ ಗಾಯಗಳು. ಆ ವ್ರಣಗಳ ಮೇಲೆಲ್ಲ ನೊಣಗಳು, ಅವಳನ್ನು ನೋಡಿದರೆ ಅಸಹ್ಯ ಬರುತ್ತಿತ್ತು. ಕಶ್ಮಲದೂಷಿತಳಾದ ಆ ಹೊಲಸು ಹೆಣ್ಣುಮಗಳನ್ನು ದಿವ್ಯವಿಮಾನದಲ್ಲಿ ಬಂದಿಳಿದ ಗಣಪತಿಯ ದೂತರು ಗೌರವಾದರಗಳಿಂದ ಕರೆದೊಯ್ಯಲು ಹವಣಿಸುತ್ತಿದ್ದರು. ಅದನ್ನು ನೋಡಿ ರಾಜದೂತರು ದಿಗ್ಭ್ರಾಂತರಾಗಿ ಆ ದೇವದೂತರನ್ನು ಕುರಿತು ಪ್ರಶ್ನಿಸಿದರು.

**ರಾಜದೂತರು :-** ದೇವದೂತರೇ, ಈ ಹೆಂಗಸು ನೋಡಲು ಅಸಹ್ಯ ಜಾತಿಯಿಂದ, ಚಂಡಾಲಿ, ಇಂಥ ರೋಗಿಷ್ಠ ಮಹಿಳೆಯನ್ನು ನೀವೇಕೆ ನಿಮ್ಮ ದಿವ್ಯವಿಮಾನದಲ್ಲಿ ಕರೆದೊಯ್ಯಲು ತವಕಿಸುತ್ತಿದ್ದೀರಿ. ಅವಳು ಹಿಂದೆ ಏನು ಇದ್ದಳು ? ಏನು ಮಾಡಿದಳು ? ಈಗ ಅವಳಿಗೆ ನಿಮ್ಮ ದಿವ್ಯವಿಮಾನವನ್ನು ಆರೋಹಣ ಮಾಡುವ ಯೋಗ್ಯತೆ ಹೇಗೆ ಬಂದಿತು ? ಇದೆಲ್ಲವನ್ನೂ ಹೇಳಿರಿ."

**ದೇವದೂತರು :-** ರಾಜದೂತರೆ, ಹಿಂದೆ ಬಂಗಾಲದಲ್ಲಿ ಸಾರಂಗಧರ ಎಂಬ ಪ್ರಖ್ಯಾತ ಕ್ಷತ್ರಿಯ ಇದ್ದ. ಅವನಿಗೆ ಸುಂದರೀ ಎಂಬ ಅತ್ಯಂತ ಸೌಂದರ್ಯವತಿಯಾದ ಮಗಳು ಇದ್ದಳು. ಅವಳ ವಿಶ್ವಮೋಹಕವಾದ ಸೌಂದರ್ಯವನ್ನು ನೋಡಿ ಯುವಕರೆಲ್ಲರೂ ಹುಚ್ಚಾಗಿ ಅವಳ ಬೆನ್ನಹಿಂದೆ ತಿರುಗತೊಡಗಿದರು. ಅವಳು ಕೂಡ ಜನರನ್ನು ಮೋಸಗೊಳಿಸುತ್ತ ನಿರ್ಲಜ್ಜಳಾಗಿ ವೇಶ್ಯೆಯಂತೆ ವರ್ತಿಸತೊಡಗಿದಳು. ಅವಳ ಗಂಡನ ಹೆಸರು ಚಿತ್ರ. ಅವನನ್ನು ವಂಚಿಸಿ ಅವಳು ತಂದೆಯು ಕೊಟ್ಟ ಅಪರಿಮಿತವಾದ ದ್ರವ್ಯವನ್ನು ಮನಬಂದಂತೆ ವೆಚ್ಚಮಾಡಿ ನಾಶಮಾಡಿದಳು. ಗಂಡನನ್ನು ಅತ್ಯಂತ ದರಿದ್ರಾವಸ್ಥೆಗೆ ತಂದಳು.

ಒಂದು ದಿನ ರಾತ್ರಿ ಆ ಸುಂದರಿಯು ತನ್ನ ಗಂಡನಾದ ಚಿತ್ರನೊಂದಿಗೆ ಮಂಚದ ಮೇಲೆ ಮಲಗಿದ್ದಳು. ನಡುರಾತ್ರಿಯಲ್ಲಿ ಗಂಡನಿಗೆ ನಿದ್ರೆ ಬಂದಿದೆ ಎಂದು ಊಹಿಸಿ ಜಾರನೊಡನೆ ರಮಿಸಲು ಅವಳು ಸಂಕೇತಸ್ಥಾನಕ್ಕೆ ಹೊರಟಳು. ಆಗ ಚಿತ್ರನು ಎಚ್ಚೆತ್ತು

ಅವಳ ಕೈಯನ್ನು ಭದ್ರವಾಗಿ ಹಿಡಿದು ''ಪಾಪಿ ಹೆಣ್ಣೆ, ನಿನಗೆ ಧಿಕ್ಕಾರವಿರಲಿ. ನೀನು ಯಾವಾಗಲೂ ಪತಿವ್ರತೆಯಂತೆ ನಟಿಸುತ್ತಾ ಇದ್ದು ಏಕಾಂತದಲ್ಲಿ ಮನಬಂದವರೊಡನೆ ರಮಿಸಲು ಹೋಗುವಿಯಾ ?'' ಎಂದು ಗದ್ದರಿಸಿ ಕೇಳಿದನು. ಅವಳು ಪರಿಪರಿಯ ಬಣ್ಣದ ಮಾತುಗಳಿಂದ ಗಂಡನಿಗೆ ''ನಿನ್ನನ್ನು ರಮಿಸಲು ನಾನು ಅಲಂಕಾರ ಮಾಡಿಕೊಂಡಿದ್ದೆ. ನಿನ್ನ ಸಂತೋಷಕ್ಕಾಗಿಯೇ ನನ್ನ ಸಕಲ ಕಾರ್ಯಗಳು'' ಎಂದು ಹೇಳಿ ಅವನನ್ನು ಮರುಳುಗೊಳಿಸುತ್ತ ಮಲಗಿದಳು. ತುಸು ಸಮಯದ ನಂತರ ಚಿತ್ರನಿಗೆ ಗಾಢನಿದ್ರೆ ಹತ್ತಿತ್ತು. ಸುಂದರಿಯು ಮಾದಕವಸ್ತುಗಳನ್ನು ಸೇವಿಸಿ ಮದೋನ್ಮತ್ತಳಾಗಿ ತನ್ನ ಗಂಡನನ್ನು ಚೂರಿಯಿಂದ ಕೊಂದುಹಾಕಿದಳು. ತಾನು ಮೊದಲೇ ಗೊತ್ತುಮಾಡಿದ ವಿಟಪುರುಷನೊಂದಿಗೆ ತಮ್ಮ ನಿರ್ದಿಷ್ಟವಾದ ಸಂಕೇತಸ್ಥಾನದಲ್ಲಿ ಯಥೇಚ್ಛವಾಗಿ ವಿಹರಿಸಿದಳು.

ಆ ದುಷ್ಟೆಯು ಈ ಎಲ್ಲ ದುರ್ವ್ಯಾಪ್ಯಾರಗಳನ್ನು ಮಾಡುವಾಗ ಓರ್ವಗುಪ್ತಚಾರನು ಎಲ್ಲವನ್ನೂ ನೋಡಿದನು. ಮಹಾರಾಜನಿಗೆ ಅವಳ ದುಷ್ಕಾರ್ಯದ ವರದಿ ಒಪ್ಪಿಸಿದನು. ಆಗ ರಾಜನು ಅವಳನ್ನು ಹಿಡಿದು ತರಬೇಕೆಂದು ದೂತರಿಗೆ ಅಪ್ಪಣೆ ಮಾಡಿದನು. ಅವರು ರತಿಕ್ರೀಡೆಯಿಂದ ತೃಪ್ತಳಾಗಿ ಮನೆಗೆ ಬಂದ ಅವಳನ್ನು ಬಂಧಿಸಿ ರಾಜನ ಎದುರು ತಂದು ನಿಲ್ಲಿಸಿದರು. ರಾಜನು ಅವಳ ಶಿರಚ್ಛೇದವನ್ನು ಮಾಡಬೇಕೆಂದು ಆಜ್ಞಾಪಿಸಿದನು. ದೂತರು ಅವಳನ್ನು ಊರಹೊರಗೆ ಕೊಂಡೊಯ್ದು ತಲೆಯನ್ನು ಕತ್ತರಿಸಿದರು. ಮರಣಾನಂತರ ಅವಳು ನರಕಕ್ಕೆ ಹೋದಳು. ಅನೇಕ ವರ್ಷಗಳ ಕಾಲ ಘೋರ ನರಕದಲ್ಲಿ ಅಸಹ್ಯವಾದ ಯಮಯಾತನೆಗಳನ್ನು ಅನುಭವಿಸಿದಳು. ಒಂದು ಕಲ್ಪಕಾಲ ನರಕವಾಸ ದುಃಖವನ್ನು ಅನುಭವಿಸಿ ಪುನಃ ಅವಳು ಭೂಲೋಕದಲ್ಲಿ ಒಬ್ಬ ಚಂಡಾಲಿನಿಯಾಗಿ ಜನಿಸಿದಳು. ಆಗಲೂ ಅವಳು ಸ್ವಚ್ಛಂದವಾಗಿ ಮದ್ಯಪಾನವನ್ನು ಮಾಡುತ್ತಿದ್ದಳು. ಒಂದು ರಾತ್ರಿ ಮದ್ಯಪಾನದಿಂದ ಮತ್ತೇರಿ ಇಡೀ ಹಗಲೆಲ್ಲ ಮಲಗಿದ ಅವಳು ನಡುರಾತ್ರಿಯಲ್ಲಿ ಎಚ್ಚರವಾದಳು. ಅವಳಿಗೆ ಭಯಂಕರ ಹಸಿವೆಯಾಗಿತ್ತು. ಅತ್ತಿತ್ತ ಆಹಾರಕ್ಕಾಗಿ ಸಂಚರಿಸಿದಳು. ಅವಳು ಆಹಾರಕ್ಕಾಗಿ ಅಲೆದಾಡುತ್ತಿರುವಾಗ ತಳಿರು ತೋರಣಗಳಿಂದ ಅಲಂಕೃತವಾದ ಒಂದು ಮನೆಯನ್ನು ಕಂಡಳು. ಆ ಮನೆಯ ಯಜಮಾನನು ಸಂಕಷ್ಟಹರಗಣಪತಿಯ ವ್ರತವನ್ನು ಆಚರಿಸಿದ್ದನು. ಹಸಿವೆಯಿಂದ ಕಸಿವಿಸಿ ಪಡುವ ಆ ಚಂಡಾಲಿನಿಯು ಆ ಮನೆಯ ಯಜಮಾನನ ಬಳಿಗೆ ಹೋಗಿ ಆಹಾರವನ್ನು ಯಾಚಿಸಿದಳು. ಅವನು ಗಣಪತಿಗೆ ನಿವೇದಿಸಿದ ಅನ್ನವನ್ನು ಕೊಟ್ಟನು. ಇವಳು ತಿಂದಳು. ಆಗ ಚಂದ್ರೋದಯವಾಯಿತು.

ಈ ರಾತ್ರಿಯಲ್ಲಿ ತಾನು ಹಸಿದು ಸಂಕಟಪಡುತ್ತಿರುವಾಗ ಗಣೇಶನ ವ್ರತದ ಪ್ರಭಾವದಿಂದ ತನಗೆ ಅನ್ನ ದೊರೆಯಿತು. ಹಸಿವೆ ಹಿಂಗಿತು ಎಂಬ ಭಾವನೆ ಬಂದು ಅವಳು ''ಗಣೇಶ ನಿನ್ನ ದಯೆ'' ಎಂದು ಅಕಸ್ಮಾತ್ ನುಡಿದಳು. ಚಂಡಾಲಿನಿಯು ಯದೃಚ್ಛೆಯಿಂದ ಆಕಸ್ಮಿಕವಾಗಿ ನುಡಿದ ತನ್ನ ನಾಮದಿಂದ ಸಂತುಷ್ಟನಾಗಿ ಆ ಗಣನಾಥನೂ ಅವಳನ್ನು ತನ್ನ ಸನ್ನಿಧಿಗೆ ಕರೆತರಲು ದಿವ್ಯ ಮಂಗಳಕರವೂ ಆದ ವಿಮಾನವನ್ನು ಕಳಿಸಿಕೊಟ್ಟನು. ಮತ್ತು ಗಣಪತಿಯ ದೂತರಾದ ನಾವು ಅವನ ಆಜ್ಞಾನುಸಾರವಾಗಿ ಈ ಚಂಡಾಲಿನಿಯನ್ನು ಕರೆದೊಯ್ಯಲು ನಿಂತಿದ್ದೇವೆ'' ಎಂದು ಹೇಳಿದರು.

ದೇವದೂತರ ಮುಖಾಂತರ ಆ ಚಂಡಾಲಿನಿಯ ಕಥೆಯನ್ನು ಕೇಳಿದ ರಾಜದೂತರು ಅವರಿಗೆ ನಮಸ್ಕಾರ ಮಾಡಿ ಹೀಗೆ ನುಡಿದರು.

**ರಾಜದೂತರು :-** ದೇವದೂತರೆ, ರಾಜಸೇವಕರಾದ ನಾವು ಇಂದು ಒಂದು ಅದ್ಭುತವಾದ ದೃಶ್ಯವನ್ನು ಇಲ್ಲಿ ನೋಡಿದಂತಾಯಿತು. ನಮ್ಮ ರಾಜನು ನಮಗೆ ಆಜ್ಞೆ ಮಾಡಿದ್ದನ್ನು ಹೇಳುತ್ತೇವೆ. ಕೇಳಿರಿ. ''ದೇವೇಂದ್ರನು ಗೃತ್ಸಮದ ಮಹರ್ಷಿಯನ್ನು ಸಂದರ್ಶಿಸುವದಕ್ಕಾಗಿ ತನ್ನ ದಿವ್ಯವಾದ ವಿಮಾನವನ್ನು ಆರೋಹಣ ಮಾಡಿ ಭೂಲೋಕಕ್ಕೆ ತನ್ನ ಪರಿವಾರದೊಡನೆ ಬಂದನು. ಯೋಗಿರಾಜನಾದ ಭೃಷುಂಡಿ ಮಹಾಮುನಿಯ ಆಶ್ರಮಕ್ಕೆ ಬಂದು ಮುನಿವರ್ಯನನ್ನು ಕಂಡು ಪೂಜಿಸಿ ಅವನ ಅನುಮತಿಯನ್ನು ಪಡೆದು ದೇವತೆಗಳೊಡನೆ ಅಮರಾವತಿಗೆ ಹೊರಟಿದ್ದನು. ಅವನ ವಿಮಾನವು ನಮ್ಮ ರಾಜಧಾನಿಯ ಮೇಲೆ ಹಾರಿ ಬಂದಿತು.

ಆಗಸದಲ್ಲಿ ಸಂಚರಿಸುತ್ತಿದ್ದ ಆ ದೇವ ವಿಮಾನವನ್ನು ನಮ್ಮ ದೇಶವಾಸಿಯಾದ ಒಬ್ಬ ಕುಷ್ಠರೋಗಿಯು ಕಂಡನು. ನಗರದ ಒಬ್ಬ ವೈಶ್ಯನ ಮಗನಾದ ಆ ಕುಷ್ಠರೋಗಿಯು ತನ್ನ ದೃಷ್ಟಿಯನ್ನು ಹರಿಸಿ ವಿಮಾನವನ್ನು ನೋಡಿದಕೂಡಲೇ ಅದು ನಮ್ಮ ಮಹಾರಾಜನಾದ ಶೂರಸೇನನ ರಾಜಧಾನಿಯಲ್ಲಿ ಬಂದು ಬಿದ್ದಿತು.

ಶೂರಸೇನ ಮಹಾರಾಜನು ಈ ಸಮಾಚಾರವನ್ನು ತಿಳಿದು ವಿಮಾನವು ಬಿದ್ದ ಸ್ಥಳಕ್ಕೆ ಧಾವಿಸಿ ಬಂದನು. ಅಲ್ಲಿ ಇರುವ ದೇವರಾಜನಾದ ಮಹೇಂದ್ರನನ್ನು ಮತ್ತು ಇತರ ದೇವತೆಗಳನ್ನೂ ನಮಸ್ಕರಿಸಿದನು. ಯಥಾಯೋಗ್ಯವಾಗಿ ಪೂಜಿಸಿದನು. ಮತ್ತು ಆ ವಿಮಾನ ಬಿದ್ದುದಕ್ಕೆ ಕಾರಣವನ್ನು ಮತ್ತು ಅದು ಮೊದಲಿನಂತೆ ಚಲಿಸಲು ಮಾಡಬೇಕಾದ ಉಪಾಯವನ್ನೂ ಕೇಳಿದನು. ಅದನ್ನು ಕೇಳಿ ದೇವೇಂದ್ರನು ನುಡಿದನು ''ಸಂಕಷ್ಟಹರಗಣಪತಿಯ ವ್ರತವನ್ನು ಆಚರಿಸಿ ಆ ವ್ರತದ ಪುಣ್ಯವನ್ನು ಧಾರೆಯೆರೆದು ಕೊಟ್ಟರೆ ಆ ವ್ರತಾನುಷ್ಠಾನದ ಮಹಿಮಾಪ್ರಭಾವದಿಂದ ಈ ವಿಮಾನವು ಮೇಲಕ್ಕೆ ಎದ್ದು ಮತ್ತೆ ಚಲಿಸಿ ಮುಂದುವರೆಯುವದು. ಅದಕ್ಕಾಗಿ ನೀನು ಪ್ರಯತ್ನವನ್ನು ಮಾಡು''. ಹೀಗೆ ದೇವೇಂದ್ರನು ಹೇಳಿದ ಉಪಾಯವನ್ನು ಕೇಳಿ ನಮ್ಮ ದೊರೆಯಾದ ಶೂರಸೇನ ಮಹಾರಾಜರು ಈ ವ್ರತೋಪದೇಶವನ್ನು ಮಾಡಬಲ್ಲ ಒಬ್ಬ ಉಪಾಧ್ಯಾಯನನ್ನು ಕರೆತರಬೇಕೆಂದು ನಮ್ಮನ್ನು ರಾಜಧಾನಿಗೆ ಕಳಿಸಿದ್ದಾರೆ.

ಪ್ರಕೃತ ಈ ಚಾಂಡಾಲಿನಿಯು ಯಾದೃಚ್ಛಿಕವಾಗಿ ಈ ವ್ರತವನ್ನು ಮಾಡಿದಂತಾಗಿದೆ. ಎಂದು ನೀವು ಹೇಳಿದಿರಲ್ಲವೆ ? ನಿಜವಾಗಿಯೂ ಇವಳು ಪರ್ಯಾಯವಾಗಿ ಆ ವ್ರತವನ್ನು ಮಾಡಿದಂತಾಗಿದ್ದರೆ ಇವಳನ್ನೇ ನಮ್ಮ ರಾಜರ ಬಳಿಗೆ ಕರೆದೊಯ್ಯೋಣವೆ ? ಇವಳು ಸಂಕಷ್ಟಹರ ಗಣಪತಿ ವ್ರತಾಚರಣೆಯಿಂದ ಪುಣ್ಯವನ್ನು ದೇವತೆಗಳಿಗೆ ಧಾರೆಯೆರೆದು ಆ ವಿಮಾನವು ಚಲಿಸುವಂತೆ ಮಾಡಲಿ. ರಾಜನಿಗೂ ದೇವತೆಗಳಿಗೂ ವ್ರತದ ಪುಣ್ಯವನ್ನು ಧಾರೆಯೆರೆದು ಕೊಡುವುದರಿಂದ ಆ ಚಾಂಡಾಲಿನಿಗೆ ಇಮ್ಮಡಿಯಾಗಿ ಪುಣ್ಯವು ದೊರಕುವುದು. ಅವಳು ವಿಮಾನಾರೂಢಳಾಗಿ ನಿಮ್ಮಲ್ಲಿಗೆ ದೇವಲೋಕಕ್ಕೆ ಬರಲಿ. ನಿಮ್ಮ

ವಿಮಾನವು ಚಲಿಸಿ ಸ್ವರ್ಗವನ್ನು ತಲುಪುವದು. ನಮಗೂ ಉಪಾಧ್ಯಾಯರನ್ನು ಹುಡುಕುವ ಶ್ರಮ ತಪ್ಪುವದು'' ಎಂದು ರಾಜಭಟರು ಹೇಳಿದರು.

ಆದಕ್ಕೆ ದೇವದೂತರು ''ಈ ಸ್ತ್ರೀಯನ್ನು ಬೇರೆ ಕಾರ್ಯಕ್ಕಾಗಿ ಬಳಸಿಕೊಳ್ಳಲು ನಮಗೆ ಒಡೆಯನಾದ ಗಣೇಶನ ಅಪ್ಪಣೆಯಿಲ್ಲ. ನಾವು ಅಸ್ವತಂತ್ರರು. ದೇವನ ಅಪ್ಪಣೆಯಿಲ್ಲದೇ ನಾವು ಏನೂ ಮಾಡಲಾಗದು'' ಎಂದು ಹೇಳಿ ಆ ಚಾಂಡಾಲಿನಿಯನ್ನು ಎತ್ತಿ ವಿಮಾನದಲ್ಲಿ ಕೂಡಿಸಿದರು. ದುರ್ಗಂಧದಿಂದ ಅಸಹ್ಯವಾಗಿ ನಾರುವ ಅವಳ ದೇಹವು ಸುಗಂಧಯುತವಾಗಿ ದೈವೀಕಾಂತಿಯಿಂದ ಕಂಗೊಳಿಸತೊಡಗಿತು. ಅವಳನ್ನು ಗಜಾನನನ ಸನ್ನಿಧಿಗೆ ಕರೆದೊಯ್ದು ಆ ದೇವದೇವನಿಗೆ ನಡೆದ ಸಂಗತಿಯನ್ನು ತಿಳಿಸಿದರು. ರಾಜದೂತರು ತಮ್ಮ ಉಪಾಯವು ಫಲಿಸದ್ದರಿಂದ ಖಿನ್ನರಾಗಿ ರಾಜನಿದ್ದಲಿಗೆ ಬಂದು ತಾವು ಕಂಡ ಅದ್ಭುತವಾದ ಸಂಗತಿಯನ್ನು ವಿಜ್ಞಾಪಿಸಿಕೊಂಡರು. ಅದೇ ವೇಳೆಗೆ ಚಾಂಡಾಲಿನಿಯು ಕುಳಿತ ದೇವವಿಮಾನವು ಅದೇ ದಾರಿಯಿಂದ ಗಣೇಶಲೋಕಕ್ಕೆ ಹೊರಟಿದ್ದಿತು. ಶೂರಸೇನ ಮಹಾರಾಜ ಮತ್ತು ದೇವತೆಗಳ ಪರಿವಾರ ಎಲ್ಲರೂ ಕೆಳಗೆ ನಿಂತಲ್ಲಿಯೇ ಆ ವಿಮಾನ ಪ್ರಯಾಣವನ್ನು ನೋಡಿದರು. ದೇವೇಂದ್ರನ ವಿಮಾನದ ಮೇಲೆ ಗಣೇಶಲೋಕಕ್ಕೆ ಹೊರಟ ಚಾಂಡಾಲಿನಿಯ ದೃಷ್ಟಿಯು ಬಿದ್ದಿತು. ಚಾಂಡಾಲಿ ಕುಳಿತ ವಿಮಾನದ ಗಾಳಿ ತಗಲಿದ ಕೂಡಲೇ ನೆಲಕ್ಕೆ ಬಿದ್ದು ತಟಸ್ಥವಾಗಿದ್ದ ದೇವೇಂದ್ರನ ವಿಮಾನವು ಮೇಲಕ್ಕೆ ಎದ್ದು ತನ್ನಷ್ಟಕ್ಕೆ ತಾನೇ ಚಲಿಸತೊಡಗಿತು. ಈ ಆಶ್ಚರ್ಯವನ್ನು ಕಂಡು ಭೂಲೋಕದ ಎಲ್ಲ ಋಷಿಮುನಿಗಳೂ ದೇವತೆಗಳೂ ಆಶ್ಚರ್ಯಚಕಿತರಾದರು. ದೇವೇಂದ್ರನು ಶೂರಸೇನ ರಾಜನಿಗೆ ಹೋಗಿಬರುವುದಾಗಿ ಹೇಳಿ ತನ್ನ ಪರಿವಾರದೊಡನೆ ಅಮರಾವತಿಗೆ ಪ್ರಯಾಣ ಮಾಡಿದನು. ಶೂರಸೇನರಾಜನೂ, ಅವನ ಪರಿವಾರದವರೂ ಸಂಕಷ್ಟವ್ರತದ ಈ ದಿವ್ಯ ಪ್ರಭಾವವನ್ನು ಪ್ರಶಂಸಿಸುತ್ತ ತಮ್ಮ ತಮ್ಮ ಮನೆಗೆ ತೆರಳಿದರು. ಆ ಚಂಡಾಲಿಯು ದಿವ್ಯ ಶರೀರವನ್ನು ಧರಿಸಿ ಪರಮಪದವಾದ ವಿನಾಯಕನ ಸ್ಥಾನವನ್ನು ಹೊಂದಿದಳು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಚಾಂಡಾಲಿ ಮುಕ್ತಿ ಎಂಬ ಎಪ್ಪತ್ತನಾಲ್ಕನೇ ಅಧ್ಯಾಯ ಮುಗಿದುದು*



**ಬ್ರಹ್ಮ** :- ಸಂಕಷ್ಟಹರ ಮಹಾಗಣಪತಿಯ ವ್ರತಾಚರಣೆಯ ಮಹಿಮೆಯನ್ನು ಕಣ್ಣಿನಿಂದ ನೋಡಿ ಅನುಭವಿಸಿದ ಶೂರಸೇನ ಮಹಾರಾಜನು ಆ ವ್ರತವನ್ನು ತಾನೂ ಆಚರಿಸಬೇಕೆಂದು ಬಯಸಿದನು. ತನ್ನ ಕುಲಪುರೋಹಿತರಾದ ವಶಿಷ್ಠರಿಗೆ ಈ ವಿಷಯದಲ್ಲಿ ಮಾರ್ಗದರ್ಶನ ಮಾಡಬೇಕೆಂದು ಬಿನ್ನವಿಸಿಕೊಂಡನು.

**ವಶಿಷ್ಠ** :- ಮಾಘ ಬಹುಳ ಚತುರ್ಥಿ ಮಂಗಳವಾರ ಈ ವ್ರತಾಚರಣೆಗೆ ಶ್ರೇಷ್ಠವಾಗಿದೆ. ಈ ವ್ರತವನ್ನು ನೀನು ಯಥಾಸಾಂಗವಾಗಿ ಆಚರಿಸಿದರೆ ಸಕಲಸಿದ್ಧಿಗಳೂ ನಿನಗೆ ಕೈಗೂಡವವು.

ಶೂರಸೇನರಾಜನು ಮಾಘಕೃಷ್ಣಪಕ್ಷ ಚತುರ್ಥೀ ಮಂಗಳವಾರದಂದು ಗಣಪತಿಯ ಮೂಲಮಂತ್ರವನ್ನು ಜಪಿಸುತ್ತ ಶಾಸ್ತ್ರೋಕ್ತ ರೀತಿಯಿಂದ ಸಂಕಷ್ಟಹರ ಚತುರ್ಥೀವ್ರತವನ್ನು ಆಚರಿಸಿದನು. ಪೂಜಾಮಂದಿರದಲ್ಲಿ ಗಣಪತಿಯ ಚಿನ್ನದ ಮೂರ್ತಿಯನ್ನು ಪ್ರತಿಷ್ಠಾಪಿಸಿ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜೆಗಳಿಂದ ಗಣಾಧೀಶನನ್ನು ಅರ್ಚಿಸಿದನು. ಪಂಚಾಮೃತ ಅಭಿಷೇಕ ಮಾಡಿ ಶುದ್ಧೋದಕದಿಂದ ಸ್ನಾನಮಾಡಿಸಿ, ಬಗೆಬಗೆಯ ಪುಷ್ಪ ಆಭರಣಗಳನ್ನು ಅರ್ಪಿಸಿ, ರತ್ನಖಚಿತವಾದ ಕಿರೀಟವನ್ನು ಮೂರ್ತಿಯ ತಲೆಯಮೇಲೆ ಇರಿಸಿದನು. ಗಣೇಶ ಸಹಸ್ರನಾಮಗಳನ್ನು ಉಚ್ಚರಿಸುತ್ತ ದೇವನ ಪಾದಗಳ ಮೇಲೆ ದೂರ್ವಾಂಕುರಗಳನ್ನು ಸಮರ್ಪಿಸಿದನು. ಧೂಪ, ದೀಪಗಳನ್ನು ಅರ್ಪಿಸಿ ಪುಷ್ಪಾಂಜಲಿಯಿಂದ ದೇವನ ಮೇಲೆ ಕುಸುಮ ವೃಷ್ಟಿಯನ್ನು ಮಾಡಿದನು. ಬಳಿಕ ಚತುರ್ಥೀತಿಥಿ ಗಣನಾಥ ಚಂದ್ರ ಇವರಿಗೆ ತತ್ತನ್ ಮಂತ್ರಗಳಿಂದ ಅರ್ಘ್ಯಗಳನ್ನು ನೀಡಿದನು. ಈ ವ್ರತದ ಸಾಂಗತಾಸಿದ್ಧ್ಯರ್ಥವಾಗಿ ಬ್ರಾಹ್ಮಣರ ಭೂರಿಭೋಜನವನ್ನು ಮಾಡಿಸಿ ಅವರಿಗೆ ಯಥೇಚ್ಛವಾಗಿ ಪಂಚಭಕ್ಷ್ಯ ಪಕ್ವಾನ್ನಗಳನ್ನು ಹಾಕಿ ತೃಪ್ತಿಪಡಿಸಿದನು. ಅನಂತರ ಯೋಗ್ಯರಾದ ಗಣೇಶಭಕ್ತ ಬ್ರಾಹ್ಮಣರಿಗೆ ಗೋದಾನ, ಭೂದಾನ, ಹಿರಣ್ಯದಾನಗಳನ್ನು ಮಾಡಿದನು.

ಶೂರಸೇನ ಮಹಾರಾಜನು ಮಾಡಿದ ವಿಧ್ಯುಕ್ತವಾದ ಈ ಸಂಕಷ್ಟಹರ ಚತುರ್ಥಿವ್ರತ ವಿಧಾನದಿಂದ ಗಜಾನನನು ಸುಪ್ರೀತನಾಗಿ ತನ್ನ ದೂತರ ಮುಖಾಂತರ ವಿಮಾನವನ್ನು ಕೊಟ್ಟು ಕಳಿಸಿದನು. ಆ ವ್ರತದ ಪ್ರಭಾವದಿಂದ ಶೂರಸೇನ ಮಹಾರಾಜನಿಗೆ ಗಣೇಶ ಸಾರೂಪ್ಯವು ಪ್ರಾಪ್ತವಾಯಿತು. ಗಣಪತಿಯ ದೂತರು ಗೌರವಾದರದಿಂದ ಅವನನ್ನು ವಿಮಾನದಲ್ಲಿ ಕೂಡಿಸಿದರು.

ಆಗ ವಿಮಾನದಲ್ಲಿ ಕುಳಿತ ಶೂರಸೇನರಾಜನು ಕೆಳಗೆ ಸುತ್ತಲೂ ನಿಂತುಕೊಂಡ ತನ್ನ ಮಂತ್ರಿ, ಪುರೋಹಿತ, ಪ್ರಜಾಪರಿವಾರದವರನ್ನು ನೋಡಿದನು. ಮತ್ತು

ಗಣೇಶದೂತರಿಗೆ ವಿಜ್ಞಾಪಿಸಿಕೊಂಡನು. "ಪೂಜ್ಯರೇ, ಈ ನಮ್ಮ ಪ್ರಜೆಗಳನ್ನೆಲ್ಲ ಬಿಟ್ಟು ನಾನೊಬ್ಬನೇ ಹೇಗೆ ಗಣೇಶ ಸನ್ನಿಧಿಗೆ ಬರಲಿ ? ಪ್ರಜೆಗಳೆಂದರೆ ನನಗೆ ಪುತ್ರರಿದ್ದಂತೆ ಅವರನ್ನು ಬಿಟ್ಟು ಬರಲಾರೆ."

**ದೇವದೂತರು :-** 'ಏನಾದರೂ ನಿನ್ನನ್ನು ಬಿಟ್ಟು ಬರಬಾರದು ಎಂದು ನಮಗೆ ದೇವದೇವನ ಅಪ್ಪಣೆಯಾಗಿದೆ. ನೀನು ನಿನ್ನ ಪರಿವಾರವನ್ನು ಬಿಟ್ಟು ಬರುವದಿಲ್ಲ ಎಂದಾದರೆ ನಿನ್ನ ವ್ರತಾನುಷ್ಠನದ ಪುಣ್ಯಫಲವನ್ನು ಇವರಿಗೂ ಪ್ರದಾನಮಾಡು. ಆದರಿಂದ ಅವರೆಲ್ಲ ದಿವ್ಯದೇಹ ಧಾರಣಮಾಡಿ ವಿಮಾನಾರೂಢರಾಗಿ ಗಣೇಶಸನ್ನಿಧಿಗೆ ತೆರಳಲಿ" ಎಂದು ಹೇಳಿದರು.

ಅವರ ಮಾತಿನಂತೆ ಶೂರಸೇನ ಮಹಾರಾಜನು ತನ್ನ ಆತ್ಮೀಯ ಪರಿವಾರದವರಿಗೆ ತನ್ನ ಪುಣ್ಯವನ್ನು ಧಾರೆಯೆರೆದು ಕೊಟ್ಟನು. ಎಲ್ಲರೂ ಮಹಾರಾಜನೊಂದಿಗೆ ವಿಮಾನವನ್ನು ಏರಿ ಕುಳಿತರು. ಅನಂತರ ಆ ವಿಮಾನವು ಯಾವುದೋ ಕಾರಣದಿಂದ ಚಲಿಸಲಾರದಷ್ಟು ಜಡವಾಗಿತ್ತು. ಭೂಮಿಯನ್ನು ಬಿಟ್ಟು ಮೇಲಕ್ಕೆ ಏಳಲೇ ಇಲ್ಲ. ಈ ವಿಮಾನ ಸ್ತಂಭನಕ್ಕೆ ಕಾರಣವೇನು ಇರಬಹುದು. ಎಂದು ಎಲ್ಲರೂ ಹುಡುಕು ಗಣ್ಣಿಂದ ನೋಡಿದರು. ಆ ವಿಮಾನದ ಮೂಲೆಯಲ್ಲಿ ಒಬ್ಬ ಕುಷ್ಠರೋಗಿಯು ಕುಳಿತುಕೊಂಡಿದ್ದನು. ಅವನ ದುರದೃಷ್ಟದಿಂದ ವಿಮಾನವು ಜಡವಾಗಿ ಹಾರದೇ ನೆಲಕಚ್ಚಿ ನಿಂತುಕೊಂಡಿತು. ಆಗ ಎಲ್ಲ ಜನರೂ ಅವನನ್ನು ಹೊರಗೆ ತಳ್ಳಿರಿ. ಎಂದು ಕೂಗತೊಡಗಿದರು. ಅದನ್ನು ನೋಡಿ ಶೂರಸೇನರಾಜನು ದೇವದೂತರಿಗೆ ಪ್ರಶ್ನೆ ಮಾಡಿದನು.

**ಶೂರಸೇನ :-** "ದೇವದೂತರೆ, ನಾನೇ ಪಾಪಾಚಾರಿಯು. ನನ್ನನ್ನು ಬಿಟ್ಟು ಉಳಿದೆಲ್ಲರನ್ನೂ ದೇವಲೋಕಕ್ಕೆ ಕರೆದುಕೊಂಡು ಹೋಗಿರಿ. ಈ ಕುಷ್ಠರೋಗಿಯಿಂದ ವಿಮಾನವು ಜಡವಾಗಿದ್ದರೆ ಅವನು ಮಾಡಿದ ಪಾಪ ಯಾವುದು ? ಯಾವ ದುಷ್ಕರ್ಮದಿಂದ ಅವನಿಗೆ ಈ ರೋಗ ತಗಲಿದೆ ? ಇದರ ಪರಿಹಾರ ಉಪಾಯವೇನು ?" ಎಂದು ಕೇಳಿದನು.

**ದೇವದೂತರು :-** ರಾಜನೇ, ನೀನು ಚಿಂತಿಸಬೇಡ. ನಾವು ಇವನ ಹಿಂದಿನ ಕಥೆಯನ್ನು ಹೇಳುತ್ತೇನೆ ಕೇಳು. ಇವನ ಪುನರುದ್ಧಾರದ ಉಪಾಯವನ್ನು ಕೂಡ ಹೇಳುತ್ತೇವೆ ಆಲಿಸು.

*ಇತಿ ಗಣೇಶಪುರಾಣದ ಉಪಾಸನಾಖಂಡ ಶೂರಸೇನ ಮಹಾರಾಜನ ವ್ರತಾನುಷ್ಠಾನ ಪ್ರಭಾವ ಎಂಬ ಎಪ್ಪತ್ತಐದನೇ ಅಧ್ಯಾಯ ಮುಗಿದುದು*

—o—

## ಗಣೇಶಲೋಕ ಪ್ರಾಪ್ತಿ

## ಅಧ್ಯಾಯ - ೭೬

**ಗಣೇಶದೂತರು :-** ಇಲ್ಲಿ ಕುಳಿತಿರುವ ಈ ಕುಷ್ಠರೋಗಿಯು ಪೂರ್ವಜನ್ಮದಲ್ಲಿ ಗೌಡದೇಶದ ಗೌಡ ಎಂಬ ನಗರದಲ್ಲಿ ಬ್ರಾಹ್ಮಣನಾಗಿ ಜನಿಸಿದ್ದನು. ಇವನಿಗೆ ಶಾಕಿನಿ ಎಂಬ ತಾಯಿ, ಸಾವಿತ್ರಿ ಎಂಬ ಪತ್ನಿ ಇದ್ದಳು. ಅವನ ಮಡದಿಯಾದ ಸಾವಿತ್ರಿಯು ರೂಪವತಿ, ಶೀಲವತಿ, ಗುಣವತಿ ಆಗಿದ್ದಳು. ಈ ದುಷ್ಟನು ಚೆಲುವಿನ ಚಿತ್ತಾರದಂತಿದ್ದ ಸುಂದರೀಮಣಿಯಾದ ಮಡದಿಯು ಮನೆಯಲ್ಲಿದ್ದರೂ ಅವಳನ್ನು ಉಪೇಕ್ಷಿಸಿ ವೇಶ್ಯಾಗಾಮಿಯಾಗಿದ್ದನು.

ಒಮ್ಮೆ ಆ ಗೌಡನಗರಕ್ಕೆ ರೂಪರಾಶಿಯಂತಿದ್ದ ಓರ್ವವೇಶ್ಯೆಯು ಬಂದಳು. ಅವಳು ಸೌಂದರ್ಯವತಿ ಆಗಿದ್ದಷ್ಟೇ ಧನಪಿಶಾಚಿಯೂ ಆಗಿದ್ದಳು. ಹೇರಳವಾಗಿ ಹಣವನ್ನು ತಂದು ಕೊಟ್ಟವರಿಗೆ ಮಾತ್ರ ಒಲಿಯುತ್ತಿದ್ದಳು. ಅವಳಲ್ಲಿ ಮೋಹಗೊಂಡು ಈ ಪಾಪಿಯು ತನ್ನ ತಾಯಿ, ತಂದೆ ಮತ್ತು ಹೆಂಡತಿ ಮೂವರನ್ನು ವಂಚಿಸಿ ಕಳ್ಳರು ಬಂದು ಎಲ್ಲ ಹೊಡೆದುಕೊಂಡು ಹೋದರು ಎಂಬ ಹಂಚಿಕೆಯನ್ನು ಮಾಡಿ ಮನೆಯಲ್ಲಿ ಇರುವ ಆಭರಣ ಅಲಂಕಾರ ನಗನಾಣ್ಯ ಎಲ್ಲವನ್ನೂ ಆ ವೇಶ್ಯೆಗೆ ಕೊಟ್ಟನು. ವಿಪುಲವಾದ ಈ ಐಶ್ವರ್ಯದಿಂದ ಸಂತುಷ್ಟಳಾದ ಆ ವೇಶ್ಯೆಯು ಈ ಬ್ರಾಹ್ಮಣಕುಮಾರನಿಗೆ ಅನುಕೂಲಳಾದಳು. ಈ ಪಾಪಿಯು ಮನೆಯಲ್ಲಿ ಇದ್ದ ಐಶ್ವರ್ಯವನ್ನೆಲ್ಲ ಆ ವೇಶ್ಯೆಗೆ ಅರ್ಪಿಸಿ ತಾನೂ ಅವಳ ಮನೆಯಲ್ಲಿಯೇ ಇರತೊಡಗಿದನು. ತಂದೆತಾಯಿ ಇದ್ದ ಮನೆ ಕಡೆಗೆ ಒಮ್ಮೆಯೂ ಸುಳಿಯಲಿಲ್ಲ.

ಇದರಿಂದ ಆ ಮುಪ್ಪಿನ ತಾಯಿ ತಂದೆಯರಿಗೆ ಬಹಳ ದುಃಖವಾಗಿ ಎಲ್ಲ ಕಡೆಗೆ ಹುಡುಕಾಡತೊಡಗಿದರು. ಊರು, ಮನೆ, ಕೆರೆ, ಬಾವಿ ಎಲ್ಲಕಡೆಗೆ ಊರುಗೋಲನ್ನು ಹಿಡಿದು ಅಲೆಯುತ್ತಾ ಕಂಡಕಂಡವರನ್ನೆಲ್ಲ ತಮ್ಮ ಮಗನ ಬಗ್ಗೆ ಕೇಳುತ್ತಿದ್ದರು. ಅವನಿಗೆ ವಾರ್ಧಕ್ಯದಿಂದ ಕಣ್ಣು ಮಂದವಾಗಿದ್ದವು. ಆದರೂ ಪುತ್ರಮೋಹದಿಂದ ಕೈಯಲ್ಲಿ ಕೋಲು ಹಿಡಿದು ಎಡೆಬಿಡದೇ ಮಗನನ್ನು ಹುಡುಕುತ್ತಲೇ ಇದ್ದನು.

ದಾರಿಯಲ್ಲಿ ಭೀಮ ಎಂಬ ವೃದ್ಧನು ''ಬ್ರಾಹ್ಮಣೋತ್ತಮ, ವ್ಯರ್ಥವಾಗಿ ನಿನ್ನ ಮಗನನ್ನು ಏಕೆ ಹುಡುಕುತ್ತಲಿರುವೆ ? ಅವನು ಈ ಗೌಡನಗರಕ್ಕೆ ಬಂದ ವೇಶ್ಯೆಯಲ್ಲಿ ಆಸಕ್ತನಾಗಿ ಅವಳ ಮನೆಯಲ್ಲಿಯೇ ಇರುವನು'' ಎಂದು ತಿಳಿಸಿದನು. ಆಗ ಆ ತಂದೆಯು ಆ ಪಾಪಿಯನ್ನು ಹುಡುಕಿಕೊಂಡು ವೇಶ್ಯೆಯ ಮನೆಗೆ ಬಂದನು. ಆ ಬೆಲೆವಣ್ಣಿನೊಡನೆ ಸ್ವಚ್ಛಂದ ಕ್ರೀಡಾರತನಾದ ಮಗನನ್ನು ನೋಡಿ ಕೋಪಾಕ್ರಾಂತನಾಗಿ ಹಳಿದು ನುಡಿದನು. 'ಮೂರ್ಖ, ನೀನು ಮನುಷ್ಯನಾಗಿ ಹುಟ್ಟುವದಕ್ಕಿಂತ ಮುಳ್ಳಿನ ಗಿಡ ಆಗಿ ಹುಟ್ಟಬೇಕಾಗಿತ್ತು. ಇಂಥ ದುರ್ವ್ಯಸನವಶನಾಗಿ ಇರುವದಕ್ಕಿಂತ ಸಾಯುವುದೇ ಮೇಲು. ಇನ್ನಾದರೂ ಈ ದುರ್ಮಾರ್ಗವನ್ನು ಬಿಡು. ಮನೆಗೆ ನಡೆ, ಪರಮಸುಂದರವೂ

ಪತಿವ್ರತೆಯೂ ಆದ ಸಾವಿತ್ರಿಯು ನಿನಗಾಗಿ ಹಲುಬಿ, ಸಾಯುತ್ತಲಿದ್ದಾಳೆ. ಈ ದುಷ್ಟಹೆಣ್ಣಿನ ಸಹವಾಸವನ್ನು ಬಿಟ್ಟುಬಿಡು.''

ತಂದೆಯ ಈ ಮಾತನ್ನು ಕೇಳಿ ಆ ದುಷ್ಟಪುತ್ರನಿಗೆ ಕೋಪಕೆರಳಿತು. ತನ್ನ ಪ್ರೇಯಸಿಯ ಎದಿರು ತನ್ನ ತಂದೆ ಮಾಡಿದ ನಿರ್ಭರ್ತ್ಸನೆಯನ್ನು ಕೇಳಿ ಅವನಿಗೆ ಅಪಮಾನ ವಾದಂತಾಗಿ ಕ್ರೋಧಾವೇಶದಿಂದ ಆ ಮುದುಕನನ್ನು ದನಬಡೆಯುವಂತೆ ಬಡಿದು ಥಳಿಸಿದನು. ಅವನ ಭೀಕರ ಪ್ರಹಾರವನ್ನು ತಾಳಲಾರದೇ ತಂದೆಯು ಪ್ರಾಣಬಿಟ್ಟನು.

ಮೃತನಾದ ತಂದೆಯ ಹೆಣವನ್ನು ಕಾಲುಕಟ್ಟಿ ಎಳೆದು ತಂದು ದೂರದ ಕಾಡಿನಲ್ಲಿ ಬಿಸುಟನು. ಅನಂತರ ವೇಶ್ಯೆಯ ಮನೆಗೆ ಹೋಗಿ ಯಥೇಚ್ಛವಾಗಿ ಮದ್ಯಕುಡಿದು ಮಲಗಿಕೊಂಡು ಬೆಳಿಗ್ಗೆ ಎದ್ದು ಮನೆಗೆ ಬಂದನು. ಮನೆಯಲ್ಲಿ ತಾಯಿಯು ''ನಿನ್ನ ತಂದೆಯು ನಿನ್ನನ್ನು ಹುಡುಕಿಕೊಂಡು ಹೋಗಿ ಎಷ್ಟೋ ಸಮಯವಾಯಿತು. ವೃದ್ಧರಾದ ಅವರು ಎಷ್ಟೋ ಹೊತ್ತಾದರೂ ಮನೆಗೆ ಬರಲಿಲ್ಲ. ನೀನು ಈಗಲೇ ಹೋಗಿ ಮೊದಲು ಅವರನ್ನು ಹುಡುಕಿಕೊಂಡು ಬಾ'' ಹೀಗೆ ಮುದುಕಿಯಾದ ತಾಯಿಯು ತನಗೆ ಆಜ್ಞಾಪಿಸುವುದನ್ನು ಕೇಳಿ ಹುಚ್ಚನಂತಾದ ಆ ದುಷ್ಟನು ಸಿಟ್ಟಿಗೆದ್ದು ಅಲ್ಲಿಯೇ ಇದ್ದ ಒಣಕಟ್ಟಿಗೆಯನ್ನು ತೆಗೆದುಕೊಂಡು ಹೊಡೆದನು. ಇದರಿಂದ ಆ ಮುದುಕಿಯು ಪಟ್ಟನೇ ಬಿದ್ದು ಪ್ರಾಣ ಬಿಟ್ಟಳು. ಅದನ್ನು ನೋಡಿದ ಅವನ ಹೆಂಡತಿಯು ''ನೀವು ಜಾರಚೋರರಾದದ್ದು ಮಾತ್ರವಲ್ಲದೇ ತಾಯಿಯನ್ನೂ ಹೊಡೆದು ಕೊಂದಿರಲ್ಲವೆ ? ಏನಿದು ಅನ್ಯಾಯ ? ಬ್ರಾಹ್ಮಣರಾಗಿ ವೇಶ್ಯಾಸಹವಾಸಮಾಡುವುದು ಎಂಥ ನಿರ್ಲಜ್ಜತನದ ಕೆಲಸ ? ಮಾತೃಹತ್ಯೆಯಂಥ ಘೋರಪಾಪವನ್ನು ಏಕೆ ಗೈದಿರಿ ? ಹೇಗೆ ಮಾಡಿದಿರಿ ? ಇನ್ನಾದರೂ ಆ ವೇಶ್ಯಾಸಹವಾಸವನ್ನು ಬಿಟ್ಟು ಮನೆಯನ್ನು ನಂಬಿ ನನ್ನನ್ನು ನೆಚ್ಚಿ ಧರ್ಮಮಾರ್ಗದಲ್ಲಿ ಇದ್ದು ಶೇಷಾಯುಷ್ಯವನ್ನು ಕಳೆಯಿರಿ.'' ಎಂದು ಹಿತವಚನವನ್ನು ಹೇಳಿದಳು.

ಮಡದಿಯ ಹಿತವಚನವು ಅವನಿಗೆ ವಿಷ ಎನಿಸಿತು. ಕೋಪಕೆರಳಿತು. ಹುಚ್ಚನಂತೆ ಕ್ರೋಧೋದ್ರಿಕ್ತನಾಗಿ ಆ ಹೆಂಡತಿಯನ್ನು ದನಬಡಿಯುವಂತೆ ಬಡಿದನು. ಆ ಪತಿವ್ರತೆಯಾದ ಸಾವಿತ್ರಿಯು ಗಂಡನೇ ಶ್ರೀರಾಮ ಎಂದು ಬಗೆದು ರಾಮಚಂದ್ರನನ್ನು ಧ್ಯಾನಿಸುತ್ತ ಪ್ರಾಣಬಿಟ್ಟಳು. ಮರಣಕಾಲದಲ್ಲಿ ರಾಮನಾಮಸ್ಮರಣೆಯ ಪ್ರಭಾವದಿಂದ ಅವಳು ದಿವ್ಯದೇಹವನ್ನು ಪಡೆದು ವಿಮಾನಾರೂಢಳಾಗಿ ಸ್ವರ್ಗಕ್ಕೆ ತೆರಳಿದಳು. ಅವಳ ಶವವನ್ನು ಕೂಡ ಈ ಪಾಪಿಯು ಕಾಲು ಹಿಡಿದು ಎಳೆದುಕೊಂಡು ಹೋಗಿ ನಡುರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಕಾಡಿನಲ್ಲಿ ಎಸೆದುಬಂದನು.

ಹೆಂಡತಿಯು ಸತ್ತ ನಂತರ ಬುಧ ಎಂಬ ಹೆಸರಿನ ಆ ಪಾಪಿಯು ಮತ್ತಿಷ್ಟು ಸ್ವೈರಾಚಾರಿಯಾದನು. ಅವನ ಉಚ್ಛೃಂಖಲವೃತ್ತಿಗೆ ತಡೆಯೇ ಇಲ್ಲದಂತಾಯಿತು. ವೇಶ್ಯಾಸ್ತ್ರೀಯರ ಜೊತೆಗೆ ಸ್ವೈರವಿಹಾರವನ್ನು ಮಾಡುತ್ತ ಪಾಪಿ ಜೀವನವನ್ನು ಮುಂದುವರೆಸಿದನು.

ಒಂದು ದಿನ ಆ ಪಾಪಿ ಬುಧನು ಕೌಲಭ ಎಂಬ ತಪಸ್ವಿಯ ಆಶ್ರಮಕ್ಕೆ ಹೋಗಿದ್ದನು. ಆ ಮುನಿಯ ಮಡದಿಯಾದ ಸುಲಭೆಯು ಅತ್ಯಂತ ರೂಪಶಾಲಿನಿ. ಅವಳ ಲೋಕೋತ್ತರವಾದ ಲಲಿತಲಾವಣ್ಯವನ್ನು ಕಂಡು ಬುಧನು ಮುಗ್ಧನಾದ,

ಕೌಲಭಮುನಿಯು ಒಂದು ದಿನ ಸ್ನಾನಕ್ಕೆ ನದಿಗೆ ತೆರಳಿದ್ದ. ಹೊಂಚುಹಾಕಿ ಕುಳಿತುಕೊಂಡ ಪಾಪಿ ಬುಧನು ಆಶ್ರಮದಲ್ಲಿ ನುಗ್ಗಿ ಆ ಸಾಧ್ವೀಶಿಖಾಮಣಿಯನ್ನು ಬಲಾತ್ಕರಿಸಿದ. ಅವಳು ಮೊದಲು ಸೌಮ್ಯಮಾತಿನಿಂದ ತಿಳಿಹೇಳಿ ಅನಂತರ ಬೈದು, ಬಡೆದು, ಹೊಡೆದು, ಕೂಗಿ, ಅತ್ತು ಗೋಗರೆದು ಗೋಳಾಡಿದರೂ ಬಲಿಷ್ಠನಾದ ಆ ಪಾಪಿಯು ಅವಳನ್ನು ಬಲಾತ್ಕಾರದಿಂದ ಭೋಗಿಸಿದ. ಅವನ ಅತ್ಯಾಚಾರವನ್ನು ಸಹಿಸಲಾರದೇ ಅವಳು ಕೋಪದಿಂದ ಅವನಿಗೆ ''ನೀನು ಕುಷ್ಠರೋಗಿಯಾಗು'' ಎಂದು ಶಾಪಿಸಿದಳು ಪತಿವ್ರತೆಯ ಶಾಪದಿಂದ ಅವನು ರೋಗಿಷ್ಠನಾಗಿ ಬೇಗನೇ ಮರಣಹೊಂದಿದನು.

ಅವನು ಮರಣಹೊಂದಿದ ಬಳಿಕ ಬಹುಕಾಲ ನರಕದಲ್ಲಿ ಘೋರವಾದ ಯಮಯಾತನೆಗಳನ್ನು ಅನುಭವಿಸಿದ. ಅನಂತರ ಗೌಡ ನಗರದಲ್ಲಿ ವೈಶ್ಯನ ಹೊಟ್ಟೆಯಿಂದ ಕುಷ್ಠರೋಗಿಯಾಗಿ ಹುಟ್ಟಿದನು. ಇವನು ಮಹಾಪಾಪಿಷ್ಠ. ಇವನು ಮಾಡದೇ ಇರುವ ದುಷ್ಕರ್ಮಗಳೇ ಇಲ್ಲ. ಇವನ ಹೆಸರನ್ನು ಕೂಡ ಉಚ್ಚರಿಸಬಾರದು. ಇವನನ್ನು ಈ ವಿಮಾನದಿಂದ ಹೊರಗೆ ಅಟ್ಟಿದರೆ ಮಾತ್ರ ಈ ವಿಮಾನವು ಮುಂದೆ ಚಲಿಸುವುದು. ಮೊದಲು ಇವನನ್ನು ಹೊರಗೆ ತಳ್ಳಿರಿ.''

ಗಣೇಶದೂತರು ಹೇಳಿದ ಈ ಮಾತನ್ನು ಕೇಳಿ ಪರಮದಯಾಳು ಆದ ಮಹಾರಾಜನ ಮನಸ್ಸು ಬಹಳ ನೊಂದಿತು. 'ಏನಾದರೂ ಇವನು ನನ್ನ ಪ್ರಜೆ. ಹೇಗಾದರೂ ಮಾಡಿ ಇವನ ಉದ್ಧಾರದ ಉಪಾಯವನ್ನು ಹೇಳಿರಿ' ಎಂದು ಆ ದೇವದೂತರನ್ನು ಬೇಡಿಕೊಂಡನು. ಭಕ್ತಿಪರಾಧೀನರಾದ ಆ ಭಗವದ್ಭಕ್ತರು ಮಹಾರಾಜನಿಗೆ ''ಆ ಪಾಪಿಯ ಕಿವಿಯಲ್ಲಿ ಗಜಾನನ ಮಂತ್ರವನ್ನು ಉಪದೇಶಿಸು. ಅವನು ಅದನ್ನು ಭಕ್ತಿಯಿಂದ ಜಪಿಸಲಿ. ಅದರಿಂದ ರೋಗಪರಿಹಾರ. ಪಾಪನಿವಾರಣೆ ಎರಡೂ ಆಗುವುದು'' ಎಂದು ಹೇಳಿದರು.

ದೇವದೂತರ ಮಾತಿನಂತೆ ಶೂರಸೇನ ಮಹಾರಾಜನು ಪ್ರೀತಿಯಿಂದ ಆ ಪಾಪಿ ಬುಧನ ಕಿವಿಯಲ್ಲಿ ಗಜಾನನ ಮಂತ್ರವನ್ನು ಉಪದೇಶರೂಪವಾಗಿ ಹೇಳಿದನು. ಆ ಗಣೇಶಮಂತ್ರವನ್ನು ಭಕ್ತಿಯಿಂದ ಕೇಳಿದ ತಕ್ಷಣದಲ್ಲಿ ಆ ಬುಧ ಪಾಪಿಗೆ ತಗಲಿದ ಕುಷ್ಠರೋಗವು ಸಂಪೂರ್ಣವಾಗಿ ನಷ್ಟವಾಗಿ ಹೋಯಿತು. ಪರಿಶುದ್ಧಗಾತ್ರನಾದ ಅವನು ಭಕ್ತಿಯಿಂದ ಗಣೇಶಮಂತ್ರವನ್ನು ಜಪಿಸಿದನು. ಅವನಿಗೂ ಕೂಡ ನೀರೋಗ ಸುಂದರವಾದ ಶರೀರವು ಪ್ರಾಪ್ತವಾಯಿತು. ಬಳಿಕ ಭಕ್ತಿಯಿಂದ ಅವನು ಗಜಾನನ ಮಂತ್ರವನ್ನು ಜಪಿಸಿದನು. ಅವನ ದೇಹಕಾಂತಿಯು ಪರಿಸರಪ್ರದೇಶವನ್ನೆಲ್ಲ ಶೋಭಾಯಮಾನವಾಗಿ ಮಾಡಿತು. ದೇವದೂತರ ಅಪ್ಪಣೆಪಡೆದು ಅವನು ವಿಮಾನವನ್ನು ಏರಿ ಕುಳಿತನು. ಗಣೇಶಮಂತ್ರ ಪ್ರಭಾವದಿಂದ ಪರಿಶುದ್ಧವಾದ ಅವನನ್ನೂ, ಶೂರಸೇನರಾಜನನ್ನೂ, ಅವನ ಎಲ್ಲ ಪ್ರಜಾಪರಿವಾರದವರನ್ನು ಹೊತ್ತುಕೊಂಡು ಆ ದೇವವಿಮಾನವು ನೆಲಬಿಟ್ಟು ಮೇಲೆ ಎದ್ದು ಸ್ವರ್ಗಾಭಿಮುಖವಾಗಿ ಉಡ್ಡಾಣಮಾಡಿತು. ಸಂಕಷ್ಟಹರ ವ್ರತದ ಪ್ರಭಾವದಿಂದ ರಾಜನೂ, ರಾಜಪರಿವಾರದವರೂ ಕುಷ್ಠಿಯಾದ ವೈಶ್ಯಪುತ್ರ ಬುಧನೂ ವಿಮಾನಾರೂಢರಾಗಿ ಗಣೇಶ ಸಾಮೀಪ್ಯವನ್ನು ಪಡೆದು ಆ ದೇವಲೋಕವನ್ನು ಸೇರಿದರು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಶೂರಸೇನರಾಜನ ಸಪರಿವಾರ ಗಣೇಶಲೋಕಪ್ರಾಪ್ತಿ ಎಂಬ ಎಪ್ಪತ್ತಾರನೇ ಅಧ್ಯಾಯ ಮುಗಿದುದು*

## ಜಮದಗ್ನಿ ಆಥಿತ್ಯ



**ವೇದವ್ಯಾಸ :-** ಕಥಾನಿರೂಪಣ ಚತುರನಾದ ಚತುರಾನನ, ಈ ಸಂಕಷ್ಟಹರ ಚತುರ್ಥಿವ್ರತವನ್ನು ಮತ್ತೆ ಬೇರೆ ಯಾರು ಆಚರಿಸಿದರು ? ಎಂಬುದನ್ನು ಹೇಳು.

**ಬ್ರಹ್ಮ :-** ವ್ಯಾಸ, ಪೂರ್ವಕಾಲದಲ್ಲಿ ಭೂಮಂಡಲದಲ್ಲಿ ಶ್ವೇತದ್ವೀಪ ಎಂಬ ಪುಣ್ಯಪ್ರದೇಶದಲ್ಲಿ ಜಮದಗ್ನಿ ಎಂಬ ಋಷಿಯು ತಪಸ್ಸನ್ನು ಮಾಡುತ್ತಿದ್ದನು. ಅವನ ಧರ್ಮಪತ್ನಿ ರೇಣುಕೆ. ಅವಳಲ್ಲಿ ರತಿಯ ರೂಪ, ಸತಿಯ ಸದ್ಗುಣ, ಅರುಂಧತಿಯ ಪಾತಿವ್ರತ್ಯ ಎಲ್ಲವೂ ಮೇಳವಿಸಿದ್ದವು. ಜಮದಗ್ನಿಮಹರ್ಷಿಯಿಂದ ಆ ರೇಣುಕೆಯಲ್ಲಿ ಸಾಕ್ಷಾತ್ ವಿಷ್ಣುವೇ ರಾಮ ಎಂಬ ಹೆಸರಿನಿಂದ ಹುಟ್ಟಿದನು. ಆ ರಾಮನು ಮಹಾಪರಾಕ್ರಮಿ. ಗೋ ಬ್ರಾಹ್ಮಣಪ್ರತಿಪಾಲಕ, ಮಹಾಪಂಡಿತ, ಸರ್ವಜ್ಞ ಆ ರಾಮನು ತಪಸ್ಸಿಗಾಗಿ ಒಮ್ಮೆ ಅರಣ್ಯಕ್ಕೆ ತೆರಳಿದ್ದ.

ಆ ಕಾಲದಲ್ಲಿ ಕಾರ್ತವೀರ್ಯಾರ್ಜುನ ಎಂಬ ಕ್ಷತ್ರಿಯ ಸಾರ್ವಭೌಮನು ತನ್ನ ಚತುರಂಗಸೈನ್ಯದೊಡನೆ ಜಮದಗ್ನಿ ಋಷಿಯ ಆಶ್ರಮಕ್ಕೆ ಬಂದನು. ಅತಿಥಿ ಸತ್ಕಾರದೀಕ್ಷೆಯುಳ್ಳ ಜಮದಗ್ನಿ ಮುನಿಗಳು ಸೇನಾಪರಿವಾರ ಸಹಿತನಾದ ಮಹಾರಾಜನಿಗೆ ಅತ್ಯಾದರದಿಂದ ಆತಿಥ್ಯವನ್ನು ಏರ್ಪಡಿಸಿದರು. ಅಪರಿಮಿತವಾದ ರಾಜನ ಮಂತ್ರಿ, ಸೇನಾಪತಿ, ಪ್ರಜಾಪರಿವಾರದವರಿಗೆಲ್ಲ ಪಂಚಭಕ್ಷ್ಯ ಪಕ್ವಾನ್ನಗಳನ್ನು ಮಾಡಿಸಿ ಎಲ್ಲರಿಗೂ ತೃಪ್ತಿಯಾಗುವಂತೆ ಯಥೇಚ್ಛವಾಗಿ ಬಡಿಸಿ ಆದರೋಪಚಾರದಿಂದ ಸತ್ಕರಿಸಿದರು. ಕಡುಬಡವನಾದ ಈ ಮಹರ್ಷಿಯು ತನ್ನ ರಾಜಪರಿವಾರಕ್ಕೆ ನೀಡಿದ ರಾಜೋಚಿತವಾದ ಆದರೋಪಚಾರದ ಸತ್ಕಾರವನ್ನು, ಅದ್ಭುತ ಆತಿಥ್ಯವನ್ನು ನೋಡಿ ರಾಜನಿಗೆ ಅತ್ಯಾಶ್ಚರ್ಯವಾಯಿತು. ಇದೆಲ್ಲವೂ ಆ ಮುನಿಯ ಮನೆಯಲ್ಲಿ ಇರುವ ದೇವಲೋಕದ ಹಸುವಾದ ಕಾಮಧೇನುವಿನ ಪ್ರಭಾವದಿಂದ ಎಂದು ತಿಳಿದುಬಂದಿತು. ಮಹಾರಾಜನಿಗೆ ಬಯಸಿದ್ದನ್ನೆಲ್ಲ ನೀಡುವ ಆ ಕಾಮಧೇನುವಿನ ಮೇಲೆ ಆಸೆಯಾಯಿತು. ಅವನು ಕೈ ಮುಗಿದು ಜಮದಗ್ನಿ ಮುನಿಗಳಿಗೆ ''ಪೂಜ್ಯರೇ, ಇದು ಅಪರೂಪವಾದ ಹಸು. ಇದು ನಮ್ಮಲ್ಲಿದ್ದರೆ ರಾಜ್ಯದ ಜನರಿಗೆಲ್ಲ ಉಪಯೋಗವಾಗುವುದು. ಇದರ ದಯೆಯಿಂದ ನಾವು ಬೇಕಾದಂಥ ಮಹಾಕಾರ್ಯಗಳನ್ನು ಸಾಧಿಸಬಹುದು. ದಯವಿಟ್ಟು ಇದನ್ನು ನನಗೆ ಕೊಡಿರಿ. ನೀವು ಇದನ್ನು ನನಗೆ ಕೋಡದಿದ್ದರೆ ಬಲಾತ್ಕಾರದಿಂದಾದರೂ ಇದನ್ನು ನಾನು ಎಳೆದುಕೊಂಡು ಹೋಗುವೆನು. ಏನಾದರೂ ಈ ಕಾಮಧೇನುವು ನನಗೆ ಬೇಕೇ ಬೇಕು.''

ಅದನ್ನು ಕೇಳಿ ಜಮದಗ್ನಿ ಮುನಿಗೆ ಕೋಪ ಬಂದಿತು. ಅವರು ಕಣ್ಣುಗಳನ್ನು ಕೆಂಪಗೆ ಮಾಡಿ ನುಡಿದರು. ''ಮಹಾರಾಜ, ನೀನು ಸಾಧು ಸಜ್ಜನ ಎಂದು ತಿಳಿದು ನಾನು ನಿನ್ನನ್ನೂ ನಿನ್ನ ಪರಿವಾರದವರನ್ನು ಕರೆದು ಆತಿಥ್ಯವನ್ನು ನೀಡಿದೆ. ಬಂಗಾರದ ತಾಟು ಬಟ್ಟಲಗಳಲ್ಲಿ ಪಂಚಭಕ್ಷ್ಯಗಳನ್ನು ಬಡಿಸಿ ಊಟ ಮಾಡಿಸಿ ನಿಮ್ಮೆಲ್ಲರನ್ನೂ ತೃಪ್ತಿಪಡಿಸಿದೆ. ಈಗ ನೀನು ಉಂಡ ಮನೆಗೆ ಎರಡು ಬಗೆದು ನಾನು ನನ್ನ ತಪಃಶಕ್ತಿಯಿಂದ ಕರೆದುತಂದ ಕಾಮಧೇನುವನ್ನೇ ಬಲಾತ್ಕಾರದಿಂದ ಸೆಳೆದುಕೊಂಡು ಒಯ್ಯಲು ಉದ್ಯುಕ್ತನಾಗಿರುವಿ. ಇದರಿಂದ ನಿನಗೆ ಒಳ್ಳೆಯದಾಗುವದಿಲ್ಲ. ದೈವಚಿತ್ತವಿದ್ದಂತೆ ಆಗಲಿ ನಾನಂತೂ ಈ ಹಸುವನ್ನು ನಿನಗೆ ಕೊಡಲಾರೆ'' ಎಂದು ಸ್ಪಷ್ಟವಾಗಿ ಹೇಳಿದರು.

*ಗಣೇಶಪುರಾಣದ ಉಪಾಸನಾಖಂಡದಲ್ಲಿ ಪರಶುರಾಮ ಉಪಾಖ್ಯಾನ ಎಂಬ ಎಪ್ಪತ್ತೆಂಟನೇ ಅಧ್ಯಾಯ ಮುಗಿದುದು*

## ಕಾರ್ತವೀರ್ಯಾರ್ಜುನನ ವಿಷಾದ

## ಅಧ್ಯಾಯ - ೭೯

**ಬ್ರಹ್ಮ** :- ಐಶ್ವರ್ಯ ಮತ್ತು ಪರಾಕ್ರಮದ ಮದದಿಂದ ಉದ್ಧಟನಾದ ಕಾರ್ತವೀರ್ಯಾರ್ಜುನನು ತನ್ನ ದೂತರಿಗೆ ಆಜ್ಞಾಪಿಸಿದ. ''ದೂತರೆ, ಈ ಮುತ್ತಿನ ಸರಪಣಿಯಿಂದ ಕಾಮಧೇನುವನ್ನು ಕಟ್ಟಿ ಈಗಲೇ ನನ್ನೆಡೆಗೆ ಎಳೆದು ತನ್ನಿರಿ.''

ರಾಜನ ಕಟ್ಟಪ್ಪಣೆಯಿಂದ ದೂತರು, ಕಾಮಧೇನುವನ್ನು ಮುಟ್ಟಿದರು. ಆಗ ಕ್ರುದ್ಧವಾದ ಕಾಮಧೇನುವು 'ಹುಂ' ಎಂದು ಗರ್ಜಿಸಿತು. ಆ ಹಸುವಿನ ಹೂಂಕಾರ ಮಾತ್ರದಿಂದ ಅಹಂಕಾರಿಯಾದ ರಾಜನ ಸೈನಿಕರೆಲ್ಲರೂ ಅರೆಚಣದಲ್ಲಿ ಸತ್ತುಹೋದರು. ದೂರದಲ್ಲಿ ಇದ್ದ ಒಬ್ಬ ಕ್ರೂರಸೈನಿಕನು ಹಿಂದಿನಿಂದ ಬಂದು ಚಾವಟಿಯಿಂದ ಆ ಆಕಳವನ್ನು ಹೊಡೆದನು. ಕೂಡಲೇ ಆ ಕಾಮಧೇನುವು ಪಕ್ಷಿಗಳಂತೆ ಹಾರಾಡಿ ಅಳಿದುಳಿದ ಸೈನಿಕರನ್ನು ಅಟ್ಟಿಸಿಕೊಂಡು ಹೊಡೆಯತೊಡಗಿತು. ಆಗ ಸ್ವಯಂ ಕಾರ್ತವೀರ್ಯಾರ್ಜುನನು ಓಡುತ್ತಿರುವ ತನ್ನ ಸೈನಿಕರನ್ನು ಹುರಿದುಂಬಿಸಿ ಆ ಹಸುವನ್ನು ಹೊಡೆತ ಬಡೆತಗಳಿಂದ ಹಣಿಯುವಂತೆ ಹೇಳಿದನು. ಆಗ ಆ ಸೈನಿಕರು ಕಲ್ಲುರಾಶಿಗಳನ್ನು ತೂರಿ ಆ ಕಾಮಧೇನುವನ್ನು ಪ್ರಹರಿಸತೊಡಗಿದರು.

ಆಗ ಮತ್ತಷ್ಟು ಕೋಪಕೆರಳಿದಂತಾದ ಆ ಕಾಮಧೇನುವು ಸೈನಿಕರಿಂದ ತಾಡಿತ, ಪೀಡಿತವಾದ ತನ್ನ ಅಂಗಾಂಗಗಳಿಂದ ಅನೇಕ ವೀರಭಟರನ್ನು ಸೃಷ್ಟಿಮಾಡಿತು. ಮ್ಲೇಂಛರು, ಶಕರು, ಬರ್ಬರರು ಮುಂತಾದವರು ಪ್ರಚಂಡ ಪ್ರಮಾಣದಲ್ಲಿ ಉದ್ಭೂತರಾಗಿ ಕಾರ್ತವೀರ್ಯನ ಸೇನೆಯನ್ನು ತುಂಡರಿಸ ತೊಡಗಿದರು. ಕಾಮಧೇನುವಿನ ಸಂತಾನವಾದ ಯವನ, ಮ್ಲೇಂಛರ, ಬರ್ಬರರ ರಣೋತ್ಸಾಹದ ಅತ್ಯದ್ಭುತವಾದ ಶಸ್ತ್ರಾಸ್ತ್ರಗಳ ಆಘಾತ ಪ್ರತ್ಯಾಘಾತಗಳನ್ನು ತಾಳಲಾರದೇ ರಾಜಸೈನಿಕರೆಲ್ಲರೂ ತತ್ತರಿಸಿ ಹೋದರು. ಅವರೆಲ್ಲರೂ ಕೊನೆಗೆ ಸೋತು ಹತಾಶರಾಗಿ ದಿಕ್ಕಾಪಾಲಾಗಿ ಓಡಿಹೋದರು. ಆಗ ಕಾಮಧೇನುವು ಒಮ್ಮೆಲೇ ಈ ಭೂಲೋಕದಿಂದ ಅಂತರ್ಧಾನ ಹೊಂದಿ ಸ್ವರ್ಗಲೋಕಕ್ಕೆ ತೆರಳಿತು.

ಕಾರ್ತವೀರ್ಯಾರ್ಜುನನಿಗೆ ಕಾಮಧೇನು ದೊರಕದ್ದಕ್ಕಾಗಿ ನಿರಾಶೆಯಾಯಿತು. ಮುನಿಯ ಮೇಲೆ ಬ್ರಹ್ಮಾಂಡ ಕೋಪ ಬಂದಿತು. ಅವನು ಸಿಟ್ಟಿನಿಂದ ಹುಚ್ಚನಂತಾಗಿ ಬಾಣಪ್ರಯೋಗದಿಂದ ಜಮದಗ್ನಿ ಋಷಿಯನ್ನು ಕೊಂದುಹಾಕಿದನು.

ತನ್ನ ಕಣ್ಣೆದುರೇ ತನ್ನ ಪತಿಯನ್ನು ನಾಶಮಾಡಿದ ಕಾರ್ತವೀರ್ಯಾರ್ಜುನನಿಗೆ ಋಷಿಪತ್ನಿಯಾದ ರೇಣುಕೆ ಘೋರವಾದ ಶಾಪವನ್ನು ಕೊಟ್ಟಳು. ''ಪಾಪಿಯೇ, ನೀನು ಆತಿಥ್ಯ ನೀಡಿ ನಿನಗೆ ಉಪಕಾರ ಮಾಡಿದ ನನ್ನ ಪತಿಯನ್ನು ವ್ಯರ್ಥವಾಗಿ ಸಂಹರಿಸಿದೆ. ನನ್ನ ಮೇಲೆ ಕೂಡ ಬಾಣ ಪ್ರಯೋಗ ಮಾಡಿ ಹಿಂಸಿಸಿದೆ. ನಿನ್ನ ಸಾವಿರತೋಳುಗಳೆಲ್ಲವೂ ಸ್ವಲ್ಪೇ ಸಮಯದಲ್ಲಿ ಕಡಿದು ಕತ್ತರಿಸಿ ನೆಲಕ್ಕೆ ಬೀಳುವವು. ನೀನೂ ಕೂಡ ನಾಶಹೊಂದುವಿ.'' ಋಷಿಪತ್ನಿಯಾದ ರೇಣುಕೆಯ ಈ ದಾರುಣವಾದ ಶಾಪಾಕ್ಷರಗಳನ್ನು ಕೇಳಿ ಕಾರ್ತವೀರ್ಯಾರ್ಜುನನಿಗೆ ಹೆದರಿಕೆಯಾಯಿತು. ಅವನು ಖಿನ್ನನಾಗಿ ತನ್ನ ರಾಜಧಾನಿಗೆ ಮರಳಿದನು.

*ಗಣೇಶಪುರಾಣದ ಉಪಾಸನಾಖಂಡದಲ್ಲಿ ಕಾರ್ತವೀರ್ಯಾರ್ಜುನನ ವಿಷಾದ ಎಂಬ ಎಪ್ಪತ್ತೊಂಬತ್ತನೇ ಅಧ್ಯಾಯ ಮುಗಿದುದು.*

—o—

## ಜಮದಗ್ನಿ ದಂಪತಿಗಳ ನಿರ್ವಾಣ

ಅಧ್ಯಾಯ - ೮೦

**ಬ್ರಹ್ಮ** :- ಋಷಿಭಾರ್ಯೆಯ ಶಾಪದಿಂದ ಚಿಂತಾಗ್ರಸ್ತನಾದರೂ ಕಾರ್ತವೀರ್ಯಾರ್ಜುನನು ಸುಮ್ಮನೆ ಮನೆಗೆ ತೆರಳಲಿಲ್ಲ. ಹೋಗುವಾಗ ಆ ರೇಣುಕೆಯನ್ನು ತನ್ನ ಬಾಣಗಳ ಜಾಲದಿಂದ ಕಟ್ಟಿಹಾಕಿ ಹೋಗಿದ್ದನು. ಪರಶುರಾಮನು ತನ್ನ ತಪೋನುಷ್ಠಾನಗಳನ್ನು ಮುಗಿಸಿ ಅರಣ್ಯದಿಂದ ಮನೆಗೆ ಮರಳಿದನು. ಮನೆಯಲ್ಲಿಯ ಘೋರದೃಶ್ಯ ಅವನನ್ನು ತಲ್ಲಣಗೊಳಿಸಿತು. ತಂದೆ ಸತ್ತುಬಿದ್ದಿದ್ದ. ತಾಯಿ ಬಾಣದಿಂದ ಬದ್ಧಳಾಗಿ ಬಿದ್ದುಬಿಟ್ಟಿದ್ದಳು. ಅವರಿಗೆ ಮೈಮೇಲೆ ಎಚ್ಚರವಿರಲಿಲ್ಲ. ಅದನ್ನು ಕಂಡು ಹೌಹಾರಿ ಹೋದ ರಾಮನು ಮೊದಲು ತಾಯಿಯ ಮೈಯಲ್ಲಿ ನೆಟ್ಟ ಬಾಣಗಳನ್ನೆಲ್ಲ ಮೆತ್ತಗಾಗಿ ಕಿತ್ತು ತೆಗೆದ. ''ತಾಯಿ, ನಾನು ಮುನಿಕುಮಾರರೊಂದಿಗೆ ತಪೋನುಷ್ಠಾನಕ್ಕೆ ಹೋದಾಗ ಪಾಪಿ ಕಾರ್ತವೀರ್ಯಾರ್ಜುನನು ಬಂದು ನನ್ನ ತಂದೆಯನ್ನು ಕೊಂದು ನನ್ನ ತಾಯಿಯನ್ನು ಹಿಂಸಿಸಿ ಹೋದನೆ ! ಈಗ ನಾನು ಆ ಪಾಪಿಗೆ ಹೇಗೆ ಶಾಸನ ಮಾಡಲಿ ? ನಮ್ಮ ತಂದೆಯ ಮರಣಕ್ಕೆ ಹೇಗೆ ಪ್ರತಿಕಾರ ಮಾಡಲಿ ? ಎಂದು ದುಃಖಿಸಿ ಗೋಳಾಡಿದ.

ಆಗ ಕ್ರೋಧೋದ್ದೀಪಿತಳಾದ ರೇಣುಕೆಯು ತನ್ನ ಮಗನಾದ ರಾಮನಿಗೆ ಹೇಳಿದಳು. ''ವತ್ಸ, ಆ ದುಷ್ಟನು ಊಟಕ್ಕೆ ಹಾಕಿ ಉಪಕಾರ ಮಾಡಿದ ನಿನ್ನ ತಂದೆಯನ್ನು ಬಾಣ ಬಿಟ್ಟು ಕೊಂದಿದ್ದಾನೆ. ನನ್ನ ಮೇಲೆ ಕೂಡ ಇಪ್ಪತ್ತೊಂದು ಬಾಣಬಿಟ್ಟು ಹಿಂಸೆಮಾಡಿದ್ದಾನೆ. ಆದುದರಿಂದ ನೀನು ಮೊದಲು ಆ ದುಷ್ಟರಾಜನನ್ನು ಕೊಂದುಹಾಕು. ಈ ಕ್ಷತ್ರಿಯ ಜಾತಿಯೇ ಪರಮನೀಚ. ಅವರೆಲ್ಲರೂ ಈ ಕ್ರೂರರಾಜನ ಬೆಂಬಲಿಗರು. ಈ ಕ್ಷತ್ರಿಯ ಜಾತಿಯನ್ನೇ ನೀನು ಸಂಹಾರಮಾಡು. ನನ್ನ ಮೇಲೆ ಇಪ್ಪತ್ತೊಂದು ಬಾಣ ಬಿಟ್ಟ ಆ ರಾಜನನ್ನು, ಪರಿವಾರದವರನ್ನು ನೀನು ಸಂಹರಿಸು. ಇಪ್ಪತ್ತೊಂದು ಸಲ ನೀನು ರಾಜರನ್ನೆಲ್ಲ ಕೊಂದು ನಿಃಕ್ಷತ್ರಿಯ ಪೃಥ್ವಿಯನ್ನು ಮಾಡು. ಆ ಪಾಪಿಯ ಬಾಣ ಪ್ರಹಾರದ ಭೀಕರವಾದ ಆಘಾತದಿಂದ ನಾನು ಬದುಕಿ ಉಳಿಯುವದಿಲ್ಲ. ನಾನು ಪತಿಯ ಸಮೀಪಕ್ಕೆ ಈಗಲೇ ದೇಹೋತ್ಸರ್ಜನವನ್ನು ಮಾಡಿ ಸಾಗುತ್ತೇನೆ. ನೀನು ನಾನು ಮರಣಹೊಂದಿದ ಬಳಿಕ ನಮ್ಮಿಬ್ಬರ ಪಾರ್ಥಿವದೇಹಗಳನ್ನು ಒಟ್ಟಿಗೇ ಇಟ್ಟು ಈ ಮೊದಲು ಯಾರನ್ನು ದಹಿಸದೇ ಇರುವ ಸ್ಥಳದಲ್ಲಿ ದಹನಸಂಸ್ಕಾರವನ್ನು ಮಾಡು. ಮಹಾತ್ಮರಾದ ದತ್ತಾತ್ರೇಯ ಮುನಿಗಳನ್ನು ಕರೆಸಿ ಮರಣಾನಂತರ ಹದಿಮೂರು ದಿನಗಳ ಔರ್ಧ್ವ ದೈಹಿಕ ಕರ್ಮಗಳನ್ನೆಲ್ಲ ಯಥಾಸಾಂಗವಾಗಿ ನೆರವೇರಿಸು.'' ಎಂದು ಹೇಳಿ ಪತಿಪ್ರಾಣಳಾದ ಆ ಪರಮ ಪತಿವ್ರತೆಯು ಮರಣಹೊಂದಿದಳು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಜಮದಗ್ನಿ ದಂಪತಿಗಳ ನಿರ್ವಾಣ ಎಂಬ ಎಂಬತ್ತನೇಯ ಅಧ್ಯಾಯ ಮುಗಿದುದು*

—o—

**ಬ್ರಹ್ಮ** :- ರಾಮನು ತಾಯಿಯ ಅಪ್ಪಣೆಯಂತೆ ಯಾರನ್ನೂ ದಹನಮಾಡದ ಸ್ಥಳದಲ್ಲಿ ತನ್ನ ತಂದೆ ತಾಯಿ ಇಬ್ಬರಿಗೂ ಒಟ್ಟಿಗೆ ದಹನ ಕರ್ಮವನ್ನು ನೆರವೇರಿಸಿ ಮಹಾತ್ಮರಾದ ದತ್ತಾತ್ರೇಯರನ್ನು ಸಂದರ್ಶಿಸಲು ಹೊರಟನು. ದತ್ತಾತ್ರೇಯರು ತಮ್ಮ ದೈವೀಸ್ವರೂಪವು ದುಷ್ಟರಿಗೆ ಗೋಚರವಾಗಬಾರದೆಂಬ ಉದ್ದೇಶದಿಂದ ತುಚ್ಛಿತ ವೇಷವನ್ನು ಧರಿಸಿದ್ದರು. ನಾಲ್ಕು ವೇದಗಳನ್ನು ನಾಲ್ಕು ನಾಯಿಗಳ ರೂಪದಿಂದ ಕೈಯಲ್ಲಿ ಹಿಡಿದುಕೊಂಡು ಮಲಿನಬಟ್ಟೆಗಳನ್ನು ತೊಟ್ಟುಕೊಂಡು ಕೃಶವಾದ ದೇಹದಿಂದ ಎದುರಿಗೆ ಬರುತ್ತಿದ್ದರು. ರಾಮನು ಅವರಿಗೆ ನಮಸ್ಕರಿಸಿ ಅವರಿಗೆ ತನ್ನ ಕುಟುಂಬದ ದುರವಸ್ಥೆಯನ್ನೆಲ್ಲ ತಿಳಿಸಿ ಕಾರ್ತವೀರ್ಯಾರ್ಜುನನ ದುಷ್ಕೃತ್ಯಗಳನ್ನೆಲ್ಲ ನಿರೂಪಿಸಿ ತನ್ನ ತಾಯ್ತಂದೆಗಳ ಔರ್ಧ್ವದೇಹಿಕ ಕರ್ಮಗಳಿಗೆ ನಿರ್ದೇಶಕರಾಗಬೇಕೆಂದು ಬೇಡಿಕೊಂಡರು. ರಾಮನ ಬೇಡಿಕೆಯಂತೆ ದತ್ತಾತ್ರೇಯರು ಆಚಾರ್ಯತ್ವವನ್ನು ವಹಿಸಿ ಜಮದಗ್ನಿ ದಂಪತಿಗಳ ಉತ್ತರಕರ್ಮಗಳನ್ನೆಲ್ಲ ನಿರ್ದೇಶಿಸಿದರು. ಎರಡು ದಿನದ ಕರ್ಮಗಳೆಲ್ಲವೂ ಸಾಂಗವಾಗಿ ಸ್ವತಃ ತಾವೇ ನಿಂತು ಮಾಡಿಸಿದರು. ಮುಂದೆ ತಾವು ಕೊಲ್ಹಾಪುರಕ್ಕೆ ಹೋಗುವದಾಗಿ ಹೇಳಿ ಮುಂದಿನ ಹದಿಮೂರುದಿನದ ಕಾರ್ಯಗಳನ್ನು ಮಾಡುವ ವಿಧಿಯನ್ನು ಉಪದೇಶಿಸಿ ಪ್ರಯಾಣ ಬೆಳೆಸಿದರು.

ದತ್ತಾತ್ರೇಯರ ನಿರ್ದೇಶನದಂತೆ ರಾಮನು ಐದನೇ ದಿವಸದ ಕರ್ಮವನ್ನು ಮುಗಿಸಿಕೊಂಡು ಹೊರಗೆ ಬರುವಾಗ ಒಮ್ಮೆಲೇ ಅವನ ಎದುರು ಭಯಂಕರವಾದ ಹುಲಿಯು ಗರ್ಜಿಸುತ್ತ ಬಂದಿತು. ಅದನ್ನು ನೋಡಿ ಹೆದರಿ ಗಾಬರಿಯಾದ ರಾಮನು 'ತಾಯಿ, ನಾನು ಎಲ್ಲಿ ಹೋಗಲಿ ? ಏನು ಮಾಡಲಿ' ಎಂದು ಚೀರಿದನು. ಮಗನ ಕಿರಿಚಾಟದ ದನಿಯನ್ನು ಕೇಳಿ ಒಮ್ಮೆಲೇ ರೇಣುಕಾದೇವಿಯು ಓಡಿ ಬಂದಳು. ಆದರೆ ರೇಣುಕಾದೇವಿಯ ದೇಹವು ಇನ್ನೂ ಪೂರ್ಣವಾಗಿದ್ದಿಲ್ಲ. ಆಗ ಐದು ದಿನಗಳ ಕರ್ಮಮಾತ್ರ ಮುಗಿದಿತ್ತು. ಅದರಿಂದ ರೇಣುಕಾಂಬೆಯ ತಲೆಯು ಮಾತ್ರ ಪುತ್ರಸೆಳೆತದಿಂದ ಬಂದಿತು. ಆಗ ಅವಳು ವತ್ಸ ಹನ್ನೆರಡು ದಿನದ ಕರ್ಮಗಳು ಪೂರ್ತಿಸಾಂಗವಾಗಿ ನೆರವೇರದೇ ಮಧ್ಯದಲ್ಲಿಯೇ ನನ್ನನ್ನು ಏಕೆ ಕರೆದೆ ? ಅದರಿಂದ ನನ್ನ ದೇಹವು ಪೂರ್ಣವಾಗದೇ ಬರೀ ತಲೆಮಾತ್ರದಿಂದಲೇ ನಾನು ಬರುವಂತಾಯಿತು.''

ಅಷ್ಟರಲ್ಲಿ ಕೊಲ್ಹಾಪುರಕ್ಕೆ ಪ್ರಯಾಣ ಬೆಳೆಸಿದ ದತ್ತಾತ್ರೇಯರು ಮರಳಿ ಅಲ್ಲಿಗೆ ಬಂದರು. ಅವರು ''ರಾಮ, ನೀನು ಮಧ್ಯದಲ್ಲಿಯೇ ಏಕೆ ನಿನ್ನ ತಾಯಿಯನ್ನು ಕರೆದೆ ? ನೀನು ಸಪಿಂಡೀಕರಣ ಶ್ರಾದ್ಧವಾದ ಬಳಿಕ ಕರೆದಿದ್ದರೆ ನಿನ್ನ ತಾಯಿಯು ಪೂರ್ಣ ದೇಹದಿಂದ ಬರುತ್ತಿದ್ದಳು. ಈಗೇಕೆ ಅವಸರ ಮಾಡಿದೆ ?

**ರಾಮ** :- ನನಗೆ ಇನ್ನೂ ಹುಡುಗತನ. ಹುಲಿಯನ್ನು ಕಂಡ ಕೂಡಲೇ ಹೆದರಿಕೆಯಾಗಿ ನಾನು ಕೂಗಿದೆ. ಈಗ ನಾನೇನು ಮಾಡಲಿ ?

**ಬ್ರಹ್ಮ** :- ಆಗ ದತ್ತಾತ್ರೇಯರು ಅವನನ್ನು ಸಮಾಧಾನ ಪಡಿಸಿ ಮುಂದಿನ ಕರ್ಮಗಳನ್ನು ಯಥಾಸಾಂಗವಾಗಿ ನೆರವೇರಿಸಲು ಹೇಳಿದರು.

ಅವರ ಆದೇಶದಂತೆ ರಾಮನು ಎಲ್ಲ ಕಾರ್ಯಗಳನ್ನು ಶಾಸ್ತ್ರೋಕ್ತರೀತಿಯಿಂದ ಆಚರಿಸಿ ಹನ್ನೊಂದನೆಯ ದಿವಸ ವೃಷೋತ್ಸರ್ಗ, ಹನ್ನೆರಡನೆಯ ದಿನ ಸಪಿಂಡೀಕರಣ ಶ್ರಾದ್ಧವನ್ನು, ಹದಿಮೂರನೇ ದಿನ ಸೋದಕುಂಭಶ್ರಾದ್ಧವನ್ನು ಆಚರಿಸಿ ಪುಣ್ಯಾಹವಾಚನವನ್ನು ಮಾಡಿಕೊಂಡು ಪರಿಶುದ್ಧನಾದನು. ಅನಂತರ ಬ್ರಾಹ್ಮಣರಿಗೆ ಅನೇಕ ದಾನಧರ್ಮಗಳನ್ನು ನೀಡಿ ಅವರೆಲ್ಲರನ್ನೂ ಸಂತೋಷಪಡಿಸಿದನು. ರಾಮನು ಆಚರಿಸಿದ ಔರ್ಧ್ವದೇಹಿಕ ಕರ್ಮಗಳ ಫಲವಾಗಿ ಜಮದಗ್ನಿ ಮುನಿಯು ದಿವ್ಯವಾದ ದೇಹವನ್ನು ಪಡೆದು ಬ್ರಹ್ಮಲೋಕಕ್ಕೆ ತೆರಳಿದನು. ರೇಣುಕಾದೇವಿಯು ಲೋಕಕಲ್ಯಾಣಾರ್ಥವಾಗಿ ಭೂಮಿಯಲ್ಲಿಯೇ ಅಲ್ಲಲ್ಲಿ ಅದೇ ರೂಪದಿಂದ ನೆಲೆಸಿ ನಿಂತಳು. ಈ ದೇವಿಯ ಮಾಹಾತ್ಮ್ಯವು ಸ್ಕಂದ ಪುರಾಣದಲ್ಲಿ ವಿಸ್ತಾರವಾಗಿ ಉಲ್ಲೇಖಿತಾಗಿರುವುದು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಪರಶುರಾಮ ಉಪಾಖ್ಯಾನ ಎಂಬ ಎಂಬತ್ತೊಂದನೇ ಅಧ್ಯಾಯ ಮುಗಿದುದು*



## ರಾಮನಿಗೆ ಪರಶುಪ್ರಧಾನ

**ಅಧ್ಯಾಯ - ೮೨**

**ವ್ಯಾಸ** :- ಪಿತಾಮಹ, ಹಿಂದೆ ರಾಮನು ಹುಲಿಗೆ ಅಂಜಿ ತಾಯಿಯನ್ನು ಕರೆದ ಎಂದು ಹೇಳಿದಿರಿ. ಅಂಜುಬುರುಕನಾದ ಆ ಚಿಕ್ಕ ಹುಡುಗ ಪರಶುರಾಮನು ಒಬ್ಬನೇ ಮಹಾಬಲಿಷ್ಠನಾದ ಕಾರ್ತವೀರ್ಯ ಹಾಗೂ ಅವನ ವೀರಸೈನಿಕರೊಡನೆ ಯುದ್ಧಮಾಡಿ ಹೇಗೆ ಗೆದ್ದ ?

**ಬ್ರಹ್ಮ** :- ಪರಶುರಾಮನು ತನ್ನ ಜನನಿಯಾದ ರೇಣುಕಾದೇವಿಯನ್ನು ಸ್ಮರಿಸಿದ. ಆ ದೇವಿಯು "ದೇವದೇವನಾದ ಪರಮೇಶ್ವರನನ್ನು ನೀನು ಭಕ್ತಿಯಿಂದ ಆರಾಧಿಸಿದರೆ ನಿನ್ನ ಮನೋಭೀಷ್ಟಗಳೆಲ್ಲವೂ ಪೂರ್ಣವಾಗುವವು. ನೀನು ಸುಲಭವಾಗಿ ಕಾರ್ತವೀರ್ಯಾರ್ಜುನನನ್ನು ಗೆಲ್ಲುವಿ" ಎಂದು ಹೇಳಿದಳು. ತಾಯಿಯ ಆದೇಶದಂತೆ ಪರಶುರಾಮನು ಮಹಾದೇವನನ್ನು ಆರಾಧಿಸಿದನು. ಮಹಾದೇವನು ರಾಮನಿಗೆ ಗಣಪತಿಯ ಮೂಲಮಹಾಮಂತ್ರವನ್ನು ಉಪದೇಶಿಸಿ "ಈ ಮೂಲಮಹಾಮಂತ್ರವನ್ನು ಒಂದು ಲಕ್ಷಸಲ ಜಪಮಾಡು. ಆ ಮಂತ್ರದಿಂದ ಹತ್ತು ಸಾವಿರ ಸಲ ಹೋಮ ಮಾಡು. ಕನಿಷ್ಠ ಒಂದು ಸಾವಿರ ತರ್ಪಣ ನೀಡಿ ಅಷ್ಟು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸು" ಎಂದು ಹೇಳಿದನು.

ಮಹಾದೇವನು ಹೇಳಿದಂತೆ ರಾಮನು ಮಂತ್ರ ಜಪ, ಹೋಮ, ತರ್ಪಣ, ಭೋಜನಾದಿಗಳನ್ನು ಭಕ್ತಿಯಿಂದ ಮಾಡಿಸಿದನು. ಅದರಿಂದ ಗಜಾನನು ಪ್ರೀತನಾಗಿ ತನ್ನ ಪ್ರತ್ಯಕ್ಷದರ್ಶನವನ್ನು ನೀಡಿದನು. ರಾಮನು ಅವನನ್ನು ಬಗೆಬಗೆಯ ಸ್ತೋತ್ರಗಳಿಂದ ಸ್ತುತಿಸಿ, ನತಿಸಿ ಪೂಜೆಮಾಡಿ ಸಂತೋಷಪಡಿಸಿದನು.

ಆ ಗಜಾನನನು ಫಟಸರ್ಪವನ್ನು ಯಜ್ಞೋಪವೀತವನ್ನಾಗಿ ಧರಿಸಿದ್ದನು. ಮಣಿಮಯ ರತ್ನಕಿರೀಟ ತಲೆಯ ಮೇಲೆ ಹೊಳೆಯುತ್ತಿತ್ತು. ಅವನು ಅನೇಕ ರತ್ನಾಭರಣಗಳನ್ನೂ

ಮುತ್ತುರತ್ನಗಳ ಹಾರಗಳನ್ನೂ ಧರಿಸಿದ್ದ. ತನ್ನ ನಾಲ್ಕೂಕೈಗಳಲ್ಲಿ ಗಂಡುಗೊಡಲಿ, ಕಮಲಪುಷ್ಪ, ಅರ್ಧಮುರಿದ ಕೊಂಬು ಮತ್ತು ಮೋದಕಗಳನ್ನು ಹಿಡಿದುಕೊಂಡಿದ್ದ.

ರಾಮನ ಸ್ತೋತ್ರದಿಂದ ಸುಪ್ರಸನ್ನನಾದ ಗಣಪತಿಯು ತನ್ನ ಕೈಯಲ್ಲಿಯ ಗಂಡುಗೊಡಲಿಯನ್ನೇ ಕೊಟ್ಟು "ರಾಮ, ನನ್ನ ಈ ಕೊಡಲಿಯನ್ನು ನಿನಗೆ ಕೊಟ್ಟಿದ್ದೇನೆ. ಇದರಿಂದ ನಿನಗೆ **ಪರಶುರಾಮ** ಎಂದು ಹೆಸರು ಬರುವುದು. ಇದರಿಂದ ನೀನು ವೈರಿಗಳನ್ನು ಅನಾಯಾಸವಾಗಿ ಸಂಹರಿಸಬಲ್ಲೆ" ಎಂದು ಹೇಳಿ ಅಂತರ್ಧಾನ ಹೊಂದಿದನು. ಅನಂತರ ಪರಶುರಾಮನು ಅಲ್ಲಿಯೇ ಮಹಾಗಣಪತಿಯ ಒಂದು ಸುಂದರವಾದ ಮಂದಿರವನ್ನು ನಿರ್ಮಿಸಿ ಅದರಲ್ಲಿ ಗಣಪತಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿದನು.

ಮುಂದೆ ಪರಶುರಾಮನು ಗಜಾನನನು ಕೊಟ್ಟ ಆ ಕೊಡಲಿಯಿಂದ ತನ್ನ ತಂದೆಯನ್ನು ಕೊಂದ ಕಾರ್ತವೀರ್ಯಾಜುನನ ಸಾವಿರ ತೋಳುಗಳನ್ನು ಸವರಿ ಒಗೆದು ಅವನನ್ನೂ ಸಂಹಾರ ಮಾಡಿದನು. ಮತ್ತು ಪ್ರಚಂಡವಾದ ಅವನ ಸೇನಾಬಲವನ್ನೂ ನಾಶಮಾಡಿದನು. ಮತ್ತು ತಾಯಿಯ ಅಪ್ಪಣೆಯಂತೆ ಇಪ್ಪತ್ತೊಂದು ಸಲ ಅಖಂಡ ಭೂಖಂಡದ ತುಂಬ ಸಂಚಾರಮಾಡಿ ಎಲ್ಲ ದುಷ್ಟ ಕ್ಷತ್ರಿಯರನ್ನು ಸಂಹರಿಸಿದನು. ಭೂಮಿಯಲ್ಲಿ ದುಷ್ಟಕ್ಷತ್ರಿಯರು ಒಬ್ಬರೂ ಉಳಿಯದಂತೆ ಮಾಡಿ ತಾನು ಗೆದ್ದ ಐಶ್ವರ್ಯವನ್ನು, ಭೂಮಿಯನ್ನೂ, ರತ್ನಗಳನ್ನೂ ಯಜ್ಞಮಾಡಿ ಋತ್ವಿಜರಿಗೆ ದಾನ ಮಾಡಿದನು. ಪರಶುರಾಮನ ಲೋಕೋತ್ತರಕಾರ್ಯಗಳನ್ನು ನೋಡಿ ಅವನನ್ನು ಸಾಕ್ಷಾತ್ ಮಹಾವಿಷ್ಣುವೆಂದೇ ಜನರು ತಿಳಿಯತೊಡಗಿದರು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ರಾಮನಿಗೆ ಪರಶುಪ್ರದಾನ ಎಂಬ ಎಂಬತ್ತೆರಡನೇ ಅಧ್ಯಾಯ ಮುಗಿದುದು*



## ಕಾಮ ವಸಂತಗಳ ಆಗಮನ

ಅಧ್ಯಾಯ - ೮೩

**ವ್ಯಾಸ :-** ಆ ಪರಶುರಾಮನು ಯಾವ ಸ್ಥಳದಲ್ಲಿ ಕುಳಿತು ತಪಸ್ಸನ್ನು ಮಾಡಿದ ? ಹೇಗೆ ಆ ಮಹಾಗಣಾಧಿಪತಿಯನ್ನು ಅರ್ಚಿಸಿದ ? ಇದೆಲ್ಲವನ್ನೂ ಹೇಳು.

**ಬ್ರಹ್ಮ :-** ಭೂಮಂಡಲದಲ್ಲಿ **ಮಯೂರೇಶ್ವರ** ಎಂದು ಪ್ರಖ್ಯಾತವಾದ ಪುಣ್ಯಸ್ಥಳವಿದೆ. ಅಲ್ಲಿ ಕಮಲಾಸುರ ಎಂಬ ದುಷ್ಟ ದೈತ್ಯನನ್ನು ಗಣಪತಿಯು ನವಿಲನ್ನು ಏರಿ ಅಲ್ಲಿಗೆ ಬಂದು ಅವನನ್ನು ಕೊಂದು ಹಾಕಿದನು. ಆದರಿಂದ ಆ ದೇವನಿಗೆ ಮಯೂರೇಶ್ವರ ಎಂದು ಹೆಸರಾಯಿತು. ಈ ಮಯೂರೇಶ್ವರ ಸ್ಥಾನದಲ್ಲಿ ಕುಳಿತು ತಪಸ್ಸನ್ನು ಮಾಡಿ ಪರಶುರಾಮನು ದೇವೇಶನಿಂದ ಕೊಡಲಿಯನ್ನು ಪಡೆದನು. ಆ ಇತಿಹಾಸವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ತಾರಕಾಸುರ ಎಂಬ ಬಲಿಷ್ಠನಾದ ದೈತ್ಯನು ಬ್ರಹ್ಮನನ್ನು ಕುರಿತು ಎರಡು ಸಾವಿರ ವರ್ಷ ತಪಸ್ಸನ್ನು ಮಾಡಿ ದೇವದಾನವ ಯಕ್ಷ ಗಂಧರ್ವ ಯಾರಿಂದಲೂ

ತಾನು ಸಾಯಬಾರದು. ಎಂಬ ವರವನ್ನು ಪಡೆದನು. ''ಪಾರ್ವತೀಪರಮೇಶ್ವರರ ಪುತ್ರನಾದ ಷಣ್ಮುಖನ ಹೊರತಾಗಿ ಬೇರೆ ಯಾರಿಂದಲೂ ನಿನಗೆ ಮರಣಭಯವಿಲ್ಲ'' ಎಂದು ಬ್ರಹ್ಮನು ವರವನ್ನು ಕೊಟ್ಟಿದ್ದನು. ಇದರಿಂದ ಮದಾಂಧನಾದ ತಾರಕಾಸುರನು ಭೂಲೋಕದಲ್ಲಿ ರಾಜ ಮಹಾರಾಜರನ್ನೂ ಪಾತಾಳದ ಸರ್ಪರಾಜರನ್ನೂ ಸ್ವರ್ಗಲೋಕದ ದೇವತೆಗಳನ್ನೂ ಗೆದ್ದು ಜಗದೊಡೆಯನಾಗಿ ವಿಜೃಂಭಿಸತೊಡಗಿದ.

ಆಗ ದೇವತೆಗಳು ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿ ಈ ದುಷ್ಟದೈತ್ಯನನ್ನು ಹೇಗಾದರೂ ಮಾಡಿ ಸಂಹರಿಸು ಎಂದು ಮೊರೆಯಿಟ್ಟರು. ಆದರೆ ಶಂಕರನ ಸಾಕ್ಷಾತ್ ದರ್ಶನ ಅವರಿಗೆ ಆಗಲಿಲ್ಲ. ಅಶರೀರವಾಣಿ ಮಾತ್ರ ಆಗ ಕೇಳಿ ಬಂದಿತು. ''ಪಾರ್ವತೀಪರಮೇಶ್ವರರಿಂದ ಒಬ್ಬ ಪುತ್ರನು ಜನಿಸಿದರೆ ಮಾತ್ರ ಅವನು ತಾರಕಾಸುರನನ್ನು ಸಂಹರಿಸಬಲ್ಲ.'' ಈ ಆಕಾಶವಾಣಿಯನ್ನು ಕೇಳಿ ದೇವತೆಗಳು ಪಾರ್ವತೀದೇವಿಯನ್ನು ಸಂದರ್ಶಿಸಿದರು. ಆ ತಾಯಿಯು ಆ ದೇವತೆಗಳನ್ನೆಲ್ಲ ಕರೆದುಕೊಂಡು ತಾನೂ ಕೂಡ ಭಿಲ್ಲರ ಮಹಿಳೆಯ ರೂಪವನ್ನು ಧರಿಸಿ ಪರಶಿವನು ತಪಸ್ಸು ಮಾಡುತ್ತ ಕುಳಿತ ಸ್ಥಳಕ್ಕೆ ಆಗಮಿಸಿದಳು. ಎಲ್ಲ ದೇವತೆಗಳೂ ಏಕಾಗ್ರಮನಸ್ಸಿನಿಂದ ಮೋಟುಮರದಂತೆ ಸ್ಥಾಣುವಾಗಿ ನಿಂತ ಮಹೇಶ್ವರನನ್ನು ನೋಡಿದರು. ಪ್ರಾರ್ಥನೆಯನ್ನೂ ಮಾಡಿದರು. ಆದರೆ ತಪಸ್ಸಮಾಧಿ ಮಗ್ನನಾದ ಶಂಕರನು ದೇವತೆಗಳನ್ನಾಗಲಿ, ಭಿಲ್ಲಣೀವೇಷದಲ್ಲಿದ್ದ ಪಾರ್ವತಿಯನ್ನಾಗಲೀ ನೋಡಲಿಲ್ಲ. ಆಗ ಪಾರ್ವತಿಯು ''ಮನ್ಮಥನು ಬಂದು ಕುಸುಮಬಾಣಗಳಿಂದ ಪರಮೇಶ್ವರನ ಮನಸ್ಸನ್ನು ಚಂಚಲಗೊಳಿಸಲಿ. ಅವನ ಏಕಾಗ್ರತೆಗೆ ಭಂಗ ಬಂದರೆ ನಿಮ್ಮ ಇಷ್ಟಾರ್ಥವು ಸುಲಭವಾಗಿ ಫಲಿಸುವವು.'' ಎಂದು ಹೇಳಿದಳು.

ಅದರಂತೆ ದೇವತೆಗಳು ಚಂದ್ರಚೂಡನ ತಪೋಭಂಗ ಮಾಡಲು ಕಾಮನಿಗೆ ಬಿನ್ನವಿಸಿಕೊಂಡರು. ಆಗ ಕಾಮನು ವಸಂತಮಾಸ ಹಾಗೂ ಮಂದಮಾರುತಗಳನ್ನು ಜತೆಗೆ ಕರೆದುಕೊಂಡು ಪರಶಿವನು ತಪಸ್ಸು ಮಾಡುತ್ತ ಕುಳಿತ ಪ್ರದೇಶಕ್ಕೆ ಬಂದನು.

*ಇತಿ ಗಣೇಶಪುರಾಣದ ಉಪಾಸನಾ ಖಂಡದಲ್ಲಿ*
*ಕಾಮ ವಸಂತಗಳ ಆಗಮನ ಎಂಬ ಎಂಬತ್ತಮೂರನೇ ಅಧ್ಯಾಯ ಮುಗಿದುದು.*

—o—

## ಅಧ್ಯಾಯ - ೮೪

ಶಿವನು ತಪಸ್ಸು ಮಾಡುತ್ತ ಕುಳಿತ ಸ್ಥಳದಲ್ಲಿ ಮದನನು ಒಂದು ಸುಂದರವಾದ ಹೂದೋಟವನ್ನೂ ಸರೋವರವನ್ನೂ ಮಾಯೆಯಿಂದ ಏರ್ಪಡಿಸಿದನು. ವಸಂತಮಾಸದಿಂದ ಅರಳಿನಿಂತ ಬಳ್ಳಿಗಳಲ್ಲಿ ಹೂಗಳ ಸುಗ್ಗಿ ಉಂಟಾಗಿ ಸುಗಂಧ ಮಂದಮಾರುತವು ತಂಪಿಂಪುಕಂಪುಗಳಿಂದ ಮೆಲ್ಲನೆ ಬೀಸತೊಡಗಿತು. ''ಇಂಥ ಸುಂದರ ಸನ್ನಿವೇಶದಲ್ಲಿ ಕಾಮನು ತನ್ನ ಹೂಬಾಣಗಳಿಂದ ಹರನ ಹೃದಯಕ್ಕೆ ಹೊಡೆದು ಶಿವನ ಚಿತ್ತವನ್ನು ಸೆಳೆದನು. ಕೂಡಲೇ ಶಿವನು ಕಣ್ಣುತೆರೆದು ವೈಭವದಿಂದ ವಿಜೃಂಭಿಸಿ ನಿಂತ ವಸಂತಮಾಸ, ಮೆಲ್ಲನೆ ಬೀಸುವ ಸುಗಂಧಿತಗಾಳಿ ಹಾಗೂ ಪುಷ್ಪಸಮೃದ್ಧಿಯಿಂದ ಶೋಭಿಸುವ ಪರಿಸರ ಪ್ರದೇಶಗಳನ್ನು ನೋಡಿ ತುಸುವಿಚಾರಪರನಾದನು. ತನ್ನ ಮನಸ್ಸಿನ ವ್ಯಗ್ರತೆಗೆ ಹಾಗೂ ತಪಸ್ಸಿನ ತಪೋಭಂಗಕ್ಕೆ ಕಾರಣರು ಯಾರು ಎಂದು ಕಣ್ಣುತೆರೆದು ನೋಡಿದನು. ಅವನ ಕಣ್ಣಿಗೆ ಹೂವಿನ ಪಂಚಬಾಣಗಳನ್ನು ತನಗೆ ಗುರಿಯಿಡುತ್ತಿರುವ ಕಾಮನು ಕಣ್ಣಿಗೆ ಬಿದ್ದನು.

ಕೂಡಲೇ ಮಹಾದೇವನಿಗೆ ಕೋಪಕೆರಳಿತು. ಅವನ ಮೂರನೇ ಕಣ್ಣು ಅರಳಿತು. ಅದರಿಂದ ಕೆಂಗಿಡಿಗಳು ಉರುಳಿ ಕಾಮನನ್ನು ಸುಟ್ಟುಹಾಕಿದವು. ಅರೆಚಣದಲ್ಲಿ ಮದನನುಬೂದಿಯಾಗಿ ಬಿದ್ದಿದ್ದ.

ಪರಮೇಶ್ವರನ ಆ ಭಯಂಕರ ಉಗ್ರರೂಪವನ್ನು ಕಂಡು ಯಾವದೇವತೆಗಳೂ ಅವನ ಎದಿರು ಬರಲು ಧೈರ್ಯಮಾಡಲಿಲ್ಲ. ಭಿಲ್ಲಿಣಿ ವೇಷಧರಿಸಿದ ಪಾರ್ವತಿಯು ಮಾತ್ರ ಭಕ್ತಿಯಿಂದ ಶಿವನ ಬಳಿಗೆ ಬಂದು ಕೈಜೋಡಿಸಿ ಬೇಡಿಕೊಂಡಳು. ''ಪೂಜ್ಯನಾದ ಪತಿದೇವ, ನೀನು ಲೋಕಕ್ಕೆಲ್ಲ 'ಶಂಕರ' ಸುಖವನ್ನು ಉಂಟುಮಾಡುವವನು ಅಲ್ಲವೆ ? ನಿನ್ನ ಕೋಪವನ್ನು ಉಪಸಂಹರಿಸು. ಭೂಲೋಕದಲ್ಲಿ ತಾರಕಾಸುರನೆಂಬ ದೈತ್ಯನ ಉಪದ್ರವದಿಂದ ಸಂತ್ರಸ್ತರಾದ ದೇವತೆಗಳು ಕಾಮನನ್ನು ನಿನ್ನನ್ನು ಬಹಿರ್ಮುಖನನ್ನಾಗಿ ಮಾಡಲು ಪ್ರೇರಿಸಿದರು. ಅವನು ನಿನ್ನ ಕಣ್ಣಿನ ಕಿಡಿಯಿಂದ ಸುಟ್ಟುಹೋದ. ದೇವತೆಗಳ ಅಪರಾಧವನ್ನು ಕ್ಷಮಿಸು. ಅವರು ನಿನ್ನನ್ನೇ ಶರಣುಹೊಂದಿದ್ದಾರೆ. ಎಲ್ಲರನ್ನೂ ತಾರಕಾಸುರನು ತಂದಿಟ್ಟ ಕುತ್ತಿನಿಂದ ಪಾರುಮಾಡು.''

ಪಾರ್ವತಿಯ ಪ್ರಾರ್ಥನೆಯಿಂದ ಪ್ರೀತನಾಗಿ ಪರಮೇಶ್ವರನು ದೇವತೆಗಳಿಗೆಲ್ಲ ಅಭಯದಾನವನ್ನು ಮಾಡಿ ಪ್ರೀತಿಯಿಂದ ಪರಮೇಶ್ವರಿಯನ್ನು ಆಲಿಂಗಿಸಿ ನಂದಿಯನ್ನು ಏರಿ ಕೈಲಾಸಪರ್ವತಕ್ಕೆ ಪ್ರಯಾಣ ಮಾಡಿದನು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಕಾಮದಹನ ಎಂಬ ಎಂಬತ್ತನಾಲ್ಕನೇ ಅಧ್ಯಾಯ ಮುಗಿದುದು*

—o—

ಷಣ್ಮುಖನ ಉತ್ಪತ್ತಿ

ಅಧ್ಯಾಯ - ೮೫

**ಬ್ರಹ್ಮ** :- ಪಾರ್ವತಿಯೊಂದಿಗೆ ಪರಮೇಶ್ವರನು ಪರಮರಮಣೀಯವಾದ ಕೈಲಾಸಪರ್ವತದ ಸುಂದರಪ್ರದೇಶಗಳಲ್ಲಿ ವಿಹಾರಕ್ರೀಡೆಯಲ್ಲಿ ತೊಡಗಿದನು. ಅರವತ್ತು ಸಾವಿರ ವರ್ಷ ನಡೆಯಿತು. ಅವರ ರತಿಕ್ರೀಡೆ. ದೇವತೆಗಳಿಗೆ ತಾರಕಾಸುರನನ್ನು ಕೊಲ್ಲುವ ಪರಮೇಶ್ವರರ ಪುತ್ರನು ಎಂದು ಉದಿಸುವನು ಎಂದು ಚಿಂತೆಯಾಯಿತು. ಅವರೆಲ್ಲರೂ ಅಗ್ನಿಯನ್ನು ಪ್ರಾರ್ಥಿಸಿದರು. ಅವರ ಪ್ರೇರಣೆಯಿಂದ ಅಗ್ನಿಯು ಪಾರ್ವತಿಪರಮೇಶ್ವರರ ಕ್ರೀಡಾಸ್ಥಳಕ್ಕೆ ಬಂದು ಬಾಗಿಲ ಹೊರಗೆ ನಿಂತು 'ಭಿಕ್ಷೆಯನ್ನು ಕೊಡು' ಎಂದು ತಾರಸ್ವರದಿಂದ ಮೂರು ಸಲ ಕೂಗಿ ಬೇಡಿದನು. ಆಗ ಅವರ ವಿಹಾರಕ್ಕೆ ಭಂಗ ಬಂದು ಇಬ್ಬರೂ ಹೊರಗೆ ಬಂದರು. ಪರಮೇಶ್ವರನ ಶಕ್ತಿಪಾತವಾಗಿತ್ತು. ಪಾರ್ವತಿದೇವಿಯು ಅಂಜಲಿಪುಟದಲ್ಲಿ ಧರಿಸಿ ಬ್ರಾಹ್ಮಣರೂಪದಲ್ಲಿ ಬಂದು ಭಿಕ್ಷೆಬೇಡುತ್ತ ನಿಂತ ಅಗ್ನಿಯ ಅಂಜಲಿಪುಟದಲ್ಲಿ ಹಾಕಿದಳು. ಇದು ಹರನ ಶಕ್ತಿ. ಇದು ನೆಲದ ಮೇಲೆ ಬಿದ್ದರೆ ಮೂರು ಲೋಕಗಳನ್ನೇ ಸುಟ್ಟು ಬಿಟ್ಟೀತು'' ಎಂದು ಎಚ್ಚರಿಸಿದಳು. ಅದರಿಂದ ಅಗ್ನಿಯು ಭೀತನಾಗಿ ಆ ಪರಮೇಶ್ವರನ ವೀರ್ಯವನ್ನು ಕುಡಿದುಬಿಟ್ಟನು. ಅದು ಅವನ ದೇಹವನ್ನು ಸುಡತೊಡಗಿತು. ಅದನ್ನು ತಾಳಲಾರದೇ ಅಗ್ನಿಯು ಗಂಗೆಯ ತಣ್ಣಗಿನ ನೀರಿನಲ್ಲಿ ಆ ಶಿವನ ಶಕ್ತಿಯನ್ನು ವಿಸರ್ಜಿಸಿದನು. ಆಗ ಕಾರ್ತೀಕಮಾಸ. ಕೃತ್ತಿಕೆಯರೇ ಮೊದಲಾದ ನಕ್ಷತ್ರನಾರಿಯರು ಗಂಗಾನದಿಯಲ್ಲಿ ಪ್ರಾತಃಸ್ನಾನಕ್ಕಾಗಿ ಬಂದಿದ್ದರು. ಆ ನಾರಿಯರು ತಿಳಿಯದೇ ಸ್ನಾನಮಾಡುವ ಸಮಯದಲ್ಲಿ ಶಿವನ ಶಕ್ತಿಯನ್ನು ಪಾನ ಮಾಡಿದರು. ಅದರಿಂದ ಅವರು ಗರ್ಭಿಣಿಯಾದರು. ಅದನ್ನು ನೋಡಿ ಅವರ ಪತಿಗಳಿಗೆ ಸಿಟ್ಟುಬಂದಿತು. ಬೇರೊಬ್ಬರಿಂದ ಗರ್ಭಧರಿಸಿದ ತಮ್ಮ ಮಡದಿಯರನ್ನು ಮನೆಬಿಟ್ಟು ಹೊರಗೆ ಹಾಕಿದರು. ಪತಿಗಳಿಂದ ಪರಿತ್ಯಕ್ತರಾದ ಆ ತಾರಂಗನೆಯರು ಗಂಗಾತೀರಕ್ಕೆ ಬಂದು ಅದನ್ನು ಅಲ್ಲಿಯ ಹುಲ್ಲುಜೊಂಡಿನ ಮೇಲೆ ವಿಸರ್ಜಿಸಿದರು. ಆ ಶರಕಾಂಡದಿಂದ ಆರುತಲೆಯ ಹನ್ನೆರಡುಭುಜಗಳಿಂದ ರಾರಾಜಿತವಾದ ಒಂದು ಸುಂದರ ತೇಜಸ್ವೀ ಶಿಶುವು ಮೈದಾಳಿ ನಿಂತಿತು. ಆ ಹುಟ್ಟಿದ ತೇಜಃಪುಂಜನಾದ ಮಗು ಹೂಂಕಾರವನ್ನು ಮಾಡಿತು. ಅದರಿಂದ ಭೂಮ್ಯಾಕಾಶಗಳೂ ದಶದಿಕ್ಕುಗಳೂ ಗದಗುಟ್ಟಿ ನಡುಗಿ ಹೋದವು.

ಆ ಹುಡುಗನ ಉತ್ಪತ್ತಿಯನ್ನು ನಾರದರು ಬಂದು ಪಾರ್ವತೀಪರಮೇಶ್ವರರಿಗೆ ತಿಳಿಸಿದರು. ಆಗ ಆ ಜಗದಂಬೆಯು ತಮ್ಮ ಔರಸಪುತ್ರನೇ ಎಂದು ನಿಶ್ಚಿತ ಎನಿಸಿ ಆ ಮಗು ಇದ್ದ ಸ್ಥಳಕ್ಕೆ ಧಾವಿಸಿ ಬಂದಳು.

*ಇತಿ ಗಣೇಶಪುರಾಣದ ಉಪಾಸನಾ ಖಂಡದಲ್ಲಿ ಷಣ್ಮುಖನ ಉತ್ಪತ್ತಿ ಎಂಬ ಎಂಬತ್ತೈದನೇ ಅಧ್ಯಾಯ ಮುಗಿದುದು*

—o—

## ಸ್ಕಂದ ಮಹಾದೇವ ಸಂವಾದ

**ಅಧ್ಯಾಯ - ೮೬**

ಆ ಮಗುವನ್ನು ಕಂಡಕೂಡಲೇ ಪಾರ್ವತಿಗೆ ಪುತ್ರ ಸ್ನೇಹವು ಉಕ್ಕಿ ಬಂದಿತು. ಅವಳು ತನ್ನ ಮಗುವನ್ನು ಎತ್ತಿ ತೊಡೆಯ ಮೇಲೆ ಕೂಡಿಸಿಕೊಂಡು ಮೈದಡವಿ ಮುದ್ದುಮಾಡತೊಡಗಿದಳು. ಆಗ ಗಂಗೆಯು ಪಾರ್ವತಿಯನ್ನು ಕುರಿತು ''ಅಗ್ನಿಯು ಶಿವನ ಶಕ್ತಿಯನ್ನು ನನ್ನಲ್ಲಿ ವಿಸರ್ಜಿಸಿದ್ದನು. ಇವನು ತನ್ನ ಮಗ ನೀನೇಕೆ ಇವನನ್ನು ಪ್ರೀತಿಯಿಂದ ಮುದ್ದಾಡುವೆ'' ಎಂದು ವಾದಿಸಿದಳು. ಆಗ ಅಲ್ಲಿಗೆ ಅಗ್ನಿಯು ಧಾವಿಸಿ ಬಂದು ''ಪಾರ್ವತಿಯು ಭಿಕ್ಷೆಗಾಗಿ ಕೈ ಒಡ್ಡಿದ ನನ್ನ ಅಂಜಲಿಯಲ್ಲಿ ಇದನ್ನು ಮೊದಲು ಹಾಕಿದ್ದಳು. ಅದರಿಂದ ಇದು ನನ್ನ ಮಗು ಎಂದು ಕಲಹವಾಡತೊಡಗಿದನು. ಅದೇ ವೇಳೆಯಲ್ಲಿ ಕೃತ್ತಿಕಾ ಮೊದಲಾದ ನಕ್ಷತ್ರನಾರಿಯರೂ ಅಲ್ಲಿಗೆ ಓಡಿ ಬಂದು ಇದನ್ನು ಗರ್ಭದಲ್ಲಿ ಧರಿಸಿ ಹೆತ್ತವರು ನಾವು. ಆದ್ದರಿಂದ ಇದು ನಮ್ಮ ಮಗು ಎಂದು ವಾದ ಹೂಡಿದರು. ಈ ವಾಕ್ ಕಲಹದಲ್ಲಿ ಯಾವುದೂ ನಿರ್ಣಯವಾಗಲಿಲ್ಲ. ಆಗ ಅವರೆಲ್ಲರೂ ಶಂಕರನ ಕಡಗೆ ಕೈಲಾಸಪರ್ವತಕ್ಕೆ ಬಂದರು. ಪಾರ್ವತಿಯು ಆ ಮಗುವನ್ನು ಬಗಲಲ್ಲಿ ಎತ್ತಿಕೊಂಡು ಶಂಕರನಿದ್ದಲ್ಲಿಗೆ ಮೊದಲು ಬಂದಳು. ಆ ಶಿಶುವನ್ನು ನೋಡಿದ ಕೂಡಲೇ ಶಿವನಿಗೆ ಪುತ್ರವಾತ್ಸಲ್ಯ ಉಕ್ಕೇರಿ ಬಂದಿತು. ಆ ಮಗುವನ್ನು ಎತ್ತಿ ತೊಡೆಯ ಮೇಲೆ ಕೂಡಿಸಿ ಅದರ ನೆತ್ತಿಯನ್ನು ಮೂಸಿ ನೋಡಿ ಮೈದಡವಿ ಮುದ್ದಾಡಿದನು. ಅದನ್ನು ನೋಡಿ ನನ್ನ ಮಗು, ನನ್ನ ಮಗು, ಎಂದು ಕಚ್ಚಾಡುತ್ತಿದ ಗಂಗೆ, ಅಗ್ನಿ, ಕೃತ್ತಿಕಾದಿ ಚೆಲುವೆಯರು ಎಲ್ಲರೂ ಮರುಮಾತನಾಡದೇ ತಮ್ಮ ತಮ್ಮ ಸ್ಥಳಕ್ಕೆ ಹಿಂದಿರುಗಿದರು.

ಅನಂತರ ಶಂಕರನು ಬ್ರಹ್ಮನನ್ನೂ, ಬೃಹಸ್ಪತ್ಯಾಚಾರ್ಯರನ್ನೂ ಕರೆದು ಆ ಕೂಸಿಗೆ ನಾಮಕರಣ ಮಾಡಬೇಕೆಂದು ಸೂಚಿಸಿದರು. ಆಗ ಬ್ರಹ್ಮ ಬೃಹಸ್ಪತಿಯರು ಆ ಮಗುವಿಗೆ ''ಕಾರ್ತೀಕಮಾಸದಲ್ಲಿ ಹುಟ್ಟಿದ್ದರಿಂದ **ಕಾರ್ತಿಕೇಯ** ಎಂದೂ ಪಾರ್ವತಿಯು ಮಗನಾದುದರಿಂದ **ಪಾರ್ವತೀನಂದನ** ಎಂದೂ ಹುಲ್ಲಿನ ಜೊಂಡಿನಲ್ಲಿ ಹುಟ್ಟಿದ್ದರಿಂದ **ಶರಜನ್ಮ** ಎಂದೂ ನಕ್ಷತ್ರ ಅಭಿಮಾನಿನಿಯಾರಾದ ಆರು ಜನ ನಾರಿಯರು ಸ್ತನಪಾನ ಮಾಡಿಸಿದ್ದರಿಂದ ಇವನಿಗೆ **ಷಣ್ಮುಖನೆಂದೂ** ತಾರಕಾಸುರನನ್ನು ಮುಂದೆ ಗೆಲ್ಲುವದರಿಂದ ತಾರಕಜಿತ್ ಎಂದೂ ಮುಂದೆ ದೇವಸೇನೆಗೆ ಸೇನಾಪತಿನಾಗುವದರಿಂದ **ಸೇನಾನಿ** ಎಂದೂ ಆರು ಮುಖಗಳಿದ್ದುದರಿಂದ **ಷಡಾನನ** ಎಂದೂ ಮಹಾದೇವರ ಶಕ್ತಿಪಾತದಿಂದ ಹುಟ್ಟಿದ ಕಾರಣಕ್ಕಾಗಿ **''ಸ್ಕಂದ''** ಎಂದೂ ಅವನಿಗೆ ನಾಮಕರಣ ಮಾಡಿ ಆಶೀರ್ವದಿಸಿದರು.

ಒಂದು ದಿನ ಇಂದ್ರಾದಿ ದೇವತೆಗಳು ಆ ಬಾಲಕನನ್ನು ನೋಡಿ ತಾರಕಾಸುರನ ಸಂಹಾರಮಾಡುವ ಸಮರ್ಥ ಶಿವಪುತ್ರನು ಹುಟ್ಟಿದನೆಂದು ಹರ್ಷಭರಿತರಾದರು. ವೇದೋಕ್ತ ಮಂತ್ರಗಳಿಂದ ದೇವತೆಗಳ ಸೇನಾಪತಿ ಪಟ್ಟದಲ್ಲಿ ಆ ಷಣ್ಮುಖನನ್ನು ಅಭಿಷೇಕಿಸಿದರು. ಮುಂದೆ ಒಂದು ದಿನ ಆ ಸ್ಕಂದನು ತನ್ನ ತಂದೆ ಚಂದ್ರಶೇಖರನ ಬಳಿಗೆ ಬಂದು ''ಪೂಜ್ಯ ತಂದೆಯೇ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ

ನಾಲ್ಕೂ ಬಗೆಯ ಪುರುಷಾರ್ಥಗಳನ್ನು ಪಡೆಯುವ ಯಾವುದಾದರೂ ಒಂದು ಒಳ್ಳೆಯ ವ್ರತವು ಇದ್ದರೆ ನನಗೆ ಹೇಳು. ಆ ವ್ರತದ ಪ್ರಭಾವದಿಂದ ನಾನು ಬಲಿಷ್ಠರಾದ ಶತ್ರುಗಳನ್ನೆಲ್ಲ ಸದೆಬಡೆದು ವಿಜಯಶಾಲಿ ಆಗುವಂತೆ ಪರಾಕ್ರಮೋಪ್ರದವಾದ ಆ ಒಳ್ಳೆಯ ವ್ರತವನ್ನು ನನಗೆ ಉಪದೇಶಿಸು.''

ಆಗ ಮಹಾದೇವನು ತನ್ನ ಪುತ್ರನಾದ ಷಣ್ಮುಖನಿಗೆ ಸಂಕಷ್ಟಹರಚತುರ್ಥಿವ್ರತದ ಮಹಾಮಹಿಮೆಯನ್ನು ತಿಳಿಸಿದನು. ಅದನ್ನೆಲ್ಲ ಕೇಳಿ ಸ್ಕಂದನು ''ಜನಕನೇ ಆ ಚತುರ್ಥೀವ್ರತದ ಮಾಹಾತ್ಮ್ಯವನ್ನು ವಿಸ್ತಾರಪೂರ್ವಕವಾಗಿ ಹೇಳು. ಮತ್ತು ಆ ವ್ರತವನ್ನು ಯಾವ ತಿಂಗಳ ಯಾವ ದಿನ ಆರಂಭಿಸಬೇಕು ? ಅದರ ವಿಧಿ ವಿಧಾನಗಳೇನು ? ಇದರ ಅನುಷ್ಠಾನದಿಂದ ಲಭಿಸಬಹುದಾದ ವಿಶಿಷ್ಟ ಫಲ ಏನು ? ವಿಲಕ್ಷಣ ಪ್ರಯೋಜನವೇನು ? ಈ ವ್ರತಾನುಷ್ಠಾನದಿಂದ ವ್ರತಕಲ್ಪೋಕ್ತವಾದ ಎಲ್ಲ ಫಲ ಪ್ರಯೋಜನಗಳನ್ನು ಹೊಂದಿದವರು ಯಾರಾದರೂ ಇರುವರೆ ?''

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಸ್ಕಂದ ಮಹಾದೇವ ಸಂವಾದ ಎಂಬ ಎಂಬತ್ತಾರನೇ ಅಧ್ಯಾಯ ಮುಗಿದುದು*



## ತಾರಕವಧ

## ಅಧ್ಯಾಯ - ೮೭

**ಮಹಾದೇವ :-** ಸ್ಕಂದ, ಶ್ರಾವಣ ಶುಕ್ಲಪಕ್ಷ ಚತುರ್ಥಿದಿನದಂದು ಈ ವ್ರತವನ್ನು ಆರಂಭಿಸಬೇಕು. ಶುಚಿಯಾದ ಸ್ಥಳದಲ್ಲಿ ಒಂದು ಮಂಟಪವನ್ನು ಬಾಳೆಯ ಕಂಬ, ಮಾವಿನ ಎಲೆಯ ತೋರಣಗಳಿಂದ ಅಲಂಕರಿಸಿ ಮಂಟಪದ ನಡುವೆ ಒಂದು ಕಲಶವನ್ನು ಸ್ಥಾಪಿಸಬೇಕು. ಅದರ ಮೇಲೆ ಒಂದು ಜೊತೆ ಕೆಂಪು ರೇಶ್ಮೆ ವಸ್ತ್ರವನ್ನು ಹೊದಿಸಬೇಕು. ಕೆಳಗೆ ಚಂದನದಿಂದ ಅಷ್ಟದಳದ ಕಮಲವನ್ನು ಚಿತ್ರಿಸಬೇಕು. ಅದರಲ್ಲಿ ಗಣಪತಿಯ ಮೂರ್ತಿಯನ್ನು ಸ್ಥಾಪಿಸಿ ಧ್ಯಾನವಾಹನಾದಿ ಷೋಡಶೋಪಚಾರದಿಂದ ಪೂಜಿಸಬೇಕು. ಇಪ್ಪತ್ತೊಂದು ದೂರ್ವಾದಳಗಳನ್ನು ಏರಿಸಬೇಕು. ಇಪ್ಪತ್ತೊಂದು ಪಕ್ವಾನ್ನಗಳನ್ನು ನಿವೇದಿಸಬೇಕು. ಇಪ್ಪತ್ತೊಂದು ಬ್ರಾಹ್ಮಣರಿಗೆ ಇಪ್ಪತ್ತೊಂದು ಪಕ್ವಾನಗಳ ಭೋಜನವನ್ನು ಮಾಡಿಸಬೇಕು. ಅವರಿಗೆ ತೃಪ್ತಿಯಾಗುವಷ್ಟು ದಾನದಕ್ಷಿಣೆಗಳನ್ನು ನೀಡಬೇಕು. ಅನಂತರ ಗಣಪತಿಯ ದಿವ್ಯ ಕಥೆಗಳನ್ನು ಬಂಧುಮಿತ್ರರೊಂದಿಗೆ ಕೂಡಿಕೊಂಡು ಶ್ರವಣಮಾಡಬೇಕು.

ಈ ಕ್ರಮದಿಂದ ಭಾದ್ರಪದ ಶುಕ್ಲ ಚತುರ್ಥಿಯವರೆಗೆ ಈ ವ್ರತವನ್ನು ಭಕ್ತಿಯಿಂದ ಆಚರಿಸಬೇಕು. ತನ್ನ ಶಕ್ತಿಗೆ ಅನುಸರಿಸಿ ಮಹೋತ್ಸವವನ್ನು ನಡೆಸಬೇಕು. ಮಹೋತ್ಸವದ ದಿನ ಈ ಮೊದಲು ಹೇಳಿದ ವಿಧಾನದಿಂದ ಗಣಪತಿಯನ್ನು ಅರ್ಚಿಸಬೇಕು. ರಾತ್ರಿ ನಿದ್ದೆ ಮಾಡದೇ ಜಾಗರಮಾಡಿ ಸಂಗೀತಗೋಷ್ಠಿ ವಾದ್ಯಗೋಷ್ಠಿಗಳ ಮುಖಾಂತರ ಗಣಪತಿಯ ಭಜನ, ಗಾಯನ, ಪುರಾಣ, ಇತಿಹಾಸ ಶ್ರವಣಾದಿಗಳನ್ನು ಮಾಡಬೇಕು. ಕೊನೆಯ ದಿನ ನೂರಾಇಪ್ಪತ್ತೊಂದು ಸದ್ಬ್ರಾಹ್ಮಣರನ್ನು ಪೂಜಿಸಿ ಅವರಿಗೆ

ಷಡ್ರಸೋಪೇತವಾದ ಭೋಜನವನ್ನು ಮಾಡಿಸಬೇಕು. ದಾನ ದಕ್ಷಿಣೆಗಳನ್ನು ವಿಪುಲವಾಗಿ ನೀಡಬೇಕು. ಕೊನೆಗೆ ಮೆರವಣಿಗೆಯಿಂದ ಆ ಗಣಪತಿ ಮೂರ್ತಿಯನ್ನು ಮಂಗಳವಾದ್ಯ ಪುರಸ್ಕಾರವಾಗಿ ಮೆನೆ ಪಲ್ಲಕ್ಕಿ ಆನೆ ಮುಂತಾದವುಗಳ ಮೇಲೆ ಕೂಡಿಸಿಕೊಂಡು ಸಮೀಪದ ಕೆರೆ, ಕಾಲುವೆ ಯಾವುದಾದರೂ ನದಿಯಲ್ಲಿ ವಿಸರ್ಜಿಸಬೇಕು.

ಸ್ಕಂದ, ಈ ವ್ರತದ ವಿಧಿ ವಿಧಾನ ಹಾಗೂ ಮಹತ್ವವನ್ನು ನಿನಗೆ ತಿಳಿಸಿಹೇಳಿದ್ದೇನೆ. ನೀನು ಈ ವ್ರತವನ್ನು ಆಚರಿಸು. ನಿನಗೆ ಯುದ್ಧದಲ್ಲಿ ಖಂಡಿತವಾಗಿಯೂ ವಿಜಯದೊರಕುವುದು.

**ಬ್ರಹ್ಮ :-** ಪರಮೇಶ್ವರನು ತನ್ನ ಪ್ರೀತಿಯ ಪುತ್ರನಾದ ಷಣ್ಮುಖನಿಗೆ ವ್ರತದ ಮಹಿಮೆಯನ್ನು ಹೇಳಿ ಅನಂತರ ಆರು ಅಕ್ಷರಗಳಿಂದ ಕೂಡಿದ ಗಣೇಶ ಮೂಲ ಮಹಾಮಂತ್ರವನ್ನು ಉಪದೇಶಿಸಿ ಷಡಕ್ಷರಿಯ ದೀಕ್ಷೆಯನ್ನು ಕೊಟ್ಟನು.

ಹೀಗೆ ತಂದೆ ಪರಶಿವನಿಂದ ಉಪದಿಷ್ಟನಾದ ಷಣ್ಮುಖನು ಅರಣ್ಯಕ್ಕೆ ಹೋಗಿ ಒಂಟಿಕಾಲಿನಲ್ಲಿ ನಿಂತು ಆ ಮೂಲಮಹಾಮಂತ್ರವನ್ನು ಜಪಿಸುತ್ತ ಘೋರತಪಸ್ಸನ್ನು ಮಾಡಿದನು. ಆ ಮಂತ್ರದ ಅ ಮಹಿಮೆ ಅಪರಿಮಿತ. ಷಣ್ಮುಖನ ಏಕನಿಷ್ಠವಾದ ತಪೋವ್ರತಾನುಷ್ಠಾನಕ್ಕೆ ಮೆಚ್ಚಿ ಗಣಾಧಿಪನು ತನ್ನ ದಿವ್ಯವಾದ ಸ್ವರೂಪವನ್ನು ತೋರಿದನು. ಮತ್ತು ಷಣ್ಮುಖನಿಗೆ ಬೇಕಾದ ವರವನ್ನು ಕೇಳು ಎಂದು ಹೇಳಿದನು. ಆಗ ಷಣ್ಮುಖನು ದೇವೇಶನೆ, ನಿನ್ನ ದರ್ಶನದಿಂದಲೇ ನನ್ನ ಮನದ ಆಶೆಗಳೆಲ್ಲ ಪೂ ತೃಪ್ತಿ ಹೊಂದಿವೆ. ಆದರೂ ನೀನು ವರಬೇಡು ಎಂದು ಹೇಳಿದ್ದರಿಂದ ಕೇಳುತ್ತಿದ್ದೇನೆ. ನನಗೆ ಯುದ್ಧದಲ್ಲಿ ಎಂದೂ ಅಪಜಯವಾಗಬಾರದು. ನಾನು ಸ್ಮರಿಸಿದ ಕೂಡಲೇ ನೀನು ನನ್ನ ಪ್ರತ್ಯಕ್ಷ ಗೋಚರನಾಗಬೇಕು. ಸುರಶ್ರೇಷ್ಠನಾದ ನೀನು ಈ ಸ್ಥಳದಲ್ಲಿ ನನ್ನ ನೇತ್ರಲಕ್ಷ್ಯನೂ ಆಗಿರುವದರಿಂಲೂ ಲಕ್ಷ ವಿನಾಯಕ ಎಂಬ ಹೆಸರಿನಿಂದ ನೀನು ಈ ಸ್ಥಾನದಲ್ಲಿ ನೆಲೆಸು. ಬೇಡಿ ಬಯಸುವ ಭಕ್ತರಿಗೆಲ್ಲ ನೀನು ಮನೋಭೀಷ್ಟಗಳನ್ನು ಪೂರೈಸುವ ಕಲ್ಪವೃಕ್ಷನಾಗು.''

ದೇವಾಧಿಪತಿಯಾದ ಆ ಗಣಪತಿಯು ಷಣ್ಮುಖನಿಗೆ ಬೇಡಿದ ವರಗಳನ್ನೆಲ್ಲ ನೀಡಿದನು. ಮತ್ತು ತನ್ನ ವಾಹನವಾದ ನವಿಲನ್ನು ಕೂಡ ಉಡುಗೊರೆಯಾಗಿ ಕೊಟ್ಟನು. ಅಂದಿನಿಂದ ಷಣ್ಮುಖನಿಗೆ **ಮಯೂರ ಧ್ವಜ** ಎಂಬ ಬೇರೊಂದು ಶುಭನಾಮಧೇಯವು ಪ್ರಾಪ್ತವಾಯಿತು. ಆ ಬಳಿಕ ದೇವತೆಗಳ ಸೇನಾನಿಯಾದ ಷಣ್ಮುಖನು ತಾರಕಾಸುರನೊಡನೆ ಯುದ್ಧ ಪ್ರಾರಂಭಿಸಿದನು. ಒಂದು ಲಕ್ಷ ವರ್ಷಗಳವರೆಗೆ ನಡೆಯಿತು. ಸ್ಕಂದ ತಾರಕರಘೋರ ಸಂಗ್ರಾಮ. ಕೊನೆಗೆ ಸ್ಕಂದನು ತನ್ನ ಶಕ್ತ್ಯಾಯುಧ ಪ್ರಯೋಗದಿಂದ ಕೊಚ್ಚಿಕೊಂದು ಹಾಕಿದನು. ಆಗ ದೇವತೆಗಳು ಸ್ಕಂದನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಸ್ಕಂದನು ತಪಸ್ಸು ಮಾಡಿದ ಸ್ಥಳ **ಲಕ್ಷ ವಿನಾಯಕ** ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಅವನಿಂದ ಉಪಾಸಿತವಾದ ಆ ದೇವನಿಗೆ **ಘನ್ನೃಣೇಶ್ವರ** ಎಂಬ ಹೆಸರು ಬಂದಿತು. ಕೆಲಕಾಲ ಕಳೆದ ಬಳಿಕ ಏಲ ಎಂಬ ಪ್ರಸಿದ್ಧ ರಾಜನು ಆಗಿಹೋದನು. ಮುಂದೆ ಆ ರಾಜನ ಹೆಸರಿನಿಂದಲೇ ಏಲಪುರಿ ಎಂದು ಆ ಸ್ಥಳವು ಪ್ರಸಿದ್ಧವಾಯಿತು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ತಾರಕವಧ ಎಂಬ ಎಂಬತ್ತೇಳನೇ ಅಧ್ಯಾಯ ಮುಗಿದುದು*

—o—

**ವ್ಯಾಸ :-** ಮಹಾದೇವನ ನಡುಗಣ್ಣಿನ ಸುಡುವ ಕಿಡಿಯಿಂದ ಕಾಮನು ಬೂದಿಯಾಗಿ ಬಿದ್ದ ಬಳಿಕ ಅವನ ಪತ್ನಿ ರತಿದೇವಿಯ ಗತಿ ಏನಾಯಿತು ? ಇದನ್ನು ಹೇಳು.

**ಬ್ರಹ್ಮ :-** ಮನ್ಮಥನು ಭಸ್ಮೀಭೂತನಾಗಿ ಬಿದ್ದ ಬಳಿಕ ದುಃಖಸಂತಪ್ತಳಾದ ರತಿದೇವಿಯು ಅತ್ತು ಗೋಗರೆದು, ಗೋಳಾಡಿ ಕೊನೆಗೆ ಮಹಾದೇವರಿಗೆ ಶರಣು ಬಂದಳು. ಭಕ್ತಿಯಿಂದ ಆ ಭಗವಂತನನ್ನು ಸ್ತೋತ್ರಮಾಡಿದಳು. ಅವಳ ಸ್ತೋತ್ರದಿಂದ ಪರಮೇಶ್ವರನು ಪ್ರೀತನಾಗಿ ಪ್ರತ್ಯಕ್ಷದರ್ಶನವನ್ನಿತ್ತು ನಿನ್ನ ಮನೋಭೀಷ್ಟವಾದ ವರಗಳನ್ನು ಕೇಳಿಕೊ ಎಂದು ಅಪ್ಪಣೆಮಾಡಿದನು.

**ರತಿ :-** ಪರಬ್ರಹ್ಮಸ್ವರೂಪಿಯಾದ ಮಹೇಶ್ವರ, ನನಗೆ ಬೇರೆ ಯಾವ ವರವೂ ಬೇಡ. ನನಗೆ ಪತಿಭಿಕ್ಷೆಯನ್ನು ನೀಡು.

**ಮಹಾದೇವ :-** ''ಮಂಗಳಾಂಗಿಯೇ, ನೀನು ಚಿಂತೆಯನ್ನು ಬಿಡು. ನೀನು ಸ್ಮರಣೆಯನ್ನು ಮಾಡಿದ ಕೂಡಲೇ ನಿನ್ನ ಮನದನ್ನನಾದ ಮದನನು ಕಣ್ಣಿಗೆ ಗೋಚರಿಸುತ್ತಾನೆ. ಕೃಷ್ಣಾವತಾರ ಕಾಲದಲ್ಲಿ ಶ್ರೀಕೃಷ್ಣರುಕ್ಮಿಣಿಯರಿಂದ ಕಾಮನು ಪುತ್ರನಾಗಿ ಜನಿಸಿ ಪ್ರದ್ಯುಮ್ನ ಎಂಬ ಹೆಸರಿನಿಂದ ಪ್ರಸಿದ್ಧನಾಗುವನು. ನಿನ್ನ ಪತಿಯಾದ ಕಾಮನು ಈಗ ಅನಂಗನಾದರೂ ಆಗ ಸಾಂಗನಾಗಿ ಸರ್ವಾಂಗಸುಂದರನಾಗಿ ನಿನ್ನ ಪತಿಯಾಗಿ ನಿನ್ನೊಡನೆ ಸರಸ ಸುಂದರವಾಗಿ ಸಂಸಾರವನ್ನು ಸಾಗಿಸುವನು. ಚಿಂತಿಸದಿರು.''

ಮಹಾದೇವನ ಸಾಂತ್ವನಪರವಾದ ನುಡಿಯಿಂದ ಸಂತುಷ್ಟಳಾಗಿ ತನ್ನ ಮನೆಗೆ ಮರಳಿ ಬಂದಳು. ತನ್ನ ಪತಿಯಾದ ಮನ್ಮಥನನ್ನು ಮನಸ್ಸಿನಿಂದ ಸ್ಮರಿಸಿದಳು. ಮಹಾದೇವರ ವರದ ಪ್ರಭಾವದಿಂದ ಕಾಮನಿಗೆ ದೇಹವಿಲ್ಲದಿದ್ದರೂ ಸದೇಹವಾಗಿ ಬಂದು ರತಿಯ ಕಣ್ಣಿಗೆ ಪ್ರೀತಿಯನ್ನುಂಟುಮಾಡಿದನು. ಅನಂತರ ಆ ಅನಂಗನು ಅರ್ಧಾಂಗಿಯೊಡನೆ ಮಹಾದೇವನ ಬಳಿಗೆ ಬಂದು ನಮಸ್ಕರಿಸಿ ಬೇಡಿಕೊಂಡನು. ''ದೇವದೇವೋತ್ತಮನಾದ ಮಹಾದೇವನೆ, ಮೂವತ್ಮೂರುಕೋಟಿ ದೇವತೆಗಳಿಗೆಲ್ಲ ಉಪಕಾರ ಮಾಡಲಿಕ್ಕೆ ಹೋಗಿ ನಾನು ನಿನ್ನ ಕೋಪಕ್ಕೆ ಬಲಿಯಾದೆ. ನಿನ್ನ ಕಡೆಗಣ್ಣಿನ ಸುಡುನೋಟದಿಂದ ನಾನು ಬೆಂದು ಬೂದಿಯಾಗಿ ಬಿದ್ದೆನು. ಉಪಕಾರ ಮಾಡಲಿಕ್ಕೆ ಹೋಗಿ ನನಗೆ ಈ ದುರ್ಗತಿಯು ಬಂದಿತು. ನನಗೆ ಅವಯವಗಳೇ ಇಲ್ಲದಾಗಿವೆ. ಈಗ ನಾನು ಪ್ರೇತಪ್ರಾಯನಾಗಿದ್ದೇನೆ. ನನ್ನಲ್ಲಿ ಕರುಣೆತೋರು.''

ಮದನನ ಈ ಬೇಡಿಕೆಯನ್ನು ನೋಡಿ ಮಹಾದೇವನ ಮನಸ್ಸು ಕರಗಿತು. ಮಹಾಗಣಪತಿಯ ಏಕಾಕ್ಷರ ಮಂತ್ರವನ್ನು ಪರಶಿವನು ಆ ಪಂಚಬಾಣನಿಗೆ ಉಪದೇಶಿಸಿದನು. ಆಗ ಕಾಮನು ಶಂಕರನ ಅಪ್ಪಣೆಯಂತೆ ಏಕಾಕ್ಷರ ಬೀಜಮಂತ್ರದಿಂದ ಗಣಪತಿಯನ್ನು ಕುರಿತು ಒಂದು ನೂರು ವರ್ಷ ಉಗ್ರವಾದ ತಪಸ್ಸನ್ನು ಮಾಡಿದನು. ರತಿಪತಿಯ ತಪೋನುಷ್ಠಾನಕ್ಕೆ ಮೆಚ್ಚಿ ಗಜಾನನು ಲೋಚನಗೋಚರನಾದನು. ಹತ್ತು

ಭುಜಗಳು, ತಲೆಯ ಮೇಲೆ ರತ್ನ ಖಚಿತವಾದ ದಿವ್ಯ ಕಿರೀಟ, ಕಿವಿಗಳಲ್ಲಿ ಮಣಿಮಯ ಕುಂಡಲಗಳು, ಕೋಟಿಸೂರ್ಯಪ್ರಕಾಶದಿಂದ ಹೊಳೆಯುತ್ತಿರುವ ಆ ದೇವಾಧಿ ದೇವನನ್ನು ಇಂದ್ರಾದಿದೇವತೆಗಳೂ, ಅನೇಕ ಮುನಿ ಮಹರ್ಷಿಗಳು ಬಂದು ಸ್ತೋತ್ರ ಮಾಡಿ ಪೂಜೆಮಾಡಿದರು. ದಿವ್ಯವಾದ ಕಾಂತಿಯಿಂದ ದೇದೀಪ್ಯಮಾನವಾದ ಆ ಭಗವಂತನು ತಪೋನಿರತನಾದ ಮನ್ಮಥನನ್ನು ಅನುಗ್ರಹಿಸಿ ನಿನ್ನ ಮನೋಭಿಲಷಿತವಾದ ವರವನ್ನು ಕೇಳು' ಎಂದು ಹೇಳಿದನು.

**ಕಾಮ** :- ಭಗವನ್, ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿರುವದೇ ನಿಜವಾಗಿದ್ದರೆ ನನ್ನನ್ನು ಮೊದಲಿನಂತೆ ದೇಹಸಹಿತನನ್ನಾಗಿ ಮಾಡು. ಮತ್ತು ದೇವತೆಗಳಲ್ಲೆಲ್ಲ ನಾನು ಶ್ರೇಷ್ಠನಾಗುವಂತೆ ಅನುಗ್ರಹಿಸು. ಹಾಗೂ ಮೂರು ಲೋಕಗಳಲ್ಲಿ ನಾನು ವಿಜಯಶಾಲಿಯಾಗುವಂತೆ ಮಾಡು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಮನ್ಮಥತಪೋನುಷ್ಠಾನ ಎಂಬ ಎಂಬತ್ತೆಂಟನೇ ಅಧ್ಯಾಯ ಮುಗಿದುದು*

—○—

## ಶೇಷಗರ್ವಭಂಗ

## ಅಧ್ಯಾಯ - ೮೯

**ಬ್ರಹ್ಮ** :- ಗಜಾನನನು ಕಾಮನು ಬೇಡಿದ ವರಗಳನ್ನೆಲ್ಲ ನೀಡಿ ಅಲ್ಲಿಯೇ ಅಂತರ್ಧಾನ ಹೊಂದಿದನು. ತಾನು ಪ್ರತ್ಯಕ್ಷವಾಗಿ ನೋಡಿದ ಆ ಗಣಪತಿಯ ಒಂದು ದೊಡ್ಡ ಮೂರ್ತಿಯನ್ನು ಅವನು ಆವಿರ್ಭವಿಸಿದ ಸ್ಥಳದಲ್ಲಿ ಪ್ರತಿಷ್ಠಿಸಿ ಭಕ್ತಿಯಿಂದ ಪೂಜಿಸಿದನು. ರತಿಯಾದರೂ ಲಾಡು, ಮೋದಕ ಮೊದಲಾದ ನಾನಾ ಬಗೆಯ ಪಕ್ವಾನ್ನಗಳನ್ನು ಸ್ವಯಂ ತಾನೇ ಸಿದ್ಧಪಡಿಸಿ ಗಣಪತಿಗೆ ನಿವೇದಿಸಿದಳು. ಆ ಗಣೇಶ ವಿಗ್ರಹವು ಅತ್ಯುತ್ಕಟವಾದ ತೇಜಸ್ಸಿನಿಂದ ಹೊಳೆಯುತ್ತಿದ್ದುದರಿಂದ ಅದಕ್ಕೆ ಮಹೋತ್ಕಟ ಎಂಬ ಹೆಸರು ಬಂದಿತು.

ಮುಂದೆ ಅನೇಕ ಕಾಲ ಕಳೆದ ಬಳಿಕ ದ್ವಾಪರಯುಗದ ಕೊನೆಯ ಭಾಗದಲ್ಲಿ ವಿಷ್ಣುವು ಕೃಷ್ಣನಾಗಿ ಅವತರಿಸಿದನು. ಅವನ ಪಟ್ಟಮಹಿಷಿಯಾದ ರುಕ್ಮಿಣಿದೇವಿಯ ಗರ್ಭದಲ್ಲಿ ಕಾಮನು ಹುಟ್ಟಿದನು. ಇತ್ತ ಮಗು ಹುಟ್ಟಿದ ಕೂಡಲೇ ಅತ್ತ ನಾರದರು ಶಂಬರಾಸುರನ ಬಳಿಗೆ ಹೋಗಿ ''ನಿನಗೆ ಮೃತ್ಯುವಾಗಲಿರುವ ಮಗು ದ್ವಾರಕೆಯಲ್ಲಿ ಕೃಷ್ಣನಿಂದ ರುಕ್ಮಿಣೀದೇವಿಯಲ್ಲಿ ಜನಿಸಿದೆ.'' ಎಂದು ಹೇಳಿದರು.

ಇದನ್ನು ಅರಿತಕೂಡಲೇ ಶಂಬರಾಸುರನು ತನ್ನ ಮಾಯೆಯಿಂದ ಗರ್ಭಾಗಾರದಿಂದಲೇ ಆ ಹುಟ್ಟಿದ ಹಸುಳೆಯನ್ನು ಅಪಹರಿಸಿ ಸಮುದ್ರಮಧ್ಯದಲ್ಲಿ ಬಿಸುಟನು. ಆ ಶಿಶುವನ್ನು ಸಮುದ್ರದಲ್ಲಿ ಒಂದು ದೊಡ್ಡ ಮೀನ ನುಂಗಿತು. ಬೆಸ್ತರು ಗಾಳ ಹಾಕಿ ಆ ಮೀನು ಹಿಡಿದರು. ಮೀನದ ಹೊಟ್ಟೆಯಲ್ಲಿ ತೇಜಃಪುಂಜವಾದ ಮಗು ಇದ್ದುದನ್ನು ನೋಡಿ ನಂಬಿಗಸ್ತರಾದ ಆ ಬೆಸ್ತರು ಆ ಶಿಶುವನ್ನು ತಮ್ಮ ರಾಜನಾದ ಶಂಬರಾಸುರನಿಗೆ ಕಾಣಿಕೆಯನ್ನಾಗಿ ಅರ್ಪಿಸಿದರು.

ಕಾಮನು ರುಕ್ಮಿಣಿಯಲ್ಲಿ ಜನ್ಮವಿತ್ತದು ಕೇಳಿದೊಡನೆ ವಿರಹ ಸಂತಪ್ತಳಾದ ರತಿಯು ಮಾಯಾವತಿ ಎಂಬ ಹೆಸರಿನಿಂದ ಶಂಬರಾಸುರನ ಬಂಧನಕ್ಕೆ ಸಿಲುಕಿದ್ದಳು. ವ್ರತನಿಯ ಮಗಳ ನೆಪಮಾಡಿ ಆ ಅಸುರನು ತನ್ನ ಮೈಮುಟ್ಟದಂತೆ ಜಾಗರೂಕಳಾಗಿದ್ದಳು. ತನ್ನ ಮಧುರಮಾತುಗಳಿಂದ ಅವನನ್ನು ಮರುಳಮಾಡಿ ಅವನಲ್ಲಿ ಇದ್ದ ಮಾಯಾವಿದ್ಯೆಗಳ ರಹಸ್ಯಗಳನ್ನೆಲ್ಲ ತಿಳಿದುಕೊಂಡಳು. ಬೆಸ್ತರು ತಂದು ಕೊಟ್ಟ ಆ ಮಗುವನ್ನು ರಕ್ಷಿಸಲು ಶಂಬರಾಸುರನು ಮಾಯಾವತಿಗೆ ಒಪ್ಪಿಸಿದನು. ಆ ಕೂಸನ್ನು ಕಂಡಕೂಡಲೇ ಅವಳಿಗೆ ಪ್ರೇಮವು ಉಕ್ಕಿಬಂದಿತು. ನಾರದರು. ಒಂದು ದಿನ ಅಲ್ಲಿಗೆ ಬಂದು ಏಕಾಂತದಲ್ಲಿ ಮಾಯಾವತಿಯನ್ನು ಸಂಧಿಸಿ ''ಇವನೇ ನಿನ್ನ ಪತಿಯಾದ ಕಾಮ. ಕೃಷ್ಣಕುಮಾರನಾಗಿ ಆ ಮನ್ಮಥನೇ ಹುಟ್ಟಿಬಂದಿದ್ದಾನೆ. ನೀನು ಇವನನ್ನು ಪೋಷಿಸಿ ದೊಡ್ಡವನನ್ನಾಗಿ ಮಾಡಿ ನೀನು ಶಂಬರಾಸುರನಿಂದ ಕಲಿತ ಮಾಯಾವಿದ್ಯೆಗಳನ್ನೆಲ್ಲ ಕಲಿಸಿಕೊಡು. ಪ್ರಬುದ್ಧನಾದ ಅವನು ಆ ವಿದ್ಯೆಯಿಂದ ಶಂಬರಾಸುರನನ್ನು ಕೊಂದು ನಿನ್ನನ್ನು ಕರೆದುಕೊಂಡು ಹೋಗುವನು.''

ನಾರದರ ಮಾತಿನಂತೆ ಮಾಯಾವತಿಯು ಆ ಮಗುವನ್ನು ರಕ್ಷಿಸಿ ಪ್ರಬುದ್ಧನಾದ ಬಳಿಕ ಎಲ್ಲ ಮಾಯಾವಿದ್ಯೆಗಳನ್ನು ಕಲಿಸಿದಳು. ಅದರ ಬಲದಿಂದ ಆ ಪ್ರದ್ಯುಮ್ನನು ಶಂಬರಾಸುರನೊಡನೆ ಕಾದು ಗೆದ್ದು ಅವನನ್ನೂ ಅವನ ಅನುಯಾಯಿಗಳಾದ ಬಲಿಷ್ಠರಾಕ್ಷಸರನ್ನೂ ಕೊಂದು ತನ್ನ ಪತ್ನಿಯಾದ ಮಾಯಾವತಿಯೊಡನೆ ದ್ವಾರಕಾಪಟ್ಟಣಕ್ಕೆ ಬಂದು ಇಳಿದನು.

ಪ್ರದ್ಯುಮ್ನನು ಬಂದಾಗ ಕೃಷ್ಣನ ರಾಣಿಯರೆಲ್ಲರೂ ಮಗನಲ್ಲಿರುವ ತಂದೆಯ ಹೋಲಿಕೆಯಿಂದ ಕೃಷ್ಣನೇ ಬಂದ ಎಂದು ಥಟ್ಟನೇ ಎದ್ದುನಿಂತರು. ಆಗ ನಾರದರು ಅಲ್ಲಿಗೆ ಬಂದು 'ಇವನು ಕೃಷ್ಣನಲ್ಲ, ಕೃಷ್ಣಪುತ್ರ ಪ್ರದ್ಯುಮ್ನ' ಎಂದು ಹೇಳಲು ಎಲ್ಲರಿಗೂ ಪರಮಾನಂದವಾಯಿತು. ಕೃಷ್ಣ ರುಕ್ಮಿಣಿಯರು ಆ ತಮ್ಮ ಮುದ್ದು ಮಗುವನ್ನು ಮುದ್ದಾಡಿ ಆನಂದತುಂದಿಲಾದರು.

ಮುಂದೇ ಇದೇ ಸ್ಥಳದಲ್ಲಿ ರಾಮನು ವನವಾಸಕ್ಕೆ ಬಂದಾಗ ಲಕ್ಷ್ಮಣನು ಶೂರ್ಪನಖಿಯ ಕಿವಿಮೂಗುಗಳನ್ನು ಕತ್ತರಿಸಿದನು. ಅಂದಿನಿಂದ ಈ ಪ್ರದೇಶವು ನಾಸಿಕಕ್ಷೇತ್ರ ಎಂದೇ ಪ್ರಸಿದ್ಧವಾಗಿದೆ. ಜನಸ್ಥಾನದ ಆ ಪ್ರದೇಶದಲ್ಲಿ ಇಂದಿಗೂ ಮೋದಕದಂತೆ ಇರುವ ಬೆಣಚುಕಲ್ಲುಗಳು ತೋರುವವು. ಸರ್ವಸಿದ್ಧಿಕರವಾದ ಗಜಾನನ್ನು ಹಿಂದೆ ಆದಿಶೇಷನು ಗಜಾನನನ ಷಡಕ್ಷರಿಮಂತ್ರವನ್ನು ಜಪಿಸಿದಂತೆ ಶ್ರದ್ಧೆಯಿಂದ ಮನ್ಮಥನು ಕೂಡ ಜಪಿಸಿದನು. ಗಜಾನನನು ಸುಪ್ರಸನ್ನನಾಗಿ ಅವರು ಬೇಡಿದ ವರಗಳನ್ನು ನೀಡಿದ್ದರಿಂದ ರತಿಮನ್ಮಥರು ಮೊದಲಿನಂತೆ ಅತ್ಯಂತ ಸಂತೋಷದಿಂದ ಇರತೊಡಗಿದರು.

**ವ್ಯಾಸ** :- ಪಿತಾಮಹ, ಆದಿಶೇಷನು ಗಣಪತಿಯನ್ನು ಯಾವ ಕಾರಣಕ್ಕಾಗಿ ಪೂಜಿಸಿದ ? ಹೇಗೆ ಅರ್ಚಿಸಿದ ?

**ಬ್ರಹ್ಮ** :- ಒಂದಾನೊಂದು ಕಾಲದಲ್ಲಿ ಪಾರ್ವತೀ ಪರಮೇಶ್ವರರು ರಮಣೀಯವೂ ಪ್ರಶಾಂತವೂ ಆದ ಕೈಲಾಸ ಪರ್ವತದ ರಮ್ಯ ಸ್ಥಳದಲ್ಲಿ ಆನಂದದಿಂದ ವಿಹರಿಸುತ್ತಿದ್ದರು.

ಅವರನ್ನು ಕಾಣಲು ದೇವಾಧಿದೇವತೆಗಳು ವಸಿಷ್ಠ ವಾಮದೇವ ಮೊದಲಾದ ಮುನಿ ಪುಂಗವರು ಅಲ್ಲಿಗೆ ಬಂದು ಬಗೆಬಗೆಯ ಸ್ತೋತ್ರಗಳಿಂದ ಆ ಪಾರ್ವತೀಪ್ರಾಣ ವಲ್ಲಭನಾದ ಪರಶಿವನನ್ನು ಸ್ತೋತ್ರಮಾಡುತ್ತಿದ್ದರು. ಅದನ್ನು ಕೇಳಿ ಅಲ್ಲಿಯೇ ಇದ್ದ ಆದಿಶೇಷನಿಗೆ ಅಸೂಯೆಯಾಯಿತು. ಅವನು ತನ್ನ ಮನಸ್ಸಿನಲ್ಲಿ ''ಮೂರು ಲೋಕಗಳಲ್ಲಿ ನಾನೇ ಶ್ರೇಷ್ಠತಮ. ನನಗಿಂತ ಶ್ರೇಷ್ಠರು ಬೇರೆ ಯಾರೂ ಇಲ್ಲ. ದೇವತೆಗಳಿಗೆಲ್ಲ ದೊಡ್ಡ ದೇವತೆಯೆಂದರೆ ಮಹಾದೇವ. ಆ ಮಹಾದೇವನ ತಲೆಯ ಮೇಲೆ ಹತ್ತಿನಿಂತ ಮಹಾನುಭಾವನೆಂದರೆ ಆದಿಶೇಷನಾದ ನಾನು. ಹದಿನಾಲ್ಕು ಲೋಕಗಳನ್ನು ಹೆಡೆಯಮೇಲೆ ಹೊತ್ತುನಿಂತ ದೇವನು ನನ್ನ ಹೊರತು ಯಾವನು ಇರುವನು ? ನಮ್ಮ ವಂಶಜರಲ್ಲಿ ಶ್ರೇಷ್ಠನೆನಿಸಿದ ವಾಸುಕಿಯನ್ನು ಹಗ್ಗದಂತೆ ಉಪಯೋಗಿಸಿ ಕ್ಷೀರಸಮುದ್ರವನ್ನು ಕಡೆದಿದ್ದರಿಂದಲೇ ದೇವತೆಗಳಿಗೆ ಅಮೃತವು ದೊರೆಯಿತು. ನಾವು ದೇವತೆಗಳಿಗೆ ಸಮುದ್ರಮಂಥನ ಕಾರ್ಯದಿಂದಲೇ ದೇವತೆಗಳಿಗೆಲ್ಲ ಅಮರತ್ವವು ಬಂದಿರುವದು. ಅಂದಮೇಲೆ ನಮಗಿಂತ ಶ್ರೇಷ್ಠರು ಯಾರಿರುವರು ? ನನ್ನ ಸರ್ವೋತ್ತಮತ್ವವನ್ನು ತಿಳಿಯದ ಈ ದೇವತೆಗಳ ವ್ಯರ್ಥವಾಗಿ ಈ ಪರಮೇಶ್ವರನನ್ನು ಹೊಗಳಿ ಹಾಡುತ್ತಿರುವರು.'' ಹೀಗೆ ಮನಸ್ಸಿನಲ್ಲಿಯೇ ಸರ್ಪರಾಜನು ವಿಚಾರಿಸುತ್ತಾ ಇರುವದು ಸರ್ವಜ್ಞನಾದ ಮಹಾದೇವನಿಗೆ ತಿಳಿದುಹೋಯಿತು. ಆದಿಶೇಷನ ಈ ಗರ್ವವನ್ನು ಆಗಲೇ ನಾಶಪಡಿಸಬೇಕೆಂದು ಅವನು ಸಂಕಲ್ಪಿಸಿದನು.

ಸರ್ವಸಮರ್ಥನಾದ ಶಂಕರನು ತನ್ನ ಮೈಮೇಲೆ ಹರಿದಾಡುವ ಆ ಶೇಷನನ್ನು ತನ್ನ ಕೈಯಿಂದ ಹಿಡಿದು ನೆಲಕ್ಕೆ ಅಪ್ಪಳಿಸಿದನು. ಕೂಡಲೇ ಶೇಷನ ಪ್ರತಿಯೊಂದು ತಲೆಯೂ ಹತ್ತು ಹತ್ತು ಭಾಗವಾಗಿ ಒಡೆದು ಹೋಯಿತು. ಈ ಭೂತಲ ಆಸ್ಫೋಟದ ರೂಪವಾದ ಈ ಭಯಂಕರ ಆಘಾತವನ್ನು ತಾಳಲಾರದೇ ಶೇಷನು ಮೂರ್ಛೆಹೋದನು. ಸತ್ತವನಂತೆ ನಿಶ್ಚೇಷ್ಟಿತನಾಗಿ ಒಂದು ಪ್ರಹರದವರೆಗೆ ಶವದಂತೆ ಬಿದ್ದುಕೊಂಡನು. ಅವನ ತಲೆಗಳು ಒಡೆದು ಸಾವಿರಹೋಳಾದ್ದರಿಂದ ಅವನಿಗೆ ಸಹಸ್ರಫಣ ಎಂದು ಹೆಸರಾಯಿತು. ಆದಿಶೇಷನು ಆ ಭಯಂಕರವಾದ ನೆಲಕ್ಕೆ ಅಪ್ಪಳಿಸಿದ್ದರಿಂದ ಉಂಟಾದ ನೋವನ್ನು ತಾಳಲಾರದೇ ಬಹಳ ದುಃಖಿಸಲು ತೊಡಗಿದನು. ಇಷ್ಟುದಿನ ಪಾರ್ವತೀರಮಣನ ಶರೀರದ ಆಭರಣದಂತೆ ಇದ್ದ ಅವನು ಅಹಂಕಾರದಿಂದ ಶಂಕರನ ನಿಗ್ರಹಕ್ಕೆ ಪಾತ್ರನಾಗಿ ತಲೆಒಡೆದುಕೊಂಡು ಅವನಿಗೆ ಅಲುಗಾಡಲು ಕೂಡ ಶಕ್ತಿಯಿರಲಿಲ್ಲ. ಆಗ ಅಲ್ಲಿಗೆ ತ್ರಿಲೋಕ ಸಂಚಾರಿಗಳಾದ ನಾರದರು ಬಂದರು. ನಾರದರು ಸರ್ಪಸಾರ್ವಭೌಮನ ಈ ದುರಂತದುಃಖವನ್ನು ಕಂಡು ಮನಸ್ಸಿನಲ್ಲಿ ಮಮ್ಮಲನೆ ಮರುಗಿ ಕೊನೆಗೆ ಪ್ರಶ್ನೆ ಕೇಳಿದರು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ*
*ಶೇಷಗರ್ವಭಂಗ ಎಂಬ ಎಂಬತ್ತಾರನೇ ಅಧ್ಯಾಯ ಮುಗಿದುದು*



**ನಾರದ :-** ಆದಿಶೇಷ, ಇದು ಏನು ನಿನ್ನ ದುರವಸ್ಥೆ ? ನಿನ್ನ ತಲೆಗಳು ಏಕೆ ಸೀಳಿವೆ ? ನಡೆದ ಸಂಗತಿಯನ್ನೆಲ್ಲ ನನಗೆ ತಿಳಿಸು.

**ಶೇಷ :-** ಮಹಾತ್ಮರೇ, ನಾನು ಗರ್ವದಿಂದ ನಾನೇ ಸರ್ವಶ್ರೇಷ್ಠ ಎಂದು ಅಹಂಕಾರಯುಕ್ತನಾಗಿದ್ದೆ. ಋಷಿಗಳು ಮುನಿಗಳು ಮಾಡುವ ಪರಮೇಶ್ವರನ ಸ್ತೋತ್ರಪ್ರಾರ್ಥನೆಗಳು ನನ್ನಲ್ಲಿ ಅಸೂಯೆಯನ್ನು ಉಂಟುಮಾಡಿದ್ದವು. ಇದನ್ನು ಸರ್ವಜ್ಞನಾದ ಪರಮೇಶ್ವರನು ತಿಳಿದು ನನ್ನನ್ನು ನೆಲಕ್ಕೆ ಒಗೆದು ಅಪ್ಪಳಿಸಿ ನನ್ನ ತಲೆಯನ್ನು ಒಡೆದು ಸಾವಿರ ಹೋಳುಗಳನ್ನಾಗಿ ಮಾಡಿದ್ದಾನೆ. ಇದರಿಂದ ನನ್ನ ದೇಹವು ಜಜ್ಜಿ ನುಜ್ಜುಗೊಜ್ಜಾಗಿ ಹೋಗಿದೆ. ಭೂಮಿಯ ಭಾರವನ್ನು ಹೊರಲು ನನಗೆ ಮೊದಲಿನಂತೆ ಶಕ್ತಿಯಿಲ್ಲದಂತಾಗಿದೆ. ಇದಕ್ಕೆ ಏನು ಉಪಾಯ ? ನನಗೆ ಪುನಃ ಭೂಭಾರವನ್ನು ಹೋರುವ ಶಕ್ತಿಯು ಹೇಗೆ ಬರುವದು ? ಅದರ ಉಪಾಯವನ್ನು ಹೇಳಿರಿ.

ಆಗ ನಾರದರು ಆದಿಶೇಷನಿಗೆ ಗಣೇಶನ ಮೂಲಮಂತ್ರವನ್ನು ಉಪದೇಶಿಸಿದರು. ಅವರ ಉಪದೇಶದಂತೆ ಆ ಸರ್ಪರಾಜನು ಒಂದು ಸಾವಿರವರ್ಷಗಳವರೆಗೆ ಅತ್ಯುಗ್ರವಾದ ತಪಸ್ಸನ್ನು ಆಚರಿಸಿದನು. ಮತ್ತು ಆ ಗಣೇಶಮೂಲಮಂತ್ರವನ್ನು ಬಿಟ್ಟುಬಿಡದಂತೆ ಒಂದು ಸಹಸ್ರವರ್ಷಗಳವರೆಗೆ ಜಪಿಸಿದನು. ಆಗ ಆ ದೇವದೇವನು ಪ್ರಸನ್ನನಾಗಿ ತನ್ನ ದರ್ಶನಭಾಗ್ಯವನ್ನು ದಯಪಾಲಿಸಿದನು. ಮತ್ತು ಸುಪ್ರಸನ್ನ ಮನಸ್ಸಿನಿಂದ ಅವನಿಗೆ ಬೇಕಾದ ವರವನ್ನು ಕೇಳು ನೀಡುತ್ತೇನೆ ಎಂದು ಹೇಳಿದನು. ಆಗ ಆದಿಶೇಷನು ಆ ದೇವದೇವನನ್ನು ಬಗೆಬಗೆಯಿಂದ ಸ್ತೋತ್ರಮಾಡಿ ಕೇಳಿಕೊಂಡನು. ''ಭಗವನ್, ನನಗೆ ಮೊದಲಿನಂತೆ ಭೂಭಾರವನ್ನು ಹೊರುವ ಸಾಮರ್ಥ್ಯವು ಪ್ರಾಪ್ತವಾಗಬೇಕು. ಹೋಳಾದ ನನ್ನ ತಲೆಯ ಎಲ್ಲ ಭಾಗಗಳೂ ಒಂದೊಂದು ಹೆಡೆಯಾಗಿ ನಾನು ಸಹಸ್ರಫಣಾ ಮಂಡಿತನಾಗಿ ಸರ್ವದೇವತೆಗಳಲ್ಲಿ ಶ್ರೇಷ್ಠನಾಗಿ ಎಲ್ಲರಿಂದಲೂ ಪೂಜಿತನಾಗಬೇಕು.'' ಆಗ ಪರಮಪ್ರಸನ್ನನಾದ ಆ ಗಜಾನನು ಅವನಿಗೆ ಬೇಡಿದ ವರಗಳನ್ನೆಲ್ಲ ಕರುಣಿಸಿದನು. ಶೇಷನ ತಲೆಯ ಮೇಲೆ ತನ್ನ ವರದಹಸ್ತವನ್ನಿತ್ತು ಅಭಯದಾನ ಮಾಡಿದನು. ಮತ್ತು ತನ್ನ ವಿಶ್ವರೂಪವನ್ನು ಆದಿಶೇಷನಿಗೆ ತೋರಿಸಿದನು. ಗಣಪತಿಯ ವಿರಾಟ್‌ರೂಪವು ಭೂಮ್ಯಾಕಾಶಗಳನ್ನೆಲ್ಲ ವ್ಯಾಪಿಸಿ ನಿಂತುಕೊಂಡಿತ್ತು. ಭೂಮಿಯೇ ಅವನ ಕಾಲು. ದಿಕ್ಕುಗಳೇ ಅವನ ಕಿವಿ. ಸೂರ್ಯನೇ ಅವನ ಕಣ್ಣು, ಗಿಡ, ಮರಬಳ್ಳಿಗಳೇ ಅವನ ದೇಹದಲ್ಲಿ ಬೆಳೆದಿರುವ ರೋಮಗಳು. ಮೋಡಮಳೆಯೇ ಬೆವರು. ಅವನ ದೊಡ್ಡದಾದ ಉದರದಲ್ಲಿ ಸಕಲಜಗತ್ತು ನಾಲ್ಕುಸಮುದ್ರಗಳು ಅಡಗಿದ್ದವು. ಅನಂತಮುಖ, ಅಸಂಖ್ಯನೇತ್ರ, ಅನೇಕರೂಪ, ವಿವಿಧಶಕ್ತಿ ಇಂಥ ತೇಜೋಮಯ ಮೂರ್ತಿಯನ್ನು ನೋಡಿ ಆದಿಶೇಷನು ದಿಗ್ಭ್ರಾಂತನಾಗಿ ನಿಂತುಕೊಂಡನು.

ಆಗ ಭಗವಂತನ ಆ ವಿರಾಟ್ ರೂಪವನ್ನು ನೋಡಲು ಶಕ್ತಿಸಾಲದೇ ಅವನು ಕೈಮುಗಿದು ಸೌಮ್ಯಸ್ವರೂಪವನ್ನು ಧರಿಸಬೇಕೆಂದು ಕೇಳಿಕೊಂಡನು. ಆಗ ಅವನ ಪ್ರಾರ್ಥನೆಯಂತೆ ಗಜಾನನು ಹತ್ತು ಭುಜವುಳ್ಳ ಸಿಂಹವಾಹನವಾದ ತನ್ನ ಸೌಮ್ಯಸ್ವರೂಪವನ್ನು ಧರಿಸಿದನು. ಮತ್ತು ಆದಿಶೇಷನು ಕೇಳಿದ ಎಲ್ಲ ವರವನ್ನು ಕೊಟ್ಟು ಭೂಭಾರವನ್ನು ಹೊರುವ ಸಾಮರ್ಥ್ಯವನ್ನು ದಯಪಾಲಿಸಿದನು. ಗಜಾನನ ವರದಿಂದ ಆದಿಶೇಷನು ಮೊದಲಿನಂತೆ ಶಕ್ತಿಯನ್ನು ಹೊಂದಿ ಧರಣೀಧರನಾದನು.

ವರಗಳನ್ನು ಇತ್ತು ಗಜಾನನನು ಅಂತರ್ಧಾನ ಹೊಂದಿದ ಬಳಿಕ ಆದಿಶೇಷನು ಅದೇ ಸ್ಥಳದಲ್ಲಿ ಒಂದು ಗಣಪತಿಯ ಮೂರ್ತಿಯನ್ನು ಸ್ಥಾಪಿಸಿ ಶಾಸ್ತ್ರೋಕ್ತವಿಧಿಯಿಂದ ಪೂಜೆಯನ್ನು ಮಾಡಿದನು. ಅದಕ್ಕೆ **ಧರಣೀಧರ** ಎಂದು ಹೆಸರಿಟ್ಟನು. ಆ ಕ್ಷೇತ್ರವು ಧರಣೀಧರ ಕ್ಷೇತ್ರ ಎಂದು ಜಗತ್ತಿನಲ್ಲಿ ಪ್ರಸಿದ್ಧವಾಯಿತು.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ಶೇಷೋಪಾಖ್ಯಾನ ಎಂಬ ತೊಂಬತ್ತನೇ ಅಧ್ಯಾಯ ಮುಗಿದುದು*

—○—

## ಕಶ್ಯಪನ ಸೃಷ್ಟಿ

## ಅಧ್ಯಾಯ - ೯೧

**ಬ್ರಹ್ಮ:**-ವ್ಯಾಸ, ಆ ಗಜಾನನ ಮತ್ತೊಂದು ಮಹಾಮಹಿಮೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಪ್ರಳಯಾ ನಂತರದಲ್ಲಿ ಸರ್ವದೇವೋತ್ತಮನಾದ ಗಣಪತಿಯು ಬ್ರಹ್ಮನಿಗೆ (ನನಗೆ) 'ನಾನಾ ಬಗೆಯ ಸೃಷ್ಟಿಕಾರ್ಯವನ್ನು ಆರಂಭಿಸು' ಎಂದು ಅಪ್ಪಣೆಯನ್ನು ಮಾಡಿದನು. ಅವನ ಆಜ್ಞಾನುಸಾರವಾಗಿ ನಾನು ಮೊದಲು ಏಳು ಜನ ಮಕ್ಕಳನ್ನು ಮನಸ್ಸಿನಿಂದ ಸೃಜಿಸಿದೆನು. ಕಶ್ಯಪ, ಗೌತಮ, ಜಮದಗ್ನಿ, ವಶಿಷ್ಠ, ಭರದ್ವಾಜ ಅತ್ರಿ, ವಿಶ್ವಾಮಿತ್ರ ಈ ಏಳು ಜನ ಸಪ್ತರ್ಷಿಗಳು ಬ್ರಹ್ಮಮಾನಸಪುತ್ರರಾಗಿ ಸರ್ವವಿದ್ಯಾಪಾರಂಗತರೂ ಮಹಾಪ್ರಭಾವಶಾಲಿಗಳೂ ಆದರು. ಅವರಲ್ಲಿ ಹಿರಿಯನಾದ ಕಶ್ಯಪನು ನನ್ನ ಬಳಿಗೆ ಬಂದು ತನ್ನ ಆರುಜನ ತಮ್ಮಂದಿರೊಡನೆ ನಮಸ್ಕರಿಸಿ ''ಪೂಜ್ಯತಂದೆಯೇ, ನಮ್ಮನ್ನು ನೀನು ಏಕೆ ಸೃಷ್ಟಿಸಿದೆ ? ನಾವು ಮಾಡಬೇಕಾದ ಕಾರ್ಯವೇನು ? ಅಪ್ಪಣೆ ಕೊಡು'' ಎಂದು ಕೇಳಿಕೊಂಡನು. ಆಗ ನಾನು ಅವನಿಗೆ ''ಗಣನಾಯಕನು ನನಗೆ ವಿವಿಧ ಸೃಷ್ಟಿಯನ್ನು ರಚಿಸಲು ಆಜ್ಞೆಯನ್ನು ನೀಡಿದ್ದಾನೆ. ಈ ಸೃಷ್ಟಿಕಾರ್ಯದಲ್ಲಿ ನೀನು ನನಗೆ ಸಹಾಯಕನಾಗಿ ನಾನಾ ಬಗೆಯ ಸೃಷ್ಟಿಕಾರ್ಯವನ್ನು ಮುಂದುವರೆಸು'' ಎಂದು ಹೇಳಿದೆನು.

ಮಾನಸಪುತ್ರರಲ್ಲಿ ಹಿರಿಯನಾದ ಕಶ್ಯಪನು ನನ್ನ ಆಜ್ಞೆಯಂತೆ ಅರಣ್ಯಕ್ಕೆ ತೆರಳಿ ಗಣಪತಿಯನ್ನು ಕುರಿತು ತಪಸ್ಸನ್ನು ಮಾಡಿ ಗಣಪತಿಯನ್ನು ಸಾಕ್ಷಾತ್ಕರಿಸಿ ಕೊಂಡನು. ಮತ್ತು ಅವನ ವೇದೋಕ್ತವಾದ ಮಹಾಮಹಿಮೆಯನ್ನೂ ಸರ್ವೋತ್ತಮತ್ವವನ್ನೂ ಹಾಡಿ ಹೊಗಳಿ ಕೊಂಡಾಡಿದನು. ಆದರಿಂದ ಗಣೇಶನು ಸುಪ್ರಸನ್ನನಾಗಿ ಬೇಕಾದ ವರವನ್ನು ಬೇಡು ಎಂದು ಹೇಳಿದನು.

ಅದಕ್ಕೆ ಕಶ್ಯಪನು ''ಸೃಷ್ಟಿಯನ್ನು ಮಾಡಬಹುದಾದ ಶಕ್ತಿಯನ್ನು ನನಗೆ ಅನುಗ್ರಹಿಸು. ಮತ್ತು ಅಗಾಧವಾದ ಶಕ್ತಿಸಾಮರ್ಥ್ಯದಿಂದ ಕೂಡಿದ ಒಬ್ಬ ಮಗನನ್ನು ಕರುಣಿಸು. ಹಾಗೂ ನನ್ನಿಂದ ಬಗೆಬಗೆಯಾದ ಸೃಷ್ಟಿಯು ಮುಂದುವರೆಯುಂತೆ ಮಾಡು.''

ಗಣಾಧೀಶನ ಪೂರ್ಣಅನುಗ್ರಹವನ್ನು ಪಡೆದು ಕಶ್ಯಪನು ಮನೆಗೆ ಬಂದ ಬಳಿಕ ದಿತಿ, ಅದಿತಿ, ದನು, ಕದ್ರು, ವಿನತಾ ಎಂಬ ಹದಿನಾರು ಜನ ಕನ್ಯೆಯರನ್ನು ಮದುವೆಯಾದನು. ಅವರೆಲ್ಲರೂ ಗರ್ಭಿಣಿಯರಾಗಿ ಬಗೆಬಗೆಯ ಸಂತಾನವನ್ನು ಪ್ರಸವಿಸಿದರು. ದಿತಿಯು ವಿಕಾರಸ್ವರೂಪದ, ಕ್ರೂರತ್ವಸ್ವಭಾವದ ಅನೇಕಮಂದಿ ರಾಕ್ಷಸರನ್ನು ಹೆತ್ತಳು. ಅದಿತಿಯು ಸೌಮ್ಯಸ್ವಭಾವದ ಸತ್ವಗುಣದಿಂದ ಯುಕ್ತರಾದ ತೇಜಸ್ವಿಗಳಾದ ದೇವತೆಗಳನ್ನೂ, ಗಂಧರ್ವರನ್ನೂ ಹೆತ್ತಳು. ದನು ಎಂಬ ಕಶ್ಯಪಭಾರ್ಯೆಯು ದಾನವರಿಗೆ ಜನ್ಮವಿತ್ತಳು.

ಇದರಂತೆ ಕದ್ರು ಎಂಬ ಕಶ್ಯಪ ಕುಟುಂಬಿನಿಯು ಸರ್ಪಗಳಿಗೆ ಜನ್ಮವಿತ್ತಳು. ವಿನತಾ ಎಂಬ ಕಶ್ಯಪಪತ್ನಿಯಿಂದ ಸರ್ವಸಮರ್ಥನೂ ಮಹಾತೇಜಸ್ವಿಯೂ ಆದ ಗರುಡನೂ ಮತ್ತು ಸೂರ್ಯಸಾರಥಿಯೂ ಆದ ಅರುಣನೂ ಹುಟ್ಟಿದರು. ಇದರಂತೆ ಕಶ್ಯಪಭಾರ್ಯೆಯರಿಂದ ಕಿನ್ನರ, ಯಕ್ಷ, ಸಿದ್ಧ, ಚಾರಣ, ಗುಹ್ಯಕ ಮೊದಲಾದವರೂ ಪಶುಪಕ್ಷಿ, ಖಗ, ಮೃಗ, ಹಸು, ಎಮ್ಮೆ, ಕುದುರೆ, ಕತ್ತೆ ಮೊದಲಾದ ಬಗೆಬಗೆಯ ಪ್ರಾಣಿಗಳು, ಪೃಥಿವಿ, ಪರ್ವತ, ಮರ ಬಳ್ಳಿ ಸಮುದ್ರ ಮೊದಲಾದವುಗಳೂ, ಬಗೆಬಗೆಯ ಧಾನ್ಯಗಳೂ ಗೈರಿಕಾದಿ ಧಾತುಗಳೂ ನವರತ್ನಗಳೂ ಹುಳಹುಪ್ಪಡಿಗಳೂ ಮೊದಲಾದ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಕಶ್ಯಪನ ಬೇರೆ ಬೇರೆ ಹೆಂಡತಿಯರಿಂದ ಹುಟ್ಟಿ ಬಂದವು.

ಮಹರ್ಷಿ ಕಶ್ಯಪನಿಗೆ ತನ್ನ ಈ ಅಸಂಖ್ಯ ಸಂತಾನವನ್ನು ಕಂಡು ಪರಮ ಸಂತೋಷವಾಯಿತು. ಅವನು ತನ್ನ ಮಕ್ಕಳಲ್ಲಿ ಬುದ್ಧಿವಂತನಾದ ಒಬ್ಬನಿಗೆ ಗಣಪತಿಯ ಹದಿನೆಂಟು ವರ್ಣದ ಮಂತ್ರವನ್ನು ಮತ್ತೊಬ್ಬನಿಗೆ ಹದಿನಾರು ವರ್ಣಗಳುಳ್ಳ ಷೋಡಶಾಕ್ಷರ ಮಂತ್ರವನ್ನು ಉಪದೇಶಿಸಿದನು. ಉಳಿದ ಮಕ್ಕಳಲ್ಲಿ ಕೆಲವರಿಗೆ ಏಕಾಕ್ಷರ, ಪಂಚಾಕ್ಷರ, ಅಷ್ಟಾಕ್ಷರ ದ್ವಾದಶಾಕ್ಷರ ಮಂತ್ರಗಳನ್ನು ಉಪದೇಶಿಸಿದನು.

ಅವರೆಲ್ಲರೂ ಸಾವಿರ ವರ್ಷಗಳವರೆಗೆ ಗಣೇಶಮಂತ್ರವನ್ನು ಜಪಿಸಿ, ತಪಿಸಿ ಏಕಾಗ್ರಮನಸ್ಸಿನಿಂದ ಆರಾಧನೆಗೈದರು. ಅವರ ಮಂತ್ರಜಪರೂಪವಾದ ಈ ತಪಸ್ಸಿನಿಂದ ಮಹಾಗಣಪತಿಯು ಸುಪ್ರಸನ್ನನಾಗಿ ತನ್ನ ದಿವ್ಯದರ್ಶನವನ್ನು ಕರುಣಿಸಿದನು. ಆಗ ಅವರೆಲ್ಲರೂ ಭಕ್ತಿ ಭಾವದಿಂದ ಕೈ ಮುಗಿದು

**''ಯತೋ ವೇದವಾಚೋ ವಿಕುಂಠಾ ಮನೋಭಿಃ**
**ಸದಾ ನೇತಿನೇತೀತಿ ತಾ ಯಂ ಘೃಣಂತಿ ।**
**ಪರಬ್ರಹ್ಮರೂಪಂ ಚಿದಾನಂದ ಭೂತಂ**
**ಸದಾ ತಂ ಗಣೇಶಂ ನಮಾಮೋ ಭಜಾಮಃ ॥**

ವೇದವಾಕ್ಯಗಳೂ ಮನಸ್ಸೂ ಯಾವನನ್ನು ಸಂಪೂರ್ಣವಾಗಿ ತಿಳಿಯಲು ಹೋಗಿ ತಿಳಿಯಲಾರದೇ ನೇತಿ, ನೇತಿ ತಿಳಿಯಲಾರೆವು ತಿಳಿಯಲಾರೆವು ಎಂದು ನಿಷೇಧರೂಪವಾಗಿ ಯಾವನನ್ನು ಬಣ್ಣಿಸುವವೋ ಅಂಥ ಪರಬ್ರಹ್ಮಸ್ವರೂಪಿಯೂ ಸಚ್ಚಿದಾನಂದ ವಿಗ್ರಹನೂ ಆದ ಗಣಪತಿಯನ್ನು ನಾವು ನಮಸ್ಕರಿಸುತ್ತೇವೆ. ಮತ್ತು ಭಕ್ತಿಯಿಂದ ಭಜನೆ ಮಾಡುತ್ತೇವೆ.

*ಇತಿ ಗಣೇಶಪುರಾಣದ ಉಪಾಸನಾಖಂಡದಲ್ಲಿ ತೊಂಬತ್ತೊಂದನೇ ಅಧ್ಯಾಯ ಮುಗಿದುದು*

—o—

ಕಶ್ಯಪ ಸಂತತಿಯವರು ಮಾಡಿದ ಈ ಸ್ತೋತ್ರದಿಂದ ಗಣಪತಿಯು ಪ್ರೀತನಾಗಿ ಅವರಿಗೆ ಹೇಳಿದನು.

**ಗಣಪತಿ :-** ಭಕ್ತರೇ, ನೀವು ಮಾಡಿದ ನನ್ನ ಸ್ತೋತ್ರವು ಎಂಟುಶ್ಲೋಕಗಳಿಂದ ಒಡಗೂಡಿದೆ. ಅದರ ಆನುಪೂರ್ವಿ ಹೀಗೆ ಇದೆ.

ಯತೋ ನಂತಶಕ್ತೇರನೇಕಾಶ್ಚ ಜೀವಾ
ಯತೋ ನಿರ್ಗುಣಾದಪ್ರಮೇಯಾದ್‌ಗುಣಾಸ್ತೇ
ಯತೋ ಭಾತಿ ಸರ್ವಂ ತ್ರಿಧಾ ಭೇದಭಿನ್ನಂ
ಸದಾ ತಂ ಗಣೇಶಂ ನಮಾಮೋ ಭಜಾಮಃ ॥

ಯತಶ್ಚಾವಿರಾಸೀತ್ ಜಗತ್ಸರ್ವಮೇತತ್
ತಥಾಽಬ್ಜಾಸನೋ ವಿಶ್ವಗೋ ವಿಶ್ವಗೋಪ್ತಾ
ತಥಾದ್ರಾ ದಯೋ ದೈತ್ಯಸಂಘ್ಯಾ ಮನುಷ್ಯಾಃ
ಸದಾತಂ ಗಣೇಶಂ ನಮೊಮೋ ಭಜಾಮಃ ॥

ಯತೋ ವಹ್ನಿ ಭಾನು-ಭವೋ ಭೂರ್ಜಲಂ ಚ
ಯತಃ ಸಾಗರಾಶ್ಚಂದ್ರಮಾ ವ್ಯೋ ವಾಯುಃ
ಯತಃಸ್ಥಾವರಾ ಜಂಗಮಾ ವೃಕ್ಷ ಸಂಘಾಃ
ಸದಾ ತಂ ಗಣೇಶಂ ನಮಾಮೋ ಭಜಾಮಃ ॥

ಯತೋ ದಾನವಾಃ ಕಿನ್ನರಾ ಯಕ್ಷ ಸಂಘಾಃ
ಯತಶ್ಚಾರಣಾ ವಾರಣಾಃ ಶ್ವಾಪದಾಶ್ಚ
ಯತಃ ಪಕ್ಷಿಕೀಟಾ ಯತೋವೀರುಧಶ್ಚ
ಸದಾ ತಂ ಗಣೇಶಂ ನಮಾಮೋ ಭಜಾಮಃ ॥

ಯತೋ ಬುದ್ಧಿರಜ್ಞಾನನಾಶೋ ಮುಮುಕ್ಷೋಃ
ಯತಃ ಸಂಪದೋ ಭಕ್ತಿ ಸಂತೋಷಮುಖ್ಯಾಃ
ಯತೋ ವಿಘ್ನನಾಶೋ ಯತಃ ಕಾರ್ಯಸಿದ್ಧಿಃ
ಸದಾ ತಂ ಗಣೇಶಂ ನಮಾಮೋ ಭಜಾಮಃ ॥

ಯತಃ ಪುತ್ರಸಂಪತ್ ಯತೋ ವಾಂಛಿತಾರ್ಥೋ
ಭಕ್ತಿರ್ಯತೋ ವಿದ್ಯಾ ತಥಾನೇಕ ರೂಪಾಃ
ಯತಃ ಶೋಕ ಮೋಹೌ ಯತಃ ಕಾಮಏಷಃ
ಸದಾ ತಂ ಗಣೇಶಂ ನಮಾಮೋ ಭಜಾಮಃ ॥

ಯತೋನಂತ ಶಕ್ತಿಃ ಸ ಶೇಷೋ ಬಭೂವ
ಧರಾಧಾರಣೇಽನೇಕರೂಪೋಪಿ ಶಕ್ತಃ

**ಯತೋ ನೇಕ ಸ್ವರ್ಗಲೋಕಾಧಿನಾಥಾಃ**
**ಸದಾ ತಂ ಗಣೇಶಂ ನಮಾಮೋ ಭಜಾಮಃ ॥**

**ಯತೋ ವೇದವಾಚೋ ವಿಕುಂಠಾ ಮನೋಭಿಃ**
**ಸದಾ ನೇತಿನೇತೀತಿ ಯಂ ಘೃಣಂತಿ**
**ಪರಬ್ರಹ್ಮರೂಪಂ ಚಿದಾನಂದ ಭೂತಂ**
**ಸದಾ ತಂ ಗಣೇಶಂ ನಮಾಮೋ ಭಜಾಮಃ ॥**

ಈ ಗಣೇಶಾಷ್ಟಕ ಮಂತ್ರವನ್ನು ಚತುರ್ಥಿಯ ದಿನ ಎಂಟು ಸಲ ಯಾರು ಪಠಿಸುವರೋ ಅವರಿಗೆ ಅಣಿಮಾದಿ ಅಷ್ಟೈಶ್ವರ್ಯಗಳೂ ಸಿದ್ಧಿಸುವವು. ಇದರಂತೆ ಹತ್ತು ಸಲ ಮತ್ತು ಇಪ್ಪತ್ತೊಂದು ಸಲ ಪಠಿಸುವವರ ಇಷ್ಟಾರ್ಥಗಳೆಲ್ಲವೂ ಸಿದ್ಧಿಸಿ ಮನೋರಥಗಳೆಲ್ಲವೂ ಸಂಪನ್ನವಾಗುವವು.'' ಹೀಗೆ ಹೇಳಿ ಕಶ್ಯಪಪುತ್ರರನ್ನೆಲ್ಲ ಅನುಗ್ರಹಿಸಿ ಗಣಾಧಿದೇವನು ಅಂತರ್ಧಾನ ಹೊಂದಿದನು. ಆಗ ಆ ಕಶ್ಯಪಕುಮಾರರು ರತ್ನಖಚಿತವಾದ ಒಂದು ದಿವ್ಯಮಂದಿರವನ್ನು ನಿರ್ಮಿಸಿ ಒಂದು ಸುಂದರ ಗಣಪತಿ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಅದಕ್ಕೆ **ಸುಮುಖ** ಎಂದು ಶುಭನಾಮವನ್ನು ಇಟ್ಟರು. ಮತ್ತೆ ಕೆಲವರು ಅವನನ್ನು ಏಕದಂತ ಎಂದು ಅದೇ ಮೂರ್ತಿಗೆ ಹೆಸರಿಟ್ಟು ಪೂಜಿಸಿದರು.

ಗಂಧರ್ವರು ಕಿನ್ನರರು ಸೇರಿ ಬೇರೊಂದು ಉತ್ಸವಮೂರ್ತಿಯನ್ನು ನಿರ್ಮಿಸಿ ಅದಕ್ಕೆ **ಕಪಿಲ** ಎಂದು ಹೆಸರಿಸಿ ಪೂಜೆಯನ್ನು ಸಲ್ಲಿಸಿದರು. ಮಾನವರೆಲ್ಲರೂ ಒಂದು ಮೂರ್ತಿಯನ್ನು ಪ್ರತಿಷ್ಠಾಪಿಸಿ ಲಂಬೋದರ ಎಂದು ಕರೆದರು. ಕ್ರೂರಪ್ರಾಣಿಗಳೆಲ್ಲ ಸೇರಿ ಒಂದು ಸುಂದರಮೂರ್ತಿಯನ್ನು ನಿರ್ಮಿಸಿ ಅದನ್ನು **ವಿಕಟ** ಎಂದು ಕರೆದರು. ಗುಡ್ಡ, ಬೆಟ್ಟ, ಲತಾಬಳ್ಳಿಗಳು ಭೂಲೋಕದಲ್ಲಿ ಒಂದು ಗಣಪತಿ ಮೂರ್ತಿಯನ್ನು ಸ್ಥಾಪಿಸಿ ಅದಕ್ಕೆ **'ವಿಘ್ನನಾಶಕ'** ಎಂದು ನಾಮಕರಣ ಮಾಡಿ ವಂದಿಸಿ ಪೂಜಿಸಿದವು. ಪಕ್ಷಿಜಾತಿ ಪ್ರಾಣಿಗಳೆಲ್ಲವೂ **'ಗಣಾಧಿಪ'** ಎಂಬ ಮೂರ್ತಿಯನ್ನು ಸ್ಥಾಪಿಸಿದವು. ವಿಷಾದಿ ಸರ್ಪಗಳೆಲ್ಲವೂ ಕೂಡಿ **'ಧೂಮಕೇತು'** ಎಂಬ ಮೂರ್ತಿಯನ್ನು ಪ್ರತಿಷ್ಠಾಪಿಸಿದವು. ಸಮುದ್ರ, ಸರೋವರ ಮೊದಲಾದ ಜಲಾಶಯಗಳು ಕೂಡಿ **'ಗಣಾಧ್ಯಕ್ಷ'** ಎಂಬ ಗಣಪತಿಯ ಮೂರ್ತಿಯನ್ನು ಸ್ಥಾಪಿಸಿ ಪೂಜೆ ಸಲ್ಲಿಸಿದವು. ಕ್ರಿಮಿಕೀಟ ವನಸ್ಪತಿಗಳು **'ಭಾಲಚಂದ್ರ'** ಎಂಬ ಗಜಾನನನ ವಿಗ್ರಹವನ್ನು ಸ್ಥಾಪನೆ ಮಾಡಿದವು. ಉಳಿದ ಚೇತನಪ್ರಾಣಿಗಳೆಲ್ಲ ಸೇರಿ **'ಗಜಾನನ'** ಎಂಬ ಮೂರ್ತಿಯನ್ನು ಸ್ಥಾಪಿಸಿದರು. ಈ ಎಲ್ಲ ಕಶ್ಯಪಸಂತಾನದವರು ಸ್ಥಾಪಿಸಿದ ಗಣಪತಿಯ ನಾಮಗಳನ್ನು ಎಲ್ಲ ಕಾರ್ಯಪ್ರಾರಂಭದಲ್ಲಿ ಮದುವೆ ಮುಂಜಿ ಮೊದಲಾದ ಶುಭಸಮಾರಂಭಗಳಲ್ಲಿ ತಪ್ಪದೇ ಪಠಿಸಬೇಕು.

**ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ**
**ಲಂಬೋದರಶ್ಚ ವಿಕಟೋ ವಿಘ್ನನಾಶೋ ಗಣಾಧಿಪಃ**
**ಧೂಮ್ರಕೇತುರ್ಗಣಾಧ್ಯಕ್ಷೋ ಭಾಲಚಂದ್ರೋ ಗಜಾನನಃ**
**ದ್ವಾದಶೈತಾನಿ ನಾಮಾನಿ ಯಃಪಠೇತ್ ಶೃಣುಯಾದಪಿ**
**ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ**

**ಸಂಗ್ರಾಮೇ ಸಂಕಟೇ ಚೈವ ವಿಘ್ನಸ್ತಸ್ಯ ನ ಜಾಯತೇ**
**ಶುಕ್ಲಾಂಬರಧರಂ ದೇವಂ ಶಶಿವರ್ಣಂ ಚತುರ್ಭುಜಂ**
**ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ**

ಸುಮುಖ, ಏಕದಂತ, ಕಪಿಲ, ಗಜಕರ್ಣ, ಲಂಬೋದರ, ವಿಕಟ, ವಿಘ್ನನಾಶ, ಗಣಾಧಿಪ, ಧೂಮ್ರಕೇತು, ಗಣಾಧ್ಯಕ್ಷ, ಭಾಲಚಂದ್ರ, ಗಜಾನನ ಈ ಹನ್ನೆರಡು ದೇವದೇವನ ದ್ವಾದಶನಾಮಗಳನ್ನು ವಿದ್ಯಾಭ್ಯಾಸವನ್ನು ಆರಂಭಿಸುವಾಗಲೂ ವಿವಾಹಕ್ಕೆ ಮೊದಲು, ಹೊಸಮನೆ ಪ್ರವೇಶಮಾಡುವಾಗ ಯಾರ್ಥವಾಗಿ ಮನೆಬಿಟ್ಟು ಹೊರಗೆ ಹೊರಡುವಾಗ ತಪ್ಪದೇ ಪಠಿಸಬೇಕು. ಇದರಿಂದ ಕೈಕೊಂಡ ಕಾರ್ಯಗಳೆಲ್ಲವೂ ನಿರ್ವಿಘ್ನವಾಗಿ ನೆರವೇರುವವು. ಯುದ್ಧದಲ್ಲಿಯೂ ಸಂಕಟಬಂದಾಗಲೂ ಬಿಳಿಬಟ್ಟೆ ಧರಿಸಿದ, ಚಂದ್ರನಂತೆ ಕಣ್ಮನಗಳನ್ನು ತಣಿಸುವ, ನಾಲ್ಕು ಭುಜಗಳಿಂದ ಶೋಭಿಸುವ ಮಹಾಗಣಪತಿಯನ್ನು ಧ್ಯಾನಮಾಡಿ ಅವನ ಈ ದಿವ್ಯವಾದ ದ್ವಾದಶನಾಮಗಳನ್ನು ಉಚ್ಚರಿಸಿದರೆ ಎಲ್ಲ ವಿಘ್ನಗಳೂ ಪರಿಹಾರವಾಗುವವು. ಸರ್ವಕಾರ್ಯಗಳೂ ಸಿದ್ಧಿಸುವವು. ಕೊನೆಗೆ ಆ ಮನುಷ್ಯನು ಮೋಕ್ಷವನ್ನು ಹೊಂದುತ್ತಾನೆ.

ಲಂಬೋದರ, ವಿಕಟ, ವಿಘ್ನನಾಶ, ಗಣಾಧಿಪ, ಧೂಮ್ರಕೇತು, ಗಣಾಧ್ಯಕ್ಷ, ಭಾಲಚಂದ್ರ, ಗಜಾನನ ಎಂಬ ಈ ಹನ್ನೆರಡು ಗಣಪತಿಯ ನಾಮಗಳನ್ನು ಪ್ರಾತಃಕಾಲದಲ್ಲಿ ಎದ್ದು ಸ್ನಾನಮಾಡಿ ಶುಚಿರ್ಭೂತನಾಗಿ ಭಕ್ತಿಯಿಂದ ಪಠಿಸಿದವನು ಕೃಚ್ಛ್ರ, ಚಾಂದ್ರಾಯಣ ಮೊದಲಾದ ವ್ರತಗಳನ್ನು ಮಾಡಿದ ಪುಣ್ಯಗಳನ್ನು ಪಡೆಯುತ್ತಾನೆ. ಈ ದ್ವಾದಶ ನಾಮಗಳ ಪಠಣ ಮಾಡುವವನ ಸರ್ವಮನೋರಥಗಳೂ ಸಿದ್ಧಿಸುವವು. ಅವನು ಕೊನೆಗೆ ಮೋಕ್ಷವನ್ನು ಹೊಂದುತ್ತಾನೆ. ಅಂಥ ಗಣಪತಿ ನಾಮಪಾಠಕನ ದರ್ಶನದಿಂದಲೇ ಜನರು ಪವಿತ್ರರಾಗುತ್ತಾರೆ. ಆದುದರಿಂದಲೇ ಶೈವರು, ವೈಷ್ಣವರು, ಸೌರರು, ಶಾಕ್ತರು, ಗಾಣಪತ್ಯರೇ ಮೊದಲಾದ ಭಿನ್ನ ಭಿನ್ನ ಸಂಪ್ರದಾಯದ ಜನರು ಕಾರ್ಯಾರಂಭದಲ್ಲಿ ಈ ಗಣೇಶ ದ್ವಾದಶನಾಮ ಪಠಣವನ್ನು ತಪ್ಪದೇ ಮಾಡುತ್ತಾರೆ.

**ಭೃಗು :-** ಸೋಮಕಾಂತರಾಜನೇ, ನಾನು ನಿನಗೆ ಮಹಾಗಣಪತಿಯ ಉಪಾಸನೆ ಹಾಗೂ ನಾಮಜಪಗಳ ಅದ್ಭುತ ಮಹಿಮೆಯನ್ನು ನಾನು ಹೇಳಿದ್ದೇನೆ. ಬ್ರಹ್ಮದೇವನು ಮೆಚ್ಚಿ ವೇದವ್ಯಾಸ ಮಹಾಮುನಿಗೆ ಈ ರಹಸ್ಯ ವಿಷಯವನ್ನು ಹೇಳಿದ್ದನು. ದಿವ್ಯವಾದ ಈ ಪುರಾಣವನ್ನು ಭಕ್ತಿಯಿಂದ ಯಾರು ಶ್ರವಣ ಮಾಡುವವರೋ ಅವರು ಸೋಮಕಾಂತಮಹಾರಾಜನು ಭೃಗು ಮುನಿಗಳಿಂದ ಈ ಕಥೆಯನ್ನು ಆದರಾತಿಶಯವಾದ ಶ್ರವಣ ಮಾಡಿ ಯಾವ ದಿವ್ಯವಾದ ಫಲವನ್ನು ಹೊಂದಿದನೋ ಅಂಥ ಸತ್ಫಲಗಳನ್ನು ನಿಸ್ಸಂದೇಹವಾಗಿ ಪಡೆಯುವನು. ಗಣೇಶನ ಪ್ರಸಾದದಿಂದ ಅವನು ಮುಕ್ತನಾಗುವನು. ಅವನಿಗೆ ಎಂದೂ ಪುನರಾವರ್ತನೆಯು ಇರುವದಿಲ್ಲ.

*ಇತಿ ಶ್ರೀ ಗಣೇಶಪುರಾಣದ ಉಪಾಸನಾ ಖಂಡದಲ್ಲಿ ಬ್ರಹ್ಮ-ವ್ಯಾಸ, ಭೃಗು-ಸೋಮಕಾಂತ, ಸೂತ-ಶೌನಕರ ಸಂವಾದ ರೂಪವಾದ ಗಣೇಶನಾಮ ನಿರೂಪಣ ಎಂಬಲ್ಲಿಗೆ ತೊಂಬತ್ತೆರಡನೇ ಅಧ್ಯಾಯ ಮುಗಿದುದು*

# ಶ್ರೀ ಗಣೇಶಪುರಾಣ

# ಉತ್ತರ ಖಂಡ

## ನಾರದ ಉಪದೇಶ

ಅಧ್ಯಾಯ - ೧

**ಶೌನಕಾದಿ** :- ಸೂತಾಚಾರ್ಯರೇ, ನೀವು ಈವರೆಗೆ ನಮಗೆ ಗಣೇಶಮಹಿಮೆಯನ್ನೂ ಸಂಕಷ್ಟಹರಚತುರ್ಥಿವ್ರತದ ಮಹಿಮೆಯನ್ನೂ ಹೇಳಿದಿರಿ. ನೀವು ಹೇಳಿದ ಕಥಾಶ್ರವಣದಿಂದ ನಮಗೆ ತೃಪ್ತಿಯುಂಟಾಗಿಲ್ಲ. ನಮಗೆ ತೃಪ್ತಿಯಾಗುವಂತೆ ಇನ್ನೂ ಹೆಚ್ಚಿನ ಗಣೇಶನ ಲೀಲಾಚಾರುಚರಿತ್ರೆಗಳನ್ನು ನಿರೂಪಿಸಿರಿ.

**ಸೂತ** :- ಮುನಿಗಳೇ, ಗಣೇಶಪುರಾಣದ ಉಪಾಸನಾಖಂಡದ ಮುಂದಿನ ಭಾಗವಾದ ಕ್ರೀಡಾಖಂಡವನ್ನು ವರ್ಣಿಸುತ್ತೇನೆ ಕೇಳಿರಿ. ಅದರಲ್ಲಿ ಪರಬ್ರಹ್ಮಸ್ವರೂಪಿಯಾದ ಮಹಾಗಣಪತಿಯು ಯಾವ ಯಾವ ದೈತ್ಯರನ್ನು ಹೇಗೆ ನಿಗ್ರಹಿಸಿದನು ? ಎನ್ನುವದನ್ನು ಬಿತ್ತರಿಸುವೆನು. ಸಜ್ಜನರನ್ನು, ಬ್ರಾಹ್ಮಣರನ್ನು, ಗೋವುಗಳನ್ನು ಆ ಸ್ವಾಮಿಯು ಹೇಗೆ ಸಂರಕ್ಷಿಸಿದ ? ಎಂಬುವುದನ್ನೂ ನಿರೂಪಿಸುತ್ತೇನೆ ಕೇಳಿರಿ. ಗಣಪತಿಯ ಈ ಮಹಾಕಥಾನಕವನ್ನು ಪೂರ್ವಕಾಲದಲ್ಲಿ ಬ್ರಹ್ಮದೇವನು ಮಹಾತೇಜಸ್ವಿಯಾದ ವೇದವ್ಯಾಸರಿಗೆ ಹೇಳಿದ್ದನು. ಅದನ್ನೇ ಭೃಗುಮುನಿಯು ಸೋಮಕಾಂತ ಮಹಾರಾಜನಿಗೆ ಅನುವಾದಿಸಿದ್ದನು. ಪರಮಪವಿತ್ರವಾದ ಬ್ರಹ್ಮ, ವೇದವ್ಯಾಸ, ಹಾಗೂ ಭೃಗು ಸೋಮಕಾಂತ ಸಂವಾದರೂಪವಾದ ಆ ಕಥೆಯನ್ನು ನಾನು ನಿಮಗೆ ಹೇಳುತ್ತೇನೆ ಕೇಳಿರಿ.

ಬ್ರಹ್ಮ ಜಗದ್ರಕ್ಷಕನಾದ ಗಜಾನನನು ಲೋಕಕ್ಷೇಮಕ್ಕಾಗಿ ಅನೇಕ ಅವತಾರಗಳನ್ನು ಸ್ವೀಕರಿಸಿ ಭೂಮಿಯ ಭಾರವನ್ನು ಇಳಿಸಿದನು. ಈ ಗಣೇಶನ ದಿವ್ಯಚರಿತ್ರವನ್ನು ನನ್ನ ಹಡೆದ ತಂದೆಯಾದ ಮಹಾವಿಷ್ಣುವು ನನಗೆ ಹೇಳಿರುವನು. ಇದನ್ನು ಕೇಳುವವರ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವವು.

**ವಿಷ್ಣು** :- ಕೃತಯುಗದಲ್ಲಿ ಆ ದೇವದೇವನು ಸಿಂಹವನ್ನು ವಾಹನವನ್ನಾಗಿ ಮಾಡಿಕೊಂಡು **ವಿನಾಯಕ**ನೆಂದು ಪ್ರಸಿದ್ಧನಾಗುವನು. ತ್ರೇತಾಯುಗದಲ್ಲಿ ನವಿಲನ್ನು ವಾಹನವ್ನಾಗಿ ಮಾಡಿಕೊಂಡು **ಮಯೂರೇಶ್ವರ**ನೆಂದೂ ದ್ವಾಪರಯುಗದಲ್ಲಿ ಇಲಿಯನ್ನು ವಾಹನವನ್ನಾಗಿ ಮಾಡಿಕೊಂಡು **ಗಜಾನನ**ನೆಂದೂ ಕಲಿಯುಗದಲ್ಲಿ ಅಶ್ವಾರೂಢನಾಗಿ ಧೂಮ್ರವರ್ಣದಿಂದ **ಧೂಮ್ರಕೇತು** ಎಂದೂ ಪ್ರಸಿದ್ಧನಾಗಿ ದುಷ್ಟರಾದ ಮ್ಲೇಂಛ ಸೈನಿಕರನ್ನು ನಾಶಮಾಡುವನು. ಆ ಗಜಾನನನಿಗೆ ಕೃತಯುಗದಲ್ಲಿ ಹತ್ತು ಭುಜಗಳು, ತ್ರೇತಾಯುಗದಲ್ಲಿ ಆರು ಭುಜಗಳು ದ್ವಾಪರಯುಗದಲ್ಲಿ ನಾಲ್ಕು ಭುಜಗಳು, ಕಲಿಯುಗದಲ್ಲಿ ಎರಡು ಭುಜಗಳು ಇದ್ದು ಪ್ರತಿಯೊಂದು ಯುಗದಲ್ಲಿಯೂ ಲೋಕಕಂಟಕರಾದ ದೈತ್ಯರನ್ನು ಸಂಹರಿಸುವನು.

ಪೂರ್ವಕಾಲದಲ್ಲಿ ಅಂಗದೇಶದ ರಾಜಧಾನಿಯಲ್ಲಿ ರೌದ್ರಕೇತು ಎಂಬ ಹೆಸರಿನ ಮಹಾಪಂಡಿತನಾದ ಅಗ್ನಿಹೋತ್ರಿಬ್ರಾಹ್ಮಣನು ಇದ್ದನು. ಅವನಿಗೆ ಲೋಕೋತ್ತರ ಲಾವಣ್ಯವತಿಯಾದ ಶಾರದಾ ಎಂಬ ಮಡದಿ ಇದ್ದಳು. ಅವಳು ದೇವರ ದಯೆಯಿಂದ ಗರ್ಭಿಣಿ ಆದಳು. ಒಂಬತ್ತು ತಿಂಗಳ ಕಳೆದ ಬಳಿಕ ಸುಂದರ ಸುಕುಮಾರರಾದ ಇಬ್ಬರು ಅವಳಿ ಮಕ್ಕಳನ್ನು ಹೆತ್ತಳು. ಆ ಮಕ್ಕಳಿಗೆ ಬ್ರಾಹ್ಮಣರನ್ನು ಕರೆಸಿ ರೌದ್ರಕೇತುವು ದೇವಾಂತಕ ನರಾಂತಕ ಎಂಬ ಹೆಸರು ಇಟ್ಟರು. ಅವರು ಪ್ರೌಢರಾದಾಗ ಅತ್ಯದ್ಭುತವಾದ ಅಸಾಧಾರಣವಾದ ಶಕ್ತಿಸಾಮರ್ಥ್ಯಸಂಪನ್ನರಾಗಿ ಬೆಳೆದರು.

ಒಂದು ದಿನ ನಾರದರು ಅವನ ಮನೆಗೆ ಬಂದು ಆ ಇಬ್ಬರು ಮಕ್ಕಳನ್ನು ಆಶೀರ್ವದಿಸಿ ಅವರಿಗೆ ಶಿವಪಂಚಾಕ್ಷರಿ ಮಂತ್ರವನ್ನು ಉಪದೇಶಿಸಿದರು. ಮತ್ತು ಆ ಮಂತ್ರದಿಂದ ಮಹಾದೇವರನ್ನು ಜಪಿಸಿ, ತಪಿಸಿ ಆರಾಧಿಸಬೇಕೆಂದು ಹೇಳಿದರು. ನಾರದರ ಉಪದೇಶವನ್ನು ಕೇಳಿ ಸಂತುಷ್ಟರಾದ ಆ ದೇವಾಂತಕ ನರಾಂತಕರು ನಾರದರು ಹೋದ ಬಳಿಕ ತಂದೆ ತಾಯಿಯ ಅಪ್ಪಣೆ ಪಡೆದು ತಪಸ್ಸಿಗೆ ಸಿದ್ಧರಾದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ನಾರದ ಉಪದೇಶ ಎಂಬ ಮೊದಲನೇಯ ಅಧ್ಯಾಯ ಮುಗಿದುದು*

## ಅವಳಿ ಸೋದರರ ತಪೋನುಷ್ಠಾನ

**ಅಧ್ಯಾಯ - ೨**

ಅವಳಿ ಸೋದರರಾದ ದೇವಾಂತಕ ನರಾಂತಕರು ರೌದ್ರಕೇತು ಶಾರದಾದೇವಿ ಎಂಬ ತಮ್ಮ ತಾಯಿ ತಂದೆಯ ಅನುಜ್ಞೆ ಪಡೆದು ಗಹನವಾದ ಅರಣ್ಯಕ್ಕೆ ಬಂದು ಉಗ್ರವಾದ ತಪಸ್ಸನ್ನು ಮಾಡಿದರು. ಪಾರ್ವತಿಪತಿಯಾದ ಪರಮೇಶ್ವರನನ್ನು ಏಕಾಂತಭಕ್ತಿಯಿಂದ ಧ್ಯಾನಮಾಡುತ್ತ ಹಸಿವು ನಿದ್ದೆ ನೀರಡಿಕೆ ಎಲ್ಲ ತೊರೆದು ಎರಡು ಸಾವಿರ ವರ್ಷ ದಾರುಣವಾದ ತಪಸ್ಸನ್ನು ಮಾಡಿದರು. ಎರಡು ಸಾವಿರ ವರ್ಷ ವಾಯುಭಕ್ಷರಾಗಿ, ಒಂದು ಸಾವಿರವರ್ಷ ಎಲೆ ತರಗೆಲೆಗಳನ್ನು ತಿಂದು, ಉಳಿದ ವರ್ಷ ನಿರಾಹಾರರಾಗಿ ಒಟ್ಟು ಹತ್ತು ಸಾವಿರ ವರ್ಷ ದಾರುಣವಾದ ತಪೋನುಷ್ಠಾನವನ್ನು ಮಾಡಿದರು. ಅವರ ಅತ್ಯುಗ್ರವಾದ ತಪಸ್ಸಿಗೆ ಮೆಚ್ಚಿ ಪರಮೇಶ್ವರನು ಪ್ರತ್ಯಕ್ಷದರ್ಶನವನ್ನು ಅವರಿಗೆ ಕರುಣಿಸಿದನು.

ಹುಲಿಯ ಚರ್ಮವನ್ನು ಧರಿಸಿ, ಹತ್ತು ಭುಜಗಳಲ್ಲಿ ತ್ರಿಶೂಲ, ಡಮರು ಮೊದಲಾದ ಆಯುಧಗಳನ್ನೂ, ಕೊರಳಲ್ಲಿ ಘಟಸರ್ಪದ ಮಾಲೆಯೊಂದಿಗೆ ರುಂಡಮಾಲೆಯನ್ನೂ, ಜಡೆಯಲ್ಲಿ ದೇವಗಂಗೆಯನ್ನೂ ಹೊತ್ತು, ತಲೆಯಲ್ಲಿ ಭಾಲಚಂದ್ರನನ್ನು ಧರಿಸಿ ದಿವ್ಯಕಾಂತಿಯಿಂದ ಬೆಳಗುವ ಆ ಪರಮೇಶ್ವರನನ್ನು ತಮ್ಮ ಚರಮಚಕ್ಷುಸ್ಸುಗಳಿಂದ ಆ ದೇವಾಂತಕ ನರಾಂತಕರು ನೋಡಿ ಸಾಷ್ಟಾಂಗ ನಮಸ್ಕಾರ ಮಾಡಿದರು. ಮತ್ತು ಬಗೆಬಗೆಯಾಗಿ ಆ ಭಗವಂತನನ್ನು ಸ್ತೋತ್ರಮಾಡಿದರು. ಅವರು ಮಾಡಿದ ಸ್ತೋತ್ರದಿಂದ ಸಂತುಷ್ಟರಾದ ಚಂದ್ರಚೂಡರು ಪಾರ್ವತಿಯೊಡನೆ ಪ್ರಸನ್ನಮುಖದಿಂದ ನಿಮಗೆ ಬೇಕಾದ ವರವನ್ನು ಕೇಳಿರಿ ಎಂದು ಹೇಳಿದನು.

ಆಗ ಭಕ್ತಿನಮ್ರರಾದ ಆ ಸೋದರರು ಕೈ ಮುಗಿದು ''ದೇವದೇವೋತ್ತಮ, ನೀನು ನಮ್ಮ ಮೇಲೆ ಸುಪ್ರೀತನಾಗಿದ್ದರೆ ನಾವಿಬ್ಬರೂ ಯಾರಿಂದಲೂ ಸಾಯಬಾರದು. ಮತ್ತು

ನಿನ್ನ ಚರಣಗಳಲ್ಲಿ ಅಪ್ರಕಂಪ್ಯವಾದ ಭಕ್ತಿಯು ನಮಗೆ ಉಂಟಾಗಬೇಕು. ಹಾಗೂ ತ್ರೈಲೋಕ್ಯಾಧಿಪತ್ಯವು ನಮಗೆ ದೊರಕಬೇಕು. ದೇವ, ದಾನವ, ಮಾನವ, ಯಕ್ಷ, ರಾಕ್ಷಸ, ಕ್ರೂರಶ್ವಾಪದ ಯಾರಿಂದಲೂ ಭಯಾಪಾಯಗಳು ನಮಗೆ ಎಂದೂ ಉಂಟಾಗಬಾರದು.'' ಇಷ್ಟು ವರಗಳನ್ನು ಕೊಟ್ಟು ಕರುಣಿಸು.

ಪರಮೇಶ್ವರನು ಆ ಅವಳಿ ಸೋದರರು ಕೇಳಿದ ವರಗಳನ್ನೆಲ್ಲ ಕರುಣಿಸಿ ಅವರ ತಲೆಯ ಮೇಲೆ ಅಭಯಹಸ್ತವನ್ನು ಇಟ್ಟು ಅಂತರ್ಧಾನ ಹೊಂದಿದನು.

ಅವರು ತಪೋವನದಿಂದ ಮನೆಗೆ ಬಂದು ತಮ್ಮ ತಾಯಿ ತಂದೆಗಳಿಗೆ ಮಹಾದೇವನಿಂದ ತಮಗೆ ವರಪ್ರಾಪ್ತಿಯಾದ ಸಮಾಚಾರವನ್ನು ತಿಳಿಸಿದರು. ಅದನ್ನು ಕೇಳಿ ಸಂತೋಷಭರಿತರಾದ ರೌದ್ರಕೇತು ಮತ್ತು ಶಾರದಾದೇವಿ ದಂಪತಿಗಳು ತಮ್ಮ ಮಕ್ಕಳ ಪುಣ್ಯಸಾಹಸಗಳನ್ನು ಕೊಂಡಾಡಿದರು. ಪರಮೇಶ್ವರನ ಪ್ರಸಾದವನ್ನು ಪಡೆದು ಬಂದ ಮಕ್ಕಳನ್ನು ಅಭಿನಂದಿಸಿ ಪರಮೇಶ್ವರನನ್ನು ವಂದಿಸಿ ಇಂಥ ಸತ್ಪುತ್ರರನ್ನು ಪಡೆದಿದಕ್ಕಾಗಿ ಹರ್ಷೋನ್ಮಾದ ಭರಿತರಾದರು. ಅನಂತರ ಬ್ರಾಹ್ಮಣರನ್ನು ಕರೆದು ಅವರಿಗೆ ಸುಗ್ರಾಸ ಭೋಜನ ಮಾಡಿಸಿ ಅವರಿಂದ ಆಶೀರ್ವಾದ ಪಡೆದರು.

*ಇತಿ ಗಣೇಶಪುರಾಣದ ಉತ್ತರ ಖಂಡದಲ್ಲಿ*
*ಅವಳಿ ಸೋದರರ ತಪೋನುಷ್ಠಾನ ಎಂಬ ಎರಡನೇ ಅಧ್ಯಾಯ ಮುಗಿದುದು*



## ದೇವಾಂತಕನ ಸಾಹಸ ವರ್ಣನೆ

**ಅಧ್ಯಾಯ - ೩**

**ಬ್ರಹ್ಮ :-** ಪರಮೇಶ್ವರನು ತಮಗೆ ಅನುಗ್ರಹಿಸಿರುವ ಶಕ್ತಿ ಸಾಮರ್ಥ್ಯಗಳನ್ನು ಯೋಗ್ಯವಾಗಿ ಉಪಯೋಗಿಸಿ ಸರ್ವಲೋಕಾಧಿಪತ್ಯವನ್ನು ಪಡೆಯಬೇಕೆಂದು ಹೊಂಚುಹಾಕಿದರು. ದೇವಾಂತಕನು ಸ್ವರ್ಗಲೋಕದಿಗ್ವಿಜಯಕ್ಕೂ ನರಾಂತಕನು ಮರ್ತ್ಯಲೋಕ ಪಾತಾಳಲೋಕವನ್ನು ಆಕ್ರಮಿಸಲಿಕ್ಕೂ ಹೊರಟರು. ದೇವಾಂತಕನು ಸ್ವರ್ಗಕ್ಕೆ ಲಗ್ಗೆಯಿಟ್ಟು ಅಮರಾವತಿಯ ಪಟ್ಟಣವನ್ನು ಆಕ್ರಮಿಸತೊಡಗಿದನು. ಅವನ ಭೀಕರವಾದ ಶಸ್ತ್ರಾಸ್ತ್ರ ಪ್ರಹಾರವನ್ನು ತಾಳಲಾರದೇ ದೇವತೆಗಳೆಲ್ಲರೂ ದಿಕ್ಕೆಟ್ಟು ಓಡತೊಡಗಿದರು. ದೇವೇಂದ್ರನಿಗೂ, ದೇವಾಂತಕನಿಗೂ ಘನಘೋರವಾದ ಸಂಗ್ರಾಮವು ಮಸಗಿತು. ಶಚೀನಾಥನು ಬ್ರಹ್ಮಾಂಡಕೋಪದಿಂದ ಕೆಂಡಾಮಂಡಲವಾಗಿ ತನ್ನ ಕೈಯಲ್ಲಿ ಘೋರವಾದ ವಜ್ರಾಯುಧವನ್ನು ಹಿಡಿದು ದೇವಾಂತಕನನ್ನು ಹೊಡೆದನು. ಆದರೆ ವಜ್ರಕ್ಕಿಂತ ಕಠೋರವಾದ, ಕಬ್ಬಿಣಕ್ಕಿಂತ ಕಠಿಣವಾದ ದೇವಾಂತಕನ ದೇಹಕ್ಕೆ ಬಡಿದು ಆ ವಜ್ರಾಯುಧವು ಮುರಿದು ಚೂರು ಚೂರಾಗಿ ಬಿದ್ದಿತು. ಆ ದುಷ್ಟದೈತ್ಯನು ದೇವೇಂದ್ರನಿಗೆ ತನ್ನ ಮುಷ್ಟಿಯಿಂದ ಭಯಂಕರವಾದ ಪ್ರಹಾರವನ್ನು ಮಾಡಿದನು. ದೇವಾಂತಕನ ತಾಡನದ ಆಘಾತದಿಂದ ದೇವೇಂದ್ರನ ದೇಹವೆಲ್ಲವೂ ನುಜ್ಜುಗುಜ್ಜಾಗಿ ಹೋಯಿತು. ಅವನು ಅಳಿದುಳಿದ ತನ್ನ ದೇವತಾಸೇನೆಯೊಂದಿಗೆ ದಿಕ್ಕೆಟ್ಟು ಓಡಿಹೋಗಿ ತಲೆಮರೆಸಿಕೊಂಡನು.

ಅನಂತರ ದೇವಾಂತಕನು ತನ್ನ ದೈತ್ಯಸೇನೆಯೊಂದಿಗೆ ಉತ್ಸಾಹದಿಂದ ಅಮರಾವತಿಯನ್ನು ಆಕ್ರಮಿಸಿ ಇಂದ್ರನ ಸುರಸಾಮ್ರಾಜ್ಯದಲ್ಲಿ ಪಟ್ಟಾಭಿಷಕ್ತನಾದನು. ಸ್ವರ್ಗದಲ್ಲಿ ದೇವಾಂತಕನ ಶಾಸನವು ಪ್ರಾರಂಭವಾಯಿತು.

ಸ್ವರ್ಗದ ದಿಗ್ವಿಜಯದಿಂದ ಉನ್ಮಾದ ತುಂಬಿದ ಆ ದೇವಾಂತಕನು ಸತ್ಯಲೋಕಕ್ಕೂ ಮುತ್ತಿಗೆ ಹಾಕಿದನು. ಇದನ್ನು ಮೊದಲೇ ತಿಳಿದ ಚತುರ್ಮುಖನು ತನ್ನ ಲೋಕವನ್ನು ಬಿಟ್ಟು ಹಿಮಾಲಯಪರ್ವತದ ಗಿರಿಗುಹಾಗಂವ್ಹರವನ್ನು ಆಶ್ರಯಿಸಿದ್ದನು. ಅಲ್ಲಿ ಸತ್ಯಲೋಕದಲ್ಲಿ ದೇವಾಂತಕನು ತನ್ನ ಒಬ್ಬ ಪ್ರತಿನಿಧಿಯನ್ನು ಅಧಿಕಾರಿಯನ್ನಾಗಿಸಿ ವೈಕುಂಠಲೋಕಕ್ಕೆ ದಾಳಿಯಿಟ್ಟನು. ಇದನ್ನು ಮುಂಚಿತವಾಗಿ ಅರಿತ ವಿಷ್ಣುವು ಲಕ್ಷ್ಮಿಯೊಂದಿಗೆ ಕ್ಷೀರಸಾಗರಕ್ಕೆ ಹೊರಟುಹೋಗಿದ್ದನು. ಸ್ವರ್ಗಾದಿ ಊರ್ಧ್ವಲೋಕಗಳೆಲ್ಲ ದೇವಾಂತಕನಿಂದ ಪಾದಕ್ರಾಂತವಾಗಿ ಎಲ್ಲ ಕಡೆಗೂ ಅವನದೇ ದರ್ಪೋದ್ಧತವಾದ ಅಧಿಕಾರ, ಆಡಳಿತ ನಡೆದವು.

*ಇತಿ ಗಣೇಶಪುರಾಣದ ಉತ್ತರಖಂಡದ ದೇವಾಂತಕನ ಸಾಹಸ ವರ್ಣನೆ ಎಂಬ ಮೂರನೇ ಅಧ್ಯಾಯ ಮುಗಿದುದು*



## ನರಾಂತಕನ ಸಾಹಸ ವರ್ಣನೆ

**ಅಧ್ಯಾಯ - ೪**

**ಬ್ರಹ್ಮ** :- ಇತ್ತ ದೇವಾಂತಕನ ಸಹೋದರನಾದ ನರಾಂತಕನು ತನ್ನ ಅನುಯಾಯಿಗಳಾದ ದೈತ್ಯರೊಡನೆ ಭೂಲೋಕದ ಮೇಲೆ ದಾಳಿ ಮಾಡಿದನು. ಅವನ ಪ್ರಚಂಡ ಪರಾಕ್ರಮದ ಮುಂದೆ ಯಾವ ರಾಜರೂ ನಿಲ್ಲಲು ಸಮರ್ಥರಾಗಲಿಲ್ಲ. ಚತುಃಸಾಗರ ಪರ್ಯಂತವಾದ ಅಖಂಡ ಭೂಮಂಡಲವನ್ನೆಲ್ಲ ಗೆದ್ದು ಆಗಿನ ರಾಜರನ್ನೆಲ್ಲ ಸೋಲಿಸಿ ಸರ್ವಊರ್ವೀತಲಕ್ಕೆಲ್ಲ ಅವನು ಏಕರಾಟ್ ಸಮ್ರಾಟ್ ಆಗಿ ಮೆರೆದನು.

ಅನಂತರ ಆ ನರಾಂತಕನು ಪಾತಾಳಲೋಕದ ಜೈತ್ರಯಾತ್ರೆ ಕೈಕೊಂಡನು. ಅಲ್ಲಿರುವ ಘೋರಾಕಾರದ ಸರ್ಪಗಳನ್ನೆಲ್ಲ ಮಾಯಾವಿಗಳಾದ ನರಾಂತಕನ ಸೈನಿಕರಾಕ್ಷಸರು ಗರುಡ ಪಕ್ಷಿಗಳ ರೂಪವನ್ನು ತಳೆದು ಪಾತಾಳಲೋಕದ ಕಾವಲುಗಾರರಾದ ಸರ್ಪಗಳನ್ನೆಲ್ಲ ಪಕಪಕನೆ ತಿಂದು ಹಾಕಿದರು. ಇದರಿಂದ ಗಾಬರಿಯಾದ ರಸಾತಳ ಪಾತಾಳಾದಿ ಲೋಕಗಳ ಅಧೀಶ್ವರನಾದ ಆದಿಶೇಷನು ಗಾಬರಿಗೊಂಡು ನರಾಂತಕನಿಗೆ ಶರಣುಬಂದನು. ಮತ್ತು ತನ್ನ ಭಾಂಡಾರದಲ್ಲಿದ್ದ ಅನರ್ಘ್ಯವಾದ ರತ್ನರಾಶಿಯನ್ನೂ ಪರಮಸುಂದರಿಯರಾದ ಅನೇಕ ನಾಗಕನ್ನಿಕೆಯರನ್ನೂ, ಹೇರಳವಾದ ಮಣಿ ಮುಕ್ತಾಮಾಣಿಕ್ಯಗಳ ಕಪ್ಪುಕಾಣಿಕೆಗಳನ್ನೂ ನರಾಂತಕನಿಗೆ ಒಪ್ಪಿಸಿ ತನ್ನ ಅಖಂಡ ಸಾಮ್ರಾಜ್ಯವನ್ನೆಲ್ಲ ಅವನ ಪದತಲದಲ್ಲಿ ನಿವೇದಿಸಿ ಬದುಕಿ ಉಳಿದನು. ಆಗ ನರಾಂತಕನು ಪಾತಾಳಲೋಕದ ಘೋರ ಸರ್ಪಗಳ ಮೇಲೆ ನಿಯಂತ್ರಣವನ್ನು ಇರಿಸಲಿಕ್ಕಾಗಿ ಆ ಅಧೋಲೋಕದ ಅಧಿಕಾರಗಳ ಮೇಲೆಲ್ಲ ಓರ್ವ ದೈತ್ಯವೀರನನ್ನು ನೇಮಿಸಿದನು.

ಹೀಗೆ ನರಾಂತಕನು ಮೃತ್ಯುಲೋಕ, ಪಾತಾಳಲೋಕಗಳನ್ನು ತನ್ನ ಪಾದಾಕ್ರಾಂತವನ್ನಾಗಿ ಮಾಡಿಕೊಂಡು ತನಗೆ ದೊರೆತ ಕಾಣಿಕೆಯಾಗಿ ಬಂದ ಅನರ್ಘ್ಯ ಮುತ್ತುರತ್ನರಾಶಿಯನ್ನು ಅಣ್ಣನ ಮುಂದೆ ಸುರುವಿ ತನ್ನ ದಿಗ್ವಿಜಯದ ವೈಭವವನ್ನು ಬಣ್ಣಿಸಿ ಹೇಳಿದನು.

ಹೀಗೆ ಆ ದೇವಾಂತಕ ನರಾಂತಕರಿಬ್ಬರೂ ಕೂಡಿ ಹದಿನಾಲ್ಕು ಲೋಕಗಳನ್ನೂ ತಮ್ಮ ಭುಜಬಲ ಪರಾಕ್ರಮದಿಂದ ಆಕ್ರಮಿಸಿ ವಿಶ್ವವಿಜಯಿಗಳಾಗಿ ಮೆರೆಯತೊಡಗಿದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ನರಾಂತಕ ಸಾಹಸ ವರ್ಣನೆ ಎಂಬ ನಾಲ್ಕನೇ ಅಧ್ಯಾಯ ಮುಗಿದುದು*



## ಅದಿತಿಯ ವರಪ್ರಾಪ್ತಿ

ಅಧ್ಯಾಯ - ೫

**ಬ್ರಹ್ಮ** :- ನಮ್ಮ ಮಾನಸಪುತ್ರರಲ್ಲಿ ಕಶ್ಯಪನೇ ಹಿರಿಯ. ಅವನು ಸದಾಚಾರ ಸಂಪನ್ನ, ಮಹಾಜ್ಞಾನಿ, ಶ್ರೇಷ್ಠತಪಸ್ವಿ. ಅವನಿಗೆ ದಿತಿ, ಅದಿತಿ, ಕದ್ರು, ವಿನತೆ ಮುಂತಾಗಿ ಅನೇಕ ಜನ ಮಡದಿಯರು ಇದ್ದರು. ಅವರಲ್ಲಿ ಅದಿತಿ ಜ್ಯೇಷ್ಠಳು, ಗುಣದಿಂದ ಶ್ರೇಷ್ಠಳು ಆಗಿದ್ದಳು. ಒಂದು ದಿನ ಅವಳು ಪತಿ ಕಶ್ಯಪನ ಹತ್ತಿರ ಬಂದು ಸಾಕ್ಷಾತ್ ಭಗವಂತನೇ ನನಗೆ ಮಗನಾಗಿ ಹುಟ್ಟುವ ಉಪಾಯವನ್ನು ಅಥವಾ ವ್ರತಾನುಷ್ಠಾನವನ್ನು ಹೇಳಿರಿ, ಎಂದು ಭಿನ್ನವಿಸಿಕೊಂಡಳು.

ಆಗ ಮಹಾತ್ಮರಾದ ಕಶ್ಯಪರು ಗಣೇಶಪಂಚಾಕ್ಷರಿ ಮಂತ್ರವನ್ನು ಅವಳಿಗೆ ಉಪದೇಶಿಸಿದರು. ಏಕಾಗ್ರಮನಸ್ಸಿನಿಂದ ಅವಳು ನಿರಾಹಾರಳಾಗಿ ಅನೇಕ ವರ್ಷಗಳ ಕಾಲ ಗಣೇಶಮಂತ್ರ ಜಪರೂಪವಾದ ತಪೋನುಷ್ಠಾನವನ್ನು ಕೈಕೊಂಡಿದ್ದನ್ನು ನೋಡಿ ಆ ದೇವದೇವನು ಪ್ರತ್ಯಕ್ಷನಾದನು. ಆನೆಯ ಮುಖ, ಹತ್ತು ಭುಜ, ಕಿವಿಗಳಲ್ಲಿ ಹೊಳೆಯುವ ದಿವ್ಯಕುಂಡಲಗಳು, ಅಕ್ಕಪಕ್ಕದಲ್ಲಿ ಸಿದ್ಧಿಬುದ್ಧಿ ಎಂಬ ಪ್ರಮದೆಯರು, ಕೊರಳಲ್ಲಿ ಮುಕ್ತಾಹಾರ, ಮುತ್ತಿನ ಹಾರಗಳು. ನಾಭಿದೇಶಯಲ್ಲಿ ಆದಿಶೇಷ, ಕೈಯಲ್ಲಿ ನಿಶಿತವಾದ ಗಂಡುಗೊಡಲಿ, ಬಂಗಾರದ ಉಡುದಾರ, ಹಣೆಯಲ್ಲಿ ಕಸ್ತೂರಿತಿಲಕಗಳಿಂದ ಎದ್ದು ಕಾಣುವ ಗಣೇಶನ ದಿವ್ಯಮೂರ್ತಿಯನ್ನು ನೋಡಿ ಅದಿತಿದೇವಿಯು ಭಕ್ತಿಯಿಂದ ಅವನಿಗೆ ಸಾಷ್ಟಾಂಗ ವಂದನೆ ಮಾಡಿ ಬಹುವಿಧವಾಗಿ ಸ್ತೋತ್ರಮಾಡಿದಳು.

ಆಗ ಪ್ರಸನ್ನನಾದ ಗಜಾನನನು ಅವಳಿಗೆ 'ಬಯಸಿದ ವರವನ್ನು ಕೇಳು' ಎಂದು ಹೇಳಿದನು. ಅದರಿಂದ ಅತಿಸಂತುಷ್ಟಳಾದ ಅದಿತಿದೇವಿಯು ಕೈಮುಗಿದು ''ಭಗವನ್, ನೀನೇ ನನಗೆ ಪುತ್ರನಾಗಿ ಜನಿಸಬೇಕು. ಅದರಿಂದ ಸಾಧುಗಳ ರಕ್ಷಣೆ, ದುಷ್ಟರ ನಿಗ್ರಹ ಎರಡೂ ಕಾರ್ಯಗಳು ನೆರವೇರಬೇಕು. ಅದರಿಂದ ನಾನು ಕೃತಕೃತ್ಯಳಾಗಬೇಕು.'' ಎಂದು ವರಬೇಡಿದಳು.

ಅದಕ್ಕೆ ಆ ಗಣನಾಯಕನು ''ತಥಾಸ್ತು. ನಿನ್ನ ಅಪೇಕ್ಷೆಯಂತೆ ನಾನು ನಿನ್ನ ಮಗನಾಗಿ ಜನಿಸಿ ಬರುವೆನು'' ಎಂದು ಹೇಳಿ ವಿನಾಯಕನು ಅಲ್ಲಿಯೇ ಅಂತರ್ಧಾನ ಹೊಂದಿದನು. ಮನೆಗೆ ಬಂದು ಅದಿತಿಯು ತನ್ನ ಪತಿ ಕಶ್ಯಪನಿಗೆ ಭಗವಂತನ ಕೃಪಾಶೀರ್ವಾದ ಪ್ರಸಾದವನ್ನು ತಿಳಿಸಿದಾಗ ಅವರೂ ಪರಮಸಂತೋಷಭರಿತರಾದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ಅದಿತಿಯ ವರಪ್ರಾಪ್ತಿ ಎಂಬ ಐದನೇ ಅಧ್ಯಾಯ ಮುಗಿದುದು*

—o—

## ಮಹೋತ್ಕಟ ಪ್ರಾದುರ್ಭಾವ

ಅಧ್ಯಾಯ - ೬

**ಭೃಗು :-** ದೇವಾಂತಕ ನರಾಂತಕ ಎಂಬ ದುಷ್ಟರು ಭೂಲೋಕ, ಸ್ವರ್ಗಲೋಕ, ಪಾತಾಳಲೋಕಗಳಿಗೆ ಕಂಟಕರಾಗಿ ಮೂರು ಲೋಕಗಳನ್ನು ಆಕ್ರಮಿಸಿ ಯಜ್ಞಯಾಗಾದಿ ಪುಣ್ಯಕರ್ಮಗಳನ್ನೆಲ್ಲ ಧ್ವಂಸಮಾಡಿದರು. ಜಪ, ತಪ, ಯಜ್ಞ, ಯಾಗವ್ರತ, ವೇದಾಧ್ಯಯನ ಎಲ್ಲವೂ ನಿಂತುಹೋದವು. ಆ ದುಷ್ಟರ, ದುರಾಚಾರ, ದುರಾಡಳಿತ, ದುಷ್ಕೃತ್ಯಗಳಿಂದ ಸಂತ್ರಸ್ತಳಾದ ಭೂದೇವಿಯು ಬ್ರಹ್ಮದೇವರಿಗೆ ಶರಣುಹೋದಳು. ಆಗ ಬ್ರಹ್ಮದೇವರು ಇಂದ್ರಾದಿ ಲೋಕಪಾಲಕರಿಂದ ಕೂಡಿಕೊಂಡು ಭಗವಂತನಾದ ವಿನಾಯಕನಲ್ಲಿ ಮೊರೆಯಿಟ್ಟರು. ಮೂರುಲೋಕಗಳ ದೇವತೆಗಳ, ಮಾನವರ ಸರ್ಪಧುರೀಣರ ಭವಣೆಗಳನ್ನು ಮನ್ನಿಸಿ ಈ ಲೋಕೋಪದ್ರವಕ್ಕೆ ಕಾರಣರಾದ ದೇವಾಂತಕ ನರಾಂತಕರನ್ನು ನೀನು ಅವತಾರ ಮಾಡಿ ಸಂಹರಿಸು. ಜನರನ್ನು ಉದ್ಧರಿಸು ಎಂದು ಬೇಡಿಕೊಂಡರು.

ಹೀಗೆ ದೇವತೆಗಳೂ ಭೂದೇವಿಯೂ ಬ್ರಹ್ಮದೇವರೂ ವಿನಾಯಕ ಭಗವಂತನನ್ನು ಪ್ರಾರ್ಥಿಸುತ್ತಿರುವಾಗಲೇ ಆಕಾಶವಾಣಿಯಾಯಿತು. ''ಕಶ್ಯಪಮುನಿಯ ಮನೆಯಲ್ಲಿ ಬೇಗನೇ ಭಗವಂತನ ಅವತಾರ ಆಗುವದು. ದುಷ್ಟರಾದ ದೈತ್ಯರನ್ನೆಲ್ಲ ಅವನು ನಿಗ್ರಹಮಾಡುವನು. ನಿಮ್ಮ ನಿಮ್ಮ ಸ್ಥಾನಗಳೆಲ್ಲ ನಿಮಗೆ ದೊರಕುವವು.'' ಈ ಆಕಾಶವಾಣಿಯ ಆಶ್ವಾಸನೆಯಿಂದ ಬ್ರಹ್ಮಾದಿದೇವತೆಗಳಿಗೆ ಸಂತೋಷವಾಯಿತು. ಭೂದೇವಿಯ ಚಿಂತೆ ಪರಿಹಾರವಾಯಿತು.

ಆಕಾಶವಾಣಿಯ ಆಶ್ವಾಸನದಂತೆ ವಿನಾಯಕನ ವರದಿಂದ ಸಂತೃಪ್ತರಾಗಿ ಸಾನಂದ ವಿಹಾರದಲ್ಲಿ ಆಸಕ್ತರಾದ ಕಶ್ಯಪದಂಪತಿಗಳಿಗೆ ಆ ಭಗವಂತನು ದಯತೋರಿದನು. ಅದಿತಿದೇವಿಯು ಗರ್ಭಧರಿಸಿದಳು. ನವಮಾಸ ತುಂಬಿದ ಬಳಿಕ ಅದಿತಿದೇವಿಯು ತೇಜಃಪುಂಜವಾದ ಒಂದು ಸುಂದರ ಗಂಡುಮಗುವಿಗೆ ಜನ್ಮವಿತ್ತಳು. ಆ ಮಗುವಿನ ಅದ್ಭುತವಾದ ದೇಹದೀಧಿತಿಯ ಹತ್ತು ಭುಜಗಳುಳ್ಳ ಕರ್ಣಕುಂಡಲಗಳಿಂದ ಹೊಳೆಯುವ, ಲೋಕವಿಲಕ್ಷಣವಾದ ರತ್ನಕಿರೀಟಧಾರಿ ಶಿಶುವನ್ನು ಕಂಡು ಆ ಮಗುವಿನ ಮತ್ತೇ ವನಮುಖದಲ್ಲಿ ಉಕ್ಕುವ, ಕಣ್ಣುಕುಕ್ಕುವಕಾಂತಿಯನ್ನು ಕಂಡು ತಂದೆ ತಾಯಿಗಳು ಸಂತುಷ್ಟರಾದರು. ಆ ದಂಪತಿಗಳು ಭಯಭ್ರಾಂತರೂ ಆಶ್ಚರ್ಯಚಕಿತರೂ ಆದರು. ಮತ್ತು ಆ ದೇವದೇವನನ್ನು ಬಗೆಬಗೆಯಾಗಿ ಬಣ್ಣಿಸಿ ಸ್ತೋತ್ರಮಾಡಿ ಸೌಮ್ಯಸ್ವರೂಪವನ್ನು ಸರ್ವಸಾಮಾನ್ಯವಾದ ಮಾನವಶಿಶುವಿನ ರೂಪವನ್ನು ಧರಿಸಬೇಕೆಂದು ಕೇಳಿ ಕೊಂಡರು. ಅವರ ಪ್ರಾರ್ಥನೆಯನ್ನು ಮನ್ನಿಸಿ ಆ ಭಗವಂತನು ಎರಡು ತೋಳುಗಳ ಸುಂದರವಾದ ಶಿಶುರೂಪವನ್ನು ಧರಿಸಿ ನೆಲದ ಮೇಲೆ ಬಿದ್ದು ಸಾಮಾನ್ಯಬಾಲಕರಂತೆ ಅಳತೊಡಗಿದನು. ಅವನ ಮಂಜುಳವಾದ ರೋದನಧ್ವನಿಯಿಂದ ಮೋಟುಮರಗಳು, ಬಂಜೆಬಳ್ಳಿಗಳು, ಚಿಗಿತು ಕುಡಿಮಿಡಿದಾಂಗುಡಿಯಿಟ್ಟು ಹಣ್ಣು, ಹೂ, ಕಾಯಿಗಳಿಂದ ಕಂಗೊಳಿಸತೊಡಗಿದವು. ಬಂಜೆಹೆಣ್ಣುಮಕ್ಕಳು ಗರ್ಭಧಾರಣ ಮಾಡಿದರು. ಆಗ ಕಶ್ಯಪರು ಕಾಲೋಚಿತವಾದ ಜಾತಕರ್ಮ ಸಂಸ್ಕಾರವನ್ನು ಮಾಡಿ ಹನ್ನೊಂದನೇ ದಿನ **ಮಹೋತ್ಕಟ** ಎಂದು ಅವನಿಗೆ ಹೆಸರನ್ನು ಇಟ್ಟರು.

*ಗಣೇಶಪುರಾಣದ ಉತ್ತರಖಂಡದಲ್ಲಿ ಮಹೋತ್ಕಟ ಪ್ರಾದುರ್ಭಾವ ಎಂಬ ಆರನೇ ಅಧ್ಯಾಯ ಮುಗಿದುದು*

## ವಿರಜಾರಾಕ್ಷಸಿಯ ವಿಮೋಚನ

ಅಧ್ಯಾಯ - ೭

ಕಶ್ಯಪ ದಂಪತಿಗಳ ಹೊಟ್ಟೆಯಿಂದ ವಿನಾಯಕನು ಜನಿಸಿ ಬಂದಿದ್ದಾನೆ. ಎಂಬ ವಾರ್ತೆಯನ್ನು ನಾರದರ ಮುಖದಿಂದ ಕೇಳಿ ವಶಿಷ್ಠ ಮೊದಲಾದ ಋಷಿಗಳು ಬಂದು ಮಗುವಿನ ಅಂಗಾಂಗಗಳಲ್ಲಿ ತೋರಿಬರುವ ರೇಖಾವಿನ್ಯಾಸವನ್ನು ನೋಡಿ ಅವನ ಭವಿಷ್ಯವನ್ನು ನೋಡಿದರು. ಮತ್ತು ಕಶ್ಯಪರಿಗೆ ಅವನ ಸಾಹಸಕಾರ್ಯಗಳನ್ನು ಸೂಚಿಸಿ ''ಈ ಶಿಶುವನ್ನು ಬಹಳ ಜಾಗರೂಕತೆಯಿಂದ ರಕ್ಷಣೆಮಾಡಿರಿ. ಈ ಬಾಲರೂಪಿಯಾದ ದೇವನ ಬೆಳವಣಿಗೆಗೆ ದುಷ್ಟದೈತ್ಯರು ಅನೇಕಾನೇಕ ವಿಘ್ನಗಳನ್ನು ತಂದು ಒಡ್ಡುವರು. ಆದುದರಿಂದ ಸ್ವಲ್ಪ ಎಚ್ಚರದಿಂದ ಈ ಕಶ್ಯಪನಂದನನನ್ನು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ರಕ್ಷಿಸಿರಿ.'' ಎಂದು ಹೇಳಿ ವಶಿಷ್ಠಾದಿ ಋಷಿಗಳು ತಮ್ಮ ತಮ್ಮ ಸ್ಥಾನಕ್ಕೆ ತೆರಳಿದರು.

ಮುಂದೆ ಒಂದು ದಿನ ಕಶ್ಯಪಋಷಿಗಳು ಎಂದಿನಂತೆ ಸ್ನಾನಮಾಡಿ ಬರಲು ನದಿಗೆ ತೆರಳಿದರು. ಅದಿತಿದೇವಿಯು ಮಗುವನ್ನು ತೊಟಲಲ್ಲಿ ಮಲಗಿಸಿ ತನ್ನ ಪತಿಯ ಅಗ್ನಿಹೋತ್ರವಿಧಿಗೆ ಅಣಿಮಾಡಲು ಒಳಗೆ ಹೋಗಿದ್ದಳು. ಈ ಸಮಯವನ್ನು ಸಾಧಿಸಿ ವಿರಜಾ ಎಂಬ ರಕ್ಕಸಿಯು ಮನೆಯಲ್ಲಿ ಹೊಕ್ಕು ತೊಟ್ಟಿಲಲ್ಲಿ ಮಲಗಿದ್ದ ಮಗುವನ್ನು ಎತ್ತಿಕೊಂಡಳು. ಮತ್ತು ಸುಲಿದ ಬಾಳೆಹಣ್ಣನ್ನು ನುಂಗುವಂತೆ ಆ ಮಗುವನ್ನು ನುಂಗಿಹಾಕಿದಳು.

ರಾಕ್ಷಸಿಯು ಆ ಮಗುವನ್ನು ನುಂಗಿ ಗಗನಕ್ಕೆ ಹಾರಿ ಹೋಗಬೇಕೆಂದು ಪ್ರಯತ್ನಿಸಿದಳು. ಮಗು ಅವಳ ಹೊಟ್ಟೆಯಲ್ಲಿಯೇ ಬೆಳೆದು ಅವಳ ನಾಭಿನಾಳವನ್ನು ಬಿಗಿಹಿಡಿದದ್ದರಿಂದ ಆ ರಾಕ್ಷಸಿಯು ಕೆಟ್ಟದನಿಯಿಂದ ಚೀರಿ ಹಾಹಾಕಾರ ಮಾಡುತ್ತ ನೆಲದಮೇಲೆ ಬಿದ್ದುಬಿಟ್ಟಳು. ಅರೆಚಣದಲ್ಲಿ ಆ ಮಗು ಅವಳ ಹೊಟ್ಟೆಯನ್ನು ಸೀಳಿಹಾಕಿತು. ಅವಳ ದೇಹವು ನೆಲಕ್ಕೆ ಉರುಳುವಾಗ ಸಮೀಪಲ್ಲಿ ಇದ್ದ ಗಿಡಮರಗಳೆಲ್ಲವೂ ಹೊರಳಿ ಬಿದ್ದವು. ದೇವದೇವನ ಸ್ಪರ್ಶದಿಂದ ಆ ಪಾಪಿ ರಾಕ್ಷಸಿಯು ಪಾಪರಹಿತಳಾಗಿ ದಿವ್ಯಸ್ಥಾನವನ್ನು ಪಡೆದಳು.

ಇತ್ತ ಅದಿತಿಯು ತನ್ನ ಮನೆಕೆಲಸವನ್ನು ಮುಗಿಸಿ ಬಂದು ತೊಟ್ಟಿಲಲ್ಲಿ ಮಗುವನ್ನು ಕಾಣದೇ ಗಾಬರಿಯಾಗಿ ರೋದಿಸತೊಡಗಿದಳು. ಅಲ್ಲಿ ಇಲ್ಲಿ ಎಲ್ಲ ಕಡೆಯೂ ಹುಡುಕಾಡಿ ಕೂಸು ಎಲ್ಲಿಯೂ ಕಾಣದೇ ಇದ್ದಾಗ ದುಃಖಾಕ್ರಾಂತಳಾಗಿ ಗೋಳಿಟ್ಟು ಹಲುಬತೊಡಗಿದಳು. ಹುಚ್ಚಿಯಂತೆ ಓಡುತ್ತ ಹಾದಿಬೀದಿಗಳಲ್ಲಿ ಹುಡುಕಾಡಿದಳು. ಕೆಲವು ಮೈಲುಗಳ ಅಂತರದಲ್ಲಿ ಒಬ್ಬ ರಾಕ್ಷಸಿಯು ಸತ್ತುಬಿದ್ದಿದ್ದಳು. ಅವಳ ಪಕ್ಕದಲ್ಲಿಯೇ ತನ್ನ ಮುದ್ದು ಬಾಲಕನು ಆಡುತ್ತಿರುವದನ್ನು ಕಂಡಳು. ಅವಳಿಗೆ ಪರಮಾನಂದವಾಯಿತು. ಕಳೆದು ಹೋದ ನಿಧಿ ಮರಳಿ ದೊರೆತಂತಾಗಿ ಆ ಮಗುವನ್ನು ಎತ್ತಿಕೊಂಡು ಮನೆಗೆ ಬಂದು ಕಶ್ಯಪರಿಗೆ ನಡೆದ ಸಮಾಚಾರವನ್ನು ತಿಳಿಸಿದಳು. ಆಗ ಕಶ್ಯಪರು ''ಮಗು ದುಷ್ಟರಾಕ್ಷಸಿಯು ಕೈಗೆ ಸಿಕ್ಕಿ ಸುರಕ್ಷಿತವಾಗಿ ಮನೆಗೆ ಮರಳಿ ಬಂದದ್ದು ದೇವರ

ಅನುಗ್ರಹ'' ಎಂದು ಭಾವಿಸಿ ವಿಶೇಷವಾಗಿ ದೇವರಪೂಜೆ ಮಾಡಿ ಕೂಸಿನ ರಕ್ಷಣೆಗಾಗಿ ಒಂದು ಯಂತ್ರವನ್ನು ಅಭಿಮಂತ್ರಣ ಮಾಡಿ ಮಗುವಿಗೆ ಕಟ್ಟಿದರು. ಮತ್ತು ಸ್ವಸ್ತಿವಾಚನಪೂರ್ವಕವಾಗಿ ಅನೇಕ ಶಾಂತಿಕರ್ಮಗಳನ್ನು ಬ್ರಾಹ್ಮಣೋತ್ತಮರಿಂದ ಮಾಡಿಸಿದರು. ಹಾಗೂ ಹೆಂಡತಿ ಅದಿತಿದೇವಿಗೆ ಈ ಮಗುವನ್ನು ಒಬ್ಬನನ್ನೇ ಬಿಟ್ಟು ನೀನು ಎಲ್ಲಿಗೂ ಹೋಗಬೇಡ ಎಂದು ಎಚ್ಚರಿಸಿದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ವಿರಜಾರಾಕ್ಷಸಿಯ ವಿಮೋಚನ ಎಂಬ ಏಳನೇ ಅಧ್ಯಾಯ ಮುಗಿದುದು*

## ನಕ್ರಶಾಪವಿಮೋಕ್ಷಣ

**ಅಧ್ಯಾಯ - ೮**

ವಿರಜಾ ಎಂಬ ಬಲಿಷ್ಠಳಾದ ರಕ್ಕಸಿಯು ಆ ಕಶ್ಯಪನಂದನನಿಂದ ಹತಳಾದ ಸುದ್ದಿಯನ್ನು ಕೇಳಿ ಉದ್ಧತ ಹಾಗೂ ಧುಂಧುರ ಎಂಬ ಇಬ್ಬರು ರಾಕ್ಷಸರು ಹೇಗಾದರೂ ಮಾಡಿ ಈ ಮಗುವನ್ನು ಕೊಲ್ಲಬೇಕೆಂದು ಕಾರ್ಯೋನ್ಮುಖರಾದರು. ಚಿತ್ರವಿಚಿತ್ರ ಬಣ್ಣದಿಂದ ರಂಜಿಸುವ ಎರಡು ಗಿಳಿಗಳ ರೂಪದಿಂದ ಆ ಮಾಯಾವಿಗಳು ಆ ಮಗುವಿನ ಮುಂದೆ ಹಾರಾಡತೊಡಗಿದರು. ''ಆ ಮುದ್ದುಗಿಣಿಗಳು ನನಗೆ ಆಡಲಿಕ್ಕೆ ಬೇಕು'' ಎಂದು ಮಗು ಹಟ ಮಾಡತೊಡಗಿತು.

ಆ ಮಾಯಾಶುಕಗಳನ್ನು ಹಿಡಿಯಬೇಕೆಂದು ಮಗುವನ್ನು ಎತ್ತಿಕೊಂಡೇ ಅದಿತಿಯು ಮುಂದೆ ಮುಂದೆ ನಡೆದಳು. ಅವಳ ಕೈಗೆ ಸಿಗದಂತೆ ಆ ಗಿಳಿಗಳು ಹಾರಿಹೋಗತೊಡಗಿದವು.

ಆಗ ತಾಯಿಯು ಆ ಗಿಳಿಗಳನ್ನು ಹಿಡಿಯುವಲ್ಲಿ ಸುಸ್ತಾದುದನ್ನು ಕಂಡು ಆ ಮಗು ತಾಯಿಯ ಸೊಂಟದಿಂದ ಕೆಳಗೆ ಇಳಿದು ತನ್ನ ಎರಡೂ ಪುಟ್ಟ ಕೈಗಳಿಂದ ಆ ಎರಡೂ ಹಕ್ಕಿಗಳನ್ನು ಗಪ್ಪನೇ ಹಿಡಿದು ಬಿಟ್ಟಿತು. ಅವು ಎರಡೂ ಕ್ರೂರ ಗಿಳಿಗಳು ತಮ್ಮ ರೆಕ್ಕೆ ಕೊಕ್ಕೆಗಳಿಂದ ಹೊಡೆದು ಕಚ್ಚಿ ಕುಕ್ಕಿ ಆ ಮಗುವನ್ನು ಹಿಂಸಿಸತೊಡಗಿದಾಗ ಆ ಶಿಶುವು ಆ ಎರಡೂ ಗಿಳಿಗಳ್ನು ತನ್ನ ಕೈಗಳಿಂದ ಬಿಗಿಯಾಗಿ ಹಿಡಿದು ನೆಲಕ್ಕೆ ಅಪ್ಪಳಿಸಿತು. ಆಗ ತಕ್ಷಣದಲ್ಲಿಯೇ ಆ ಪಕ್ಷಿಗಳ ಪ್ರಾಣಪಕ್ಷಿ ಹಾರಿಹೋಗಿ ಅವರು ಘೋರರಾಕ್ಷಸ ರೂಪದಿಂದ ನೆಲಕ್ಕೆ ಉರುಳಿಬಿದ್ದರು. ಅದರಿಂದ ದೊಡ್ಡ ಗುಡ್ಡಗಳೇ ಉರುಳಿ ಬಿದ್ದಂತಾಗಿ ಭೂದೇವಿಯೇ ಭಯಭ್ರಾಂತಳಾಗಿ ನಡುಗಿದಂತಾಯಿತು. ಅದನ್ನು ನೋಡಿ ಕಶ್ಯಪರು ಈ ಶಿಶುವಿಗೆ ಮುಂದೆ ಯಾವ ಅನಿಷ್ಟವೂ ಆಗದಿರಲಿ ಎಂದು ಶಾಂತಿಕರ್ಮವನ್ನು ಮಾಡಿಸಿದರು. ಮತ್ತು ಹೆಂಡತಿ ಅದಿತಿಗೆ ಈ ಮಗುವನ್ನು ಬಹಳ ಎಚ್ಚರಿಕೆಯಿಂದ ಕಾಪಾಡಬೇಕು ಎಂದು ಕಟ್ಟಾಜ್ಞೆಯನ್ನು ವಿಧಿಸಿದರು.

ಹೀಗೆ ಮೂರು ವರ್ಷಗಳು ಕಳೆದ ಬಳಿಕ ಮಗು ಆಶ್ರಮದ ಅಂಗಳದ ತುಂಬ ಓಡಾಡತೊಡಗಿತು. ಒಂದು ದಿನ ಬಾಲಕನು ಆಶ್ರಮವನ್ನು ದಾಟಿ ಸ್ವಲ್ಪದೂರದಲ್ಲಿ ಇರುವ ಸರೋವರದ ಕಡೆಗೆ ತೆರಳಿದನು. ಅಂದು ಅಮಾವಾಸ್ಯೆ, ಸೋಮವಾರ ವ್ಯತೀಪಾತಯೋಗವಿದ್ದಿತು. ಅದಿತಿದೇವಿಯು ಸರೋವರದಲ್ಲಿ ಸ್ನಾನಮಾಡಬೇಕೆಂದು ಮಗುವನ್ನು ದಂಡೆಯ ಮೇಲೆ ಕೂಡಿಸಿ ತಾನು ನೀರಿಗೆ ಇಳಿದಳು. ಆಗ ಆ ಶಿಶುವು ತಾನು ತಾಯಿಯ ಬಳಿಗೆ ಹೋಗಬೇಕೆಂದು ಸರೋವರವನ್ನು ಸಾರಿ ನದಿಯಲ್ಲಿ ಬಿದ್ದು ಬಿಟ್ಟಿತು.

ಆಗ ಒಂದು ಮೊಸಳೆಯು ಕೈಕಾಲುಗಳನ್ನು ಬಡೆಯುತ್ತ ನೀರಿನಲ್ಲಿ ಆಡುತ್ತಿದ್ದ ಆ ಬಾಲಕನನ್ನು ಹಿಡಿದುಬಿಟ್ಟಿತು. ಆಗ ತಾಯಿಯು ಗಾಬರಿಯಿಂದ ಧಾವಿಸಿ ಬಂದು ಮಗುವನ್ನು ಮೊಸಳೆಯ ಮುಖದಿಂದ ಪಾರುಮಾಡಬೇಕೆಂದು ಎಳೆಯತೊಡಗಿದಳು. ಆದರೆ ಬಲಿಷ್ಠವಾದ ಮೊಸಳೆಯು ನೀರಿನಲ್ಲಿ ಜಗ್ಗಿ ಎಳೆಯತೊಡಗಿತು.

ಅದೇ ವೇಳೆಯಲ್ಲಿ ದಂಡೆಯ ಮೇಲೆ ಸ್ನಾನ ಮಾಡಿ ಅನುಷ್ಠಾನ ಮಾಡುತ್ತ ಕುಳಿತ ಕಶ್ಯಪರು ತಕ್ಷಣದಲ್ಲಿ ತಾವೂ ನೀರಿಗೆ ಧುಮುಕಿದರು. ತಾಯಿ ಮಕ್ಕಳು ಮೊಸಳೆಯೊಡನೆ ಹೋರಾಡುವ ಸ್ಥಾನಕ್ಕೆ ಬಂದು ಮೊಸಳೆಯಿಂದ ಮಗುವನ್ನು ಬಿಡಿಸಲು ಹೆಣಗಾಡಿದರು. ಅವರ ಶಕ್ತಿಯು ಕುಂಠಿತವಾಯಿತು. ಆಗ ಆ ಮಗುವು ತನ್ನ ತಂದೆತಾಯಿಗಳಿಗೆ ಶ್ರಮವಾಗಬಾರದೆಂದು ತಾನೇ ಆ ಮೊಸಳೆಯನ್ನು ರಭಸದಿಂದ ಹಿಡಿದೆಳೆದು ಸಣ್ಣ ಹುಲ್ಲುಕಡ್ಡಿಯನ್ನು ಎಸೆಯುವಂತೆ ನಿರಾಯಾಸವಾಗಿ ದಡದ ಮೇಲೆ ಬಿಸುಟಿದನು. ಆ ಬಾಲಕನು ನೆಲದ ಮೇಲೆ ಅಪ್ಪಳಿಸಿದ್ದರಿಂದ ಅದರ ಹೊಡೆತಕ್ಕೆ ಮೊಸಳೆಯ ದೇಹವು ಭಿನ್ನ ಭಿನ್ನವಾಗಿ ನೆಲದಮೇಲೆ ಸತ್ತುಬಿದ್ದಿತು. ಆಗ ಅದಿತಿ ದೇವಿಯು ಆನಂದಭರಿತಳಾಗಿ ಆ ಮಗುವನ್ನು ಎತ್ತಿಕೊಂಡು ಶಿಷ್ಯರೊಡನೆ ಮೊಸಳೆಯ ದೇಹವು ಬಿದ್ದ ಸ್ಥಳಕ್ಕೆ ಬಂದು ನಿಂತಳು. ಆ ಮೊಸಳೆಯ ದೇಹದಿಂದ ಓರ್ವತೇಜಸ್ವಿಯಾದ ಚಿತ್ರ ಎಂಬ ಗಂಧರ್ವರಾಜನು ಎದ್ದು ನಿಂತನು. ಆ ಚಿತ್ರ ಗಂಧರ್ವನು ಆ ಬಾಲಕನಿಗೆ ಕೈ ಮುಗಿದು ಹೇಳಿದನು.

**ಚಿತ್ರಗಂಧರ್ವ :-** ''ನಾನು ಪೂರ್ವಜನ್ಮದಲ್ಲಿ ಓರ್ವಗಂಧರ್ವರಾಜನಾಗಿದ್ದೆ. ನನ್ನ ಮನೆಯಲ್ಲಿ ನಡೆದ ಒಂದು ವಿವಾಹ ಮಂಗಲಕಾರ್ಯಕ್ಕೆ ಗಂಧರ್ವರು ದೇವತೆಗಳು, ಮುನಿಮಹರ್ಷಿಗಳು ಬಂದಿದ್ದರು. ನಾನು ಬಂದವರೆಲ್ಲರನ್ನೂ ಅವರವರ ಯೋಗ್ಯತೆಗೆ ಅನುಗುಣವಾಗಿ ಆದರಾತಿಥ್ಯವನ್ನು ನೀಡಿ ಗೌರವಿಸಿದೆನು. ಆದರೆ ದುರ್ದೈವದಿಂದ ಮಹಾತ್ಮರಾದ ಭೃಗುಮುನಿಗಳನ್ನು ಪೂಜಿಸುವದನ್ನು ಮರೆತುಬಿಟ್ಟೆ. ಆಗ ಅವರು ''ಮದಾಂಧ, ನೀನು ಮೊಸಳೆಯಾಗಿ ಜನ್ಮವೆತ್ತಿ ಒಂದು ಸರೋವರದಲ್ಲಿ ಇದ್ದು ಕಾಲವನ್ನು ಕಳೆ'' ಎಂದು ಶಾಪಕೊಟ್ಟರು.

ಆಗ ಭಯಭ್ರಾಂತನಾದ ನಾನು ಅವರನ್ನು ಬಹುವಿಧವಾಗಿ ಬೇಡಿಕೊಂಡೆ. ಆಗ ಆ ಮಹರ್ಷಿಗಳು ''ಕಶ್ಯಪನಂದನನಾಗಿ ಅವತರಿಸುವ ಮಹಾಗಣಪತಿಯು ನಿನ್ನನ್ನು ಸ್ಪರ್ಶಮಾಡಿದಾಗ ನಿನಗೆ ಈ ನಕ್ರದೇಹದಿಂದ ಮುಕ್ತಿಯಾಗುವದು'' ಎಂದು ಉಶ್ಶಾಪವಿತ್ತರು. ಅವರ ಶಾಪದಂತೆ ನಾನು ಈ ಸರೋವರದಲ್ಲಿ ನಕ್ರನಾಗಿ ಬಿದ್ದು ಈಗ ನಿನ್ನ ದೇಹಸ್ಪರ್ಶದಿಂದ ಶಾಪಮೋಚನವಾಗಿ ನನ್ನ ಮೊದಲಿನ ಗಂಧರ್ವ ದೇಹವನ್ನು ಪಡೆದು ನಿಂತಿದ್ದೇನೆ. ಲೋಕವಿಡಂಬನಾರ್ಥವಾಗಿ ನೀನು ಎಲ್ಲರ ಕಣ್ಣಿಗೆ ಸಾಮಾನ್ಯಬಾಲಕನಂತೆ ಕಂಡರೂ ವಾಸ್ತವಿಕವಾಗಿ ನೀನು ಸಾಕ್ಷಾತ್ ಗಜಾನನನೇ ಆಗಿರುವಿ. ಇಲ್ಲದಿದ್ದರೆ ನನಗೆ ಮೊಸಳೆಯ ರೂಪದಿಂದ ಮುಕ್ತಿಯೇ ಆಗುತ್ತಿರಲಿಲ್ಲ. ನಿನ್ನ ಪಾದರವಿಂದಗಳಲ್ಲಿ ಮುಂದಾದರೂ ನನಗೆ ಅವಿಚ್ಛಿನ್ನ ಭಕ್ತಿಯನ್ನು ನೀಡು'' ಎಂದು ಹೇಳಿ ಆ ದೇವದೇವನನ್ನು ಪೂಜಿಸಿ ಪ್ರದಕ್ಷಿಣೆ ಮಾಡಿ ನಮಸ್ಕಾರ ಹಾಕಿ ತನ್ನ ಲೋಕಕ್ಕೆ ತೆರಳಿದನು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ನಕ್ರಶಾಪವಿಮೋಕ್ಷಣ ಎಂಬ ಎಂಟನೇ ಅಧ್ಯಾಯ ಮುಗಿದುದು*

—o—

## ಅಧ್ಯಾಯ - ೯

ದೇವಗಾಯಕರಾದ ಹಾಹಾ, ಹೂಹೂ ಮೊದಲಾದ ಗಂಧರ್ವರು ತುಂಬುರು ಎಂಬ ಗಂಧರ್ವನೊಡನೆ ಕೂಡಿಕೊಂಡು ಒಮ್ಮೆ ಕೈಲಾಸಪರ್ವತಕ್ಕೆ ಹೊರಟಿದ್ದರು. ದಾರಿಯಲ್ಲಿ ಕಶ್ಯಪಋಷಿಯ ಆಶ್ರಮದಲ್ಲಿ ಅವರ ದರ್ಶನಕ್ಕಾಗಿ ತಂಗಿದರು. ಮುನಿಗಳು ಅವರೆಲ್ಲರಿಗೂ ತಮ್ಮ ಆತಿಥ್ಯವನ್ನು ಸ್ವೀಕರಿಸಿ ಮುಂದೆ ಕೈಲಾಸಪತಿಯ ದರ್ಶನಕ್ಕೆ ತೆರಳಬೇಕೆಂದು ಹೇಳಿದರು. ಅದಕ್ಕೆ ಒಪ್ಪಿ ಆ ಗಂಧರ್ವರೆಲ್ಲರೂ ಸ್ನಾನಮಾಡಿಕೊಂಡು ಬಂದು ತಮ್ಮ ನಿತ್ಯಮಾಡುವ ಪೂಜೆಯಲ್ಲಿ ಆಸಕ್ತರಾದರು. ಅವರೆಲ್ಲರೂ ವಿಷ್ಣುಭಕ್ತರಾದರೂ ಲೋಕಾಚಾರಕ್ಕೆ ಅನುಸಾರವಾಗಿ ಶಿವ, ಪಾರ್ವತಿ, ವಿಷ್ಣು, ಗಣಪತಿ, ಸೂರ್ಯ ಈ ಪಂಚದೇವತಾ ಮೂರ್ತಿಗಳನ್ನು ತಮ್ಮ ಎದುರು ಇರಿಸಿಕೊಂಡು ಪೂಜೆ ಮಾಡುತ್ತಿದ್ದರು. ಆ ಪೂಜೆಯ ಸಮಯದಲ್ಲಿ ಅವರು ಏಕಾಗ್ರಚಿತ್ತದಿಂದ ಆ ತಮ್ಮ ಇಷ್ಟದೇವತೆಗಳನ್ನು ಧ್ಯಾನಿಸುತ್ತ ಕಣ್ಣು ಮುಚ್ಚಿ ಮಾನಸಪೂಜೆಯಲ್ಲಿ ತೊಡಗಿದ್ದರು. ಆಗ ಕಶ್ಯಪರ ಮಗನಾದ ಶಿಶುರೂಪಿ ವಿನಾಯಕನು ಆಟವಾಡುತ್ತ ಅಲ್ಲಿಗೆ ಬಂದು ಆ ಐದೂ ಮೂರ್ತಿಗಳನ್ನು ಜಪಮಗ್ನರಾಗಿ ಕಣ್ಣುಮುಚ್ಚಿಕುಳಿತ ಗಂಧರ್ವರಿಗೆ ಗೊತ್ತಾಗದಂತೆ ಹೊರಗೆ ಎಸೆದು ಬಿಟ್ಟನು. ಮತ್ತು ತಾನು ಅಗ್ನಿಹೋತ್ರಶಾಲೆಯಲ್ಲಿ ಹೋಗಿ ಕುಳಿತುಕೊಂಡನು.

ಅಂತರ್ಮುಖಿಗಳಾಗಿ ಮಾನಸಪೂಜೆಯಲ್ಲಿ ಮಗ್ನರಾಗಿ ಕುಳಿತುಕೊಂಡ ಗಂಧರ್ವರು ತಮ್ಮ ಭಾವಸಮಾಧಿಯಿಂದ ಇಳಿದು ಕಣ್ಣು ತೆರೆದು ನೋಡುವಷ್ಟರಲ್ಲಿ ತಾವು ಪ್ರತಿನಿತ್ಯ ಉಪಾಸನೆ ಮಾಡುವ ದೇವತಾಮೂರ್ತಿಗಳೆಲ್ಲವೂ ಮಾಯವಾಗಿದ್ದವು. ಆಗ ಅವರಿಗೆ ಗಾಬರಿಯಾಗಿ ಕಶ್ಯಪರನ್ನು ಕೇಳಿದರು. ಆಗ ಕಶ್ಯಪರು ತಮ್ಮ ಶಿಷ್ಯರನ್ನು ಕರೆದು ''ಇಲ್ಲಿ ಇದ್ದ ಪಂಚದೇವತಾಮೂರ್ತಿಗಳನ್ನು ಕದ್ದವರು ಯಾರು ? ನಿಜ ಹೇಳಿರಿ ? ಇಂದಿನವರೆಗೆ ನಮ್ಮ ಆಶ್ರಮದಲ್ಲಿ ಎಂದೂ ಕಳ್ಳತನ ಆಗಿಲ್ಲ. ಈಗ ಹೇಗೆ ಈ ಮೂರ್ತಿಚೌರ್ಯ ಸಂಭವಿಸಿತು ?'' ಎಂದು ಗದರಿಸಿ ಕೇಳಿದರು.

ಆಗ ಆ ಶಿಷ್ಯರು ''ನಾವು ಎಂದೂ ಕಳ್ಳತನಕ್ಕೆ ಕೈ ಹಾಕಿದವರಲ್ಲ. ಚಪಲಸ್ವಭಾವದ ನಿಮ್ಮ ಮಗನನ್ನೇ ವಿಚಾರಿಸಿರಿ'' ಎಂದು ಹೇಳಿದರು.

ಆಗ ಕಶ್ಯಪರು ಕೋಪಗೊಂಡು ಕೈಯಲ್ಲಿ ಒಂದು ಬಡಿಗೆಯನ್ನು ಹಿಡಿದುಕೊಂಡು ತಮ್ಮ ಮಗನು ಅಡಗಿಕೊಂಡು ಕುಳಿತ ಅಗ್ನಿಹೋತ್ರಶಾಲೆಗೆ ಬಂದರು ಮತ್ತು ಆ ಬಾಲಕನ ಮುಂಗೈ ಹಿಡಿದು ದರದರನೇ ಎಳೆಯುತ್ತ ಹಾಹಾ, ಹೂಹೂ ಮುಂತಾದ ಗಂಧರ್ವರು ಕುಳಿತಲ್ಲಿಗೆ ತಂದು ನಿಲ್ಲಿಸಿದರು. ಮತ್ತು ಆ ಮಗನಿಗೆ ''ಪುತ್ರ, ನೀನು ಕದ್ದು ಒಯ್ದಿರುವ ಇವರ ಉಪಾಸ್ಯ ದೇವತಾಮೂರ್ತಿಗಳನ್ನು ಕೂಡಲೇ ತಂದುಕೊಡು. ಇಲ್ಲದಿದ್ದರೆ ನಿನ್ನನ್ನು ಕೊಂದು ಹಾಕುತ್ತೇನೆ'' ಎಂದು ಹೇಳಿದರು. ಆಗ ಆ ಬಾಲಕನು ''ತಂದೆಯೇ ನಾನು ಆ ಮೂರ್ತಿಗಳನ್ನು ಕದ್ದಿಲ್ಲ. ಒಯ್ದಿಲ್ಲ, ಬೇಕಾದರೆ ಅದಕ್ಕಾಗಿ ನಾನು ಆಣೆ ಮಾಡುತ್ತೇನೆ. ವ್ಯರ್ಥವಾಗಿ ನನ್ನನ್ನು ಏಕೆ ಶಿಕ್ಷಿಸುವಿರಿ.'' ಎಂದು ಅಳತೊಡಗಿದನು.

ಈ ಗಲಾಟೆಯನ್ನು ಕೇಳಿ ತಾಯಿಯು ಓಡಿ ಬಂದಳು. ತಾಯಿಯನ್ನು ಕಂಡಕೂಡಲೇ ಹುಡುಗನು ಓಡಿ ಬಂದು ''ತಾಯಿ, ನಾನು ಆ ಮೂರ್ತಿಗಳನ್ನು ಕೊಂಡೊಯ್ದಿಲ್ಲ. ಆ ಮೂರ್ತಿಗಳನ್ನು ನಾನೇನು ತಿನ್ನುತ್ತೇನೆಯೇ ? ನಾನು ನುಂಗಿಹಾಕಿದ್ದೇನೆ ಎಂದು

ನಿಮಗೆ ಸಂಶಯವಿದ್ದರೆ ನಾನು ಬಾಯಿ ತೆರೆಯುತ್ತೇನೆ. ನೀನು ಬೇಕಾದರೆ ನೋಡು'' ಎಂದು ಬಾಯ್ದೆರೆದು ತಾಯಿಯ ಎದುರು ನಿಂತನು.

ಆಗ ತಾಯಿಗೆ ಆ ಮಗುವಿನ ಪುಟ್ಟ ಬಾಯಿಯಲ್ಲಿ ಬ್ರಹ್ಮಾಂಡವೇ ತೋರತೊಡಗಿತು. ಆ ಮಗುವಿನ ಮುದ್ದು ಮುಖದಲ್ಲಿ ಸಮಗ್ರವಾದ ವಿಶ್ವವೇ ಗೋಚರವಾಯಿತು. ಅದನ್ನು ಕಂಡು ಅದಿತಿಯು ದಿಗ್ಭ್ರಾಂತಳಾಗಿ ಮೂರ್ಛೆಹೊಂದಿ ನೆಲದ ಮೇಲೆ ದಪ್ಪನೆ ಬಿದ್ದು ಬಿಟ್ಟಳು. ಆಗ ಕಶ್ಯಪರು ಕುತೂಹಲಾಕ್ರಾಂತರಾಗಿ ಆ ಮಗುವಿನ ಮುಖದಲ್ಲಿ ಇದ್ದುದಾದರೂ ಏನು ? ಎಂದು ತಿಳಿಯಬೇಕೆಂಬ ತವಕದಿಂದ ಆ ಮಗುವಿನ ಮುಖವನ್ನು ನೋಡಿದರು. ಆ ಪುಟ್ಟಬಾಯಿಯಲ್ಲಿ ಕೈಲಾಸಗಿರಿ, ಪಾರ್ವತಿ ಪರಮೇಶ್ವರರು, ವೈಕುಂಠಲೋಕ, ಸತ್ಯಲೋಕ, ಸ್ವರ್ಗಲೋಕ, ಹರಿಹರ, ಬ್ರಹ್ಮ, ಲಕ್ಷ್ಮೀ, ಸರಸ್ವತಿ, ಶಚೀ, ಇಂದ್ರ, ಮೊದಲಾದ ಎಲ್ಲ ಲೋಕಗಳೂ ಮರಡಿ, ಗುಡ್ಡೆ, ಉಪವನ, ನದ, ನದಿ, ಮುದ್ರ, ದಾನವ, ಮಾನವ, ಯಕ್ಷ ರಾಕ್ಷಸರಿಂದ ಕೂಡಿದ ಅಖಂಡ ಭೂಮಂಡಲವೂ ಗೋಚರಿಸಿತು.

ಅಷ್ಟರಲ್ಲಿ ಅದಿತಿಗೆ ಪ್ರಪಂಚದ ಧ್ಯಾನವು ಬಂದಿತು. ತಟ್ಟನೇ ಆ ಮಗುವನ್ನು ಎತ್ತಿಕೊಂಡು ಅದಕ್ಕೆ ತನ್ನ ಹಾಲನ್ನು ಊಣಿಸತೊಡಗಿದಳು. ಕಶ್ಯಪರು ಕೂಡ ತಮ್ಮ ಕೈಯಲ್ಲಿದ್ದ ಹೊಡೆಯಲು ತಂದ ದೊಣ್ಣೆಯನ್ನು ದೂರ ಒಗೆದು ಆ ತಮ್ಮ ಚಿಕ್ಕ ಮಗು ಸಾಕ್ಷಾತ್ ಜಗದೀಶ್ವರ ಎಂದು ತಿಳಿದು ಆ ಮಗುವಿಗೆ ನಮಸ್ಕಾರ ಮಾಡಿದರು. ಅವರಿಗೆ ತಮ್ಮ ಮಗನ ವಿಷಯವಾಗಿ ಬಹಳ ಹೆಮ್ಮೆ ಎನಿಸಿತು.

ತಮ್ಮ ಮನೆಗೆ ಅತಿಥಿಗಳಾಗಿ ಬಂದ ಗಂಧರ್ವರಿಗೆ ''ಮಹಾತ್ಮರೇ, ಪಾಕವು ಸಿದ್ಧವಾಗಿದೆ. ಭೋಜನಕ್ಕೆ ದಯಮಾಡಿಸಿ'' ಎಂದು ಕೇಳಿಕೊಂಡರು. ಆಗ ಹಾಹಾ, ಹೂಹೂ ಮೊದಲಾದ ಗಂಧರ್ವರು ''ನಿಮ್ಮ ಆಶ್ರಮದಲ್ಲಿ ನಾವು ಪೂಜಿಸುವ ದೇವತಾಪಂಚಾಯತನ ಮೂರ್ತಿಗಳು ಕಳವಾಗಿವೆ. ಆ ಮೂರ್ತಿಗಳು ದೊರಕುವವರೆಗೆ ನಾವು ನಿಮ್ಮ ಮನೆಯಲ್ಲಿ ಅನ್ನವನ್ನು ಸ್ವೀಕರಿಸುವದಿಲ್ಲ. ನೀರನ್ನೂ ಕೂಡ ಕುಡಿಯುವದಿಲ್ಲ. ನಿಮ್ಮ ಮಗನೇ ಆ ನಮ್ಮ ಮೂರ್ತಿಗಳನ್ನು ಕಳವು ಮಾಡಿದ್ದಾನೆ'' ಎಂದು ನುಡಿದು ಆ ಮಗುವಿನ ಕಡೆ ಕ್ರೂರದೃಷ್ಟಿಯನ್ನು ನೆಟ್ಟು ನೋಡತೊಡಗಿದರು. ಇದು ಏನು ಆಶ್ಚರ್ಯ! ಆ ಗಂಧರ್ವರ ಕಣ್ಣಿಗೆ ವಿಷ್ಣು, ಶಿವ, ಸೂರ್ಯ, ಪಾರ್ವತಿ, ಮಹಾಗಣಪತಿ ಈ ಐದುರೂಪಗಳಿಂದ ಆ ಬಾಲಕನು ತೋರಲಾರಂಭಿಸಿದನು. ಈ ಅದ್ಭುತವನ್ನು ಕಂಡು ಅತಿಥಿಗಳಾದ ಗಂಧರ್ವರು ಬೆಚ್ಚಿ ಬೆರಗಾಗಿ ಆ ಭಗವಂತನನ್ನು ಬಾಗಿ ನಮಸ್ಕರಿಸಿದರು. ಮತ್ತು ಬಗೆಬಗೆಯಾಗಿ ಸ್ತೋತ್ರರೂಪದಿಂದ ಅವನನ್ನು ಪ್ರಾರ್ಥಿಸಿ

**ತವಾವತಾರಾನ್ ನಹಿ ಕೋಪಿ ಶಕ್ತೋ**
**ವೇತ್ತುಂ ಕಥಂ ವಾ ಕೂತಿಚಿತ್ ಕದೇತಿ ।**
**ಯೋಗೀಶ, ಮಾಯೇಶ, ಗಣೇಶ ಭೂಮನ್**
**ನಮೋ ನಮಸ್ತೇ ಭಗವನ್ ನಮಸ್ತೇ**

ಮಹೇಶ ಸ್ವರೂಪಿಯಾದ ಗಣೇಶನೇ, ನೀನು ಯಾವ ರೂಪದಿಂದ ಎಂದು ಎಲ್ಲಿ ಅವತಾರ ಮಾಡುತ್ತಿ ಎಂದು ಯಾವನೂ ತಿಳಿಯಲಾರ. ಪರಬ್ರಹ್ಮಸ್ವರೂಪಿಯಾದ ಭಗವಂತನೇ, ನಿನಗೆ ನಮೋ ನಮಃ ನಮೋ ನಮಃ ಎಂದು ಹೇಳಿ ಮತ್ತೆ ಮತ್ತೆ ನಮಸ್ಕರಿಸಿದನು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಗಂಧರ್ವಕೃತ ಗಣೇಶಸ್ತೋತ್ರ, ಎಂಬ ಒಂಬತ್ತನೇ ಅಧ್ಯಾಯ ಮುಗಿದುದು*

**ಬ್ರಹ್ಮ :-** ಮೇಧಾವಿಯಾದ ಕಶ್ಯಪನು ಐದನೇಯ ವರ್ಷದಲ್ಲಿ ಒಂದು ಶುಭಮುಹೂರ್ತದಲ್ಲಿ ತನ್ನ ಮಗನ ಉಪನಯನವನ್ನು ಮಾಡಿದನು. ಯೋಗ್ಯರಾದ ಬ್ರಾಹ್ಮಣರನ್ನು ಕರೆಸಿ ಹೋಮಹವನಗಳನ್ನು ಮಾಡಿ ಬಾಲಕನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಗಾಯತ್ರಿಮಹಾಮಂತ್ರವನ್ನು ಉಪದೇಶಿಸಿದನು. ಆ ಉಪನಯನ ಮಹೋತ್ಸವಕ್ಕೆ ಅನೇಕ ದೇವತೆಗಳೂ, ಗಂಧರ್ವರೂ ಮುನಿಮಹರ್ಷಿಗಳೂ ಯಕ್ಷ ರಾಕ್ಷಸರೂ ಆಗಮಿಸಿದ್ದರು. ಅವರಲ್ಲಿ ವಿಧಾತಾ, ಪಿಂಗಾಕ್ಷ, ವಿಶಾಲ, ಪಿಂಗಲ, ಚಪಲ ಎಂಬ ಐವರು ಕ್ರೂರ ರಾಕ್ಷಸರು ಬ್ರಾಹ್ಮಣವೇಷವನ್ನು ಧರಿಸಿ ತ್ರಿಪುಂಡ್ರ, ಭಸ್ಮ, ರುದ್ರಾಕ್ಷ ಮಾಲೆಗಳಿಂದ ಅಂಲಕೃತರಾಗಿ ಬ್ರಹ್ಮವೃಂದದಲ್ಲಿ ಸೇರಿಕುಳಿತು ಕೊಂಡಿದ್ದರು. ಆ ನೀಚರಕ್ಕಸರು ಬ್ರಾಹ್ಮಣವೇಷದಲ್ಲಿ ಇದ್ದು ಬಾಲಕನ ಮೇಲೆ ನಿಶಿತವಾದ ಬಾಣಗಳನ್ನು ಪ್ರಯೋಗಿಸಿದರು. ತತ್ಕಾಲದಲ್ಲಿ ಇದನ್ನು ಕಂಡುಹಿಡಿದ ಆ ಬಾಲಕನು ತನ್ನ ಮುಂದಿರುವ ಬಟ್ಟಲದಲ್ಲಿದ್ದ ಮಂತ್ರಾಕ್ಷತೆಯನ್ನು ಅಭಿಮಂತ್ರಿಸಿ ಆ ರಾಕ್ಷಸರ ಮೇಲೆ ಎರಚಿದನು. ಕೂಡಲೇ ಆ ರಾಕ್ಷಸರ ಪ್ರಾಣಪಕ್ಷಿಗಳು ಹಾರಿಹೋದವು. ಅವರ ಛದ್ಮವೇಷವು ಮಾಯವಾಗಿ ಭಯಂಕರ ದೈತ್ಯದೇಹದಿಂದ ಅವರು ಮೃತರಾಗಿ ಬಿದ್ದರು. ಆಗ ಬ್ರಹ್ಮಾದಿ ದೇವತೆಗಳು ತಮ್ಮ ವಿಮಾನದಲ್ಲಿ ಕುಳಿತು ಆ ಬಾಲಕ ಭಗವಂತನ ಮೇಲೆ ಪುಷ್ಪವೃಷ್ಟಿ ಮಾಡಿದರು. ಬ್ರಹ್ಮದೇವರು ಇಳಿದು ಬಂದು ಆ ಭಗವಂತನಿಗೆ ಕಮಲಪುಷ್ಪವನ್ನು ನೀಡಿದರು. ಮತ್ತು ಆ ಮಗುವನ್ನು ಭಕ್ತಿಯಿಂದ ಪೂಜಿಸಿ **ಬ್ರಹ್ಮಣಸ್ಪತಿ** ಎಂದು ಹೆಸರನ್ನು ಇಟ್ಟರು. ಅನಂತರ ಬೃಹಸ್ಪತ್ಯಾಚಾರ್ಯನು **ಭಾರಭೂತಿ** ಎಂದೂ ಕುಬೇರನು **ಸುರಾನಂದ** ಎಂದೂ ವರುಣನು ತನ್ನ ಕೈಯಲ್ಲಿಯ ಪಾಶವವನ್ನು ಕೊಟ್ಟು **ಸರ್ವಪ್ರಿಯ** ಎಂದೂ, ಮಹಾದೇವನು ತನ್ನ ತ್ರಿಶೂಲ ಹಾಗೂ ತಲೆಯಲ್ಲಿದ್ದ ಭಾಲಚಂದ್ರನನ್ನು ಕೊಟ್ಟು **ಭಾಲಚಂದ್ರ** ಎಂದೂ ರೇಣುಕಾದೇವಿಯು ಗಂಡುಗೊಡಲಿಯನ್ನು ಬಾಲಕನ ಕೈಗೆ ಇತ್ತು **ಪರಶುಹಸ್ತ** ಎಂದೂ ಬೇರೆ ಬೇರೆ ಹೆಸರುಗಳನ್ನು ಇಟ್ಟು ಎಲ್ಲರಿಗೂ ಕೇಳುವಂತೆ ಆ ಆ ನಾಮಗಳನ್ನು ಉದ್ಘೋಷಿಸಿದರು. ಅನಂತರ ತಾಯಿಯಾದ ಪಾರ್ವತಿಯು ತನ್ನ ವಾಹನವಾದ ಸಿಂಹವನ್ನು ಅವನಿಗೆ ಕೊಟ್ಟು **ಸಿಂಹವಾಹನ** ಎಂಬ ಸುಂದರವಾದ ಹೆಸರಿನಿಂದ ಆ ಮಗುವನ್ನು ಕರೆದಳು.

ಇಷ್ಟೆಲ್ಲ ದೇವಾಧಿದೇವತೆಗಳು ಭಕ್ತಿಯಿಂದ ಬಾಲರೂಪಿ ಗಣೇಶನನ್ನು ಪೂಜಿಸಿದರೂ ದೇವೇಂದ್ರನು ಮಾತ್ರ ಆ ವಟುವಿಗೆ ಯಾವ ವಸ್ತುವನ್ನೂ ಕಾಣಿಕೆಯಾಗಿ ನೀಡಲಿಲ್ಲ. ಅವನನ್ನು ಪೂಜಿಸಲು ಇಲ್ಲ. ದೇವೇಂದ್ರನ ಈ ದುರಭಿಮಾನವನ್ನೂ ಈ ದುರಭಿಸಂಧಿಯನ್ನೂ ತಮ್ಮ ದಿವ್ಯ ದಿವ್ಯದೃಷ್ಟಿಯಿಂದ ತಿಳಿದು ಕಶ್ಯಪರು ತಮ್ಮ ಹಿರಿಯ ಮಗನಾದ ದೇವೇಂದ್ರನಿಗೆ ಹಿತೋಪದೇಶವನ್ನು ಮಾಡಿದರು.

**ಕಶ್ಯಪ :-** ಅದ್ಭುತವಾದ, ಅತ್ಯದ್ಭುತವಾದ ಕಾರ್ಯವನ್ನು ಮಾಡುವ ಸಾಮರ್ಥ್ಯವು ಯಾವನಲ್ಲಿ ಇರುವದೋ ಮತ್ತು ಯಾವನು ಸರ್ವಸದ್ಗುಣಗಳಿಂದ ಪರಿಪೂರ್ಣನಾಗಿರುವನೋ ಅವನಿಗೆ ಅವಶ್ಯವಾಗಿ ನಮಸ್ಕರಿಸಬೇಕು ಮತ್ತು ಅವನನ್ನು ಪೂಜಿಸಬೇಕು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಉಪನಯನ ನಾನಾ ನಾಮನಿರೂಪಣ ಎಂಬ ಹತ್ತನೇಯ ಅಧ್ಯಾಯ ಮುಗಿದುದು*

**ಕಶ್ಯಪ :-** ದೇವೇಂದ್ರ, ನನ್ನ ಜನ್ಮಾಂತರದ ಯಾವ ಪುಣ್ಯ ಪರಿಪಾಕವೋ ನಾನಂತೂ ಕಾಣೆ. ಪರಮಪುರುಷನೇ ನನ್ನ ಮಗನಾಗಿ ಅವತರಿಸಿದ್ದಾನೆ. ಇವನ ಗುಣಗಳನ್ನು ಬಣ್ಣಿಸುವದು ಯಾರಿಂದಲೂ ಸಾಧ್ಯವಿಲ್ಲ. ನಾನು ಕಂಡ ಇವನ ಮಹಿಮೆಯನ್ನು ಹೇಳುತ್ತೇನೆ ಕೇಳು. ಇವನು ಬಹಳ ಚಿಕ್ಕ ಕೂಸು ಆಗಿರುವಾಗಲೇ ವಿರಜೆ ಎಂಬ ರಾಕ್ಷಸಿಯು ಅವನನ್ನು ನುಂಗಿ ಬಿಟ್ಟಿದ್ದಳು. ಅರೆಚಣದಲ್ಲಿ ಈ ಬಾಲಕನು ಅವಳನ್ನು ಕೊಂದು ಹಾಕಿದ. ಕೆಲವು ಕಾಲಗಳ ನಂತರ ಗಿಳಿಯ ರೂಪದಿಂದ ಬಂದ ಇಬ್ಬರು ಮಾಯಾವಿ ರಾಕ್ಷಸರನ್ನು ಕೈಯಿಂದ ಹಿಡಿದು ನೆಲಕ್ಕೆ ಅಪ್ಪಳಿಸಿ ಸಂಹಾರ ಮಾಡಿದನು. ಮತ್ತೊಮ್ಮೆ ಋಷಿಯ ಶಾಪದಿಂದ ಮೊಸಳೆಯಾಗಿ ನೀರಿನಲ್ಲಿ ಬಿದ್ದ ಚಿತ್ರ ಎಂಬ ಗಂಧರ್ವನು ಈ ಮಗುವಿನ ದೇಹಸ್ಪರ್ಶಮಾತ್ರದಿಂದಲೇ ಶಾಪಮುಕ್ತನಾಗಿ ದಿವ್ಯದೇಹ ಧರಿಸಿ ತನ್ನ ಲೋಕಕ್ಕೆ ತೆರಳಿದನು. ಕೈಲಾಸಪರ್ವತಕ್ಕೆ ಹೊರಟಿದ್ದ ಹಾಹಾ, ಹೂಹೂ ತುಂಬರು ಮೊದಲಾದ ಗಂಧರ್ವರು ನನ್ನ ಆಶ್ರಮಕ್ಕೆ ಬಂದಾಗ ಈ ಬಾಲಕನು ಅವರು ಪೂಜಿಸುವ ಪಂಚಾಯತನ ವಿಗ್ರಹಗಳನ್ನೆಲ್ಲ ದೂರ ಒಗೆದನು. ಅನಂತರ ಅವರು ಕಣ್ಣುಬಿಟ್ಟು ನೋಡಿದಾಗ ಅವರಿಗೆ ಚಕ್ಷುರ್ಗೋಚರನಾದನು. ಈಗ ನೀನೇ ನೋಡಿದೆಯಲ್ಲವೆ ? ಐದು ರಾಕ್ಷಸರನ್ನು ಆಟವಾಡುತ್ತಲೇ ಇವನು ವಧಿಸಿ ಹಾಕಿದನು.

ಇದರಿಂದ ಇಂದ್ರನಿಗೆ ಸಮಾಧಾನವಾಗಲಿಲ್ಲ. ಆಗ ದೇವೇಂದ್ರನು ತನ್ನ ಪಕ್ಕದಲ್ಲಿದ್ದ ವಾಯುದೇವನಿಗೆ ''ನಿನ್ನ ಶಕ್ತಿಯನ್ನೆಲ್ಲ ಪ್ರಯೋಗಿಸಿ ಈ ಮಗುವನ್ನು ಮುಗಿಲುಮಂಟಪದವರೆಗೆ ಹಾರಾಡಿಸು'' ಎಂದು ಹೇಳಿದನು. ವಾಯುವಿಗೆ ಆ ವಟುವಿನ ಕೂದಲನ್ನು ಕೂಡ ಅಲುಗಾಡಿಸಲು ಶಕ್ಯವಾಗಲಿಲ್ಲ. ಆಗ ಇಂದ್ರನು ಅಗ್ನಿಗೆ ''ಈ ಮಗುವನ್ನು ಸುಟ್ಟುಹಾಕು'' ಎಂದು ಆಜ್ಞೆ ನೀಡಿದನು. ಆಗ ಅಗ್ನಿಯು ಪ್ರಳಯಾಗ್ನಿಯ ಸ್ವರೂಪವನ್ನು ಧರಿಸಿ ಮೂರು ಲೋಕಗಳನ್ನು ಸುಟ್ಟು ಹಾಕುವಂತೆ ತನ್ನ ದಾಹಕಶಕ್ತಿಯನ್ನು ಪ್ರಜ್ವಲಗೊಳಿಸಿ ಆ ಮಗುವಿನ ಸಮೀಪಕ್ಕೆ ಧಾವಿಸಿ ಬಂದನು. ಆಗ ಆ ಬಾಲಕನು ಲೀಲಾಜಾಲವಾಗಿ ಆ ಪ್ರಳಯಾಗ್ನಿಯನ್ನು ನುಂಗಿಬಿಟ್ಟನು. ''ಇದನ್ನು ನೋಡಿ ದೇವೇಂದ್ರನು ಕೋಪದಿಂದ ಕೆರಳಿ ಕೆಂಡವಾಗಿ ತನ್ನ ಸಾವಿರ ಕಣ್ಣುಗಳಿಂದಲೂ ಕೋಪದ ಕಿಡಿಗಳನ್ನು ಕಾರುತ್ತ ಆ ಬಾಲಕನೆಡೆಗೆ ನೋಡತೊಡಗಿದನು.

ಆದರೆ ಸಹಸ್ರಾಕ್ಷನಾದ ಇಂದ್ರನ ಸಾವಿರ ಕಣ್ಣುಗಳಿಗೆ ಕಂಡದ್ದೇನು ? ತನಗಿಂತ ಹೆಚ್ಚು ಕಣ್ಣುಗಳುಳ್ಳ ಸಹಸ್ರಾಕ್ಷ, ಸಹಸ್ರಶೀರ್ಷ, ಸಹಸ್ರಬಾಹು, ಸಹಸ್ರಹಸ್ತ ಸಹಸ್ರಪಾದಗಳಿಂದ ಒಡಗೂಡಿದ ವಿರಾಡ್‌ರೂಪಿಯಾದ ದೇವದೇವನಾದ ಗಣೇಶನು ಪ್ರತ್ಯಕ್ಷಗೋಚರನಾದನು. ಸೂರ್ಯಚಂದ್ರರು ಇವನ ಕಣ್ಣುಗಳಾಗಿ ಹೊಳೆಯುತ್ತಿದ್ದರು. ಸಪ್ತಪಾತಾಳಗಳವರೆಗೆ ಅವನ ಪಾದಗಳು ಪಸರಿಸಿದ್ದವು. ಆ ವಿಶ್ವರೂಪಿಯಾದ ಭಗವಂತನ ರೋಮರೋಮಗಳಲ್ಲಿ ಅನೇಕ ಬ್ರಹ್ಮಾಂಡಗಳು ವಿರಾಜಿಸುತ್ತಿದ್ದವು. ಅದನ್ನೆಲ್ಲ ಕಂಡು

ದೇವೇಂದ್ರನು ದಿಗ್ಭ್ರಮೆಯಾಗಿ ನಿಂತುಕೊಂಡನು. ಕೊನೆಗೆ ಆ ಭಗವಂತನ ಮಹಾಮಹಿಮೆಯ ಅಂತಪಾರವನ್ನು ತಿಳಿಯಲಾರದೇ ಅವನಿಗೆ ನಮಸ್ಕಾರ ಮಾಡಿದನು. ಮತ್ತು ಬಗೆಬಗೆಯಾಗಿ ಸ್ತೋತ್ರಮಾಡಿದನು. ಅವನಿಗೆ ತನ್ನ ಕಾಣಿಕೆಯಾಗಿ ಕಲ್ಪವೃಕ್ಷವನ್ನೂ, ರೂಪ ಯೌವ್ವನಶಾಲಿಯರಾದ ಇಬ್ಬರು ದಾಸಿಯರನ್ನೂ ಅರ್ಪಿಸಿ **ವಿನಾಯಕ** ಎಂದು ಕರೆದು ಪೂಜಿಸಿದನು. ಅವನು ಮಾಡಿದ ಸ್ತೋತ್ರ ಪೂಜೆಗಳಿಂದ ಸಂತುಷ್ಟನಾದ ಆ ವಟುರೂಪಿ ಗಣೇಶನು ವಿಜಯಶಾಲಿಯಾಗು ಎಂದು ದೇವೇಂದ್ರನನ್ನು ಆಶೀರ್ವದಿಸಿದನು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ಇಂದ್ರಗರ್ವಭಂಗ ಎಂಬ ಹನ್ನೊಂದನೇ ಅಧ್ಯಾಯ ಮುಗಿದುದು*

—o—

## ಬಾಲಚರಿತೆಯಲ್ಲಿ ರಾಕ್ಷಸ ವಧೆ

ಅಧ್ಯಾಯ - ೧೨

**ಬ್ರಹ್ಮ :-** ಒಂದು ದಿನ ಕಶ್ಯಪ ಮಹರ್ಷಿಗಳ ತಪೋವನಕ್ಕೆ ಕಾಶಿರಾಜನು ಆಗಮಿಸಿದನು. ಆ ಮಹಾರಾಜನಿಗೆ ರುಚಿಶುಚಿಯಾದ ಷಡ್ರಸೋಪೇತವಾದ ಆಹಾರವನ್ನು ಕೊಟ್ಟು ಆತಿಥ್ಯವನ್ನು ನೀಡಿ ಅವನು ಬಂದ ಕಾರ್ಯವು ಏನು ಎಂದು ಕೇಳಿದರು. ಆಗ ಕಾಶಿರಾಜನು ಕೈ ಮುಗಿದು ''ಮಹರ್ಷಿಗಳೇ, ನನ್ನ ಮಗನಿಗೆ ವಿವಾಹ ಮಂಗಳವನ್ನು ನೆರವೇರಿಸಬೇಕೆಂದು ಸಂಕಲ್ಪಿಸಿದ್ದೇನೆ. ಈ ಮಂಗಳಕಾರ್ಯಕ್ಕೆ ತಮ್ಮನ್ನು ಕರೆಯಬೇಕೆಂದು ಬಂದಿದ್ದೇನೆ. ತಾವು ಈ ಮಂಗಳಕಾರ್ಯಕ್ಕೆ ಆಗಮಿಸಬೇಕು'' ಎಂದು ಪ್ರಾರ್ಥಿಸಿದನು.

**ಕಶ್ಯಪ :-** ಮಹಾರಾಜ, ನಾನು ಚಾತುರ್ಮಾಸ್ಯವ್ರತವನ್ನು ಆರಂಭಿಸಿದ್ದೇನೆ. ಮಧ್ಯದಲ್ಲಿ ಬಿಟ್ಟು ಎಲ್ಲಿಗೂ ಹೋಗುವಂತಿಲ್ಲ. ನೀನು ಈ ನನ್ನ ಮಗನನ್ನು ಕರೆದುಕೊಂಡು ಹೋಗು. ಇವನು ಎಲ್ಲ ಕಾರ್ಯಗಳನ್ನು ಸಾಂಗವಾಗಿ ನಿರ್ವಹಿಸಲು ಸಮರ್ಥನಾಗಿರುತ್ತಾನೆ. ಆದರೆ ಇವನು ಇನ್ನೂ ಚಿಕ್ಕಮಗು. ಇವನು ಹೋದಲ್ಲೆಲ್ಲ ಉತ್ಪಾತಗಳು ಸಂಭವಿಸುವದು ನಮ್ಮ ಅನುಭವ. ಇವನನ್ನು ನಿನ್ನ ಕಣ್ಣರೆಪ್ಪೆಯಂತೆ ರಕ್ಷಿಸು. ನಿನ್ನ ಕಾರ್ಯ ಮುಗಿದ ಬಳಿಕ ಸುರಕ್ಷಿತವಾಗಿ ಮನೆಗೆ ತಂದು ಬಿಟ್ಟುಬಿಡು.'' ಎಂದು ಅದಿತಿದೇವಿಯಿಂದ ಕೂಡಿಕೊಂಡು ಮತ್ತೊಮ್ಮೆ ಮಹಾರಾಜನಿಗೆ ಎಚ್ಚರಿಕೆಯನ್ನು ಕೊಟ್ಟು ಕಳಿಸಿದರು.

ರಾಜನು ಹಾಗೆಯೇ ಆಗಲಿ ಎಂದು ಒಪ್ಪಿಗೆಯಿತ್ತು ಅದಿತಿದೇವಿಗೂ ಕಶ್ಯಪರಿಗೂ ನಮಸ್ಕರಿಸಿ ವಿನಾಯಕನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಪ್ರಯಾಣ ಬೆಳೆಸಿದನು. ದಾರಿಯಲ್ಲಿ ಒಂದು ಗೊಂಡಾರಣ್ಯದಲ್ಲಿ ನರಾಂತಕದೈತ್ಯನ ಚಿಕ್ಕಪ್ಪನೂ ರೌದ್ರಕೇತು ರಾಕ್ಷಸನ ತಮ್ಮನೂ ಆದ ಧೂಮ್ರಾಕ್ಷನು ತಪಸ್ಸು ಮಾಡುತ್ತ ಸೂರ್ಯೋಪಾಸನೆಯನ್ನು ಮಾಡುತ್ತಲಿದ್ದ. ಹತ್ತುಸಾವಿರವರ್ಷಸಾಗಿದ್ದಿತು ಅವನ ಕಠಿಣತರವಾದ ತಪಸ್ಸು. ''ಮೂರು ಲೋಕಗಳೂ ತನಗೆ ವಶವಾಗಬೇಕು. ತನಗೆ ಬೇಡಾದವರನ್ನು ನಿಮಿಷ ಮಾತ್ರದಲ್ಲಿ ಸಂಹರಿಸಿಬಿಡುವಂತಹ ಕ್ರೂರಘೋರ ಆಯುಧವನ್ನು ನನಗೆ ನೀಡು'' ಎಂದು ಅವನು ಸೂರ್ಯನಾರಾಯಣನನ್ನು ಪ್ರಾರ್ಥಿಸುತ್ತಿದ್ದ. ಒಂದು ದೊಡ್ಡ ವೃಕ್ಷದ ಕೊಂಬೆಯನ್ನು ಕಾಲುಗಳಿಂದ ಭದ್ರವಾಗಿ ಹಿಡಿದುಕೊಂಡು ತಲೆಕೆಳಗೆ ಮಾಡಿ ಜೋಲಾಡುತ್ತ ತಪಸ್ಸನ್ನು

ಆಚರಿಸುತ್ತಿದ್ದ. ಇಳಿಬಿದ್ದ ತನ್ನ ತಲೆಗೆ ಸರಿಯಾಗಿ ತಗಲುವಂತೆ ಕೆಳಗೆ ಅಗ್ನಿಕುಂಡವನ್ನು ಹತ್ತಿಸಿ ಅದರಿಂದ ಹೊರಡುವ ಹೊಗೆಯನ್ನು ಕುಡಿಯುತ್ತ ತಪಿಸುತ್ತಲಿದ್ದ.

ಇಂಥ ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಲಿದ್ದ ರಾಕ್ಷಸನಿಗೋಸ್ಕರ ಇಂದ್ರನು ಒಂದು ಅಮೋಘವಾದ ಶಸ್ತ್ರವನ್ನು ಸೂರ್ಯಮಂಡಲದಿಂದ ಕಳುಹಿಸಿದ್ದ. ಆ ಅದ್ಭುತವಾದ ಆಯುಧವು ರಾಕ್ಷಸನು ತಪಸ್ಸುಮಾಡುವ ಸ್ಥಳಕ್ಕೆ ಇಳಿದು ಬರತೊಡಗಿತ್ತು. ಇದೇ ವೇಳೆಯಲ್ಲಿ ಕಾಶಿರಾಜನು ಬಾಲಕನೊಡನೆ ಪ್ರಯಾಣಹೊರಟಿದ್ದ ರಥವು ಆ ಸ್ಥಳಕ್ಕೆ ಬಂದಿತು. ಅಂತರಿಕ್ಷದಿಂದ ಇಳಿದುಬರುವ ಆ ಘೋರವಾದ ಶಸ್ತ್ರವನ್ನು ರಥದಲ್ಲಿ ಕುಳಿತ ವಿನಾಯಕನು ಕಂಡು ಒಮ್ಮೆಲೇ ರಥದಿಂದಲೇ ಮೇಲಕ್ಕೆ ನೆಗೆದನು. ಹಾರಿಹೋಗಿ ಗರುಡನು ಹಾವನ್ನು ಹಿಡಿಯುವಂತೆ ಆ ಶಸ್ತ್ರವನ್ನು ಹಿಡಿದು ಅದನ್ನು ತೂಗಿನೋಡಿ ಮತ್ತೆ ಮೇಲೆ ಮುಗಿಲಿನಲ್ಲಿ ತೂರಿ ಒಗೆದನು. ಆ ಶಸ್ತ್ರವು ತಪಸ್ಸು ಮಾಡುತ್ತಿದ್ದ ಧೂಮ್ರಾಕ್ಷನ ದೇಹದ ಮಧ್ಯಭಾಗದಲ್ಲಿ ಬಿದ್ದು ಅವನ ಶರೀರವನ್ನು ಒಡೆದು ಎರಡು ಭಾಗಮಾಡಿ ಸೀಳಿಹಾಕಿತು. ಧೂಮ್ರಾಕ್ಷನ ದೇಹದ ತುಂಡುಗಳು ಕೆಳಗೆ ಬಿದ್ದು ಭೂಮಿಯು ಕುಸಿಯುವಂತೆ ಆಯಿತು. ಆಗ ಅದನ್ನು ನೋಡಿ ಧೂಮ್ರಾಕ್ಷನ ಮಕ್ಕಳಾದ ಜಘನ ಮತ್ತು ಮನು ಎಂಬ ಇಬ್ಬರು ಸೋದರರಿಗೆ ತಮ್ಮ ತಂದೆಗೆ ಪ್ರಾಪ್ತವಾದ ದುರವಸ್ಥೆನ್ನು ಕಂಡು ಬಹಳ ಸಂಕಟವಾಯಿತು. ಅವರು ತಮ್ಮ ತಂದೆಯ ಮರಣಕ್ಕೆ ಕಾರಣವಾದ ಆ ವಟುವನ್ನು ''ಎಲೋ ದುಷ್ಟಬಾಲಕ, ನಮ್ಮ ತಂದೆಯನ್ನು ನೀನು ಏತಕ್ಕಾಗಿ ಕೊಂದೆ?'' ಎಂದು ಜಬರಿಸಿ ಕಾಶಿರಾಜನ ಕಡೆಗೆ ತಿರುಗಿ ಕೋಪದಿಂದ ಆಕ್ಷೇಪಿಸಿದರು.

**ರಾಕ್ಷಸರು :-** ರಾಜ, ನೀನು ಎಂಥ ಕೃತಘ್ನ? ದುರ್ದಮನಾದ ನರಾಂತಕನು ನಿನ್ನನ್ನು ಕೊಲ್ಲಲು ಬಂದಾಗ ನಮ್ಮ ತಂದೆಯೇ ನಿನ್ನನ್ನು ಉಳಿಸಿದರಲ್ಲವೆ? ಆ ಉಪಕಾರಕ್ಕೆ ಪ್ರತಿಯಾಗಿ ನಮ್ಮ ತಂದೆಯನ್ನೇ ಈ ವಟುವಿನ ಕೈಯಿಂದ ಕೊಲ್ಲಿಸಿದೆಯಲ್ಲವೆ? ನೀನು ಇನ್ನು ಮುಂದೆ ಹೇಗೆ ಬದುಕುವೆಯೋ ನಾವು ನೋಡುತ್ತೇವೆ.''

ರಾಕ್ಷಸರ ಮಾತನ್ನು ಕೇಳಿ ಭಯಭ್ರಾಂತನಾಗಿ ಕಾಶಿರಾಜನು ''ನಾನು ನಿಮ್ಮ ತಂದೆಯನ್ನು ಕೊಲ್ಲಲಿಕ್ಕಾಗಿ ಈ ಬಾಲಕನನ್ನು ಕರೆತಂದಿಲ್ಲ. ಇವನು ನಮ್ಮ ಕುಲಪುರೋಹಿತರಾದ ಕಶ್ಯಪಮಹರ್ಷಿಗಳ ಪುತ್ರ. ನಮ್ಮ ಮನೆಯಲ್ಲಿ ಮದುವೆಯಿರುವದರಿಂದ ಇವನನ್ನು ಆ ಕಾರ್ಯನಿರ್ವಹಣೆಗಾಗಿ ನಾನು ಕರೆದುತಂದಿದ್ದೇನೆ. ಇವನನ್ನು ಬೇಕಾದರೆ ನೀವು ನಿಮಗೆ ಬೇಕಾದಲ್ಲಿಗೆ ಕರೆದುಕೊಂಡು ಹೋಗಿರಿ. ಇವನು ನನ್ನ ಕೆಲಸಕ್ಕೆ ಸ್ವಲ್ಪವೂ ಸಂಬಂಧಿಸಿದವನಲ್ಲ. ನಾನು ನಿಮ್ಮ ತಂದೆಯಿಂದ ಬಹುವಿಧವಾಗಿ ಉಪಕಾರ ಹೊಂದಿದ್ದೇನೆ. ಪರಮೋಪಕಾರ ಮಾಡಿದ ನಿಮ್ಮ ತಂದೆಯ ಕೊಲೆಗೆ ನಾನು ಹೇಗೆ ಮನಸ್ಸು ಮಾಡುತ್ತೇನೆ? ನಾನು ಪರಮೇಶ್ವರನ ಮೇಲೆ ಆಣೆಯಿಟ್ಟು ಹೇಳುವೆನು. ನಾನು ಸರ್ವಥಾ ನಿಮ್ಮ ತಂದೆಯನ್ನು ಕೊಲ್ಲಿಸಿಲ್ಲ. ಇವನು ನಮ್ಮ ಕುಲಪುರೋಹಿತನಾದ ಕಶ್ಯಪ ಋಷಿಯ ಮಗನು. ನಮ್ಮ ಮನೆಯಲ್ಲಿ ಮದುವೆಯಿರುವದರಿಂದ ಆ ಮಂಗಳಕಾರ್ಯನಿರ್ವಹಣೆಗಾಗಿ ಈ ಬಾಲಕನನ್ನು ಕರೆದುಕೊಂಡು ಹೊರಟಿದ್ದೆ. ದಯಮಾಡಿ ನಮ್ಮ ಶುಭಕಾರ್ಯಕ್ಕೆ ವಿಘ್ನಮಾಡಬೇಡಿರಿ.

ಈ ಬಾಲಕನನ್ನು ಬೇಕಾದರೆ ನೀವು ನಿಮ್ಮ ಮನಬಂದಲ್ಲಿ ಕರೆದೊಯ್ಯಿರಿ. ಇವನನ್ನು ಈಗಲೇ ನಿಮ್ಮ ಸ್ವಾಧೀನಕ್ಕೆ ಕೊಡಲು ಸಿದ್ಧನಿದ್ದೇನೆ.

ರಾಜನು ಹೀಗೆ ಆ ಬಾಲಕನನ್ನು ದೈತ್ಯವೀರರಿಗೆ ಒಪ್ಪಿಸಲು ಸಿದ್ಧನಾದ ಕೂಡಲೇ 'ಜಘುನ ಮನು' ಎಂಬ ಇಬ್ಬರು ದೈತ್ಯರು ವಿನಾಯಕನನ್ನು ನುಂಗಿಬಿಡಲು ಧಾವಿಸಿ ಬಂದರು.

ಅದನ್ನು ಕಂಡಕೂಡಲೇ ಬಾಲಕ ವಿನಾಯಕನು ಘನಘೋರವಾದ ಘರ್ಜನೆಯನ್ನು ಮಾಡಿ ಭೂಮಂಡಲವನ್ನೇ ಗಡಗಡನೆ ನಡುಗಿಸಿಬಿಟ್ಟನು. ಸಿಟ್ಟಿಗೆದ್ದ ವಿನಾಯಕನು ಒಂದು ನಿಟ್ಟುಸಿರನ್ನು ಬಿಟ್ಟು ಬಲಿಷ್ಠರಾದ ಆ ಇಬ್ಬರೂ ದೈತ್ಯರನ್ನು ಮೇಘಮಂಡಲಕ್ಕೆ ಹಾರಿಸಿಬಿಟ್ಟನು. ಹುಲ್ಲುಕಡ್ಡಿಯಂತೆ ಆಗಸದ ಅಂಗಣದಲ್ಲಿ ತೂರಲ್ಪಟ್ಟ ಆ ಘೋರರಾಕ್ಷಸರನ್ನು ಮುಗಿಲಿನಲ್ಲಿ ತರಗೆಲೆಗಳಂತೆ ಹಾರಾಡಿಸಿ ತೂರಾಡಿಸಿ ನರಾಂತಕನ ರಾಜಧಾನಿಯಲ್ಲಿ ಬೀಳುವಂತೆ ಮಾಡಿದನು. ದೂತರು ಅದನ್ನು ನೋಡಿ ಗುಡ್ಡದಿಂದ ಉರುಳಿಬಿದ್ದ ದೊಡ್ಡ ಕಲ್ಲಿನಂತೆ ವಿಶಾಲ ಕಾಯವುಳ್ಳ ಆ ದೈತ್ಯರಿಬ್ಬರ ದೇಹಗಳು ಬಿದ್ದು ನುಚ್ಚುನೂರಾಗಿ, ಒಡೆದು ಹೋಳಾಗಿ, ಸೀಳಿ, ವಿಕಾರವಾಗಿ ಬಿದ್ದುದನ್ನು ನರಾಂತಕನಿಗೆ ಹೋಗಿ ತಿಳಿಸಿದರು. ಧಾವಿಸಿಬಂದು ಪ್ರೇತಪ್ರಾಯವಾಗಿ ಬಿದ್ದ 'ಜಘನ ಮನು' ದೈತ್ಯರ ಸಿಡಿದುಹೋದ ದೇಹದ ಭಾಗಗಳನ್ನು ಕೂಡಿಸಿ ಶೈತ್ಯೋಪಚಾರ ಮಾಡಿದರು. ಮುಮೂರ್ಷುಗಳಾದ ಅವರಿಬ್ಬರಿಗೂ ತುಸು ಮಾತನಾಡಲು ಬಂದಿತು. "ನಮ್ಮ ತಂದೆಯಾದ ಧೂಮ್ರಾಕ್ಷನು ಕಶ್ಯಪಕುಮಾರನಾದ ವಿನಾಯಕನಿಂದ ಹತನಾದ. ಅವನಿಗೆ ಪ್ರತೀಕಾರ ಮಾಡಹೋದ ನಮ್ಮನ್ನು ಈ ರೀತಿಯಾಗಿ ಹೊಡೆದು ಹಾರಿಸಿ, ಬೀಳಿಸಿ, ಸಾಯುವಂತೆ ಮಾಡಿದ್ದಾನೆ" ಎಂದು ರಾಜದೂತರಿಗೆ ಹೇಳಿದರು. ಇದನ್ನೆಲ್ಲ ರಾಜದೂತರು ಓಡಿಹೋಗಿ ನರಾಂತಕನ ತಿಳಿಸಿದರು.

ತನ್ನ ಚಿಕ್ಕಪ್ಪನಾದ ಧೂಮ್ರಾಕ್ಷನನ್ನು ಕೊಂದ ಮುನಿಕುಮಾರನು ಮನು ಜಘನರೆಂಬ ಅವನ ಮಕ್ಕಳನ್ನೂ ಹೊಡೆದು ಹಾರಿಸಿ, ಅವರ ದೇಹಗಳು ನುಜ್ಜುಗುಜ್ಜಾಗುವಂತೆ ಮೇಲಿಂದ ಉರುಳಿಸಿ, ಸಾಯುವಂತೆ ಮಾಡಿ ಕಾಶಿರಾಜನೊಡನೆ ರಥದಲ್ಲಿ ಕುಳಿತು ಹೋಗಿದ್ದಾನೆ ಎಂಬ ಸಂಗತಿಯನ್ನು ನರಾಂತಕನು ದೂತರ ಮುಖಾಂತರ ಕೇಳಿ ಕೋಪದಿಂದ ಕೆಂಡಮಂಡಲನಾದನು. ಮತ್ತು ತನ್ನ ವೀರವರೇಣ್ಯರಾದ ಸೈನಿಕರನ್ನು ಕರೆದು ಆ ವಿನಾಯಕನನ್ನೂ, ಕಾಶೀರಾಜನನ್ನೂ ಬೆನ್ನಟ್ಟಿ ಹಿಡಿದು ತನ್ನಿರಿ ಎಂದು ಆಜ್ಞೆ ಮಾಡಿದನು.

ರಾಜಾಜ್ಞೆಯಾದ ಕೂಡಲೇ ರಾಕ್ಷಸವೀರರೆಲ್ಲರೂ ಓಡಿಹೋಗಿ ರಥದಲ್ಲಿ ಕುಳಿತು ಹೋಗುತ್ತಿರುವ ವಿನಾಯಕ, ಕಾಶಿರಾಜರನ್ನು ಹಿಡಿಯಲು ಬಂದರು.

ಅದನ್ನು ಕಂಡಕೂಡಲೇ ವಿನಾಯಕನು ಮತ್ತೆ ಘನಘೋರವಾಗಿ ಗುಡುಗು ಹಾಕಿದನು. ಅವನ ಸಿಂಹನಾದಕ್ಕೆ ಹಿಡಿಯಲು ಬಂದ ದೈತ್ಯವೀರರು ಅರೆಚಣದಲ್ಲಿ ಮುಂದಿದ್ದವರು ಸತ್ತುಹೋದರು. ಹಿಂದಿದ್ದವರು ಮುಂದಾದವರ ದುರ್ಗತಿಯನ್ನು ಕಂಡು ನರಾಂತಕನಿಗೆ ನಡೆದ ದುರಂತ ದುರ್ಘಟನೆಯನ್ನು ಹೇಳಿದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ಬಾಲಚರಿತೆಯಲ್ಲಿ ರಾಕ್ಷಸ ವಧೆ ಎಂಬಲ್ಲಿಗೆ ಹನ್ನೆರಡನೇ ಅಧ್ಯಾಯ ಮುಗಿದುದು*

## ನಾನಾವಿಧ ದೈತ್ಯಸಂಹಾರ

## ಅಧ್ಯಾಯ - ೧೩

ತಾನು ಕಳಿಸಿದ ದೈತ್ಯದೂತರ ದುರಂತಮರಣದ ಸುದ್ದಿ ಕೇಳಿ ನರಾಂತಕನಿಗೆ ಬ್ರಹ್ಮಾಂತ ಕೋಪ ಬಂದಿತು. ಆಗವನು ತನ್ನ ಉಳಿದ ದೈತ್ಯಸೇನಾಪತಿಗಳನ್ನು ಕರೆಸಿ, ಕಾಶೀಪಟ್ಟಣಕ್ಕೆ ಮುತ್ತಿಗೆಹಾಕಿ, ಆ ನಗರವನ್ನು ಸೂರೆಗೊಂಡು ಆ ಬಾಲಕನನ್ನೂ, ಮತ್ತು ಕಾಶೀರಾಜನನ್ನು ಹಿಡಿದು ತನ್ನಿರಿ ಎಂದು ಅಪ್ಪಣೆ ಮಾಡಿದನು.

ಇತ್ತ ರಥದಲ್ಲಿ ಕುಳಿತು ಬಂದ ವಿನಾಯಕನನ್ನೂ ಕಾಶೀರಾಜನನ್ನೂ ಸಂಭ್ರಮದಿಂದ ಸ್ವಾಗತಿಸಿದರು. ಕುಮಾರ ಮುತ್ತೈದೆಯರು ಮನೆಮನೆಗೆ ಆರತಿ ಎತ್ತಿ, ಅರಳು ತೂರಿ ಮಹೋತ್ಸವವನ್ನು ಆಚರಿಸಿದರು. ಸಜ್ಜನರು ಈ ಬಾಲಕನು ಪರಮೇಶ್ವರನ ಸಗುಣ ಮೂರ್ತಿ ಎಂದು ಭಕ್ತಿಯಿಂದ ಹಾಗೂ ಪ್ರೀತಿಯಿಂದ ನೋಡತೊಡಗಿದರು. ಕಾಶೀಪಟ್ಟಣದಲ್ಲಿ ವಿನಾಯಕನಿಗೆ ಸಂಭ್ರಮದ ಸ್ವಾಗತ ಸಮಾರಂಭವು ಮಹೋತ್ಸವದಂತೆ ನಡೆಯುತ್ತಲಿರುವಾಗ ಪೌರಜನರೆಲ್ಲರೂ ಭಕ್ತಿಯುಕ್ತರಾಗಿ ಅವರ ಸ್ವಾಗತ ಸತ್ಕಾರವನ್ನು ನೆರವೇರಿಸುವದರಲ್ಲಿ ತಲ್ಲೀನರಾದಾಗ ವಿಘಂಟ ದಂತುರ ಎಂಬ ಇಬ್ಬರು ನರಾಂತಕದೂತರಾದ ರಾಕ್ಷಸರು ನಾಗರಿಕರ ವೇಷದಿಂದ ಬಾಲಕನ ಬಳಿಗೆ ಬಂದರು. ಅವರು ಪ್ರೀತಿ ವಿಶ್ವಾಸವನ್ನು ನಟಿಸುತ್ತ ದುರುದ್ದೇಶದಿಂದ ವಿನಾಯಕನನ್ನು ಆಲಿಂಗಿಸಲು ಪ್ರಯತ್ನಿಸಿದರು. ಆಗ ಬಾಲಕನಾದ ವಿನಾಯಕನು ಅವರ ದುರುದ್ದೇಶವನ್ನು ತನ್ನ ದಿವ್ಯದೃಷ್ಟಿಯಿಂದ ಅರಿತು, ಪ್ರೀತಿಯನ್ನು ನಟಿಸುತ್ತ ಅವರನ್ನು ಧೃಡವಾಗಿ ಆಲಿಂಗಿಸಿದನು. ಕೋಮಲವಾದ ಹೂವನ್ನು ಹಿಸುಕುವಂತೆ ತನ್ನ ಎರಡೂ ಕೈಗಳಿಂದ ಇಬ್ಬರೂ ರಾಕ್ಷಸರನ್ನು ಹಿಸುಕಿ, ಹಿಂಡಿ ಕೆಳಗೆ ಚೆಲ್ಲಿಬಿಟ್ಟನು. ಕೂಡಲೇ ಆ ಇಬ್ಬರೂ ದೈತ್ಯರೂ ಧೊಪ್ಪನೆ ಕೆಳಗೆ ಬಿದ್ದು ತಮ್ಮ ರಾಕ್ಷಸ ರೂಪದಿಂದ ವಿಕಾರ ದೇಹದಿಂದ ಉರುಳಿ ಧೂಳಿಯಲ್ಲಿ ಹೊರಳಿ ಸತ್ತುಹೋದರು. ಆಗ ದೇವತೆಗಳು ವಿನಾಯಕನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು.

ಇದನ್ನು ಕಂಡು ಕಾಶೀರಾಜನು ಈ ಬಾಲಕ ವಿನಾಯಕನು ಸಾಕ್ಷಾತ್ ಜಗದೀಶ್ವರನೇ ಎಂದು ತಿಳಿದು ಅವನನ್ನು ಮನಸಾ ವಂದಿಸಿದನು. ಅವರ ರಥವು ರಾಜಧಾನಿಯಲ್ಲಿ ಮತ್ತೆ ಮೆರವಣಿಗೆಯಲ್ಲಿ ಮುಂದುವರೆಯಿತು.

ಆಗ ಪತಂಗ-ವಿಧುಲ ಎಂಬ ಭೀಕರಾಕಾರದ ರಾಕ್ಷಸರು ಬಿರುಗಾಳಿಯ ರೂಪದಿಂದ ಬಂದು ಬಿರುಸಾಗಿ ಬೀಸತೊಡಗಿದರು. ಆ ವಾಯುವೇಗಕ್ಕೆ ಕಾಶೀಪಟ್ಟಣದ ದೊಡ್ಡ ದೊಡ್ಡ ಉಪ್ಪರಿಗೆ ಮನೆಗಳು, ಗಿಡಗಂಟೆಗಳು, ಕೋಟೆ-ಕೊತ್ತಲಗಳು ಉರುಳಿ ಹೊರಳಿ ಬಿದ್ದವು. ರಾಜ-ಬಾಲಕರು ಕುಳಿತ ರಥವೂ ಕೂಡ ಭರದಿಂದ ಅಲುಗಾಡ ತೊಡಗಿತು.

ಅದನ್ನು ಕಂಡು ಬಾಲಕನು ನಗುತ್ತಾ ರಥದಲ್ಲಿಯೇ ತಾನು ಗಟ್ಟಿಯಾಗಿ ನಿಂತು, ಆ ಇಬ್ಬರೂ ದೈತ್ಯರನ್ನು ಕೈಯಿಂದ ಹಿಡಿದು ನೆಲದಮೇಲೆ ಅಪ್ಪಳಿಸಿದನು.ದೇಹದ ಒಳಭಾಗಗಳೆಲ್ಲಾ ಹೊರಬಂದು ದೈತ್ಯರಿಬ್ಬರೂ ಗತಪ್ರಾಣರಾಗಿ ನೆಲದ ಮೇಲೆ ಬಿದ್ದುಬಿಟ್ಟರು.

ಮತ್ತೆ ರಥವು ಮುಂದುವರೆಯಿತು. ದಾರಿಯಲ್ಲಿ ಒಬ್ಬ ದೊಡ್ಡ ದೈತ್ಯನು ಹೆಬ್ಬಂಡೆಯ ರೂಪದಿಂದ ಕುಳಿತುಕೊಂಡಿದ್ದನು. ಅದನ್ನು ಸರ್ವಜ್ಞನಾದ ವಿನಾಯಕನು ತಿಳಿದು ತನ್ನ

ಕೈಯಲ್ಲಿದ್ದ. ಗಂಡುಗೊಡಲಿಯಿಂದ ಆ ಬಂಡೆಗೆ ಒಂದು ಏಟವನ್ನು ಹಾಕಿದನು. ಕೂಡಲೇ ಆ ಕಲ್ಲಿನಿಂದ ಒಬ್ಬ ವಿಕಾರಮುಖದ ದೈತ್ಯನು ಎದ್ದು ನಿಂತನು. ಆಗ ವಿನಾಯಕನು ಕೂಡಲೇ ಮುಷ್ಟಿಯಿಂದ ಆ ದುಷ್ಟರಾಕ್ಷಸರ ನಡುನೆತ್ತಿಗೆ ಕುಟ್ಟಿ, ಗುದ್ದಿ ಕ್ಷಣಾರ್ಧದಲ್ಲಿ ಗತಪ್ರಾಣವನ್ನಾಗಿ ಮಾಡಿದನು.

ಹೀಗೆ ಅಡ್ಡ ಬಂದ ದೊಡ್ಡ ದೊಡ್ಡ ದೈತ್ಯರನ್ನೆಲ್ಲಾ ಸಂಹಾರ ಮಾಡಿದ ಬಳಿಕ ರಥವು ಅರಮನೆಗೆ ಸುಸೂತ್ರವಾಗಿ ಬಂದಿತು. ಆಗ ರಾಜನು ವಿನಾಯಕನನ್ನು ಸಿಂಹಾಸನದ ಮೇಲೆ ಕೂಡಿಸಿ, ಅವನನ್ನು ಶೈತ್ಯೋಪಚಾರದಿಂದ ಪೂಜಿಸಿ, ರತ್ನಖಚಿತವಾದ ದಿವ್ಯಾಭರಣಗಳನ್ನು ಇಟ್ಟನು. ಷಡ್ರಸದಭೋಜನವನ್ನು ಮಾಡಿಸಿದನು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ನಾನಾವಿಧ ದೈತ್ಯಸಂಹಾರ ಎಂಬ ಹದಿಮೂರನೇ ಅಧ್ಯಾಯ ಮುಗಿದುದು*



## ಬಾಲಚರಿತೆ 'ಜಿರಿಂಬಾ ವಧೆ' — ಅಧ್ಯಾಯ - ೧೪

ಕಾಶೀರಾಜನ ಮನೆಯಲ್ಲಿ ವಿನಾಯಕನು ರಾಜನು ಇತ್ತ ಆದರೋಪಚಾರದ ಆತಿಥ್ಯವನ್ನು ಸ್ವೀಕರಿಸುತ್ತಾ ಇರುವಾಗ, ಧರ್ಮದತ್ತ ಎಂಬ ಬ್ರಾಹ್ಮಣನು ಅಲ್ಲಿಗೆ ಬಂದನು. ಮತ್ತು ವಿನಾಯಕನನ್ನು ಪ್ರೀತಿಯಿಂದ ಆಲಂಗಿಸಿ ಅವನಿಗೆ ಹೇಳಿದನು.

**ಧರ್ಮದತ್ತ :-** ಮಗು ವಿನಾಯಕ, ನಿನ್ನ ತಂದೆಯಾದ ಕಶ್ಯಪ ಹಾಗೂ ನಾನು ಬಾಲ್ಯ ಸ್ನೇಹಿತರು. ನೀನು ನನ್ನ ಮಿತ್ರನ ಮಗ. ನಿನ್ನ ಅಮೋಘವಾದ ಕೀರ್ತಿ, ಮಹಿಮೆಗಳನ್ನು ನಾನು ಕೇಳಿ ತಿಳಿದಿರುವೆ. ನೀನು ಸಾಕ್ಷಾತ್ ಪರಬ್ರಹ್ಮ ಎಂದು ನನಗೆ ಮನದಟ್ಟಾಗಿದೆ. ನೀನು ನನ್ನ ಮನೆಗೆ ಬಾ. ನಿನ್ನ ಪಾದಧೂಳಿಯಿಂದ ನನ್ನ ಮನೆಯನ್ನು ಪಾವನಗೊಳಿಸು.

ಧರ್ಮದತ್ತನ ಬಿನ್ನಹವನ್ನು ಕೇಳಿ ವಿನಾಯಕನು ಆನಂದದಿಂದ ಅವನ ಮನೆಗೆ ಹೊರಟನು.

ಅತ್ತ ನರಾಂತಕನು ವಿನಾಯಕನನ್ನು ಕೊಲ್ಲಲು ತನ್ನಲ್ಲಿಯ ಅತ್ಯಂತ ವೀರವರೇಣ್ಯರಾದ ದೈತ್ಯರನ್ನು ಕಳಿಸುತ್ತಲೇ ಇದ್ದನು. ಕಾಮ, ಕ್ರೋಧ ಎಂಬ ಇಬ್ಬರು ನರಾಂತಕನ ದೂತರಾದ ದೈತ್ಯರು ಕತ್ತೆಯ ರೂಪವನ್ನು ಧರಿಸಿ ವಿನಾಯಕನನ್ನು ಹೊಡೆಯ ಬಂದರು. ಆಗ ವಿನಾಯಕನು ಧೈರ್ಯದಿಂದ ಅವರ ಎರಡೂ ಕಾಲುಗಳನ್ನು ಹಿಡಿದು, ಗರಗರ ತಿರುಗಿಸಿ ನೆಲಕ್ಕೆ ಅಪ್ಪಳಿಸಿದನು. ಇಬ್ಬರೂ ದೈತ್ಯರು ಕ್ಷಣಾರ್ಧದಲ್ಲಿ ಸತ್ತುಹೋದರು. ಧರ್ಮದತ್ತನೊಂದಿಗೆ ವಿನಾಯಕನು ಅವನ ಮನೆಕಡೆ ಮುಂದುವರೆದನು.

ಮತ್ತೊಬ್ಬ ದುರ್ದಾನವನು ಆನೆಯ ರೂಪದಿಂದ ವಿನಾಯಕನನ್ನು ವಧಿಸಬೇಕೆಂದು ಧಾವಿಸಿ ಬಂದನು. ಅವನ ದುರ್ವಿಚಾರವನ್ನು ತಿಳಿದ ವಿನಾಯಕನು ಗಜರೂಪಿಯಾದ ರಾಕ್ಷಸನಾದವನ ಮೇಲೆ ಏರಿಕುಳಿತು ಆ ಆನೆಯ ಕುಂಭಸ್ಥಳವನ್ನು ಚಚ್ಚಿದನು. ತಕ್ಷಣದಲ್ಲಿ ಆ ಗಜಾಸುರನು ನೆಲದ ತುಂಬಾ ನೆತ್ತರವನ್ನು ಸುರಿಸಿ ಘೀಳಿಡುತ್ತಾ ಸತ್ತುಹೋಯಿತು.

ಅನಂತರ ಧರ್ಮದತ್ತನು ಆನೆಯಿಂದ ವಿನಾಯಕನನ್ನು ಕೆಳಗಿಳಿಸಿ ತನ್ನ ಮನೆಗೆ ಕರೆತಂದು ಭಕ್ತಿಯಿಂದ ಪೂಜಿಸಿದನು. ಅವನಿಗೆ ಭಕ್ಷ್ಯಭೋಜನ ಮಾಡಿಸಿ, ದಕ್ಷಿಣಾರೂಪವಾಗಿ ಸಿದ್ಧಿ, ಬುದ್ಧಿ ಎಂಬ ಎರಡು ಕನ್ಯಾರತ್ನಗಳನ್ನು ಅರ್ಪಿಸಿದನು.

ಅಷ್ಟರಲ್ಲಿ 'ಜರಿಂಭೆ' ಎಂಬ ರಕ್ಕಸಿಯು ಸುಂದರ ಸ್ತ್ರೀರೂಪವನ್ನು ಧರಿಸಿ ಅಲ್ಲಿಗೆ ಬಂದಳು. ವಿನಾಯಕನ ಮೇಲೆ ಪ್ರೀತಿವಿಶ್ವಾಸವನ್ನು ನಟಿಸುತ್ತಾ ಅವನಿಗೆ ಅಭ್ಯಂಜನ ಸ್ನಾನ ಮಾಡಿಸುತ್ತೇನೆ ಎಂದು ಹೇಳಿದಳು. ಅವಳ ಅಂತರಂಗವನ್ನು ಅರೆಚಣದಲ್ಲಿ ಅರಿತುಬಿಟ್ಟ ಸರ್ವಜ್ಞ ಮೂರ್ತಿಯಾದ ವಿನಾಯಕ. ಅವಳು ತಾನು ಸಂಹರಿಸಿದ ಧೂಮ್ರಾರಾಕ್ಷಸನ ಪತ್ನಿ ಎಂಬುದೂ ತಿಳಿದುಹೋಯಿತು. ಅವಳು ತನ್ನನ್ನು ಕೊಲ್ಲಲು ಬಂದಿದ್ದಾಳೆಂದು ಅವನಿಗೆ ಸ್ಪಷ್ಟ ಅರಿವಾಯಿತು. ಆದರೂ ಅವನು ಅವಳಿಂದ ಅಭ್ಯಂಜನ ಸ್ನಾನಕ್ಕೆ ಸಿದ್ಧನಾದನು. ಅವಳು ವಿನಾಯಕನನ್ನು ಸ್ನಾನಗೃಹಕ್ಕೆ ಕರೆದುಕೊಂಡು ಹೋಗಿ ಅವನ ಮೈಗೆ ಎಣ್ಣೆಯಿಂದ ಪೂಸಿದಳು. ಆ ಎಣ್ಣೆಯಲ್ಲಿ ಭಯಂಕರವಾದ ಹಾಲಾಹಲ ವಿಷವನ್ನು ಬೆರೆಸಿದ್ದಳು. ಅದರಲ್ಲಿ ತನ್ನ ಕೈಯನ್ನು ಅದ್ದಿ ವಿನಾಯಕನ ಕಾಲುಗಳಿಗೆ ಆ ವಿಷತೈಲವನ್ನು ಹಾಕಿ ಉಜ್ಜಿದಳು. ಅದರಿಂದ ಬಾಲಕನ ದೇಹದಲ್ಲಿ ದಾಹ ಉಂಟಾಯಿತು. ಆಗ ವಿನಾಯಕನು ಸಮೀಪದಲ್ಲಿಯೇ ಇರುವ ತೆಂಗಿನಕಾಯಿಯನ್ನು ತೆಗೆದುಕೊಂಡು ಜರಿಂಭಾ ರಾಕ್ಷಸಿಯ ತಲೆಗೆ ಏಟವನ್ನು ಹಾಕಿದನು. ಕೂಡಲೇ ಅವಳು ತಲೆತಿರುಗಿ ನೆಲಕ್ಕೆ ಕುಕ್ಕರಿಬಿದ್ದಳು. ಅವಳ ಕೃಮ ನಾರೀರೂಪವು ಮರೆಯಾಗಿ ನಿಜವಾದ ರಾಕ್ಷಸರೂಪವು ಗೋಚರವಾಯಿತು. ಅವಳ ತಲೆಯಿಂದ ರಕ್ತವು ಪ್ರವಾಹರೂಪವಾಗಿ ಹರಿಯಿತು. ಕ್ಷಣಾರ್ಧದಲ್ಲಿ ರಾಕ್ಷಸಿಯು ನೆತ್ತರಕಕ್ಕಿ ಮಡಿದುಹೋದಳು. ಆಗ ದೇವತೆಗಳು ಪುಷ್ಪವೃಷ್ಟಿ ಮಾಡಿದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ಬಾಲಚರಿತೆ 'ಜರಿಂಬಾ ವಧೆ' ಎಂಬಲ್ಲಿ ಹದಿನಾಲ್ಕನೇ ಅಧ್ಯಾಯ ಮುಗಿದುದು*



## ಬಾಲಚರಿತ್ರ ನಗರೀ ಮೋಕ್ಷಣ

**ಅಧ್ಯಾಯ - ೧೫**

**ಬ್ರಹ್ಮ** :- ಕಾಶೀರಾಜನು ಬಾಲಕ ವಿನಾಯಕನನ್ನು ಗೌರವಿಸಿ, ಆದರಿಸುವದನ್ನು ನೋಡಿ ಅವನ ಕೆಲವು ಹಿತೈಷಿಗಳಾದ ಮಂತ್ರಿಗಳು ರಾಜನಿಗೆ ಹಿತೋಪದೇಶ ಮಾಡುವವರಂತೆ ''ಪ್ರಭುಗಳೇ ! ಈ ಬಾಲಕನು ನಿಮ್ಮೊಡನೆ ಕಾಶೀಪಟ್ಟಣಕ್ಕೆ ಬಂದಂದಿನಿಂದ ಒಂದಿಲ್ಲ ಒಂದು ವಿಘ್ನಗಳು ಬರುತ್ತಲೇ ಇವೆ. ನೀವು ಮುಖ್ಯವಾಗಿ ಈಗ ಮಾಡಬೇಕೆಂದಿರುವ ವಿವಾಹಮಂಗಳಕಾರ್ಯಕ್ಕೆ ಈ ಬಾಲಕನಿಂದಾಗಿ ಏನೇನು ವಿಘ್ನ ಎಡರುತೊಡರುಗಳು ಬರುವವೋ ಯಾರಿಗೆ ಗೊತ್ತು ? ಆದುದರಿಂದ ಇನ್ನೂ ಒಂದು ತಿಂಗಳ ವಿವಾಹಕಾರ್ಯವನ್ನು ಮುಂದೆ ಹಾಕಿರಿ.'' ಎಂದು ಹೇಳಿದರು. ಆಗ ಕಾಶೀರಾಜನು ''ಬಾಲಕ ವಿನಾಯಕನ ಅತ್ಯದ್ಭುತವಾದ ಪರಾಕ್ರಮವನ್ನು ಅವನು ಧೂಮ್ರಾಕ್ಷ, ಜಘನ, ಮನು, ದಂತುರ, ವಿಘಂಟ, ವಿಘೂರ, ಪತಂಗ, ಕೂಟ, ಕಾಮ, ಕ್ರೋಧ, ಗಜಾಸುರ ಮೊದಲಾದ ಅನೇಕಾನೇಕ ದೈತ್ಯಾಧಮರನ್ನು ನಮ್ಮ ಕಣ್ಣೆದುರೇ ಸಂಹಾರಮಾಡಿದ್ದನ್ನು

ಪ್ರತ್ಯಕ್ಷವಾಗಿ ನೋಡಿದ್ದೇವೆ. ಆದರೂ ನೀವು ಭಾವೀ ಬಾಧಕ ಶಂಕೆಯಿಂದ ಕೆಲದಿನಗಳ ಮಟ್ಟಿಗೆ ವಿವಾಹಕಾರ್ಯವನ್ನು ಮುಂದೆ ಹಾಕಲು ಸೂಚಿಸಿದ್ದೀರಿ. ಹಾಗೇ ಆಗಲಿ. ಈಗಂತೂ ನೀವು ನಿಶ್ಚಿಂತವಾಗಿದ್ದು ಬಿಡಿ.'' ಎಂದು ಅವರೆಲ್ಲರನ್ನೂ ಸಮಾಧಾನಮಾಡಿ ಕಳಿಸಿದನು.

ಇತ್ತ ಜ್ವಾಲಾಮುಖ, ವ್ಯಾಘ್ರಮುಖ, ದಾರುಣ ಎಂಬ ಮೂವರು ಘೋರಾಕಾರದ ರಾಕ್ಷಸ ವೀರರು ತಮ್ಮ ದೈತ್ಯಕುಲಕ್ಕೆ ಕುಠಾರಪ್ರಾಯನಾದ ವಿನಾಯಕನನ್ನೂ ಅವನಿಗೆ ಆಶ್ರಯವಿತ್ತ ಕಾಶೀರಾಜನನ್ನೂ, ಅವನ ರಾಜ್ಯವನ್ನೂ ಹೇಗಾದರೂ ಮಾಡಿ ನಾಶಪಡಿಸಬೇಕು, ವಿನಾಯಕನು ದೈತ್ಯಕುಲಕ್ಕೆ ಮಾಡಿದ ಅಪಕಾರದ ಸೇಡನ್ನು ತೀರಿಸಿ ಕೊಳ್ಳಬೇಕು. ಇವರಲ್ಲಿ ಜ್ವಾಲಾಮುಖನು ಕಾಶೀಪಟ್ಟಣವನ್ನೆಲ್ಲಾ ತನ್ನ ಅಗ್ನಿಜ್ವಾಲೆಗಳಿಂದ ಸುಟ್ಟುಬಿಡಬೇಕು. ದಾರುಣನು ಭಯಂಕರ ಗಾಳಿಯಾಗಿ ಬೀಸಿ, ಆ ಬೆಂಕಿಯ ಜ್ವಾಲೆಗಳು ನಗರದ ಎಲ್ಲ ಕಡೆಗೂ ಹಬ್ಬಿ ದಾವಾಗ್ನಿಯಾಗಿ ನಗರವನ್ನು ದಹಿಸುವಂತೆ ಮಾಡಬೇಕು. ಊರೆಲ್ಲಾ ಉರಿಯತೊಡಗಿದಾಗ ಜನರು ಹೆದರಿ ಹೌಹಾರಿ ಉರಿಯ ತೆರೆಗಳಿಂದ ತಪ್ಪಿಸಿಕೊಳ್ಳಲು ಊರುಬಿಟ್ಟು ಹೊರಗೆ ಓಡತೊಡಗಿದಾಗ ಕಾಶೀನಗರದ ಅಗಸಿಯ ಬಾಗಿಲಲ್ಲಿಯೇ ವ್ಯಾಘ್ರಾಸುರನು, ಬಾಯಿ ತೆರೆದುಕೊಂಡು ಕೂಡಬೇಕು. ತನ್ನ ದೊಡ್ಡ ಗುಹೆಯಂತೆ ನೆಲಮುಗಿಲುಗಳ ಅಂಚು ಪದರುಗಳಿಗೆ ತಗಲಿಕೊಂಡು ವಿಸ್ತಾರವಾಗಿ ತೆರೆದುನಿಂತ ಬಾಯಲ್ಲಿ ಜನರನ್ನೆಲ್ಲ ಸೆಳೆದುಕೊಂಡು ತಿಂದು ಹಾಕಬೇಕು.''

ಹೀಗೆ ದುಷ್ಟಹಂಚಿಕೆಯನ್ನು ಹೂಡಿ ಹಂತಕರಾದ ಆ ರಕ್ಕಸರು ಹರ್ಷೋದ್ರೇಕದಿಂದ ಗಟ್ಟಿಯಾಗಿ ಅರಚಿದರು. ಅವರ ಚೀತ್ಕಾರಧ್ವನಿಯಿಂದಲೇ ಕಾಶೀನಗರವೆಲ್ಲಾ ನಡುಗಿಹೋಯಿತು. ಒಮ್ಮಿಂದೊಮ್ಮೆಲೇ ನಗರದ ತುಂಬಾ ಅಗ್ನಿತಾಂಡವ ಪ್ರಾರಂಭವಾಯಿತು. ಭಯಂಕರ ಬಿರುಗಾಳಿಯಿಂದ ಲಂಕಾಪಟ್ಟಣದಂತೆ ಇಡೀ ನಗರವೇ ಬೆಂಕಿಯ ಬಣವಿಯಂತೆ ಉರಿಯತೊಡಗಿತು. ಜನರು ಅಗ್ನಿಜ್ವಾಲೆಗಳಿಗೆ ಹೆದರಿ ಊರುಬಿಟ್ಟು ಎಲ್ಲಿಯಾದರೂ ಓಡಿಹೋಗಿ ಪಾರಾಗಬೇಕೆಂದು ನಗರದಿಂದ ಹೊರಬಿದ್ದರು. ಆಗ ವ್ಯಾಘ್ರಾಸ್ಯನು ಊರಿನ ಅಗಸಿಯ ಬಾಗಿಲಲ್ಲಿ ಕುಳಿತು ತನ್ನ ಕೆಳದುಟಿಯನ್ನು ನೆಲಕ್ಕೂ ಮೇಲ್ದುಟಿಯನ್ನು ಮುಗಿಲಿಗೂ ನಿಲ್ಲಿಸಿ ಬಾಯಿತೆರೆದು ನಿಂತಿದ್ದನು. ಜನರು ವ್ಯಾಘ್ರಾಸ್ಯನ ಆ ದೊಡ್ಡಬಾಯನ್ನು ಒಂದು ಸುರಂಗಮಾರ್ಗವೆಂದು ತಿಳಿದು, ಅದರ ಮೂಲಕ ಹೊರಗೆ ಪಾರಾಗಬಹುದೆಂದು ತಿಳಿದು ಎಲ್ಲರೂ ಒಮ್ಮೆಲೇ ಒಳನುಗ್ಗಿದರು. ಹೀಗೆ ಅನಾಯಾಸವಾಗಿ ತನ್ನ ಬಾಯಿಗೆ ಬಂದು ಬಿದ್ದವರನ್ನೆಲ್ಲಾ ನುಂಗಿ ಕೊಂದು ತಿಂದುಹಾಕಿದನು. ಆಗ ಕಾಶೀರಾಜನು ಕೂಡ ಏನು ಮಾಡಬೇಕೆಂದು ತಿಳಿಯದೇ ಕಶ್ಯಪಋಷಿಗಳಿಗೆ ರಕ್ಷಿಸುತ್ತೇನೆ ಎಂದು ಹೇಳಿ ಕರೆದುಕೊಂಡು ಬಂದ ಬಾಲಕ ವಿನಾಯಕನನ್ನು ಹೇಗೆ ರಕ್ಷಿಸುವದು ? ಅವನೇನಾದರೂ ಈಗ ಪಟ್ಟಣದಲ್ಲಿ ನಡೆದ ಅಗ್ನಿತಾಂಡವದಲ್ಲಿ ಬೆಂದು ಹೋದರೆ ಅವರ ತಾಯಿ-ತಂದೆಗಳಾದ ಅದಿತಿ-ಕಶ್ಯಪರಿಗೆ ನಾನೇನು ಉತ್ತರ ಹೇಳುವದು ? ಈವರೆಗೆ ಅನೇಕ ದೈತ್ಯರನ್ನು ಸಂಹರಿಸಿದ ವಿನಾಯಕನು ಈಗೇಕೆ ಸುಮ್ಮನೆ ಕುಳಿತಿದ್ದಾನೆ'' ಎಂದು ಮನಸ್ಸಿನಲ್ಲಿಯೇ ವಿಚಾರ ಮಾಡುತ್ತಾ ಕುಳಿತುಕೊಂಡನು. ರಾಜನ ಮಡದಿ ಮಕ್ಕಳೂ ಕೂಡ ಆ ಅಗ್ನಿಜ್ವಾಲೆಗಳಿಂದ ತಪ್ಪಿಸಿಕೊಳ್ಳಲು ಅರಮನೆಯನ್ನು ಬಿಟ್ಟು ಹೊರಗೆ ಓಡಿಬಂದರು. ಆಗ ಹೊರಗೆ

ಮಹಾರಾಜ, ವಿನಾಯಕ ಇಬ್ಬರೂ ಮಿತಿಮೀರಿ ಬೆಳೆದು ಹೋದ ಜನಸಮುದ್ರದಲ್ಲಿ ಪರಸ್ಪರ ಅಗಲಿದರು. ಎಲ್ಲಿ ಯಾರು ಗೊತ್ತೇ ಆಗಲಿಲ್ಲ. ವಿನಾಯಕನೂ, ರಾಜನೂ, ಅವನ ಪರಿವಾರದವರೂ ಗಡಿಬಿಡಿಗೊಂಡ ಆ ಗುಂಪಿನೊಡನೆ ವ್ಯಾಘ್ರಾಸ್ಯನ ಆ ತೆರೆದ ಬಾಯಲ್ಲಿ ಹೊಕ್ಕುಬಿಟ್ಟರು. ಇದನ್ನೇ ಕಾಯುತ್ತಾ ಕುಳಿತ ಆ ವ್ಯಾಘ್ರಾಸ್ಯನು ವಿನಾಯಕ, ರಾಜ ಮತ್ತು ಅವನ ಮಡದಿ ಮಕ್ಕಳು ಎಲ್ಲರೂ ಒಳಗೆ ಬಂದ ಕೂಡಲೇ ಭೂಮ್ಯಾಕಾರಗಳಿಗೆ ಮುಟ್ಟುವಂತೆ ತೆರೆದಿಟ್ಟ ತನ್ನ ಬಾಯನ್ನು ಪಕ್ಕನೇ ಮುಚ್ಚಿಬಿಟ್ಟನು.

ದೊಡ್ಡ ಗುಹೆಯಂತಿದ್ದ ಆ ದೈತ್ಯನ ಬಾಯಿಯಲ್ಲಿ ವಿನಾಯಕನು ರಾಕ್ಷಸನ ಉದರವನ್ನು ಸೀಳಬೇಕೆಂಬ ಉದ್ದೇಶದಿಂದ ಆ ವಾಘ್ರ್ಯಾಸ್ಯನ ದೇಹದಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಬೆಳೆದುಬಿಟ್ಟನು. ರಾಕ್ಷಸನ ದೇಹವು ಬಿರಿಯಲಾರಂಭಿಸಿತು. ಅವನ ದೇಹದ ಭಾಗಗಳೆಲ್ಲವೂ ಒಣಗಿದ ಬಿದರಿನಂತೆ ಚಟಚಟ ಮುರಿಯತೊಡಗಿದವು. ಕ್ಷಣಾರ್ಧದಲ್ಲಿ ವಿನಾಯಕನು ವ್ಯಾಘ್ರಾಸ್ಯನ ಶರೀರವನ್ನು ಸೀಳಿ ಎರಡು ಹೋಳು ಮಾಡಿ ನಾಶಪಡಿಸಿಬಿಟ್ಟನು. ಅನಂತರ ಊರನ್ನೆಲ್ಲಾ ವ್ಯಾಪಿಸಿ ಸುಡುತ್ತಲಿದ್ದ ಅಗ್ನಿಯನ್ನು ಕುಡಿದು ಉರಿಯನ್ನೆಲ್ಲಾ ಕಾಲಿನಿಂದ ಹೊಸಕಿ ನಂದಿಸಿ ಬಿಟ್ಟನು. ಮತ್ತು ಊರನ್ನೆಲ್ಲಾ ಸುಡುತ್ತಲ್ಲಿದ್ದ ಆ ಉರಿಯನ್ನು ಹಬ್ಬಿಸುತ್ತಲಿದ್ದ ಜ್ವಾಲಾಸ್ಯದಾರುಣ ದೈತ್ಯರನ್ನು ಕೂಡ ಸಂಹರಿಸಿದನು. ಈ ಮೂವರು ರಾಕ್ಷಸರ ಹಾವಳಿಯಿಂದ ಸತ್ತುಬಿದ್ದವರನ್ನೆಲ್ಲಾ ತನ್ನ ಕರುಣಾದೃಷ್ಟಿಯಿಂದ ಮತ್ತು ದಯಾಮೃತ ಸಿಂಚನದಿಂದ ಪುನರುಜ್ಜೀವನಗೊಳಿಸಿದನು. ಮತ್ತು ಸುಟ್ಟು ಕರಕಾಗಿ ಹೋಗಿದ್ದ ನಗರವನ್ನೆಲ್ಲಾ ಮೊದಲಿನಂತೆ ಮಾಡಿದನು. ಆಗ ರಾಜನು, ಕಾಶೀರಾಜ್ಯದ ಪೌರರು ವಿನಾಯಕನನ್ನು ಬಗೆಬಗೆಯಿಂದ ಕೊಂಡಾಡಿ ಸ್ತೋತ್ರಗೈದರು. ಕಾಶೀರಾಜನು ಹಾಗೂ ಆಗ ಅಲ್ಲಿಗೆ ಈ ಅದ್ಭುತವನ್ನು ನೋಡಲು ಆಗಮಿಸಿದ ನಾನಾ ದೇಶದ ಜನರು ಅನೇಕ ಅಪೂರ್ವ ವಸ್ತುಗಳನ್ನು ವಿನಾಯಕನಿಗೆ ಸಮರ್ಪಿಸಿದರು. ತನಗೆ ಸಮರ್ಪಿಸಿದ ವಸ್ತುಗಳನ್ನೆಲ್ಲಾ ವಿನಾಯಕನು ಬ್ರಾಹ್ಮಣೋತ್ತರಿಗೆ ದಾನಮಾಡಿ ಅವರನ್ನು ಸಂತೋಷಪಡಿಸಿದನು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ಬಾಲಚರಿತ್ರ, ನಗರೀ ಮೋಕ್ಷಣ ಎಂಬ ಹದಿನೈದನೇ ಅಧ್ಯಾಯ ಮುಗಿದುದು*

—o—

**ಬ್ರಹ್ಮ :-** ಕಾಶೀರಾಜನು ಮಾರನೆಯ ದಿನ ಕಶ್ಯಪ ನಂದನನಾದ ವಿನಾಯಕನ ಮನೆಗೆ ತೆರಳಿ ಭಕ್ತಿಯಿಂದ ಪೂಜಿಸಿ ನಮಸ್ಕಾರ ಮಾಡಿದನು. ಮತ್ತು ತನ್ನ ಮನೆಗೆ ಭೋಜನಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಿದನು. ಆಗ ವಿನಾಯಕನು ''ನಾನು ಈಗ ತಾನೇ ಪಂಚಭಕ್ಷ್ಯ ಪರಮಾನ್ನದ ದಿವ್ಯ ಭೋಜನವನ್ನು ಉಂಡಿದ್ದೇನೆ. ಈಗ ಪ್ರಕೃತ ನಾನು ಸಂತೃಪ್ತ. ಭೋಜನದ ಇಚ್ಛೆಯೇ ಇರುವದಿಲ್ಲ'' ಎಂದು ಹೇಳಿದನು. ಅಲ್ಲಿ ತಾನು ಉಂಡು ಉಳಿದಿರುವ ಲಾಡು, ಪಾಯಸ, ಅನೇಕ ಕಜ್ಜಾಯ, ಒಡೆ, ಹಾಲು-ಮೊಸರು, ಜೇನುತುಪ್ಪ ಬಾಸುಂದಿ ಮೊದಲಾದವುಗಳನ್ನೆಲ್ಲಾ ತೋರಿಸಿದನು. ಮತ್ತು ವಿನಾಯಕನ ಮೈಮೇಲೆ ರಾಜನು ಎಂದೂ ನೋಡದ ಅನೇಕ ಮುತ್ತು ರತ್ನಗಳ ದಿವ್ಯಾಭರಣಗಳು ಹೊಳೆಯುತ್ತಿದ್ದವು. ಅದನ್ನೆಲ್ಲಾ ನೋಡಿ ರಾಜನು ಆಶ್ಚರ್ಯದಿಂದ ''ಯಾವ ಪುಣ್ಯ ಪುರುಷನು ಈ ಬಗೆಯ ವಸ್ತುಗಳಿಂದ ನಿನ್ನನ್ನು ಪೂಜಿಸಿದನು ?'' ಎಂದು ಕೇಳಿದನು. ಅದಕ್ಕೆ ವಿನಾಯಕನು ಹೇಳತೊಡಗಿದನು.

**ವಿನಾಯಕ :-** 'ದಂಡಕ' ಎಂಬ ಗೊಂಡಾರಣ್ಯದಲ್ಲಿ **'ನಾಮಲ'** ಎಂಬ ಹೆಸರಿನ ಒಂದು ಪಟ್ಟಣವಿದೆ. ಅಲ್ಲಿ ಭ್ರುಶುಂಡಿ ಎಂಬ ಹೆಸರಿನ ನನ್ನ ಒಬ್ಬ ಭಕ್ತನಿದ್ದಾನೆ. ಅವನು ತನ್ನ ತಪೋಮಹಿಮೆಯಿಂದ ಭೂತ, ಭವಿಷ್ಯ, ವರ್ತಮಾನಗಳನ್ನು ತಿಳಿಯುವ ತ್ರಿಕಾಲಜ್ಞಾನಿಯಾಗಿದ್ದಾನೆ. ಅವನು ಹಿಂದೆ ಕಠಿಣ ತಪಸ್ಸನ್ನು ಆಚರಿಸಿದಾಗ ಅವನ ಎರಡೂ ಹುಬ್ಬುಗಳ ನಡುವೆ ಒಂದು ಸೊಂಡೆ ಮೂಡಿತು. ಅಂದಿನಿಂದ ಅವನಿಗೆ ಭ್ರುಶುಂಡಿ ಎಂಬ ಹೆಸರು ಬಂದಿತು. ಅವನು ನನ್ನ ಏಕಾಂತ ಭಕ್ತ. ಅವನಿಗೆ ನನ್ನ ಸಾದೃಶ್ಯವೇ ಪ್ರಾಪ್ತವಾಗಿದೆ. ಇಂದು ಶುಕ್ಲಪಕ್ಷದ ಚತುರ್ಥ ತಿಥಿಯಷ್ಟೆ. ಆದ್ದರಿಂದ ಅವನು ಬಂದು ತುಪ್ಪ, ಹಾಲು, ಜೇನು, ಬಾಳೆಹಣ್ಣುಗಳಿಂದ ಅಭಿಷೇಕ ಮಾಡಿ, ಪೂಜಿಸಿ, ಪಂಚಭಕ್ಷ್ಯ ಪಕ್ವಾನ್ನಗಳನ್ನು ನಿವೇದಿಸಿದ್ದಾನೆ.

**ರಾಜ :-** ಭಗವನ್ ! ಅಂಥ ಭಕ್ತಾಗ್ರೇಸರನನ್ನು ಒಮ್ಮೆ ನೋಡಬೇಕೆಂದು ನನಗೆ ಪ್ರಬಲವಾದ ಇಚ್ಛೆಯಾಗಿದೆ. ನಾನು ಅವನನ್ನು ಹೇಗೆ ನೋಡಬೇಕು, ಎಲ್ಲಿ ನೋಡಬೇಕು ತಿಳಿಸಿ.

**ವಿನಾಯಕ :-** ಆ ಭಕ್ತನನ್ನು ಕಾಣಲು ನಿನಗೆ ಬಲವತ್ತರವಾದ ಬಯಕೆಯಾಗಿದ್ದರೆ ನೀನು ಅವನ ಮನೆಗೆ ತೆರಳು. ಅವನನ್ನು ಭಕ್ತಿಯಿಂದ ಪೂಜಿಸು. ನಿನ್ನ ಮನೆಯ ಮಂಗಳಕಾರ್ಯಕ್ಕೆ ಅವನನ್ನು ಆಹ್ವಾನಿಸು. ನಾನು ಬರಲು ಹೇಳಿದ್ದೇನೆಂದು ತಿಳಿಸು. ವಿನಾಯಕನು ನನ್ನ ಮನೆಯಲ್ಲಿಯೇ ಇರುತ್ತಾನೆ. ನಿನ್ನನ್ನು ಕರೆತರಲು ಅಪ್ಪಣೆ ಮಾಡಿದ್ದಾನೆ. ನೀನು ನನ್ನ ಮನೆಯವರೆಗೂ ಬಂದು ನಿನ್ನ ಪಾದಧೂಳಿಯಿಂದ ನನ್ನ ಮನೆಯನ್ನು ಪಾವನಗೊಳಿಸು ಎಂದು ಬಗೆಬಗೆಯಿಂದ ಬೇಡಿಕೊಂಡು ಬರುವಂತೆ ಮಾಡು. ನನ್ನ ಹೆಸರನ್ನು ಹೇಳಿದ ತಕ್ಷಣ ಅವನು ಬಂದೇ ಬಿಡುವನು.

ವಿನಾಯಕನ ಆದೇಶದಂತೆ ಮಹಾರಾಜನು ಪರಮರಮಣೀಯವಾದ ಭ್ರುಶುಂಡಿಯ ಆಶ್ರಮಕ್ಕೆ ಹೋದನು. ಅಲ್ಲಿ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಗಣೇಶ ಹೇಳುದ್ದುದನ್ನೆಲ್ಲಾ ಹೇಳಿ, ಆ ಗಣೇಶನು ತನ್ನ ಮನೆಯಲ್ಲೇ ಇರುತ್ತಾನೆಂದು ಹೇಳಿ ತನ್ನ ಮನೆಗೆ ದಯಮಾಡಿಸಬೇಕೆಂದು ಕೇಳಿಕೊಂಡನು.

ಆದರೆ ಭ್ರುಶುಂಡಿಗೆ ವಿನಾಯಕನು ತನ್ನ ಮನೆಯಲ್ಲಿಯೇ ಬಂದು ಕುಳಿತಿದ್ದಾನೆಂಬ ಮಾತು ನಂಬಿಕೆಯಾಗಲಿಲ್ಲ. ಅವನು ರಾಜನನ್ನು ಕುರಿತು ನುಡಿದನು.

**ಭ್ರುಶುಂಡಿ :-** ಮಹಾರಾಜ ! ನನ್ನ ದೇವನ ಪ್ರಭಾವ ಸಾಮಾನ್ಯವಲ್ಲ. ಅವನು ನನ್ನ ಮೇಲೆ ಕರುಣೆದೋರಿ ತನ್ನ ಸಾರೂಪ್ಯವನ್ನೇ ಅನುಗ್ರಹಿಸಿಕೊಟ್ಟಿದ್ದಾನೆ. ದೇವರ್ಷಿಗಳಾದ ನಾರದ, ದೇವಲ ಮೊದಲಾದವರಿಗೆ ನನ್ನಂತೆ ಹುಬ್ಬಿನ ನಡುವೆ ಸೊಂಡೆ ಇರುವದಿಲ್ಲ. ನನ್ನ ಆರಾಧ್ಯದೇವನಾದ ಆ ಗಜಾನನನು ನನ್ನನ್ನು ತಾನಾಗಿ ಕರೆದರೆ ನಾನು ನಿಶ್ಶಂಕೆಯಿಂದ ಹೋಗುತ್ತೇನೆ.

ಭ್ರುಶುಂಡಿಯು ಹೀಗೆ ಮಾತನಾಡಿ ತಾನು ಬರಲಾರೆನೆಂಬ ಅಭಿಪ್ರಾಯ ಸೂಚಿಸಿದ್ದರಿಂದ ಕಾಶೀರಾಜನಿಗೆ ದೊಡ್ಡ ಚಿಂತೆಯಾಯಿತು. ಅವನು ದೈನ್ಯದಿಂದ ತನ್ನ ಮನೆಯಲ್ಲಿ ಸಾಕ್ಷಾತ್ ವಿನಾಯಕ ದೇವನು ಬಾಲಕರೂಪದಿಂದ ಬಂದು ಕುಳಿತಿದ್ದನ್ನು ಬಣ್ಣಿಸಿ ದಿವ್ಯಾಯುಧ, ದಿವ್ಯವಸ್ತುಗಳನ್ನು ಧರಿಸಿದ ಅವನ ದಿವ್ಯಮಂಗಲ ವಿಗ್ರಹವನ್ನು ವರ್ಣಿಸಿ ಇಂಥ ಸ್ವಾಮಿಯು ತನ್ನ ಮನೆಯಲ್ಲಿ ಬಂದು ಕುಳಿತು ನಿನ್ನನ್ನು ಕರೆತರಲು ಹೇಳಿದ್ದಾನೆ. ದಯವಿಟ್ಟು ದಯಾಮಾಡಿಸು ಎಂದು ಬಹುವಿಧವಾಗಿ ಬೇಡಿಕೊಂಡನು. ಆಗ ಭ್ರುಶುಂಡಿಗೆ ರಾಜನ ಮೇಲೆ ಕರುಣೆ ಉಕ್ಕಿಬಂದು ಅವನ ತಲೆಯ ಮೇಲೆ ತನ್ನ ಹಸ್ತವನ್ನಿಟ್ಟು ''ನೀನು ಒಂದು ಕ್ಷಣ ಕಣ್ಣು ಮುಚ್ಚು. ಒಂದು ಚಮತ್ಕಾರವನ್ನು ತೋರಿಸುತ್ತೇನೆ'' ಎಂದು ಹೇಳಿದನು.

ಭ್ರುಶುಂಡಿಯ ಮಾತಿನಂತೆ ಕಾಶೀರಾಜನು ತನ್ನ ಎರಡೂ ಕಣ್ಣುಗಳನ್ನು ಭದ್ರವಾಗಿ ಮುಚ್ಚಿಕೊಂಡನು. ಕಣ್ಣುಗಳನ್ನು ಪುನಃ ತೆರೆದು ನೋಡುವಷ್ಟರಲ್ಲಿ ಅವನು ಕಾಶೀಪಟ್ಟಣದ ತನ್ನ ಅರಮನೆಯ ಬಳಿಯೇ ಬಂದು ನಿಂತುಕೊಂಡಿದ್ದನು. ಇದು ಭ್ರುಶುಂಡಿಯ ಆ ಮಹಾಮಹಿಮೆ ಎಂದು ತಿಳಿದು ರಾಜನು ವಿನಾಯಕನ ಬಳಿ ಹೋಗಿ ಎಲ್ಲ ಸಂಗತಿಯನ್ನು ತಿಳಿಸಿದನು.

**ರಾಜ :-** ದೇವ ! ಭ್ರುಶುಂಡಿಯನ್ನು ಕರೆತರಬೇಕೆಂದು ನೀನೇನೋ ಅಜ್ಞಾಪಿಸಿದೆ. ನಿನ್ನ ಆಜ್ಞೆಯನ್ನು ನಾನು ಅವನಲ್ಲಿ ವಿಜ್ಞಾಪಿಸಿದೆ. ಹೇಗಾದರೂ ಮಾಡಿ ಅವನನ್ನು ಕರೆತರಬೇಕೆಂದು ನಾನು ವಿಶ್ವಪ್ರಯತ್ನ ಮಾಡಿದೆ. ಅವನು ಬರಲೊಪ್ಪಲಿಲ್ಲ.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ರಾಜನಪ್ರತ್ಯಾಗಮನ ಎಂಬಲ್ಲಿ ಹದಿನಾರನೇ ಅಧ್ಯಾಯ ಮುಗಿದುದು*

—o—

**ಬ್ರಹ್ಮ :-** ಕಾಶಿರಾಜನು ಆಡಿದ ಮಾತುಗಳನ್ನು ಕೇಳಿ ವಿನಾಯಕನು ನಸುನಕ್ಕು ನುಡಿದನು.

**ವಿನಾಯಕ :-** ರಾಜನೇ, ಈಗ ನೀನು ಸುಮ್ಮನೇ ಕುಳಿತುಕೊಳ್ಳಬೇಡ. ಮತ್ತೆ ಭುಶುಂಡಿಯ ಆಶ್ರಮಕ್ಕೆ ತೆರಳು. ನನ್ನ ಹೆಸರು ಗಜಾನನ ಎಂದು ತಿಳಿಸು. ಕೇವಲ ವಿನಾಯಕ, ಬಾಲಕ ಎಂದು ಹೇಳಿದರೆ ಅವನಿಗೆ ತಿಳಿಯುವುದಿಲ್ಲ. ಭುಶುಂಡಿಯು ನನ್ನ ಗಜಾನನ ರೂಪದ ಉಪಾಸಕ. ಗಜಾನನ ಎಂಬ ನನ್ನ ಈ ಹೆಸರನ್ನು ಕೇಳಿದ ಕೂಡಲೇ ಎರಡನೇಯ ಮಾತಾಡದೇ ಅವನು ನಿನ್ನೊಡನೆ ಹೊರಟು ಬಂದು ಬಿಡುವನು.

ವಿನಾಯಕನ ಆಜ್ಞೆಯಂತೆ ಕಾಶಿರಾಜನು ಮತ್ತೆ ಭುಶುಂಡಿಯ ಆಶ್ರಮಕ್ಕೆ ಹೋಗಿ ''ಗಜಾನನನು ಈಗ ನಮ್ಮ ಮನೆಯಲ್ಲಿಯೇ ಇದ್ದು ನಿಮ್ಮನ್ನು ಕರೆದುತರಲು ಅಪ್ಪಣೆ ಮಾಡಿದ್ದಾನೆ'' ಎಂದುಹೇಳಿದನು. ಈ ಮಾತನ್ನು ಕೇಳಿದಕೂಡಲೇ ಭುಶುಂಡಿಯು ತಕ್ಷಣದಲ್ಲಿ ಗಜಾನನನ ದರ್ಶನಕ್ಕೆ ಹೊರಟೇಬಿಟ್ಟನು. ಅವನು ಗಜಾನನನ ಬಳಿಗೆ ಹೋಗಲು ಕಾಲನ್ನು ಎತ್ತಿ ಹೆಜ್ಜೆ ಇರಿಸಿದ ಕೂಡಲೇ ಭೂಮಿಯು ನಡುಗತೊಡಗಿತು. ಇಲ್ಲಿಯವರೆಗೆ ಭುಶುಂಡಿಯು ತನ್ನ ಆಶ್ರಮವನ್ನು ಬಿಟ್ಟು ಹೊರಗೇ ಬಂದಿರಲಿಲ್ಲ. ಇಂದು ಅವನು ಆಶ್ರಮವನ್ನು ಬಿಟ್ಟು ನೆಲದ ಮೇಲೆ ಕಾಲು ಇರಿಸಿದ ಕೂಡಲೇ ಸಂತೋಷದಿಂದ ಭೂದೇವಿಯು ತಲೆತೂಗಿದಳು. ಮತ್ತು ಒಳ್ಳೆಯ ರೂಪವನ್ನು ಧರಿಸಿ ''ದೈತ್ಯರ ಹಾವಳಿಯಿಂದ ಪೀಡಿತಳಾದ ನನ್ನ ಧಾರವನ್ನು ಇಳಿಸು; ನನ್ನನ್ನು ರಕ್ಷಿಸು.'' ಎಂದು ಕೇಳಿಕೊಂಡಳು. ಆಗ ಭುಶುಂಡಿ ಮುನಿಯು ''ನೀನು ಹೆದರಬೇಡ. ನನ್ನಿಂದ ನಿನಗೆ ಯಾವದೇ ಉಪದ್ರವ ಉಂಟಾಗಲಾರದು'' ಎಂದು ಹೇಳಿ ಮೂರನೇಯ ಹೆಜ್ಜೆಯನ್ನು ಇಡುವಷ್ಟರಲ್ಲಿ ರಾಜನೊಡನೆ ಕಾಶಿಪಟ್ಟಣದಲ್ಲಿರುವ ಅರಮನೆಗೆ ಬಂದು ನಿಂತಿದ್ದನು. ಅಲ್ಲಿ ವಿನಾಯಕ ದೇವನು ಆನೆಯಂತೆ ಸುಂದರವಾದ ಮುಖ, ಉಜ್ವಲವಾದ ದೇಹಕಾಂತಿ, ಕೋಟಿ ಸೂರ್ಯರಪ್ರಭೆ, ಮತ್ತು ಎರಡು ಭುಜಗಳಿಂದ ದೇದೀಪ್ಯಮಾನನಾಗಿ ನಿಂತುಕೊಂಡಿದ್ದನು. ಭುಶುಂಡಿಗೆ ಭಗವತ್ಸ್ವರೂಪವು ಸ್ಪಷ್ಟವಾಗಿ ಗೋಚರವಾಗದೇ ಏನಾದರೂ ಇವನೊಬ್ಬ ಸಾಮಾನ್ಯ ಮಾನವ ಬಾಲಕ ಎಂದು ಭ್ರಾಂತಿಯಾಯಿತು. ಆಗ ಅವನು ಕಾಶಿರಾಜನ ಮೇಲೆ ಸಿಟ್ಟಿಗೆದ್ದು ಮಹಾರಾಜ, ಇವನು ನನ್ನ ಉಪಾಸ್ಯದೇವನಾದ ಗಜಾನನನು ಅಲ್ಲ. ನಾನು ಈ ಬಾಲಕನಿಗೆ ಎಂದಿಗೂ ನಮಸ್ಕಾರ ಮಾಡಲಾರೆ.

ಅವನ ಭಾವವನ್ನು ತಿಳಿದು ವಿನಾಯಕನು ಭುಶುಂಡಿಗೆ ಉಪಾಸ್ಯವಾದ ತನ್ನ ನಿಜರೂಪವನ್ನು ತೋರಿಸಿದನು. ತನ್ನ ಇಷ್ಟದೇವತೆಯಾದ ಗಜಾನನನ ರೂಪದಿಂದ ಕಾಂತಿಯುಕ್ತನಾದ ಆ ಬಾಲಕನು ಕ್ಷಣಾರ್ಧದಲ್ಲಿ ಮಾರ್ಪಟ್ಟದನ್ನು ನೋಡಿ ಭುಶುಂಡಿಗೆ ಪರಮಸಂತೋಷವಾಯಿತು. ಅವನು ಬಾಲರೂಪಿಯಾದ ಗಜಾನನನಿಗೆ ಸಾಷ್ಟಾಂಗನಮಸ್ಕಾರ ಮಾಡಿ ಷೋಡಶೋಪಚಾರದಿಂದ ಪೂಜೆ ಮಾಡಿದನು. ಆದರಿಂದ ಸಂತುಷ್ಟನಾದ ಗಜಾನನನು ಭುಶುಂಡಿಗೆ ಹೇಳಿದನು.

**ಗಜಾನನ** :- ಭಕ್ತಾಗ್ರೇಸರ, ರಾಕ್ಷಸರ ಉಪಟಳದಿಂದ ಹಾಗೂ ದುಃಶ್ಯಾಸನದಿಂದ ಸಂತ್ರಸ್ತಳಾದ ಭೂದೇವಿಯು ಬ್ರಹ್ಮದೇವರ ಮುಖಾಂತರ ನನ್ನನ್ನು ಪ್ರಾರ್ಥಿಸಿದಳು. ಅವಳ ಭಕ್ತಿಗೆ ಮೆಚ್ಚಿ ನಾನು ಅವಳ ಹೊಟ್ಟೆಯಿಂದ ಭೂಮಿಯಲ್ಲಿ ಬ್ರಾಹ್ಮಣನಾಗಿ ಅವತಾರ ಮಾಡಿದೆನು. ಬ್ರಹ್ಮದೇವನಿಗೆ ನಾನು ಅಭಯವಚನ ಕೊಟ್ಟಂತೆ ಆದಷ್ಟು ಬೇಗ ಭೂಮಿಯ ಭಾರವನ್ನು ಇಳಿಸುವೆನು. ದೇವಾಂತಕನನ್ನೂ ಅವನ ಸೋದರನಾದ ನರಾಂತಕನನ್ನೂ ಸಂಹಾರಮಾಡಿ ನನ್ನ ದಿವ್ಯಧಾಮಕ್ಕೆ ತೆರಳುವೆನು. ನಿನ್ನ ಭಕ್ತಿಭಾವದಿಂದ ನಾನು ಸುಪ್ರಸನ್ನನಾಗಿದ್ದೇನೆ. ನಿನಗೆ ಬೇಕಾದ ವರಬೇಡು ಎಂದು ಹೇಳಿದನು.

**ಭ್ರುಶುಂಡಿ** :- ದಯಾನಿಧೇ, ನಾನು ಬಯಸಿದಾಗ ನೀನು ಇದೇ ರೂಪದಿಂದ ನನಗೆ ದರ್ಶನವನ್ನು ಅನುಗ್ರಹಿಸು. ಮತ್ತು ಆಶಾಪೂರಕ ಎಂಬ ಹೆಸರಿನಿಂದ ನಿನ್ನ ಪ್ರಖ್ಯಾತಿ ಜಗತ್ತಿನಲ್ಲಿ ಉಂಟಾಗಬೇಕು.

ಭ್ರುಶುಂಡಿಯ ಬೇಡಿಕೆಗೆ ಗಜಾನನು ತಥಾಸ್ತು ಎಂದು ಹೇಳಿ ಅವನ ತಲೆಯ ಮೇಲೆ ಕೈಯಿಟ್ಟು ತನ್ನ ದಿವ್ಯರೂಪವನ್ನು ತಿರೋಧಾನಗೊಳಿಸಿ ಮತ್ತೆ ಮೊದಲಿನಂತೆ ಬಾಲಕನಾಗಿ ತೋರಿಬಂದನು. ಮತ್ತು ಅಲ್ಲಿದ್ದ ತನ್ನ ಮಿತ್ರ ಬಾಲಕರೊಡನೆ ಆಟವಾಡತೊಡಗಿತು.

ಕಾಶಿರಾಜನು ವಿನಾಯಕನ ಈ ಅತ್ಯುದ್ಭುತವಾದ ಲೀಲಾವಿನೋದಗಳನ್ನು ನಿರೀಕ್ಷಿಸಿ ಪರಮಾನಂದಭರಿತನಾಗಿ ದೇವದೇವನ ಇಂಥ ದಿವ್ಯರೂಪವನ್ನು ಕಂಡ ನಾನೇ ಧನ್ಯ ಎಂದುಕೊಂಡನು. ಮತ್ತು ಆ ಬಾಲಕ ವಿನಾಯಕನಿಗೆ ತನ್ನ ಮನೆಯಲ್ಲಿ ಷಡ್ರಸಭೋಜನವನ್ನು ಮಾಡಿಸಿದನು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ಬಾಲಚರಿತ್ರೆ ಭ್ರುಶುಂಡಿ ವರಪ್ರದಾನ ಎಂಬ ಹದಿನೇಳನೇ ಅಧ್ಯಾಯ ಮುಗಿದುದು*



## ಕಪಟದೈತ್ಯವಧ

**ಅಧ್ಯಾಯ - ೧೮**

**ಬ್ರಹ್ಮ** :- ಮುಂದೆ ಕೆಲದಿನಗಳ ಅನಂತರ ನರಾಂತಕನ ಆಪ್ತಮಿತ್ರನಾದ ಕಪಟದೈತ್ಯನು ಬಾಲಕವಿನಾಯಕನನ್ನು ಕೊಲ್ಲಬೇಕೆಂದು ಒಬ್ಬ ಶ್ರೋತ್ರೀಯ ಬಾಲಕನ ವೇಷವನ್ನು ಧರಿಸಿ ಬಂದನು. ದ್ವಾದಶನಾಮಗಳನ್ನು, ಗೋಪಿಚಂದನ, ಮುದ್ರೆ ಜಪಸರ ಪುಸ್ತಕಗಳನ್ನು ಹಿಡಿದುಕೊಂಡಿದ್ದನು. ಕಾಶಿರಾಜನು ಅವನನ್ನು ಸ್ವಾಗತ ಸತ್ಕಾರ ಮಾಡಿ ಉಚ್ಚ ಆಸನದಲ್ಲಿ ಕೂಡಿಸಿ ತಮ್ಮ ಹೆಸರೇನು ? ಇಲ್ಲಿಗೆ ಬರಲು ಕಾರಣವೇನು ? ಎಂದು ಕೇಳಿದನು. ಅದಕ್ಕೆ ಆ ಕಪಟಿಯು ''ನನ್ನ ಹೆಸರು ಹೇಮಜ್ಯೋತಿರ್ವಿದ. ನಾನು ಭೂತಭವಿಷ್ಯ ವಿಷಯಗಳನ್ನೆಲ್ಲ ಧ್ಯಾನಯೋಗದಿಂದ ಸುಲಭವಾಗಿ ತಿಳಿದು ಹೇಳಬಲ್ಲೆನು. ಕಳುವಾದ ಪದಾರ್ಥಗಳನ್ನು ಪ್ರಶ್ನೆಶಾಸ್ತ್ರದ ಪ್ರಕಾರಕಂಡು ಹಿಡಿದು ಅವು ಇರುವ ಸ್ಥಳಗಳನ್ನು ಸೂಚಿಸಬಲ್ಲೆ. ಮಹಾರಾಜ, ನಿನ್ನ ರಾಜ್ಯದಲ್ಲಿ ಈ ಹಿಂದೆ ಭಯಂಕರ ಅರಿಷ್ಟಗಳು ಒದಗಿದ್ದನ್ನು ನಾನು ಬಲ್ಲೆ. ಮುಂದಾದರೂ ನಿನಗೆ ಬರಲಿರುವ ಕುತ್ತು ವಿಪತ್ತುಗಳಿಂದ ನಿನ್ನನ್ನು ರಕ್ಷಿಸಲಿಕ್ಕಾಗಿಯೇ ನಾನು ಬಂದಿದ್ದೇನೆ'' ಎಂದು ಹೇಳಿದನು.

**ರಾಜ :-** ಪೂಜ್ಯರೇ, ನನ್ನ ರಾಜ್ಯ ಹಾಗೂ ರಾಜಧಾನಿಗಳಲ್ಲಿ ಇಷ್ಟೇಕೆ ಅರಿಷ್ಟಗಳು ಮೇಲಿಂದ ಮೇಲೆ ಒದಗುತ್ತಲಿವೆ ? ಮುಂದೆ ಎಂಥ ವಿಪತ್ತುಗಳು ಒದಗಬಹುದು ?

**ಜ್ಯೋತಿಷಿ :-** ರಾಜನ್, ನಿನ್ನ ಕುಲಪುರೋಹಿತರಾದ ಕಶಪ್ಯರ ಮಗನನ್ನು ನೀನು ಮನೆಯಲ್ಲಿ ತಂದು ಇಟ್ಟುಕೊಂಡಿದ್ದೇ ಇಷ್ಟೆಲ್ಲ ಅನರ್ಥಕ್ಕೆ ಕಾರಣ. ಮುಂದಾದರೂ ಅವನಿಂದ ನಿನಗೆ ಭಯಂಕರವಾದ ಆಪತ್ತುಗಳು, ಸಂಕಟಗಳು ಬರಲಿರುವವು. ಆ ಬಾಲಕ ನಿನಗೆ ಸೆರಗಿಗೆ ಕಟ್ಟಿಕೊಂಡ ಬೆಂಕಿ ಎಂದು ತಿಳಿ. ನಿನ್ನ ಭಾವೀ ಜೀವನ ಸುರಕ್ಷಿತ ಇರಬೇಕೆಂದು ಬಯಸುತ್ತಿದ್ದರೆ ಈ ಬಾಲಕನನ್ನು ಯಾವುದಾದರೂ ಒಂದು ಘೋರಾರಣ್ಯದಲ್ಲಿ ಬಿಟ್ಟು ಬಾ.

ಅದನ್ನು ಕೇಳಿ ರಾಜನು ನಿರ್ಧಾರದ ಧ್ವನಿಯಲ್ಲಿ ನುಡಿದನು.

**ರಾಜ :-** ಜ್ಯೋತಿರ್ಮುನಿಗಳೇ, ನಿಮಗೆ ಆ ಕಶ್ಯಪ ನಂದನನ ಶಕ್ತಿಸಾಮರ್ಥ್ಯ ಮಹಿಮೆಗಳು ಗೊತ್ತಿಲ್ಲ. ಅವನು ಮನಸ್ಸು ಮಾಡಿದರೆ ಅನಂತಕೋಟಿ ಬ್ರಹ್ಮಾಂಡಗಳನ್ನು ನಿಮಿಷಾರ್ಧದಲ್ಲಿ ಸೃಷ್ಟಿಮಾಡಬಲ್ಲ. ಈ ವರೆಗೆ ನಮ್ಮ ರಾಜಧಾನಿ ಹಾಗೂ ನನ್ನ ಮೇಲೆ ಎರಗಿದ ಅನೇಕ ಬಗೆ ವಿಪತ್ತುಗಳಿಂದ ರಕ್ಷಿಸಿ ಅವನೇ ನಮ್ಮನ್ನೆಲ್ಲ ಸಂರಕ್ಷಿಸಿದ್ದಾನೆ. ಅವನನ್ನು ನಾನು ಎಂದೂ ಬಿಡಲಾರೆ. ಮನೆಬಿಟ್ಟು ಹೊರಗೆ ಹೋಗಲು ಬಿಡಲಾರೆ.

ಅಷ್ಟರಲ್ಲಿ ಬಾಲಕರ ಜೊತೆಗೆ ಆಡುತ್ತ ವಿನಾಯಕನು ಅಲ್ಲಿಗೆ ಬಂದನು. ಮತ್ತು ತನ್ನ ಕೈಗಳನ್ನು ಆ ಜ್ಯೋತಿಷಿಯ ಎದುರು ಚಾಚಿ 'ನನ್ನ ಭವಿಷ್ಯವನ್ನು ಹೇಳು ನೋಡೋಣ' ಎಂದು ನುಡಿದನು. ಆಗ ಹೆದರಿಹೋದ ಆ ದುಷ್ಟ ಜ್ಯೋತಿಷಿಯು ವಿನಾಯಕನಿಗೆ ಹೇಳಿದನು.

**ಜ್ಯೋತಿಷಿ :-** ಇಂದಿನಿಂದ ನಾಲ್ಕುದಿನಗಳ ಒಳಗೆ ನೀನು ಒಂದು ಹಾಳು ಬಾವಿಯಲ್ಲಿ ಬಿದ್ದುಬಿಡುವಿ. ಅಲ್ಲಿಂದ ಕಷ್ಟಪಟ್ಟು ಪಾರಾಗಿ ಮೇಲೆ ಬಂದರೆ ಸಮುದ್ರದಲ್ಲಿ ಮುಳುಗಿಹೋಗುವಿ. ಕದಾಚಿತ್ ಅದರಿಂದಲೂ ಬದುಕಿ ಉಳಿದು ಬಂದರೆ ಗಾಢಾಂಧಕಾರದಲ್ಲಿ ಕರಗಿ ಹೋಗುವೆ. ಅದರಿಂದಲೂ ಕದಾಚಿತ್ ನೀನು ಬದುಕಿ ಬಂದರೆ ಇದ್ದಕ್ಕಿದ್ದಂತೆ ಒಂದು ದೊಡ್ಡ ಗುಡ್ಡವು ನಿನ್ನ ಮೇಲೆ ಉರುಳಿ ಬಿದ್ದು ಸತ್ತುಹೋಗುವೆ. ಈಗ ನಾನು ಮುಂಬರುವ ಈ ಎಲ್ಲ ಸಂಕಟಗಳಿಂದ ನಿನ್ನನ್ನು ಪಾರುಮಾಡಲೆಂದೇ ಇಲ್ಲಿಗೆ ಬಂದಿದ್ದೇನೆ. ಈ ನಿಮಿಷದಲ್ಲಿಯೇ ನೀನು ಈ ಸ್ಥಳವನ್ನು ಬಿಟ್ಟುಬಿಡು ಚಿಂತಿಸಬೇಡ. ನನ್ನ ಜೊತೆಗೆ ಬಾ. ಸುರಕ್ಷಿತಸ್ಥಳಕ್ಕೆ ನಾನು ನಿನ್ನನ್ನು ಕರೆದುಕೊಂಡು ಹೋಗುವೆನು. ಈ ನಾಲ್ಕು ದಿನಗಳು ನೀನು ನನ್ನೊಡನೆ ಇರು. ನನ್ನ ತಪಃಶ್ಶಕ್ತಿಯಿಂದ ನಿನ್ನನ್ನು ರಕ್ಷಿಸಿ ನಾಲ್ಕು ದಿನಗಳ ನಂತರ ನಿನ್ನನ್ನು ಸುರಕ್ಷಿತವಾಗಿ ರಾಜನ ಬಳಿಗೆ ತಂದು ಬಿಡುತ್ತೇನೆ.

ಜ್ಯೋತಿಷಿಯ ಮಾತನ್ನು ಕೇಳಿ ಬಾಲಕನಾದ ವಿನಾಯಕನು ಒಮ್ಮೆಲೇ ಅರಮನೆಯ ಒಳಗೆ ಪ್ರವೇಶಿಸಿದನು. ಅವನೊಡನೆ ರಾಜನೂ ಅರಮನೆಯ ಅಂತಃಪುರದ ಒಳಗೆ ಬಂದನು. ಆಗ ಆ ಬಾಲಕನು ರಾಜನ ಬೆರಳಿನಲ್ಲಿದ್ದ ರತ್ನದ ಉಂಗುರವನ್ನು ಅವನಿಂದ ಪಡೆದು ತನ್ನ ಮುಷ್ಟಿಯಲ್ಲಿ ಬಚ್ಚಿಟ್ಟುಕೊಂಡು ಹೊರಗೆ ಬಂದನು ಮತ್ತು ಆ ಜ್ಯೋತಿಷಿಗೆ ಕೇಳಿದನು.

**ಗಜಾನನ :-** ಗಣಕಮಹಾಶಯ ನಮ್ಮಲ್ಲಿರುವ ಬೆಲೆಬಾಳುವ ಪದಾರ್ಥವೊಂದು ಕಳೆದುಹೋಗಿದೆ ಯಾರು ಕದ್ದಿದ್ದಾರೋ ತಿಳಿಯದು. ಅದು ನಮಗೆ ಹೇಗೆ ದೊರೆಯುವದು ? ಎಂದು ದೊರೆಯುವದು ?

**ಗಣಕ :-** ''ರಾಜಮುದ್ರಿಕೆ ಕಳೆದುಹೋಗಿದೆ. ಅದನ್ನು ಯಾರು ಕದ್ದಿದ್ದಾರೆ ಈಗ ಎಲ್ಲಿದೆ. ಎನ್ನುವದನ್ನು ನಾನು ಈಗಲೇ ಸ್ಪಷ್ಟವಾಗಿ ಹೇಳುತ್ತೇನೆ. ನಾನು ಹೇಳಿದ್ದು ನಿಜವಾದರೆ ಆ ವಸ್ತುವನ್ನು ನನಗೇ ಕೊಟ್ಟುಬಿಡಬೇಕು'' ಅದಕ್ಕೆ ಗಜಾನನನು ಸಮ್ಮತಿಸಿದ ಕೂಡಲೇ ಗಣಕನು ''ಆ ಮುದ್ರಿಕೆಯು ಈಗ ನಿನ್ನ ಕೈಯಲ್ಲಿಯೇ ಇದೆ. ನನ್ನ ಭವಿಷ್ಯವನ್ನು ಎಲ್ಲರೂ ಪರೀಕ್ಷಿಸಲಿ'' ಎಂದು ನುಡಿದನು.

ಆಗ ಗಜಾನನು ತನ್ನ ಕೈಯಲ್ಲಿದ್ದ ರತ್ನದ ಉಂಗುರವನ್ನು ಮಾರಣಮಂತ್ರದಿಂದ ಅಭಿಮಂತ್ರಿಸಿ ಕಪಟಜ್ಯೋತಿಷಿಯ ಎದೆಗೆ ಬಲವಾಗಿ ಹೊಡೆದನು. ಗಣೇಶನ ಪ್ರಹಾರದಿಂದ ಒಂದು ನಿಮಿಷದಲ್ಲಿ ಆ ಕಪಟಜ್ಯೋತಿಷಿಯು ಸತ್ತುಬಿದ್ದನು. ಸಾಯುವಾಗ ಅವನಿಗೆ ಅವನ ರಾಕ್ಷಸರೂಪವು ಬಂದು ಪರ್ವತದಂತೆ ಇದ್ದ ಅವನ ದೈತ್ಯದೇಹವು ಉರುಳಿಬಿದ್ದಿತು. ಆದರಿಂದ ನಗರದ ಕೆಲವು ಭಾಗಗಳು ಪುಡಿಪುಡಿಯಾದವು.

ಈ ವಿನೋದವನ್ನು ನೋಡಲು ದೇವತೆಗಳು ಯಾನಾರೂಢರಾಗಿ ಬಂದು ಬಾಲಕ ವಿನಾಯಕನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಅವನನ್ನು ಹೊಗಳಿ ಹಾಡಿ ಸಕಲಪೂಜಾಸಾಮಗ್ರಿಗಳನ್ನು ಒದಗಿಸಿಕೊಂಡು ಭಕ್ತಿಯಿಂದ ಪೂಜಿಸಿದರು. ಬಾಲಕ ವಿನಾಯಕನ ಈ ಅತ್ಯದ್ಭುತವಾದ ಲೀಲಾವಿನೋದವನ್ನು ಕಂಡು ಹರ್ಷಿಪುಳಕಿತನಾದ ಕಾಶೀರಾಜನು ವಿನಾಯಕನನ್ನು ಪೂಜಿಸಿ ಬ್ರಾಹ್ಮಣರಿಗೂ, ಪುರೋಹಿತರಿಗೂ ವಂದಿಮಾಗಧರಿಗೂ, ದೀನದಲಿತರಿಗೂ ಮೃಷ್ಟಾನ್ನ ಭೋಜನಮಾಡಿಸಿ ದಾನದಕ್ಷಿಣೆಗಳನ್ನಿತ್ತು ಸತ್ಕರಿಸಿದನು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಬಾಲಚರಿತೆ ಕಪಟದೈತ್ಯವಧ ಎಂಬ ಹದಿನೆಂಟನೇ ಅಧ್ಯಾಯ ಮುಗಿದುದು*

—o—

## ಕೂಪ-ಕಂದರ ದೈತ್ಯ ವಧ



**ಬ್ರಹ್ಮ** :- ತನ್ನ ಪ್ರೇರಣೆಯಿಂದ ಹೋದ ಕಪಟದೈತ್ಯನು ವಿನಾಯಕ ಬಾಲಕನಿಂದ ಹತನಾದ ಸುದ್ದಿಯು ನರಾಂತಕನ ಕಿವಿಗೆ ತಲುಪಿತು. ಹೇಗಾದರೂ ಮಾಡಿ ಆ ಬಾಲಕನನ್ನು ಕೊಲ್ಲಬೇಕೆಂಬ ಹಟ ತೊಟ್ಟ ಆ ದೈತ್ಯೇಂದ್ರನು ಕೂಪ-ಕಂದರ ಎಂಬ ಇಬ್ಬರು ಮಹಾಬಲಿಷ್ಠರೂ ಅತ್ಯಂತ ದುಷ್ಟರೂ ಆದ ರಾಕ್ಷಸರನ್ನು ವಿನಾಯಕನನ್ನು ಕೊಲ್ಲಲು ಕಳಿಸಿಕೊಟ್ಟನು. ಅವರಿಬ್ಬರೂ ಕಾಶೀಪಟ್ಟಣಕ್ಕೆ ಬಂದು ಒಂದು ಹಂಚಿಕೆಯನ್ನು ಹೂಡಿದರು. 'ಕೂಪನು ಒಂದು ದೊಡ್ಡ ಹಾಳುಭಾವಿಯಾಗಿ ಕಂದರನು ಆಟವಾಡುವ ಹುಡುಗನಾಗಿ ಆಟವಾಡುತ್ತಾ ವಿನಾಯಕನನ್ನು ಆ ಬಾವಿಗೆ ಬಂದು ಕೆಡುವಬೇಕು. ಹಾಳುಬಾವಿಯಾಗಿದ್ದ ಕೂಪನು ಮತ್ತೆ ದೊಡ್ಡ ಕಪ್ಪೆಯಾಗಿ ವಿನಾಯಕನನ್ನು ನುಂಗಿಬಿಡಬೇಕು' ಎಂದು ಸಂಚು ಮಾಡಿದರು. ಹೀಗೆ ವಿಚಾರಿಸಿಕೊಂಡು ಕಾಶೀಪಟ್ಟಣದ ಸಮೀಪದಲ್ಲಿ ಕೂಪನು ದೊಡ್ಡ ಬಾವಿಯಾಗಿ ಮಾಯೆಯಿಂದ ರೂಪುಗೊಂಡನು. ಕಂದರನು ಬಾಲಕನ ರೂಪು ಧರಿಸಿ ಉಳಿದ ಬಾಲಕರೊಂದಿಗೆ ಆಟವಾಡುತ್ತಾ ಬಾವಿಯ ಸಮೀಪಕ್ಕೆ ಬಂದನು. ಆ ಬಾವಿಯಲ್ಲಿ ದೊಡ್ಡ ದೇಹದ ಒಂದು ಕಪ್ಪೆಯ ಕರ್ಣಕಠೋರವಾಗಿ ವಟರ್‌ವಟರ್ ಎಂದು ಶಬ್ದ ಮಾಡುತ್ತಿತ್ತು. ಬಾವಿಯ ಸಮೀಪದಲ್ಲಿ ಎಲ್ಲ ಹುಡುಗರ ಜೊತೆ ಬಾಲಕ ರೂಪದಿಂದ ಆಟವಾಡುವ ಕಂದರನು ''ನಿನಗೊಂದು ಅದ್ಭುತವಸ್ತು ತೋರಿಸುತ್ತೇನೆ. ಈ ಬಾವಿಯ ಬಳಿಗೆ ಬಾ'' ಎಂದು ವಿನಾಯಕನನ್ನು ಕರೆದುಕೊಂಡು ಹೋದನು. ಆಟವಾಡುತ್ತಾ ಆಡುತ್ತಾ ಕೆಲಹುಡುಗರು ಬಾವಿಯ ನೀರಿನಲ್ಲಿ ಮುಳುಗಿ ಈಜತೊಡಗಿದರು. ಅವರನ್ನು ನೋಡುತ್ತಾ ವಿನಾಯಕನು ಬಾವಿಯ ದಂಡೆಯಮೇಲೆ ನಿಂತುಕೊಂಡಿದ್ದನು. ಆಗ ಕಂದರನು ಹಿಂದಿನಿಂದ ಬಂದು ವಿನಾಯಕನನ್ನು ಬಾವಿಯಲ್ಲಿ ತಳ್ಳಿಬಿಟ್ಟನು. ವಿನಾಯಕನು ನೀರಿನಲ್ಲಿ ಕೆಲವುಕಾಲ ಮುಳುಗಿ ಮತ್ತೆ ಮೇಲೆ ಎದ್ದು ಬಾಲಕರನ್ನು ಆಶ್ಚರ್ಯ ಚಕಿತರನ್ನಾಗಿ ಮಾಡುತ್ತಿದ್ದನು. ಒಮ್ಮೆ ನೀರಿನಲ್ಲಿ ಮುಳುಗಿಹೋದವರಂತೆ ಮತ್ತೊಮ್ಮೆ ನೀರಿನಲ್ಲಿ ಉಸಿರುಗಟ್ಟಿ ಒದ್ದಾಡುವಂತೆ ನಟಿಸುತ್ತಾ ನೀರಿನಲ್ಲಿ ಮುಳುಗಿಬಿಟ್ಟನು. ಬಹಳ ಹೊತ್ತಾದರೂ ಮೇಲಕ್ಕೆ ಏಳಲಿಲ್ಲ. ಆಗ ಹುಡುಗರೆಲ್ಲರೂ ವಿನಾಯಕನು ಮುಳುಗುತ್ತಿರುವನೆಂದು ತಿಳಿದು ಹೋ! ಎಂದು ಕೂಗತೊಡಗಿದರು. ಅದೇ ವೇಳೆಗೆ ಕಂದರನು ವಿನಾಯಕನ ಎರಡೂ ಕಾಲುಗಳನ್ನು ಭದ್ರವಾಗಿ ಹಿಡಿದು ಎಳೆಯುತ್ತಾ ಭಾವಿಯ ತಳಭಾಗಕ್ಕೆ ಕೊಂಡೊಯ್ದನು. ಅಲ್ಲಿ ಕೂಪನು ದೊಡ್ಡ ಕಪ್ಪೆಯ ವೇಷದಿಂದ ವಿನಾಯಕನನ್ನು ತಿನ್ನಬೇಕೆಂದು ಬಾಯ್ತೆರೆದು ಕುಳಿತಿದ್ದನು. ಕಂದರ ವಿನಾಯಕರು ಪರಸ್ಪರ ತಳ್ಳಾಡುತ್ತ ಅಲ್ಲಿಗೆ ಬಂದರು. ಕಂದರನು ವಿನಾಯಕನನ್ನು ಕಪ್ಪೆಯ ರೂಪದಿಂದ ಬಾಯ್ತೆರೆದು ಕುಳಿತ ಕೂಪನ ಬಾಯಲ್ಲಿ ತಳ್ಳಬೇಕೆಂದು ಪ್ರಯತ್ನಿಸಿದನು. ಅವನ ದುರುದ್ದೇಶವನ್ನು ತಿಳಿದ ವಿನಾಯಕನು ಕಂದರನನ್ನೇ ಕಪ್ಪೆಯ ಬಾಯಲ್ಲಿ ಇಳಿಬಿಟ್ಟನು. ತನ್ನ ಬಾಯಲ್ಲಿ ಬಿದ್ದವನನ್ನು ವಿನಾಯಕನೆಂದೇ ಬಗೆದು

ಕೂಪನು ಕಚಕಚನೆ ಅಗಿದು ತಿನ್ನಲಾರಂಭಿಸಿದನು. ವಿನಾಯಕನನ್ನು ಬಿಟ್ಟು ತನ್ನನ್ನೇ ತಿನ್ನತೊಡಗಿದ ಕೂಪನ ಮೇಲೆ ಕಂದರನಿಗೆ ಭಯಂಕರ ಕೋಪ ಬಂದಿತು. ಅವರಿಬ್ಬರೂ ಪರಸ್ಪರ ಕಚ್ಚಾಡಿ, ಬಡಿದಾಡಿ ಇಬ್ಬರೂ ಸತ್ತುಬಿದ್ದರು. ವಿನಾಯಕನು ಆ ದುಷ್ಟ ದೈತ್ಯರಿಬ್ಬರನ್ನು ಸಂಹಾರಮಾಡಿ ವಿಜಯಶಾಲಿಯಾಗಿ ಮೇಲಕ್ಕೆ ಎದ್ದು ಬಂದನು. ವಿನಾಯಕನು ನೀರಿನಲ್ಲಿ ಮುಳುಗಿದನು ಎಂಬ ಸುದ್ದಿ ಕೇಳಿ ಗಾಬರಿಗೊಂಡ ರಾಜನು, ಪರಿವಾರದವರು ಬಾವಿಗೆ ಬಂದು, ಇಬ್ಬರೂ ದೈತ್ಯರನ್ನು ಸಂಹರಿಸಿ ಬಂದ ವಿನಾಯಕನನ್ನು ಅಭಿನಂದಿಸಿದರು. ಅಲ್ಲಿಗೆ ಬಂದ ಬ್ರಾಹ್ಮಣೋತ್ತಮರನ್ನು ಕಾಶೀರಾಜನು ಪೂಜಿಸಿ ದಾನ-ದಕ್ಷಿಣೆಗಳನ್ನು ಕೊಟ್ಟು ಕಳಿಸಿದನು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ಕೂಪ-ಕಂದರ ದೈತ್ಯ ವಧ ಎಂಬಲ್ಲಿ ೧೯ನೇ ಅಧ್ಯಾಯ ಮುಗಿದುದು*



## ಬಾಲಚರಿತೆ ಮೂವರು ದೈತ್ಯರ ಮರಣ

## ಅಧ್ಯಾಯ - ೨೦

**ಬ್ರಹ್ಮ :-** ಕೂಪ-ಕಂದರ ರಾಕ್ಷಸರು ವಿನಾಯಕನಿಂದ ಹತರಾದ ಸುದ್ದಿಯನ್ನು ಕೇಳಿ ನರಾಂತಕನು ಅಂಧಕಾಸುರ, ಅಂಭಾಸುರ, ತುಂಗ ಎಂಬ ಮೂವರು ರಾಕ್ಷಸರನ್ನು ವಿನಾಯಕನ ಸಂಹಾರಕ್ಕಾಗಿ ಕಳಿಸಿಕೊಟ್ಟನು. ಅವರು ಮೂವರು ತಮ್ಮ ಸಂಗಡಿಗರೊಡನೆ ಕಾಶೀಪಟ್ಟಣಕ್ಕೆ ಬಂದರು. ಅಂಧಕಾಸುರನು ತನ್ನ ಹೆಸರಿಗೆ ತಕ್ಕಂತೆ ಶಕ್ತಿವಿಶೇಷದಿಂದ ಸೂರ್ಯಮಂಡಲವನ್ನು ಸಂಪೂರ್ಣ ಮುಚ್ಚಿಹಾಕಿದನು. ನಗರದ ತುಂಬಾ ಕತ್ತಲೆಯು ವ್ಯಾಪಿಸಿತು. ಎರಡನೆಯವನಾದ ಅಂಭಾಸುರನು ಭಯಂಕರ ಮಳೆಯನ್ನು ಸುರಿಸತೊಡಗಿದನು. ಜನರೆಲ್ಲರೂ ಭಯಂಕರವಾದ ಕತ್ತಲೆ, ಭೀಕರವಾದ ಮಳೆ, ಹೊಡೆತಗಳಿಂದ ತತ್ತರಿಸಿ ಹೋದರು. ಅದೇ ವೇಳೆಗೆ ಪ್ರಚಂಡವಾದ ಬಿರುಗಾಳಿ ಬೀಸಿ ಗಿಡಮರಗಳೆಲ್ಲವೂ ಉರುಳಿಬಿದ್ದವು.

ಇದನ್ನು ನೋಡಿ ವಿನಾಯಕನು ಇದೆಲ್ಲವೂ ದುಷ್ಟರಕ್ಕಸರ ಮಾಯಾಜಾಲ ಎಂದು ಅರಿತು, ತನ್ನ ಅತ್ಯದ್ಭುತ ಶಕ್ತಿಯಿಂದ ಆಲದಮರವನ್ನು ನಿರ್ಮಿಸಿದನು. ಅದು ಬಾನುದ್ದ ಬೆಳೆದು ನೂರು ಯೋಜನ ವಿಸ್ತಾರವಾಗಿದ್ದಿತು. ಆ ವೃಕ್ಷದ ಮೇಲೆ ವಿನಾಯಕನು ಒಂದು ಬೃಹದಾಕಾರದ ಪಕ್ಷಿರೂಪ ಧರಿಸಿ ಕುಳಿತುಕೊಂಡನು. ಆ ಪಕ್ಷಿಯೂ ತನ್ನ ನೂರಾರು ಯೋಜನ ವಿಸ್ತಾರವಾದ ರೆಕ್ಕೆಗಳನ್ನು ಅಂತರಿಕ್ಷದಲ್ಲಿ ಹರಡಿತು. ಅದರಿಂದ ಕಾಶೀನಗರದ ಜನರಿಗೆ ಮಳೆಯ ನೀರು ಎಲ್ಲಿಯೂ ಬೀಳದಂತೆ ಸುರಕ್ಷಿತವಾದ ಆಶ್ರಯಸ್ಥಾನ ದೊರೆತಂತಾಯಿತು. ಆ ಪಕ್ಷಿಯು ತನ್ನ ಕೊಕ್ಕಿನಿಂದ ಊರಲ್ಲಿ ಹರಿಯುತ್ತಿದ್ದ ನೀರನ್ನು ಕುಡಿದುಬಿಟ್ಟಿತು. ಅದರ ಕಾಂತಿಯಿಂದ ಕತ್ತಲೆಯು ಹೋಗಿ ಸ್ವಚ್ಛವಾದ ಬೆಳಕು ಬಿದ್ದಿತು. ಆ ಹೆಮ್ಮರದ ಮೇಲೆ ಕುಳಿತುಕೊಂಡ ಅತ್ಯದ್ಭುತ ಆಕಾರದ ಪಕ್ಷಿಯನ್ನು ಜನರೆಲ್ಲರೂ ನೋಡಿದರು. ಇದೆಲ್ಲವೂ ವಿನಾಯಕನ ಮಹಿಮೆ ಎಂದಾಗಲೀ ಆ ಪಕ್ಷಿಯು ವಿನಾಯಕನೇ ಎಂದಾಗಲೀ ಯಾರಿಗೂ ತಿಳಿಯಲಿಲ್ಲ.

ಕತ್ತಲೆಯನ್ನು ಉಂಟುಮಾಡಿದ ಅಂಧಕಾಸುರನನ್ನೂ, ಭಯಂಕರ ಮಳೆಗೆರೆದ ಅಂಭಾಸುರನನ್ನೂ ಪಕ್ಷಿರೂಪಿಯಾದ ವಿನಾಯಕನು ಹಿಡಿದುಬಿಟ್ಟನು. ಅವರು ಸಂಜ್ಞಾಹೀನರಾಗಿದ್ದರು. ಅದನ್ನು ನೋಡಿ ಸಿಟ್ಟಿಗೆದ್ದ ತುಂಗನು ಭಯಂಕರವಾದ ಬೃಹದಾಕಾರದ ಪರ್ವತರೂಪವನ್ನು ತೊಟ್ಟು ಆ ಪಕ್ಷಿಯನ್ನು ಕೊಲ್ಲ ಬೇಕೆಂದು ಪ್ರಯತ್ನಿಸಿದನು. ಅದನ್ನು ನೋಡಿ ಪಕ್ಷಿರೂಪಿಯಾದ ವಿನಾಯಕನು ತನ್ನ ಕೊಕ್ಕಿನಿಂದ ಪರ್ವತರೂಪಿಯಾದ ತುಂಗಾಸುರನನ್ನು ಹಿಡಿದುಕೊಂಡನು. ಗರುಡನು ಸರ್ಪವನ್ನು ಹಿಡಿದಂತೆ ಕಾಣುತ್ತಿತ್ತು ಆ ದೃಶ್ಯ. ಒಂದು ಕಾಲಿನಿಂದ ಅಂಧಕಾಸುರನನ್ನೂ, ಇನ್ನೊಂದು ಕಾಲಿನಿಂದ ಅಂಭಾಸುರನನ್ನೂ ಮತ್ತು ಕೊಕ್ಕಿನಿಂದ ತುಂಗಾಸರುನನ್ನು ಹಿಡಿದುಕೊಂಡು, ಪಕ್ಷಿರೂಪಿಯಾದ ವಿನಾಯಕನು ಗಗನಮಂಡಲದಲ್ಲಿ ಹಾರಾಡುತ್ತಾ ಭೂಮಂಡಲವನ್ನು ದಾಟಿ, ಭುವರ್‌ಲೋಕದಲ್ಲಿ ಸುತ್ತು ಹಾಕತೊಡಗಿದನು. ಗಗನಮಂಡಲದ ವಾಯುವಿನ ಒತ್ತಡ ಹಾಗೂ ಸೂರ್ಯನ ಪ್ರಖರ ಕಿರಣಗಳನ್ನು ತಾಳಲಾರದೇ ಆ ಮೂವರು ದೈತ್ಯರೂ ಅಲ್ಲಿಯೇ ಮೃತರಾದರು. ದೊಡ್ಡ ದೊಡ್ಡ ಪರ್ವತಗಳಂತೆ ಅವರ ದೇಹಗಳು ನೆಲಕ್ಕೆ ಬಿದ್ದವು.

ಹೀಗೆ ದುಷ್ಟರಾದ ಮೂವರು ರಾಕ್ಷಸರು ನಷ್ಟರಾಗಿ ಹೋದ ಬಳಿಕ ವಿನಾಯಕನು ತನ್ನ ಪಕ್ಷಿರೂಪವನ್ನು ವಿಸರ್ಜಿಸಿದನು. ಅದ್ಭುತವಾದ ಆ ಆಲದಮರವೂ ಅದೃಶ್ಯವಾಯಿತು. ಬಿರುಗಾಳಿಯು ಶಾಂತವಾಯಿತು. ಅಂಧಕಾರವು ದೂರವಾಯಿತು. ಬೆಂಕಿಯ ಮಳೆ ಜಲಧಾರೆಗಳೆಲ್ಲಾ ಸದ್ದಿಲ್ಲದೇ ಅಡಗಿಹೋದವು. ಆಕಾಶಮಧ್ಯದಲ್ಲಿ ಸೂರ್ಯನು ಬೆಳಗತೊಡಗಿದ. ಕತ್ತಲೆ ಕಳೆಯಿತು. ದೇವತೆಗಳು ವಿನಾಯಕನ ಮೇಲೆ ಪುಷ್ಪವೃಷ್ಟಿ ಮಾಡಿದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಬಾಲಚರಿತೆ ಮೂವರು ದೈತ್ಯರ ಮರಣ ಎಂಬಲ್ಲಿಗೆ ಇಪ್ಪತ್ತನೇಯ ಅಧ್ಯಾಯ ಮುಗಿದುದು*



## ಭ್ರಮರೀವಧ

**ಅಧ್ಯಾಯ - ೨೧**

**ಬ್ರಹ್ಮ :-** ಗಜಾನನನಿಂದ ರಂಭಾಸುರನು ಸೀಳಲ್ಪಟ್ಟ ಬಳಿಕ ಬಹಳ ಎತ್ತರದಿಂದ ಬೀಳುವ ರಭಸದಲ್ಲಿ ಅವನ ಮುಂಡವು ಕಾಶೀಪಟ್ಟಣದ ಉದ್ಯಾನದಲ್ಲಿ, ರುಂಡವು ದೈತ್ಯನ ಪಟ್ಟಣದಲ್ಲಿ ಅವನ ಮನೆ ಅಂಗಳದಲ್ಲಿ ಬಿದ್ದಿತು. ಅದನ್ನು ನೋಡಿ ಅವನ ತಾಯಿಯಾದ ಭ್ರಮರಿ ಎಂಬ ರಾಕ್ಷಸಿಯು ದುಃಖಾಕ್ರಾಂತಳಾಗಿ ಬಹುವಿಧವಾಗಿ ರೋದಿಸಿದಳು. ಅವಳು ತನ್ನ ಮಗನನ್ನು ವಧಿಸಿದ ವಿನಾಯಕನ ಮೇಲೆ ಕ್ರುದ್ಧಳಾಗಿ ಅವನನ್ನು ಹೇಗಾದರೂ ಮಾಡಿ ಹುಡುಕಿ ತಂದು, ಅವನನ್ನು ಇಲ್ಲಿ ತಂದು ಇದೇ ಊರಲ್ಲಿಯೇ ಅವನ ಶವಸಂಸ್ಕಾರಮಾಡುವೆನು. ಅಲ್ಲಿಯವರೆಗೆ ನನ್ನ ಪುತ್ರನಾದ ರಂಭನ ಈ ರುಂಡವನ್ನು ಅಗ್ನಿಸಂಸ್ಕಾರಮಾಡದೇ ಹಾಗೇ ಇಟ್ಟುಬಿಡಿರಿ. ರಂಭನನ್ನು ಕೊಂದ ಆ ವಿನಾಯಕನ ದೇಹದೊಡನೆಯೇ ಈ ಪುತ್ರನಾದ ರಂಭನ ರುಂಡವನ್ನೂ ನಾನೇ ಸುಡುವೆನು. ಅಲ್ಲಿಯವರೆಗೆ ಇದನ್ನು ಎಣ್ಣೆಯ ಕೊಪ್ಪರಿಗೆಯಲ್ಲಿ ಮುಳುಗಿಸಿಡಿರಿ.''

ಹೀಗೆ ತನ್ನ ಅನುಚರರಾದ ಸೇವಕರಿಗೆ ಆಜ್ಞೆಯಿತ್ತು ವಿನಾಯಕನನ್ನು ಕೊಲ್ಲುವದಕ್ಕಾಗಿ ಅವಳು ಒಂದು ಹಂಚಿಕೆಯನ್ನು ಹೂಡಿದಳು. ವಿನಾಯಕನ ತಾಯಿಯೂ

ದೇವಮಾತೆಯೂ ಆದ ಅದಿತಿ ದೇವಿಯ ರೂಪವನ್ನು ತಾನು ಧರಿಸಿದಳು. ಕಾಶಿರಾಜನ ಮಡದಿಯೂ ಕೂಡ ಇವಳು ಸಾಕ್ಷಾತ್ ದೇವಮಾತೆಯಾದ ಅದಿತಿದೇವಿಯೇ ಎಂದು ತಿಳಿದು ಅವಳಿಗೆ ಸ್ವಾಗತ ಸತ್ಕಾರವನ್ನು ಮಾಡಿದಳು.

ಮಾಯಾವಿನಿಯಾದ ಆ ಕಪಟ ಅದಿತಿಯು ತನ್ನ ಕಂದನಾದ ವಿನಾಯಕನನ್ನು ಕಂಡು ಹೋಗಬೇಕೆಂದು ಬಂದಿದ್ದೇನೆ ಎಂದು ಹೇಳಿದಳು. ಅಷ್ಟರಲ್ಲಿ ಆ ಸ್ಥಳಕ್ಕೆ ವಿನಾಯಕನು ಬಂದು ಬಿಟ್ಟನು. ಇವಳ ಛದ್ಮ ರೂಪ, ದುರುದ್ದೇಶ ಎಲ್ಲವೂ ವಿನಾಯಕನ ದಿವ್ಯದೃಷ್ಟಿಗೆ ಗೋಚರಿಸದೇ ಹೋಗಲಿಲ್ಲ.

**ಗಜಾನನ :-** ಹಿಂದೆ ನೀನು ಒಮ್ಮೆ ನನ್ನ ಯಾವುದೋ ಒಂದು ವಸ್ತುವನ್ನು ನನ್ನಿಂದ ಕಸಿದು ಮುಚ್ಚಿ ಇಟ್ಟಿದ್ದೆಯಲ್ಲವೆ ? ಅದಾವುದು ? ಹೇಳು ನೋಡೋಣ ?

ವಿನಾಯಕನ ಈ ಪ್ರಶ್ನೆಯನ್ನು ಕೇಳಿ ಕಪಟ ಅದಿತಿಯು ಗಾಬರಿಗೊಂಡಳು. ಏನು ಉತ್ತರ ಹೇಳಬೇಕು ಅವಳಿಗೆ ತೋಚಲಿಲ್ಲ. ಆಗ ಆ ಮಾಯಾವಿನಿಯು ತನ್ನ ಮಾಯೆಯಿಂದ ಕೆಲವು ಲಾಡುಗಳನ್ನು ನಿರ್ಮಿಸಿ ಒಂದು ಉಂಡೆಯನ್ನು ಬಾಲಕನ ಕೈಯಲ್ಲಿ ಇತ್ತಳು. ಅದನ್ನು ವಿನಾಯಕನು ಒಂದೇ ತುತ್ತಿಗೆ ತಿಂದು ಬಿಟ್ಟು ಮತ್ತೆ ಉಂಡಿಕೊಡು ಎಂದು ಬೇಡಿದನು. ಆಗ ಆ ದುಷ್ಟೆಯು ತಾನು ಕೊಡುವ ಉಂಡೆಯಲ್ಲಿ ಭಯಂಕರವಾದ ಕಾಲಕೂಟವಿಷವನ್ನು ಬೆರೆಸಿಕೊಟ್ಟಳು. ವಿನಾಯಕನು ಆ ವಿಷದ ಉಂಡೆಯನ್ನು ಕ್ಷಣಾರ್ಧದಲ್ಲಿ ನುಂಗಿ ನೀರುಕುಡಿದು ಮತ್ತೆ ಉಂಡೆಕೊಡು ಎಂದು ಕಾಡತೊಡಗಿದನು. ಅವಳು ವಿನಾಯಕನನ್ನು ತೊಡೆಯ ಮೇಲೆ ಕೂಡಿಸಿಕೊಂಡು ಕೊಟ್ಟಷ್ಟು ಉಂಡೆಗಳನ್ನೆಲ್ಲ ವಿನಾಯಕನು ತಿಂದು ಮತ್ತಷ್ಟು ಉಂಡೆಗಳನ್ನು 'ಕೊಡು ಎಂದು ಕಾಡತೊಡಗಿದನು.

ಅದನ್ನು ನೋಡಿ ರಾಜದಂಪತಿಗಳು; ''ಪಾಪ, ಅದಿತಿಯು ಎಷ್ಟೊಂದು ಉಂಡೆಗಳನ್ನು ಕೊಟ್ಟಾಳು ? ಅಡವಿಯಲ್ಲಿ ಅವಳು ಇರುವ ಆಶ್ರಮದಲ್ಲಿ ಹೆಚ್ಚಿಗೆ ಉಂಡೆಗಳಾದರೂ ಎಲ್ಲಿ ಇರುವವು ? ಈ ಬಾಲಕನು ಸುಮ್ಮನೆ ಅವಳನ್ನು ಉಂಡೆಗಾಗಿ ಕಾಡುತ್ತಿದ್ದಾನೆ. ಇವನನ್ನು ಹೇಗಾದರೂ ಮಾಡಿ ಇಲ್ಲಿಂದ ಕರೆದುಕೊಂಡು ಹೋಗಬೇಕು'' ಎಂದು ನಿರ್ಧರಿಸಿದರು. ಮತ್ತು ವಿನಾಯಕನಿಗೆ ''ಅಡಿಗೆ ಸಿದ್ಧವಾಗಿದೆ. ಊಟಕ್ಕೆ ಏಳು'' ಎಂದು ಹೇಳಿದರು. ಭ್ರಮರಿಯ ತೊಡೆಯ ಮೇಲೆ ಕುಳಿತ ಬಾಲಕ ಅವಳಿಗೆ ಬೆಟ್ಟದಷ್ಟು ಭಾರ ಎನಿಸತೊಡಗಿದ. ಅವಳು ಅವನನ್ನು ಊಟಕ್ಕೆ ಕಳಿಸಿ ತಾನು ಇದೇ ಸಂದರ್ಭದಲ್ಲಿ ಎದ್ದು ಪಾರಾಗಬೇಕೆಂದು ಬಯಸಿದಳು.

ಆದರೆ ಅವಳ ದುರ್ಬುದ್ಧಿಯನ್ನು ತಿಳಿದು ಬಾಲಕ, ಅವಳ ತೊಡೆಯನ್ನು ಬಿಟ್ಟು ಇಳಿಯಲೇ ಇಲ್ಲ. ಅವನಿಗೆ ರಮಿಸುವ ಮಾತಿನಲ್ಲಿ ''ನನ್ನನ್ನು ಬಿಡಪ್ಪ. ನಾನು ನೀನು ಒಳಗೆ ಹೋಗಿ ಊಟಮಾಡೋಣ'' ಎಂದು ಬೇಕಾದಷ್ಟು ಹೇಳಿದಳು. ಆದರೆ ವಿನಾಯಕನು ಅವಳು ಎಷ್ಟು ಹೇಳಿದರೂ ಕೇಳದೇ ಅವಳ ತೊಡೆಯಿಂದ ಇಳಿಯದೇ ಅಲ್ಲಿಯೇ ನಿದ್ದೆ ಮಾಡತೊಡಗಿದ. ಜನರೆಲ್ಲರೂ ಬಂದು ''ಬಾಲಕ, ಇವಳು ನಿನ್ನ ತಾಯಿ. ಇವಳನ್ನು ಬಿಟ್ಟು ಬಿಡು. ಇವಳ ವಿಷಯದಲ್ಲಿ ದಯೆ ತೋರುವುದು ನಿನ್ನ ಧರ್ಮ'' ಎಂದು ಬೇಡಿಕೊಂಡರು. ಆಗ ವಿನಾಯಕನು ತನ್ನ ಕಾಲುಗಳನ್ನು ಸಡಿಲಿಸಿ

ಅವುಗಳಿಂದ ಆ ಮಾಯಾವಿನಿಯ ಕುತ್ತಿಗೆಯನ್ನು ಬಿಗಿಯಾಗಿ ಹಿಡಿದು ಆ ಕಾಲುಗಳಿಂದ ಅವಳ ಕಂಠವನ್ನು ಅಮುಕಿದನು. ಬಾಲಕನ ಎರಡೂ ಕಾಲುಗಳ ನಡುವೆ ಆ ದುಷ್ಟೆಯ ಕತ್ತು ಒತ್ತಿ ಹಿಸುಕಲ್ಪಟ್ಟು ತಕ್ಷಣದಲ್ಲಿ ಅವಳ ಗತಪ್ರಾಣಳಾದಳು. ಅವಳ ನಿಜವಾದ ರಾಕ್ಷಸೀರೂಪ ಪ್ರಕಟವಾಗಿ ಹತ್ತು ಯೋಜನ ವಿಸ್ತಾರವಾದ ದೈತ್ಯದೇಹದಿಂದ ಹೆಣವಾಗಿ ಉರುಳಿದಳು. ಆಗ ಜನರಿಗೆ ಅವಳು ಯಾರೆಂಬುದು ತಿಳಿಯಿತು. ಬಾಲಕನಾದ ವಿನಾಯಕನ ದಿವ್ಯದೃಷ್ಟಿಯನ್ನೂ ಅದ್ಭುತಶಕ್ತಿಯನ್ನೂ ಅವಳನ್ನು ಕೊಲ್ಲಲು ಅವನು ಮಾಡಿದ ಯುಕ್ತಿಯನ್ನೂ ಬಹಳ ಮೆಚ್ಚಿ ಹಾಡಿ ಹೊಗಳಿದರು, ದೇವತೆಗಳು, ಋಷಿಗಳು, ಆ ದೇವದೇವನನ್ನು

ಅದಿತ್ಯಾ ಜಠರೋತ್ಪನ್ನ ವಿನಾಯಕ ನಮೋಽಸ್ತು ತೇ ।
ಪರಬ್ರಹ್ಮಸ್ವರೂಪಾಯ ನಮಃ ಕಶ್ಯಪಸೂನವೇ ॥

ಸ್ವರ್ಗಪಾತಾಳ ಲೋಕಾನಾಂ ಪೃಥಿವ್ಯಾ ಜಲಧೇರಪಿ ।
ಕ್ಷತ್ರಾನಾಂ ಬ್ರಾಹ್ಮಣಾನಾಂ ಚ ಪಿಶಾಚಾನಾಂ ಚ ವೀರುಧಾಂ ॥

ವೃಕ್ಷಾಣಾಂ ಸರಿತಾಂ, ಪುಂಸಾಂ ಸ್ತ್ರೀಣಾಂ ಬಾಲಗಣಸ್ಯ ಚ
ಉತ್ಪತ್ತಿ ಸ್ಥಿತಿಸಂಹಾರ ಕಾರಿಣೇ ತೇನಮೋ ನಮಃ ॥

ಪಶೂನಾಂ ಪತಯೇ ತುಭ್ಯಂ ತತ್ವಜ್ಞಾನ ಪ್ರದಾಯಿನೇ
ನಮೋ ವಿಷ್ಣುಸ್ವರೂಪಾಯ, ನಮಸ್ತೇ ರುದ್ರರೂಪಿಣೇ

ನಮಸ್ತೇ ಬ್ರಹ್ಮರೂಪಾಯ ನಮೋಽನಂತ ಸ್ವರೂಪಿಣೇ
ಮೋಕ್ಷಹೇತೋ ನಮಸ್ತುಭ್ಯಂ ನಮೋ ವಿಘ್ನಹರಾಯ ತೇ

ಎಂದು ಭಕ್ತಿಯಿಂದ ಸ್ತೋತ್ರ ಮಾಡಿದರು.

ಅನಂತರ ನಗರದ ಆರೋಗ್ಯರಕ್ಷಣಾಧಿಕಾರಿಗಳು ಬಂದು ಅಲ್ಲಿ ಸತ್ತುಬಿದ್ದಿದ್ದ ಭ್ರಮರೀ ರಾಕ್ಷಸಿಯ ಗುಡ್ಡದಂಥ ದೇಹವನ್ನು ಅಡ್ಡ, ಉದ್ದ, ತುಂಡು ತುಂಡಾಗಿ ಕೊಡಲಿಯಿಂದ ಕತ್ತರಿಸಿ ಕಡಿದು ಸೀಳು ಸೀಳಾಗಿ ಮಾಡಿ ಊರ ಹೊರಗೆ ಸಾಗಿಸಿ ಸುಟ್ಟು ಹಾಕಿದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ಬಾಲಚರಿತ ಭ್ರಮರೀವಧ ಎಂಬ ಇಪ್ಪತ್ತೊಂದನೇ ಅಧ್ಯಾಯ ಮುಗಿದುದು*

—o—

## ಗಣೇಶನ ವಿವಿಧ ಲೀಲೆಗಳು

## ಅಧ್ಯಾಯ - ೨೨

**ಬ್ರಹ್ಮ :-** ಬಾಲಕನಾದ ವಿನಾಯಕನು ಮಾಡಿದ ಅದ್ಭುತವಾದ ಪವಾಡಗಳನ್ನು ತಮ್ಮ ಕಣ್ಣಿನಿಂದಲೇ ನೋಡಿ ನಾಗರಿಕರಿಗೆಲ್ಲ ಅವನ ಬಗ್ಗೆ ಅತ್ಯುತ್ಕಟವಾದ ಭಕ್ತಿ ಹುಟ್ಟಿತು. ಅವರೆಲ್ಲರೂ ರಾಜನಿಗೆ ಹೇಳಿದರು.

**ನಾಗರಿಕರು :-** ರಾಜನೇ, ನಿನ್ನ ಮನೆಯಲ್ಲಿ ನಡೆಯಬೇಕಾಗಿದ್ದ ವಿವಾಹಕಾರ್ಯವನ್ನು ನಿರ್ವಹಿಸುವದಕ್ಕಾಗಿ ನೀನು ನಿಮ್ಮ ಪುರೋಹಿತರಾದ ಕಶ್ಯಪರ ಬದಲಾಗಿ ಅವರ ಮಗನನ್ನು ಕರೆದುಕೊಂಡು ಬಂದಿರುವೆ. ನಮಗೂ ಅವನ ಸೇವೆಯನ್ನು ಮಾಡಬೇಕೆಂದು ಇಚ್ಚೆಯಾಗಿದೆ. ಆದರೆ ನೀನು ಅವನನ್ನು ಎಲ್ಲಿಗೂ ಹೊರಗೆ ಕಳಿಸುತ್ತಿಲ್ಲ. ನಿನ್ನ ಮನೆಯಲ್ಲಿ ನೀನು ಒಬ್ಬನೇ ಅವನನ್ನು ಪೂಜಿಸುತ್ತಿರುವೆ. ನಮಗೂ ಅವನ ಸೇವೆಗೆ ಅವಕಾಶವನ್ನು ಮಾಡಿಕೊಡು.

**ರಾಜ :-** ನೀವು ಅವಶ್ಯವಾಗಿ ಈ ಬಾಲಕನನ್ನು ನಿಮ್ಮ ಮನೆಗೆ ಕರೆದೊಯ್ದು ಮನಃಪೂರ್ತಿಯಾಗಿ ಪೂಜಿಸಬಹುದು. ಇವನಿಗೆ ಭೋಜನವನ್ನೂ ಮಾಡಿಸಬಹುದು.

ಆಗ, ಎಲ್ಲ ಪ್ರಮುಖ ನಾಗರಿಕರು, ಲೌಕಿಕರು, ವೈದಿಕರು ಗೃಹಸ್ಥರು, ವ್ಯಾಪಾರಿಗಳು, ಪಂಡಿತರು ಪಾಮರರು, ಮಹಾರಾಜನನ್ನು ತಮ್ಮಲ್ಲಿಗೆ ಅದಿತಿಕುಮಾರನಾದ ವಿನಾಯಕನನ್ನು ಕಳಿಸಬೇಕೆಂದು ಬಾಗಿ ಕೈ ಜೋಡಿಸಿ ಭಕ್ತಿಯಿಂದ ಕೇಳಿಕೊಂಡರು. ಅವರ ಮಾತನ್ನು ಕೇಳಿ, ವಿನಯದಿಂದ ವಿನಾಯಕನು ಹೇಳಿದನು.

**ವಿನಾಯಕ :-** ಪೌರ ಪ್ರಮುಖರೆ, ನಾನು ಓರ್ವಸಾಮಾನ್ಯನಾದ ಋಷಿಪುತ್ರ. ಯುವರಾಜನ ವ್ರತಬಂಧ, ವಿವಾಹ, ಯಜ್ಞಾದಿಕಾರ್ಯಗಳನ್ನು ಮಾಡಿಸಲು ಬಂದಿದ್ದೇನೆ. ಆ ಕಾರ್ಯವನ್ನು ಮುಗಿಸಿಕೊಂಡು ನಾನು ನನ್ನ ಆಶ್ರಮಕ್ಕೆ ಮರಳಿ ಹೋಗುತ್ತೇನೆ. ನೀವೆಲ್ಲರೂ ನನ್ನನ್ನು ಸತ್ಕರಿಸುವ ದೊಡ್ಡ ಯೋಜನೆಯನ್ನು ಏಕೆ ಮಾಡಿದ್ದೀರಿ ? ಸಾವಿರಾರು ನಾಗರಿಕರ ಮನೆಗೆ ಬಾಲಕನಾದ ನಾನು ಹೇಗೆ ಬರಲಿ ?

**ನಾಗರಿಕರು :-** ಭಗವನ್, ವಿನಾಯಕ, ನೀನು ಸೃಷ್ಟಿ ಸ್ಥಿತಿ, ಸಂಹಾರಗಳನ್ನು ಮಾಡುವ ಪರಬ್ರಹ್ಮನೆ ಆಗಿರುವೆ. ನೀನು ಸರ್ವಾಂತರ್ಯಾಮಿ, ಭಕ್ತಪ್ರಿಯ, ಭಕ್ತರಾದ ನಮ್ಮ ಬಿನ್ನಹವನ್ನ ಮನ್ನಿಸು. ನಮ್ಮ ಪೂಜೆಯನ್ನು ಸ್ವೀಕರಿಸು.

ಭಕ್ತವತ್ಸಲನಾದ ವಿನಾಯಕ ಭಗವಾನನು ಕಾಶಿನಗರದ ನಾಗರಿಕರ ಬಿನ್ನಹವನ್ನು ಮನ್ನಿಸಿದನು. ಅವರೆಲ್ಲರೂ ಬಹು ಸಂಭ್ರಮದಿಂದ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಪ್ರತಿಯೊಂದು ಮನೆಗಳಲ್ಲಿ ತಳಿರು, ತೋರಣ, ಹೂವು, ಚಿಗುರು ಫಲ, ಪುಷ್ಪ, ಮಂಟಪ ಚಂದನ, ಅಕ್ಷತೆ, ಧೂಪ, ದೀಪ, ನೈವೇದ್ಯ ಮುಂತಾದವುಗಳನ್ನು ಸಜ್ಜು ಮಾಡಿಕೊಂಡು ಎಲ್ಲರೂ ಆ ವಿನಾಯಕನ ಪೂಜೆಯನ್ನು ಮಾಡಿದರು.

ಕಾಶಿಯಲ್ಲಿ ಶುಕ್ಲ ಎಂಬ ಓರ್ವ ದಟ್ಟದರಿದ್ರನಾದ ಬ್ರಾಹ್ಮಣನಿದ್ದ. ಅವನು ಬ್ರಹ್ಮನಿಷ್ಠ, ಅತಿಥಿ ಸೇವಾಪರಾಯಣ, ಅವನ ಧರ್ಮಪತ್ನಿ ವಿದ್ರುಮಾ ರೂಪವತಿ, ಗುಣವತಿ ಮತ್ತು ಪರಮ ಪತಿವ್ರತಾ ಶಿರೋಮಣಿ. ಆದರೆ, ಆ ಬ್ರಾಹ್ಮಣ ಶುಕ್ಲ ಹುಟ್ಟು ದರಿದ್ರ. ಎಲ್ಲರೂ ವೈಭವದಿಂದ ವಿನಾಯಕನ ಪೂಜೆ ಮಾಡುವದನ್ನು ನೋಡಿ ಅವನಿಗೂ ಆ ಭಗವಂತನ ಪೂಜೆ ಮಾಡಬೇಕೆಂದು ಅತ್ಯುತ್ಕಟ ಇಚ್ಛೆ ಉತ್ಪನ್ನವಾಯಿತು. ಆದರೆ ಭಿಕ್ಷೆ ಬೇಡಿ ಬಂದಷ್ಟು ಹಿಟ್ಟು ನುಚ್ಚು. ಅನ್ನದ ಮೇಲೆ ಜೀವನ ನಿರ್ವಾಹವನ್ನು ಮಾಡುವ ಅವರಿಗೆ ಗಣೇಶನನ್ನು ಹೇಗೆ ಕರೆಯುವದು ? ಹೇಗೆ ಪೂಜಿಸುವದು ? ಎಂಬ ಚಿಂತೆ ಕಾಡತೊಡಗಿತು. ಭಿಕ್ಷೆ ದೊರಕದಿದ್ದಾಗ ಒಂದೊಂದು ದಿನ ಆ ದಂಪತಿಗಳು ಉಪವಾಸ ವಿರುತ್ತಿದ್ದರು. ಇಂಥ ಪ್ರಸಂಗದಲ್ಲಿ ಆ ದೇವದೇವನನ್ನು ಬರಮಾಡಿಕೊಳ್ಳುವದು ಹೇಗೆ, ಪೂಜಿಸುವದು ಹೇಗೆ ? ಎಂದು ಶುಕ್ಲಬ್ರಾಹ್ಮಣನು ಮಡದಿಯೊಡನೆ ಚಿಂತಾಕ್ರಾಂತನಾಗಿ ತಲೆಯಮೇಲೆ ಕೈ ಇಟ್ಟುಕೊಂಡು ಕುಳಿತನು.

ಆಗ ವಿವೇಕ ಶಾಲಿನಿಯಾದ ಅವನ ಧರ್ಮಪತ್ನಿ ವಿದ್ರುಮೆಯು ಕೈ ಮುಗಿದು ''ನಾಥ, ಆ ಪ್ರಭು ದೀನ ವತ್ಸಲ. ಅವನಿಗೆ ಮುತ್ತು ರತ್ನ ಬಂಗಾರದ ಅಪೇಕ್ಷೆ ಇಲ್ಲ. ಅವನು ದಯಾಪೂರಿತ. ದ್ರವ್ಯ ದಾನವನ್ನು ಅವನು ಮುಟ್ಟುವದಿಲ್ಲ. ಭಕ್ತಿಯಿಂದ ಅರ್ಪಿಸಿದ ಪತ್ರ ಪುಷ್ಪಗಳಿಂದಲೂ ಆ ಸ್ವಾಮಿ ಪ್ರಸನ್ನನಾಗುತ್ತಾನೆ. ನಾವು ಈಗ ಆ ಸ್ವಾಮಿಯನ್ನು ಮನೆಗೆ ಕರೆತಂದು ನಮ್ಮಲ್ಲಿ ಇದ್ದುದನ್ನೆಲ್ಲ ಅವನಿಗೆ ಅರ್ಪಿಸಿ ಕೃತಾರ್ಥರಾಗೋಣ'' ಎಂದು ಸೂಚಿಸಿದಳು. ವಿದ್ರುಮೆಯ ಯುಕ್ತಿಯುಕ್ತವಾದ ಮಾಡು ಒಳ್ಳೆಯ ಸೂಚನೆ ಎನಿಸಿತು ಆ ಶುಕ್ಲನಿಗೆ. ದಂಪತಿಗಳಿಬ್ಬರೂ ಕೂಡಲೇ ಎದ್ದು ತಮ್ಮ ಮನೆಯನ್ನು ಶೃಂಗರಿಸಿದರು. ಬಾಗಿಲ ಬಳಿಯಲ್ಲಿ ತೋರಣ ತಳಿರು ಚಿಗುರು, ಹೂಗಳಿಂದ ಅಂಲಕರಿಸಿದರು. ಇದ್ದುದರಲ್ಲಿ ಅಕ್ಕಿಯನ್ನು ಹಾಕಿ ಬೇಯಿಸಿ ನೈವೇದ್ಯ ವೈಶ್ವದೇವಮಾಡಿ ವಿನಾಯಕನ ದಾರಿಕಾಯುತ್ತ ಬಾಗಿಲ ಬಳಿ ಕುಳಿತರು.

ವಿನಾಯಕನು ಕಾಶಿಯ ಮಣಿಕರ್ಣಿಕಾ ಘಾಟಿನಲ್ಲಿ ಇಳಿದು ಬಾಲಕರೊಂದಿಗೆ ಸ್ನಾನ ಮಾಡಿದನು. ಹೊಸಬಟ್ಟೆಯನ್ನುಟ್ಟುಕೊಂಡು ಶುಕ್ಲಶರ್ಮನ ಮನೆಗೆ ಬಂದನು. ಭಗವಂತನು ಮನೆಗೆ ಬಂದುದನ್ನು ನೋಡಿದ ಕೂಡಲೇ ಶುಕ್ಲದಂಪತಿಗಳಿಗೆ ಪರಮಾನಂದ ವಾಯಿತು. ಆನಂದದಿಂದ ಹರ್ಷಾಶ್ರುಗಳನ್ನು ಉದುರಿಸುತ್ತ ಕುಣಿಯತೊಡಗಿದರು. ಸ್ವಾಮಿಯನ್ನು ಉಚ್ಚ ಆಸನದಮೇಲೆ ಕೂಡಿಸಿ, ಅವನ ಪಾದಪ್ರಕ್ಷಾಲನವನ್ನು ಮಾಡಿದರು. ಗಂಧ, ಪುಷ್ಪಗಳನ್ನು ಏರಿಸಿ, ಪೂಜೆ ಮಾಡಿದರು. ಆದರೆ ದಪ್ಪ ಅಕ್ಕಿಯ ಅನ್ನವನ್ನು ಬೇಯಿಸಿ ಹಾಕಲು ಅವರಿಗೆ ಸಂಕೋಚವಾಯಿತು. ಆ ವಿನಾಯಕನು ವಿದ್ರುಮೆಯನ್ನು ಕುರಿತು ''ತಾಯಿ ನೀವು ನನಗಾಗಿ ಏನು ಅಡಿಗೆ ಮಾಡಿದ್ದೀರಿ. ಇದ್ದುದನ್ನು ಹಾಕಿರಿ. ನೀವು ಕೊಟ್ಟಿದ್ದು ಕದನ್ನವಾದರೂ ಅದು ನನಗೆ ಅಮೃತಕ್ಕಿಂತ ಸ್ವಾದಿಷ್ಟ.''

ವಿದ್ರುಮೆಯು ವಿನಾಯಕನ ಮಾತನ್ನು ಕೇಳಿ ಸಂಕೋಚಪಡುತ್ತಲೆ ಎಲೆಯಲ್ಲಿ ಅನ್ನ ಹಾಕಿದಳು. ಅನ್ನ ಒಂದು ಕಡೆ, ನೀರು ಒಂದು ಕಡೆ ಬಸಿದು ಹೋಗಹತ್ತಿತ್ತು. ಆಗ ಗಣಪತಿಯು ತನ್ನ ಚಿಗುರುಗೈಯಿಂದ ಬಸಿದು ಹೋಗುವ ಗಂಜಿ ನೀರನ್ನು ಹಿಡಿದಿರುವದು

ಸಾಧ್ಯವಿಲ್ಲವೆಂದು ಹತ್ತುತೋಳುಗಳುಳ್ಳವನಾದನು. ತನ್ನ ಹತ್ತುಕೈಗಳಿಂದಲೂ ಅನ್ನ ಒಂದುಕಡೆ, ಗಂಜಿ ಒಂದುಕಡೆ ನೀರು ಒಂದುಕಡೆ ಹರಿದು ಹೋಗುತ್ತಿರುವ ಬಡಿಸಿರುವ ಅಡಿಗೆಯನ್ನೆಲ್ಲ, ಗಬಗಬ ಉಣ್ಣ ತೊಡಗಿದನು.

**''ತಜ್ಜಲಂ ಚಲಿತಂ ದಿಕ್ಷು ಬಾಲೋ ರೋದ್ದುಂ ನಚಾಶಕತ್ ।**
**ತತೋಽಭವದ್ದಶಭುಜೋ ಭುಭುಜೇ ಚೌಚೌನಂ ಚ ತೈಃ ॥**

ಈ ದೃಶ್ಯವನ್ನು ಅಲ್ಲಿ ವಿನಾಯಕನೊಡನೆ ಬಂದ ಬಾಲಕರು ನಾಗರಿಕರು ನೋಡಿ ಆಶ್ಚರ್ಯಚಕಿತರಾಗಿ ನಿಂತುಕೊಂಡರು.

ಭೋಜನವಾದ ಬಳಿಕ ವಿನಾಯಕನು ಸುಪ್ರಸನ್ನನಾಗಿ, ''ನಿಮ್ಮ ಪ್ರೀತಿಯ ಭೋಜನ ದಿಂದ ನಾನು ಪ್ರಸನ್ನನಾಗಿದ್ದೇನೆ. ನಿಮಗೆ ಬೇಕಾದ ವರವನ್ನು ಬೇಡಿರಿ.'' ಎಂದು ಹೇಳಿದ.

**ಶುಕ್ಲದಂಪತಿಗಳು :-** ಪ್ರಭು, ನೂರಾರು ಜನ ಕುಬೇರಕುಮಾರರು ನಿನಗೆ ಆರೋಗಣೆ ಮಾಡಲು ಹೊರಗೆ ಕೈಕಟ್ಟಿಕೊಂಡು ನಿಂತಿದ್ದಾರೆ. ನೀನು, ಆ ಎಲ್ಲ ಸಿರಿವಂತರನ್ನು ಬಿಟ್ಟು ದಟ್ಟದರಿದ್ರರಾದ ನಮ್ಮ ಮನೆಗೆ ಬಂದು ನನ್ನಕದನ್ನವನ್ನು ಅಮೃತ ಸಮಾನ ಎಂದು ಸ್ವೀಕರಿಸಿದೆ. ನಾನು ಧನ್ಯನಾದೆ. ನಾನು ನಿನ್ನಲ್ಲಿ ಬೇಡುವದು ಎರಡೆ ಎರಡು ವರ. ನಿನ್ನ ಪಾದಗಳಲ್ಲಿ ಭಕ್ತಿ, ಅಂತ್ಯಕಾಲದಲ್ಲಿ ಮುಕ್ತಿ.

ವಿನಾಯಕನು ಶುಕ್ಲದಂಪತಿಗಳಿಗೆ ಬೇಡಿದ ವರಕೊಟ್ಟು ಅವರನ್ನು ಹರಸಿ ಬಾಲಕರೊಡನೆ ಅಲ್ಲಿಂದ ಹೊರಬಿದ್ದನು.

ಹೊರಗೆ ವಿನಾಯಕನಿಗೆ ಸತ್ಕಾರ, ಸುಗ್ರಾಸಭೋಜನ ಹಾರ ತುರಾಯಿ ಕೊಟ್ಟು ಗೌರವಿಸಬೇಕೆಂದು ಬಂದ ಸಿರಿವಂತರಿಗೂ, ಬುದ್ಧಿವಂತರಿಗೂ, ಅಧಿಕಾರಿಗಳಿಗೂ ಬ್ರಹ್ಮಾಂಡ ಕೋಪ ಬಂದಿತು. ''ನಮ್ಮಂಥ ಗಣ್ಯ ನಾಗರಿಕರನ್ನು ತೊರೆದು, ಈ ದಟ್ಟ ದರಿದ್ರ ಬ್ರಾಹ್ಮಣನ ಮನೆಯಲ್ಲಿ ಕೀಳಾದ ಕೂಳು ತಿಂದ, ಈ ವಿನಾಯಕ, ''ನಮ್ಮ ಗೌರವಾದರಗಳಿಗೆ ಅರ್ಹನಲ್ಲ'' ಎಂದು ತಮ್ಮಲ್ಲಿಯೆ ಅಂದುಕೊಂಡು ಅವರೆಲ್ಲರೂ ಉಪಚಾರಕ್ಕಾಗಿ, ವಿನಾಯಕನನ್ನು ತಮ್ಮ ಮನೆಗೆ ಬರಬೇಕೆಂದು ಪ್ರಾರ್ಥಿಸಿದರು.

**ವಿನಾಯಕ :-** ಸಂಪನ್ನರೆ, ಶುಕ್ಲ ಬ್ರಾಹ್ಮಣನ ಮನೆಯ ಆತಿಥ್ಯವು ಅತ್ಯಂತ ಸ್ವಾದಿಷ್ಠವಾಗಿತ್ತು. ಅವನು ಭಕ್ತಿಯಿಂದ ನೀಡಿದ ಅನ್ನ ನನಗೆ ಬಹಳ ರುಚಿಕರ ಎನಿಸಿತು. ಅದನ್ನು ಉಂಡು ನನ್ನ ಹೊಟ್ಟೆಯೆಲ್ಲ ತುಂಬಿ ಹೋಗಿದೆ. ನಾನು ಇನ್ನು ನಿಮ್ಮ ಮನೆಗೆ ಬರಲಾರೆ. ಒಂದು ತುತ್ತು ಅನ್ನವನ್ನೂ ಕೂಡ ನನಗೆ ಇನ್ನು ಮೇಲೆ ಉಣ್ಣಲಿಕ್ಕೆ ಆಗುವದಿಲ್ಲ.

ಗಣೇಶನ ಈ ಮಾತನ್ನು ಕೇಳಿ ದಾಂಭಿಕ-ನಾಗರಿಕರಿಗೆ ಕೋಪ ಬಂದು ಅವರು ಮನೆಗೆ ಹೋಗಿ ಅವನಿಗಾಗಿ ಮಾಡಿಟ್ಟ ಅನ್ನವನ್ನೆಲ್ಲ ತಾವೇ ಉಂಡು, ತಿಂದು ತೇಗಿದರು. ಆದರೆ ನಿಜವಾದ ಭಕ್ತ ಭಾವುಕರ ಮನೆಗೆ ವಿನಾಯಕನು ತಾನಾಗಿ ಹೋಗಿ ಅವರ ಆತಿಥ್ಯ ಸ್ವೀಕರಿಸಿ ಅವರನ್ನೆಲ್ಲ ಸಂತೋಷ ಪಡಿಸಿದನು.

ಅದೇ ಸಮಯದಲ್ಲಿ, ಸನಕ ಸನಂದನರು, ವಿನಾಯಕನ ದರ್ಶನಾರ್ಥವಾಗಿ ರಾಜನ ಬಳಿಗೆ ಬಂದರು. ನಗರದಲ್ಲಿ ಭಕ್ತರ, ಪೌರರ ಆತಿಥ್ಯವನ್ನು

ಸ್ವೀಕರಿಸತೊಡಗಿದ ಭಕ್ತ ಪರಾಧೀನನಾದ ಆ ಭಗವಂತನನ್ನು ಅವರು ಕಣ್ತುಂಬ ನೋಡಿದರು. ಆ ಬ್ರಹ್ಮರ್ಷಿಗಳಿಗೆ ಆ ಪರಬ್ರಹ್ಮನ ವಿಶ್ವರೂಪದ ಸಾಕ್ಷಾತ್ಕಾರವೇ ಆಯಿತು. ಅವರು ಆ ದೇವದೇವರನ್ನು ಪ್ರಮೇಯ ಪುಂಜ ಪರಿಷ್ಕೃತವಾದ ಅಧ್ಯಾತ್ಮದ ಪ್ರಣಾಳಿಕೆಯಲ್ಲಿ ಭಕ್ತಿಯಿಂದ ಸ್ತೋತ್ರ ಮಾಡಿದರು.

ಭಗವಂತನಾದ ವಿನಾಯಕನು ಆ ಬ್ರಹ್ಮರ್ಷಿಗಳಿಗೆ ಅನುಗ್ರಹವನ್ನು ಮಾಡಿ ಅವರ ಭಕ್ತಿಯುಕ್ತವಾದ ಸ್ತೋತ್ರದಿಂದ ಪ್ರೀತನಾಗಿ ''ನನ್ನ ಪ್ರಸಾದದಿಂದ ನೀವು ತತ್ವಜ್ಞರೂ ಸರ್ವಜ್ಞರೂ ಆಗಿರಿ'' ಎಂದು ಹೇಳಿ ಅಂತರ್ಧಾನ ಹೊಂದಿದನು.

ಆಗ, ಸನಕ ಸನಂದನರು ವಿನಾಯಕನಿಗಾಗಿ ಒಂದು ಸುವರ್ಣ ಮಂದಿರವನ್ನು ನಿರ್ಮಿಸಿ ಅಲ್ಲಿ ದೇವತಾ ಪ್ರತಿಷ್ಠಾಪನೆಯನ್ನು ಮಾಡಿದರು. ಅವನಿಗೆ **ವರದ ಗಣಪತಿ** ಎಂದು ಹೆಸರಿಟ್ಟರು. ಗಣೇಶ ಕುಂಡ ಎಂಬ ಸುಂದರವಾದ ಸರೋವರವನ್ನು ನಿರ್ಮಿಸಿದರು.

ಇತ್ತ, ನಾಗರಿಕರ ಆತಿಥ್ಯ ಸ್ವೀಕರಿಸಲು ಹೋದ ವಿನಾಯಕನು ಎಷ್ಟು ಹೊತ್ತಾದರೂ ಮರಳಿ ಬರಲಿಲ್ಲ ಎಂದು ಕಾಶಿರಾಜನು ಅಶ್ವಾರೂಢನಾಗಿ ಅವನನ್ನು ಹುಡುಕಲು ಹೊರಟನು. ಮನೆ ಮನೆಗೆ ಹೋಗಿ ವಿನಾಯಕನು ಎಲ್ಲಿ ಇರುವನು ಎಂದು ಕೇಳಿದನು. ಆಗ ಅವರೆಲ್ಲರೂ ಅವನು ನಿಮ್ಮನ್ನು ಕೂಡಿಕೊಂಡೆ ಬಾಲಕರ ಜೊತೆ ಆಡಲು ಹೋಗಿದ್ದಾರೆ ಎಂದು ಹೇಳಿದರು. ರಾಜನಿಗೆ ಏನೂ ತಿಳಿಯದಂತಾಯಿತು. ಅವನು ವಿನಾಯಕನನ್ನು ಹುಡುಕುತ್ತ ಶುಕ್ಲಶರ್ಮನ ಮನೆಗೆ ಬಂದನು. ಅಲ್ಲಿ ವಿನಾಯಕನು, ಒಂದು ಎತ್ತಿನ ಮೇಲೆ ಹತ್ತಿ ಕುಳಿತು ಬಾಲಕರೊಡನೆ ಆಟವಾಡುತ್ತಿದ್ದನು.

**ಕಾಶಿರಾಜ :-** ನನ್ನೊಬ್ಬನನ್ನೆ ಬಿಟ್ಟು ನೀನು ಮೃಷ್ಟಾನ್ನಭೋಜನ ಮಾಡಲು ಎಲ್ಲಿ ಹೋಗಿದ್ದೆ.

**ವಿನಾಯಕ :-** ನಾನು ನಿನ್ನನ್ನು ಬಿಟ್ಟು ಹೋಗಿಲ್ಲ. ನಾನು ಭೋಜನಕ್ಕೆ ಹೋದಲ್ಲೆಲ್ಲ ನೀನೂ ನನ್ನ ಜೊತೆಗೇ ಬಂದಿರುವೆ. ನನ್ನೊಡನೆ ಭೋಜನವನ್ನು ಮಾಡಿರುವೆ. ಬೇಕಾದರೆ ಈ ನಾಗರಿಕರನ್ನು ಕೇಳು.

**ನಾಗರಿಕರು :-** ಮಹಾರಾಜನೆ, ತಾವು ದೊಡ್ಡವರು. ಸುಳ್ಳು ಹೇಳಬಾರದು. ನೀವು ವಿನಾಯಕನೊಡನೆ ಬಂದು ನಮ್ಮೆಲ್ಲರ ಮನೆಯಲ್ಲಿಯೇ ಅವನ ಜೊತೆಗೆ ಯಥೇಚ್ಛ ಭೋಜನ ಮಾಡಿರುವಿರಿ. ಇದಕ್ಕೆ ನಾವೆಲ್ಲರೂ ಸಾಕ್ಷಿ.

ಮಹಾರಾಜನಿಗೆ ಮೈತುಂಬ ಮುಳ್ಳುಗಳು ಎದ್ದು ನಿಂತವು ಭಕ್ತಿಭಾವದಿಂದ ಕಂಠಗದ್ಗದಿತವಾಯಿತು. ವಿನಾಯಕನ ಅದ್ಭುತ ಮಹಿಮೆಯನ್ನು ಕಂಡು ಕೇಳಿ, ಅವನು ಆಶ್ಚರ್ಯಚಕಿತನಾದ; ಮೂಕ ವಿಸ್ಮಿತನಾದ. ಅವನ ಪಾದಾರವಿಂದಗಳಿಗೆ ಮಣಿದು ನಮೋ ನಮೋ ಎಂದು ವಂದಿಸಿದ. ಆಗ ಮಹಾರಾಜನು, ವಿನಾಯಕನನ್ನು ಪಲ್ಲಕ್ಕಿಯಲ್ಲಿ ಕೂಡಿಸಿದ. ಮೆರಮಣಿಗೆಯಿಂದ ಅರಮನೆಗೆ ಕರೆದುಕೊಂಡು ಹೋದ.

ಶುಕ್ಲದಂಪತಿಗಳು ತಮ್ಮ ಜೀರ್ಣವಾದ ಪರ್ಣಕುಟೀರದ ಕಡೆಗೆ ನಡೆದರು. ಆದರೆ ಇದೇನು ಆಶ್ಚರ್ಯ. ಅವರ ಮುರುಕು ಗುಡಿಸಲು ಇದ್ದಲ್ಲಿ ಒಂದು ಸುಂದರವಾದ ಭವ್ಯ ದಿವ್ಯ ಭವನವು ತಲೆ ಎತ್ತಿ ನಿಂತುಕೊಂಡಿತ್ತು. ಅನೇಕ ದಾಸದಾಸಿಯರು ಬ್ರಾಹ್ಮಣ ದಂಪತಿಗಳ

ಸೇವೆಗಾಗಿ ಕೈಕಟ್ಟಿಕೊಂಡು ನಿಂತಿದ್ದರು. ಮುತ್ತು ರತ್ನ ಬಂಗಾರದ ವಸ್ತು ಒಡವೆಗಳಿಂದ ಅವರ ಗೃಹವು ಅಲಂಕೃತವಾಗಿತ್ತು. ಕುಬೇರನ ಐಶ್ವರ್ಯ ಮನೆಯಲ್ಲಿ ಸೂರೆಗೊಂಡಿತು, ಆ ದಟ್ಟದರಿದ್ರ ಬ್ರಾಹ್ಮಣನು ವಿನಾಯಕನ ಅನುಗ್ರಹದಿಂದ ಕ್ಷಣಾರ್ಧದಲ್ಲಿ ಲಕ್ಷ್ಮೀ ಕುಮಾರನಾಗಿ ಮಾರ್ಪಟ್ಟು, ಆ ಭಗವಂತನ ಪಾದಾರವಿಂದಗಳಲ್ಲಿ ತನ್ನ ಆತ್ಮ ನಿವೇದನವನ್ನು ಮಾಡಿ ಅವನನ್ನು ಆರಾಧಿಸಿ ಉಪಾಸಿಸಿ, ಅರ್ಚಿಸಿ, ಭಜಿಸಿ, ಧ್ಯಾನಿಸಿ ಪೂಜಿಸಿ ಧನ್ಯನಾದ.

ನರಾಂತಕನು, ಕಾಶೀನಗರದಲ್ಲಿ ನಡೆದ ವಿನಾಯಕನ ಗೌರವಾದರದ ವಿಜೃಂಭಣೆಯನ್ನು ನೋಡಿ ಸಂತಪ್ತನಾದನು. ಶೂರ ಮತ್ತು ಚಪಲ ಎಂಬ ಇಬ್ಬರು ಗುಪ್ತಚಾರರನ್ನು ಕರೆದು ''ಯಾವುದಾದರೂ ಉಪಾಯದಿಂದ ಆ ವಿನಾಯಕನನ್ನು ನೀವು ಕರೆದು ಕೊಂದು ಬನ್ನಿರಿ'' ಎಂದು ಅಪ್ಪಣೆಯಿತ್ತು ಹೇಳಿ ಕಳಿಸಿದನು. ಅವರಿಬ್ಬರೂ ಕಾಶೀಪಟ್ಟಣದಲ್ಲಿ ಶಿಬಿಕಾರೂಢನಾದ ವಿನಾಯಕನನ್ನು ತಡೆದು ಘೋರ ಗರ್ಜನೆ ಮಾಡಿ ಹೊಡೆಯ ಬಂದರು. ಕೂಡಲೆ ವಿನಾಯಕನು ಅವರಿಬ್ಬರನ್ನು ತನ್ನ ಕೈಯಲ್ಲಿ ಎತ್ತಿ ಹಿಡಿದು ಗಿಮಿಗಿಮಿ ತಿರುಗಿಸಿ ನೆಲದ ಮೇಲೆ ಕುಕ್ಕರ ಬಡೆದನು. ಪ್ರಾಣಭಯದಿಂದ ಅವರು ಗದಗದ ನಡುಗಿ ತಮ್ಮ ತಪ್ಪನ್ನು ಒಪ್ಪಿಕೊಂಡರು. ''ನಾವು ನರಾಂತಕನ ಗುಪ್ತಚಾರರು. ನಿನ್ನನ್ನು ಕೊಲ್ಲುವ ದುರುದ್ದೇಶದಿಂದ ಬಂದಿದ್ದೆವು. ನಮ್ಮ ಅಪರಾಧವನ್ನು ಕ್ಷಮಿಸು; ಜೀವದಾನ ಮಾಡು ಎಂದು ಬೇಡಿಕೊಂಡರು'' ಆಗ ವಿನಾಯಕನು ಅವರನ್ನು ಕ್ಷಮಿಸಿ ಬಿಟ್ಟುಬಿಟ್ಟನು. ಅವರು ಬಂದು ನರಾಂತಕನಿಗೆ ವಿನಾಯಕನ ಅದ್ಭುತವಾದ ಶಕ್ತಿ ಸಾಮರ್ಥ್ಯಗಳನ್ನು ಬಣ್ಣಿಸಿ ಹೇಳಿದರು. ಅವರು ನರಾಂತಕನಿಗೆ ಎರಡು ಮಾತು ಹೇಳಿದರು.

''ಸ್ವಾಮಿನ್ ಏತಾದೃಶೀಶಕ್ತಿಃ ಕ್ವಾಪಿ ದೃಷ್ಟಾ ನ ಚ ಶ್ರುತಾ''

ಪ್ರಭು, ಈ ವಿನಾಯಕನಿಗೆ ಇದ್ದಂಥ ಶಕ್ತಿ ಇದ್ದದ್ದು ನಾವು ಎಲ್ಲಿಯೂ ನೋಡಿಲ್ಲ. ಇಂಥ ಬಲಿಷ್ಠರನ್ನು ನಾವು ಎಂದೂ ಕಂಡಿಲ್ಲ, ಕೇಳಿಲ್ಲ.

''ಜಾನೀಮಹೇ ನ ಜೇತಾಸ್ಯ ತ್ರೈಲೋಕ್ಯೇವಿದ್ಯತೆ ಪುಮಾನ್''

ಮೂರು ಲೋಕದಲ್ಲಿಯೇ ಅವನನ್ನು ಗೆಲ್ಲುವಂಥ ಪುರುಷನು ಇಲ್ಲ. ಎಂದು ನಾವು ನಿಶ್ಚಿತವಾಗಿ ತಿಳಿದಿದ್ದೇವೆ.

ಇದನ್ನು ಕೇಳಿ, ಕೋಪಾಂಧನಾದ ನರಾಂತಕನು ತನ್ನ ಚತುರಂಗ ಸೇನೆಯೊಂದಿಗೆ ಕಾಶೀನಗರದ ಮೇಲೆ ದಾಳಿಯಿಟ್ಟನು. ಕಾಶೀರಾಜನಾದರೂ ತನ್ನ ಶಸ್ತ್ರಾಸ್ತ್ರ ಸಜ್ಜಿತವಾದ ಸೇನೆಯೊಂದಿಗೆ ನರಾತಂಕನನ್ನು ಎದುರಿಸಿದನು. ದುಷ್ಟನಾದ ನರಾಂತಕನು ಹತ್ತು ಕಡೆಯಿಂದ ಕಾಶೀಪಟ್ಟಣಕ್ಕೆ ಮುತ್ತಿಗೆ ಹಾಕಿ ಸೈನಿಕರಿಗೆ ಕಾಶೀಪಟ್ಟಣವನ್ನು ಸುಟ್ಟು ಬಿಡಲು ಆದೇಶಗೈದನು. ಕ್ರೂರರಾದ ರಕ್ಕಸರು ಮನೆಮನೆಗಳಿಗೆ ಹೊಕ್ಕು ಲೂಟಿ ಮಾಡಿದರು. ಮಕ್ಕಳು ಮುದುಕರು ಮಹಿಳೆಯರು ಎನ್ನದೆ ಕಂಡವರನ್ನೆಲ್ಲ ಕೊಂದು ಹಾಕಿದರು. ಸ್ತ್ರೀಯರ ಮೇಲೆ ಬಲಾತ್ಕಾರ ಮಾಡಿದರು. ಅದನ್ನು ನೋಡಿ ಪರಿಕುಪಿತನಾದ ಕಾಶಿರಾಜನು ತನ್ನ ವೀರಸೇನಾಪತಿಗಳೊಂದಿಗೆ ನರಾಂತಕನ ದಾಳಿಯನ್ನು ಎದುರಿಸಿದನು. ಆದರೆ, ನರಾಂತಕನ ದೈತ್ಯ ಬಲದ ಎದುರು ಕಾಶಿರಾಜನು ಸೋಲುವ ಪ್ರಸಂಗ ಬಂದಿತು ದೈತ್ಯರು ಕಾಶಿರಾಜನನ್ನು ಅವನ ಇಬ್ಬರು ಮಂತ್ರಿ ಪುತ್ರರರನ್ನು ಸೆರೆಹಿಡಿದು ನರಾಂತಕನ ಬಳಿಗೆ

ಕರೆದೊಯ್ದರು. ಇತ್ತ ಮಹಾರಾಜನು ನರಾಂತಕನ ಬಂಧಿಯಾಗಿದ್ದನ್ನು ಕೇಳಿ ಮಹಾರಾಣಿ ಅಂಬಾದೇವಿಯು ಆರ್ತಧ್ವನಿಯಿಂದ ರೋದಿಸತೊಡಗಿದಳು.

**ಅಂಬಾದೇವಿ :-** ವೈರಿಗಳನ್ನೆಲ್ಲ ಮಣ್ಣು ಮುಕ್ಕಿಸಿದ ಮಹಾರಾಜರೆ, ಈಗ ನೀವು ಹೇಗೆ ಪರಾಜಿತರಾದಿರಿ ? ಈ ಕಶ್ಯಪಪುತ್ರನಾದ ವಿನಾಯಕನು ಎಷ್ಟೆಷ್ಟೋ ಬಲಿಷ್ಠ ದೈತ್ಯರನ್ನು ಕೊಂದು ಹಾಕಿದ್ದಾನೆ. ಅವನು ಈಗೇಕೆ ಸುಮ್ಮನಿರುತ್ತಿದ್ದಾನೆ. ಆ ದೈತ್ಯನು ನಿಮ್ಮನ್ನು ಕೊಂದು ಹಾಕಿದರೆ ನಾನು ವಿಧವೆಯಗಿ ಹೇಗೆ ಬಾಳಲಿ ?'' ಮಹಾರಾಣಿಯ ಕರುಳು ಕರುಗಿಸುವ ದೀನ ಆಕ್ರಂದನವನ್ನು ಕೇಳಿ ವಿನಾಯಕನು ಕ್ರುದ್ಧನಾಗಿ ಎದ್ದು ನಿಂತನು. ಘನ ಗರ್ಜನೆಯನ್ನು ಮಾಡಿದನು. ಅವನು ಸ್ಮರಣಮಾಡಿದ ಕೂಡಲೆ ಸಿದ್ಧಿದೇವಿಯು ಎದುರು ಬಂದು ಕೈಮುಗಿದಳು.

''ಪ್ರಭು ಏನು ಅಪ್ಪಣೆ'' ಎಂದು ಕೇಳಿದಳು.

**ವಿನಾಯಕ :-** ನರಾಂತಕನ ಸೈನ್ಯವನ್ನೆಲ್ಲ ಕೊಂದುಹಾಕು. ನಂತರ ತಿಂದುಹಾಕು. ಅನಂತರ ನರಾಂತಕನ ತಲೆಯನ್ನು ಕಡಿದು ನನ್ನ ಬಳಿಗೆ ತೆಗೆದು ಕೊಂಡು ಬಾ.

ಭಗವಂತನ ಆಜ್ಞೆಯನ್ನು ಪಡೆದು ತಕ್ಷಣದಲ್ಲಿಯೇ ಸಿದ್ಧಿದೇವಿಯು ತನ್ನ ಸೈನ್ಯವನ್ನು ಮತ್ತು ಸೇನಾನಾಯಕರನ್ನೂ ನರಾಂತಕನ ಅಪರಂಪಾರ ಸೈನ್ಯದ ಮಧ್ಯದಲ್ಲಿ ನುಗ್ಗಿಸಿದಳು. ಅವರೆಲ್ಲರ ನಾಂತಕನ ಸೈನಿಕರನ್ನು ಲಟಲಟಮುರಿದು ಬಾಯಿಯಲ್ಲಿ ಒಗೆದುಕೊಂಡರು. ಕಂಡವರ ದೇಹಗಳನ್ನೆಲ್ಲ ತುಂಡರಿಸಿದರು. ಸಿಕ್ಕವರನ್ನೆಲ್ಲ ಬಾಯಿಯಲ್ಲಿ ಹಿಡಿಸಿದಷ್ಟು ಮುಕ್ಕಿದರು ; ಅವರ ನೆತ್ತರ ನೆಕ್ಕಿದರು. ಈ ಸಿದ್ಧಿಸೇನೆಯ ಎದುರು ನರಾಂತಕನ ಸೈನ್ಯವೆಲ್ಲವೂ ಮಣ್ಣು ಮುಕ್ಕಿತು. ಸಿದ್ಧಿದೇವಿಯ ಆಜ್ಞಾನುಸಾರ ವಾಗಿ ಕಾಲಪುರುಷನು ನರಾಂತಕನನ್ನು ಬೆನ್ನಟ್ಟಿದನು. ತನ್ನ ಶಸ್ತ್ರಾಸ್ತ್ರಗಳಲ್ಲವು ವ್ಯರ್ಥವಾದುದನ್ನು ನೋಡಿ ನಿರಾಶನಾದ ನರಾಂತಕನು ಮರಣ ಭಯದಿಂದ ದಿಕ್ಕೆಟ್ಟು ಓಡತೊಡಗಿದನು. ನರಾಂತಕನು, ಓಡುವಾಗಲೂ ನಡುನಡುವೆ ನಿಂತು ತನ್ನನ್ನು ಬೆನ್ನಟ್ಟಿ ಬರುವ ಕಾಲಪುರುಷನ ಮೇಲೆ ಭಯಂಕರ ಬಾಣಗಳನ್ನು ಪ್ರಯೋಗಿಸುತ್ತಿದ್ದ. ಬಿಟ್ಟ ಬಾಣಗಳು ಕಾಲಪುರುಷನ ಮೈಯಲ್ಲಿ ನೆಟ್ಟರೂ ಸುಖರೂಪವಾಗಿ ಒಳಗೆ ಹಾಯ್ದು ಹೊರಗೆ ಬರುತ್ತಿದ್ದವು. ಅವನ ಮೈಯಿಂದ ನೆತ್ತರು ಸುರಿಯುತ್ತಿದ್ದರೂ ಅವನು ನಗುತ್ತಲೆ ಇವನನ್ನು ಬೆನ್ನಟ್ಟಿ ಬರುತ್ತಿದ್ದ. ಕೊನೆಗೆ ಕಾಲಪುರುಷನು ಲೀಲಾಜಾಲವಾಗಿ ನರಾಂತಕನ ಕೂದಲು ಹಿಡಿದು ಎಳೆದು ತಂದು ವಿನಾಯಕನಿಗೆ ಒಪ್ಪಿಸಿದನು ಮತ್ತು ವಿನಾಯಕನಿಗೆ ವಂದಿಸಿ ''ಭಗವನ್ ! ನಿನ್ನ ಆಜ್ಞೆಯಂತೆ ಈ ದುಷ್ಟನನ್ನು ಹಿಡಿದು ತಂದು ನಿನಗೆ ಒಪ್ಪಿಸಿದ್ದೇನೆ'' ಎಂದು ಸಾಷ್ಟಾಂಗ ನಮಸ್ಕಾರ ಮಾಡಿದನು.

ವಿನಾಯಕನು ಸುಪ್ರಸನ್ನನಾಗಿ ಆ ಕಾಲಪುರುಷನಿಗೆ ತನ್ನ ಸಾಯುಜ್ಯಮೋಕ್ಷವನ್ನು ಅನುಗ್ರಹಿಸಿದನು.

ಇದನ್ನೆಲ್ಲ ನೋಡುತ್ತ ಅಲ್ಲಿಯೇ ನಿಂತ ನರಾಂತಕನಿಗೆ ಕೋಪದ ಕಿಚ್ಚು ಕೆದರಿದಂತಾಯಿತು. ರೊಚ್ಚು, ಹುಚ್ಚು ಎರಡೂ ಅವನ ಮೇಲೆ ಸವಾರಿಯಾಗಿ ಅವನು ಒಮ್ಮೆಲೆ ಕಾಶಿರಾಜನ ಮೇಲೆ ಏರಿ ಬಂದನು. ತನ್ನ ಶಸ್ತ್ರಾಸ್ತ್ರಗಳಿಂದ ಚಚ್ಚತೊಡಗಿದ. ಆಗ

ಭಯಭ್ರಾಂತನಾದ ಕಾಶಿರಾಜನನ್ನು ಕಂಡು ಕೋಪಗೊಂಡ ವಿನಾಯಕನು ತನ್ನ ತೀಕ್ಷ್ಣವಾದ ಕೊಡಲಿಯಿಂದ ನರಾಂತಕನ ನಡುನೆತ್ತಿಯ ಮೇಲೆ ಪ್ರಹಾರ ಮಾಡಿದನು. ಕ್ಷಣದಲ್ಲಿ ಆ ದೈತ್ಯನು ನೆತ್ತರಕಾರುತ್ತ ನೆಲದಮೇಲೆ ಮೂರ್ಛಿತನಾಗಿ ಬಿದ್ದುಕೊಂಡನು. ಆಗ ವಿನಾಯಕನು ಆ ದೈತ್ಯನಿಗೆ ಚೇತರಿಸಿಕೊಂಡು ಏಳಲು ತುಸು ಸಮಯಕೊಟ್ಟನು. ಕೆಲವು ಕ್ಷಣಗಳ ಬಳಿಕ. ಮೂರ್ಛೆತಿಳಿದೆದ್ದು ಅತ್ಯಂತ ಕ್ರುದ್ಧನಾದ ನರಾಂತಕನು ವಿನಾಯಕನ ಮೇಲೆ ಗಿಡಗಳನ್ನು ಒಗೆದನು. ಅವೆಲ್ಲವೂ ಚೂರು ತೂರಿದನು. ಹೆಬ್ಬಂಡೆಗಳನ್ನು ಚೂರಾಗಿ ಕೆಳಗೆ ಉದುರಿಬಿದ್ದವು. ದೇವನದೇಹ ವಜ್ರದಂತೆ ಅಚ್ಛೇದ್ಯವೂ, ಅಭೇದ್ಯವೂ ಆಗಿದ್ದಿತು.

ಅನಂತರ ನರಾಂತಕನಿಗೂ ವಿನಾಯಕನಿಗೂ ಘನಘೋರವಾದ ಯುದ್ಧವು ಮಸಗಿತು. ವಿನಾಯಕನ ತೀಕ್ಷ್ಣವಾದ ಬಾಣದಿಂದ ನರಾಂತಕನ ಎರಡೂ ತೋಳುಗಳು ಕತ್ತರಿಸಿ ಬಿದ್ದವು. ಅವನ ರುಂಡವು ಹಾರಿ ಅವನ ತಂದೆ ರುದ್ರಕೇತುವಿನ ಮುಂದೆ ಹೋಗಿ ಬಿದ್ದಿತು. ಆದರೆ ಅವನಿಗೆ ದೇವಾಧಿದೇವತೆಗಳ ವರ ಇದ್ದುದರಿಂದ ಕಡಿದ ಕೈ ಮತ್ತೆ ಚಿಗಿತು ಬಂದವು. ಕತ್ತರಿಸಿದ ತಲೆ ಮತ್ತೆ ಮೂಡಿಬಂದಿತು. ಪುನಃ ಪ್ರಾರಂಭವಾಯಿತು ಅವರಿಬ್ಬರಲ್ಲಿ ಘನಘೋರಯುದ್ಧ. ವಿನಾಯಕನು ಬಾಣ ಹೊಡೆದು ನರಾಂತಕನ ಶಿರಚ್ಛೇದ ಮಾಡುವುದು, ವರಗಳ ಬಲದಿಂದ ಅವನಿಗೆ ಮತ್ತೆ ಕರಪ್ರಾಪ್ತಿ, ಶಿರಪ್ರಾಪ್ತಿ, ಆಗ ವಿನಾಯಕನು ತನ್ನ ಶಕ್ತಿಯಿಂದ ಅವನನ್ನು ಮೋಹಿತಗೊಳಿಸಿ ಆ ದೈತ್ಯನನ್ನು ಹಿಡಿದು ಎಳೆದು ಗೋಣು ಮುರಿದು ತನ್ನ ಕೈಯಿಂದಲೆ ಕೊಂದುಹಾಕಿದನು. ಅನಂತರ ಆ ದೈತ್ಯಾಧಮನ ಮಸ್ತಕ ಚಿಗುರಲಿಲ್ಲ. ಚೇತನ ಚೇತರಿಸಿಕೊಳ್ಳಲಿಲ್ಲ.

ಅದನ್ನು ನೋಡಿ ದೇವತೆಗಳು ''ವಿನಾಯಕನಿಗೆ ಜಯವಾಗಲಿ, ಗಣೇಶನಿಗೆ ವಿಜಯವಾಗಲಿ'' ಎಂದು ಜಯ ಜಯಕಾರ ಮಾಡಿ ಅವನ ಮೇಲೆ ಪುಷ್ಪವೃಷ್ಟಿಕರೆದರು. ಕಾಶಿರಾಜನು ಕೈ ಮುಗಿದುಕೊಂಡು ಭಕ್ತಿಯಿಂದ ''ಪ್ರಭು ನಿನ್ನ ದರ್ಶನ ಹಾಗೂ ಈ ದೇವತ್ವ ಪ್ರದರ್ಶನದಿಂದ ನಾನು ಅತ್ಯಂತ ಸಂತುಷ್ಟನಾಗಿದ್ದೇನೆ. ಮೂವತ್ತು ಮೂರು ಕೋಟಿ ದೇವತೆಗಳಿಗೆ ಮೀರಿನಿಂತ, ಎಲ್ಲ ಪ್ರಾಣಿಕೋಟಿಯ ಪ್ರಾಣಾಂತಕನಾದ ನರಾಂತಕನನ್ನು ಕೊಂದು ನೀನು ಜಗದೋದ್ಧಾರ ಮಾಡಿದೆ. ಭೂಭಾರ ಹರಣ ಮಾಡಿ ಲೋಕೋದ್ಧಾರ ಕಾರ್ಯವನ್ನು ಮಾಡಿದ ನಿನಗೆ ನಮೋನಮಃ ! ನನಗೆ ನಿನ್ನಲ್ಲಿ ಭಕ್ತಿ ಕೊಟ್ಟು ಮುಕ್ತಿಯನ್ನು ಅನುಗ್ರಹಿಸು.'' ಎಂದು ಪ್ರಾರ್ಥಿಸಿದನು.

ನರಾಂತಕನ, ದಾರುಣವಾದ ಮರಣವಾರ್ತೆಯನ್ನು ಕೇಳಿ ಅವನ ತಾಯಿಯಾದ ಶಾರದಾ, ತಂದೆಯಾದ ರುದ್ರಕೇತು ಇಬ್ಬರೂ ದುಃಖಾಕ್ರಾಂತರಾಗಿ ಮೂರ್ಛಿತರಾಗಿ ನೆಲದಮೇಲೆ ಬಿದ್ದರು. ಪರಿಚಾರಕರ ಶೈತ್ಯೋಪಚಾರದಿಂದ ಮೂರ್ಛೆ ತಿಳಿದೆದ್ದು ಮಗನ ಭಿನ್ನವಾದ ಮಸ್ತಕವನ್ನು ತೊಡೆಯ ಮೇಲೆ ಇಟ್ಟುಕೊಂಡು ಭಯಂಕರ ಶೋಕವನ್ನು ಮಾಡತೊಡಗಿದರು. ಆಗ ಅತ್ಯಂತ ಶೋಕವಿಹ್ವಲರಾದ ಆ ರುದ್ರಕೇತು ದಂಪತಿಗಳು ಸ್ವರ್ಗದಲ್ಲಿ ಇರುವ ಸ್ವರ್ಗಾಧೀಶನಾಗಿ ಮೆರೆಯುವ, ತಮ್ಮ ಇನ್ನೊಬ್ಬ ಪುತ್ರ ದೇವಾಂತಕನ ಬಳಿಗೆ ಹೋದರು. ದೇವಾಂತಕನು, ತನ್ನ ಸಹೋದರನ ದೇಹಾಂತದ

ದಾರುಣವಾರ್ತೆಯನ್ನು ಕೇಳಿ, ಶೋಕವಿಹ್ವಲನಾಗಿ ವಿಲಾಪಗೈದನು. ''ಪೂಜ್ಯಳಾದ ತಾಯಿಯೇ, ದುಃಖಿತಳಾದ ತಾಯಿಯೇ, ನನ್ನ ಬಂಧುವನ್ನು ಸಂಹಾರ ಮಾಡಿದ ಆ ಪಾಪಿಯನ್ನು ನಾನು ಕೆಲವೇ ಸಮಯದಲ್ಲೇ ವಧಿಸುತ್ತೇನೆ. ಇದರ ಸೇಡನ್ನು ತೀರಿಸಿಕೊಳ್ಳದೆ ನಾನು ಬಿಡುವದಿಲ್ಲ. ನೀವು ನಿಶ್ಚಿಂತರಾಗಿರಿ'' ಹೀಗೆ ತಾಯಿತಂದೆಗಳಿಗೆ ಆಶ್ವಾಸನೆಕೊಟ್ಟು, ದೇವಾಂತಕನು ತನ್ನ ಚತುರಂಗ ಸೇನೆಯಿಂದ ಒಡಗೂಡಿ, ಕಾಶೀಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಆ ಪುಣ್ಯ ನಗರಿಯಲ್ಲಿಯ ಮನೆಮನೆಗಳಲ್ಲಿ ಕೊಳ್ಳಿ ಇಟ್ಟು, ಲೂಟಿಮಾಡಿ ನಿರುಪದ್ರವಿಗಳಾದ ನಾಗರಿಕರನ್ನೆಲ್ಲ ಹತ್ಯೆಗೈಯ್ಯುತ್ತ ಅಕಾಂಡ ತಾಂಡವವನ್ನೆ ನಡೆಸಿದರು. ಇದನ್ನು ನೋಡಿ ಕಾಶಿರಾಜನು ಗದಗುಟ್ಟಿ ನಡುಗಿದನು. ಮತ್ತು ಸಾಕ್ಷಾತ್ ಅಂತಕನಂತೆ ಇದ್ದ ಈ ದೇವಾಂತಕನಿಂದ ನಮ್ಮನ್ನು ರಕ್ಷಣೆ ಮಾಡು'' ಎಂದು ಗಣೇಶನನ್ನು ಬೇಡಿಕೊಂಡನು.

ಕಾಶಿರಾಜನ ಪ್ರಾರ್ಥನೆಯನ್ನುಮನ್ನಿಸಿ, ಗಣಾಧೀಶನು ಪರಮ ತೇಜಸ್ವಿಯಾದ ತರುಣ ಯೋಧನ ರೂಪವನ್ನುಧರಿಸಿದನು. ಸಿಂಹಾರೂಢನಾದನು. ಕೈಯಲ್ಲಿ ಬಿಲ್ಲು ಬಾಣ, ಖಡ್ಗ, ಕೊಡಲಿ, ನಾಲ್ಕು ಆಯುಧಗಳನ್ನು ಧರಿಸಿದನು. ಸಿದ್ಧಿ, ಬುದ್ಧಿ ದೇವಿಯರು ಅವನೊಟ್ಟಿಗೆ ರಣರಂಗಕ್ಕೆ ನಡೆದರು. ಗಣಾಧೀಶನು ಸಿದ್ಧಿದೇವಿಗೆ ''ಈ ದೇವಾಂತಕನ, ಸೇನಾಸಾಗರವನ್ನು ನಾಶಪಡಿಸಲು ನೀನು ಎಲ್ಲ ಸಿದ್ಧತೆಯನ್ನುಮಾಡು'' ಎಂದು ಆಜ್ಞೆಯನ್ನು ಇತ್ತನು. ಆಗ ಸಿದ್ಧಿದೇವಿಯು ದೇವಾಂತಕನ ಸೇನಾಸಾಗರದ ಸಮ್ಮುಖದಲ್ಲಿ ನಿಂತು ಭಯಂಕರ ಗರ್ಜನೆಯನ್ನು ಮಾಡಿದಳು. ಬೆಟ್ಟ ಬಾನು ಭುವಿ ಎಲ್ಲವೂ ನಡುಗಿ ಹೋದವು. ಆಗ ಸಿದ್ಧಿದೇವಿಯು ಸ್ಮರಣಮಾಡಿದಕೂಡಲೇ ಅಣಿಮಾ, ಗರಿಮಾ, ಮಹಿಮಾ, ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ವಶಿತ್ವ ಈಶಿತ್ವ ಎಂಬ ಹೆಸರಿನ ಎಂಟು ಮಹಾಶಕ್ತಿ ದೇವಿಯರು ಚತುರಂಗ ಸೇನಾ ಸಮೇತರಾಗಿ, ವ್ಯೂಹಕರಣೆಯನ್ನು ಮಾಡಿ, ದೇವಾಂತಕನ ಸೈನ್ಯದಲ್ಲಿ ಕ್ಲೋಲಾಹಲವನ್ನು ಉಂಟುಮಾಡಿದರು.

ಇತ್ತ ದೇವಾಂತಕನ ಶೂರ ಸೇನಾಪತಿಗಳಾದ ಕರ್ದಮ ದೀರ್ಘತಂತ್ರ, ತಾಲಜಂಘ, ಯಕ್ಷ, ಘಂಟಾಸುರ, ರಕ್ತತೇಜ, ಕಾಲಾಂತಕ, ದುರ್ಜಯ ಎಂಬ ಅಷ್ಟ ಅತ್ಯಂತ ದುಷ್ಟರಾದ ಬಲಗೈ ಬಂಟರು ಸಿದ್ಧಿದೇವಿಯ ಸೈನ್ಯವನ್ನು ಸಮರ್ಥ ರೀತಿಯಿಂದ ಎದುರಿಸಿದರು. ದೇವಿಯರು ಹಾಗೂ ದೈತ್ಯರ ನಡುವೆ ಭಯಂಕರವಾದ ಶಸ್ತ್ರಾಸ್ತ್ರಗಳ ಎಸೆದಾಟ ಮಸದಾಟಗಳು ನಡೆದವು. ಧರಾತಳದ ತುಂಬ ಹೆಣಗಳ ಹಡದಿಯನ್ನು ಹಾಸಿದಂತಾಗಿ ರುಂಡ ಮುಂಡಗಳಿಂದ ರಣರಂಗವೆಲ್ಲವೂ ತುಂಬಿಹೋಯಿತು.

ದೇವಾಂತಕನ ಮಹಾಬಲಿಷ್ಠ ಸೇನಾಪತಿಯಾದ ಕಾಲಾಂತಕನು ಶಸ್ತ್ರಾಸ್ತ್ರಗಳನ್ನು ಬಿಟ್ಟು ಪ್ರಾಕಾಮ್ಯ ದೇವಿ ಜೊತೆಗೆ ದಂದ್ವ ಯುದ್ಧ ಪ್ರಾರಂಭಿಸಿದನು. ಪ್ರಾಕಾಮ್ಯ ದೇವಿಯು ಕಾಲಾಂತಕನ ಪ್ರಾಣಾಂತಿಕ ಪ್ರಹಾರವನ್ನು ಕಾಣದೆ ಕುಸಿಯ ತೊಡಗಿದಾಗ ವಶಿತ್ವ ದೇವಿಯು ಕೂಡಲೆ ಅಲ್ಲಿಗೆ ಧಾವಿಸಿ, ಕಾಲಾಂತಕನ ಕತ್ತನ್ನು ಕತ್ತರಿಸಿ ಹಾಕಿದಳು. ಇದರಂತೆ ಶಕ್ತಿಶಾಲಿನಿಯಾದ ಅಣಿಮಾದೇವಿಯು ಕ್ರೂರ ಕರ್ದಮಾಸುರನ ಚಂಡಿಕೆ ಹಿಡಿದು ಕೈಯಿಂದ ಎತ್ತಿ ನೆಲದ ಮೇಲೆ ಕುಕ್ಕರ ಬಡಿದಳು. ತಕ್ಷಣದಲ್ಲಿ ಆ ರಾಕ್ಷಸನ ಪ್ರಾಣಪಕ್ಷಿ ಹಾರಿ

ಹೋಯಿತು. ಇದರಂತೆ ಮಹಿಮಾ ಗರಿಮಾ ಲಘುಮಾದೇವಿಯರು, ಯಕ್ಷ ತಾಲಜಂಘ ದೀರ್ಘದಂತರನ್ನು ಕಡಿದು ಕೊಚ್ಚಿಹಾಕಿದರು. ಇದೇ ರೀತಿಯಾಗಿ ವಶಿತ್ವ, ಸಿದ್ಧಿಬುದ್ಧಿ ದೇವಿಯರು ದುಷ್ಪಾರಿಷ್ವ ಬಲಿಷ್ಠರಾದ ದುರ್ಜಯ, ಘಂಟಾಸುರ, ರಕ್ತಕೇಳಿ ಎಂಬ ದಾನವ ವೀರರನ್ನು ಹಿಡಿದು ಹೊಡೆದು ಅವರ ನಡು ನೆತ್ತಿಯ ಮೇಲೆ ಮುಷ್ಟಿ ಪ್ರಹಾರ ಮಾಡಿದರು. ಅದರಿಂದ ಆ ರಾಕ್ಷಸರು ನೆತ್ತರ ಕಕ್ಕುತ್ತ ದುಃಖದಿಂದ ಲಿಕುತ್ತ, ಮಣ್ಣು ಬಿಕ್ಕುತ್ತ ಮಡಿದು ಧರಾಶಾಯಿಯಾದರು. ಇದನ್ನೆಲ್ಲ ನೋಡಿ ಶೋಕಾಘಾತದಿಂದ ಜರ್ಜರಿತನಾಗಿ ಚಿಂತೋದ್ಭ್ರಾಂತನಾದ ದೇವಾಂತಕನು, ಕೈಯಲ್ಲಿ ತೀಕ್ಷ್ಣವಾದ ಖಡ್ಗವನ್ನು ಹಿಡಿದು ದೇವಸೇನೆಯ ಮೇಲೆ ಹದ್ದಿನಂತೆ ಎರಗಿದನು. ತನ್ನ ಭಯಂಕರ ಬಾಹು ಬಲಗಳಿಂದ ಅಷ್ಟದೇವಿಯರು ತನ್ನ ಮೇಲೆ ತೂರಿ ಒಗೆದ ವೃಕ್ಷ, ಬೆಟ್ಟ, ಶಿಲಾಖಂಡಗಳನ್ನು ತನ್ನ ಕೈಯಲ್ಲಿಯ ತಲವಾರದಿಂದ ಹೊಡೆದು ಚೂರು ಚೂರಾಗಿ ಮಾಡಿ ಒಗೆದನು. ಈ ರಣರಂಗದ ಒಂದು ಭೀಕರ ಪ್ರಸಂಗದಲ್ಲಿ ಆ ದೇವಾಂತಕನು ತನ್ನ ವೀರವಿಕ್ರಮನ್ನು ಅಕ್ರಮ, ವಕ್ರಕೌಶಲ್ಯದಿಂದ ಏಕಕಾಲಕ್ಕೆ ಸೂಡುಸೂಡಾಗಿ ಬಿಟ್ಟ ಶರವರ್ಷಗಳಿಂದ ಅಣಿಮಾ ಮಹಿಮಾದಿ ಅಷ್ಟದೇವಿಯರನ್ನು ಮುತ್ತಿ ಮೂರ್ಛೆಗೊಳಿಸಿದನು.

ತನ್ನ ಸೇನೆಯ ಈ ದುರವಸ್ಥೆಯನ್ನು ಕಂಡು ಗಣಾಧೀಶನು ಬುದ್ಧಿದೇವಿಯನ್ನು ಸಮರ ಭೂಮಿಗೆ ಕಳಿಸಿಕೊಟ್ಟನು. ಆಗ ಆ ವೀರವನಿತೆಯು ವಿಶಾಲಗುಹೆಯಂತೆ ಮುಖವನ್ನು ಅಗಲಗೊಳಿಸಿ ಕಣ್ಣಿನಿಂದ ಕೆಂಡದ ಉಂಡೆಗಳನ್ನು ಉದರಿಸುತ್ತ ಸಿಕ್ಕ ಸಿಕ್ಕ ದೈತ್ಯ ದಾನವರನ್ನೆಲ್ಲ ಮುಕ್ಕುತ್ತ ಅವರ ರಕ್ತವನ್ನು ನೆಕ್ಕುತ್ತ ಅಸುರಸೇನೆಯನ್ನೆಲ್ಲ ವಿನಾಶ ಮಾಡುತ್ತ ಮುಂದುವರೆದಳೂ. ಅಗ ದೇವಾಂತಕನು ಕ್ರುದ್ಧನಾಗಿ ಆ ವೀರಾಂಗನೆಯ ಮೇಲೆ ಬಾಣಗಳ ಮಳೆಗರೆಯ ತೊಡಗಿದನು. ಆ ಎಲ್ಲ ಬಾಣಗಳು ಅವನ ವಜ್ರಕಾಯಕ್ಕೆ ಬಡಿದು ಪುಡಿಪುಡಿಯಾಗಿ ನೆಲದ ಮೇಲೆ ಬಿದ್ದವು ಆಗ ಆ ವೀರ ಮಹಿಳೆಯು ದೇವಾಂತಕನನ್ನೆ ನುಂಗಿ ನೀರು ಕುಡಿಯಬೇಕೆಂದು ಅವನಿದ್ದಲ್ಲಿಗೆ ನಡೆದು ಬರತೊಡಗಿದಳು. ಅವಳ ಉಗ್ರರೂಪ, ತೆರದ ಬಾಯಿ, ಕೊಂದ ದೈತ್ಯರು, ತಿಂದ ದಾನವರನ್ನು ಕೂಡ ನಿಂತು ನೋಡಿದ ದೇವಾಂತಕ ಇವಳಿಂದ ನಾನು ಬದುಕಿ ಉಳಿಯುವದು ಸಾಧ್ಯವಿಲ್ಲವೆಂದು ತಿಳಿದು ಹೆದರಿ ಓಡಿಹೋದನು. ಮನೆಗೆ ಓಡುತ್ತ ಬಂದ ದೇವಾಂತಕನನ್ನು ಕಂಡ ತಂದೆಯಾದ ರುದ್ರಕೇತು, ಮಗನ ಹತ್ತಿರ ಬಂದು ಮೈ ಮೇಲೆ ಕೈಯಾಡಿಸಿ ''ಮಗು ನೀನು ಗಾಬರಿಯಾಗಬೇಡ. ದೂರದಿಂದಲೇ ನಾನು ನಿನ್ನ ದುರವಸ್ಥೆಯನ್ನು ನೋಡಿ ತಿಳಿದಿದ್ದೇನೆ. ಆ ದೇವೀ ಗಣದ ಎದುರು ನಿನ್ನ ಶಕ್ತಿ ಸಾಮರ್ಥ್ಯವೇನೂ ಸಾಲದು. ಅದುದರಿಂದ ನಾನು ಒಂದು ಉಪಾಯಹೇಳುತ್ತೇನೆ. ಅದು ನೀನು ಗೆಲ್ಲುವ ಉಪಾಯ. ನಿನ್ನ ವೈರಿಗಳನ್ನು ಕೊಲ್ಲುವ ಉಪಾಯ. ನೀನು ಸಬೀಜ ಅಘೋರ ಮಂತ್ರದ ಅನುಷ್ಠಾನ ಮಾಡು. ಶಿವನ ಧ್ಯಾನಮಾಡಿ ಅವನ ಪೂಜೆ ಮಾಡು. ನಿನಗೆ ಶಕ್ಯ ವಿದ್ದಷ್ಟು ಸಲ ಅಬೀಜ ಘೋರ ಮಂತ್ರದ ಜಪಮಾಡಿ ಜಪದ ಹತ್ತನೆ ಅಂಶ ಹೋಮ ಮಾಡು. ಹೋಮದ ೧೦ನೇ ಅಂಶ ತರ್ಪಣ ನೀಡು ಅದರ ಹತ್ತನೆ ಅಂಶ ಬ್ರಾಹ್ಮಣ ಭೋಜನ ಮಾಡಿಸು. ಹೀಗೆ ತಪ, ಜಪ, ಹೋಮ, ತರ್ಪಣ, ಭೂರಿ ಭೋಜನಗಳಿಂದ ಹೋಮಕುಂಡದಿಂದಲೆ ಒಂದು ಅಶ್ವವು ಎದ್ದು ಬರುವದು. ಆ ತುರುಗಾರೂಢನಾಗಿ ನೀನು ಸಗ್ರಾಮಂಗಣಕ್ಕೆ ಧುಮುಕು. ಅದರಿಂದ ಗೆಲವು ನಲಿವು ನಿನಗೆ ನಿಶ್ಚಿತ.''

ದೇವಾಂತಕನು ತನ್ನ ತಂದೆಯ ಆಜ್ಞೆಯನ್ನು ಶಿರಸಾ ಮನ್ನಿಸಿ ಜಪ ಯಜ್ಞಗಳನ್ನು ವಿಧಿಪೂರ್ವಕವಾಗಿ ಮಾಡಿದನು. ಯಜ್ಞಕುಂಡದಿಂದ ಎದ್ದು ಬಂದ ತುರುಗವನ್ನು ಪೂಜಿಸಿದನು. ಆ ಅಶ್ವವನ್ನು ಆರೋಹಣ ಮಾಡಿಕೊಂಡು ಶಸ್ತ್ರಾಸ್ತ್ರ ಸಜ್ಜಿತವಾದ ತನ್ನ ಪ್ರಚಂಡ ಸೇನೆಯೊಂದಿಗೆ ಕಾಶೀಪಟ್ಟಣದ ಮೇಲೆ ಭಯಂಕರವಾದ ಆಕ್ರಮಣವನ್ನು ಮಾಡಿದನು. ಸಿದ್ದಿದೇವಿಯ ಯುದ್ಧ ಸಿದ್ಧವಾದ ಶೂರ ಸೇನಾಬಲವು ದೇವಾಂತಕನನ್ನು ಧೈರ್ಯದಿಂದ ಎದುರಿಸಿತು. ಎರಡೂ ಸೇನೆಗಳ ನಡುವೆ ಘೋರವಾದ ಸಂಗ್ರಾಮವು ಮಸಗಿತು. ಆಗ ವಿನಾಯಕನು, ಸ್ವಯಂ ಸಿಂಹಾರೂಢನಾಗಿ ದೇವಾಂತಕನನ್ನು ಎದುರಿಸಿದ. ದೇವಾಂತಕ, ಗಣಾಧೀಶರ ನಡುವೆ ನಡೆದ ಸಂಗ್ರಾಮ ಘನಘೋರವಾಗಿದ್ದಿತು. ವಿನಾಯಕನ ತೀಕ್ಷ್ಣವಾದ ಶಸ್ತ್ರಾಸ್ತ್ರಗಳ ಅಘಾತದಿಂದ ದೇವಾಂತಕನ ಸೇನಾಪರಿವಾರವೆಲ್ಲವೂ ಕ್ಷತವಿಕ್ಷತವಾಗಿ ಛಿನ್ನವಿಚ್ಛಿನ್ನನಾಗಿ ರಣಭೂಮಿಯಲ್ಲಿ ಮಡಿದು ಬಿದ್ದಿತು. ಆಗ ದೇವಾಂತಕನು ತನ್ನ ಮಾಯಾ ವಿಧ್ಯೇಯಶ್ರಯಿಸಿ ಕಪಟಯುದ್ಧವನ್ನು ಪ್ರಾರಂಭಿಸಿದನು. ಕೊನೆಗೆ ದೇವಾಂತಕನು ಗಣಾಧೀಶನ ಮೇಲೆ ಸಮ್ಮೋಹನಾ ಅಸ್ತ್ರವನ್ನು ಬೀಸಿದನು ಕಾಶಿರಾಜನ ಸೇನಾಪರಿವಾರದವರು, ದೇವತೆಗಳು ಸೈನಿಕರು ರಣಾಂಗಣದಲ್ಲಿ ನಿದ್ರಾ ಮುದ್ರಿತರಾಗಿ ಮಲಗಿ ಬಿಟ್ಟರು

ಆಗ ದೇವಾಂತಕನು ಆನಂದದಿಂದ ತ್ರಿಕೋಣಾಕಾರದ ಒಂದು ಕುಂಡವನ್ನು ನಿರ್ಮಿಸಿ, ತಾನು ಪದ್ಮಾಸನದ ಮೇಲೆ ಕುಳಿತು, ಅಭಿಚಾರ ಕರ್ಮವನ್ನು ಪ್ರಾರಂಭಿಸಿದನು. ಆ ಸಮಯದಲ್ಲಿ ರಣಾಂಗಣದಲ್ಲಿ ದೂರ ಇದ್ದ ಕಾಶಿರಾಜನು ಅಲ್ಲಿಗೆ ಬಂದನು. ಗಣೇಶ ಮೊದಲಾದ ಎಲ್ಲ ದೇವಪಕ್ಷದವರೂ, ಅಷ್ಟಸಿದ್ಧಿದೇವಿಯರ ಸೇನಾಬಲವೂ, ವಿನಾಯಕನೂ ನಿದ್ರಾಮೋಹಿತರಾಗಿ ಮಲಗಿದ್ದನ್ನು ಕಂಡು ಅವನು ವಿನಾಯಕನ ಬಳಿಗೆ ಬಂದನು. ಮತ್ತು ಕೈಮುಗಿದು ಪ್ರಾರ್ಥಿಸಿಕೊಂಡನು. ''ಪ್ರಭು, ನೀನು ದೇವೋತ್ತಮ, ನಿನ್ನಗೆಲ್ಲಿಯ ನಿದ್ದೆ! ನಿನಗೆಲ್ಲಿಯ ಮೋಹ! ನೀನು ಎದ್ದೇಳು. ಈ ಲೋಕ ವಿಡಂಬನವನ್ನು ಸಾಕು ಮಾಡು. ದೇವಾಂತಕನು ಅಭಿಚಾರ ಕರ್ಮವನ್ನು ಪ್ರಾರಂಭಿಸಿದ್ದಾನೆ. ಅದು ಪೂರ್ಣವಾದರೆ ನಮ್ಮ ಸೈನ್ಯವನ್ನೆಲ್ಲ ಅವನು ಸಂಪೂರ್ಣ ನಾಶಮಾಡುವನು.

ಕಾಶಿರಾಜನ ಬಿನ್ನಹವನ್ನು ಮನ್ನಿಸಿ, ವಿನಾಯಕನು ತಕ್ಷಣದಲ್ಲಿ ಎದ್ದು ನಿಂತನು. ತನ್ನ ಬಿಲ್ಲು ಬಾಣಗಳನ್ನು ಕೈಯಲ್ಲಿ ತೆಗೆದುಕೊಂಡು ಎರಡು ಬಾಣಗಳನ್ನು ಘಂಟಾಸ್ತ್ರ ಹಾಗೂ ಖಗಾಸ್ತ್ರಗಳಿಂದ ಅಭಿಮಂತ್ರಣಗೈದು ಆಕಾಶದ್ವಾರಾಪ್ರಯೋಗ ಮಾಡಿದನು. ಆ ಘಂಟಾಸ್ತ್ರದ ಭಯಾನಕವಾದ ಗಂಟಾನಾದದಿಂದ ದೇವತಾ ಸೈನಿಕರೆಲ್ಲರೂ ಮೋಹನಿದ್ರೆಯಿಂದ ಎದ್ದು, ಶಸ್ತ್ರಾಸ್ತ್ರಗಳನ್ನು ಹಿಡಿದು ಯುದ್ಧಾಭಿಮುಖರಾದರು. ಅದರಂತೆ ವಿನಾಯಕನು ಬಿಟ್ಟ ಖಗಾಸ್ತ್ರದಿಂದ ಅನೇಕ ಪಕ್ಷಿಗಳು ಉತ್ಪನ್ನವಾಗಿ ದೈತ್ಯಸೈನಿಕರನ್ನು ಕುಕ್ಕಿ ಕುಕ್ಕಿ ಕೊಲ್ಲತೊಡಗಿದವು. ಇದರಿಂದ ದೇವಾಂತಕನು ದಿಗ್ಭ್ರಾಂತನಾಗಿ ನಿಂತುಕೊಂಡನು. ಆಗ ದೇವಾಂತಕನು ತನ್ನ ಮಾಯೆಯಿಂದ ವಿನಾಯಕನ ತಾಯಿಯಾದ ಅದಿತಿದೇವಿಯ ಕಪಟದೇಹವನ್ನು ತಯಾರು ಮಾಡಿದನು. ಆ ಮಾಯಾ ಅದಿತಿದೇವಿಯ ಮೇಲೆ ಪಚಾರ ಅತ್ಯಾಚಾರ ಮಾಡತೊಡಗಿದನು. ಅದನ್ನು ನೋಡಿ

ವಿನಾಯಕನು ಅದಿತಿದೇವಿಯ ದುರವಸ್ಥೆ ನಿಜವೆಂದು ನಂಬಿ ಶೋಕ ವಿಹ್ವಲನಾದನು. ಆಗ ಆಕಾಶವಾಣಿಯಾಯಿತು. ''ಇವೆಲ್ಲವೂ ದುಷ್ಟದೈತ್ಯರ ಸೇನಾತಂತ್ರ. ಇವಳು ನಿಜವಾದ ನಿನ್ನ ತಾಯಿಯಾದ ಅದಿತಿದೇವಿಯಲ್ಲ. ಇವಳೊಬ್ಬ ಮಾಯಾಂಗನೆ. ನೀನು ಯುದ್ಧದ ಉದ್ಯಮವನ್ನು ಮುಂದುವರೆಸು.''

ಆಕಾಶವಾಣಿಯನ್ನು ಕೇಳಿದ ಕೂಡಲೆ ವಿನಾಯಕನು ನಿಶ್ಚಿಂತನಾಗಿ ಯುದ್ಧ ಪ್ರವೃತ್ತನಾದನು. ಆಗ ದೇವಾಂತಕನಿಗೆ ವಿನಾಯಕನ ವಿರಾಡ್‌ರೂಪವು ಗೋಚರವಾಯಿತು. ದೇವಾಂತಕನ ಎಡ, ಬಲ, ಹಿಂದೆ, ಮುಂದೆ ಮೇಲೆ ಕೆಳಗೆ ಎಲ್ಲ ಕಡೆಗೆ ವಿನಾಯಕನೇ ವಿನಾಯಕ. ಯಾರಿಗೆ ಹೊಡೆಯಲಿ ಯಾರನ್ನು ಇರಿಯಲಿ, ಯಾರನ್ನು ಕೊಲ್ಲಲಿ ! ಮತ್ತೊಮ್ಮೆ ದೇವಾಂತಕನು ತನ್ನ ಕಣ್ಣು ತಿಕ್ಕಿ ನೋಡಿದನು. ಗಜಮುಖನಾದ ವಿನಾಯಕನು ಉತ್ತಮ ವಸ್ತ್ರಧರಿಸಿ ಅವನ ಮುಂದೆ ನಿಂತಿದ್ದನು. ಅವನ ಕೊರಳಲ್ಲಿ ಮಂಗಳಮಯವಾದ ಮುತ್ತಿನಮಾಲೆಯು. ತಲೆಯಮೇಲೆ ರತ್ನಖಚಿತವಾದ ಕಿರೀಟವು. ಕಿವಿಗಳಲ್ಲಿ ಮಣಿಮಯ ಕುಂಡಲಗಳು ಶೋಭಿಸುತ್ತಿದ್ದವು. ದೇವಾಂತಕನು ನೋಡನೋಡುತ್ತಿರುವಷ್ಟರಲ್ಲಿಯೇ ಗಜಾನನ ರೂಪಿಯಾದ ವಿನಾಯಕನು ಬಾಲಕ ರೂಪಿಯಾಗಿ ಪದ್ಮಾಸನದಲ್ಲಿ ಕುಳಿತುಕೊಂಡನು ಮರುಕ್ಷಣದಲ್ಲಿ ಗಜಮುಖನ ರೂಪದಲ್ಲಿ ಅವನ ಎದುರಿಗೆ ನಿಂತುಕೊಂಡನು. ಆಗ ಕ್ರುದ್ಧನಾದ ದೇವಾಂತಕನು ತನ್ನ ಶಕ್ತಿ ಸರ್ವಸ್ವವನ್ನು ಉಪಯೋಗಿಸಿ ಪ್ರತಿಪ್ರಯತ್ನದಿಂದ ಗಜಮುಖನ ಒಂದು ಕೋರೆದಾಡೆಯನ್ನು ಕಿತ್ತಿಬಿಟ್ಟನು. ಕಿತ್ತಿದ ಆ ಹಸ್ತಿದಂತದ ಜೊತೆಗೆ ದೇವಾಂತಕನು ನೆಲದಮೇಲೆ ಬಿದ್ದುಬಿಟ್ಟನು. ಆಗ ವಿನಾಯಕನು ಕುಪಿತನಾಗಿ ತನ್ನ ಆ ಕೋರೆದಾಡೆಯಿಂದ ದೇವಾಂತಕನ ಮಸ್ತಕದ ಮೇಲೆ ಭಯಂಕರ ಪ್ರಹಾರವನ್ನು ಮಾಡಿದನು. ಆ ಪ್ರಹಾರದಿಂದ ದೇವಾಂತಕನ ತಲೆಯು ನೂರು ಹೋಳಾಗಿ ಬಿದ್ದಿತು. ದೇವಾಂತಕನು ನೆಲದ ಮೇಲೆ ಬಿದ್ದಕೂಡಲೆ ಅವನ ದೇಹದಿಂದ ಒಂದು ದಿವ್ಯ ಚೇತನವು ಹೊರಟು ಎಲ್ಲ ದೇವತೆಗಳು, ದನುಜ, ಮನುಜರು ನೋಡನೋಡುತ್ತಿರುವಂತೆಯೇ ಆ ಜ್ಯೋತಿಯು ವಿನಾಯಕನ ಸ್ವರೂಪದಲ್ಲಿ ವಿಲೀನವಾಯಿತು. ದೇವಾಂತಕನ ದೇಹವು ಬಿದ್ದುದನ್ನೂ ನೋಡಿ ದೈತ್ಯ ಸೇನೆಯು ಹೆದರಿ ಹೌಹಾರಿ ಪಲಾಯನಗೈದಿತು.

ದೇವದುಂದುಭಿಗಳು ಮೊಳಗಿದವು. ದೇವಲೋಕದಿಂದ ಸುಗಂಧ ಪುಷ್ಪವೃಷ್ಟಿ ಯಾಯಿತು. ಇಂದ್ರಾದಿ ದೇವತೆಗಳು ಹಾಗೂ ಮುನಿಮಹರ್ಷಿಗಳು ಪ್ರಭುವಿನಾಯಕನನ್ನು ಭಕ್ತಿಪೂರ್ವಕವಾಗಿ ಸ್ತೋತ್ರಮಾಡಿದರು. ಮತ್ತು ಅವನನ್ನು ಪೂಜಿಸಿದರು. ಅವನಿಗೆ ಪ್ರದಕ್ಷಿಣೆ ನಮಸ್ಕಾರವನ್ನು ಮಾಡಿ ಎಲ್ಲರೂ ಅವನ ಆಶೀರ್ವಾದ ಪಡೆದು ಧನ್ಯರಾದರು.

ಆಗ ಹೃಷೀಕೇಶ ಎಂಬ ಮುನಿಜನಮಾನನೀಯನಾದ ಮಹರ್ಷಿಯು ಕೈ ಮುಗಿದು ಗಣಾಧೀಶನನ್ನು ಕೇಳಿಕೊಂಡನು. ''ಪ್ರಭು, ದೈತ್ಯರ ಭಾರದಿಂದ ದುರ್ದೆಶೆಗೆ ಈಡಾದ ಧರಣೀ ದೇವಿಯನ್ನು ನೀನು ಉದ್ಧಾರಮಾಡಿದೆ. ಆದುದರಿಂದ ನೀನು **'ಧರಣೀಧರ'** ಎಂಬ ಹೆಸರಿನಿಂದ ಪ್ರಸಿದ್ಧನಾಗು ಎಂದು ಬಿನ್ನವಿಸಿಕೊಂಡನು.

ಅನಂತರ ಕಾಶೀರಾಜನು ಸಿಂಹಾರೂಢನಾದ ಬಾಲಕ ವಿನಾಯಕನನ್ನು ಭಕ್ತಿಯಿಂದ ಪೂಜಿಸಿ ಅವನನ್ನು ಬಗೆಬಗೆಯಿಂದ ಸ್ತೋತ್ರಮಾಡಿ ''ಸ್ವಾಮಿ, ನೀನು ನನ್ನನ್ನೂ ನನ್ನ

ನಗರವನ್ನೂ ನನ್ನ ಪ್ರಜೆಗಳನ್ನೂ ಉದ್ಧಾರಮಾಡಿದೆ. ನೀನು ನನ್ನ ಅರಮನೆಗೆ ಬಂದು ನನ್ನ ಸೇವೆಯನ್ನು ಸ್ವೀಕರಿಸು'' ಎಂದು ಬೇಡಿಕೊಂಡನು.

ಕಾಶಿರಾಜನು ವಿಜಯಶಾಲಿಯಾದ ವಿನಾಯಕ ದೇವನನ್ನು ಮೆರವಣಿಗೆಯಿಂದ ತನ್ನ ಮನೆಗೆ ಕರೆದುಕೊಂಡು ಹೋಗಿ ಪೂಜೆಮಾಡಿದನು. ಮತ್ತು ಎಲ್ಲ ಬ್ರಾಹ್ಮಣರನ್ನು ನಾಗರಿಕರನ್ನು ಮಂತ್ರಿ ಸೇನಾಪತಿಗಳನ್ನು ಕರೆದು ಹೇಳಿದನು ''ಕಶ್ಯಪ ಋಷಿಗಳ ಆಶ್ರಮದಿಂದ ನನ್ನ ಮಗನ ಮದುವೆಗಾಗಿ ವಿನಾಯಕನನ್ನು ನಾನು ಕರೆದುಕೊಂಡು ಬಂದಿದ್ದೆ. ಆಗ ಎಷ್ಟೆಷ್ಟೋ ವಿಘ್ನ ವಿಡ್ಡೂರಗಳು ಬಂದದ್ದರಿಂದ ಆ ಕಾರ್ಯಗಳೂ ಈವರೆಗೂ ಆಗಿಲ್ಲ. ಇನ್ನೂ ಮೇಲೆ ಮಹಾಪ್ರಭು ವಿನಾಯಕನ ಅನುಗ್ರಹದಿಂದ ಎಲ್ಲ ಆತಂಕಗಳೂ ಅಡ್ಡಿ ಅಡಚಣೆಗಳೂ ದೂರವಾಗಿದ್ದು, ನೀವೆಲ್ಲರೂ ಸಮ್ಮತಿಸಿದರೆ ನನ್ನ ಮಗನ ಮದುವೆಯ ಮಂಗಳಕಾರ್ಯವನ್ನು ನೆರವೇರಿಸುವೆನು. ವಿನಾಯಕನೂ, ನಾಗರಿಕರೂ, ಗುರುಹಿರಿಯರೂ ಸಂತೋಷದಿಂದ ವೈವಾಹಿಕ ಶುಭಕಾರ್ಯಕ್ಕೆ ಸಮ್ಮತಿಸಿದ ಬಳಿಕ ಕಾಶಿರಾಜನು ಅತ್ಯಂತ ವಿಜೃಂಭಣೆಯಿಂದ ತನ್ನ ಮಗನ ವಿವಾಹವನ್ನು ನೆರವೇರಿಸಿದನು. ಅನಂತರ ವಿವಾಹ ವಿಧಿಯು ಸಾಂಗವಾಗಿ ನೆರವೇರಿದ ಬಳಿಕ ವಿನಾಯಕನು ಎಲ್ಲ ಜನರ ದುಃಖಪೂರಿತವಾದ ಅಪ್ಪಣೆಯನ್ನು ಪಡೆದು ಕಶ್ಯಪಋಷಿಗಳ ಆಶ್ರಮಕ್ಕೆ ಪ್ರಯಾಣ ಮಾಡಿದನು. ಕಾಶೀಪಟ್ಟಣದ ನರನಾರಿಯರೆಲ್ಲರೂ ಹಾಗೂಅವನ ಕ್ರೀಡಾಸಖರಾದ ಬಾಲಕರೂ ಮಂತ್ರಿ ಸೇನಾಪತಿ ಪೌರಪ್ರತಿಷ್ಠಿತರೂ ಎಲ್ಲರೂ ವಿನಾಯಕನ ವಿಯೋಗದ ದುಃಖವನ್ನು ತಾಳಲಾರದೆ ಬಿಕ್ಕಿ, ಬಿಕ್ಕಿ ಅಳತೊಡಗಿದರು. ವಿನಾಯಕನು ಅವರೆಲ್ಲರನ್ನು ಸಂತೈಸಿ, ರಥಾರೂಢನಾಗಿ ತನ್ನ ತಾಯಿ ತಂದೆಗಳ ದರ್ಶನದ ಉತ್ಕಂಠೆಯಿಂದ ಕಾಶಿರಾಜನಿಂದೊಡಗೂಡಿ ತನ್ನ ಆಶ್ರಮಕ್ಕೆ ಬಂದನು. ತನ್ನ ತಾಯಿ ತಂದೆಯರಾದ ಅದಿತಿ ಕಶ್ಯಪರ ಚರಣವನ್ನು ಸ್ಪರ್ಶಿಸಿ ಪ್ರಣಾಮಮಾಡಿ ಕೈ ಮುಗಿದುಕೊಂಡು ನಿಂತ. ಕಾಶಿರಾಜನ ಬಾಯಿಯಿಂದ ಪುತ್ರ ಗಣೇಶನ ಪರಾಕ್ರಮ ಹಾಗೂ ಲೋಕೋದ್ಧಾರದ ವಾರ್ತೆ ಕೇಳಿ ಅದಿತಿ ಕಶ್ಯಪರು ಪರಮ ಸಂತುಷ್ಟರಾದರು. ಕೆಲವು ದಿನ ಕಾಶಿರಾಜನನ್ನು ಆಶ್ರಮದಲ್ಲಿ ಇಟ್ಟುಕೊಂಡು ಅವನಿಗೆ ರಾಜೋಚಿತವಾದ ಆತಿಥ್ಯ ನೀಡಿ ಆದರೋಪಚಾರದಿಂದ ಸತ್ಕರಿಸಿದರು.

ಅನಂತರ ಕಾಶಿರಾಜನು ಕಶ್ಯಪ ದಂಪತಿಗಳನ್ನೂ ಹಾಗೂ ವಿನಾಯಕನನ್ನೂ ಕೇಳಿಕೊಂಡು ತನ್ನ ನಗರಕ್ಕೆ ಮರಳಿ ಬಂದನು. ಅವನು ಕಾಶಿಗೆ ಬಂದ ಬಳಿಕ ಅಲ್ಲಿ ಒಂದು ಸುಂದರವಾದ ವಿನಾಯಕನ ಮೂರ್ತಿಯನ್ನು ಸ್ಥಾಪನೆ ಮಾಡಿದನು. ಅದಕ್ಕೆ **'ದುಂಢಿರಾಜ'** ಎಂದು ಹೆಸರಿಟ್ಟನು.

ವಿನಾಯಕನು ಕೆಲವು ಸಮಯದವರೆಗೆ ಅದಿತಿ ಕಶ್ಯಪರ ಆಶ್ರಮದಲ್ಲಿ ಸುಖದಿಂದ ವಾಸಮಾಡಿದನು. ಅನಂತರ ಒಂದು ದಿನ ಪ್ರಸನ್ನಮನಸ್ಸಿಂದ ತನ್ನ ತಾಯಿ ತಂದೆಯರನ್ನು ಉದ್ದೇಶಿಸಿ ನುಡಿದನು.

**ವಿನಾಯಕ :-** ಪೂಜ್ಯರೆ, ನೀವು ಯಾವ ಉದ್ದೇಶದಿಂದ ನನ್ನನ್ನು ಕುರಿತು ತಪಸ್ಸು ಮಾಡಿದ್ದಿರೋ ಆ ಉದ್ದೇಶ ಈಗ ಈಡೇರಿದೆ. ಲೋಕಕಂಟಕರಾದ ದೈತ್ಯರನ್ನೆಲ್ಲ ನಾನು ಸಂಹರಿಸಿದ್ದೇನೆ. ದೇವತೆಗಳ ಹಾಗೂ ಸಾಧುಸಜ್ಜನರ ರಕ್ಷಣೆಯನ್ನು ಮಾಡಿದ್ದೇನೆ.

ಪೃಥ್ವಿಯಭಾರವನ್ನು ಇಳಿಸಿದ್ದೇನೆ. ಇನ್ನು ಮೇಲೆ ನಾನು ನನ್ನ ಸ್ವಸ್ಥಾನಕ್ಕೆ ಪ್ರಯಾಣಮಾಡುತ್ತೇನೆ.

ಹದಿನಾರು ವರ್ಷದ ಹದಿಹರೆಯದ ಬಾಲಕ ವಿನಾಯಕನ ದೃಢ ನಿಶ್ಚಯದಿಂದ ಕೂಡಿದ ಆ ಮಾತನ್ನು ಕೇಳಿ ತಾಯಿ ತಂದೆಗಳ ದುಃಖ ಉಕ್ಕಿ ಬಂದಿತು. ಕಣ್ಣೀರಿನ ಕಾತಂಬನಿಯಾದ ಅದಿತಿ ದೇವಿಯು "ದೇವ, ನಮಗೆ ಪುನಃ ನಿನ್ನ ದರ್ಶನ ಎಂದು?" ಕೇಳಿದಳು.

**ಗಣೇಶ :-** ತಾಯಿ, ನಿಮಗೆ ನನ್ನ ದರ್ಶನವು ಮತ್ತೆ ಭವಾನೀಮಂದಿರದಲ್ಲಿ ಆಗುವದು. ಹೀಗೆ ಹೇಳಿ ವಿನಾಯಕನು ಅಂತರ್ಧಾನ ಹೊಂದಿದನು.

ತಮ್ಮ ಪುತ್ರನ ವಿರಹದಿಂದ ವ್ಯಾಕುಲರಾದ ಅದಿತಿ ಕಶ್ಯಪರು ತಮ್ಮ ಆಶ್ರಮದಲ್ಲಿ ವಿನಾಯಕನ ಸುಂದರವಾದ ಧಾತುಮಯವಾದ ಪ್ರತಿಮೆಯನ್ನು ಸ್ಥಾಪಿಸಿದರು. ಅದನ್ನು ಗಂಧ ಅಕ್ಷತೆ ಪುಷ್ಪಾದಿಗಳಿಂದ ಪೂಜಿಸಿದರು. ಅದರ ಹೆಸರು **'ವಿನಾಯಕ'** ಎಂದು ಜಗತ್ತಿನಲ್ಲಿ ಪ್ರಖ್ಯಾತವಾಯಿತು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ*
*ಗಣೇಶನ ವಿವಿಧ ಲೀಲೆಗಳು ಎಂಬ ಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*



## ಸಿಂಧುವಿನ ಉತ್ಪತ್ತಿ

ಅಧ್ಯಾಯ - ೨೩

ಇದು ತ್ರೇತಾಯುಗದ ಘಟನೆ. ಮಿಥಿಲಾ ದೇಶದಲ್ಲಿ ಗಂಡಕಿ ಎಂಬ ಪ್ರಸಿದ್ಧ ನಗರ. ಅದರ ರಾಜ ಚಕ್ರಪಾಣಿ. ಅವನು ಸುರೂಪಿ, ಸುಗುಣಿ. ಪರಾಕ್ರಮಶಾಲಿ. ಎಲ್ಲಕ್ಕಿಂತ ಹೆಚ್ಚಾಗಿ ಅವನು ಅತ್ಯಂತ ಬುದ್ಧಿವಂತ. ಕುಬೇರನ ಐಶ್ವರ್ಯ ಅವನಕೋಶದಲ್ಲಿ. ಸೂರ್ಯನ ತೇಜಸ್ಸು ಅವನ ಮುಖದಲ್ಲಿ. ಅಖಂಡ ಭೂಮಂಡಲವೆಲ್ಲ ಅವನ ಪಾದಾಕ್ರಾಂತ. ಅವನಿಗೆ ಗೋವಿಂದನಲ್ಲಿ ಭಕ್ತಿ. ಗೋವುಗಳಲ್ಲಿ ಪ್ರೀತಿ, ಬ್ರಾಹ್ಮಣರಲ್ಲಿ ಶ್ರದ್ಧೆ. ಅವನು ನಿಯಮಿತವಾಗಿ ಪ್ರತಿದಿವಸ ಭಕ್ತಿಯಿಂದ ಪುರಾಣ ಶ್ರವಣಮಾಡುತ್ತಿದ್ದ.

ಅವನಿಗೆ ಸಾಂಬ, ಸುಭೋದನ ಎಂಬ ಇಬ್ಬರು ಮಂತ್ರಿಗಳು. ಅವರಿಬ್ಬರೂ ಬುದ್ಧಿ, ನೀತಿ ಯುಕ್ತಿ ಮೂರರಿಂದ ಎಲ್ಲರನ್ನೂ ಮೀರಿನಿಂತಿದ್ದರು. ರಾಜನಿಗಾಗಿ ಪ್ರಾಣಾರ್ಪಣಮಾಡಲೂ ಅವರು ಸರ್ವದಾ ಸಿದ್ಧರು.

ಆ ಚಕ್ರಪಾಣಿ ಮಹಾರಾಜನಿಗೆ ಓರ್ವಸಾಧ್ವೀ ಶಿಖಾಮಣಿಯಾದ ಧರ್ಮಪತ್ನಿ ಇದ್ದಳು. ಉಗ್ರಾ ಎಂದು ಅವಳ ಹೆಸರು. ಆದರೆ ಸ್ವಭಾವದಿಂದ ಅವಳು ಅತ್ಯಂತ ಸೌಮ್ಯಳು. ರೂಪ, ಶೀಲ, ಗುಣ ಪತಿಭಕ್ತಿ ಸದ್ಬುದ್ಧಿ ಮೊದಲಾದ ಎಲ್ಲ ಒಳ್ಳೊಳ್ಳೆ ಗುಣಗಳು ಅವಳನ್ನು ಹುಡುಕಿಕೊಂಡು ಬಂದು ಅವಳಲ್ಲಿಯೇ ನೆಲೆನಿಂತಿದ್ದವು.

ಚಕ್ರಪಾಣಿ ಮಹಾರಾಜನಿಗೆ ಬಾಳಿನಲ್ಲಿ ಬಯಸಿದ್ದೆಲ್ಲ ಪೂರ್ಣವಾಗಿ ಇತ್ತು. ಆದರೆ ಅವನಿಗೆ ಸಂತಾನಮಾತ್ರ ಇರಲಿಲ್ಲ. ಅದಕ್ಕಾಗಿ ಅವನು ಮಾಡದ ಯಜ್ಞವಿಲ್ಲ. ನೀಡದ ದಾನವಿಲ್ಲ. ಸೇವಿಸದ ದೇವರಿಲ್ಲ. ಆರಾಧಿಸದ ಬ್ರಾಹ್ಮಣರಿಲ್ಲ. ಅವನು ಕೊಟ್ಟ

ದಾನದಕ್ಷಿಣೆಗಳಿಗಂತೂ ಲೆಕ್ಕವೆ ಇಲ್ಲ. ಇಷ್ಟಾದರೂ ಮಕ್ಕಳಿಲ್ಲ ಎಂಬ ಕೊರಗು ಆ ದಂಪತಿಗಳ ಅಂತರಂಗವನ್ನು ಚಿಂತೆಯ ಹುಳವಾಗಿ ಕೊರೆಯುತ್ತಲಿದ್ದಿತು.

ಅದಕ್ಕಾಗಿ, ಆ ದೊರೆಯು ರಾಜ್ಯ, ಅಧಿಕಾರ, ಸಂಪತ್ತು ಎಲ್ಲವನ್ನೂ ಬಿಟ್ಟು ಕಾಡಿಗೆ ಹೋಗಿ, ತಪಸ್ಸನ್ನು ಕೈಕೊಳ್ಳಬೇಕೆಂದು ನಿರ್ಧರಿಸಿದ್ದ. ಅಷ್ಟರಲ್ಲಿ ಒಂದು ದಿನ ಅವನ ಮನೆಗೆ ಮುನಿಪುಂಗವರಾದ ಶೌನಕರು ದಯಮಾಡಿಸಿದರು. ಅವರು ಆ ಭೂಪತಿಯ ಚಿಂತೆಯನ್ನು ಹಾಗೂ ಅಂತರಂಗದ ಸಂತಾಪವನ್ನು ಕಂಡುಹಿಡಿದು ಒಂದುಕ್ಷಣ ಕಣ್ಣುಮುಚ್ಚಿ ಕುಳಿತು ಧ್ಯಾನಿಸಿ ಶಾಂತರೀತಿಯಿಂದ ನುಡಿದರು.

**ಶೌನಕರು :-** ಮಹಾರಾಜ, ನಾನು ಹೇಳಿದಂತೆ ಮಾಡಿದರೆ ನಿನಗೆ ನಿಶ್ಚಿತವಾಗಿಯೂ ಗಂಡು ಮಗು ಉತ್ಪನ್ನನಾಗುವನು. ನೀನು ಒಂದು ತಿಂಗಳವರೆಗೆ ಸೂರ್ಯದೇವನ ಉಪಾಸನೆಯನ್ನು ಮಾಡು. ಸೂರ್ಯಸಪ್ತಮೀದಿನ ಈ ಸೂರ್ಯವ್ರತವನ್ನು ಪ್ರಾರಂಭಿಸು. ಆಭ್ಯುದಯಿಕ ಶ್ರಾದ್ಧ, ಮಾತೃಕಾ ಪೂಜನ, ಗಣಪತಿ ಪೂಜನಾದಿಗಳನ್ನು ಮಾಡು. ಅನಂತರ ಬ್ರಾಹ್ಮಣರ ಆಶೀರ್ವಾದ ಪಡೆದು ಬಂಗಾರದ ಕಲಶದ ಮೇಲೆ, ಬಂಗಾರದ ಸೂರ್ಯಮಂಡಲವನ್ನು ಮಾಡಿಸಿ, ಇರಿಸು. ಅದನ್ನು ರಕ್ತ ಚಂದನ ಮಿಶ್ರಿತವಾದ ತಂಡುಲ. ಕೆಂಪುಹೂ, ಬಗೆ ಬಗೆಯ ರತ್ನಗಳು, ನಾನಾ ತರಹದ ಹಣ್ಣುಗಳು ಸುಗಂಧಿ ಹೂಗಳನ್ನು ತಂದು ಷೋಡಶೋಪಚಾರ ಪೂಜೆಯನ್ನು ಮಾಡು. ಅನಂತರ ಸೂರ್ಯನನ್ನು ಉದ್ದೇಶಿಸಿ ಹನ್ನೆರಡುಸಲ ಅರ್ಘ್ಯಪ್ರದಾನಮಾಡು. ಅನಂತರ ಸ್ಥಾಪಿತನಾದ ಆ ಸೂರ್ಯದೇವನಿಗೆ ನೀನು ಭಕ್ತಿಯಿಂದ ಒಂದು ಲಕ್ಷ ನಮಸ್ಕಾರಗಳನ್ನು ಹಾಕು. ಅನಂತರ ಒಂದುಲಕ್ಷ ಬ್ರಾಹ್ಮಣರನ್ನು ಕರೆದು ಭಕ್ತಿಯಿಂದ ಊಟಮಾಡಿಸು. ಭೋಜನ ಆದಕೂಡಲೆ ಕುಟುಂಬಿ ಬ್ರಾಹ್ಮಣರಿಗೆ ಒಂದೊಂದು ಹಿಂಡುವ ಹಸುವನ್ನು ದಾನವಾಗಿ ನೀಡು. ಪತ್ನಿಯಿಂದ ಒಡಗೂಡಿದ ಬ್ರಹ್ಮಚರ್ಯ ವ್ರತಪಾಲನ ಮಾಡುತ್ತ ದೀನ, ದರಿದ್ರ, ಊನ, ಅಸಹಾಯ ಸ್ತ್ರೀ ಪುರುಷರಿಗೆ ಅನ್ನವಸ್ತ್ರಾದಿಗಳನ್ನು ಕೊಟ್ಟು ವಿಪುಲವಾದ್ ದಾನದಕ್ಷಿಣೆ ಇತ್ತು ಸತ್ಕರಿಸು.''

ಮಹಾಮುನಿಶೌನಕರ ಆದೇಶದಂತೆ ಚಕ್ರಪಾಣಿ ಮಹಾರಾಜನು ತನ್ನ ಧರ್ಮಪತ್ನಿಯಾದ ಉಗ್ರಾದೇವಿಯೊಂದಿಗೆ, ಸೂರ್ಯದೇವನ ಆರಾಧನ ರೂಪವಾದ ವ್ರತವನ್ನು ಪ್ರಾರಂಭಿಸಿದನು. ಉಗ್ರಾದೇವಿಯು ನಿರಂತರವಾಗಿ ಸೂರ್ಯಮಂತ್ರವನ್ನು ಜಪಿಸುತ್ತಲೇ ಇದ್ದಳು. ಒಂದು ದಿನ ಉಗ್ರಾದೇವಿಯು ತನ್ನ ಕನಸಿನಲ್ಲಿ ತನ್ನ ಪತಿಯ ರೂಪದಿಂದಲೆ ಸೂರ್ಯದೇವನು ಬಂದಿದನ್ನು ನೋಡಿದಳು. ಅದರಿಂದ ಉಗ್ರಾದೇವಿಯ ಬ್ರಹ್ಮಚರ್ಯವು ಸ್ಖಲಿತವಾಯಿತು. ಪರಮ ಪ್ರಾಮಾಣಿಕಳೂ, ಪತಿವ್ರತಾ ಶಿರೋರತ್ನಳೂ ಆದ ಉಗ್ರಾದೇವಿಯು ತನ್ನ ಪತಿಯ ಮುಂದೆ ತನ್ನ ಬ್ರಹ್ಮಚರ್ಯ ಸ್ಖಾಲಿತ್ಯದ ಸಮಾಚಾರ ತಿಳಿಸಿದಳು. ಆಗ ಅವನಿಗೆ ಸೂರ್ಯನಿಂದ ತನ್ನ ಮಡದಿಯ ಬ್ರಹ್ಮಚರ್ಯವು ಭಂಗವಾದ ಸಮಾಚಾರ ಕೇಳಿ ಅತ್ಯಂತ ಆಶ್ಚರ್ಯವಾಯಿತು.

ಪತಿಯ ರೂಪದಲ್ಲಿ ಇದ್ದ ಸೂರ್ಯಸಂಪರ್ಕದಿಂದ ಉಗ್ರಾದೇವಿಯು ಗರ್ಭಿಣಿ ಯಾದಳು. ಆದರೆ, ಸೂರ್ಯಾಂಶ ಸಂಭೂತವಾದ ಆ ಗರ್ಭವನ್ನು ತನ್ನ ಬಸಿರಿನಲ್ಲಿ ಇಟ್ಟುಕೊಳ್ಳುವದು ಅವಳಿಗೆ ಅಶಕ್ಯವಾಯಿತು. ಹೊಟ್ಟೆಯಲ್ಲಿಯ ಆ ಪಿಂಡವು ಕೆಂಡದಂತೆ

ಸುಡುತ್ತಲೇ ಇದ್ದಿತು. ದಿವಸಗಳು ಹೆಚ್ಚು ಆದಂತೆ ಆ ಗರ್ಭದ ತಾಪವು ಅವಳಿಗೆ ಸಹಿಸಲು ಅಶಕ್ಯವಾಯಿತು. ಆಗ ಅವಳು ತನ್ನ ಗೆಳತಿಯರೊಂದಿಗೆ ಕೂಡಿಕೊಂಡು ರಾಜಧಾನಿ ಬಿಟ್ಟು ಹೊರಬಿದ್ದಳು. ಸಮುದ್ರತೀರದವರೆಗೂ ಸಖಿಯರಿಂದ ಕೂಡಿಕೊಂಡು ಸಾಗಿಹೋದಳು. ಆ ಗರ್ಭಧಾರಣೆಯು ಅವಳಿಗೆ ಉದರದಲ್ಲಿ ಬೆಂಕಿಯ ಬಣವೆಯನ್ನು ಇಟ್ಟಂತೆ ಸುಡುವ ಅನುಭವವಾಗ ತೊಡಗಿತು. ಆಗ ಅವಳು ಅಸಹಾಯಕಳಾಗಿ ಆ ಗರ್ಭವನ್ನು ತ್ಯಾಗಮಾಡಿ ಸಮುದ್ರದ ತೀರದಲ್ಲಿಇಟ್ಟು ಮನೆಗೆ ಮರಳಿ ಬಂದಳು. ಈ ಸಮಾಚಾರವನ್ನು ತಿಳಿದು ಮಹಾರಾಜ ಚಕ್ರಪಾಣಿಯು ಖಿನ್ನನಾದನು.

ಸಮುದ್ರದ ತೀರದಲ್ಲಿ ಉಗ್ರಾದೇವಿಯ ತಂದುಇಟ್ಟ ಆ ಮಗುವಿಗೆ ವಿಶಾಲವಾದ ಹಣೆ, ಹಣೆಯಲ್ಲಿ ಮೂರು ಕಣ್ಣುಗಳು, ಕೆಂಪು ಕೆಂಪಾದ ಕೂದಲುಗಳು, ಕೈಯಲ್ಲಿ ತ್ರಿಶೂಲ. ಹೀಗೆ ವಿಲಕ್ಷಣವಾಗಿದ್ದಿತು ಆಗ ಹುಟ್ಟಿದ ಆ ಮಗು. ಆ ಹುಡುಗನು ಅತ್ತರೆ ಮೂರು ಲೋಕಗಳು ಕಂಪಿಸುತ್ತಿದ್ದವು. ಆಜಾನುಬಾಹುವಾದ ಆ ಬಾಲಕನು ಆಡಿದರೆ ಸಮುದ್ರದಲ್ಲಿಯ ಮೀನು ಮೊಸಳೆ ಮೊದಲಾದ ಜಲಚರ ಪ್ರಾಣಿಗಳೆಲ್ಲವೂ ಮುರಿದು ಮುಟಿಕೆ ಯಾಗುತ್ತಿದ್ದವು. ಆಗ ಸಮುದ್ರನು ಚಕ್ರಪಾಣಿ ಮಹಾರಾಜನ ಬಳಿಗೆ ಬಂದನು. ಮತ್ತು ರಾಜನಿಗೆ ''ಮಹಾರಾಜ, ಈ ಮಗು ನಿನ್ನದು. ನಿನ್ನ ಮಹಾರಾಣಿಯು ಈ ತೇಜಸ್ವಿ ಶಿಶುವಿನ ಭಾರವನ್ನು ಸಹನ ಮಾಡಲಾರದೆ ನನ್ನ ತೀರದಲ್ಲಿ ಬಿಟ್ಟು ಹೋಗಿದ್ದಾಳೆ. ಈ ತೇಜಸ್ವಿಯಾದ ಕುಮಾರನ ರೋದನ ಮಾತ್ರದಿಂದ ಮೂರುಲೋಕಗಳೇ ನಡುಗಿ ಹೋಗುತ್ತವೆ. ಆದ್ದರಿಂದ ನಿನ್ನ ಮಗನನ್ನು ನೀನು ಸ್ವೀಕಾರ ಮಾಡು''

ಈ ಅಪೂರ್ವ ತೇಜಸ್ವಿ ಪುತ್ರನ ಪ್ರಾಪ್ತಿಯಿಂದ ಚಕ್ರಪಾಣಿಯು ಸಂತುಷ್ಟನಾದನು. ಮಹಾರಾಣಿಯು ಮಗುವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಸ್ತನಪಾನಮಾಡಿಸಿ, ಅದರ ಲಾಲನ ಪಾಲನ ಮಾಡತೊಡಗಿದಳು. ಸಿಂಧುತೀರದಲ್ಲಿ ಉತ್ಪನ್ನನಾದುದರಿಂದ ಅವನಿಗೆ 'ಸಿಂಧು' ಎಂದೆ ಹೆಸರಿಟ್ಟರು. ಮಂತ್ರಿಗಳು ಉಗ್ರಾದೇವಿಯ ಮಗನಾದುದರಿಂದ ಅವನನ್ನು ''ಉಗ್ರೇಕ್ಷಣ'' ಎಂದು ಕರೆದರು. ಪೌರರೆಲ್ಲರೂ ಆ ಹುಡುಗನನ್ನು ವಿಪ್ರಪ್ರಸಾದನ' ಎಂಬ ಹೆಸರಿನಿಂದ ಗುರುತಿಸಿದರು.

ಸಿಂಧು ಬಾಲಕನು ದಿನವೂ ಒಂದೊಂದು ತರಹದ ಆಟವನ್ನು ಆಡುತ್ತಿದ್ದನು. ಅವನು ಪ್ರಾಯಕ್ಕೆ ಬಂದ ಬಳಿಕ, ತನ್ನ ರಭಸದ ಆಟದಲ್ಲಿ ಹೆಮ್ಮರಗಳನ್ನು ಕಿತ್ತಿ ಈಡಾಡುತ್ತಿದ್ದನು. ಪರ್ವತದ ಶಿಖರಗಳನ್ನು ಕಿತ್ತಿ ಚಂಡಿನಂತೆ ತೂರಾಡುತ್ತಿದ್ದನು. ಮದೋನ್ಮತ್ತವಾದ ಆನೆಗಳ ಗಂಡಸ್ಥಲಗಳನ್ನು ಮುಷ್ಟಿ ಪ್ರಹಾರದಿಂದ ಸೀಳಿಹಾಕುತ್ತಿದ್ದನು.

ಸಿಂಧು, ವಿಪ್ರಪ್ರಸಾದ ನಾಮಗಳಿಂದ ಕರೆಯಲ್ಪಡುವ ಆ ರಾಜಕುಮಾರನು ಇನ್ನೂ ಪೂರ್ಣ ಯೌವನ ವಿಕಾಸವಾಗುವದಕ್ಕಿಂತ ಮೊದಲೆ, ತನ್ನ ತಾಯಿ ತಂದೆಗಳನ್ನು ಕೇಳಿಕೊಂಡು ಅರಣ್ಯಕ್ಕೆ ತಪಸ್ಸಿಗೆ ತೆರಳಿದನು. ವನಾಂತರದ ಏಕಾಂತದಲ್ಲಿ ಒಂದು ರಮ್ಯ ಸರೋವರದ ದಂಡೆಯ ಮೇಲೆ ಒಂಟಿಗಾಲಿನಿಂದ ನಿಂತು ಸೂರ್ಯದೇವನನ್ನು ಕುರಿತು ಅವನು ಉಗ್ರತಪಸ್ಸನ್ನು ಮಾಡತೊಡಗಿದನು. ಅವನು ತಪೋನುಷ್ಠಾನ ತತ್ಪರನಾಗಿ ಊಟ ಬಿಟ್ಟ. ನಿದ್ರೆ ತೊರೆದ. ಚಳಿಗೆ ಅಳುಕಲಿಲ್ಲ, ಮಳೆಗೆ ಹೆದರಲಿಲ್ಲ, ಗಾಳಿಗೆ ಬೆದರಲಿಲ್ಲ, ವನವಾಸ, ಉಪವಾಸಗಳಿಂದ ಸೂರ್ಯಮಂತ್ರವನ್ನು ಜಪಿಸುತ್ತ, ಅತ್ಯುಗ್ರವಾದ ತಪಸ್ಸನ್ನು

ಆಚರಿಸಿದ. ಸೊರಗಿ ಕೊರಗಿ ಕಡ್ಡಿಯಂತಾದ. ದೇಹದಲ್ಲಿ ಅಸ್ಥಿಪಂಜರ ಮಾತ್ರ ಉಳಿದಿತ್ತು. ಹೀಗೆ ಎರಡು ಸಾವಿರವರ್ಷ ಘೋರ ತಪೋನುಷ್ಠಾನ ಮಾಡಿದ ಬಳಿಕ ಒಂದು ದಿನ ಸವಿತೃದೇವ ಸುಪ್ರಸನ್ನನಾಗಿ ತನ್ನ ಸಾಕ್ಷಾತ್ ದರ್ಶನವನ್ನು ನೀಡಿದ. ''ನಾನು ಪ್ರಸನ್ನನಾಗಿದ್ದೇನೆ; ನೀನಗೆ ಬೇಕಾದ ವರ ಬೇಡು'' ಎಂದು ಹೇಳಿದ.

**ಸಿಂಧು :-** ಪ್ರಭು, ನೀನು ಪ್ರಸನ್ನನಾದದ್ದೂ ನಿಜವಾದರೆ ನನಗೆ ಎರಡು ವರಗಳನ್ನು ನೀಡು. ನಾನು ಯಾರಿಂದಲೂ ಸಾಯಬಾರದು. ಎಲ್ಲ ದೇವತೆಗಳನ್ನು ಗೆದ್ದು, ನಾನು ವಿಜಯಶಾಲಿಯಾಗಬೇಕು.

**ಸೂರ್ಯ :-** ಭಕ್ತಾ, ನಾನು ನೀನಗೆ ಈ ಅಮೃತ ಪಾತ್ರವನ್ನು ಕೊಡುತ್ತೇನೆ. ಈ ಅಮೃತಪಾತ್ರವು ನಿನ್ನ ಕೊರಳಲ್ಲಿ ಇರುವವರೆಗೆ ನಿನ್ನಗೆ ಸಾವುಬಾರದು. ನೋವು ಆಗದು. ನರ, ಸುರ, ನಾಗ, ಪಶು, ಯಾರೂ ಎಂದೂ ಯಾವ ಕಾಲಕ್ಕೂ ನಿನ್ನನ್ನು ಕೊಲ್ಲಲಾರರು. ನಾನು ಕೊಟ್ಟ ಈ ಅಮೃತಪಾತ್ರವನ್ನು ನೀನು ಹೊರಗೆ ತೆಗೆದರೆ ಮಾತ್ರ ನಿನಗೆ ಮೃತ್ಯುಬರುವದು. ಯಾವ ಅವತಾರಿ ಪುರುಷನ ಹೆಬ್ಬೆರಳಿನ ಉಗುರಿನ ತುದಿಯಲ್ಲಿ ಕೋಟಿ ಕೋಟಿ ಬ್ರಹ್ಮಾಂಡಗಳು ನೆಲೆಸಿರುವವೋ ಅಂಥ ಅವತಾರಿ ಪುರುಷನಿಂದಲೇ ನಿನಗೆ ಒಂದು ದಿನ ಮರಣ ಸಂಭವಿಸುವದು. ಅವನನ್ನು ಬಿಟ್ಟರೆ ನಿನ್ನನ್ನು ಯಾರೂ ಗೆಲ್ಲಲಾರರು; ಎಂದೂ ಕೊಲ್ಲಲಾರರು. ಆ ವರೆಗೆ ನೀನು ತ್ರಿಲೋಕ ವೀರ; ತ್ರಿಭುವನ ವಿಜಯಿ.

ಹೀಗೆ ಹೇಳಿ ಪ್ರಭಾಕರನು ಅಮೃತಪಾತ್ರವನ್ನು ಕೊಟ್ಟು ಅಂತರ್ಧಾನ ಹೊಂದಿದನು. ಸಿಂಧುಕುಮಾರನು ಆ ಅಮೃತಪಾತ್ರವನ್ನು ಕಂಠದಲ್ಲಿ ಧರಿಸಿಕೊಂಡು ಮನೆಗೆ ಬಂದು ಚಕ್ರಪಾಣಿ ಉಗ್ರಾದೇವಿಯರಿಗೆ ನಮಸ್ಕಾರ ಮಾಡಿದನು. ದಿವಾಕರ ದೇವನಿಂದ ಅಮೂಲ್ಯ ವರ ಪಡೆದುಕೊಂಡು ಬಂದ ಮಗನನ್ನು ನೋಡಿ ತಾಯಿ ತಂದೆಯರ ಹೃದಯದಲ್ಲಿ ಹರುಷ ಗರಿಗೆದರಿತು. ಆಗ ಚಕ್ರಪಾಣಿಯು ಮಂತ್ರಿ ಸೇನಾಪತಿ, ಪುರ ಪ್ರಮುಖರೊಂದಿಗೆ ಕೂಡಿಕೊಂಡು ತನ್ನ ಆ ಸಿಂಧುಕುಮಾರನಿಗೆ ರಾಜ್ಯಾಭಿಷೇಕವನ್ನು ಮಾಡಿದನು. ಸಾಮ್ರಾಜ್ಯದ ಸರ್ವಾಧಿಪತ್ಯವನ್ನು ಅವನಿಗೆ ಒಪ್ಪಿಸಿದನು.

ಸೂರ್ಯದೇವನು ಕೊಟ್ಟ ವರಬಲದಿಂದ ಸಿಂಧುರಾಜನು ಮದೋನ್ಮತ್ತನಾದನು. ಶಸ್ತ್ರಾಸ್ತ್ರ ಸಜ್ಜಿತವಾದ ಪ್ರಚಂಡ ದೈತ್ಯ ಸೇನೆಯೊಂದಿಗೆ ಅವನು ದಿಗ್ವಿಜಯಕ್ಕೆ ಹೊರಟನು. ಮೊದಲು ಅಖಂಡ ಭೂಮಂಡಲವನ್ನೆಲ್ಲ ಪಾದಾಕ್ರಾಂತಮಾಡಿಕೊಂಡನು. ದೇಶದ ಗ್ರಾಮ ನಗರಗಳನ್ನೆಲ್ಲ ಕೊಳ್ಳೆ ಹೊಡೆದನು. ನರನಾರಿಯರನ್ನು ತರಿದು ಹಾಕಿದನು. ಕಂಡವರನ್ನೆಲ್ಲ ತುಂಡರಿಸಿದನು. ನೆಲದಗುಂಟ ನೆತ್ತರಿನ ನದಿಗಳನ್ನೇ ಹರಿಸಿದನು. ಹೀಗೆ ಇಡೀ ಭೂಮಂಡಲದ ತುಂಬ ಮರಣತಾಂಡವವನ್ನು ನಡೆಸಿ ಅನಂತರ ಸ್ವರ್ಗಕ್ಕೆ ಲಗ್ಗೆ ಇಟ್ಟನು. ಇಂದ್ರನ ಜೊತೆಗೆ ಹಣಾಹಣಿ ಹೋರಾಡಿದನು. ಐರಾವತದ ಗಂಡಸ್ಥಳವನ್ನು ಸೀಳಿದನು. ಶಚೀಪತಿಯನ್ನು ಮೂರ್ಛಿತಗೊಳಿಸಿದನು. ಮಹೇಂದ್ರನು ಸ್ವರ್ಗಬಿಟ್ಟು ಓಡಿಹೋಗಿ ಬದುಕಿ ಉಳಿದನು. ದೇವತೆಗಳೆಲ್ಲರೂ ದಿಕ್ಕಾಪಾಲಾದರು.

ಅನಂತರ ಮಧಾಂಧನಾದ ಆ ಸಿಂಧುದೈತ್ಯ ವೈಕುಂಠದ ಮೇಲೆ ದಾಳಿಮಾಡಿದ. ಮುಕುಂದನಿಗೂ ಸಿಂಧುದಾನವನಿಗೂ ನಿರಂತರ ಸಮರ ಏರ್ಪಟ್ಟಿತು. ಸಿಂಧು ದೈತ್ಯನ

ಮುಷ್ಟಿಯ ಪ್ರಹಾರದಿಂದ ವಿಷ್ಣುವಿನ ಕೈಯಲ್ಲಿಯ ಚಕ್ರವು ದೂರಹೋಗಿಬಿದ್ದಿತು. ವಿಷ್ಣು ಕೌಮೋದಕಿ ಗದೆಯಿಂದ ಹೊಡೆಯಬಂದಾಗ ದೈತ್ಯನು ಆ ಗದೆಯನ್ನು ಕಸಿದುಕೊಂಡು ತುಂಡುತುಂಡು ಮಾಡಿ ದೂರ ಒಗೆದ.

ಅದನ್ನು ಕಂಡು ಆಶ್ಚರ್ಯಚಕಿತನಾದ ಶ್ರೀಹರಿಯು ಸಿಂಧುದೈತ್ಯನಿಗೆ ನುಡಿದ "ದೈತ್ಯರಾಜ, ನಿನ್ನಂಥ ಶೂರರನ್ನು ನಾನು ಈವರೆಗೂ ನೋಡಲಿಲ್ಲ. ನಿನ್ನ ಪರಾಕ್ರಮಕ್ಕೆ ಮೆಚ್ಚಿದ್ದೇನೆ. ನಿನಗೆ ಬೇಕಾದ ವರಬೇಡು. ನೀಡುತ್ತೇನೆ" ಎಂದು ಹೇಳಿದನು.

**ಸಿಂಧು :-** ದೇವಾಧಿದೇವ, ನೀನು ನನ್ನ ಮೇಲೆ ಪ್ರಸನ್ನನಾದದ್ದು ನಿಜವಿದ್ದರೆ ನೀನು ಕುಟುಂಬ ಸಮೇತನಾಗಿ ನನ್ನ ಗಂಡಕಿ ನಗರದಲ್ಲಿ ನಿರಂತರ ನೆಲೆನಿಲ್ಲು.

ಶ್ರೀ ಹರಿಯು 'ತಥಾಸ್ತು' ಎಂದು ಹೇಳಿದನು. ಆಗ ಸಿಂಧುರಾಜನು ಕೈಲಾಸ ಹಾಗೂ ವೈಕುಂಠ ಸ್ಥಾನಗಳಲ್ಲಿ ತನ್ನ ಪ್ರತಿನಿಧಿಗಳನ್ನು ಮಾಂಡಲಿಕರನ್ನಾಗಿ ಕೂಡಿಸಿ, ದೇವಲೋಕದ ಆ ರಾಜಧಾನಿಯಾದ ಅಮರಾವತಿಯಲ್ಲಿ ಒಬ್ಬ ಪ್ರತಿನಿಧಿಯನ್ನು ಇಟ್ಟು, ವಿಷ್ಣುವಿನೊಂದಿಗೆ ಗಂಡಕಿ ನಗರಕ್ಕೆ ಮರಳಿ ಬಂದ. ಮತ್ತು ಶ್ರೀ ಹರಿಯನ್ನು ತನ್ನ ಸರ್ವಶ್ರೇಷ್ಠವಾದ ಮಂದಿರಕ್ಕೆ ಕರೆದುಕೊಂಡು ಹೋಗಿ "ನೀನು ನಿನ್ನ ಪರಿವಾರವಾದ ಎಲ್ಲ ದೇವತೆಗಳಿಂದ ಕೂಡಿಕೊಂಡು ಈ ನನ್ನ ಮಂದಿರದಲ್ಲಿ ಆನಂದದಿಂದ ವಾಸಮಾಡು, ಸ್ವಚ್ಛದಿಂದ ವಿಹಾರ ಮಾಡು" ಎಂದು ಹೇಳಿದನು.

ಲಕ್ಷ್ಮೀಪತಿಯಾದ ನಾರಾಯಣನು ಸಿಂಧುವಿನ ಮಂದಿರದಲ್ಲಿ ಬಂದಿಯಾಗಿ ಕುಳಿತಿದ್ದನ್ನು ನೋಡಿ ಇಂದ್ರ, ವರುಣ, ಕುಬೇರ ಮೊದಲಾದ ದೇವತೆಗಳು ಅಲ್ಲಿಗೆ ಬಂದರು. ಕೈ ಮುಗಿದು ಕೇಳಿದರು.

**ದೇವತೆಗಳು :-** ಗರುಡಧ್ವಜ, ಇದು ಏನು ನಿನ್ನ ಅವಸ್ಥೆ ! ಈ ಮರ್ತ್ಯಾಧಮನ ಬಂದೀಖಾನೆಯಲ್ಲಿ ನೀನೇ ಕೈದಿಯಾಗಿ ಕುಳಿತುಕೊಂಡು ಬಿಟ್ಟೆಯಲ್ಲ ! ನಮ್ಮೆಲ್ಲರ ಪಾಡೇನು ?

**ವಿಷ್ಣು :-** "ಕಾಲಾಯ ತಸ್ಮೈ ನಮಃ" ಕಾಲವನ್ನು ಯಾರೂ ಮೀರಿ ನಡೆಯಲಾರರು. ನೀವು ಕೆಲವುಕಾಲ ಪ್ರತೀಕ್ಷೆ ಮಾಡಿರಿ. ಕಾಲಬಲದಿಂದ ಈ ದೈತ್ಯನು ತಾನಾಗಿ ನಾಶಹೊಂದುವನು.

ಇತ್ತ ವಿಶ್ವವಿಜಯಿಯಾದ ಸಿಂಧುರಾಜನು ಮೊದಲೇ ಉನ್ಮತ್ತ. ಈಗಂತೂ ದೇವಾಧಿದೇವತೆಗಳನ್ನೆಲ್ಲ ಗೆದ್ದು ಕೈಸೆರೆಗೈದು ತನ್ನ ಮನೆಯ ಬಂದೀಖಾನೆಯಲ್ಲಿ ಇರಿಸಿದ ಬಳಿಕ ಆ ದೈತ್ಯಮಹಾಗರ್ವಾಂಧನಾದ. ಅವನು ಧರ್ಮ ವಿರುದ್ಧವಾದ ಒಂದು ಘೋಷಣೆಯನ್ನು ಹೊರಡಿಸಿದ. "ಈ ಪ್ರಪಂಚದಲ್ಲಿ ಯಾರೂ ಯಜ್ಞಮಾಡಬಾರದು, ದಾನ ನೀಡಬಾರದು. ಮಂತ್ರವನ್ನು ಹೇಳಬಾರದು, ದೇವಪೂಜೆ ಮಾಡಬಾರದು. ಬ್ರಾಹ್ಮಣರನ್ನಂತೂ ಯಾರೂ ಗೌರವಿಸಬಾರದು. ಮತ್ತು ಈ ನನ್ನ ರಾಜ್ಯದಲ್ಲಿ ಅಲ್ಲಲ್ಲಿ ಇರುವ ದೇವಸ್ಥಾನಗಳಲ್ಲಿರು ಪ್ರತಿಮೆ, ವಿಗ್ರಹಗಳನ್ನೆಲ್ಲ ಕಿತ್ತಿ ನದಿ ನೀರಿನಲ್ಲಿ ಅಥವಾ ಸಮುದ್ರದ ಮಧ್ಯದಲ್ಲಿ ಮುಳುಗಿಸಿ ಬಿಡಿರಿ. ಆ ಮೂರ್ತಿಗಳು ಇದ್ದ ಸ್ಥಳದಲ್ಲಿ ನನ್ನ ವಿಗ್ರಹವನ್ನು ಸ್ಥಾಪನೆಮಾಡಿ ಅದಕ್ಕೆ ಷೋಡಶೋಪಚಾರ ಪೂಜೆಯನ್ನು ಮಾಡಿರಿ.

ಈ ದುಷ್ಟರಾಜನ ದುಶ್ಶಾಸನವನ್ನು ಕೇಳಿ ಎಷ್ಟೋ ಬ್ರಾಹ್ಮಣರು ಮೇರು, ಹಿಮಾಲಯ ಪರ್ವತಗಳಿಗೆ ಹೋದರು. ಅವನ ಅನುಯಾಯಿಗಳಾದ ದೈತ್ಯರು ದೇಶದಲ್ಲಿರುವ ದೇವಾಲಯಗಳಲ್ಲಿ ಸ್ಥಾಪಿಸಿದ ದೇವರ ಮೂರ್ತಿಗಳನ್ನೆಲ್ಲ ಕಿತ್ತಿ ನದಿ, ಸರೋವರ ಸಮುದ್ರಗಳಲ್ಲಿ ಒಗೆದರು. ಸಿಂಧುರಾಜನ ಆಳ್ವಿಕೆಯಲ್ಲಿ ಎಲ್ಲ ಧಾರ್ಮಿಕ- ಕೃತ್ಯಗಳು ಅವನ ಕಠೋರ ಆಜ್ಞೆಯ ಮೇರೆಗೆ ನಿಂತು ಹೋದವು. ಆಗ ದೇವತೆಗಳೆಲ್ಲರೂ ಒಂದು ಕಡೆ ಕೂಡಿದರು. ಸಿಂಧುರಾಜನನ್ನು ಕೊಲ್ಲುವದು ಹೇಗೆ ಎಂದು ವಿಚಾರ ಮಾಡಿದರು.

**ಬ್ರಹ್ಮ** :- ನಮ್ಮ ಸರ್ವಸಂಕಟಗಳನ್ನು ಪರಿಹಾರಮಾಡುವವನು ಸಾಕ್ಷಾತ್ ಪರಮಾತ್ಮನೆ. ಅವನನ್ನು ಪ್ರಾರ್ಥನೆ ಮಾಡಿ ಒಲಿಸಿಕೊಳ್ಳೋಣ. ಆ ಭಗವಂತನೆ ದುಷ್ಟದೈತ್ಯನನ್ನು ಸಂಹರಿಸಿ ನಮ್ಮ ನಮ್ಮ ಸ್ಥಾನಗಳನ್ನು ಪ್ರದಾನ ಮಾಡುವ.

ಆದರೆ ಯಾರು ಆ ಪರಮಾತ್ಮ ? ದುಷ್ಟದೈತ್ಯನನ್ನು ವಧಿಸಿ ನಮ್ಮ ಕಷ್ಟಗಳನ್ನು ಪರಿಹರಿಸಿ, ಇಷ್ಟಾರ್ಥಗಳನ್ನು ನೆರವೇರಿಸುವ ಆ ಶ್ರೇಷ್ಠದೇವನು ಯಾರು ? ಎಂದು ದೇವತೆಗಳಲ್ಲಿ ಜಿಜ್ಞಾಸೆ ಪ್ರಾರಂಭವಾಯಿತು. ಆಗ ಬೃಹಸ್ಪತಿಯು ''ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವ ಏಕಮಾತ್ರ ದೇವೋತ್ತಮನೆಂದರೆ ಸಾಕ್ಷಾತ್ ವಿನಾಯಕನೆ. ಅವನೇ ನಮ್ಮೆಲ್ಲರ ದುಃಖ ಪರಿಹಾರಕ, ಸೌಖ್ಯಕಾರಕ.

''ಮಾಘಮಾಸ ಕೃಷ್ಣಪಕ್ಷ ಮಂಗಳವಾರದಂದು ಕೂಡಿದ ಚತುರ್ಥೀದಿನದಂದು ಸಿಂಹವಾಹನನೂ ದಶಭುಜನೂ ಆದ ವಿನಾಯಕನನ್ನು ಪೂಜಿಸಿರಿ, ಪ್ರಾರ್ಥನೆ ಮಾಡಿರಿ. ಅವನು ದೀನಬಂಧು, ಮೇಲೆ ಕರುಣಾಸಿಂಧು. ಅವನೇ ಅವತಾರಮಾಡಿ ಆ ದೈತ್ಯನ ವಧವನ್ನು ಮಾಡುವನು. ''ದೇವಗುರುವಿನ ಸೂಚನೆಯಂತೆ ಇಂದ್ರ, ವರುಣ, ಕುಬೇರ, ವಿಷ್ಣು ಮೊದಲಾದ ದೇವತೆಗಳೆಲ್ಲರೂ ಕೂಡಿಕೊಂಡು ಪಂಚಾಮೃತ, ಗಂಧ ಪುಷ್ಪ, ಶಮೀ, ದೂರ್ವಾ, ಪಲ್ಲವ ಫಲ ಮೊದಲಾದವುಗಳನ್ನು ತೆಗೆದುಕೊಂಡು ಗಂಡಕೀ ನದಿಯ ತೀರಕ್ಕೆ ಬಂದರು. ಅಲ್ಲಿ ಒಂದು ಮಂಟಪವನ್ನು ನಿರ್ಮಿಸಿದರು.

ಸಿಂಹಾರೂಢನೂ, ಗಜಮುಖನೂ, ದಶಭುಜನೂ ಆದ ವಿನಾಯಕನ ಮೂರ್ತಿಯನ್ನು ವಿಧಿಪೂರ್ವಕವಾಗಿ ಸ್ಥಾಪಿಸಿ ಅವನ ಷೋಡಶೋಪಚಾರಪೂಜೆಯನ್ನು ಮಾಡಿದರು. ಸೂರ್ಯಾಸ್ತ ಸಮಯದ ಆ ಚತುರ್ಥಿತಿಥಿಯ ಸಾಯಂ ಸಂಧ್ಯಾ ಮುಖದಲ್ಲಿ ವಿಧ್ಯುಕ್ತ ರೀತಿಯಿಂದ ಪೂಜಿಸಿ ಕೈ ಮುಗಿದು

**ದೀನನಾಥ ದಯಾಸಿಂಧೋ ಯೋಗಿ-ಹೃತ್ಪದ್ಮ-ಸಂಸ್ಥಿತ ।**
**ಅನಾದಿಮಧ್ಯ-ರಹಿತ-ಸ್ವರೂಪಾಯ ನಮೋ ನಮಃ ॥**

ದೀನರಿಗೆ ನಾಥನೂ ದಯೆಯ ಸಮುದ್ರದಂತೆ ಇರುವವನೂ ಯೋಗಿ ಹೃದಯ ಕಮಲದಲ್ಲಿ ವಾಸ ಮಾಡುವವನೂ ಆದಿ ಮಧ್ಯ ಅಂತರಹಿತನೂ ಆದ ಗಣಪತಿಯೇ ನಿನಗೆ, ನಮ್ಮ ವಂದನೆ.

**ಮಾಯಾತೀತಾಯ ಭಕ್ತಾನಾಂ ಕಾಮಪೂರಾಯ ತೇ ನಮಃ**
**ಸೋಮ-ಸೂರ್ಯಾಗ್ನಿ-ನೇತ್ರಾಯ ನಮೋ ವಿಶ್ವಂಭರಾಯ ತೆ ॥**

ಮಾಯೆಯನ್ನು ಮೀರಿನಿಂತ, ಭಕ್ತರ ಕಾಮನೆಗಳನ್ನು ಪೂರ್ಣ ಮಾಡುವ, ಚಂದ್ರ ಸೂರ್ಯ ಅಗ್ನಿಗಳೇ ಮೂರು ಕಣ್ಣಾಗಿ ಉಳ್ಳ ವಿಶ್ವವ್ಯಾಪಿಯಾದ ಗಣೇಶನೇ, ನಿನಗೆ ನಮ್ಮ ನಮಸ್ಕಾರ.

ಹೀಗೆ ದೇವತೆಗಳು ಭಕ್ತಿಯಿಂದ ಗಣನಾಥನನ್ನು ಸ್ತೋತ್ರಮಾಡಲು ಆಗ ವಿನಾಯಕನು ಅವರ ಕಣ್ಣೆದುರು ಪ್ರತ್ಯಕ್ಷನಾಗಿ ಬಂದು ನಿಂತುಕೊಂಡನು. ಮತ್ತು ಪ್ರಸನ್ನವದನನಾಗಿ ನುಡಿದನು.

**ವಿನಾಯಕ :-** ದೇವತೆಗಳೆ, ನೀವು ಮಾಡಿದ ಈ ಸಂಕಷ್ಟಿವ್ರತದಿಂದ ನಾನು ಸಂತುಷ್ಟನಾಗಿದ್ದೇನೆ. ನಾನು ಹಿಂದೆ ಕಶ್ಯಪ, ಅದಿತಿ ದಂಪತಿಗಳ ಹೊಟ್ಟೆಯಿಂದ ಜನಿಸಿದಂತೆ ಈಗ ಮತ್ತೊಮ್ಮೆ, ಭೂಮಂಡಲದಲ್ಲಿ ಅವತಾರಮಾಡಿ ಸಿಂಧು ದೈತ್ಯನನ್ನು ಸಂಹರಿಸುತ್ತೇನೆ. ಆ ದುಷ್ಟ ದೈತ್ಯನು ಆಕ್ರಮಿಸಿದ ನಿಮ್ಮ ನಿಮ್ಮ ಸ್ಥಾನಗಳು ನಿಮಗೆ ಮರಳಿ ದೊರಕುವಂತೆ ಮಾಡುತ್ತೇನೆ.

ಹೀಗೆ ಹೇಳಿ ಗಣಾಧೀಶನು ಅದೃಶ್ಯನಾದನು. ''ಬಲಿಷ್ಠನೂ ಮಹಾದುಷ್ಟನೂ ಆದ ಸಿಂಧು ದೈತ್ಯನು ದೇವತೆಗಳನ್ನೆಲ್ಲ ಗೆದಿದ್ದಾನೆ'' ಎಂಬ ಸುದ್ದಿಯನ್ನು ಕೇಳಿ ಮಹಾದೇವನು ಪಾರ್ವತೀ ಸಮೇತನಾಗಿ ತನ್ನ ಏಳುಕೋಟಿ ಗಣಗಳಿಂದ ಕೂಡಿಕೊಂಡು ತ್ರಿಸಂಧ್ಯಾಕ್ಷೇತ್ರಕ್ಕೆ ತೆರಳಿದನು. ಅಲ್ಲಿ, ಭಯಾಕ್ರಾಂತರಾದ ಗೌತಮಾದಿ ಋಷಿಗಳು ಸಿಂಧು ರಾಕ್ಷಸನ ಭಯದಿಂದ ತಮ್ಮ ತಮ್ಮ ಯಜ್ಞಾದಿ ಕರ್ಮಗಳನ್ನು ಬಿಟ್ಟು ಆಶ್ರಮಗಳನ್ನು ತೊರೆದು ಆ ತ್ರಿಸಂಧ್ಯಾಕ್ಷೇತ್ರದಲ್ಲಿ ಗುಟ್ಟಾಗಿ ಕೂಡಿ ತಪೋನಿರತರಾಗಿದ್ದರು. ಅಲ್ಲಿಗೆ ಪಾರ್ವತೀಪತಿ ಬಂದದ್ದನ್ನು ನೋಡಿ ಅವರು ಸಂತುಷ್ಟರಾಗಿ, ಭಕ್ತಿಯಿಂದ ಅವನನ್ನು ಪೂಜಿಸಿ ಸ್ತುತಿಸಿದರು. ಫಲಪುಷ್ಪ ಭರಿತವಾದ ನಿಬಿಡವೃಕ್ಷಗಳ ನಟ್ಟ ನಡುವೆ ತಿಳಿನೀರಿನ ಒಂದು ಕೊಳದ ತೀರದಲ್ಲಿ ಮಹಾದೇವನಿಗಾಗಿ ಒಂದು ಸುಂದರವಾದ ಆಶ್ರಮವನ್ನು ನಿರ್ಮಿಸಿದರು. ಮತ್ತು ಭಗವಂತನನ್ನು ಬೇಡಿಕೊಂಡರು ''ಪ್ರಭು, ಪರಮೇಶ್ವರ ನೀನು ಇಲ್ಲಿ ನೆಲೆಸಿ ನಿಂತು ನಮ್ಮನ್ನು ರಕ್ಷಣೆಮಾಡು.''

ಮಹಾದೇವನು ಗೌರಿ ಗಂಗಾ ತನ್ನ ಪ್ರಮಥ ಗಣದೊಂದಿಗೆ ಅಲ್ಲಿ ಇದ್ದು ತಪೋನುಷ್ಠಾನದಲ್ಲಿ ತೊಡಗಿದನು. ಆಗ ಒಂದು ದಿನ ಪಾರ್ವತೀದೇವಿಯು ತನ್ನ ಪ್ರಾಣಪತಿಯನ್ನು ಪ್ರೀತಿಯಿಂದ ಪ್ರಶ್ನಿಸಿದಳು.

**ಪಾರ್ವತಿ :-** ದೇವದೇವ, ನೀನೆ ಜಗತ್ತಿನ ಸೃಷ್ಟಿಸ್ಥಿತಿ, ಸಂಹಾರಕಾರಕ. ಸರ್ವ ಕ್ಲೇಶ ತಾಪ ಪರಿಹಾರಕ. ನೀನೆ ಅನಂತಾನಂತ ಕೋಟಿ ಬ್ರಹ್ಮಾಂಡ ನಾಯಕ. ನೀನು ಬೇರೆಯಾರನ್ನು ಕುರಿತು ತಪಸ್ಸು ಮಾಡುತ್ತಿರುವೆ.

**ಪರಮೇಶ್ವರ :-** ಪಾರ್ವತಿ, ಯಾವನು ಅನಂತಗುಣಗಳಿಂದ ಪರಿಪೂರ್ಣನೋ, ಯಾವನ ರೋಮರೋಮಗಳಲ್ಲಿಯೂ ಅನಂತಾನಂತ ಬ್ರಹ್ಮಾಂಡಗಳು ಇರುವವೋ ಅಂಥ ಗುಣಪೂರ್ಣನಾದ ಪರಮಾತ್ಮನನ್ನು ಕುರಿತು ನಾನು ತಪಿಸುತ್ತಿದ್ದೇನೆ. ಆ ಮಹಾಪ್ರಭು ಸರ್ವಗುಣಗಳಿಗೂ ಈಶ್ವರನಾದುದರಿಂದ ಗುಣೇಶ ಎಂದು ಅವನನ್ನು ಕರೆಯುತ್ತಾರೆ. ನಾನು, ಗುಣೇಶ ಎಂಬ ಆ ಗಣೇಶನನ್ನು ಸ್ತೋತ್ರ ಮಾಡುತ್ತೇನೆ.

**ಪಾರ್ವತಿ :-** ಪ್ರಭು ಆ ಗುಣೇಶನು ಹೇಗೆ ಪ್ರಸನ್ನನಾಗುವನು ? ನನಗೆ ಅವನ ಪ್ರತ್ಯಕ್ಷ ದರ್ಶನವು ಆಗುವ ಬಗೆ ಹೇಗೆ ? ಅದನ್ನು ಹೇಳಿರಿ.

ಆಗ, ಚಂದ್ರಶೇಖರನು ಭವಾನಿಗೆ 'ಗಂ' ಎಂಬ ಗಣೇಶನ ಏಕಾಕ್ಷರಿ ಮಂತ್ರವನ್ನು ಉಪದೇಶ ನೀಡಿದನು. ''ಏಕಾಕ್ಷರಿ ಈ ಗಣೇಶ ಮಂತ್ರದ ಜಪವನ್ನು ನೀನು ಏಕಾಗ್ರಮನಸ್ಸಿನಿಂದ ಹನ್ನೆರಡು ವರ್ಷ ಮಾಡಿದರೆ ನಿನಗೆ ಗುಣೇಶನ ಸಾಕ್ಷಾತ್ಕಾರವು ನಿಶ್ಚಿತವಾಗಿ ಆಗುವದು''

ಈ ಗಣೇಶಮಂತ್ರದ ಉಪದೇಶದಿಂದ ಗೌರೀದೇವಿಯು ಪ್ರಸನ್ನಳಾಗಿ ತಪೋನುಷ್ಠಾನಕ್ಕಾಗಿ ಜೀರ್ಣಾಪುರದ ಉತ್ತರಕ್ಕಿರುವ ''ಲೇಖನಾದ್ರಿ'' ಬೆಟ್ಟಕ್ಕೆ ತೆರಳಿದಳು. ಅಲ್ಲಿ, ಒಂದು ರಮಣೀಯ ಸ್ಥಾನದಲ್ಲಿ ಪದ್ಮಾಸನದಲ್ಲಿ ಕುಳಿತು ಗಣೇಶನ ಧ್ಯಾನ ಮಾಡುತ್ತ ಏಕಾಕ್ಷರಿ ಮಂತ್ರ ಜಪವನ್ನು ಮಾಡತೊಡಗಿದಳು. ಅನ್ನ ತಿನ್ನದೆ, ನೀರು ಕುಡಿಯದೆ, ನಿದ್ರೆ ಮಾಡದೆ, ಕಂದಮೂಲ ಫಲಗಳನ್ನು ಭಕ್ಷಿಸದೆ, ಗಾಳಿಯನ್ನು ಕೂಡ ಆಹಾರವಾಗಿ ಸ್ವೀಕರಿಸದೆ ಹನ್ನೆರಡು ವರುಷಗಳವರೆಗೆ ಪಾರ್ವತೀ ದೇವಿಯು ಉಗ್ರತಪಸ್ಸನ್ನು ಆಚರಿಸಿದಳು. ಆಗ ಗುಣಪೂರ್ಣನಾದ ಗುಣೇಶನು ಪ್ರಸನ್ನನಾಗಿ ಅವಳೆದುರು ಪ್ರತ್ಯಕ್ಷನಾದನು. ಮತ್ತು ''ಜಗದೀಶ್ವರಿ, ನಿನ್ನ ತಪಸ್ಸಿನಿಂದ ನಾನು ಪ್ರಸನ್ನನಾಗಿದ್ದೇನೆ. ನೀನು ಅಭೀಷ್ಟವಾದ ವರವನ್ನು ಕೇಳು'' ಎಂದು ಹೇಳಿದನು.

**ಪಾರ್ವತಿ :-** ದೇವ, ನಿನ್ನ ದರ್ಶನದಿಂದಲೇ ನಾನು ತೃಪ್ತಳಾಗಿದ್ದೇನೆ. ಆದರೂ ನೀನು ಆಜ್ಞೆ ಮಾಡಿದ್ದರಿಂದ ವರಕೇಳುತ್ತೇನೆ. ನೀನು ನನಗೆ ಪುತ್ರರೂಪದಿಂದ ಪ್ರಕಟನಾಗು.

ತಾಯಿ, ''ನಾನು ನಿನ್ನ ಅಪೇಕ್ಷೆ ಪ್ರಕಾರ ನಿನ್ನ ಪುತ್ರರೂಪದಿಂದ ಪ್ರಕಟನಾಗಿ ನಿನ್ನ ಹಾಗೂ ಜಗತ್ತಿನಲ್ಲಿಯ ಸಜ್ಜನರ ಕಾಮನೆಯನ್ನು ಪೂರ್ತಿ ಮಾಡುತ್ತೇನೆ'' ಎಂದು ಹೇಳಿ ಗಣೇಶನು ಅಂತರ್ಧಾನ ಹೊಂದಿದನು.

ನಂತಃ ಗಿರಿಜಾದೇವಿಯು ಒಂದು ಸುಂದರವಾದ ಮಂದಿರವನ್ನು ನಿರ್ಮಿಸಿ ಅಲ್ಲಿ ಗಣೇಶನ ಒಂದು ವಿಗ್ರಹವನ್ನು ಸ್ಥಾಪಿಸಿ ಪೂಜೆ ಮಾಡಿ ಅವನಿಗೆ 'ಗಿರಿಜಾತ್ಮಜ' ಎಂದು ಹೆಸರಿಟ್ಟು ಪೂಜಿಸಿದಳು. ಆ ಪವಿತ್ರ ಸ್ಥಳವು ಸಿದ್ಧಿಕ್ಷೇತ್ರ ಎಂಬ ಹೆಸರಿನಿಂದ ಮುಂದೆ ಪ್ರಸಿದ್ಧವಾಯಿತು. ಅವಳು ತ್ರಿಸಂಧ್ಯಾಕ್ಷೇತ್ರಕ್ಕೆ ಬಂದು ಪತಿ ಪರಮೇಶ್ವರನಿಗೂ ಅಲ್ಲಿ ತಪಂಗೈಯ್ಯುವ ಋಷಿಮುನಿಗಳಿಗೂ ಈ ಸಮಾಚಾರವನ್ನು ತಿಳಿಸಿದಳು. ಅದನ್ನು ಕೇಳಿ ಭಗವಾನ್ ಶಂಕರನೂ ಮುನಿಮಹರ್ಷಿಗಳೂ ಸಂತೋಷಭರಿತರೂ ನಿಶ್ಚಿಂತರೂ ಆಗಿ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು. ಮುಂದೆ ಎಲ್ಲರೂ ತಮ್ಮ ತಮ್ಮ ಸ್ಥಾನದಲ್ಲಿ ಇದ್ದು, ಗಣೇಶ ಪೂಜಾ, ಪ್ರಾರ್ಥನಾ ಅನುಷ್ಠಾನ ಮಂತ್ರ ಜಪಾದಿಗಳಲ್ಲಿ ತತ್ಪರರಾದರು.

ಭಾದ್ರಪದ ಶುಕ್ಲ ಚತುರ್ಥಿತಿಥಿಯು ಬಂದಿತು. ಅಂದು ಸೋಮವಾರ, ಸ್ವಾತಿ ನಕ್ಷತ್ರ, ಸಿಂಹಲಗ್ನದ ಯೋಗ, ಐದು ಶುಭಗ್ರಹಗಳು ಏಕತ್ರಮಿಲಿತವಾಗಿದ್ದವು. ಪಾರ್ವತಿಯು ಷೋಡಶೋಪಚಾರದಿಂದ ಗಣೇಶನನ್ನು ಪೂಜಿಸಿದಳು. ಆಗ, ಅನಂತಮುಖ, ಅನಂತನೇತ್ರ, ಅಸಂಖ್ಯಕರ್ಣ, ಅನೇಕನಾಶಿಕ, ಅಗಣಿತಹಸ್ತಗಳಿಂದ ಒಡಗೂಡಿದ ಸಚ್ಚಿದಾನಂದ ಘನನಾದ ಗಣೇಶನು ಪ್ರಕಟನಾದನು.

**ಗಣೇಶ :-** ಕಲ್ಯಾಣಿ, ನೀನು ಕಠೋರ ತಪಸ್ಸನ್ನು ಆಚರಿಸಿ ವರಬೇಡಿದೆಯಲ್ಲವೆ ! ಅದರಂತೆ ನಾನು ಈಗ ನಿನ್ನ ಮನೆಯಲ್ಲಿ ಅವತಾರ ಮಾಡಿ ಗಣೇಶಲೋಕದಿಂದ ಬಂದು ನಿಂತಿದ್ದೇನೆ.

**ಗೌರಿ :-** ಪ್ರಭು, ಈ ನಿನ್ನ ವಿರಾಟ್ ರೂಪವನ್ನು ಬಿಟ್ಟು ಪುತ್ರರೂಪದಿಂದ ನನ್ನ ಮಗನಾಗಿ ಅವತರಿಸಿ ಬಾ.

ಕೂಡಲೆ ಪಾರ್ವತಿಯ ಎದುರು, ಆರು ಕೈ, ಮೂರು ಕಣ್ಣು, ಸ್ಪಟಿಕಮಣಿಯಂತೆ ಸ್ವಚ್ಛವಾದ ಶರೀರವುಳ್ಳ ಮಗುವಾಗಿ ಗಣೇಶನು ಆಡತೊಡಗಿದನು. ಅವನ ಚರಣ ಕಮಲಗಳಲ್ಲಿ ಧ್ವಜ ಅಂಕುಶ ಕಮಲ ಮುಂತಾದ ಶುಭ ಚಿಹ್ನೆಗಳಿದ್ದವು. ಗಿರಿಜಾವಲ್ಲಭನಾದ, ಚಂದ್ರಶೇಖರನು ಆ ಮಗುವಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿ ಅನೇಕ ದಾನಧರ್ಮಗಳನ್ನು ನೀಡಿದನು. ಪಾರ್ವತಿಯು ಆ ಶಿಶುವನ್ನು ತನ್ನ ತೊಡೆಯ ಮೇಲೆ ಮಲಗಿಸಿಗೊಂಡು ಪ್ರೀತಿಯಿಂದ ಸ್ತನಪಾನಮಾಡಿಸಿದಳು. ಹನ್ನೊಂದನೆಯ ದಿನ. ಎಲ್ಲ ಮಹಾಮಹಾಮುನಿಜನರು ಬಂದು ಅವನಿಗೆ ಗುಣೇಶ ಎಂದು ನಾಮಕರಣ ಮಾಡಿದರು.

ಇತ್ತ ಸಿಂಧು ದೈತ್ಯನಿಗೆ ತ್ರಿಸಂಧ್ಯಾಕ್ಷೇತ್ರದಲ್ಲಿ ಶಿವಪಾರ್ವತಿಯರಿಗೆ ಅವರ ತಪಸ್ಸಿನಿಂದ ಪ್ರಸನ್ನನಾಗಿ ಮಹಾಶಕ್ತಿ ಸಂಪನ್ನನಾದ ಒಬ್ಬ ಮಗನು ಹುಟ್ಟಿದ್ದಾನೆ ಎಂಬ ಸಮಾಚಾರ ತಿಳಿಯಿತು. ಆಗಲೆ ''ಅಸುರರಾಜ, ನಿನ್ನ ಸಂಹಾರ ಮಾಡಲಿಕ್ಕಾಗಿಯೇ ಶಿವನ ಪುತ್ರನು ಉತ್ಪನ್ನನಾಗಿದ್ದಾನೆ'' ಎಂದು ಆಕಾಶವಾಣಿಯಿತು. ಅದನ್ನು ಕೇಳಿ ಭಯಭ್ರಾಂತನಾಗಿ ಸಿಂಧುದೈತ್ಯನು ಮೂರ್ಛಿತನಾದನು. ಕೆಲವು ಸಮಯದ ಬಳಿಕ ಮೂರ್ಛೆ ತಿಳಿದು ಎದ್ದು, ಹೃದಯದಲ್ಲಿ ಭಯ ತುಂಬಿದ್ದರೂ ಮೇಲೆ ಮೇಲೆ ಧೈರ್ಯ ತಂದುಕೊಂಡು ''ಕ್ಷುದ್ರವಾದ ಸೊಳ್ಳೆ ಹುಳವು ಆನೆಗೆ ಏನು ಮಾಡಬಲ್ಲದು ! ನಾನು ಮೂವತ್ತು ಮೂರು ಕೋಟಿ ದೇವತೆಗಳನ್ನು ಗೆದ್ದು, ವಿಷ್ಣುವನ್ನು ಕೂಡ ಸೆರೆಮನೆಯಲ್ಲಿ ಇಟ್ಟಿದ್ದೇನೆ. ನನಗೆ ಈ ಕ್ಷುದ್ರನಾದ ಬಾಲಕ ಏನು ಮಾಡಬಲ್ಲನು ?'' ಎಂದು ಅಟ್ಟಹಾಸ ಪೂರ್ವಕವಾಗಿ ನುಡಿದನು. ಅವನ ಮಾತನ್ನು ಅವನ ಅನುಯಾಯಿ ದುರುಳ ದಾನವರು ಬೆಂಬಲಿಸಿದರು. ಹೆದರಿದ ಹಾಗೂ ಭಯದಿಂದ ಮುದುರಿದ ಆ ದೈತ್ಯನ ಹೃದಯದಲ್ಲಿ ಹುರುಪನ್ನು ತುಂಬಿದರು. ಆಗ ಆ ಸಿಂಧು ದೈತ್ಯನು ''ತನ್ನ ವೀರಾಗ್ರಣಿಗಳಾದ ದೈತ್ಯರನ್ನು ಕರೆದು ಈಗಲೇ ನೀವೆಲ್ಲರೂ ಗುಪ್ತಚಾರ ರೂಪದಿಂದ, ಮುನಿಗಳ ವೇಷದಿಂದ ತ್ರಿಸಂಧ್ಯಾಕ್ಷೇತ್ರಕ್ಕೆ ಹೋಗಿರಿ, ಅಲ್ಲಿ ಗುಟ್ಟಾಗಿ ಇದ್ದು ಆ ಗುಣೇಶನನ್ನು ಸಂಹಾರ ಮಾಡುವ ಅವಸರವನ್ನು ಕಾಯುತ್ತ ಕುಳಿತು ಕೊಳ್ಳಿರಿ'' ಎಂದು ಆಜ್ಞೆ ಮಾಡಿದನು. ಇತ್ತ ಬಾಲಕ ಗುಣೇಶನು ದಿನದಿನಕ್ಕೆ ಬೆಳೆಯ ತೊಡಗಿದನು. ಪಾರ್ವತಿಯ ತಂದೆಯಾದ ಹಿಮಗಿರಿಯು ಅಳಿಯ ಮಗಳು ಇದ್ದಲ್ಲಿಗೆ ಬಂದು ಆ ಮಗುವನ್ನು ತೊಡೆಯ ಮೇಲೆ ಕರೆದುಕೊಂಡು ಮುದ್ದಾಡಿ, ರತ್ನಾಭರಣಗಳ ಕಾಣಿಕೆ ನೀಡಿ ಆ ಮುದ್ದಾದ ಮಗುವನ್ನು 'ಹೇರಂಬ' ಎಂದು ಕರೆದನು. 'ಪುತ್ರಿ, ಈ ನಿನ್ನ ಮಗು ಭೂಭಾರ ಹರಣಕ್ಕಾಗಿ ಹುಟ್ಟಿಬಂದಿದೆ. ಇವನ ಮೇಲೆ ದೈತ್ಯರ ಕ್ರೂರ ದೃಷ್ಟಿ ಇದೆ. ಜಾಗರೂಕತೆಯಿಂದ ಇವನನ್ನು ರಕ್ಷಣೆ ಮಾಡಿರಿ'' ಎಂದು ಹೇಳಿ ಹೊರಟು ಹೋದನು.

ಒಂದು ದಿನ ಹೇರಂಬನು ಹೊರಗೆ ಆಟ ಆಡುತ್ತಿದ್ದನು. ಒಬ್ಬ ಅಸುರನು ಹದ್ದಿನ ರೂಪದಿಂದ ಆ ಮಗುವನ್ನು ತನ್ನ ಪಕ್ಕೆಯಲ್ಲಿ ಎತ್ತಿಕೊಂಡು ಆಕಾಶಕ್ಕೆ ಹಾರಿದನು. ಪಾರ್ವತಿಯು ಅತ್ತಿತ್ತ ಹುಡುಕಾಡಿ ಮಗನು ಕಾಣದಂತಾಗಲು ಗಾಬರಿಯಿಂದ ಮೇಲೆ ನೋಡಿದಳು. ಒಂದು ವಿಶಾಲ ಕಾಯವಾದ ಗೃಧ್ರವು ತನ್ನ ಮಗನನ್ನು ಬಾಯಲ್ಲಿ ಹಿಡಿದು ಮುಗಿಲಿನಲ್ಲಿ ತಿರುಗುತ್ತಿದ್ದಿತು. ಆಗ ಪಾರ್ವತಿಯು ಅದನ್ನು ನೋಡಿ ಚೀತ್ಕಾರ ಮಾಡಿ ಅಳತೊಡಗಿದಳು.

ಆಗ ಹೇರಂಬನು, ಒಂದು ಕ್ಷಣದಲ್ಲಿ ಮುಷ್ಟಿಯಿಂದ ಹೊಡೆದು ಆ ಗೃಧ್ರಾಸುರನನ್ನು ಸಂಹಾರಮಾಡಿದನು. ಗಣೇಶನ ಭೀಕರ ಪ್ರಹಾರದಿಂದ ಗತ ಪ್ರಾಣನಾದ ಆ ಅಸುರನು ತನ್ನ ದೈತ್ಯದೇಹದಿಂದ ನೆಲದ ಮೇಲೆ ಬಿದ್ದನು. ಅವನ ಅಂಗ ಪ್ರತ್ಯಂಗಗಳೆಲ್ಲ ಛಿನ್ನ ಭಿನ್ನವಾಗಿ ನೆಲದ ಮೇಲೆ ಬಿದ್ದವು ಹೇರಂಬನು ಸುರಕ್ಷಿತವಾಗಿ ನಗುತ್ತ ನಿಂತುಕೊಂಡಿದ್ದನು. ಆಗ ಪಾರ್ವತಿಯು ಧಾವಿಸಿಬಂದು ಮಗನನ್ನು ಎತ್ತಿಕೊಂಡು ಪ್ರೀತಿಯಿಂದ ಮೈದಡವಿ ಮುದ್ದಾಡಿ ತೊಡೆಯ ಮೇಲೆ ಮಲಗಿಸಿಕೊಂಡು ಸ್ತನಪಾನಮಾಡಿಸಿದಳು.

ಒಂದು ದಿನ ಸಂಧ್ಯಾಕಾಲ ಜಗಜ್ಜನನಿಯಾದ ಗೌರಿಯು ತನ್ನ ಮುದ್ದು ಮಗ ಹೇರಂಬನನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುತ್ತಿದ್ದಳು. ಆಗ ಕ್ಷೇಮ ಮತ್ತು ಕುಶಲ ಎಂಬ ಇಬ್ಬರು ಭಯಂಕರ ರೂಪದ ದೈತ್ಯರು ಪಾರ್ವತಿಯ ಆಶ್ರಮದಲ್ಲಿ ಪ್ರವೇಶ ಮಾಡಿದರು. ಆ ಮಗುವನ್ನು ಕೊಲ್ಲಬೇಕೆಂದು ಆ ಪಾಪಿಗಳು ತೊಟ್ಟಿಲದಲ್ಲಿ ಬಗ್ಗಿದರು. ಅದನ್ನು ಕಂಡು ಸತೀದೇವಿಯು ಗಾಬರಿಯಿಂದ ಕೂಗಿಕೊಂಡಳು. ಆ ಕ್ಷಣದಲ್ಲಿಯೇ ಹೇರಂಬನು ತನ್ನ ಕಾಲಿನಿಂದ ಒದ್ದು ಇಬ್ಬರೂ ದೈತ್ಯರನ್ನು ಸಂಹಾರ ಮಾಡಿದನು. ಬಾಲಕನ ಪಾದ ಪ್ರಹಾರದಿಂದ ತಾಡಿತ ಪೀಡಿತರಾದ ದೈತ್ಯರಿಬ್ಬರೂ ನೆತ್ತರಕಾರಿ ದೂರಹೋಗಿ ಸತ್ತು ಬಿದ್ದರು. ದಯಾಳುವಾದ ಗಣೇಶನು ಅವರಿಗೂ ಕೂಡ ಮುಕ್ತಿಯನ್ನು ಕರುಣಿಸಿದನು.

ಮತ್ತೊಂದು ದಿನ ಪಾರ್ವತೀ ದೇವಿಯು ಗೆಳತಿಯರೊಂದಿಗೆ ಮಂದಿರದಲ್ಲಿ ಪೂಜೆ ಮಾಡಲು ಹೋಗಿದ್ದಳು. ಹೇರಂಬನು ಮಂದಿರದ ಹೊರಗೆ ಆಟದಲ್ಲಿ ತೊಡಗಿದ್ದನು. ಆಗ ಕ್ರೂರ ಎಂಬ ಹೆಸರಿನ ಮಹಾಬಲಿಷ್ಠನಾದ ಅಸುರನು ಓರ್ವಋಷಿಕುಮಾರನ ವೇಷದಲ್ಲಿ ಬಂದು ಹೇರಂಬನ ಜೊತೆಗೆ ಆಟವಾಡತೊಡಗಿದನು. ಆಟವನ್ನು ಆಡಆಡುತ್ತ ಆ ದೈತ್ಯನು ಹೇರಂಬನ ಕೂದಲು ಹಿಡಿದು ಜಗ್ಗಿ ನೆಲದ ಮೇಲೆ ಉರುಳಿಸಿ ಅವನ ಕೊರಳನ್ನು ಅಮುಕಿ ಹಿಚುಕಿ ಕೊಲ್ಲಲು ಪ್ರಯತ್ನಿಸಿದನು. ಅದನ್ನು ತಿಳಿದು ಹೇರಂಬನು ತಕ್ಷಣದಲ್ಲಿಯೇ ಎದ್ದು ನಿಂತು ಋಷಿಕುಮಾರನ ರೂಪದಲ್ಲಿದ್ದ ಆ ದೈತ್ಯನ ಕೊರಳನ್ನು ತಾನೆ ಹಿಸುಕ ತೊಡಗಿದನು. ಅದನ್ನು ದೂರದಿಂದ ನೋಡುತ್ತಲಿದ್ದ ಪಾರ್ವತಿಯು 'ಮಗು ಅವನನ್ನು ಬಿಟ್ಟು ಬಿಡು. ಅವನು ಋಷಿಪುತ್ರನಂತೆ ಇದ್ದಾನೆ. ಅವನನ್ನು ಕೊಂದರೆ ನಿನಗೆ ಪಾಪ ಬರುತ್ತದೆ' ಎಂದು ಬೇಡಿಕೊಂಡಳು. ಹೀಗೆ ಹೇಳುತ್ತ ಅವಳು ಮಗನಿದ್ದ ಸ್ಥಳಕ್ಕೆ ಓಡಿ ಬಂದಳು. ಅಷ್ಟರಲ್ಲಿ ಕ್ರೂರ ಎಂಬ ಹೆಸರಿನ ಛದ್ಮವೇಷಧಾರಿ ದೈತ್ಯನು ಸತ್ತುಬಿದ್ದಿದ್ದ. ಅವನ ದೈತ್ಯಕಾಯವು ಶವವಾಗಿ ನೆಲದ ಮೇಲೆ ಬಿದ್ದಿದ್ದಿತ್ತು. ಆಗ ಪಾರ್ವತಿಯು ಮಗನ ಪರಾಕ್ರಮವನ್ನು ನೋಡಿ ಹೆಮ್ಮೆಯಿಂದ ಆ ಮಗುವನ್ನು ಎತ್ತಿ ತನ್ನ ತೊಡೆಯ ಮೇಲೆ ಕೂಡಿಸಿಕೊಂಡಳು.

ಗೌತಮಾದಿ ಋಷಿಗಳು ಮತ್ತು ಪ್ರಮಥಗಣದವರು ಋಷಿ ಪತ್ನಿಯರು ಪಾರ್ವತಿಯ ಸಖಿಯರು ಕೂಡಿ ಒಂದು ಸುಮುಹೂರ್ತದಲ್ಲಿ ಆ ಮಯೂರೇಶನಿಗೆ ಉಪದೇಶದ ಸಂಸ್ಕಾರವನ್ನು ಮಾಡಿದರು. ಗಣೇಶ ಪೂಜಾ ಪುಣ್ಯಾಹವಾಚನಾದಿಗಳು ಆದ ಬಳಿಕ ಅವನಿಗೆ ದಿವ್ಯವಸ್ತ್ರಗಳನ್ನು ಉಡಿಸಿದರು. ಭವ್ಯ ಅಲಂಕಾರವನ್ನುಮಾಡಿದರು. ದೇವತೆಗಳು, ಋಷಿಗಳು ಬ್ರಾಹ್ಮಣರು, ಕೂಡಿಕೊಂಡು ಅವನಿಗೆ ಆಶೀರ್ವಾದ ನೀಡಿದರು.

ಒಂದು ದಿನ ಸಿಂಧು ದೈತ್ಯನ ಕ್ರೂರ ಅನುಚರನಾದ ವ್ಯೋಮಾಸುರನು ಪಾರ್ವತಿ ನೆಲಿಸಿದ ಆಶ್ರಮಕ್ಕೆ ಬಂದನು. ಆಶ್ರಮದ ಅಂಗಣದಲ್ಲಿದ್ದ ಒಂದು ವೃಕ್ಷದ ನೆರಳಿನಲ್ಲಿ ಹೇರಂಬನು ಆಟವಾಡುತ್ತಿದ್ದನು. ವ್ಯೋಮಾಸುರನು ಆ ವೃಕ್ಷದಲ್ಲಿ ಬಂದು ಕುಳಿತು ಆ ಹೆಮ್ಮರವನ್ನು ಭಯಂಕರವಾದ ಬಿರುಗಾಳಿಯನ್ನು ಹುಟ್ಟಿಸಿ ಅಲುಗಾಡುವಂತೆ ಮಾಡಿದನು. ಸುಂಟರಗಾಳಿಯಲ್ಲಿ ಎಲ್ಲರ ಕಣ್ಣುಗಳಲ್ಲಿ ಮಣ್ಣು ಧೂಳು ಸಿಕ್ಕು ಏನೂ ತೋರದಂತಾಗಿತ್ತು. ಆಗ ಗಣಪತಿಯು ತನ್ನ ಸಾಮರ್ಥ್ಯದಿಂದ ಆ ಭೀಕರವಾದ ಝುಂಝೂವಾತನ ತಡೆದು ನಿಲ್ಲಿಸಿದನು. ವೃಕ್ಷಾಗ್ರದಲ್ಲಿ ಕುಳಿತು ಕುಟಿಲಕಾರಸ್ಥಾನ ಮಾಡುತ್ತಲಿದ್ದ ವ್ಯೋಮಾಸುರನನ್ನು ಕ್ಷಣಾರ್ಧದಲ್ಲಿ ಹೊಡೆದು ಉರುಳಿಸಿದನು. ದುಷ್ಟನಾದ ರಕ್ಕಸನು ರಕ್ತದ ಮಡುವಿನಲ್ಲಿ ಬಿದ್ದು ಎಲ್ಲ ಜನರು ಕಣ್ಣು ತೆರೆಯುವಷ್ಟರಲ್ಲಿ ಮಣ್ಣು ಮುಕ್ಕಿ ಪ್ರಾಣಬಿಟ್ಟನು. ಆಗ ಪಾರ್ವತೀದೇವಿಯು ಭರದಿಂದ ಬಂದು ಮಗನನ್ನು ಜಿಗಿದಪ್ಪಿ, ಮಗು ಸುರಕ್ಷಿತವಾಗಿ ಬದುಕಿ ಉಳಿದದ್ದಕ್ಕಾಗಿ ಭಗವಂತನನ್ನು ವಂದಿಸಿದಳು. ಇದನ್ನೆಲ್ಲ ನೋಡುತ್ತಲಿದ್ದ ಮುನಿಪತ್ನಿಯರು ಹಾಗೂ ಹಿತಚಿಂತಕರು ಪಾರ್ವತಿಯನ್ನು ಕುರಿತು ''ತಾಯಿ, ನೀನು ಧನ್ಯಳು, ಈ ಬಾಲಕನು ಹುಟ್ಟಿದ ಕೆಲವೇ ದಿನಗಳಲ್ಲಿ ಅನೇಕ ಜನ ಅಸುರರನ್ನು ವಧಿಸಿ ನಮ್ಮೆಲ್ಲರನ್ನು ರಕ್ಷಣೆ ಮಾಡಿದ್ದಾನೆ. ಇವನಿಂದ ನಿಶ್ಚಯವಾಗಿ ಸರ್ವದುಷ್ಟಶಕ್ತಿಗಳ ನಾಶವಾಗಿ ಲೋಕಕ್ಷೇಮವುಂಟಾಗುವದು. ನೀನು ಮಾತ್ರ ಇವನನ್ನು ದಕ್ಷತೆಯಿಂದ ರಕ್ಷಿಸುತ್ತ ಇರು'' ಎಂದು ಹೇಳಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ವ್ಯೋಮಾಸುರನಿಗೆ ಶತಮಾಹಿಷೀ ಎಂಬ ಹೆಸರಿನ ಒಬ್ಬ ಭೀಕರಾಕಾರದ ತಂಗಿ ಇದ್ದಳು. ತನ್ನ ಸೋದರನನ್ನು ಪಾರ್ವತೀ ಪುತ್ರನು ಕೊಂದು ಹಾಕಿದ್ದನ್ನು ನೋಡಿ ಅವಳಿಗೆ ಬ್ರಹ್ಮಾಂಡ ಕೋಪ ಬಂದಿತು. ಇದರ ಸೇಡುತೀರಿಸಿ ಕೊಳ್ಳಬೇಕೆಂದು ಆ ಮಾಯಾವಿನಿಯು ಹದಿನಾರುವರುಷದ ಸುಂದರ ಯುವತಿಯ ವೇಷತೊಟ್ಟಳು. ಅವಳು ನೇರವಾಗಿ ಪಾರ್ವತಿ ಇದ್ದಲ್ಲಿಗೆ ಬಂದು ಅವಳಿಗೆ ನಮಸ್ಕಾರ ಮಾಡಿ ಅವಳನ್ನು ಪ್ರಶಂಸಿಸಿದಳು. ಸರಳ ಸ್ವಭಾವದ ಪಾರ್ವತಿಯು ಆ ಶತಮಾಹಿಷಿಗೆ ಸುಗ್ರಾಸ ಭೋಜನವನ್ನು ಉಣಿಸಿದಳು ; ಸಂತೋಷಪಡಿಸಿದಳು. ಅಂದು ರಾತ್ರಿ ತನ್ನ ಸಮೀಪದಲ್ಲಿಯೇ ಒಂದು ಮಂಚದ ಮೇಲೆ ಅವಳಿಗೆ ಮಲಗಲು ಹೇಳಿದಳು. ಸರ್ವಜ್ಞನಾದ ಹೇರಂಬನಿಗೆ ಮಾಯಾವಿನಿಯಾದ ಈ ರಕ್ಕಸಿಯು ತನ್ನನ್ನು ಕೊಲ್ಲಬಂದಿದ್ದಾಳೆ ಎಂದು ಗೊತ್ತಾಯಿತು. ಆದರೂ ಅವನು ಯಾವುದನ್ನು ತಿಳಿಯದಂತೆ ಕಣ್ಣು ಮುಚ್ಚಿ ಮಲಗಿಕೊಂಡಿದ್ದನು. ಅಪರಾತ್ರಿಯಲ್ಲಿ ಶತಮಾಹಿಷಿಯು, ಮೆಲ್ಲನೆ ಎದ್ದು ಹೇರಂಭನನ್ನು ಮುಟ್ಟಿದಳು. ಕೂಡಲೆ ಐದು ತಿಂಗಳು ಮಗುವಾದ ಹೇರಂಬನು ತನ್ನ ಚಿಗುರು ಬೆರಳುಗಳಿಂದ ಆ ರಕ್ಕಸಿಯ ಕಿವಿ ಮೂಗುಗಳನ್ನು ಗಟ್ಟಿಯಾಗಿ ಹಿಡಿದನು. ರಕ್ಕಸಿಯು ಬಿಡಿಸಿಕೊಳ್ಳಬೇಕೆಂದು ಒದ್ದಾಡಿದಳು. 'ಮೂಗುಬಿಡು' 'ಕಿವಿಬಿಡು' ಎಂದು

ಒದರುತ್ತ ಗುದ್ದಾಡಿದಳು. ಏನಾದರೂ ಹೇರಂಬನು ಅವಳ ಕರ್ಣನಾಸಿಕಗಳನ್ನು ಬಿಡಲಿಲ್ಲ. ಅವಳು ಬಿಡಿಸಿಕೊಳ್ಳಬೇಕು ಎಂದು ಪ್ರಯತ್ನಿಸಿದಷ್ಟೂ ಅವನ ವಜ್ರ ಹಸ್ತವು ಇನ್ನೂ ಬಿಗಿಯಾಗಿ ಅವಳು ವಿಲಿವಿಲಿ ಒದ್ದಾಡತೊಡಗಿದಳು. ಪಾರ್ವತಿ ಹಾಗೂ ಅವರ ಗೆಳತಿಯರು ಅಲ್ಲಿಗೆ ಓಡಿಬಂದರು. ಬಾಲಕನ ಕೈಯಿಂದ ರಕ್ಕಸಿಯನ್ನು ಬಿಡಿಸಲು ಅವರು ಕೂಡ ಪ್ರಯತ್ನ ಮಾಡಿದರೂ ಏನಾದರೂ ಹೇರಂಬನು ಆ ಮಾಯಾವಿನಿಯ ಕಿವಿ ಮೂಗುಗಳನ್ನು ಬಿಡಲಿಲ್ಲ. ಕೊನೆಗೆ ಬೆವರುತ್ತ ನೆತ್ತರು ಕಾರುತ್ತ ಆ ರಕ್ಕಸಿಯು ಉರುಳಿ ನೆಲದ ಮೇಲೆ ಹೊರಳಿಬಿದ್ದಳು. ಅವಳ ರಾಕ್ಷಸಾಕಾರದ ಮೃತ್ಯುದೇಹವನ್ನು ಕಂಡು ಪಾರ್ವತಿಯೂ ಅವಳ ಸಹಚರಿಯರೂ ಗಾಬರಿಯಾದರು. ಆಗ ಶಿವನ ಗಣಾಧೀಶರು ಬಂದು ಆ ರಾಕ್ಷಸಿಯ ಶವನನ್ನು ದೂರ ಒಯ್ದು ಒಗೆದು ಬಂದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಸಿಂಧುವಿನ ಉತ್ಪತ್ತಿ*
*ಎಂಬ ಇಪ್ಪತ್ತಮೂರನೇಯ ಅಧ್ಯಾಯ ಮುಗಿದುದು*

—o—

## ಮಯೂರೇಶನ ಬಾಲ್ಯದ ಆಟ

**ಅಧ್ಯಾಯ - ೨೪**

ಹೀಗೆ ರಾಕ್ಷಸರಾಜನಾದ ಸಿಂಧುದೈತ್ಯನು ತನ್ನ ಅನೇಕ ಮಾಯಾವಿದೈತ್ಯರನ್ನು ಗಣೇಶನ ಸಂಹಾರಕ್ಕಾಗಿ ಕಳಿಸಿಕೊಟ್ಟನು. ವಿವಿಧ ವೇಷದಿಂದ ವಿವಿಧ ಲೀಲೆಗಳಿಂದ ಬಂದು ತನ್ನನ್ನು ಸಂಹರಿಸಲು ಪ್ರಯತ್ನಿಸಿದ ಆ ದೈತ್ಯಾಧಮರನ್ನೆಲ್ಲ ಗಣೇಶನು ಲೀಲಾಜಾಲದಿಂದ ಸಂಹರಿಸಿದನು. ಕಪಟಿಯಾದ ಕಮಠ, ಕ್ರೂರನಾದ ತಲ್ಪ, ಹಂತಕನಾದ ದುಂದುಭಿ ನಿಷ್ಕರುಣೆಯಾದ ಅಜಗರ, ಪಾಪಿಷ್ಠನಾದ ಶಲಭ, ಪ್ರಾಣಾಂತಕನಾದ ನೂಪುರ, ಕರಾಳಮುಖನಾದ ಕೂಟ, ಮಹಾಮಾಯಾವಿಯಾದ ಮಚ್ಛ, ನರಾಂತಕನಾದ ಶೈಲ. ಕಾಲರೂಪಿಯಾದ ಕರ್ದಮ, ಮಹಾಪರಾಕ್ರಮಿಯಾದ ಖಡ್ಗ, ನಿಷ್ಕರುಣೆಯಾದ ಛಾಯ, ವಕ್ರಬುದ್ಧಿಯ ಚಂಚಲ ಮೊದಲಾದ ಅನೇಕ ದೈತ್ಯರು ಸಿಂಧುರಾಜನ ಅಪ್ಪಣೆಯಿಂದ ಮಯೂರೇಶನನ್ನು ಕೊಲ್ಲಬೇಕೆಂದು ತ್ರಿಸಂಧ್ಯಾಕ್ಷೇತ್ರಕ್ಕೆ ಬಂದರು. ಅವರೆಲ್ಲರೂ ಚಿತ್ರವಿಚಿತ್ರವಾದ ವೇಷದಿಂದ ಬಂದು ತರತರಹದ ಮಾಯೆಗಳನ್ನು ರಚಿಸಿ, ಬಾಲಕನಾದ ಹೇರಂಬನನ್ನು ಕೊಲ್ಲಬೇಕೆಂದು ಮಹಾಪ್ರಯತ್ನ ಮಾಡಿದರು. ಆದರೆ ಮಾಯಾಪತಿಯಾದ ಮಯೂರೇಶನ ಎದುರು ಅವರ ಯಾವ ಆಟವೂ ನಡೆಯಲಿಲ್ಲ. ಅವರೆಲ್ಲರೂ ಮಯೂರೇಶನಿಂದ ಹತಪತಿತರಾಗಿ, ನಿಶ್ಶೇಷ್ಟರಾಗಿ, ನಿತ್ರಾಣರಾಗಿ ನಿಷ್ಪ್ರಾಣರಾಗಿ ಮರಣ ಹೊಂದಿದರು. ಮಯೂರೇಶನ ಹಸ್ತಸ್ಪರ್ಶದಿಂದ ಅವರೆಲ್ಲರೂ ಜನನ ಮುಪ್ಪು ಮರಣಗಳಿಂದ ಪಾರಾಗಿ ಮುಕ್ತರಾದರು. ಹೀಗೆ ಮಯೂರೇಶನು ತನ್ನ ಬಾಲ್ಯದ ಐದು ವರುಷಗಳನ್ನು ನಿಶ್ಚಿಂತನಾಗಿ ಕಳೆದನು.

ಒಂದು ದಿನ ಮಯೂರೇಶನು ಋಷಿಪುತ್ರರ ಜೊತೆಗೆ ಆಟವಾಡುತ್ತಿದ್ದನು. ಅವರೆಲ್ಲರೂ ಆಟವಾಡುತ್ತ ದೂರ ಹೋಗಿದ್ದರು. ಮಧ್ಯಾಹ್ನವಾಯಿತು. ಎಲ್ಲ ಬಾಲಕರು ಹಸಿದು ಕುಕ್ಷಾಂತರಾದರು. ಸಮೀಪದಲ್ಲಿಯೇ ಗೌತಮ ಋಷಿಯ ಆಶ್ರಮವಿದ್ದಿತು. ಋಷಿಪತ್ನಿ ಅಹಲ್ಯೆಯು ಅಡಿಗೆ ಮಾಡುತ್ತಿದ್ದಳು ಅವಳು ಬೇರೆ ಕೆಲಸಕ್ಕಾಗಿ ಹೊರಗೆ

**ಹೋಗಿದ್ದಳು.** ಆಗ ಮಯೂರೇಶನು ಪಾಕಶಾಲೆಯಲ್ಲಿ ಹೊಕ್ಕು ಅನ್ನಪಾತ್ರೆಯನ್ನು ತೆಗೆದುಕೊಂಡು ಹೊರಗೆ ಬಂದನು. ತನ್ನ ಗೆಳೆಯಂದಿರಿಗೆಲ್ಲ ಆಹಾರವನ್ನು ಹಂಚಿದನು. ತಾನು ಕೂಡ ಊಟ ಮಾಡಿದನು.

ಹೊರಗಿನಿಂದ ಬಂದ ಅಹಲ್ಯಾದೇವಿಯು ಅಡಿಗೆ ಮನೆಯಲ್ಲಿ ಅಡಿಗೆಯ ಪಾತ್ರೆಯೇ ಇರಲ್ಲ. ಬೇಯಿಸಿ ಇಟ್ಟ ಅನ್ನ ಪಾತ್ರೆ ಸಹಿತವಾಗಿ ಎಲ್ಲಿ ಹೋಯಿತು? ಯಾರು ಒಯ್ದರು? ಎಂದು ಅವಳು ಹುಡುಕತೊಡಗಿದಳು. ಆಗ ಗೌತಮ ಋಷಿಯು ತಾನು ಆಶ್ರಮದಲ್ಲಿ ಪ್ರವೇಶಿದರು. ಮಾಡಿಟ್ಟ ಅಡಿಗೆ ಎಲ್ಲವೂ ಮಾಯವಾಗಿದ್ದಿತು. ಅವರು ಹೊರಗೆ ಬಂದು ನೋಡಿದರು. ಮಡದಿ ಮಾಡಿದ ಅಡಿಗೆಯನ್ನೆಲ್ಲ ಬಾಲಕರು ಆನಂದದಿಂದ ಉಣ್ಣುತ್ತಿದ್ದರು. ಅದನ್ನು ಕಂಡು ಗೌತಮ ಮುನಿಗೆ ಕೋಪಬಂದಿತು. ಅವರು ಓಡಿಬಂದು ಗಣೇಶನ ಕೈ ಹಿಡಿದು ಖಾಲಿಯಾದ ಅನ್ನಪಾತ್ರೆಯೊಂದಿಗೆ ಪಾರ್ವತಿ ಇದ್ದಲ್ಲಿಗೆ ಬಂದು ಹೇಳಿದರು.

**ಗೌತಮ** :- ತಾಯಿ, ನಿನ್ನ ಮಗನ ಆಟ ನೋಡು. ನಮ್ಮ ಪೂಜೆಯಾಗಿಲ್ಲ. ನೈವೇದ್ಯ ಇಲ್ಲ. ವೈಶ್ವದೇವ ಇಲ್ಲ. ನಿನ್ನ ಮಗನು ಕಳ್ಳತನದಿಂದ ಬಂದು ಪಾಕಶಾಲೆಯಲ್ಲಿ ಹೊಕ್ಕು ಭೋಜನ ಪಾತ್ರೆಯನ್ನು ಎತ್ತಿಕೊಂಡು ಹೋಗಿದ್ದಾನೆ; ಗೆಳೆಯಂದಿರಿಗೆ ಉಣ್ಣಿಸಿದ್ದಾನೆ. ತಾನೂ ತಿಂದಿದ್ದಾನೆ. ಈ ಭೋಜನ ಪಾತ್ರೆ ನೋಡು, ಪೂರ್ಣ ಖಾಲಿಯಾಗಿದೆ. ನಾವು ಏನು ಮಾಡೋಣ. ನಿನ್ನ ಮಗನ ಸಲುವಾಗಿ ಈ ಅರಣ್ಯ ಆಶ್ರಮಗಳನ್ನು ಬಿಟ್ಟು ನಾವು ಬೇರೆ ಕಡೆ ಹೋಗೋಣವೆ.

**ಪಾರ್ವತಿ** :- ಮಹಾಮುನಿಗಳೇ, ಕ್ಷಮಿಸಿರಿ, ಈ ಮಗನು ಹುಟ್ಟಿದಾಗಿನಿಂದ ಹೀಗೆಯೇ ತ್ರಾಸು ಕೊಡುತ್ತಿದ್ದಾನೆ. ಇವನು ನೆಲದ ಮೇಲೆ ಕಾಲು ಇರಿಸಿದಾಗಿನಿಂದ ಒಂದಿಲ್ಲ, ಒಂದು ಅಸುರರ ಉಪದ್ರವವು ನಮಗೆ ತಪ್ಪದೆ ಬರುತ್ತಿದೆ. ನನಗೆ ಇದೊಂದು ದೊಡ್ಡ ಚಿಂತೆಯಾಗಿದೆ. ಈಗ ತಪಸ್ವಿಗಳ ಭೋಜನವನ್ನೂ ಕೂಡ ಕದಿಯಲೂ ಪ್ರಾರಂಭಿಸಿದ. ತಪಸ್ವಿಗಳೆ, ಇವನು ನನ್ನ ಮಗ. ಕಾರಣ ನೀವು ಇವನ ಮೇಲೆ ದಯದೋರಿರಿ. ಶಾಪವನ್ನು ಮಾತ್ರ ಕೊಡಬೇಡಿರಿ. ನಾನು ಇವನನ್ನು ಇಲ್ಲಿ ಕಟ್ಟಿಹಾಕುತ್ತೇನೆ.

ಹೀಗೆ ಹೇಳಿದ ಬಳಿಕ ಗೌತಮಮುನಿಯು ಮರಳಿ ಮನೆಗೆ ಹೋದರು. ಪಾರ್ವತಿಯು ಹೇರಂಬನನ್ನೂ ಹಗ್ಗದಿಂದ ಕಟ್ಟಿ ಮನೆಯಲ್ಲಿ ಕೂಡಿಸಿದಳು. ಗೌತಮ ಮುನಿ ಹೋಗುವಾಗ, ತಾಯಿ ಈ ಮಗುವನ್ನು ಕಟ್ಟಬೇಡ. ಹಗ್ಗದಿಂದ ಬಿಗಿಯಬೇಡ ಎಂದು ಹೇಳಿಹೋಗಿದ್ದರು. ಆದರೂ ತಾಯಿಯು ಕೇಳದೆ ಮಗನನ್ನು ತನ್ನ ಮಂದಿರದ ಒಳಗಡೆ ಬಂಧನ ಮಾಡಿಟ್ಟು ಹೊರಗೆ ಹೋದಳು.

ಅವಳು ಸಿಟ್ಟಿನಿಂದ ಮನೆ ಬಿಟ್ಟು ಹೊರಗೆ ಬಂದಾಗ ತನ್ನ ಮಗನಾದ ಗಣೇಶನು ತನ್ನ ಬಗಲಲ್ಲಿಯೇ ಕುಳಿತುಕೊಂಡಂತೆ ತೋರಿತು. ಇದೇನು ನನ್ನ ಭ್ರಾಂತಿಯೊ ನಿಜವೋ ಎಂದು ಅವಳು ಆಶ್ರಮದ ಅಂಗಳದಲ್ಲಿ ದೃಷ್ಟಿ ಹರಿಸಿದಳು. ಅಲ್ಲಿ ನೋಡುವಷ್ಟರಲ್ಲಿ ಮಯೂರೇಶನು ಮಕ್ಕಳೊಂದಿಗೆ ಆಟವಾಡುತ್ತಿದ್ದನು.

''ಇದೇನು ಚಮತ್ಕಾರ'' ಎಂದು ನುಡಿದು ಅವಳು ತನ್ನ ಮನೆಯ ಬಾಗಿಲು ತೆರೆದು ನೋಡಿದಳು ಕೈ ಕಾಲು ಕಟ್ಟಿ ಕೂಡಿಸಿದ ಮಗು ಅಲ್ಲಿಯೇ ಇದೆ. ಅವನು ಕಣ್ಣಿನಿಂದ ಧಾರಾಕಾರ

ನೀರು ಹೋಗುತ್ತಲಿದೆ. ಬೇಗ ಬಂಧನದಿಂದ ಬಿಡುಗಡೆ ಮಾಡು ಎಂದು ಅವನ ದೀನ ದೃಷ್ಟಿ ತಾಯಿಯನ್ನು ಕೇಳಿಕೊಳ್ಳುತ್ತಲಿದೆ. ಆದರೂ ಅವಳು ಮನಸ್ಸನ್ನು ಕಲ್ಲು ಮಾಡಿಕೊಂಡು ಮಗನಿಗೆ ಬುದ್ಧಿ ಕಲಿಸಬೇಕು. ಹೆದರಿಕೆ ಹಾಕಬೇಕೆಂದು ಅವಳು ಅವನ ಕಡೆಗೆ ಮತ್ತೊಮ್ಮೆ ನೋಡದೆ ಬಾಗಿಲು ಹಾಕಿಕೊಂಡು ಹೊರಗೆ ಬಂದಳು. ಅವಳು ತನ್ನ ಆಶ್ರಮ ಸಮೀಪದ ಋಷಿಪತ್ನಿಯರ ಮನೆಗಳ ಕಡೆಗೆ ಹೊರಟಳು. ದಾರಿಯಲ್ಲಿ ಹೇರಂಬನು ಗೆಳೆಯರ ಜೊತೆಗೆ ಆಟವಾಡುತ್ತಿದ್ದನು. ಆಗ ಅವಳು ಸ್ನೇಹಾತಿರೇಕದಿಂದ ''ಮಗು, ಬೇಗ ಬಾ ಹಸಿದಿರುವೆ. ಸ್ತನಪಾನ ಮಾಡು, ಎಂದು ಕೂಗಿಕರೆದಳು. ಆಗ ಮಕ್ಕಳು ''ತಾಯಿ, ಇಲ್ಲೆಲ್ಲಿ ಆ ಹೇರಂಬ! ಅವನನ್ನು ನೀನು ಮನೆಯಲ್ಲಿ ಕೈಕಾಲು ಕಟ್ಟಿಕೂಡಿಸಿಲ್ಲವೆ? ಎಂದು ಕೇಳಿದರು. ಆಗ ಪಾರ್ವತಿಯು ದ್ರುತಗತಿಯಿಂದ ಧಾವಿಸಿ ತನ್ನ ಆಶ್ರಮಕ್ಕೆ ಬಂದಳು. ಬಾಗಿಲು ತೆರೆದಳು. ಅಲ್ಲಿ ತನ್ನ ಪ್ರೀತಿಯ ಮಗು ಅನಾಥನಂತೆ ಅಳುತ್ತ, ಬಿಕ್ಕುತ್ತ ಮಲಗಿಕೊಂಡಿತ್ತು.

ಆಗ ತಾಯಿಯು ಧಾವಿಸಿಬಂದು ಅವನ ಬಂಧನವನ್ನು ಬಿಚ್ಚಿ, ಬಿಡಿಸಿ ತೊಡೆಯಮೇಲೆ ಮಲಗಿಸಿಕೊಂಡಳು ಬಿಗಿಯಾದ ಹಗ್ಗದಿಂದ ಕಟ್ಟಿದ್ದರಿಂದ ಕೂಸಿನ ಕೈಕಾಲುಗಳ ಮೇಲೆ ಕೆಂಪು ಬಾಸಣಿಕೆ ಮೂಡಿದ್ದವು. ತಾಯಿಗೆ ದುಃಖ ಉಕ್ಕಿ ಬಂದಿತು. ತನ್ನ ಕಠಿಣತೆ ಹಾಗೂ ಕ್ರೂರತೆಯ ಬಗ್ಗೆ ಅವಳಿಗೆ ಪಶ್ಚಾತ್ತಾಪವಾಯಿತು. ಅವಳು ಪ್ರೀತಿಯಿಂದ ಕೂಸಿನ ಕೈ ಕಾಲುಗಳ ಮೇಲೆ ಕೈಯಾಡಿಸಿದಳು. ತೊಡೆಯ ಮೇಲೆ ಮಲಗಿಸಿಕೊಂಡಳು. ವಾತ್ಸಲ್ಯದಿಂದ ಆ ಮಗುವಿಗೆ ಸ್ತನಪಾನ ಮಾಡಿಸಿದಳು.

ಅತ್ತ ಗೌತಮ ಮಹರ್ಷಿಯು ತಮ್ಮ ಆಶ್ರಮಕ್ಕೆ ಬಂದು ದೇವರ ಪೂಜೆಯನ್ನು ಪ್ರಾರಂಭಿಸಿದರು. ಅವರು ಪೂಜೆಗೆ ಇಟ್ಟುಕೊಂಡ ಎಲ್ಲ ದೇವತಾವಿಗ್ರಹಗಳು ಗಣೇಶನ ವಿಗ್ರಹವಾಗಿಯೇ ಕಂಡು ಬಂದವು. ಮುನಿಗೆ ಆಶ್ಚರ್ಯವಾಯಿತು. ಅದರ ಜೊತೆಗೆ ಪಶ್ಚಾತ್ತಾಪವೂ ಆಯಿತು. ಅವರು ತಮ್ಮ ಹೆಂಡತಿಯಾದ ಅಹಲ್ಯಾದೇವಿಯನ್ನು ಕರೆದು ಹೇಳಿದರು,

**ಗೌತಮ :-** ನಾನು ಎಂಥ ಬುದ್ಧಿ ಗೇಡಿ ! ಖಾಲಿ ಅನ್ನದ ಪಾತ್ರೆಯನ್ನು ಒಯ್ದು ಪಾರ್ವತಿಗೆ ತೋರಿಸಿ ನಿನ್ನ ಮಗ ನಮ್ಮ ಅನ್ನವನ್ನು ಕದ್ದಿದ್ದಾನೆ ಎಂದು ದೂರು ಕೊಟ್ಟೆ ಅವಳು ಪರಾತ್ಪರ ದೇವತಾ ಸ್ವರೂಪಿಯಾದ ಮಗನನ್ನು ಬೈದಳು; ಧಿಕ್ಕರಿಸಿದಳು. ಬಿರುಸಾದ ಹಗ್ಗದಿಂದ ಅವನ ಕೈ ಕಾಲು ಕಟ್ಟಿದಳು. ಅತ್ಯಲ್ಪವಾದ ಪತ್ರಪುಷ್ಪಗಳಿಂದ ತೃಪ್ತನಾಗುವ ಆ ಮಹಾಪ್ರಭು ತಾನಾಗಿಯೇ ಮಕ್ಕಳೊಂದಿಗೆ ಬಂದು ನಮ್ಮ ಮನೆಯ ಅನ್ನವನ್ನು ಉಂಡ. ಇದು ಎಂತಹ ನನ್ನ ಸೌಭಾಗ್ಯ. ಇದನ್ನು ಅವನ ಮಾಯೆಯಿಂದ ಮೋಹಿತನಾದರೂ ನಾನು ಮೊದಲು ತಿಳಿಯಲಿಲ್ಲ. ಮತಿಭ್ರಷ್ಟನಾದ ನಾನು ಆ ಭಗವಂತನಿಗೆ ಮಹಾಪರಾಧ ಮಾಡಿದೆ ಆದರೂ ಅವನು ನನ್ನನ್ನು ಕ್ಷಮಿಸಲಿ.''

ಹೀಗೆ ಹೇಳಿ ಮಹರ್ಷಿಗಳು ಪಶ್ಚಾತ್ತಾಗಿ ತಪ್ತರಾದ ಅಹಲ್ಯೆಯೊಂದಿಗೆ ಮಯೂರೇಶನ ಸಂತತ ಚಿಂತನ ಧ್ಯಾನ, ಭಜನ ಅರ್ಚನ ಪೂಜನಾದಿಗಳಲ್ಲಿ ನಿರಂತರ ನಿಮಗ್ನರಾದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಇಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

ಮಯೂರೇಶನು ಆರನೇ ವರುಷದಲ್ಲಿ ಕಾಲು ಇರಿಸಿದನು. ಒಂದು ದಿನ ಮಯೂರೇಶನು ಬಾಲಕರ ಜೊತೆಗೆ ಆಟವಾಡಲು ಹೋಗಿದ್ದನು. ಆಗ ವಿಶ್ವಕರ್ಮನು ಅಲ್ಲಿಗೆ ಬಂದು ಪಾರ್ವತೀ ದೇವಿಗೆ ನಮಸ್ಕಾರ ಮಾಡಿ ನಿಂತು ಕೊಂಡನು. ಅಷ್ಟರಲ್ಲಿ ಮಯೂರೇಶನು ಒಳಗೆ ಬಂದನು. ಆಗ ವಿಶ್ವಕರ್ಮನು ವಿನಾಯಕನಿಗೆ ನಮಸ್ಕರಿಸಿ, ''ಪ್ರಭು, ನೀನು ಈ ಪಾರ್ವತಿ ಪರಮೇಶ್ವರ ಆಶ್ರಮದಲ್ಲಿ ಪ್ರಕಟವಾಗಿರುವೆ ಎಂಬ ಸುದ್ದಿಯನ್ನು ಕೇಳಿ ನಿನ್ನ ದರ್ಶನ ಮಾಡಿಕೊಂಡು ಹೋಗಬೇಕೆಂದು ಬಂದಿದ್ದೇನೆ'' ಎಂದು ಹೇಳಿದನು.

**ಗಣೇಶ** :- ನೀನು ಅಷ್ಟು ದೂರದಿಂದ ನನ್ನ ದರ್ಶನಕ್ಕಾಗಿ ಬಂದಿರುವೆಯಲ್ಲವೆ ? ನನಗಾಗಿ ಯಾವ ಉಪಹಾರವನ್ನು ತಂದಿರುವೆ ?

**ವಿಶ್ವಕರ್ಮ** :- ಪ್ರಭು, ನಾನು ನಿನಗಾಗಿ ಶತ್ರುಗಳ ಸಂಹಾರಕ್ಕಾಗಿ ಉಪಯೋಗವಾಗುವ ತೀಕ್ಷ್ಣವಾದ ಅಂಕುಶ. ಪರಶು ಪಾಶ ಮತ್ತು ಪದ್ಮ ನಾಲ್ಕು ಉಪಹಾರ ವಸ್ತುಗಳನ್ನು ತಂದಿದ್ದೇನೆ. ಇಕೋ ಇದನ್ನು ನೋಡು ಎಂದು ಹೇಳಿ ಅವುಗಳನ್ನು ಮಯೂರೇಶನ ಮುಂದೆ ಇಟ್ಟನು ಮತ್ತು ವಿಶ್ವಕರ್ಮನು ಆ ಅಸ್ತ್ರಗಳ ಉಪಯೋಗ ಮಾಡುವ ವಿದ್ಯೆಯನ್ನು ಕೂಡ ಹೇರಂಬನಿಗೆ ಕಲಿಸಿಕೊಟ್ಟನು.

ಮಯೂರೇಶನು ಸ್ವಲ್ಪ ಸಮಯದಲ್ಲಿ ಆ ಎಲ್ಲ ಶಸ್ತ್ರಗಳ ಪ್ರಯೋಗ ವಿದ್ಯೆಯನ್ನು ಅಭ್ಯಾಸಮಾಡಿ ತನ್ನ ಕರಗತ ಮಾಡಿಕೊಂಡನು. ಈಗ ಅವನು ಎಲ್ಲಿಯೇ ಹೊರಗೆ ಹೋದರೂ ಆ ಶಸ್ತ್ರ ಸಹಿತನಾಗಿಯೇ ಹೋಗುತ್ತಿದ್ದನು.

ಒಂದಾದನೊಂದು ದಿನ ಮಯೂರೇಶನು ತನ ಮಿತ್ರ ಮಂಡಳಿಯ ಜೊತೆಗೆ ಕ್ರೀಡಾ ಮಗ್ನನಾಗಿದ್ದನು. ವೃಕ ಎಂಬ ಹೆಸರಿನ ಮಹಾಬಲಿಷ್ಠನಾದ ಅಷ್ಟೇ ದುಷ್ಟನಾದ ಅದಕ್ಕಿಂದ ದರ್ಪಿಷ್ಠನಾದ ಒಬ್ಬ ದೈತ್ಯನು ಅಲ್ಲಿಗೆ ಬಂದನು. ಅವನ ಭೀಕರ ಆಕಾರವನ್ನು ನೋಡಿಯೇ ಮುನಿಪುತ್ರರೆಲ್ಲರೂ ಓಡತೊಡಗಿದರು. ವೃಕಾಸುರನು ಗಣೇಶನ ಮೇಲೆ ಒಮ್ಮೆಲೆ ಎರಗಿದನು. ಕೂಡಲೇ ಗಣೇಶನು ತನ್ನ ತೀಕ್ಷ್ಣವಾದ ಅಂಕುಶದಿಂದ ಆ ವೃಕಾಸುರನನ್ನು ಚುಚ್ಚಿದನು. ಮತ್ತೆ ಮತ್ತೆ ಚುಚ್ಚಿಚುಚ್ಚಿ ಅವನನ್ನು ಕೊಂದು ಹಾಕಿದನು. ಕೆಟ್ಟದನಿಯಿಂದ ಚೀರುತ್ತ ಆ ದುಷ್ಟರಾಕ್ಷಸು ರಕ್ತವನ್ನು ಕಕ್ಕುತ್ತ ನೆಲದ ಮೇಲೆ ಸೆಟೆದು ಬಿದ್ದನು. ಅರೆಚಣದಲ್ಲಿ ಮೃತ್ಯುಮುಖದಲ್ಲಿ ಪ್ರವೇಶ ಮಾಡಿದನು.

ಭಯಾನಕನಾದ ವೃಕಾಸುರನನ್ನು ವಧಿಸಿದ್ದರಿಂದ ಋಷಿಗಳೆಲ್ಲರೂ ಪ್ರಸನ್ನರಾಗಿ ಗಣೇಶನನ್ನು ಪ್ರಶಂಸಿದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ವೃಕಾಸುರ ಸಂಹಾರ ಎಂಬ*
*ಇಪ್ಪತ್ತೈದನೇಯ ಅಧ್ಯಾಯ ಮುಗಿದುದು*

# ಕಾಲ ಕೃತಾಂತರ ವಧ ಗಣೇಶನ ಉಪನಯನ

## ಅಧ್ಯಾಯ - ೨೬

ಮಯೂರೇಶನಿಗೆ ೭ನೇ ವರ್ಷ ಪ್ರಾರಂಭವಾಯಿತು. ದಾಕ್ಷಾಯಣಿಯು ಪರಮೇಶ್ವರನಿಗೆ ತನ್ನ ಮಗನಾದ ಮಯೂರೇಶನ ಚೌಲ ಉಪನಯನಾದಿ ಸಂಸ್ಕಾರಗಳನ್ನು ಮಾಡಬೇಕೆಂದು ಬಿನ್ನವಿಸಿಕೊಂಡಳು. ಅವಳ ಅಪೇಕ್ಷೆಯಂತೆ ಮಹಾದೇವನು ಗೌತಮಾದಿ ಋಷಿಗಳನ್ನು ಕರೆಸಿದನು. ಮಯೂರೇಶನ ಉಪನಯನದ ಸಿದ್ಧತೆಯು ಪ್ರಾರಂಭವಾಯಿತು. ಆ ಸಮಾರಂಭಕ್ಕೆ ಎಲ್ಲ ದೇವತೆಗಳು ೮೮೦೦೦ ಋಷಿಗಳು ಯಕ್ಷರು ಕಿನ್ನರರು ಉತ್ಸಾಹದಿಂದ ತ್ರಿಸಂಧ್ಯಾಕ್ಷೇತ್ರದಲ್ಲಿರುವ ಶಿವಸದನಕ್ಕೆ ಬಂದರು. ಅತ್ಯಂತ ವಿಸ್ತೃತವಾದ ಭವ್ಯಮಂಟಪವು ಸಿದ್ಧವಾಯಿತು. ಮಂಗಳವಾದ್ಯಗಳು ಹಾಗೂ ಮಧುರಮಂಗಳ ಗೀತೆಗಳು ಮಂಟಪದ ಮಧ್ಯದಿಂದ ಹೊಮ್ಮಿ ದಿಗಂತವನ್ನೆಲ್ಲ ಮಧುರನಾದ ತರಂಗದಿಂದ ಮುಖರಿತವನ್ನಾಗಿ ಮಾಡಿದವು. ಮಯೂರೇಶನ ಚೌಲಕರ್ಮವು ಯಥಾಸಾಂಗವಾಗಿ ನೆರವೇರಿತು. ಮರುದಿನ ಪ್ರಾತಃಕಾಲದಲ್ಲಿ ಮಯೂರೇಶನು ಮಂಗಲಸ್ನಾನ ಮಾಡಿದನು.

ಉಪನಯನದ ಶಾಸ್ತ್ರೋಕ್ತ ವಿಧಾನಕ್ಕಾಗಿ ಮಯೂರೇಶನು ಸಿದ್ಧನಾಗಿ ಮಂಗಳಸ್ನಾನ ಮಾಡಿದನು. ಪರಿಶುದ್ಧವಾದ ವಸ್ತ್ರಗಳನ್ನು ಧರಿಸಿದನು. ಋಷಿಮುನಿಗಳು ವೇದಮಂತ್ರಗಳನ್ನು ಪಠಿಸತೊಡಗಿದರು.

ಈ ವೇಳೆಯನ್ನು ಸಾಧಿಸಿ ಕೃತಾಂತ, ಮತ್ತು ಕಾಲ ಎಂಬ ಇಬ್ಬರು ಮದೋನ್ಮತ್ತರಾದ ದೈತ್ಯರು ಮದವೇರಿದ ಎರಡು ಆನೆಗಳ ರೂಪದಲ್ಲಿ ಅಲ್ಲಿಗೆ ಬಂದರು. ಭಯಾನಕ ಶರೀರದ ಆ ಎರಡು ಮದ್ದಾನೆಗಳು ಉಪನಯನಕ್ಕಾಗಿ ನೆರೆದ ಮಾನನೀಯ ಮುನಿ ಮನುಜ ಮಹರ್ಷಿ ಮಹಾರಾಜನರನ್ನೆಲ್ಲ ಹಿಂಸಿಸತೊಡಗಿದರು. ಆ ಶಿವಗಣದವರು ಆ ದುಷ್ಟ ಆನೆರೂಪದ ದೈತ್ಯರನ್ನು ಹೊಡೆದೋಡಿಸಲು ಶತಪ್ರಯತ್ನ ಮಾಡಿದರು. ಆದರೆ ಬಲಿಷ್ಠರಾದ ಆ ದುಷ್ಟ ದೈತ್ಯಾಧಮರ ಎದುರು ಶಿವಗಣಾಧೀಶರ ಆಟ ನಡೆಯಲಿಲ್ಲ. ಅವರನ್ನೆಲ್ಲ ಹೊಡೆದೋಡಿಸಿ ಆ ದೈತ್ಯರು ಸರ್ವಸಂಹಾರಗಳನ್ನು ಮಾಡುತ್ತ ಉಪನಯನದ ಮಂಟಪದ ಸಮೀಪಕ್ಕೆ ಬಂದು ಮಂಟಪದ ಕಂಬ, ತಳಿರು ತೋರಣ ಮೊದಲಾದವುಗಳನ್ನೆಲ್ಲ ಕಿತ್ತಿ ಬಿಸಾಡಿದರು. ಅವರ ಈ ದಾಳಿಯನ್ನು ಕಂಡ ಋಷಿಕುಮಾರರು, ಋಷಿಪತ್ನಿಯರು ದೇವತೆಗಳು ಹೆದರಿ ಹೌಹಾರಿ ಓಡತೊಡಗಿದರು.

ಈ ದೃಶ್ಯವನ್ನು ದೂರದಿಂದಲೇ ನೋಡಿ ವಟುವಾದ ಗುಣೇಶನು ಎದ್ದು ನಿಂತನು. ತನ್ನ ಮೇಲೆ ಏರಿಬರುವ ಒಂದು ಭಯಂಕರ ಆನೆಯ ಸೊಂಡೆಯ ಮೇಲೆ ಮುಷ್ಟಿಪ್ರಹಾರ ಮಾಡಿದನು. ವಜ್ರಾಘಾತಕ್ಕಿಂತ ಭೀಕರವಾಗಿದ್ದಿತು ಆ ಮುಷ್ಟಿಪ್ರಹಾರ. ಅವನ ಭೀಕರ ಪ್ರಹಾರದ ಹೊಡೆತದಿಂದ ತತ್ತರಿಸಿದ ಹೋದ ಆನೆಯು ಘೀಳಿಡುತ್ತ ದೂರ ಸರಿಯಿತು. ಆಗ ಗಣೇಶನು ಎರಡನೇ ಆನೆಯ ಗಂಡಸ್ಥಲದ ಮೇಲೆ ತನ್ನ .ಭೀಕರವಾದ ವಜ್ರ ಕಠೋರವಾದ ಮುಷ್ಟಿಯಿಂದ ಘೋರಪ್ರಹಾರ ಮಾಡಿದನು. ಆಗ ಆ ಮದ್ದಾನೆಯು,

ಮಯೂರೇಶನು ಆರನೇ ವರುಷದಲ್ಲಿ ಕಾಲು ಇರಿಸಿದನು. ಒಂದು ದಿನ ಮಯೂರೇಶನು ಬಾಲಕರ ಜೊತೆಗೆ ಆಟವಾಡಲು ಹೋಗಿದ್ದನು. ಆಗ ವಿಶ್ವಕರ್ಮನು ಅಲ್ಲಿಗೆ ಬಂದು ಪಾರ್ವತೀ ದೇವಿಗೆ ನಮಸ್ಕಾರ ಮಾಡಿ ನಿಂತು ಕೊಂಡನು. ಅಷ್ಟರಲ್ಲಿ ಮಯೂರೇಶನು ಬಳಿಗೆ ಬಂದನು. ಆಗ ವಿಶ್ವಕರ್ಮನು ವಿನಾಯಕನಿಗೆ ನಮಸ್ಕರಿಸಿ, ''ಪ್ರಭು, ನೀನು ಈ ಪಾರ್ವತಿ ಪರಮೇಶ್ವರ ಆಶ್ರಮದಲ್ಲಿ ಪ್ರಕಟವಾಗಿರುವೆ ಎಂಬ ಸುದ್ಧಿಯನ್ನು ಕೇಳಿ ನಿನ್ನ ದರ್ಶನ ಮಾಡಿಕೊಂಡು ಹೋಗಬೇಕೆಂದು ಬಂದಿದ್ದೇನೆ'' ಎಂದು ಹೇಳಿದನು.

**ಗಣೇಶ** :- ನೀನು ಅಷ್ಟು ದೂರದಿಂದ ನನ್ನ ದರ್ಶನಕ್ಕಾಗಿ ಬಂದಿರುವೆಯಲ್ಲವೆ ? ನನಗಾಗಿ ಯಾವ ಉಪಹಾರವನ್ನು ತಂದಿರುವೆ ?

**ವಿಶ್ವಕರ್ಮ** :- ಪ್ರಭು, ನಾನು ನಿನಗಾಗಿ ಶತ್ರುಗಳ ಸಂಹಾರಕ್ಕಾಗಿ ಉಪಯೋಗವಾಗುವ ತೀಕ್ಷ್ಣವಾದ ಅಂಕುಶ. ಪರಶು ಪಾಶ ಮತ್ತು ಪದ್ಮ ನಾಲ್ಕು ಉಪಹಾರ ವಸ್ತುಗಳನ್ನು ತಂದಿದ್ದೇನೆ. ಇಕೋ ಇದನ್ನು ನೋಡು ಎಂದು ಹೇಳಿ ಅವುಗಳನ್ನು ಮಯೂರೇಶನ ಮುಂದೆ ಇಟ್ಟನು ಮತ್ತು ವಿಶ್ವಕರ್ಮನು ಆ ಅಸ್ತ್ರಗಳ ಉಪಯೋಗ ಮಾಡುವ ವಿದ್ಯೆಯನ್ನು ಕೂಡ ಹೇರಂಬನಿಗೆ ಕಲಿಸಿಕೊಟ್ಟನು.

ಮಯೂರೇಶನು ಸ್ವಲ್ಪ ಸಮಯದಲ್ಲಿ ಆ ಎಲ್ಲ ಶಸ್ತ್ರಗಳ ಪ್ರಯೋಗ ವಿದ್ಯೆಯನ್ನು ಅಭ್ಯಾಸಮಾಡಿ ತನ್ನ ಕರಗತ ಮಾಡಿಕೊಂಡನು. ಈಗ ಅವನು ಎಲ್ಲಿಯೇ ಹೊರಗೆ ಹೋದರೂ ಆ ಶಸ್ತ್ರ ಸಹಿತನಾಗಿಯೇ ಹೋಗುತ್ತಿದ್ದನು.

ಒಂದಾದನೊಂದು ದಿನ ಮಯೂರೇಶನು ತನ ಮಿತ್ರ ಮಂಡಳಿಯ ಜೊತೆಗೆ ಕ್ರೀಡಾ ಮಗ್ನನಾಗಿದ್ದನು. ವೃಕ ಎಂಬ ಹೆಸರಿನ ಮಹಾಬಲಿಷ್ಠನಾದ ಅಷ್ಟೇ ದುಷ್ಟನಾದ ಅದಕ್ಕಿಂದ ದರ್ಪಿಷ್ಠನಾದ ಒಬ್ಬ ದೈತ್ಯನು ಅಲ್ಲಿಗೆ ಬಂದನು. ಅವನ ಭೀಕರ ಆಕಾರವನ್ನು ನೋಡಿಯೇ ಮುನಿಪುತ್ರರೆಲ್ಲರೂ ಓಡತೊಡಗಿದರು. ವೃಕಾಸುರನು ಗಣೇಶನ ಮೇಲೆ ಒಮ್ಮೆಲೆ ಎರಗಿದನು. ಕೂಡಲೇ ಗಣೇಶನು ತನ್ನ ತೀಕ್ಷ್ಣವಾದ ಅಂಕುಶದಿಂದ ಆ ವೃಕಾಸುರನನ್ನು ಚುಚ್ಚಿದನು. ಮತ್ತೆ ಮತ್ತೆ ಚುಚ್ಚಿಚುಚ್ಚಿ ಅವನನ್ನು ಕೊಂದು ಹಾಕಿದನು. ಕೆಟ್ಟದನಿಯಿಂದ ಚೀರುತ್ತ ಆ ದುಷ್ಟರಾಕ್ಷನು ರಕ್ತವನ್ನು ಕಕ್ಕುತ್ತ ನೆಲದ ಮೇಲೆ ಸೆಟೆದು ಬಿದ್ದನು. ಅರೆಚಣದಲ್ಲಿ ಮೃತ್ಯುಮುಖದಲ್ಲಿ ಪ್ರವೇಶ ಮಾಡಿದನು.

ಭಯಾನಕನಾದ ವೃಕಾಸುರನನ್ನು ವಧಿಸಿದ್ದರಿಂದ ಋಷಿಗಳೆಲ್ಲರೂ ಪ್ರಸನ್ನರಾಗಿ ಗಣೇಶನನ್ನು ಪ್ರಶಂಸಿದರು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ವೃಕಾಸುರ ಸಂಹಾರ ಎಂಬ ಇಪ್ಪತ್ತೈದನೇಯ ಅಧ್ಯಾಯ ಮುಗಿದುದು*

## ಕಾಲ ಕೃತಾಂತರ ವಧ ಗಣೇಶನ ಉಪನಯನ | ಅಧ್ಯಾಯ - ೨೬

ಮಯೂರೇಶನಿಗೆ ೭ನೇ ವರ್ಷ ಪ್ರಾರಂಭವಾಯಿತು. ದಾಕ್ಷಾಯಣಿಯು ಪರಮೇಶ್ವರನಿಗೆ ತನ್ನ ಮಗನಾದ ಮಯೂರೇಶನ ಚೌಲ ಉಪನಯನಾದಿ ಸಂಸ್ಕಾರಗಳನ್ನು ಮಾಡಬೇಕೆಂದು ಬಿನ್ನವಿಸಿಕೊಂಡಳು. ಅವಳ ಅಪೇಕ್ಷೆಯಂತೆ ಮಹಾದೇವನು ಗೌತಮಾದಿ ಋಷಿಗಳನ್ನು ಕರೆಸಿದನು. ಮಯೂರೇಶನ ಉಪನಯನದ ಸಿದ್ಧತೆಯು ಪ್ರಾರಂಭವಾಯಿತು. ಆ ಸಮಾರಂಭಕ್ಕೆ ಎಲ್ಲ ದೇವತೆಗಳು ೮೮೦೦೦ ಋಷಿಗಳು ಯಕ್ಷರು ಕಿನ್ನರರು ಉತ್ಸಾಹದಿಂದ ತ್ರಿಸಂಧ್ಯಾಕ್ಷೇತ್ರದಲ್ಲಿರುವ ಶಿವಸದನಕ್ಕೆ ಬಂದರು. ಅತ್ಯಂತ ವಿಸ್ತೃತವಾದ ಭವ್ಯಮಂಟಪವು ಸಿದ್ಧವಾಯಿತು. ಮಂಗಳವಾದ್ಯಗಳು ಹಾಗೂ ಮಧುರಮಂಗಳ ಗೀತೆಗಳು ಮಂಟಪದ ಮಧ್ಯದಿಂದ ಹೊಮ್ಮಿ ದಿಗಂತವನ್ನೆಲ್ಲ ಮಧುರನಾದ ತರಂಗದಿಂದ ಮುಖರಿತವನ್ನಾಗಿ ಮಾಡಿದವು. ಮಯೂರೇಶನ ಚೌಲಕರ್ಮವು ಯಥಾಸಾಂಗವಾಗಿ ನೆರವೇರಿತು. ಮರುದಿನ ಪ್ರಾತಃಕಾಲದಲ್ಲಿ ಮಯೂರೇಶನು ಮಂಗಲಸ್ನಾನ ಮಾಡಿದನು.

ಉಪನಯನದ ಶಾಸ್ತ್ರೋಕ್ತ ವಿಧಾನಕ್ಕಾಗಿ ಮಯೂರೇಶನು ಸಿದ್ಧನಾಗಿ ಮಂಗಳಸ್ನಾನ ಮಾಡಿದನು. ಪರಿಶುದ್ಧವಾದ ವಸ್ತ್ರಗಳನ್ನು ಧರಿಸಿದನು. ಋಷಿಮುನಿಗಳು ವೇದಮಂತ್ರಗಳನ್ನು ಪಠಿಸತೊಡಗಿದರು.

ಈ ವೇಳೆಯನ್ನು ಸಾಧಿಸಿ ಕೃತಾಂತ, ಮತ್ತು ಕಾಲ ಎಂಬ ಇಬ್ಬರು ಮದೋನ್ಮತ್ತರಾದ ದೈತ್ಯರು ಮದವೇರಿದ ಎರಡು ಆನೆಗಳ ರೂಪದಲ್ಲಿ ಅಲ್ಲಿಗೆ ಬಂದರು. ಭಯಾನಕ ಶರೀರದ ಆ ಎರಡು ಮದ್ದಾನೆಗಳು ಉಪನಯನಕ್ಕಾಗಿ ನೆರೆದ ಮಾನನೀಯ ಮುನಿ ಮನುಜ ಮಹರ್ಷಿ ಮಹಾರಾಜನರನ್ನೆಲ್ಲ ಹಿಂಸಿಸತೊಡಗಿದರು. ಆ ಶಿವಗಣದವರು ಆ ದುಷ್ಟ ಆನೆರೂಪದ ದೈತ್ಯರನ್ನು ಹೊಡೆದೋಡಿಸಲು ಶತಪ್ರಯತ್ನ ಮಾಡಿದರು. ಆದರೆ ಬಲಿಷ್ಠರಾದ ಆ ದುಷ್ಟ ದೈತ್ಯಾಧಮರ ಎದುರು ಶಿವಗಣಾಧೀಶರ ಆಟ ನಡೆಯಲಿಲ್ಲ. ಅವರನ್ನೆಲ್ಲ ಹೊಡೆದೋಡಿಸಿ ಆ ದೈತ್ಯರು ಸರ್ವಸಂಹಾರಗಳನ್ನು ಮಾಡುತ್ತ ಉಪನಯನದ ಮಂಟಪದ ಸಮೀಪಕ್ಕೆ ಬಂದು ಮಂಟಪದ ಕಂಬ, ತಳಿರು ತೋರಣ ಮೊದಲಾದವುಗಳನ್ನೆಲ್ಲ ಕಿತ್ತಿ ಬಿಸಾಡಿದರು. ಅವರ ಈ ದಾಳಿಯನ್ನು ಕಂಡ ಋಷಿಕುಮಾರರು, ಋಷಿಪತ್ನಿಯರು ದೇವತೆಗಳು ಹೆದರಿ ಹೌಹಾರಿ ಓಡತೊಡಗಿದರು.

ಈ ದೃಶ್ಯವನ್ನು ದೂರದಿಂದಲೇ ನೋಡಿ ವಟುವಾದ ಗುಣೇಶನು ಎದ್ದು ನಿಂತನು. ತನ್ನ ಮೇಲೆ ಏರಿಬರುವ ಒಂದು ಭಯಂಕರ ಆನೆಯ ಸೊಂಡೆಯ ಮೇಲೆ ಮುಷ್ಟಿಪ್ರಹಾರ ಮಾಡಿದನು. ವಜ್ರಾಘಾತಕ್ಕಿಂತ ಭೀಕರವಾಗಿದ್ದಿತು ಆ ಮುಷ್ಟಿಪ್ರಹಾರ. ಅವನ ಭೀಕರ ಪ್ರಹಾರದ ಹೊಡೆತದಿಂದ ತತ್ತರಿಸಿದ ಹೋದ ಆನೆಯು ಘೀಳಿಡುತ್ತ ದೂರ ಸರಿಯಿತು. ಆಗ ಗಣೇಶನು ಎರಡನೇ ಆನೆಯ ಗಂಡಸ್ಥಲದ ಮೇಲೆ ತನ್ನ .ಭೀಕರವಾದ ವಜ್ರ ಕಠೋರವಾದ ಮುಷ್ಟಿಯಿಂದ ಘೋರಪ್ರಹಾರ ಮಾಡಿದನು. ಆಗ ಆ ಮದ್ದಾನೆಯು,

ಭಯಂಕರವಾದ ಚೀತ್ಕಾರದಿಂದ ಘೋರತರವಾಗಿ ಘೀಳಿಡುತ್ತ ಹಿಂದೆ ಸರಿಯಿತು. ಮಯೂರೇಶನು ಆ ಎರಡೂ ದುಷ್ಟ ಗಜಾಸುರರ ಮೇಲೆ ಬಿಟ್ಟು ಬಿಡದೆ ಪೆಟ್ಟುಕೊಡಹತ್ತಿದನು ಮತ್ತು ಕಾಲಿನಿಂದ ಒದ್ದು, ಕೈಯಿಂದ ಕುಟ್ಟಿ, ಮುಷ್ಠಿಯಿಂದ ಜಜ್ಜಿ, ಆ ಎರಡೂ ಮದ್ದಾನೆಗಳನ್ನು ಕೊಂದು ಹಾಕಿದನು. ಆ ಎರಡೂ ದೈತ್ಯಗಜಗಳ ವಿರಾಟ್ ದೇಹವನ್ನು ಖಂಡತುಂಡ ಮಾಡಿ ದೂರ ಬೀಸಿ ಒಗೆದನು.

ಅದನ್ನು ನೋಡಿ ಎಲ್ಲ ಋಷಿ ಮುನಿಗಳು ಸಂತೋಷದಿಂದ ನೆಮ್ಮದಿಯ ನಿಟ್ಟುಸಿರು ಬಿಟ್ಟು ಅವನನ್ನು ಸ್ತೋತ್ರ ಮಾಡಿದರು.

ಅನಂತರ ಮಯೂರೇಶನ ಉಪನಯನ ಸಮಾರಂಭವು ವಿಧಿಪೂರ್ವಕವಾಗಿ ನೆರವೇರಿತು. ಅವನಿಗೆ ಯಜ್ಞೋಪವೀತಗಳು ಕೊಡಲ್ಪಟ್ಟವು. ವಿಧಿಪೂರ್ವಕವಾಗಿ ಹೋಮ, ಹವನವಾದ ಬಳಿಕ ಗಾಯಿತ್ರಿ ಮಂತ್ರದ ಉಪದೇಶವಾಯಿತು.

ಅನಂತರ ಮೊಟ್ಟಮೊದಲು ಪಾರ್ವತಿಯು ತನ್ನ ಮಗನಾದ ಗಣೇಶನಿಗೆ ಮಾತೃ ಭಿಕ್ಷೆಯನ್ನು ಹಾಕಿದಳು. ಮಾತೃಭಿಕ್ಷೆಯಲ್ಲಿ ಎರಡುವಸ್ತ್ರ, ಮುತ್ತಿನ ಹಾರ, ಮೋದಕ ಮೊದಲಾದವುಗಳನ್ನು ನೀಡಿದಳು. ಅನಂತರ ಮಹಾದೇವನು ತ್ರಿಶೂಲ ಫಾಲಚಂದ್ರನನ್ನು ನೀಡಿ **''ಶೂಲಪಾಣಿ ಭಾಲಚಂದ್ರ,''** ಎಂದು ಕರೆದನು ಶ್ರೀ ಹರಿಯು ಚಕ್ರವನ್ನು ಕೊಟ್ಟು **''ಶೋಚಿಷ್ಕೇಶ** ಎಂದು ಅವನನ್ನು ಸಂಬೋಧಿಸಿದನು. ಇಂದ್ರನು ತನ್ನ ಚಿಂತಾಮಣಿ ರತ್ನವನ್ನು ಅವನ ಕೊರಳಲ್ಲಿ ಹಾಕಿ **''ಚಿಂತಾಮಣಿ''** ಎಂಬ ಹೆಸರಿಟ್ಟನು. ಬ್ರಹ್ಮದೇವನು ಅವನ ಪೂಜೆಯನ್ನು ಮಾಡಿ ಕಮಲವನ್ನು ನೀಡಿ, **''ವಿಧಾತಾ''** ಎಂದು ಹೆಸರಿಸಿದನು. ಅನಂತರ ಎಲ್ಲ ದೇವತೆಗಳು ಅವನಿಗೆ ತಮ್ಮ ಯೋಗ್ಯತಾನುಸಾರ ಕಾಣಿಕೆಗಳನ್ನು ನೀಡಿ ಪೂಜೆ ಮಾಡಿದರು. ತಾಯಿ ತಂದೆಗಳಾದ ಅದಿತಿಕಶ್ಯಪರು ಕೂಡ ಅವನನ್ನು ಪ್ರೀತಿಯಿಂದ ಪೂಜಿಸಿದರು.

ಹೀಗೆ ಎಲ್ಲ ಋಷಿ, ಮುನಿ, ದೇವ, ಯಕ್ಷ, ಕಿನ್ನರ ಮಾನವ ಮೊದಲಾದವರೆಲ್ಲರೂ ಮಯೂರೇಶನಿಗೆ ವಂದನೆ ಮಾಡಿ, ಪಾರ್ವತಿ ಪರಮೇಶ್ವರರ ಅಪ್ಪಣೆ ಪಡೆದು, ತಮ್ಮ ತಮ್ಮ ಸ್ಥಾನಕ್ಕೆ ಪ್ರಯಾಣ ಬೆಳೆಸಿದರು.

ಉಪಯನನದ ನಂತರ ಗಣೇಶನು ವೇದಾಧ್ಯಯನವನ್ನು ಸಾಂಗವಾಗಿ ಮಾಡಿ ಮುಗಿಸಿದನು. ಅವನ ಮಧುರ ಕಂಠದ ವೇದ ಮಂತ್ರಗಳ ಪಠಣವನ್ನು ಪ್ರಮಥಾದಿ ಗಣಸಹಿತರಾದ ಮಹಾದೇವರೇ ಮೊದಲಾದ ದೇವಾಧಿದೇವತೆಗಳು ಋಷಿಮುನಿಗಳೆಲ್ಲರೂ ಶ್ರವಣಮಾಡಿ ಆನಂದ ಮಗ್ನರಾಗುತ್ತಿದ್ದರು. ಅವನ ವೇದಗಾನದ ಅಮೃತಮಯ ವಾತಾವರಣದಲ್ಲಿ ಪ್ರಾಣಿಮಾತ್ರರೆಲ್ಲರೂ ಆನಂದ ಸಮುದ್ರದಲ್ಲಿ ಮುಳುಗಿ ತನ್ಮಯರಾಗುತ್ತಿದ್ದರು. ಇಂಥ ಮಧುರ ಮುಗ್ಧವಾದ ವೇದಗಾನದ ಸಂಗೀತಮಯ ವಾತಾವರಣದಲ್ಲಿ ನೂತನ ಎಂಬ ಹಿಂಸ್ರಪ್ರಾಣಿಯ ರೂಪದಿಂದ ದೈತ್ಯನು ಭೀಕರ ಆಕಾರದಿಂದ ಬಂದುನಿಂತನು. ಆ ಕ್ರೂರ ಪ್ರಾಣಿಗೆ ಮೂರು ಮುಖ, ನಾಲ್ಕು ಕೋಡು, ನಾಲ್ಕು ಕಿವಿ ಐದು ಕಣ್ಣು, ಎಂಟು ಕಾಲು, ಎರಡು ಬಾಲಗಳಿದ್ದವು. ಆ ದೈತ್ಯ ಪ್ರಾಣಿಯು ಗಣೇಶನ ಎದುರು ಅಕಾಂಡ ತಾಂಡವವನ್ನು ಮಾಡತೊಡಗಿದನು. ಒಮ್ಮೆ

ಆಕಾಶಕ್ಕೆ ಮತ್ತೊಮ್ಮೆ ಪೃಥ್ವಿಗೆ ಹಾರಿ ಮರುಕ್ಷಣದಲ್ಲಿ ಮುಗಿಲುಮಂಟಪಕ್ಕೇರಿ ಎಂಟು ದಿಕ್ಕುಗಳಲ್ಲಿ ಕ್ಷಣಕ್ಕೊಂದು ರೂಪದಿಂದ ಮಿಂಚ ತೊಡಗಿದನು. ಎಲ್ಲ ಜನರು ಭಯದಿಂದ ಹೆದರಿ ತಲ್ಲಣಿಸಿ ಹೋದರು. ಆಗ ಗಣೇಶನು ಆ ದೈತ್ಯನನ್ನು ಹಿಡಿಯಬೇಕೆಂದು ಅವನ ಬೆನ್ನಟ್ಟಿದನು. ಆ ದೈತ್ಯ ಪ್ರಾಣಿಯು ಗೊಂಡಾರಣ್ಯದಲ್ಲಿ ಪ್ರವೇಶಿಸಿತು. ಅಲ್ಲಿಯೇ ಆ ಕ್ರೂರ ಶ್ವಾಪದವನ್ನ ಬೆನ್ನು ಬಿಡದೆ ಗಣೇಶನು ಆ ದಟ್ಟಡವಿಯಲ್ಲಿ ಅದನ್ನು ಬೆನ್ನಟ್ಟಿ ನಡೆದನು. ಆ ಕ್ರೂರ ಪ್ರಾಣಿಯ ಮೇಘ ಗರ್ಜನೆಯಿಂದ ಆ ಕಾಡಿನಲ್ಲಿರುವ ಸಿಂಹ, ಹುಲಿ, ಆನೆ, ಹಂದಿ ಎಲ್ಲ ಪ್ರಾಣಿಗಳು ಗಾಬರಿಯಿಂದ ಹೊರಳಿ ಉರುಳಿ ಬಿದ್ದು ಮೂರ್ಛಿತವಾಗುತ್ತಿದ್ದವು.

ಗಣೇಶನು ಅವನನ್ನು ಹಿಡಿಯಲು ಹತ್ತಿರ ಬಂದಾಗ ಆ ದೈತ್ಯನು ಒಮ್ಮೆಲೆ ಆಕಾಶಕ್ಕೆ ಜಿಗಿದನು. ಆಗ ಕ್ರುದ್ಧನಾದ ಗಣೇಶನು ಆ ದುಷ್ಟನ ಮೇಲೆ ತನ್ನ ಪಾಶವನ್ನು ಬೀಸಿದನು. ಅದರ ಎದುರು ಆ ಪಾಪಿಯ ಆಟ ನಡೆಯಲಿಲ್ಲ. ಕ್ಷಣಾರ್ಧದಲ್ಲಿ ಆ ದೈತ್ಯನು ಪಾಶಬದ್ಧನಾಗಿ ಗಣೇಶನ ಎದರು ನೆಲದ ಮೇಲೆ ಬಂದು ಬಿದ್ದನು. ಅವನ ಕೈ ಕಾಲು ಮುರಿದು, ಉಸಿರು ಗಟ್ಟಿ ಆ ದೈತ್ಯಾಧಮನು ಮರಣ ಹೊಂದಿದನು.

ಆ ದೈತ್ಯಾಧಮನು ಮರಣ ಹೊಂದಿಬಿದ್ದ ಆ ಸ್ಥಳವು ಒಂದು ಮಾವಿನ ತೋಪು ಆಗಿದ್ದಿತು. ಅಲ್ಲಿರುವ ದಟ್ಟವಾದ ಮಾವಿನ ಮರಗಳಲ್ಲಿ ವಿಪುಲವಾಗಿ ಹಣ್ಣುಕಾಯಿಗಳು ಬಿಟ್ಟಿದ್ದವು. ಹಣ್ಣು ಕಾಯಿಗಳ ಭಾರದಿಂದ ಎಲ್ಲಗಿಡಗಳು ಬಾಗಿ ನಿಂತಿದ್ದವು. ಗಣೇಶನ ಸಮೀಪದಲ್ಲಿ ಅವನ ಅದ್ಭುತವಾದ ದೈತ್ಯ ಮಾನವರೂಪವಾದ ಕೃತ್ಯವನ್ನು ನೋಡಿ ಸಂತೋಷ ಭರಿತರಾಗಿ ಗಣೇಶನನ್ನು ಕೊಂಡಾಡಿ ಹಾಡಿ, ಪಾಡಿ ಕುಣಿದು ಕುಪ್ಪಳಿಸುತ್ತಿದ್ದ ಆ ಮುನಿಪುತ್ರರಿಗೆಲ್ಲರಿಗೂ ಬಹಳ ಹಸಿವೆಯಾಯಿತು. ಅವರು ಗಣೇಶನ ಅಪ್ಪಣೆ ಪಡೆದು ಆ ಮಾಮರಗಳ ಹಣ್ಣುಕಾಯಿಗಳನ್ನು ಹರಿದು ತಿನ್ನತೊಡಗಿದರು. ಕೆಲವು ಹುಡುಗರು ತಾವು ಮಾವಿನ ಹಣ್ಣುಗಳನ್ನು ತಿನ್ನುವುದು ಮಾತ್ರವಲ್ಲದೆ ಕೈಗೆ ಬಂದಂತೆ ಚೂತಫಲಗಳನ್ನು ಹರಿದು ಮನಬಂದಂತೆ ತೂರಾಡತೊಡಗಿದರು.

ಆ ಆಮ್ರವನದಲ್ಲಿ ಒಬ್ಬ ಹೆಣ್ಣು ಮಗಳು ಬಹುಕಾಲದಿಂದ ತನ್ನ ಒಂದು ಮೊಟ್ಟೆಯನ್ನು ರಕ್ಷಣೆ ಮಾಡುತ್ತಲಿದ್ದಳು. ಆಟದ ಭರದಲ್ಲಿದ್ದ ಮುನಿಪುತ್ರರು ಬೀಸಿ ಒಗೆದ ಮಾವಿನ ಕಾಯಿಗಳು ಅವಳ ತಲೆಗೆ ಬಡಿದವು. ಆ ಪೆಟ್ಟಿನಿಂದ ಆ ಹೆಣ್ಣು ಮಗಳು ಸಿಟ್ಟಿಗೆದ್ದು ಕಠೋರವಾದ ಧ್ವನಿಯಿಂದ ''ಈ ಘೋರ ಪ್ರಾಣಿಯನ್ನೂ ಕೊಂದ ಬಾಲಕನು ಯಾರು ? ಮತ್ತು ವಿನಾಕಾರಣ ನನ್ನ ತಲೆಗೆ ಮಾವಿನಕಾಯಿಗಳನ್ನು ಬೀಸಿ ಒಗೆದು ಹೊಡೆದು ಗಾಯಗೊಳಿಸಿದವರು ಯಾರು ? ಅವರು ಎಲ್ಲಿ ಇರುತ್ತಾರೆ ?'' ಎಂದು ಕೇಳಿದಳು.

ಹೀಗೆ ಸಿಟ್ಟಿಗೆದ್ದು ಕಠೋರ ಧ್ವನಿಯಿಂದ ಎಲ್ಲ ಬಾಲಕರನ್ನು ಗದರಿಸುತ್ತಿದ್ದ ಆ ಮಹಿಳೆಯನ್ನು ಕಂಡು ಗುಣೇಶನು ಅಲ್ಲಿಯೆ ಇದ್ದ ಒಂದು ಮಾವಿನ ಗಿಡದ ಹೊದರಿನಲ್ಲಿ ಅಡಗಿಕೊಂಡನು. ಆ ವೃಕ್ಷದ ಕೋಟರದಲ್ಲಿ ಚಂದ್ರಮಂಡಲದಂತೆ ಹೊಳೆಯುತ್ತಿದ್ದ ಒಂದು ದೊಡ್ಡ ಮೊಟ್ಟೆಯಿದ್ದಿತು. ಅದನ್ನುಗಣೇಶನು ತನ್ನ ಬಲಿಷ್ಠವಾದ ಕೈಯಿಂದ ಮೇಲಕ್ಕೆ ಎತ್ತಿದನು. ಅಷ್ಟರಲ್ಲಿ ಬೃಹದಾಕಾರದ ತತ್ತಿಯು

ಒಡೆದು ಬಿದ್ದಿತು. ಆ ಮೊಟ್ಟೆಯಿಂದ ಒಂದು ವಿಶಾಲಕಾಯದ ಪಕ್ಷಿಯು ಹೊರಬಿದ್ದಿತು ಅದರ ಕೊರಳು ನೀಲಿಬಣ್ಣದ್ದು ಇದ್ದಿತು. ಅದರ ಕಣ್ಣು ವಿಶಾಲ, ರೆಕ್ಕೆ, ವಿಸ್ತಾರ, ಅದರ ಬಾಯಿಯಿಂದ ಬೆಂಕಿಯ ಜ್ವಾಲೆಗಳು ಹೊರಬೀಳುತ್ತಿದ್ದವು. ಆ ಭಯಂಕರಾಕಾರದ ಪಕ್ಷಿಯನ್ನು ನೋಡಿ ಮುನಿಕುಮಾರರು ಓಡತೊಡಗಿದರು. ಆ ಪಕ್ಷಿಯು ಓಡುತ್ತಲಿರುವ ಆ ಮುನಿಕುಮಾರನನ್ನು ತನ್ನ ದೈತ್ಯ ರೆಕ್ಕೆಯಿಂದ ಹೊಡೆದು ಬೀಳಿಸತೊಡಗಿತು.

ಅಲ್ಲಿಯ ಹೆಮ್ಮರದ ಹೊದರಿನಲ್ಲಿ ಅಡಗಿದ ಗಣೇಶನು ಆ ಪಕ್ಷಿಯ ದುಷ್ಟಕಾರ್ಯವನ್ನು ನೋಡಿ ಆ ವೃಕ್ಷಪೋಟರದಿಂದ ಕೆಳಗೆ ಜಿಗಿದನು ಮತ್ತು ಆ ದೊಡ್ಡ ಪಕ್ಷಿಯ ರೆಕ್ಕೆಯನ್ನು ಗಟ್ಟಿಯಾಗಿ ಹಿಡಿದನು ಗಣೇಶ ಹಾಗೂ ಆ ದೈತ್ಯ ಪಕ್ಷಿಗಳ ನಡುವೆ ಭಯಂಕರ ಹೋರಾಟವಾಯಿತು. ಆ ಹಕ್ಕಿಯು ತನ್ನ ಕೊಕ್ಕೆ ಹಾಗೂ ರೆಕ್ಕೆಗಳಿಂದ ಗಣೇಶನನ್ನೂ ಹೊಡೆಯ ತೊಡಗಿತು. ಆಗ ಕುಪಿತನಾದ ಗಣೇಶನು ತನ್ನ ನಾಲ್ಕು ಆಯುಧಗಳಿಂದ ಪ್ರಹಾರ ಮಾಡಿದನು. ಅವನ ಆಯುಧಗಳ ಘೋರ ಆಘಾತವನ್ನು ತಾಳದೆ ಅ ನವಿಲಿನ ರೂಪದಂತಿದ್ದ ಪಕ್ಷಿಯು ನೆಲದಮೇಲೆ ಬಿದ್ದಿತು.

ಈ ದೃಶ್ಯವನ್ನು ನೋಡಿ ತೇಜಸ್ವಿನಿಯಾದ ಆ ಹೆಣ್ಣು ಮಗಳು ಗಣೇಶನನ್ನು ವಂದಿಸಿ ಅವನನ್ನು ಪ್ರಾರ್ಥಿಸ ತೊಡಗಿದಳು.

''ಪ್ರಭು, ನೀನು ಜಗತ್ತಿನ ಸೃಷ್ಟಿಸ್ಥಿತಿ ಸಂಹಾರಾದಿಗಳನ್ನು ಮಾಡುವ ಬ್ರಹ್ಮ, ವಿಷ್ಣು, ಮಹೇಶ ಈ ತ್ರಿಮೂರ್ತಿ ರೂಪದ ಮಹಾನ್ ದೇವತೆಯಾಗಿರುವೆ. ನಿನಗೆ ನನ್ನ ಅನಂತಾನಂತ ವಂದನೆಗಳು.

**ತ್ವಂ ಸೃಷ್ಟಿ ಕರ್ತಾ ರಜಸಾ ಬ್ರಹ್ಮಾ ಸತ್ವೇನ ಪಾಲಕಃ ।**
**ವಿಷ್ಣುಃ ತ್ವಮಸಿ ತಮಸಾ ಸಂಹರನ್ ಶಂಕರೋಽಪಿ ಚ ॥**

ದೇವ ದೇವಾ, ನಾನು ತಪಸ್ವಿ ಮಹರ್ಷಿಗಳಾದ ಕಶ್ಯಪರ ಹೆಂಡತಿ, ವಿನತಾ ಎಂದು ನನ್ನ ಹೆಸರು. ಮಯೂರರೂಪವಾದ ಈ ಪಕ್ಷಿಯ, ಕಶ್ಯಪ ಮಹಾಮುನಿಗಳ ಪುತ್ರ. ಇವನನ್ನು ನೀನು ನಿನ್ನ ಸೇವಕನ ರೂಪದಿಂದ ಸ್ವೀಕಾರಮಾಡು. ನನಗೆ, ಈಗಾಗಲೇ ಜಟಾಯು, ಸೇನ, ಸಂಪಾತಿ ಎಂಬ ಮೂವರು ಮಕ್ಕಳಿರುತ್ತಾರೆ. ಆ ನನ್ನ ಮೂರು ಮಕ್ಕಳನ್ನು ನನ್ನ ಸವತಿಯಾದ ಕದ್ರುವಿನ ಮಕ್ಕಳು ನಾಗಲೋಕದಲ್ಲಿ ಸೆರೆ ಹಿಡಿದು ಕಾರಾಗೃಹದಲ್ಲಿ ಬಂದಿಗಳನ್ನಾಗಿ ಇರಿಸಿದ್ದಾರೆ. ದಯಾಪೂರ್ಣನಾದ ನೀನು ಆ ನನ್ನ ಮಕ್ಕಳನ್ನು ಕದ್ರೂಪುತ್ರರಾದ ಮಹಾಸರ್ಪಗಳ ಬಂಧನದಿಂದ ಬಿಡಿಸು. ಮತ್ತು ನನ್ನ ಕೊನೆಯ ಮಗನಾದ ಈ ಮಯೂರನನ್ನು ನಿನ್ನ ವಾಹನವನ್ನಾಗಿ ಮಾಡಿಕೊಂಡು ಕೃಪೆಮಾಡು. ನಮ್ಮ ಪತಿಗಳಾದ ಕಶ್ಯಪ ಮಹರ್ಷಿಗಳು ನನಗೆ ಮೊದಲೆ ತಿಳಿಸಿದ್ದರು. ಮೊಟ್ಟೆರೂಪದಲ್ಲಿರುವ ಈ ನಿನ್ನ ಮಗನನ್ನು ಯಾವನು ಒಡೆಯುವನೋ ಅವನೇ ಇವನ ಸ್ವಾಮಿಯೂ ಪ್ರಭುವೂ, ಸಂರಕ್ಷಕನೂ ಆಗುವನು. ಅವರ ಮಾತಿನಂತೆ ನಾನು ಈ ನನ್ನ ತತ್ತಿಯ ರೂಪದ ಮಗನನ್ನು ಇಷ್ಟು ದಿನ ಸಂರಕ್ಷಣ ಮಾಡುತ್ತಲಿದ್ದೆ. ಇಂದು ನಿನ್ನಿಂದ ಆ ಮೊಟ್ಟೆ ಒಡೆದು ನವಿಲುರೂಪದಿಂದ ನನ್ನ ಮಗನು ಹೊರಬಿದ್ದ. ಅವನನ್ನು ನಿನಗೆ ಒಪ್ಪಿಸಿದ್ದೇನೆ. ನೀನು ಈ ನನ್ನ ಪುತ್ರನನ್ನು ನಿನ್ನ ವಾಹನರೂಪವಾಗಿ ಸ್ವೀಕರಿಸು.

ಅನಂತರ ವಿಶಾಲ ದೇಹದ ಮಯೂರ ರೂಪದ ಆ ಪಕ್ಷಿಯು ಗಣೇಶನಿಗೆ ಸಾಷ್ಟಾಂಗ ವಂದನೆಯನ್ನು ಮಾಡಿ ಬೇಡಿಕೊಂಡಿತು ''ಪ್ರಭು, ನಿನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನಿನ್ನ ಹೆಸರಿನ ಹಿಂದೆ ನನ್ನ ಹೆಸರು ಸೇರ್ಪಡೆಯಾಗುವಂತೆ ಮಾಡು. ನನಗೆ ನಿನ್ನ ವಾಹನವಾಗುವ ಸೌಭಾಗ್ಯವನ್ನು ಕರುಣಿಸು; ನನ್ನನ್ನು ಉದ್ಧರಿಸು'' ಎಂದು ಬೇಡಿಕೊಂಡನು.

ಆಗ ಗಣೇಶನು ಅಂತಃಕರಣದಿಂದ ಆ ಮಯೂರ ಪಕ್ಷಿಗೆ ಹೇಳಿದನು. ''ನನ್ನ ಭಕ್ತನಾದ ಮಯೂರನೇ, ನಿನ್ನ ಅಪೇಕ್ಷೆಯಂತೆ ನಾನು ಇಂದಿನಿಂದ ಮಯೂರೇಶ್ವರನೆಂದು ಪ್ರಸಿದ್ಧನೂ ಪೂಜಿತನೂ ಆಗುತ್ತೇನೆ.'' ಅನಂತರ ಗಣೇಶನು ಆ ನವಿಲಿನ ಮೇಲೆ ಆರೂಢನಾಗಿ ತನ್ನ ಆಶ್ರಮಕ್ಕೆ ಬಂದನು. ಅವನನ್ನು ನೋಡಿ ಋಷಿಪುತ್ರರೆಲ್ಲರೂ ''ಮಯೂರೇಶ ಗಣೇಶ, ಮಯೂರವಾಹನ ಎಂದು ಕರೆದು ಕೂಗಿ ಕೊಂಡಾಡಿದರು. ಮಯೂರವಾಹನನಾದ ಗಣೇಶನನ್ನು ಕಂಡು ಪಾರ್ವತಿ ದೇವಿಯು ಅತ್ಯಂತ ಸಂತೋಷಪಟ್ಟು ಅವನನ್ನು ಆಶೀರ್ವದಿಸಿದಳು.

ಮಯೂರೇಶನು ಒಂಭತ್ತು ವರ್ಷದವನಾದನು. ಅಷ್ಟರಲ್ಲಿ ಅವನಿಗೆ ವೇದಶಾಸ್ತ್ರಗಳ ಅಧ್ಯಯನವೆಲ್ಲ ಮುಗಿದು ಧನುರ್ವೇದದ ರಹಸ್ಯವನ್ನೆಲ್ಲ ಅವನು ಅರಿತನು. ಮತ್ತು ಶಸ್ತ್ರಾಸ್ತ್ರ ವಿದ್ಯೆಗಳಲ್ಲಿ ನುರಿತು ನಿಪುಣ ಎನಿಸಿದನು.

ಗಣೇಶನು ಬಲಿಷ್ಠನಾಗಿ ಬೆಳೆಯ ತೊಡಗಿದಂತೆ, ಸಿಂಧು ದೈತ್ಯನು ಚಿಂತಾಕ್ರಾಂತನಾಗಿ ಅವನನ್ನು ಕೊಲ್ಲಲು ಹೊಸ ಹೊಸ ದೈತ್ಯರನ್ನು ಕಳಿಸಿಕೊಡತೊಡಗಿದನು. ಸಿಂಧು ಪ್ರೇಷಿತರಾದ ಅಸುರರೆಲ್ಲರೂ ಮಯೂರೇಶ್ವರನನ್ನು ಸಂಹರಿಸಲು ನಾನಾ ಬಗೆಯ ಕುತಂತ್ರಗಳನ್ನು ಯುಕ್ತಿಗಳನ್ನು ರಚಿಸುತ್ತಿದ್ದರು. ಆದರೆ ಅವರೆಲ್ಲರನ್ನು ಲೀಲಾಜಾಲವಾಗಿ ಮಯೂರೇಶನು ಸಂಹರಿಸಿಬಿಡುತ್ತಿದ್ದನು.

ಸಿಂಧು ಪ್ರೇರಿತನಾದ ಒಬ್ಬ ದೈತ್ಯನೂ ಮರಳಿ ಗಂಡಕಿ ನಗರಕ್ಕೆ ಬರುತ್ತಿದ್ದಿಲ್ಲ. ಎಲ್ಲರೂ ನೇರವಾಗಿ ಯಮಪಟ್ಟಣಕ್ಕೆ ಹೋಗುತ್ತಿದ್ದರು.

ಒಂದು ದಿನ ಆಮ್ರವನದ ಸರೋವರದ ದಂಡೆಯ ಮೇಲೆ ಮಯೂರೇಶನು ಮುನಿಪುತ್ರರ ಜೊತೆ ಆಟವಾಡುತ್ತಿದ್ದನು. ಆಗ ಅಲ್ಲಿಗೆ ಒಂದು ಭಯಂಕರವಾದ ಕುದುರೆರೂಪದಿಂದ ಒಬ್ಬ ದೈತ್ಯನು ಅಲ್ಲಿಗೆ ಬಂದನು. ಆ ದೈತ್ಯನ ಭೀಕರವಾದ ವಿಕಾರ-ಆಕಾರವನ್ನು ನೋಡಿಯೇ ಹೆದರಿ ಕೆಲವು ಮುನಿಕುಮಾರರು ಸರೋವರದಲ್ಲಿ ಹಾರಿಕೊಂಡರು. ಕೆಲವರು ಮರಗಳ ಮೇಲೆ ಏರಿದರು. ಆಗ ಅದನ್ನು ನೋಡಿ ಮಯೂರೇಶನು ಕುಪಿತನಾಗಿ ಆ ಕುದುರೆಯ ಮೇಲೆ ಮುಷ್ಟಿಯಿಂದ ಹೊಡೆದನು. ಅವನ ಏಟನ್ನು ತಾಳಲಾರದೆ ಆ ಕುದುರೆಯು ನೆಲಕ್ಕೆ ಬಿದ್ದು ಅಲ್ಲಿಂದ ಗಾಬರಿಯಾಗಿ ಸರೋವರದಲ್ಲಿ ಹಾರಿಕೊಂಡಿತು. ಆಗ ಮಯೂರೇಶನು ಅದರ ಬೆನ್ನು ಹತ್ತಿ ತಾನೂ ಸರೋವರದಲ್ಲಿ ಹೊಕ್ಕು ಮದೋನ್ಮತ್ತವಾದ ಆ ಕುದುರೆಯನ್ನು ಹಿಡಿದು ನೀರಿನಲ್ಲಿ ಮುಳುಗಿಸಿ ಕೊಂದು ಹಾಕಿದನು. ಅದನ್ನು ನೋಡಿ ಮುನಿಪುತ್ರರೆಲ್ಲರು ಪ್ರಸನ್ನರಾಗಿ ಮಯೂರೇಶನನ್ನು ಪ್ರಾರ್ಥಿಸಿದರು.

ಅನಂತರ ಗಣೇಶನು ಎಲ್ಲ ಬಾಲಕರೊಡನೆ ಕೂಡಿ ಜಲಕ್ರೀಡೆಯನ್ನು ಮಾಡಿದನು. ಎಲ್ಲ ಬಾಲಕರು ಕೂಡಿ ಗಣೇಶನ ಮೇಲೆ ನೀರನ್ನು ಉಗ್ಗಿದರು. ಆಗ ಗಣೇಶನು ಸಾವಿರ ಕೈಗಳಿಂದ ಆ ಬಾಲಕರ ಮೇಲೆ ನೀರನ್ನು ಚಿಮುಕಿಸಿದನು. ಇದನ್ನು ನೋಡಿ ಆಶ್ಚರ್ಯ ಚಕಿತರಾದ ಬಾಲಕರು ಈ ಮಯೂರೇಶನು ಒಮ್ಮೆ ಷಡ್ಭುಭುಜನಾಗಿ ಮತ್ತೊಮ್ಮೆ ಸಹಸ್ರಭುಜನಾಗಿ ಕಾಣುತ್ತಿದ್ದಾನೆ. ಇದು ಅತ್ಯಂತ ಆಶ್ಚರ್ಯಕರವಾದ ವಿಷಯ ಎಂದು ಹೇಳಿ ತಿರುಗಿ ನೋಡುವಷ್ಟರಲ್ಲಿ ಆ ಎಲ್ಲ ಬಾಲಕರ ಸುತ್ತು ಮುತ್ತು ಸಾವಿರಾರು ಮಯೂರೇಶರು ನಿಂತು ನೀರನ್ನು ತಮ್ಮ ಕೈಗಳಿಂದ ಎರಚುತ್ತಿದ್ದರು. ಈ ಗಣೇಶನ ವಿಶ್ವರೂಪವನ್ನು ನೋಡಿ ಆ ಬಾಲಕರೆಲ್ಲರೂ ಆಶ್ಚರ್ಯಚಕಿತರಾಗಿ ಅವನನ್ನು ಸ್ತೋತ್ರ ಮಾಡುತ್ತ ನಿಂತುಕೊಂಡರು.

ಅಷ್ಟರಲ್ಲಿ ಕೆಲವು ನಾಗಕನ್ಯೆಯರು ಅಲ್ಲಿಗೆ ಬಂದರು. ಅತ್ಯಂತ ಸುಂದರವಾದ ಹಾಗೂ ಪ್ರೇಕ್ಷಣಿಯವಾದ ಮಯೂರೇಶನ ಸೌಂದರ್ಯ ಕಂಡು ಮುಗ್ಧರಾಗಿ ವಿನಯದಿಂದ ಅವನನ್ನು ವಂದಿಸಿ ತಮ್ಮ ಮಧುರವಾಣಿಯಿಂದ ಅವನನ್ನು ಕೇಳಿದರು.

**ನಾಗಕನ್ನಿಕೆಯರು :-** ಮಹಾನುಭಾವ ನೀವು ಯಾರು ? ಎಲ್ಲಿಂದ ಬಂದಿದ್ದೀರಿ ? ನಿಮ್ಮ ದರ್ಶನದಿಂದ ನಾವು ಪರವಶರಾಗಿದ್ದೇವೆ.

**ಗಣೇಶ :-** ನಾನು ಪಾರ್ವತೀ ಪರಮೇಶ್ವರರ ಪುತ್ರ. ಮಯೂರೇಶ ಎಂದು ನನ್ನ ಹೆಸರು. ನಾನು ಇಲ್ಲಿ ಈ ಮುನಿಪುತ್ರರ ಜೊತೆಗೆ ಆಟವಾಡಲು ಬಂದಿದ್ದೇನೆ. ನನಗೆ ಇಲ್ಲಿ ನಿಮ್ಮ ದರ್ಶನವಾಯಿತು.

**ನಾಗಕನ್ಯೆಯರು :-** ಪೂಜ್ಯರೆ ತಾವು ದಯವಿಟ್ಟು ನಮ್ಮ ಮನೆಗೆ ಬಂದು ವಿಶ್ರಾಂತಿ ಸುಖವನ್ನು ಅನುಭವಿಸಿರಿ.

**ಗಣೇಶ :-** ಈಗಾಗಲೆ ಬಹಳ ಹೊತ್ತು ಆಗಿದೆ. ಆ ನನ್ನ ತಾಯಿಯು ನನ್ನ ದಾರಿ ಕಾಯುತ್ತಿದ್ದಾಳೆ. ಆದುದರಿಂದ ನಾನು ನನ್ನ ಆಶ್ರಮಕ್ಕೆ ಮರಳಿ ಹೋಗುತ್ತೇನೆ ನೀವು ನಿಮ್ಮ ಮನೆಗೆ ತೆರಳಿರಿ.

ಮಯೂರೇಶನು ಬರುವದಿಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದರೂ ನಾಗಕನ್ಯೆಯರು ಕೇಳದೆ ಅವನ ಸೌಂದರ್ಯದಿಂದ ಮುಗ್ಧರಾಗಿ ಅವನನ್ನು ಬಿಡಲಾರದೆ ಬಲವಂತದಿಂದ ಅವನನ್ನು ತಮ್ಮೊಡನೆ ಕರೆದುಕೊಂಡು ಹೋದರು. ಅವನ ಗೆಳೆಯರಾದ ಮುನಿಪುತ್ರರು ತಮ್ಮ ಗುಣೇಶನು ತಮ್ಮನ್ನು ಬಿಟ್ಟು ನಾಗಕನ್ಯೆಯರಿಂದ ಬಲವಂತದಿಂದ ಅಪಹೃತನಾಗಿ ಕರೆದೊಯ್ಯಲ್ಪಟ್ಟದನ್ನು ಕಂಡು ಅತ್ಯಂತ ದುಃಖಿತರಾದರು. ಆದರೆ ಮರುಕ್ಷಣದಲ್ಲಿಯೇ ಅವರಿಗೆ ಮಯೂರೇಶನು ತಮ್ಮ ಮಧ್ಯದಲ್ಲಿಯೇ ಇದ್ದುದು ಕಂಡು ಬಂದಿತು. ಅದರಿಂದ ಅವರಿಗೆ ಪರಮಾನಂದವಾಯಿತು. ಅವರೆಲ್ಲರೂ ಮಯೂರೇಶನ ಜೊತೆಗೆ ಅವನ ಆಶ್ರಮಕ್ಕೆ ಹೊರಟರು.

ದಾರಿಯಲ್ಲಿ ಭಯಾಸುರ ಎಂಬ ದೈತ್ಯನು ಮುನಿಬಾಲಕರ ಮೇಲೆ ಆಕ್ರಮಣ ಮಾಡಿದನು. ಆಗ ಸರ್ವಜ್ಞನೂ ಸರ್ವಸಮರ್ಥನೂ ಆದ ಮಯೂರೇಶನು ಆ ಭಯಾಸುರನನ್ನು ತಕ್ಷಣವೇ ಕೊಂದು ಮುನಿಕುಮಾರನನ್ನು ರಕ್ಷಣೆ ಮಾಡಿದನು.

ಎಲ್ಲರೊಡನೆ ಮಯೂರೇಶನು ಮನೆಗೆ ಬಂದ ಬಳಿಕ ತಾಯಿ ಅವನಿಗೆ ಭೋಜನ ಮಾಡಿಸಿ ಅವನನ್ನು ತನ್ನ ಪಕ್ಕದಲ್ಲಿಯೇ ಮಲಗಿಸಿಕೊಂಡಳು.

ಇತ್ತ ಲಾವಣ್ಯವತಿಯರಾದ ನಾಗಕನ್ಯೆಯರು ಪ್ರಸನ್ನವದನನಾದ ಮಯೂರೇಶನನ್ನು ಪಾತಾಳಲೋಕಕ್ಕೆ ತಮ್ಮ ಮನೆಗೆ ಕರೆದುಕೊಂಡು ಹೋದರು. ಅಲ್ಲಿ ಸುಗಂಧಿ ತೈಲವನ್ನು ಪೂಸಿ ಅಭ್ಯಂಗಸ್ನಾನ ಮಾಡಿಸಿದರು. ವಸ್ತ್ರಾಲಂಕಾರಗಳಿಂದ ಅವನನ್ನು ಸಿಂಗರಿಸಿದರು. ಗಂಧವನ್ನು ಹಚ್ಚಿದರು, ಧೂಪವನ್ನು ಬೆಳಗಿದರು ದೀಪವನ್ನು ಹಚ್ಚಿದರು. ನೈವೇದ್ಯವನ್ನು ಮಾಡಿದರು, ಆರತಿ ಬೆಳಗಿದರು, ಬಗೆಬಗೆಯಿಂದ ಪೂಜಿಸಿದರು. ಮತ್ತೂ ಕೈಮುಗಿದು ಪ್ರಾರ್ಥಿಸಿದರು. "ಬ್ರಹ್ಮಾದಿ ದೇವತೆಗಳಿಂದ ವಂದನೀಯನಾದ ದೇವೋತ್ತಮನಾದ ಗಣೇಶ ನೀನು ಇಲ್ಲಿಗೆ ಬಂದದ್ದು ನಮ್ಮ ಭಾಗ್ಯ. ನಮಗೆ ಅಭೀಷ್ಟ ಪ್ರದಾನ ಮಾಡಲು ಇಲ್ಲಿಗೆ ಆಗಮಿಸಿರುವೆ ಕೆಲವು ದಿವಸಗಳವರೆಗೆ ಇಲ್ಲಿಯೇ ಇರಬೇಕು ಇದು ನಮ್ಮ ಅಪೇಕ್ಷೆ.

**ಗಣೇಶ :-** ನಮ್ಮ ತಾಯಿಯು ನನ್ನ ವಿಯೋಗದಿಂದ ದುಃಖಿತಳಾಗಿ ಅನ್ನ ನೀರು ಬಿಟ್ಟು ಉಪವಾಸ ಕುಳಿತಿದ್ದಾಳೆ. ನೀವು ಯಾರು ? ಯಾರ ಮಕ್ಕಳು ? ಮೊದಲು ಹೇಳಿರಿ.

**ನಾಗಕನ್ಯೆಯರು :-** ನಾವು ನಾಗರಾಜನಾದ ವಾಸುಕಿಯ ಕನ್ಯೆಯರು. ನೀವು ನಮ್ಮೊಡನೆ ಬನ್ನಿರಿ ನಮ್ಮ ತಂದೆಯ ದರ್ಶನ ಮಾಡಿಸುತ್ತೇವೆ.

ಹೀಗೆ ಹೇಳಿ ಆ ನಾಗಲಲನೆಯರು ಮಯೂರೇಶನನ್ನು ತಮ್ಮ ತಂದೆಯ ಬಳಿಗೆ ಕರೆದುಕೊಂಡು ಹೋದರು.

ಅವನನ್ನು ನೋಡಿದ ಕೂಡಲೆ ಮಯೂರೇಶನು ಅವನ ಮೇಲೆ ಹಾರಿ ಅವನ ಫಣಾಮಂಡಲದ ಮೇಲೆ ಏರಿ ನಿಂತನು. ವಾಸುಕಿಯ ಹೆಡೆಯ ಮೇಲೆ ಅದ್ಭುತವಾದ ದೇದೀಪ್ಯಮಾನವಾಗಿ ಹೊಳೆಯುವ ಒಂದು ರತ್ನವಿದ್ದಿತು. ವಾಸುಕಿಯು ತನ್ನ ಹೆಡೆಯನ್ನು ಆಚೀಚೆ ಅಲುಗಾಡಿಸಿದಾಗ ಮೂರು ಲೋಕಗಳೇ ಹೊಯ್ದಾಡುತ್ತಿದ್ದವು. ಮಯೂರೇಶನು ತೇಜಸ್ವಿಯಾದ ವಾಸುಕಿಯನ್ನು ಹಿಡಿದು ಮಣಿಸಿ ಮಾಲೆಯನ್ನು ಮಾಡಿ ತನ್ನ ಕೊರಳಲ್ಲಿ ಹಾಕಿಕೊಂಡನು. **"ಸರ್ಪಭೂಷಣ"** ಎಂದು ಅವನ ಹೆಸರು ಪ್ರಖ್ಯಾತವಾಯಿತು.

ಇದನ್ನು ನೋಡಿ ವಾಸುಕಿಯ ತಮ್ಮನಾದ ಸಾವಿರ ಹೆಡೆಗಳುಳ್ಳ ಆದಿಶೇಷನು ಕ್ರುದ್ಧನಾಗಿ ಗಣೇಶನನ್ನು ಹೊಡೆಯಲು ಓಡಿಬಂದನು. ಮತ್ತು ಅವನ ಮೇಲೆ ಆಕ್ರಮಣ ಮಾಡಿದನು. ಆ ಕ್ಷಣದಲ್ಲಿ ಮಯೂರೇಶನು ತನ್ನ ವಾಹನನಾದ ಮಯೂರವನ್ನು ನೆನೆದನು ಆಗಲೆ ಆ ನವಿಲು ಅಲ್ಲಿಗೆ ಕುಣಿಯುತ್ತ ಬಂದಿತು. ಗಣೇಶನಿಗೆ ನಮಸ್ಕಾರ ಮಾಡಿ ಅವನ ಮುಂದೆ ಬಾಗಿ ನಿಂತಿತು. ಗಣೇಶನು ಆ ಮಯೂರನ ಮೇಲೆ ಏರಿಕುಳಿತನು. ಗಣೇಶನಿಗೂ ಆದಿಶೇಷನಿಗೂ ಭಯಂಕರವಾದ ಯುದ್ಧವು ಆಯಿತು. ಮಯೂರನು ಅಸಂಖ್ಯ ಸರ್ಪಗಳನ್ನು ತನ್ನ ರೆಕ್ಕೆಗಳಿಂದ ಹೊಡೆದು ಕೊಂದು ಹಾಕಿದನು. ಆದರೆ ಆದಿಶೇಷನ ಭಯಂಕರ ವಿಷದ ಉಸುರಿನ ಗಾಳಿಯನ್ನು ತಾಳಲಾರದೆ ಮಯೂರನು ಮೂರ್ಛಿತನಾಗಿ ಬಿದ್ದನು. ಅದರಿಂದ ಕೋಪಾಕುಲನಾದ ಗಣೇಶನು ತನ್ನ ವಾಹನನಾದ ನವಿಲಿನಿಂದ ಕೆಳಗೆ ಹಾರಿ ಆದಿಶೇಷನ ಹೆಡೆಗಳ ಮೇಲೆ ಹತ್ತಿದನು. ಶೇಷನು ಗಣೇಶನು ಭಾರವನ್ನು ಹೊರಲು ಆಗದೆ ತತ್ತರಿಸಿಹೋದನು. ತನ್ನ ಸಹಸ್ರಮುಖಗಳಿಂದ ನೆತ್ತರಕಾರಿ

ನಿತ್ರಾಣನಾಗಿ ಬಿದ್ದನು. ಆಗ ಆ ಶೇಷನಿಗೆ ಸಹಾಯಮಾಡಲು ಸಾವಿರಾರು ಸರ್ಪಗಳು ಅಲ್ಲಿಗೆ ಬಂದು ಮಯೂರೇಶನ ಜೊತೆಗೆ ಯುದ್ಧಕ್ಕೆ ತೊಡಗಿದರು. ಆಗ ಮಯೂರೇಶನು ಶೇಷನನ್ನು ಹಿಡಿದು ತನ್ನ ಕೈಯಿಂದ ಜಗ್ಗಿ ತನ್ನ ಸೊಂಟಕ್ಕೆ ಉಡಿದಾರದಂತೆ ಸುತ್ತಿಕೊಂಡನು. ಆಗ ಭಯಭ್ರಾಂತನಾದ ಶೇಷನು ಮಯೂರೇಶನನ್ನು ಸ್ತೋತ್ರ ಮಾಡತೊಡಗಿದನು ಮತ್ತು ಅವನಿಗೆ ಶರಣು ಬಂದು ತನಗೆ ಅಭಯದಾನ ಮಾಡಬೇಕೆಂದು ಬೇಡಿಕೊಂಡನು. ಆಗ ಮಯೂರೇಶನು ''ಅವನಿಗೆ ಸರ್ಪರಾಜ, ನೀವು ನಿಮ್ಮ ಮಲತಾಯಿಯಾದ ವಿನತಾದೇವಿಯ ಪುತ್ರರಾದ ಸಂಪಾತಿ, ಜಟಾಯು, ಸೇನ ಎಂಬ ಮೂವರು ಮಕ್ಕಳನ್ನೂ ಕೈದು ಮಾಡಿ ಬಂದೀಖಾನೆಯಲ್ಲಿ ಇಟ್ಟಿರುತ್ತೀರಿ. ಆ ಮೂವರನ್ನು ಬಂಧಮುಕ್ತರನ್ನಾಗಿ ಮಾಡಿ ನನಗೆ ತಂದು ಒಪ್ಪಿಸಿರಿ'' ಎಂದು ಆಜ್ಞೆ ಮಾಡಿದನು. ಆಗ ಆದಿಶೇಷನ ಆಜ್ಞೆಯಂತೆ ಆ ದೂತರು ಮೂವರು ವಿನತಾ ಪುತ್ರರನ್ನೂ ತಂದು ಮಯೂರೇಶನಿಗೆ ಒಪ್ಪಿಸಿದಳು. ಆ ಮೂವರು ಜಟಾಯು, ಸಂಪಾತಿ, ಸೇನ ಎಂಬ ಕಶ್ಯಪ ಕುಮಾರರು ಮಯೂರೇಶನ ಪಾದಗಳಿಗೆ ನಮಸ್ಕಾರ ಮಾಡಿದರು.

ಗಣೇಶನ ವಾಹನನಾದ ಮಯೂರನು ತನ್ನ ಮೂವರು ಅಣ್ಣಂದಿರನ್ನು ನೋಡಿ ಆನಂದದಿಂದ ಆಲಿಂಗನ ಮಾಡಿಕೊಂಡನು. ನಂತರ ಮಯೂರೇಶನು ತನ್ನ ವಾಹನನಾದ ನವಿಲನ್ನು ಏರಿಕೊಂಡು ಭೂಲೋಕಕ್ಕೆ ಮರಳಿ ಬಂದನು. ಆಶ್ರಮದ ಬಳಿಗೆ ಹೋಗುವಾಗ ಅವನ ಸುತ್ತಲೂ ಎಲ್ಲ ಋಷಿಕುಮಾರರು ಛತ್ರ ಚಾಮರ ದಂಡ ಮೊದಲಾದವುಗಳನ್ನು ಧರಿಸಿ ನಿಂತುಕೊಂಡಿದ್ದರು. ಆ ಕೋಲಾಹಲವನ್ನು ಕಂಡ ಮುನಿಗಳು ಬಂದು ನೋಡಿದರು. ತಮ್ಮ ಎಲ್ಲ ಮಕ್ಕಳಿಂದ ಒಡಗೂಡಿದ ಮಯೂರೇಶನು ಮಯೂರವಾಹನನಾಗಿ ಬರುತ್ತಲಿರುವದು ಅವರ ಕಣ್ಣಿಗೆ ಗೋಚರವಾಯಿತು.

ಆದರೆ ಆ ಎಲ್ಲ ಋಷಿಮುನಿಗಳಿಗೂ ಅತ್ಯಂತ್ಯ ಆಶ್ಚರ್ಯ. ಅವರ ಮಕ್ಕಳೆಲ್ಲರೂ ಮನೆಯಲ್ಲಿ ಇದ್ದರು. ಈಗ ಮತ್ತೆ ಗಣೇಶ ಸುತ್ತಲೂ ಛತ್ರ ಚಾಮರ ಹಿಡಿದುಕೊಂಡು ನಿಂತಿರುವರು. ಇದು ಹೇಗೆ ? ಅವರು ವಿಸ್ಮಯದಿಂದ ಮತ್ತೊಮ್ಮೆ ಕಣ್ಣು ಅರಳಿಸಿ ನೋಡಿದರು ಅವರೆಲ್ಲರೂ ಮಯೂರೇಶನೇ ಆಗಿದ್ದರು. ಎಲ್ಲಿ ನೋಡಿದಲ್ಲೆಲ್ಲ ಇದ್ದವರೆಲ್ಲರೂ ಮಯೂರೇಶನು, ಎಲ್ಲರೂ ಮಯೂರೇಶನು ಎಲ್ಲರೂ ಗಣೇಶರು, ಎಲ್ಲರೂ ಸಾಕ್ಷಾತ್ ಗಣಪತಿ ಸ್ವರೂಪರು. ಒಬ್ಬರಲ್ಲ ಇಬ್ಬರಲ್ಲ ಸಾವಿರಾರು ಮಯೂರೇಶರು.

ಆಗ ಎಲ್ಲ ಮುನಿಮಹರ್ಷಿಗಳ ಮುಖದಿಂದ ''ಪಾತಾಳ ವಿಜಯ'' ಮಯೂರೇಶನಿಗೆ ಜಯವಾಗಲಿ ಎಂಬ ಜಯ ಜಯಕಾರವು ಹೊರಹೊಮ್ಮಿತು ; ಮೂರು ಲೋಕಗಳನ್ನೆ ತುಂಬಿತು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಕಾಲ ಕೃತಾಂತರ ವಧ ಗಣೇಶನ ಉಪನಯನ ಎಂಬ ಇಪ್ಪತ್ತಾರನೇಯ ಅಧ್ಯಾಯ ಮುಗಿದುದು*

—o—

ಮಯೂರೇಶನಿಗೆ ಒಂಭತ್ತು ವರುಷ ತುಂಬಿದವು ಅವನು ಹತ್ತು ವರುಷದವನಾಗು ವದರೊಳಗಾಗಿ ಅನೇಕ ಶೂರ ವೀರರೂ ಧೀರ ಕ್ರೂರ ಆದ ಅನೇಕ ದೈತ್ಯಾಧಮರನ್ನು ದಮನ ಮಾಡಿದ್ದಾನೆ. ರಾಕ್ಷಸರ ಉಪದ್ರವವನ್ನು ಶಮನ ಮಾಡಿದ್ದಾನೆ. ಇದರಿಂದ ಶಿವಪಾರ್ವತಿಯರಿಗೆ ತಮ್ಮ ಮಗನ ವೀರ ವಿಕ್ರಮುವನ್ನು ಕಂಡು ಅತ್ಯಂತ ಸಂತೋಷವಾಯಿತು. ಆದರೆ ಮಯೂರೇಶನು ಅಲ್ಲಿಇರುವದರಿಂದ ದಂಡಕಾರಣ್ಯದಲ್ಲಿ ರಾಕ್ಷಸರ ಹಾವಳಿ ಬಹಳವಾಯಿತು. ಅದರಿಂದ ಋಷಿಮುನಿಗಳ ಆಶ್ರಮ ಜೀವನ ಬಹು ಆತಂಕಮಯವಾಯಿತು. ತಮ್ಮ ಚಿರಂಜೀವನಿಂದ ಆ ಅರಣ್ಯ ಪ್ರದೇಶಗಳಲ್ಲಿಯ ಎಲೆ ಮರಗಳಲ್ಲಿ ವಾಸಮಾಡಿ ತಪೋನುಷ್ಠಾವನ್ನು ಮಾಡುತ್ತಿದ್ದ ಮುನಿಮಹರ್ಷಿಗಳಿಗೆ ತಮ್ಮ ಚಿರಂಜೀವನ ಉಪಸ್ಥಿತಿ ಯಿಂದ ಬಹಳ ತೊಂದರೆ ತಾಪತ್ರಯಗಳು ಉಂಟಾಗುವದನ್ನು ನೋಡಿ ಶಿವಪಾರ್ವತಿಯರು ಆ ತ್ರಿ ಸಂಧ್ಯಾಕ್ಷೇತ್ರವನ್ನು ಬಿಟ್ಟು ಬೇರೆ ಕಡೆ ತೆರಳಬೇಕೆಂದು ನಿಶ್ಚಯಮಾಡಿದರು.

ಅಲ್ಲಿರುವ ಋಷಿಮುನಿಗಳು, ಮಯೂರೇಶನ ಮಿತ್ರರೂ ಬೇಡ ಬೇಡವೆಂದು ಬೇಡಿಕೊಂಡರೂ, ಪರಮೇಶ್ವರನ ಕುಟುಂಬ ತ್ರಿಸಂಧ್ಯಾಕ್ಷೇತ್ರದಿಂದ ಪ್ರಸ್ಥಾನ ಬೆಳೆಸಿತು. ಮಯೂರೇಶ ತನ್ನ ತಾಯಿ ತಂದೆಯೊಂದಿಗೆ ಶಿವಗಣ ಪರಿವಾರ ಸಹಿತವಾಗಿ ಅಲ್ಲಿಂದ ಹೊರಟಿದ್ದರಿಂದ ಅವರನ್ನು ಬಿಟ್ಟು ಇರಲು ಋಷಿಮುನಿಗಳಿಗೆ ಆಗಲಿಲ್ಲ. ಆದುದರಿಂದ ಮಯೂರೇಶನ ಬಾಲ್ಯ ಸ್ನೇಹಿತರು ಶಿವಭಕ್ತರು ಅವರ ಜೊತೆಗೆ ತಾವೂ ಹೊರಟರು.

ಇವರ ಪ್ರಯಾಣವನ್ನು ಗುಪ್ತಚಾರನ ಮುಖಾಂತರವಾಗಿ ಮೊದಲೆ ತಿಳಿದ ಸಿಂಧುರಾಜನು ಕಮಲಾಸುರ ಎಂಬ ಬಲಿಷ್ಠನಾದ ದೈತ್ಯನನ್ನು ಹನ್ನೆರಡು ಅಕ್ಷೋಹಿಣಿ ಸಶಸ್ತ್ರಸೈನ್ಯದೊಂದಿಗೆ ಮಯೂರೇಶನನ್ನು ಸಂಹರಿಸಲು ಕಳಿಸಿದನು.

ಆ ಪ್ರಚಂಡವಾದ ದೈತ್ಯಸೇನೆಯನ್ನು ನೋಡಿ ಉತ್ಸಾಹಿತನಾದ ಮಯೂರೇಶನು ಅವರ ಜೊತೆಗೆ ಯುದ್ಧ ಮಾಡಲು ಶಂಕರನ ಆಜ್ಞೆಯನ್ನು ಕೇಳಿದನು. ಆಗ ಪರಮೇಶ್ವರನು ದೈತ್ಯನಿಗ್ರಹಕ್ಕಾಗಿಯೆ ಅವತರಿಸಿದ ಮಯೂರೇಶನಿಗೆ ಕಮಲಾಸುರನನ್ನು ಸಂಹರಿಸಿ ಬರಲು ಆಜ್ಞೆಯನ್ನು, ಆಶೀರ್ವಾದವನ್ನು ಕೊಟ್ಟು ಕಳಿಸಿದನು. ತಮ್ಮ ಮಗನ ಶೌರ್ಯ ಪರಾಕ್ರಮದ ಯುದ್ಧಕೌಶಲ್ಯವನ್ನು ಕಾಣಬೇಕೆಂದು ವೃಷಭಾರೂಢರಾಗಿ ಆ ಶಿವದಂಪತಿಗಳು ಹೊರಟರು. ಶಿವಸೇನೆಗೂ ದೈತ್ಯಸೇನೆಗೂ ನಿಕರದ ಸಮರವೂ ಏರ್ಪಟ್ಟಿತು. ಕಮಲಾಸುರನು ಮಹೋನ್ನತವಾದ ಒಂದು ಕುದುರೆಯನ್ನು ಏರಿಕೊಂಡು ರಣರಂಗದಲ್ಲಿ ಮಿಂಚುತ್ತಿದ್ದನು. ನವಿಲಿನ ಮೇಲೆ ಸವಾರಿಮಾಡಿದ ಮಯೂರೇಶನು ತನ್ನ ಹತ್ತು ಕೈಗಳಲ್ಲಿ ಹತ್ತು ಆಯುಧಗಳನ್ನು ಹಿಡಿದು ರಣರಂಗದಲ್ಲಿ ಭೈರವನಂತೆ ನಿಂತು ವೈರಿಗಳ ರುಂಡಗಳನ್ನು ಚಂಡಾಡ ತೊಡಗಿದನು. ಶತ್ರು ಭೂಮಿಯಲ್ಲಿ ನೆತ್ತರದ ಹೊಳೆಯನ್ನೇ ಹರಿಸಿದನು. ಕ್ರುದ್ಧನಾದ ಕಮಲಾಸುರನು ಮಯೂರೇಶನ ಮೇಲೆ

ಬಗೆಬಗೆಯ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದನು. ಅವೆಲ್ಲವೂ ವ್ಯರ್ಥವಾದವು. ಮಯೂರೇಶನ ವಾಹನವಾದ ನವಿಲು ತನ್ನ ಚೂಪಾದ ಚುಂಚುವಿನಿಂದ ಕಮಲಾಸುರನ ಕುದುರೆಯನ್ನು ಚುಚ್ಚಿ ಕೊಚ್ಚಿ ಕೊಂದುಹಾಕಿತು. ಕಮಲಾಸುರನು ಮತ್ತಿಷ್ಟು ಕ್ರುದ್ಧನಾಗಿ ಮಯೂರೇಶನ ಮೇಲೆ ಶಸ್ತ್ರಗಳ ವೃಷ್ಟಿಯನ್ನೇ ಕರೆಯ ತೊಡಗಿದನು. ಆಗ ಗಣೇಶನು ತನ್ನ ತ್ರಿಶೂಲನವನ್ನು ಎತ್ತಿ ಆ ಕ್ರೂರ ರಕ್ಕಸನಾದ ಕಮಲಾಸುರನ ಮಸ್ತಕದ ಮೇಲೆ ಪ್ರಹಾರ ಮಾಡಿದನು. ಅದರಿಂದ ಕಮಲಾಸುರನ ಮಸ್ತಕವು ಛಿನ್ನ ಭಿನ್ನವಾಗಿ ಭೀಮಾನದಿಯ ದಕ್ಷಿಣ ತೀರದಲ್ಲಿ ಹೋಗಿಬಿದ್ದಿತು. ಮಯೂರೇಶನು ಕೃಷ್ಣಾನದಿಯ ಉತ್ತರತೀರದಲ್ಲಿ ನಿಂತು ಕೊಂಡಿದ್ದನು.

ಆಗ ದೇವತೆಗಳು, ಋಷಿಗಳು ಶಿವಗಣಾಧೀಶರೂ ಎಲ್ಲರೂ ಮಯೂರೇಶನಿಗೆ ಜಯವಾಗಲಿ, ಗಣೇಶನಿಗೆ ಜಯವಾಗಲಿ ಎಂದು ಜಯಘೋಷ ಮಾಡಿದರು. ಆಕಾಶದಿಂದ ಪುಷ್ಪವೃಷ್ಟಿ ಆಯಿತು.

ವಿಶ್ವಕರ್ಮನು ಅದೇ ಸ್ಥಳದಲ್ಲಿ ಪಾರ್ವತಿ ಪರಮೇಶ್ವರರಿಗೂ ಮಯೂರೇಶನಿಗೂ ದಿವ್ಯವಾದ ಮಂದಿರವೊಂದನ್ನು ವಾಸಮಾಡಲಿಕ್ಕಾಗಿ ನಿರ್ಮಿಸಿದನು. ಪಾರ್ವತಿ ಪರಮೇಶ್ವರರೂ ಮತ್ತು ಮಯೂರೇಶನು ಅಲ್ಲಿಯೇ ನಿರಂತರ ನೆಲೆಸಿನಿಂತರು. ಆ ಕ್ಷೇತ್ರಕ್ಕೆ ಮಯೂರೇಶ್ವರ ಕ್ಷೇತ್ರ ಎಂದು ಕರೆದರು. ಅದು ಈಗ ಮಯೂರೇಶ್ವರ ಕ್ಷೇತ್ರ ಎಂದು ಪ್ರಸಿದ್ಧವಾಗಿದೆ.

ಮಯೂರೇಶನು ಹದಿಮೂರು ವರ್ಷದವನಾದಾಗ ಮಂಗಲ ಎಂಬ ದೈತ್ಯನು ಹಂದಿಯ ರೂಪದಿಂದ ಬಂದನು. ಅವನು ಕಾಡಿನಲ್ಲಿರುವ ವೃಕ್ಷಗಳನ್ನೆಲ್ಲ ನಾಶಮಾಡುತ್ತ, ಮುನಿಪುತ್ರರು ಆಶ್ರಮ ಕಟ್ಟಿಕೊಂಡು ಇರುವ ಸ್ಥಾನಗಳ ಒಳಗೆ ಬಂದನು. ದೈತ್ಯಾಕಾರಾದ ಆ ವರಾಹವನ್ನು ಕಂಡು ಮುನಿಪುತ್ರೆಲ್ಲರೂ ಭಯಭ್ರಾಂತರಾಗಿ ನಿಂತರು. ಮಯೂರೇಶನು ಓಡಿಬಂದು ಆ ಮಂಗಲಾಸುರನ ಮೇಲೆ ಎರಗಿದನು. ವರಾಹರೂಪದಲ್ಲಿರುವ ಆ ದೈತ್ಯನ ಎರಡೂ ಹಲ್ಲುಗಳನ್ನು ಹಿಡಿದು ಅದನ್ನು ಮೇಲೆ ಕೆಳಗೆ ಎಡಕ್ಕೆ ಬಲಕ್ಕೆ ಹೊರಳಾಡಿಸಿ ಅರೆಚಣದಲ್ಲಿ ಆ ದುರ್ದಾನವನನ್ನು ಮರ್ದಿಸಿ ವಧಿಸಿ ಬಿಟ್ಟನು. ಇದರಿಂದ ಸಂತುಷ್ಟರಾದ ಮುನಿಗಳು ಹರಿಸಿದರು. ಮಿತ್ರರು ಜಯಜಯಕಾರ ಮಾಡಿದರು.

ಒಂದು ದಿನ ಶಿವನ ಜಡೆಯಲ್ಲಿ ಇರುವ ಚಂದ್ರನು ಕಾಣದಂತಾದನು. ಆಗ ಮಹಾದೇವನು ತನ್ನ ಶಿರೋಲಂಕಾರಭೂಷಿತನಾದ ಚಂದ್ರನಿಗೇನಾಯಿತು ? ಎಲ್ಲಿ ಹೋಗಿದ್ದಾನೆ ಎಂದು ಕೇಳಿದನು ಆಗ ಶಿವಗಣದಲ್ಲಿ ಒಬ್ಬನು ''ಪ್ರಭು ಮಯೂರೇಶನು ನಿಮ್ಮ ಜಟಾಜೂಟದಲ್ಲಿ ಚಂದ್ರಶಕಲವನ್ನು ಆಟವಾಡಲು ತೆಗೆದುಕೊಂಡು ಹೋಗಿದ್ದಾನೆ'' ಎಂದು ಹೇಳಿದರು. ಅದನ್ನು ಕೇಳಿ ಪರಮೇಶ್ವರನಿಗೆ ಬಹುಕೋಪಬಂದಿತು. ಅವನು ತನ್ನ ಶಿವಗಣದ ವೀರರಿಗೆ ಅಪ್ಪಣೆಕೊಟ್ಟನು. ''ನೀವು ಕೂಡಲೆ ಇಲ್ಲಿಂದ ಹೋಗಿರಿ, ಎಲ್ಲಿ ಇದ್ದಲ್ಲಿಂದ ಚಂದ್ರನನ್ನು ತೆಗೆದುಕೊಂಡು ಬನ್ನಿರಿ''.

ಶಿವಗಣಾಧೀಶರು ಮಯೂರೇಶನ ಬಳಿಗೆ ಬಂದು ಆ ಚಂದ್ರಶಕಲವನ್ನೂ ತೆಗೆದುಕೊಂಡು ಹೋಗಲು ಪ್ರಯತ್ನಿಸಿದರು. ಆದರೆ ಧೈರ್ಯಶಾಲಿಯಾದ

ಮಯೂರೇಶನು "ನಾನು ಮೂರುಲೋಕಗಳನ್ನು ಸೃಷ್ಟಿ ಮಾಡುವ ಮಹಾಮಹಿಮಾಶಾಲಿಯಾದ ಪಾರ್ವತಿಪುತ್ರನಿರುತ್ತೇನೆ. ನಿಮ್ಮಂಥ ಗಣಗಳ ಮಾತನ್ನು ಕೇಳುವದಿಲ್ಲ." ಎಂದು ಹೇಳಿದನು. ಮರುಕ್ಷಣದಲ್ಲೆ ಅವನ ಉಸಿರಿನ ಗಾಳಿಯಿಂದಲೆ ಶಿವಗಣದವರೆಲ್ಲರೂ ತರೆಗೆಲೆಗಳಂತೆ ಹಾರಿ ಹೋಗಿ ಮಹಾದೇವನ ಸಮೀಪದಲ್ಲಿ ಉರುಳಾಡಿ, ಹೊರಳಾಡಿ ಹಾರಾಡುತ್ತ ಶಿವನ ಸಮೀಪಕ್ಕೆ ಬಂದರು.

ಅವರ ದುರ್ದಶೆಯನ್ನು ದುರವಸ್ಥೆಯನ್ನು ನೋಡಿ ಕುಪಿತನಾದ ಪಾರ್ವತೀ ಪತಿಯು ಪ್ರಮಥಗಣದವರಿಗೆ "ನೀವೂ ಹೋಗಿ ಮಯೂರೇಶನನ್ನು ಹಿಡಿದುಕೊಂಡು ಬನ್ನಿ, ಎಂದು ಹೇಳಿದನು. ಆಗ ಪ್ರಮಥಗಣದ ವೀರರು ಮಯೂರೇಶನನ್ನು ಹಿಡಿಯಲು ಅವನೊಡನೆ ಆಟವಾಡುತ್ತಿರುವ ಮುನಿಕುಮಾರರ ಬಳಿಗೆ ಬಂದರು. ಆದರೆ ಆ ವಿನಾಯಕನು ತನ್ನ ಶಕ್ತಿಯಿಂದ ಆ ಪ್ರಮಥಗಣಾಧೀಶರನ್ನೆಲ್ಲ ಮೋಹಿತರನ್ನಾಗಿ ಮಾಡಿ ತಾನು ಅದೃಶ್ಯನಾದನು. ಮೋಹಿತರಾಗದೆ ದೂರ ಉಳಿದ ಶಿವನ ಪರಿವಾರದವರು ಮಯೂರೇಶನನ್ನು ವನೋಪವನಗಳಲ್ಲಿ ಹುಡುಕಾಡ ತೊಡಗಿದರು. ಆದರೆ ಮಯೂರೇಶನು ಒಮ್ಮೊಮ್ಮೆ ಅವರ ಕಣ್ಣಿಗೆ ಗೋಚರನಾಗುತ್ತಿದ್ದನು. ಮರುಚಣದಲ್ಲಿ ಗುಪ್ತನಾಗುತ್ತಿದ್ದನು. ಅವನನ್ನು ಹಿಡಿಯಲು ಓಡಿ ಓಡಿ ಪ್ರಮಥ ಗಣದವರು ಅವನ ಕೈಗೆ ಸಿಕ್ಕದೆ ದಣಿದು ಉದ್ಭ್ರಾಂತರಾದರು. ಅವರ ದಯನೀಯವಾದ ದುಃಸ್ಥಿತಿಯನ್ನು ನೋಡಿ ಅವರ ಮೇಲೆ ಕೃಪೆಮಾಡಿ ಮಯೂರೇಶ ಅವರ ಕೈಯಲ್ಲಿ ಸಿಕ್ಕನು.

ಆಗ ಪ್ರಮಥಗಣದವರು ಅತ್ಯಂತ ಉತ್ಸಾಹದಿಂದ ಅವನನ್ನು ಕಟ್ಟಿ ಬಂಧನದಿಂದ ಬಿಗಿದು ತಮ್ಮ ಪ್ರಭು ಪರಮೇಶ್ವರನ ಬಳಿಗೆ ಕರೆದುಕೊಂಡು ಹೊರಟರು. ಅರ್ಧ ದಾರಿಕ್ರಮಿಸಿದ ಬಳಿಕ ಮಯೂರೇಶನು ಅಲ್ಲಿಯೇ ಕುಳಿತು ಬಿಟ್ಟನು. ಅವನನ್ನು ಅಲ್ಲಿಂದ ಕದಲಿಸಲು ಗಣಾಧೀಶರು ಶತಪ್ರಯತ್ನ ಮಾಡಿದರೂ ಏನೂ ಮಾಡಿದರೂ ಆ ವಿನಾಯಕನು ಅಲುಗಾಡಲಿಲ್ಲ. ಅವನನ್ನು ಆ ಸ್ಥಾನದಿಂದ ಹೊರಡಿಸಲು ಆ ಚೇಚೆ ಅಲುಗಾಡಿಸಲು ಯಾರಿಗೂ ಶಕ್ಯವಾಗಲಿಲ್ಲ.

ನೆಲದಮೇಲೆ ಬೆಟ್ಟದಂತೆ ಗಟ್ಟಿಯಾಗಿ ಅಚಲನಾಗಿ ಕುಳಿತುಕೊಂಡ ಮಯೂರೇಶನನ್ನು ಹಂದಾಡಿಸಲು ಆಗದಂಥ ಪ್ರಮಥ ವೀರರು ಪರಮೇಶ್ವರನ ಬಳಿಗೆ ಬಂದು ಮಯೂರೇಶನ ವಿಷಯದಲ್ಲಿ ತಮ್ಮ ಅಸಹಾಯಕತೆಯನ್ನು ನಿವೇದಿಸಿದರು. ಆಗ ಪರಮೇಶ್ವರನು ತನ್ನ ವಾಹನವಾದ ನಂದೀಶ್ವರನಿಗೆ ಮಯೂರೇಶನನ್ನು ಹಿಡಿದುಕೊಂಡು ಬರಲು ಅಪ್ಪಣೆ ಇತ್ತನು.

ಮಹೇಶ್ವರ ವಾಹನನಾದ ನಂದಿಯು ಮಯೂರೇಶನನ್ನು ಹಿಡಿದುಕೊಂಡು ಹೋಗಲು ಬಂದನು. ಮತ್ತು "ನಮ್ಮ ಒಡೆಯನಾದ ಶಂಕರನ ಬಳಿ ನೀನು ನಡೆ. ಇಲ್ಲದಿದ್ದರೆ ನಾನೇ ನಿನ್ನನ್ನು ಹಿಡಿದುಕೊಂಡು ಹೋಗುತ್ತೇನೆ" ಎಂದನು.

ನಂದೀಶ್ವರನ ಅಹಂಕಾರದ ಹೂಂಕಾರದ ಧ್ವನಿಯನ್ನು ಕೇಳಿ ನಸು ನಕ್ಕು, ಮಯೂರೇಶನು ನಿಟ್ಟುಸುರುಬಿಟ್ಟನು. ಅವನ ಉಸಿರಿನ ಗಾಳಿಯು ಬಡಿದ ಕೂಡಲೆ ನಂದಿಯು ನೆತ್ತರವನ್ನು ಕಾರುತ್ತ ನೆಲದ ಮೇಲೆ ಮೂರ್ಛಿತನಾಗಿ ಬಿದ್ದುಬಿಟ್ಟನು. ಎರಡು ಗಂಟೆಯ

ಅನಂತರ ಮೂರ್ಛೆ ತಿಳಿದೆದ್ದು ನಂದೀಶ್ವರನು ಶಿವನ ಬಳಿಗೆ ಬಂದನು. ಅಲ್ಲಿ ಅವನಿಗೆ ಒಂದು ಆಶ್ಚರ್ಯವು ಕಾದಿತ್ತು. ಮಯೂರೇಶನು ದಿವ್ಯ ವಸ್ತ್ರಾಭರಣಗಳನ್ನು ಧರಿಸಿ ತನ್ನ ತಂದೆಯಾದ ಮಹಾದೇವರ ತೊಡೆಯ ಮೇಲೆಯೇ ಕುಳಿತು ಕೊಂಡಿದ್ದನು ಮತ್ತು ತಾವು ಹುಡುಕ ಹೋದ ಭಾಲಚಂದ್ರನು ಮಹಾದೇವರ ಮುಕುಟ ತಟದಲ್ಲಿ ಶೋಭಿಸುತ್ತಲಿದ್ದಾನೆ

ಆಗ ನಂದೀಶ್ವರನು ಅದನ್ನು ನೋಡಿ ''ಪ್ರಭು ಬಾಲ ಚಂದ್ರನು ನಿಮ್ಮ ಜಡೆಯ ಮುಡಿಯಲ್ಲಿಯೇ ವಿರಾಜಮಾನನಾಗಿದ್ದಾನೆ'' ಎಂದು ಹೇಳಿದನು. ನಂದಿಯ ಮಾತನ್ನು ಕೇಳಿ ಮಹಾದೇವನು ಈ ಚಾರು ಚಂದ್ರನು ನನ್ನ ತಲೆಯ ಮೇಲೆಯೇ ಇರುತ್ತಾನೆ. ನಾನು ಸುಮ್ಮನೆ ಪ್ರಮಥಗಣದವರಿಗೆ ಆ ಚಂದ್ರಕಲೆಯನ್ನು ಹುಡುಕಿಕೊಂಡು ಬರಲು ಶ್ರಮಕೊಟ್ಟೆ.

ಆಗ ಪ್ರಮಥ ಗಣಾಧೀಶರೆಲ್ಲರೂ ಕೈ ಮುಗಿದು ಮಹಾದೇವರಿಗೆ ''ಪ್ರಭು ಈ ಮಯೂರೇಶನು ಇಂದಿನಿಂದ ನಮಗೆ ಸ್ವಾಮಿಯಾಗಲಿ'' ಎಂದು ಬೇಡಿಕೊಂಡರು ಶಿವನು ತಥಾಸ್ತು ಎಂದು ನುಡಿದನು. ಆಗ ಎಲ್ಲ ಋಷಿಮುನಿಗಳೂ ದೇವತೆಗಳೂ ''ಜಯಗಣರಾಜ'' ಜಯಗಣಪತಿ, ಜಯ ಮಯೂರವಾಹನ, ಜಯ ಮಯೂರೇಶ ಎಂದು ಗರ್ಜನೆ ಮಾಡುತ್ತ ದಶ ದಿಗಂತರಾಲವನ್ನೆಲ್ಲ ವಾಚಾಲಿತವನ್ನಾಗಿ ಮಾಡಿದವು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಮಯೂರೇಶನ ಮಹಾಪರಾಕ್ರಮ ಎಂಬ ಇಪ್ಪತ್ತೇಳನೇಯ ಅಧ್ಯಾಯ ಮುಗಿದುದು*



## ಸಿಂಧುದೈತನ ಸಂಹಾರ

**ಅಧ್ಯಾಯ - ೨೮**

ಮಯೂರೇಶನಿಗೆ ಹದಿಮೂರನೇ ವರ್ಷ ನಡೆದಾಗ ಗೌತಮಾದಿ ಋಷಿಗಳು ಪಾರ್ವತಿ ಪರಮೇಶ್ವರರ ಆಜ್ಞಾನುಸಾರ ಇಂದ್ರಯಾಗವನ್ನು ಪ್ರಾರಂಭಿಸಿದರು. ಆಗ, ಯಜ್ಞಕ್ಕೆ ವಿಘ್ನಮಾಡಲು ಕಲ, ವಿಕಲ ಎಂಬ ಇಬ್ಬರು ಪ್ರಚಂಡ ದೈತ್ಯರು ಮಹಿಷರೂಪದಿಂದ ಅಲ್ಲಿಗೆ ಬಂದರು. ಅವರಿಬ್ಬರನ್ನು ಮಯೂರೇಶನು ತಕ್ಷಣದಲ್ಲಿ ನಿಗ್ರಹಿಸಿ ಅವರಿಗೆ ಮುಕ್ತಿಯನ್ನು ಕರುಣಿಸಿದನು. ಮಯೂರೇಶನು ಹದಿನೈದನೆ ವರ್ಷದವನಿದ್ದಾಗ ಹುಲಿಯ ರೂಪದಿಂದ ಬಂದ ಸಿಂಧುದೈತ್ಯನ ಓರ್ವ ಸೇವಕ ರಾಕ್ಷಸನನ್ನು ಮಯೂರೇಶನು ಕೊಂದು ಹಾಕಿದನು.

ಮಯೂರೇಶನು ವೀರವಿಕ್ರಮದಿಂದ ದೊರೆತ ಅಪೂರ್ವವಾದ ವಿಜಯಶ್ರೀಯಿಂದ ಶೋಭಿಸತೊಡಗಿದನು. ತನ್ನ ತಾರುಣ್ಯದಿಂದ ತೇಜಃಪುಂಜನಾಗಿ ತೊಳಗಿ ಬೆಳಗುವ ಆ ತಮ್ಮ ಸುಕುಮಾರ ಕುಮಾರನನ್ನು ಕಂಡು ಸಂತೋಷಭರಿತರಾದ ಶಿವ ಪಾರ್ವತಿಯರು ಅವನಿಗೆ ಮದುವೆ ಮಾಡಬೇಕೆಂದು ವಿಚಾರಿಸಿದರು. ಅಷ್ಟರಲ್ಲಿ ನಾರದ ಮುನಿಗಳು ಅಲ್ಲಿಗೆ ಆಗಮಿಸಿದರು. ಶಿವದಂಪತಿಗಳು ಮಯೂರೇಶನಿಗೆ ಯೋಗ್ಯವಾದ ಒಂದು ಕನ್ನೆಯನ್ನು ಯಾರಾದರೂ ಇದ್ದರೆ ತಿಳಿಸಿರಿ ಎಂದು ಕೇಳಿದರು. ಆಗ ನಾರದರು ''ಪ್ರಭು ಒಂದಲ್ಲ, ಎರಡು ಕನ್ನೆಗಳನ್ನು ಕರೆದುಕೊಂಡು ಬಂದಿದ್ದೇನೆ. ಸಿದ್ಧಿ ಬುದ್ಧಿ ಎಂಬ

ಸೌಂದರ್ಯ ಸಂಪನ್ನರೂ ಶೀಲ ಸದ್ಗುಣ ನಡತೆಯಿಂದ ಶೋಭಿಸುವವರೂ ಆದ ಇಬ್ಬರು ಕನ್ಯೆಯರನ್ನು ಸಾಕ್ಷಾತ್ ಬ್ರಹ್ಮದೇವನೆ ಮಯೂರೇಶನಿಗಾಗಿ ಕಳಿಸಿಕೊಟ್ಟಿದ್ದಾನೆ. ತಾವು ದಯವಿಟ್ಟು ಈ ಕನ್ಯೆಯರನ್ನು ಸ್ವೀಕರಿಸಿರಿ.

ಬ್ರಹ್ಮದೇವರು ಕಳಿಸಿದ ಆ ಇಬ್ಬರೂ ಕನ್ಯೆಯರು ಪಾರ್ವತಿ ಪರಮೇಶ್ವರರಿಗೆ ಒಪ್ಪಿಗೆ ಯಾಯಿತು. ಸುಮುಹೂರ್ತದಲ್ಲಿ ಮಯೂರದ ಮೇಲೆ ಮಂಡಿಸಿದ ಗಣೇಶನನ್ನು ಮುಂದೆ ಮಾಡಿಕೊಂಡು ಪಾರ್ವತೀ ಪರಮೇಶ್ವರರು, ಋಷಿ, ಮುನಿ ಪ್ರಮಥಗಣದೊಂದಿಗೆ ನಿಬ್ಬಣ ಹೊರಟರು. ಈ ಎಲ್ಲ ಶಿವಪರಿವಾರವೂ ಗಂಡಕಿ ನಗರದ ದಾರಿಗುಂಟ ಹೋಗುತ್ತಿರುವಾಗ ಮಧ್ಯದಲ್ಲಿ ಏಳು ಕೋಟಿ ಉದ್ದಂಡ ಪ್ರಚಂಡವಾದ ಒಂದು ದೈತ್ಯರ ದಂಡು ಅವರಿಗೆ ಎದುರಾಯಿತು. ಅವರೆಲ್ಲರೂ ಶಿವ ಪರಿವಾರದ ಮೇಲೆ ಮುಗಿಬಿದ್ದರು. ಆಗ ಮಯೂರೇಶ್ವರನು ತಮ್ಮ ಮೇಲೆ ಆಕ್ರಮಣ ಮಾಡಿದವರನು ಸಮರ್ಥ ರೀತಿಯಿಂದ ಎದುರಿಸಿ ನಿಮ್ಮ ದರ್ಭಾಸ್ತ್ರ ಪ್ರಯೋಗ ಮಾಡಿರಿ ಎಂದು ಮುನಿ ಕುಮಾರರಿಗೆ ಆಜ್ಞೆ ಕೊಟ್ಟನು. ಮಯೂರೇಶನ ಆಜ್ಞೆಯಂತೆ ಮುನಿಪುತ್ರರು ಮಂತ್ರಗಳನ್ನು ಪಠಿಸಿ ಸಂಕಲ್ಪ ಪೂರ್ವಕವಾಗಿ ದರ್ಭಾಸ್ತ್ರಗಳನ್ನು ಪ್ರಯೋಗಿಸಿದರು. ಆ ಅಸ್ತ್ರಗಳು ದೈತ್ಯಸೇನೆಯ ವೀರ ಸೈನಿಕರ ಕಣ್ಣು, ಮೂಗು, ಕಿವಿ ಮತ್ತು ಶ್ವಾಸೋಚ್ಛ್ವಾಸದ ಜೊತೆಗೆ ಆ ಸೈನಿಕರ ಹೃದಯದಲ್ಲಿ ಪ್ರವಿಷ್ಟವಾದವು. ಅದರಿಂದ ಅಸುರ ಸೈನಿಕರೆಲ್ಲರೂ ಭಯಂಕರವಾಗಿ ಸೀನ ತೊಡಗಿದರು. ಕಣ್ಣಿನಿಂದ ಕಂಬನಿ ಉದುರತೊಡಗಿದವು. ಕಿವಿಗಳಲ್ಲಿ ಸಣ್ಣ ಸಣ್ಣ ದರ್ಭದ ತುಂಡುಗಳು ಹೊಕ್ಕದ್ದರಿಂದ ಅವರೆಲ್ಲರೂ ಕಿವುಡರಾದರು. ಶಾಸೋಚ್ಛಾಸ ನಿಂತು ಅವರೆಲ್ಲ ಸಂಕಟಪಡುತ್ತ ನೆಲದ ಮೇಲೆ ಬಿದ್ದುಕೊಂಡರು ಗಣೇಶನ ಮಿತ್ರರು. ತುಸು ಸಮಯದಲ್ಲಿಯೇ ಅಸುರಸೈನ್ಯವನ್ನೆಲ್ಲ ನಿರ್ನಾಮ ಮಾಡಿದರು. ಆಗ ಪರಮೇಶ್ವರನು ಅತ್ಯಂತ ಸಂತುಷ್ಟನಾಗಿ ತನ್ನ ಮಗನನ್ನು ತೊಡೆಯ ಮೇಲೆ ಕೂಡಿಸಿಕೊಂಡನು. ವಿಜಯಿಯಾದ ಮಯೂರೇಶನು ತನ್ನ ಎಲ್ಲ ಪರಿವಾರದೊಂದಿಗೆ ಪ್ರಯಾಣ ಬೆಳೆಸಿದನು.

ಸಿಂಧು ದೈತ್ಯನ ರಾಜಧಾನಿ ಗಂಡಕಿ ನಗರವು ಒಂದು ಯೋಜನ ದೂರವಿದ್ದಾಗ ಮಯೂರೇಶನು ವಾಹನದಿಂದ ಕೆಳಗೆ ಇಳಿದನು. ಅಲ್ಲಿಯೆ ಒಂದು ವಿಸ್ತಾರವಾದ ಸ್ಥಳದಲ್ಲಿ ಸಿಂಹಾಸನವನ್ನು ಸ್ಥಾಪಿಸಿದನು. ಅದರ ಮೇಲೆ ಪಾರ್ವತೀ ಪರಮೇಶ್ವರರನ್ನು ಕೂಡಿಸಿದನು. ಎಲ್ಲ ಋಷಿಗಳು ಆ ಪಾರ್ವತೀ ಪರಮೇಶ್ವರರ ಎದುರು ದರ್ಭಾಸನಗಳ ಮೇಲೆ ಆಸೀನರಾದರು.

ಆಗ ಮಯೂರೇಶನು ಎಲ್ಲರ ಸಮ್ಮುಖದಲ್ಲಿ ಬಂದು ನಿಂತು ಹೇಳಿದನು. ''ಪೂಜ್ಯರೆ ಹಾಗೂ ಪರಿವಾರದವರೆ, ನನ್ನ ಪ್ರತಿಜ್ಞೆಯನ್ನು ಕೇಳಿರಿ. ಸಿಂಧು ದೈತ್ಯನ ಕಾರಾಗೃಹದಿಂದ ದೇವತೆಗಳನ್ನು ಬಿಡಿಸುವವರೆಗೆ ನಾನು ಮದುವೆ ಮಾಡಿಕೊಳ್ಳುವದಿಲ್ಲ. ಆದುದರಿಂದ ನೀವು ಈಗ ಓರ್ವ ಅತ್ಯಂತ ಚತುರನಾದ ಪುರುಷನನ್ನು ಸಿಂಧುರಾಜನ ಕಡೆಗೆ ಕಳುಹಿಸಿರಿ. 'ದೇವತೆಗಳನ್ನೆಲ್ಲ ಕಾರಾಗೃಹದಿಂದ ಮುಕ್ತ ಮಾಡು' ಎಂದು ಹೇಳಿ ಕಳಿಸಿರಿ. ಅವರು ಒಪ್ಪದಿದ್ದರೆ ನಾನು ಅವನನ್ನು ಸೋಲಿಸಿ ದೇವತೆಗಳನ್ನು ಬಂಧನದಿಂದ ಬಿಡುಗಡೆ ಮಾಡುತ್ತೇನೆ. ಅನಂತರವೇ ನನ್ನ ವಿವಾಹ ಆಗಲಿ''

ಗಣೇಶನ ಮಾತನ್ನು ಕೇಳಿ ಬ್ರಹ್ಮದೇವನು ದೇವತೆಗಳ ಬಿಡುಗಡೆ ಮಾಡಲು, ''ಸಿಂಧು ದೈತ್ಯನ ಬಳಿಗೆ ಯಾರನ್ನಾದರೂ ಕಳಿಸಿ ಕೊಡಬೇಕು. ಈ ವಿಷಯದಲ್ಲಿ, ಚತುರಮತಿಯೂ, ನೀತಿನಿಪುಣನೂ ಆದ, ಪುಷ್ಪದಂತದನನ್ನು ಕಳಿಸಿಕೊಡಬೇಕು. ಅವನ ಮುಖಾಂತರ ಸಿಂಧು ದೈತ್ಯನಿಗೆ ದೇವತೆಗಳನ್ನೆಲ್ಲ ಬಂದೀಮನೆಯಿಂದ ಬೇಗ ಬಿಡುಗಡೆ ಮಾಡಲು ಆಗ್ರಹ ಪೂರ್ವಕವಾಗಿ ಹೇಳಿಕಳಿಸಿಕೊಡಬೇಕು'' ಎಂದು ತಮ್ಮ ಅಭಿಪ್ರಾಯವನ್ನು ಸೂಚಿಸಿದರು.

ಆಗ ಅಲ್ಲಿಯೇ ನಿಂತ ಪುಷ್ಪದಂತನು ಕೈ ಮುಗಿದು ''ಪ್ರಭು ಮಯೂರೇಶ, ಆ ದೈತ್ಯರಾಜನ ಬಳಿಗೆ ಬೇರೆ ಯಾರನ್ನಾದರೂ ಕಳಿಸಿರಿ. ನನಗೆ ಆ ದರ್ಪೋದ್ಧತನಾದ ದುರ್ದಾನವನನ್ನು ಕಂಡ ಕೂಡಲೆ ಕೋಪ ಸಿಡಿದೇಳುತ್ತಿದೆ. ಶಾಂತಿಸಂಧಾನದ ಮಾತುಗಳನ್ನು ಆಡಲು ನನ್ನಲ್ಲಿ ತಾಳ್ಮೆಯೇ ಉಳಿಯುವದಿಲ್ಲ. ಆ ಪಾಪಿಯನ್ನು ನಾನು ರಣರಂಗದಲ್ಲಿಯೇ ಸಂಧಿಸುತ್ತೇನೆ'' ಎಂದು ತನ್ನ ಅಸಮ್ಮತಿಯನ್ನು ಸೂಚಿಸಿದನು.

ಆಗ, ಮಯೂರೇಶನು ನಂದಿಯನ್ನು ಕರೆದು ''ಪರಮೇಶ್ವರ ಪರಮಭಕ್ತನಾದ, ನಂದೀಶ್ವರ, ಈ ಸಂಧಾನಕಾರ್ಯದಲ್ಲಿ ನೀನು ಯಶಸ್ವಿಯಾಗಬಲ್ಲೆ. ಸಿಂಧುರಾಜನ ಬಳಿಗೆ ಹೋಗಿ ಸಾಮೋಪಾಯದಿಂದ ವೃಂದಾರಕರನ್ನೆಲ್ಲ ಬಂಧನದಿಂದ ಮೋಚನ ಮಾಡಿಸು'' ಎಂದು ಅಪ್ಪಣೆ ಮಾಡಿದನು

ಅವನ ಮಾತನ್ನು ಶಿರಸಾವಹಿಸಿ ನಂದಿಯು ಪಾರ್ವತಿ ಪರಮೇಶ್ವರ ಹಾಗೂ ಮಯೂರೇಶರಿಗೆ ವಂದಿಸಿ, ಸಿಂಧುರಾಜನ ಆಸ್ಥಾನಕ್ಕೆ ತೆರಳಿದನು.

ಆಗ ಸಿಂಧು ದೈತ್ಯನ ಸಭಾ ಮಂಟಪದಲ್ಲಿ ಸಂಗೀತ, ನೃತ್ಯ ಕಾರ್ಯಕ್ರಮ ನಡೆದಿತ್ತು.

ಸೂರ್ಯನಂತೆ ಅತ್ಯಂತ ತೇಜಸ್ವಿಯಾದ ನಂದೀಶ್ವರನ ವರ್ಚಸ್ವಿ ಮುಖಮಂಡಲವನ್ನು ನೋಡಿ, ದೈತ್ಯರಾಜನು ಪ್ರಭಾವಿತನಾದನು ಮತ್ತು ಶಾಂತ ಸ್ವರದಿಂದ ಕೇಳಿದನು.

**ಸಿಂಧು ದೈತ್ಯ :-** ಎತ್ತಿನರೂಪದ ಮಹಾಪುರುಷನೆ ನೀನು ಯಾರು ? ನೀನು ಅಗ್ನಿಯಂತೆ ಮಹಾತೇಜಸ್ವಿಯಾಗಿ ಕಾಣುತ್ತಾ ಇದ್ದಿ. ನಿನ್ನ ಹೆಸರೇನು ? ಎಲ್ಲಿಂದ ಬಂದೆ? ಇಲ್ಲಿ ಬರಲು ನಿನ್ನ ಉದ್ದೇಶವೇನು ?

**ನಂದೀಶನು :-** ನಾನು, ಬ್ರಹ್ಮಾಂಡದ ಅಧಿಪತಿಯಾದ ಭಗವಾನ್ ಶಂಕರನ ವಾಹನ. ನನ್ನ ಹೆಸರು ನಂದಿ. ನನ್ನ ಸ್ವಾಮಿಯಾದ ಶಂಕರನ ಪ್ರೀತಿಯ ಪುತ್ರನೇ ಮಯೂರೇಶ. ಅವನು ದುಷ್ಟರ ಸಂಹಾರವನ್ನು ಮಾಡಿ, ಭೂಭಾರವನ್ನು ಇಳಿಸಲಿಕ್ಕಾಗಿಯೇ ಮಹಾದೇವನ ಮನೆಯಲ್ಲಿ ಅವತಾರ ಮಾಡಿದ್ದಾನೆ. ಸಾವಿರಾರು ಮಂದಿ ಶೂರವೀರರಾದ ದೈತ್ಯದಾನವರನ್ನು ಸಂಹರಿಸಿದ್ದಾನೆ. ಅಂಥ ಆ ಮಯೂರೇಶನು ನಿನಗೆ ಒಂದು ಸಂದೇಶವನ್ನು ಕಳಿಸಿದ್ದಾನೆ. ನೀನು ಸೆರೆಹಿಡಿದು ಕಾರಾಗೃಹದಲ್ಲಿರಿನದ ಸುರಸತ್ತಮರನ್ನೆಲ್ಲ ಈಗಲೇ ಬಿಡುಗಡೆ ಮಾಡು. ಅಂದರೆ ಮಾತ್ರ ನೀನು ಶೇಷಾಯುಷ್ಯವನ್ನು ಸುಖದಿಂದ ಕಳೆಯಬಹುದು. ಇಲ್ಲದಿದ್ದರೆ ನನ್ನ ಮಾತಿನಂತೆ ನೀನು ದೇವತೆಗಳನ್ನು ಬಂಧ ಮುಕ್ತರನ್ನಾಗಿ ಮಾಡದಿದ್ದರೆ ನಾನು ನಿನ್ನೊಡನೆ ಯುದ್ಧ ಮಾಡಬೇಕಾಗುವುದು.

**ಸಿಂಧುದೈತ್ಯ :-** ವೃಷಭ ಪುತ್ರ, ನೀನೇನೋ ಬೃಹಸ್ಪತಿಯಂತೆ ಅತ್ಯಂತ ಬುದ್ಧಿವಂತ ಇರುವೆ. ಆದರೆ ನಿನಗೆ ನನ್ನ ಅತ್ಯದ್ಭುತವಾದ ಶಕ್ತಿ ಸಾಮರ್ಥ್ಯಗಳ ಪರಿಜ್ಞಾನವಿಲ್ಲ. ನಾನು ಎಲ್ಲ ದೇವತೆಗಳನ್ನು ನನ್ನ ಭುಜ ಬಲ ಪರಾಕ್ರಮದಿಂದ ಸೋಲಿಸಿ ಸೆರೆಹಿಡಿದು ತಂದು ಸೆರೆಮನೆಯಲ್ಲಿ ಇಟ್ಟಿದ್ದೇನೆ. ನನ್ನನ್ನು ಯುದ್ಧದಲ್ಲಿ ಸೋಲಿಸಿದರೆ ಮಾತ್ರ ಆ ದೇವತೆಗಳ ಮೋಚನವಾಗುವದು. ನಿನ್ನ ತಂದೆಯಾದ ಶಂಕರನು ನನ್ನ ಭಯದಿಂದ ಭ್ರಾಂತನಾಗಿ ಕಂಡಕಂಡಲ್ಲಿ ತಲೆಮರೆಸಿಕೊಂಡು ತಿರುಗುತ್ತಿದ್ದಾನೆ. ಅವನ ಹಾಲುಗಲ್ಲದ ಹಸುಳೆಯಾದ ನೀನು, ನನಗೆ ಭಯ ತೋರಿಸುತ್ತಲಿರುವೆ. ನರಿಯು ಸಿಂಹದ ಮುಂದೆ ಹೆದರಿ ಪಲಾಯನ ಮಾಡುವದರ ಹೊರತು ಬೇರೆ ಏನನ್ನು ತಾನೇ ಮಾಡಬಲ್ಲದು ! ನೀನು ಈಗ ಮಯೂರೇಶನ ಕಡೆಯಿಂದ ಶಾಂತಿದೂತನಾಗಿ ಬಂದಿರುವೆ. ರಾಜನೀತಿಯನ್ನು ಅನುಸರಿಸಿ, ನಾನು ನಿನ್ನನ್ನು ಹೊಡೆಯದೆ, ಹಿಂಸಿಸದೆ ಬಿಟ್ಟು ಬಿಟ್ಟಿದ್ದೇನೆ. ನಾನು ಕ್ರುದ್ಧವಾಗಿ ನಿಂತುಕೊಂಡರೆ ಮೂರುಲೋಕಗಳಲ್ಲಿಯೇ ನಿನಗೆ ಶರಣು ಬಂದವರು ಯಾರು ಉಳಿಯದಂತೆ ನೋಡುತ್ತೇನೆ''. ಸಿಂಧು ದೈತ್ಯನ ಹೀಗೆ ಹೇಳಿ ನಂದೀಶ್ವರನು ಅಲ್ಲಿ ನಿಂತು ಒಂದು ಹೂಂಕಾರವನ್ನು ಮಾಡಿದನು. ಅವನ ಘನಗರ್ಜನೆಯ ಧ್ವನಿಯಿಂದಲೇ ಭಯಭ್ರಾಂತರಾದ ಎಷ್ಟೋ ದುಷ್ಟದೈತ್ಯರು ನೆಲದ ಮೇಲೆ ಉರುಳಿಬಿದ್ದರು. ಆಗ ನಂದೀಶ್ವರನು ನಿರ್ಭಯನಾಗಿ ಪಾರ್ವತಿ ಪರಮೇಶ್ವರರ ಬಳಿಗೆ ಬಂದು ನಡೆದ ಸಮಾಚಾರವನ್ನೆಲ್ಲ ತಿಳಿಸಿದನು. ಅದನ್ನು ಕೇಳಿ ಮಯೂರೇಶನು ನುಡಿದನು.

**ಮಯೂರೇಶ :-** ನನಗೆ, ಹಿಂಸಾಪ್ರಧಾನವಾದ ಯುದ್ಧಮಾಡಲು ಇಷ್ಟವಿಲ್ಲ. ಆದರೆ ನಾನು ಸ್ವಯಂಶಾಂತಿ ಕಾಮುಕನಾಗಿದ್ದರೂ ಯುದ್ಧದ ಹೊರತು ಬೇರೆ ಯಾವ ಉಪಾಯದಿಂದಲೂ ಬಂದಿಮನೆಯಲ್ಲಿ ಕೈದಿಗಳಾಗಿ, ದುಃಖಾರ್ತರಾಗಿ ಇದ್ದ ನಾಕಲೋಕದ ನಾಗರಿಕರನ್ನು ಅರ್ಥಾತ್ ದೇವತೆಗಳನ್ನು ಬಂಧಮುಕ್ತರನ್ನಾಗಿ ಮಾಡಲು ಸಾಧ್ಯವಿಲ್ಲ. ಆದುದರಿಂದ ವೃಂದಾರಕ ವೃಂದದ ಬಂಧನ ಮಾಡಿ ಬಂಧಿಖಾನೆಯಲ್ಲಿ ಇರಿಸಿದ ಆ ದೈತ್ಯಾಧಮನನ್ನು ಯುದ್ಧಮಾಡಿ ಗೆದ್ದು ವಧಿಸಲೇಬೇಕು. ಇದೊಂದು ನಮಗೆ ಸುವರ್ಣಸಂಧಿ. ಇದರಿಂದ ಅಸುರರೆಲ್ಲರೂ ಸೋತು ಸತ್ತು ಸರ್ವನಾಶವನ್ನು ಹೊಂದುವರು. ದೇವತೆಗಳು ಬಂಧಮುಕ್ತರಾಗುವರು. ಋಷಿಮುನಿಗಳು ನಿರ್ಭಯರಾಗಿ ಯಜ್ಞಯಾಗಾದಿ ಪುಣ್ಯಕಾರ್ಯಗಳನ್ನು ನಡೆಸುವರು. ಅದಕ್ಕಾಗಿ ನಾವೆಲ್ಲರೂ ಈಗಲೆ ಸೇನಾಸಮೇತರಾಗಿ, ಶಸ್ತ್ರಾಸ್ತ್ರಗಳಿಂದ ಸಂಪನ್ನರಾಗಿ ದೈತ್ಯರ ಜೊತೆಗೆ ಯುದ್ಧಕ್ಕೆ ಸಿದ್ಧರಾಗಿ ಹೊರಡೋಣ.

ಮಯೂರೇಶನ ಆಜ್ಞೆಯಂತೆ ಪ್ರಮಥಗಣದವರೆಲ್ಲರೂ ಉತ್ಸಾಹದಿಂದ ಯುದ್ಧಕ್ಕೆ ಹೊರಟರು. ನವಿಲಿನ ಮೇಲೆ ಆರೂಢನಾಗಿ ಗಣೇಶನೂ ಎತ್ತನ್ನು ಹತ್ತಿಕೊಂಡು ಮಹಾದೇವನೂ ವೀರಭದ್ರ, ನಂದೀಶ್ವರ, ಪುಷ್ಪದಂತ, ಸ್ಕಂದ ಮೊದಲಾದ ಶಿವಸೇನಾ ನಾಯಕರೊಂದಿಗೆ ''ಜಯಮಯೂರೇಶ, ಜಯಗಣೇಶ, ಜಯಜಯ ಮಹಾದೇವ'' ಎಂದು ವೀರಘೋಷವನ್ನು ಮಾಡುತ್ತ ಸಿಂಧುರಾಜನ ರಾಜಧಾನಿಯಾದ ಗಂಡಕಿ ನಗರದ ಬಳಿ ಬಂದರು. ಅಲ್ಲಿ ಅಸುರ ಸೇನೆಯು ಶಸ್ತ್ರ ಹಿರಿದು ನಿಂತುಕೊಂಡಿತ್ತು. ಎರಡೂಸೇನೆಗಳ ನಡುವೆ, ಹಣಾಹಣಿ ಹೋರಾಟ ನಡೆಯಿತು. ಸಿಂಧುದೈತ್ಯನು

ಅಶ್ವಾರೂಢನಾಗಿ ಗಂಧಾಸುರ, ಮದನಕಾಂತ, ವೀರ, ಧ್ವಜ, ಮಹಾಕಾಯ, ಶಾರ್ದೂಲ, ಧೂರ್ತ ಎಂಬ ಏಳು ತನ್ನ ಸೇನಾಪತಿಗಳಿಂದ ಕೂಡಿಕೊಂಡು ಭಯಂಕರ ಯುದ್ಧವನ್ನು ಮಾಡತೊಡಗಿದನು. ಆದರೆ ಮಯೂರೇಶನ ಪ್ರಬಲಪರಾಕ್ರಮಿಯಾದ ಸೇನೆಯ ಶಸ್ತ್ರಾಘಾತಗಳನ್ನು ತಾಳಲಾರದೆ ದೈತ್ಯಸೇನೆಯು ತತ್ತರಿಸಿ ಪಲಾಯನ ಮಾಡತೊಡಗಿತು. ಮಯೂರೇಶನನ್ನು ದಿಟ್ಟತನದಿಂದ ಎದುರಿಸಿ ಗಟ್ಟಿಯಾಗಿ ರಣರಂಗದಲ್ಲಿ ಉಳಿದ ಗಂಧಾಸುರ ಮೊದಲಾದ ಏಳೂ ಜನ ಮಹಾರಥಿಕರಾದ ಸೇನಾನಿಗಳು ಧರೆಗೆ ಉರುಳಿದರು. ದೈತ್ಯಸೇನೆ ಎಲ್ಲವೂ ಕ್ಷತ ವಿಕ್ಷತ ಗಾತ್ರವಾಗಿ ದರಾಶಾಯಿಯಾಯಿತು. ಈ ಮಯೂರೇಶನ ಸೇನೆಯ ಪ್ರಾಣಾಂತಕ ಪ್ರಹಾರವನ್ನು ತಾಳಲಾರದೆ ಉಳಿದ ಸೈನಿಕರೆಲ್ಲರೂ ಕಕ್ಕಬಿಕ್ಕಿಯಾಗಿ ದಿಕ್ಕು ದಿಕ್ಕಿಗೆ ಓಡಿಹೋದರು. ಮಯೂರೇಶನ ಸೈನಿಕರೆಲ್ಲರೂ ವಿಜಯ ದುಂಧುಂಬಿಯನ್ನು ಬಾರಿಸುತ್ತ ಶಿವನ ಸಮೀಪಕ್ಕೆ ಬಂದು ತಮ್ಮ ವಿಜಯದ ವಾರ್ತೆಯನ್ನು ಹೇಳಿದರು.

ಮರುದಿನ ಮತ್ತೆ ಭಯಂಕರವಾದ ಕದನವು ಎರಡೂ ಸೇನೆಗಳ ನಡುವೆ ಎಸಗಿತು. ಕ್ರೋಧ ಸಂತಪ್ತನಾದ ಸಿಂಧುದೈತ್ಯನು ಬಾಣಗಳ ಸುರಿಮಳೆ, ಜಡಿಮಳೆಗಳನ್ನು ವರ್ಷಿಸಿದನು. ಶಿವಗಣವೆಲ್ಲವೂ ತ್ರಾಹಿ ಎಂದು ಓಡತೊಡಗಿತು ಅಧಿಕಾಂಶ ಸೈನಿಕರು ಧರಾಶಾಯಿಯಾದರು. ಮದೋನ್ಮತ್ತನಾದ ಸಿಂಧುದೈತ್ಯನು ವೀರಭದ್ರನ ಕಾಲನ್ನು ಹಿಡಿದು ಗಿರಿಗಿರಿ ತಿರುಗಿಸಿ ನೆಲದ ಮೇಲೆ ಅಪ್ಪಳಿಸಿದನು. ನಂದಿಯ ತಲೆಬುರುಡೆ ಒಡೆಯುವಂತೆ ಘೋರ ಪ್ರಹಾರ ಮಾಡಿದನು. ಭೂತರಾಜನ ಸೊಂಟ ಮುರಿದನು. ಪುಷ್ಪದಂತನ ಹೊಟ್ಟೆ ಹರಿದನು, ಹಿರಣ್ಯಗರ್ಭನ ಚಂಡಿಕೆ ಹಿಡಿದು ಎತ್ತಿ ನೆಲದ ಮೇಲೆ ಅಪ್ಪಳಿಸಿದನು. ಭೃಂಗಿಯ ಉದರವನ್ನು ಸೀಳಿದನು. ವಿರೂಪಾಕ್ಷನೆ ಮೊದಲಾದ ಶಿವಸೈನಿಕರೆಲ್ಲರೂ ರಣಭೂಮಿಯಿಂದ ಓಡಿಹೋಗಿ ಪ್ರಾಣ ಉಳಿಸಿಕೊಂಡರು.

ಇದರಿಂದ ಮಯೂರೇಶನು ಕ್ರುದ್ಧನಾಗಿ ಸ್ವಯಂ ತಾನೆ ಸಿಂಧುದೈತ್ಯನನ್ನು ಎದುರಿಸಿದನು. ದೈತ್ಯರಾಜನು ಸೂರ್ಯನನ್ನು ಸ್ಮರಣ ಮಾಡಿ ಒಂದು ಅಪೂರ್ವವಾದ ಬಾಣವನ್ನು ಮಯೂರೇಶನ ಮೇಲೆ ಪ್ರಯೋಗ ಮಾಡಿದನು. ಮಯೂರೇಶನು ತನ್ನ ಕೊಡಲಿಯಿಂದ ಆ ಬಾಣವನ್ನು ಮತ್ತು ಬಿಲ್ಲನ್ನು ಕೂಡಿಯೆ ಕತ್ತರಿಸಿ ಚೂರು ಚೂರು ಮಾಡಿ ಹಾಕಿದನು. ದೈತ್ಯನು, ಚಕ್ರವನ್ನು ಬೀಸಿದನು. ಗಣೇಶನು ತನ್ನ ತ್ರಿಶೂಲದಿಂದ ಅದನ್ನು ತುಂಡು ತುಂಡಾಗಿ ನೆಲದ ಮೇಲೆ ಬೀಳಿಸಿದನು. ಆ ತ್ರಿಶೂಲವೂ ಚಕ್ರವನ್ನು ಸೀಳಿ ಹಾಕಿ ಅನಂತರ ಸಿಂಧುದೈತ್ಯನ ಮಸ್ತಕದ ಮೇಲೆ ಪ್ರಹಾರ ಮಾಡಿ, ಕುಂಡಲ ಸಹಿತವಾದ ದೈತ್ಯನ ಎರಡೂ ಕಿವಿಗಳನ್ನು ಕಿತ್ತಿಕೊಂಡು ಮಯೂರೇಶನ ಬಳಿಗೆ ಬಂದಿತು.

ಕಿವಿಗಳೆರಡೂ ಕತ್ತರಿಸಿ ಹೋದ ದಾನವೇಶ್ವರನು ಅತ್ಯಂತ ವ್ಯಾಕುಲನು ಸಂಭ್ರಾತನೂ, ಸಂತೃಪ್ತನೂ ಆಗಿ ''ಗುಣೇಶ, ನೀನು ನನ್ನ ಕಿವಿ ಕತ್ತರಿಸಿದೆ, ನಾನು ಈಗ ನಿನ್ನ ಮೂಗನ್ನು ಕತ್ತರಿಸುತ್ತೇನೆ'' ಎಂದು ಹೇಳಿ ಕೈಯಲ್ಲಿ ಖಡ್ಗವನ್ನು ಹಿಡಿದು ಮಯೂರೇಶನ ಕಡೆ ಓಡಿ ಬರತೊಡಗಿದನು. ಆದರೆ ಆ ದೈತ್ಯರಾಜನಿಗೆ ಒಂದು ಆಶ್ಚರ್ಯ ಕಾದಿತ್ತು. ಅವನ ನಾಲ್ಕು ಕಡೆಗೂ ಕೊಡಲಿ, ತ್ರಿಶೂಲ, ಬಿಲ್ಲು ಬಾಣಗಳನ್ನು ಹಿಡಿದ

ಮಯೂರೇಶನು ಬೇರೆ ಬೇರೆ ರೂಪಗಳಲ್ಲಿ ನಿಂತುಕೊಂಡಿದ್ದನು. ಹಿಂದೆ ಮಯೂರೇಶ, ಮುಂದೆ ಮಯೂರೇಶ, ಎಡಕ್ಕೆ, ಬಲಕ್ಕೆ ಮೇಲೆ ಕೆಳಕ್ಕೆ ಎಲ್ಲಿ ನೋಡಿದಲ್ಲೆಲ್ಲ ಆಯುಧ ಧಾರಿಯಾದ ಮಯೂರೇಶನ ಮೂರ್ತಿಗಳು ಕಾಣತೊಡಗಿದವು. ಅದನ್ನು ನೋಡಲಾಗದೆ ಅವನು ಭಯಭ್ರಾಂತನಾಗಿ ಕಣ್ಣು ಮುಚ್ಚಿದನು. ಆದರೆ ಅವನ ಹೃದಯದಲ್ಲಿಯೇ ಮಯೂರೇಶನ ಮೂರ್ತಿ ನಿಂತು ನಗುತ್ತಿತ್ತು. ಕಣ್ಣು ತೆರೆದ ಕೂಡಲೆ ಆ ಆಯುಧ ಹಸ್ತನಾದ ಮಯೂರೇಶ ಸಾಕ್ಷಾತ್ತಾಗಿ ನಿಂತು ಕೊಂಡಿದ್ದ.

ಈ ಪರಾಜಯದಿಂದ ದುಃಖಿತನೂ ಚಕಿತನೂ ಲಜ್ಜಿತನೂ, ಅವಮಾನಿತನೂ ಆದ ಸಿಂಧುದೈತ್ಯನು ಮುಖ ತಗ್ಗಿಸಿ ತನ್ನ ಮನೆಗೆ ನಡೆದ. ಮೊರೆಮುಚ್ಚಿಕೊಂಡು ಮನೆಯಲ್ಲಿ ಮಲಗಿಕೊಂಡು ಬಿಟ್ಟ. ಸಿಂಧುದೈತ್ಯನ ಈ ದಾರುಣ ದುಃಖದಿಂದ ದಪ್ಪ ಮುಖವನ್ನು ನೋಡಿ ಅವನ ಲಾವಣ್ಯವತಿ ಪತ್ನಿಯಾದ ದುರ್ಗಾಸತಿಯು ಗಾಬರಿಯಾಗಿ ಅವನ ಬಳಿ ಬಂದು ಕುಳಿತಳು. ತನ್ನ ಮಧುರ ಮಾತುಗಳಿಂದ ಸೋತು ನಿರ್ವಿಣ್ಣನೂ ವಿಷಣ್ಣನೂ ಆದ ಪತಿಯನ್ನು ಸಂತೈಸುತ್ತ ಹಿತವಚನಗಳನ್ನು ನುಡಿದಳು.

**ದುರ್ಗಾಸತಿ :-** ಪ್ರಭು, ತಾವು ತಮ್ಮ ಶೌರ್ಯ ಪರಾಕ್ರಮದಿಂದ ಕೋಟಿ ಕೋಟಿ ವೈರಿಗಳನ್ನು ವಧಮಾಡಿದಿರಿ. ನಿಮ್ಮ ವೀರವಿಕ್ರಮಗಳು ಪ್ರಪಂಚದಲ್ಲಿಯೇ ಪ್ರಸಿದ್ಧವಾಗಿವೆ. ಆದರೆ ಸ್ವಾಮಿ ದೇವ, ಬ್ರಾಹ್ಮಣ, ಗೋ, ಸಾಧು, ಸಜ್ಜನರ, ದ್ವೇಷ ಮಾಡುವ ಮನುಷ್ಯನು ಎಂದೂ ಯಶಸ್ಸನ್ನೂ ಶ್ರೇಯಸ್ಸನ್ನೂ ಹೊಂದಲಾರ.

**ನ ಯಶಃ ಪ್ರಾಪ್ಯತೆ ಸ್ವಾಮಿನ್ ಗೋಬ್ರಾಹ್ಮಣ ಸುರದ್ವಿಷ**
**ತದ್ವೇಷಾಚ್ಚೈವ ಕಲ್ಯಾಣಂ ಕಸ್ಯಾಪಿ ನ ಜಾಯತೆ ॥**
**ಸೇವನಾದ್, ವಂದನಾದ್ ಧ್ಯಾನಾತ್ ಸ್ಮರಣೌತ್ ಪೂಜನಾದಪಿ ।**
**ದೇವೈರಿಂದ್ರಾಭಿಃ ಸ್ಥಾನಾನ್ಯಾಪ್ತಾನಿ ಚ ಸ್ಥಿರಾಣಿ ಚ ॥**

ದೇವಬ್ರಾಹ್ಮಣರ ಸೇವೆ ವಂದನೆ, ಧ್ಯಾನ ಸ್ಮರಣ ಪೂಜನೆಗಳಿಂದಲೆ ಇಂದ್ರಾದಿ ದೇವತೆಗಳು ಕೂಡ ತಮ್ಮ ಸ್ಥಿರವಾದ ಸ್ಥಾನಗಳನ್ನು ಹೊಂದಿದ್ದಾರೆ. ನೀವು ಇದಕ್ಕೆ ವಿಪರೀತವಾಗಿ ದೇವ ಬ್ರಾಹ್ಮಣರನ್ನು ಪೀಡಿಸುತ್ತಲಿದ್ದೀರಿ, ಋಷಿಮುನಿಗಳನ್ನು ಕಾಡುತ್ತಲಿದ್ದೀರಿ. ಆದುದರಿಂದ ಪ್ರಭು, ಈಗಾದರೂ ನೀವು ನನ್ನ ಮಾತನ್ನು ಕೇಳಿರಿ. ಮೊದಲು ನೀವು ಸೆರೆಹಿಡಿದು ತಂದು ಕಾಗೃಹದಲ್ಲಿರಿಸಿದ ದೇವತೆಗಳನ್ನೆಲ್ಲ ಬಿಟ್ಟು ಬಿಡಿರಿ. ಮಯೂರೇಶನ ಚರಣಗಳಿಗೆ ಶರಣು ಹೋಗಿರಿ. ಇದರಿಂದ ನಿಮ್ಮ ಶೇಷಾಯುಷ್ಯವು ಸುಖಮಯವಾಗಿ ನಿಮಗೆ ಇಹಲೋಕದಲ್ಲಿ ಸುಖಶಾಂತಿ, ಪರಲೋಕದಲ್ಲಿ ಸದ್ಗತಿ ಎರಡೂ ದೊರಕುವವು.

ಆದರೆ ಮೃತ್ಯುಕಾಲವು ಒದಗಿ ಬಂದ ಆ ದುಷ್ಟ ದೈತ್ಯನಿಗೆ ಪತ್ನಿಯ ಹಿತವಚನವು ಹಿಡಿಸಲಿಲ್ಲ. ಅವನು ತನ್ನ ಸೈನ್ಯದಲ್ಲಿಯೇ ವೀರವರೇಣ್ಯರು ಎಂದು ಖ್ಯಾತರಾದ ಕೌಸ್ತುಭ, ಮೈತ್ರ, ಕಲ, ವಿಕಲ ಎಂಬ ವೀರಸೇನಾಪತಿಗಳನ್ನು ಶಿವಸೇನೆಯ ಮೇಲೆ ಯುದ್ಧಕ್ಕೆ ಕೊಟ್ಟು ಕಳಿಸಿದನು. ಅವರೆಲ್ಲರೂ ವೀರಭದ್ರ, ಷಣ್ಮುಖರ ಶಸ್ತ್ರ ಪ್ರಹಾರಗಳಿಂದ ಭಿನ್ನ ಭಿನ್ನ ಮಸ್ತಿಷ್ಕರಾಗಿ ರಣಾಂಗಣದಲ್ಲಿ ಮರಣ ಹೊಂದಿದರು. ಆದರಿಂದ ಸಿಂಧು ದೈತ್ಯನಿಗೆ ಬಹಳ

ದುಃಖವಾಯಿತು. ಆಗ ಅವನ ಜ್ಯೇಷ್ಠ ಪುತ್ರನಾದ ಅಧರ್ಮನು ತಂದೆಯ ಅಪ್ಪಣೆ ಪಡೆದು ಯುದ್ಧಕ್ಕೆ ಬಂದನು. ಅವನಿಗೆ ಬೆಂಬಲಿಗನಾಗಿ ಎರಡನೆ ಮಗ ವಿಧರ್ಮನು ಅಶ್ವಾರೂಡನಾಗಿ ಶಸ್ತ್ರಾಪಾಣಿಯಾಗಿ ಶಿವಸೇನೆಯಲ್ಲಿ ನುಗ್ಗಿದನು. ಅವರ ಭಯಂಕರವಾದ ಯುದ್ಧ ಚಾತುರ್ಯದಿಂದ ಶಿವಸೇನೆಯು ವ್ಯಾಕುಲಾಕುಲವಾಗಿ ಓಡತೊಡಗಿತು. ಸ್ಕಂದನು ಅಧರ್ಮ, ವಿಧರ್ಮ ದೈತ್ಯರೊಡನೆ ಬಾಹುಯುದ್ಧವನ್ನು ಮಾಡಿ ಇಬ್ಬರನ್ನೂ ತನ್ನ ಕೈಗಳಿಂದ ಎತ್ತಿ ಆಕಾಶದಿಂದ ತಿರುಗಿಸಿ ನೆಲದಮೇಲೆ ಅಪ್ಪಳಿಸಿದನು. ಆ ಇಬ್ಬರೂ ದೈತ್ಯರು ಚೂರುಚೂರಾಗಿ ಸತ್ತು ನೆಲದ ಮೇಲೆ ಬಿದ್ದರು.

ಮಕ್ಕಳ ಈ ದಾರುಣವಾದ ಅವಸಾನವನ್ನು ಕಂಡು ಸಿಂಧುದೈತ್ಯನು ಮೂರ್ಛಿತನಾಗಿ ಬಿದ್ದನು. ಅವನ ಲಾವಣ್ಯವತಿಯಾದ ಸಹಧರ್ಮಿಣಿ ದುರ್ಗಾಸತಿಯು ಕುರುಣಾಜನಕವಾಗಿ ಎದೆ ಎದೆ ಬಡಿದುಕೊಂಡು ಶೋಕಮಾಡಿದಳು. ಅನಂತರ ಸಿಂಧು ದೈತ್ಯನು ಚೇತರಿಸಿ ಕೊಂಡು ಎದ್ದು ಕೋಪಾಟೋಪದಿಂದ ಘೋರತರವಾದ ಶಸ್ತ್ರಾಸ್ತ್ರಗಳಿಂದ ಸನ್ನದ್ಧನಾಗಿ ರಣರಂಗ ಬೈರವನಾಗಿ ಮಯೂರೇಶ್ವರನ ಜತೆಗೆ ಯುದ್ಧಕ್ಕೆ ಸನ್ನದ್ಧನಾಗಿ ನಿಂತುಕೊಂಡನು

ಈ ನಿರಂತರ ಯುದ್ಧವನ್ನು ನೋಡಿ ಶಿವ ಪಾರ್ವತಿಯರು ಮಯೂರೇಶನನ್ನು ಹತ್ತಿರ ಕರೆದು ತೊಡೆಯ ಮೇಲೆ ಕೂಡಿಸಿಕೊಂಡು ಅಂತಕರಣದಿಂದ ಹೇಳಿದರು. ''ನೀನು ಯುದ್ಧಮಾಡಿ ಮಾಡಿ ಬಹು ದಣಿದಿರುವೆ. ತುಸು ಹೊತ್ತು ವಿಶ್ರಾಂತಿ ತೆಗೆದುಕೋ. ಅಷ್ಟರಲ್ಲಿ ನಾರದರು ಅಲ್ಲಿಗೆ ಬಂದು ಹೇಳಿದರು. ತಾಯಿ, ನಾನು ಇಲ್ಲಿಗೆ ಬಂದು ಬಹಳ ದಿನಗಳಾದವು. ಮಯೂರೇಶನ ವಿವಾಹವು ಬೇಗ ಆಗಬಹುದೆಂದು ನಾನು ನಿರೀಕ್ಷಿಸಿದ್ದೆ. ಸಿಂಧುರಾಜನ ಸಂಹಾರ ಆಗುವವರೆಗೆ ವಿವಾಹವಾಗುವದಿಲ್ಲ ಎಂದು ನಿಮ್ಮ ಚಿರಂಜೀವ ಹಟ ಹಿಡಿದಿದ್ದಾನೆ. ಸಿಂಧುದೈತ್ಯನ ಸಂಹಾರ ಬೇಗ ಆಗುವ ಲಕ್ಷಣವಿಲ್ಲ. ಸಿಂಧು ದೈತ್ಯ ಸಾಯುವದಿಲ್ಲ. ನಿಮ್ಮ ಗಣೇಶನ ವಿವಾಹ ಆಗುವದಿಲ್ಲ. ಆದುದರಿಂದ ನಾನು ಹೋಗುತ್ತೇನೆ ; ನನಗೆ ಅಪ್ಪಣೆ ಕೊಡಿರಿ.''

ನಾರದರ ಈ ಮಾತನ್ನು ಕೇಳಿ ಮಯೂರೇಶನು ''ಮುನೀಶ್ವರರೆ'' ಇನ್ನು ಸ್ವಲ್ಪ ಸಮಯದಲ್ಲೆ ನಾನು ಆ ದೈತ್ಯರಾಜನ ವಧವನ್ನು ಮಾಡಿ ಬರುತ್ತೇನೆ''. ಎಂದು ಹೇಳಿ ತನ್ನ ವಾಹನವಾದ ನವಿಲನ್ನು ಹತ್ತಿಕೊಂಡು ಯುದ್ಧಕ್ಕೆ ಹೊರಟನು. ನಂದಿ, ಭೃಂಗಿ, ವೀರಭದ್ರ, ಭೂತರಾಜ, ಷಣ್ಮುಖ, ಎಲ್ಲರೂ ಉತ್ಸಾಹದಿಂದ ಯುದ್ಧಕ್ಕೆ ಹೊರಟರು. ಎಲ್ಲರೂ ಉತ್ಸಾಹದಿಂದ ಹೋಗಿ ದೈತ್ಯರಾಜನ ರಾಜಧಾನಿಯ ದುರ್ಗದ ಮೇಲೆಯೇ ಏರಿದರು. ಅವನ ಅರಮನೆಯ ಸುವರ್ಣ ಶಿಖರವನ್ನು ಭೃಂಗಿಯು ಉರುಳಿಸಿದನು. ಅವನ ಅರಮನೆಯ ಮುಂದಿನ ಸಭಾಮಂಟಪವನ್ನು ಮುರಿದು ತುಂಡು ತುಣುಕುಮಾಡಿ ಚಲ್ಲಿದನು. ಉಳಿದ ಶಿವಸೇನಾಪತಿಗಳು ದೈತ್ಯಸೇನೆಯನ್ನೆಲ್ಲ ಶಸ್ತ್ರಾಸ್ತ್ರಗಳಿಂದ ಹೊಡೆದು ಛಿನ್ನವಿಚ್ಛಿನ್ನಗಳನ್ನಾಗಿ ಮಾಡಿ ಹೆಣಗಳ ಹಡದಿ ಹಾಸಿದರು.

ಇದನ್ನು ನೋಡಿ ಕೋಪೋದ್ರಿಕ್ತನಾದ ಸಿಂಧದೈತ್ಯನು ಸ್ವಯಂ ತಾನೆ ಶಸ್ತ್ರಧಾರಿಯಾಗಿ ಮಯೂರೇಶನನ್ನು ಎದುರಿಸಿದನು. ಅಸಂಖ್ಯ ಶಸ್ತ್ರಾಸ್ತ್ರಗಳನ್ನು ಮಯೂರೇಶನ ಮೇಲೆ ತೂರಿದನು. ಅವನ ಎಲ್ಲ ಶಸ್ತ್ರಾಸ್ತ್ರಗಳನ್ನು ವ್ಯರ್ಥಗೊಳಿಸಿ ಗಣೇಶನು ನವಿಲಿನಿಂದ ಕೆಳಗೆ

ಇಳಿದನು. ಶುದ್ಧ ನೀರಿನಿಂದ ಆಚಮನ ಮಾಡಿ ಅಮೃತದ ಬೀಜ ಮಂತ್ರದಿಂದ ಅಭಿಮಂತ್ರಿಸಿ ಪವಿತ್ರಮಂತ್ರಗಳನ್ನು ಉಚ್ಚರಿಸುತ್ತ ಮಯೂರೇಶನು ತನ್ನ ಕೊಡಲಿಯನ್ನು ಸಿಂಧುದೈತ್ಯನ ಹೊಕ್ಕಳದ ಮೇಲೆ ಪ್ರಹಾರ ಮಾಡಿದನು. ಮಿಂಚಿನ ಗೊಂಚಲದಂತೆ ದಶದಿಕ್ಕುಗಳನ್ನು ಬೆಳಗಿಸುತ್ತ ಆ ಕೊಡಲಿ ಸಿಂಧು ದೈತ್ಯ ನಾಭಿಕುಹರವನ್ನು ಸೀಳಿಕೊಂಡು ಆ ದುಷ್ಟದೈತ್ಯನ ದೃಢತರವಾದ ದೇಹವನ್ನು ನೆಲಕ್ಕೆ ಉರುಳಿಸಿಬಿಟ್ಟಿತು.

ದೇವತೆಗಳು ಮುಗಿಲು ಮಂಟಪದಿಂದ ಪುಷ್ಪವೃಷ್ಟಿಯನ್ನು ಮಾಡಿದರು, ಗಂಧರ್ವರು ಗಾಯನ ಮಾಡಿದರು. ಅಪ್ಸರೆಯರು ಕುಣಿದರು. ದೇವತೆಗಳೂ ಮುನಿಗಳೂ ಸ್ಕಂದನೂ ಮಯೂರೇಶನನ್ನು ಗದ್ಗದ ಕಂಠದಿಂದ ಸ್ತುತಿಸಿ ಪ್ರಾರ್ಥನೆ ಮಾಡಿದರು.

**ಪರಬ್ರಹ್ಮ ರೂಪಂ ಚಿದಾನಂದರೂಪಂ ಸದಾನಂದರೂಪಂ**
**ಸುರೇಶಂ ಪರೇಶಂ । ಗುಣಾಬ್ಧಿಂ ಗಣೇಶಂ ಗುಣಾತೀತ**
**ಮೀಶಂ ಮಯೂರೇಶಮಾದ್ಯಂ ನತಾಸ್ಮೋ ನತಾಸ್ಮಃ ॥ ೧**

ಪರಬ್ರಹ್ಮ ಸ್ವರೂಪಿಯೂ ಚಿದಾನಂದಮಯನೂ ಜ್ಞಾನಾನಂದ ಸ್ವರೂಪಿಯೂ ದೇವತೆಗಳಿಗೆಲ್ಲ ಒಡೆಯನೂ ಪರಮೇಶ್ವರನೂ ಗುಣಗಳ ಸಮುದ್ರನೂ ಗುಣಾತೀತನೂ ಸರ್ವಗುಣಸ್ವಾಮಿಯೂ ಆದ ಆದಿ ಈಶ್ವರಭೂತನಾದ ಮಯೂರೇಶನನ್ನು ನಮಸ್ಕರಿಸುತ್ತೇನೆ.

**ಜಗದ್ವಂದ್ಯಮೇಕಂ ಪರೋಂಕಾರ ಮೇಕಂ ಗಣಾನಾಂ ಪರಂ ಕಾರಣಂ ನಿರ್ವಿಕಲ್ಪಂ ।**
**ಜಗತ್ಪಾಲಕಂ ಹಾರಕಂ ತಾರಕಂ ತಂ ಮಯೂರೇಶಮಾದ್ಯಂ ನತಾಸ್ಮೋ ನತಾಸ್ಮಃ ೨**

ಈ ಮಯೂರೇಶನು ಜಗದ್ವಂದ್ಯ, ಓಂಕಾರ ಸ್ವರೂಪ, ಗುಣಗಳಿಗೆಲ್ಲ ಮೂಲಕಾರಣ, ನಿರ್ವಿಕಲ್ಪ, ಆಗಿದ್ದಾನೆ. ಈ ಎಲ್ಲ ಜಗತ್ತಿನ ಪಾಲಕನೂ ಅವನೇ. ತಾರಕನೂ ಅವನೆ, ಸಂಹಾರಕನ್ನೂ ಅವನೆ. ಇಂಥ ಗಣೇಶನನ್ನು ನಮಿಸುತ್ತೇವೆ.

**ಮಹಾದೇವಪುತ್ರಂಮಹಾದೈತ್ಯನಾಶಃ ಮಹಾಪುರುಷ ಸರ್ವವಿಘ್ನನಾಶಂ।**
**ಸದಾಭಕ್ತಪೋಷಂ ಪರಂ ಜ್ಞಾನಕೋಶಂ ಮಯೂರೇಶಮಾದ್ಯಂ**
**ನತಾಸ್ಮೋ ನತಾಸ್ಮಃ ॥ ೩**

ಮಹಾದೇವರ ಮಗನಾದ ಈ ಮಹಾಪುರುಷನು ದೊಡ್ಡ ದೊಡ್ಡ ದೈತ್ಯರನ್ನೆಲ್ಲ ಸಂಹರಿಸಿದ್ದಾನೆ. ಸರ್ವವಿಘ್ನಗಳನ್ನು ಅವನೇ ನಾಶಮಾಡುತ್ತಾನೆ. ಯಾವಾಗಲೂ ಭಕ್ತರನ್ನು ಪೋಷಿಸುವವನು. ಈ ಮಯೂರೇಶನು ಜ್ಞಾನದ ಒಂದು ಅಕ್ಷೀಣವಾದ ಕೋಶವಿದ್ದಂತೆ. ಈ ದೇವರನ್ನು ನಾವು ಮತ್ತೆ ಮತ್ತೆ ನಮಿಸುತ್ತೇವೆ.

**ಅನಾದಿಂಗುಣಾದಿಂ ಸುರಾದಿಂ ಶಿವಾಯಾ ಮಹಾತೋಷಕಂ**
**ಸರ್ವದಾಸರ್ವವಂದ್ಯಂ ।**
**ಸುರಾರ್ಯಂತಕಂ ಭುಕ್ತಿಮುಕ್ತಿಪ್ರದಂ ತಂ ಮಯೂರೇಶಮಾದ್ಯಂ**
**ನತಾಸ್ಮೋ ನತಾಸ್ಮಃ ॥ ೪**

ಈ ಮಯೂರೇಶನಿಗೆ ಆದಿ ಇಲ್ಲ. ಅವನು ಅನಾದಿ. ಆದರೂ ದೇವತೆಗಳಿಗೆ ಅವನೇ ಆದಿ. ಸದ್ಗುಣಗಳಿಗೂ ಅವನೆ ಆದಿ. ಎಂದರೆ ಮೂಲಕಾರಣ. ಪಾರ್ವತಿಗೆ ಅತ್ಯಂತ

ಸಂತೋಷವನ್ನು ಉಂಟುಮಾಡುವ ಈ ಮಯೂರೇಶನು ಸರ್ವಕಾಲದಿಂದಲೂ ಸರ್ವರಿಂದಲೂ ವಂದನೀಯನಾಗಿದ್ದಾನೆ. ರಾಕ್ಷಸರನ್ನು ಸಂಹರಿಸಿ ಇಹದಲ್ಲಿ ಭುಕ್ತಿಯನ್ನು ಪರದಲ್ಲಿ ಮುಕ್ತಿಯನ್ನು ಕರುಣಿಸುವನು. ಮಯೂರೇಶನನ್ನು ಮತ್ತೆ ಮತ್ತೆ ನಮಸ್ಕರಿಸುವೆವು.

**ಮಹೇಶಾದಿ ದೇವೈಃ ಸದಾ ಸೇವ್ಯಪಾದಂ ಸದಾ ರಕ್ಷಕ ಯೋಗಿನಾಂ ಚಿತ್‌ಸ್ವರೂಪಂ**
**ಸದಾ ಕಾಮರೂಪಂ ಕೃಪಾಂಭೋನಿಧಿಂತಂ ಮಯೂರೇಶ ಮಾದ್ಯಂ ನತಾಸ್ಮೋ ನ ತಾಸ್ಮಃ ॥ ೫**

ಮಹೇಶನೇ ಮೊದಲಾದ ದೇವತೆಗಳು ಯಾವಾಗಲೂ ಈ ಮಯೂರೇಶನ ಪಾದವನ್ನು ಸೇವಿಸುತ್ತಾರೆ. ಇವನು ಯೋಗಿಗಳಿಗೆ ರಕ್ಷಕನಾಗಿದ್ದಾನೆ. ಜ್ಞಾನ ಸ್ವರೂಪಿಯೂ ಆಗಿದ್ದಾನೆ. ಇವನು ಕಾಮರೂಪಿ, ಕರುಣೆಯ ಸಾಗರ. ಇಂಥ ಮಯೂರೇಶನಿಗೆ ನಮ್ಮ ಅನಂತ ವಂದನೆಗಳು. ಅವನನ್ನು ಪುನಃ ಪುನಃ ನಾವು ನಮಸ್ಕರಿಸುತ್ತೇವೆ.

ಪರಮ ಪುಣ್ಯವಾದ ಈ ಮಯೂರೇಶ ಸ್ತೋತ್ರವನ್ನು ಒಂದು ಸಾವಿರ ಸಲ ಆವರ್ತನ ಅಥವಾ ಪಠಣವನ್ನು ಮಾಡಿದರೆ ಬಂಧನದಲ್ಲಿದ್ದವನಿಗೆ ಬೇಗನೆ ಬಿಡುಗಡೆ ಯಾಗುವದು. ಈ ಮಂತ್ರವನ್ನು ಹತ್ತು ಸಾವಿರ ಸಲ ಪುನಶ್ಚರಣ ಮಾಡಿದರೆ, ಸರ್ವತ್ರ ವಿಜಯವು ಕಟ್ಟಿಟ್ಟ ಬುತ್ತಿ. ಈ ಮಂತ್ರ ಜಪಕರು ಅತ್ಯಂತ ದುಲರ್ಭವಾದ ಅತುಲ ಐಶ್ವರ್ಯವನ್ನು ಪಡೆಯುತ್ತಾರೆ. ಅಸಾಧ್ಯವಾದುದನ್ನೆಲ್ಲ ಈ ಮಂತ್ರ ಸಾಧಿಸಬಲ್ಲದು ಅರೆ ನಿಮಿಷದಲ್ಲಿ. ಈ ಸ್ತೋತ್ರಪಾಠಕನು ಪುತ್ರವಂತನೂ ಧನವಂತನೂ, ಧೀಮಂತನೂ ಭಾಗ್ಯವಂತನೂ ಆಗುವನು. ಮತ್ತು ಎಲ್ಲರನ್ನೂ ತನ್ನ ವಶದಲ್ಲಿ ಇಟ್ಟುಕೊಳ್ಳುವನು.

ಹೀಗೆ ದೇವತೆಗಳೆಲ್ಲರೂ ಮಯೂರೇಶನನ್ನು ಸ್ತೋತ್ರ ಮಾಡಿ ಅವನ ಪಾದಗಳಲ್ಲೂ ತಮ್ಮ ಭಕ್ತಿಕುಸುಮಗಳನ್ನು ಅರ್ಪಿಸಿದರು.

ಜಗಜ್ಜನನಿಯಾದ ಪಾರ್ವತೀದೇವಿಯು ತನ್ನ ಪುತ್ರ ಮಯೂರೇಶನು ಸಿಂಧು ದೈತ್ಯನನ್ನು ಲೀಲಾಜಾಲವಾಗಿ ವಧಿಸಿದ ಸಮಾಚಾರ ಕೇಳಿ ಆನಂದ ತುಂದಿಲಾದಳು. ಅವನು ಇದ್ದಲ್ಲಿಗೆ ಬಂದು ಆ ಮಯೂರೇಶನನ್ನು ಪ್ರೀತಿಯಿಂದ ಆಲಿಂಗಿಸಿಕೊಂಡಳು. ಪರಮೇಶ್ವರನೂ ಕೂಡ ಪರಮಾನಂದ ಭರಿತನಾಗಿ, ಪುತ್ರನನ್ನು ಪ್ರೇಮಭರದಿಂದ ಬಿಗಿದಪ್ಪಿ, ಮೈದಡವಿ ಹರ್ಷಾಶ್ರುವನ್ನು ಉದುರಿಸಿ ಅಂತಃಕರಣಪೂರ್ವಕವಾಗಿ ಚಿರಂಜೀವಿಯಾಗು ಎಂದು ಆಶೀರ್ವದಿಸಿದನು.

ಮಹಾವೀರನಾದ ಸಿಂಧು ದೈತ್ಯನ ಮರಣವನ್ನು ಕೇಳಿ, ಅವನ ತಾಯಿ ಉಗ್ರಾ ಮತ್ತು ತಂದೆ ಚಕ್ರಪಾಣಿ ಇವರಿಬ್ಬರೂ ಶೋಕಸಂತಪ್ತರಾದರು. ಅವನ ಧರ್ಮಪತ್ನಿಯಾದ ದುರ್ಗಾರಾಣಿಯು ಹಾಹಾಕಾರವನ್ನು ಮಾಡಿ, ರೋದನ ಮಾಡಿದಳು. ಮತ್ತು ತನ್ನ ಪತಿಯ ಶವವನ್ನೂ ತನ್ನ ತೊಡೆಯ ಮೇಲೆ ಇಟ್ಟುಕೊಂಡು ಸಹಗಮನ ಮಾಡಬೇಕೆಂದು ಚಂದನದ ಚಿತೆಯ ಮೇಲೆ ಹೋಗಿ ಕುಳಿತಳು. ಆ ಪತಿವ್ರತಾ ಶಿರೋಮಣಿಯು ಪತಿಯ ಜತೆಗೆ ಸತಿ ಹೋಗಿ ಧನ್ಯಳಾದಳು.

ಆಗ ಸಿಂಧುದೈತ್ಯನ ತಂದೆಯಾದ ಚಕ್ರಪಾಣಿಯು ಮಯೂರೇಶನ ಬಳಿಗೆ ಬಂದನು. ಅವನ ಪಾದಗಳಿಗೆ ಭಕ್ತಿಯಿಂದ ವಂದನೆ ಮಾಡಿದನು ಮತ್ತು ಕೈ ಜೋಡಿಸಿ, ಅವನನ್ನು ಬಾಯಿತುಂಬ ಸ್ತೋತ್ರ ಮಾಡಿದನು.

ಆಗ ಕರುಣಾಸಾಗರನಾದ ಮಯೂರೇಶನು ಚಕ್ರಪಾಣಿಯ ಸ್ತೋತ್ರದಿಂದ ಸಂತುಷ್ಟನಾಗಿ ''ದೈತ್ಯರಾಜ ನಿನ್ನ ಮಗನು ನನ್ನ ಕೈಯಿಂದ ಮರಣ ಹೊಂದಿ ಮುಕ್ತನಾಗಿದ್ದಾನೆ. ನೀನು ಬೇಕಾದ ವರ ಬೇಡು.'' ಎಂದು ಹೇಳಿದನು.

**ಚಕ್ರಪಾಣಿ** :- ದೇವ, ದೇವ, ನೀನು ನನ್ನ ಮೇಲೆ ನಿಜವಾಗಿಯೂ ಸಂತುಷ್ಟನಾಗಿದ್ದರೆ ನೀನು ನನ್ನ ರಾಜಭವನಕ್ಕೆ ದಯಮಾಡಿಸು. ನನ್ನ ರಾಜಧಾನಿಯನ್ನು ಪವಿತ್ರಮಾಡು.

ಚಕ್ರಪಾಣಿಯ ಬಿನ್ನಹವನ್ನು ಮನ್ನಿಸಿದ ಆ ಮಯೂರೇಶನು ಅವನ ರಾಜಧಾನಿಯಾದ ಗಂಡಕಿನಗರದಲ್ಲಿ ತನ್ನ ಜನ, ಪರಿವಾರ ಸಮೇತನಾಗಿ ಪ್ರವೇಶ ಮಾಡಿದನು. ಚಕ್ರಪಾಣಿಯ ಪ್ರಾರ್ಥನೆಯಂತೆ ಆ ರಾಜಸಭೆಯಲ್ಲಿ ಸಿಂಹಾಸನದ ಮೇಲೆ ಆಸೀನನಾದನು. ಆಗ, ಮಹಾರಾಜನು ಅಲ್ಲಿಗೆ ದಯಮಾಡಿಸಿದ. ಇಂದ್ರ, ಉಪೇಂದ್ರ ಮೊದಲಾದ ಎಲ್ಲ ದೇವತೆಗಳನ್ನು ಸ್ವಾಗತಿಸಿ ಉಚಿತವಾದ ಆಸನದ ಮೇಲೆ ಕೂಡಿಸಿದ. ಅವರೆಲ್ಲರನ್ನು ಯಥಾಯೋಗ್ಯವಾಗಿ ಪೂಜಿಸಿ, ನಂತರ ಮಯೂರೇಶನಿಗೆ ಅಗ್ರಪೂಜೆ ಮಾಡಿದ.

ಇದನ್ನು ನೋಡಿದ ದೇವೇಂದ್ರನಿಗೆ ಕೋಪ ಬಂದಿತು. ಆತನು ಸಿಡಿಮಿಡಿಗೊಂಡು ನುಡಿದ. ''ರಾಜನೆ, ನೀನು ಇಂದು ದೊಡ್ಡ ಅಪರಾಧ ಮಾಡಿದೆ. ಈಗ ನಿನ್ನ ಈ ಸಭೆಯಲ್ಲಿ ಎಲ್ಲ ದೇವತೆಗಳೂ ಉಪಸ್ಥಿತರಿರುವರು. ಜಗತ್ತಿನ ಸೃಷ್ಟಿಕರ್ತನಾದ ಬ್ರಹ್ಮ, ಪಾಲಕನಾದ ವಿಷ್ಣು, ಸಂಹಾರಕಾರಿಣಿಯಾದ ದುರ್ಗಾ ಮತ್ತು ಸೂರ್ಯನೆ ಮೊದಲಾದ ಇತರ ಅನೇಕ ಶ್ರೇಷ್ಠ ದೇವತೆಗಳು ಕುಳಿತಿದ್ದಾರೆ. ಇವರೆಲ್ಲರನ್ನು ಉಪೇಕ್ಷಿಸಿ, ಬಾಲಕನಾದ ಮಯೂರೇಶನಿಗೆ ನೀನು ಅಗ್ರಪೂಜೆಯನ್ನು ಮಾಡಿದೆ. ಇದು ಸರ್ವಥಾ ಅನುಚಿತ. ಬುದ್ಧಿಹೀನನಾದ ನೀನು ಎಲ್ಲ ದೇವತೆಗಳನ್ನು ಅವಮಾನಿಸಿದೆ'' ಎಂದು ನುಡಿದನು.

**ಚಕ್ರಪಾಣಿ** :- ಮಾನವೀಯನಾದ ಮಹೇಂದ್ರ, ನನ್ನ ಮಗನಾದ ಸಿಂಧುಕುಮಾರನು ವಿಷ್ಣು, ವಾಯು, ಶಿವ, ಸೂರ್ಯ, ಅಗ್ನಿ ಮೊದಲಾದ ಎಲ್ಲ ದೇವತೆಗಳನ್ನು ಸಮರಾಂಗಣದಲ್ಲಿ ಎಂದೋ ಸೋಲಿಸಿದ. ಅವರೆಲ್ಲರೂ ಸಿಂಧುಕುಮಾರನ ಭಯದಿಂದ ತಲೆಮರೆಸಿಕೊಂಡು ಎಲ್ಲಿಯೋ ಅಡಗಿಕೊಂಡಿದ್ದರು. ಹಲವರು ಇವನ ಬಂದಿಯಾಗಿದ್ದರು. ಅಂಥ ಮಹಾಪರಾಕ್ರಮಶಾಲಿಯಾದ ನನ್ನ ಪುತ್ರನನ್ನು ಈ ಬಾಲಕನಾದ ಮಯೂರೇಶನು ಸೋಲಿಸಿ ಅವನಿಗೂ ಅವನ ಸೈನಿಕರಿಗೂ ಮುಕ್ತಿಯನ್ನು ನೀಡಿದ್ದಾನೆ. ಉಳಿದೆಲ್ಲ ದೇವತೆಗಳನ್ನು ಬಂಧ ಮುಕ್ತರನ್ನಾಗಿ ಮಾಡಿ ಸ್ವಾತಂತ್ರ್ಯವನ್ನು ತಂದುಕೊಟ್ಟಿದ್ದಾನೆ. ಆದುದರಿಂದ ನನ್ನ ದೃಷ್ಟಿಯಲ್ಲಿ ಜಗದೋದ್ಧಾರವನ್ನು ಮಾಡಿರುವನು. ಸರ್ವ ಸರ್ಮತನಾದ ಪಾರ್ವತೀ ಪರಮೇಶ್ವರರ ಸತ್ಪುತ್ರನಾದ ಮಯೂರೇಶನೇ ಈ ಸಭೆಯಲ್ಲಿ ಅಗ್ರಪೂಜೆಗೆ ಅತ್ಯಂತ ಅರ್ಹನಾಗಿದ್ದಾನೆ. ಆದ್ದರಿಂದ ನಾನು ಮಾಡಿದ ಇವನ ಪೂಜೆ ಸರ್ವಥಾ ಉಚಿತವಾಗಿದೆ.

ಆಗ, ಅಲ್ಲಿಯೇ ಇದ್ದ ಮಯೂರೇಶನು ಭಯಂಕರವಾದ ಸಿಂಹ ಗರ್ಜನೆಯನ್ನು ಮಾಡಿದನು. ಅದರಿಂದ ಬ್ರಹ್ಮಾಂಡವೆಲ್ಲ ನಡುಗಿ ಹೋಯಿತು. ಆಗ, ಆ ಮಯೂರೇಶನಲ್ಲಿಯೇ ಆ ಮಯೂರೇಶನ ರೂಪದಿಂದಲೇ ವಸ್ತ್ರಾಲಂಕಾರ ಭೂಷಿತನಾದ ಹತ್ತು ಕೈಗಳುಳ್ಳ ಸುಂದರ ಸ್ವರೂಪದ ಸಾಕ್ಷಾತ್ ಗಜಾನನ ದೇವನು ಪ್ರತ್ಯಕ್ಷನಾದನು.

ಆಗ ದೇವತೆಗಳೆಲ್ಲರೂ ಆಶ್ಚರ್ಯಚಕಿತರಾಗಿ ಮಯೂರೇಶನ ಕಡೆಗೆ ನೋಡತೊಡಗಿದರು. ಆಗ, ಆ ಮಯೂರೇಶನಲ್ಲಿ ಪ್ರಕಟನಾದ ದಶಬಾಹು ಗಜಾನನ ಸ್ಥಾನದಲ್ಲಿ ನಟ್ಟ ನಡುವೆ ಪದ್ಮಾಸನದಲ್ಲಿ ವಕ್ರತುಂಡನೂ, ಆಗ್ನೇಯಕೋಣದಲ್ಲಿ ಮಹಾದೇವನೂ ನೈಋತ್ಯದಲ್ಲಿ ಸೂರ್ಯನೂ ವಾಯುವ್ಯದಲ್ಲಿ ಪಾರ್ವತಿಯೂ ಈಶಾನ್ಯಕೋಣದಲ್ಲಿ ನಾರಾಯಣನೂ ಗೋಚರರಾದರು.

ಆಗ ಒಮ್ಮೆಲೆ ಆಕಾಶವಾಣಿಯಾಯಿತು. ''ಎಲ್ಲ ದೇವತೆಗಳಿಗೂ ಆರಾಧ್ಯನಾದ ಜಗದ್ವ್ಯಾಪಿ ಗಜಾನನ ಮಹಾಪ್ರಭು ಈಗ ಇಲ್ಲಿ ಐದು ರೂಪಗಳಿಂದ ಪ್ರಕಟನಾಗಿದ್ದಾನೆ. ಈ ಮಯೂರೇಶನ ಪೂಜೆಯಿಂದ ಬ್ರಹ್ಮ, ವಿಷ್ಣು, ಮಹೇಶ್ವರ, ಸೂರ್ಯ ಹಾಗೂ ಪಾರ್ವತೀ ಮೊದಲಾದ ಪಂಚದೇವತಾ ಪೂಜೆಯು ಸಂಪನ್ನವಾಗುತ್ತದೆ.'' ಈ ಆಕಾಶವಾಣಿಯನ್ನು ಕೇಳಿ ಇಂದ್ರಾದಿ ದೇವತೆಗಳಿಗೆ ಭ್ರಮನಿರಸನವಾಯಿತು. ಆಗ ಅವರೆಲ್ಲರೂ ಮಯೂರೇಶನನ್ನು ಆದಿ ಪುರುಷನ ಓಂಕಾರ ರೂಪದಲ್ಲಿ ನೋಡಿದರು. ಹಾಗೂ ಅವರು ಜಯ ಜಯಕಾರ ಮಾಡಿದರು.

ಆಗ ಅಲ್ಲಿಯೇ ಇದ್ದ ದೇವಋಷಿ ನಾರದರೂ ಬ್ರಹ್ಮದೇವರಿಗೆ ಹೇಳಿದರು ''ಕಮಲೇಶ್ವರ ನಾನು ನಿನ್ನ ಅಪ್ಪಣೆಯಂತೆ ಪಾರ್ವತೀ ಪರಮೇಶ್ವರರಿಗೆ ಬೇಡಿಕೊಂಡಿದ್ದೆ. ನಿನ್ನ ಪುತ್ರಿಯರಾದ ಬುದ್ಧಿ, ಸಿದ್ಧಿ ಇವರಿಬ್ಬರ ವಿವಾಹವನ್ನು ಮಯೂರೇಶನ ಜೊತೆಗೆ ಮಾಡಬೇಕೆಂದು ನಿಶ್ಚಯಮಾಡಿದ್ದೆ. ಆದರೆ ಮಯೂರೇಶನು ಸಿಂಧು ದೈತ್ಯನಿಂದ ಬಂಧಿತರಾದ ದೇವತೆಗಳ ಬಂಧಮೋಚನವಾಗುವವರೆಗೆ ಮದುವೆಯಾಗುವದಿಲ್ಲವೆಂದು ಪ್ರತಿಜ್ಞೆ ಮಾಡಿದ್ದ. ಈಗ ಅವನು ತನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡಿದ್ದಾನೆ. ಆದುದರಿಂದ ಈಗ ಆ ಸಿದ್ಧಿ, ಬುದ್ಧಿ ಕನ್ನಿಕೆಯರ ಜೊತೆಗೆ ಮಯೂರೇಶನ ವಿವಾಹವು ಸಾಂಗವಾಗಿ ನೆರವೇರಲಿ.''

ನಾರದರ ಮಾತಿನಿಂದ ಬ್ರಹ್ಮದೇವನು ಅತ್ಯಂತ ಸಂತುಷ್ಟನಾಗಿ ಸುಪ್ರಸನ್ನನೂ ಆದನು. ತನ್ನ ಅನಿಂದ್ಯ ಸುಂದರಿಯರಾದ ಮತ್ತು ಶೀಲ ಸದ್ಗುಣ ಸಂಪನ್ನೆಯರಾದ ಬುದ್ಧಿ, ಸಿದ್ಧಿ ಕನ್ಯೆಯನ್ನು ಮಯೂರೇಶನಿಗೆ ಕೊಟ್ಟು ಇಂದ್ರ, ಉಪೇಂದ್ರ, ಸೂರ್ಯ, ಶಿವ ಮುಂತಾದ ದೇವತೆಗಳ ಸಮಕ್ಷಮದಲ್ಲಿ ವಿಜೃಂಭಣೆಯಿಂದ ಮಯೂರೇಶನ ವಿವಾಹವನ್ನು ನೆರವೇರಿಸಿದನು. ಎಲ್ಲ ದೇವತೆಗಳು ತಮ್ಮನ್ನು ಪರಾಧೀನತೆಯಿಂದ ಮುಕ್ತ ಮಾಡಿದ ಮಯೂರೇಶನನ್ನು ಮುಕ್ತಕಂಠದಿಂದ ಸ್ತೋತ್ರಮಾಡಿದರು ಮತ್ತು ಮಯೂರೇಶನ ಅಪೇಕ್ಷೆಯಂತೆ ಸಿಂಧುದೈತ್ಯನಿಗೂ ಕೂಡ ಮೋಕ್ಷವನ್ನು ಕರುಣಿಸಿದನು. ಮತ್ತು ಎಲ್ಲ ದೇವತೆಗಳು ಮಯೂರೇಶನನ್ನು ವಂದಿಸಿ ಆನಂದದಿಂದ ತಮ್ಮ ತಮ್ಮ ಸ್ಥಾನಗಳನ್ನು ಕುರಿತು ತೆರಳಿದರು.

ಅನಂತರ ಮಯೂರೇಶನು ತನ್ನ ವಾಹನವಾದ ನವಿಲನ್ನು ಏರಿಕೊಂಡು ತನ್ನ ತಾಯಿ ತಂದೆ ಪಾರ್ವತೀ ಪರಮೇಶ್ವರರೊಂದಿಗೆ ಕೈಲಾಸ ಪರ್ವತಕ್ಕೆ ಬಂದನು. ಅಲ್ಲಿ ಕೆಲವು ದಿನ ಇದ್ದು ಅನಂತರದಲ್ಲಿ ಒಂದು ದಿನ ಬ್ರಹ್ಮ, ವಿಷ್ಣು, ಮಹೇಶ ಮೊದಲಾದ ಎಲ್ಲ ದೇವತೆಗಳ ಸಮ್ಮುಖದಲ್ಲಿ ಮಧುರ ಮಾತಿನಲ್ಲಿ ಹೇಳಿದನು.

**ಮಯೂರೇಶ** :- ದೇವತೆಗಳೆ, ನಾನು ಭೂಮಿಯ ಮೇಲೆ ಅವತಾರ ಮಾಡಿದ ಉದ್ದೇಶವು ಪೂರ್ಣವಾಯಿತು. ಭೂಮಿಯ ಭಾರವು ಇಳಿದಂತಾಗಿದೆ. ಸಿಂಧುವಿನ ಬಂಧನದಿಂದ ಬಿಡುಗಡೆ ಹೊಂದಿದ ದೇವತೆಗಳು ಇಂದು ಸ್ವತಂತ್ರರಾಗಿದ್ದಾರೆ. ಯಜ್ಞ ಯಾಗಾದಿಗಳು ಮೊದಲಿನಂತೆ ನಿರ್ವಿಘ್ನವಾಗಿ ನಡೆಯತೊಡಗಿವೆ. ಈಗ ನಾನು ನನ್ನ ಸ್ಥಾನಕ್ಕೆ ಮರಳಿ ಹೋಗುತ್ತೇನೆ.

ಆಗ, ಮಯೂರೇಶನ ವಿರಹದ ಕಲ್ಪನೆಯಿಂದ ಪಾರ್ವತಿಯು ದುಃಖಿತಳಾಗಿ ಮೂರ್ಛಿತಳಾದಳು. ನನ್ನನ್ನು ಬಿಟ್ಟು ಹೋಗಬೇಡ ಎಂದು ಬೇಡಿಕೊಂಡಳು. ಆಗ ಮಯೂರೇಶನು ಅವಳನ್ನು ಸಂತೈಸುತ್ತ ''ತಾಯಿ, ನಾನು ಒಂದೇ ಸ್ಥಾನದಲ್ಲಿ ಯಾವಾಗಲೂ ಇರಲಾರೆ. ದ್ವಾಪರಯುಗದಲ್ಲಿ ಮತ್ತೊಬ್ಬ ಭಯಂಕರವಾದ ದೈತ್ಯನ ಸಂಹಾರಕ್ಕಾಗಿ ನಿನ್ನ ಹೊಟ್ಟೆಯಿಂದ ಪುನಃ ಹುಟ್ಟಿ ಬರುತ್ತೇನೆ ನಿನಗೆ ಪುತ್ರ ಸುಖವನ್ನು ನೀಡುತ್ತೇನೆ ಎಂದು ಹೇಳಿದನು.

ಆಗ ಅಲ್ಲಿ ಮಯೂರೇಶನ ಭಾವಿ ವಿರಹ ಕಲ್ಪನೆಯಿಂದ ವ್ಯಾಕುಲನಾಗಿ ನಿಂತ ಷಣ್ಮುಖನಿಗೆ ಪ್ರೀತಿಯಿಂದ ಮಯೂರೇಶನು ನುಡಿದನು. ''ಪ್ರಿಯಬಂಧು, ನೀನು ಚಿಂತೆ ಮಾಡಬೇಡ. ನಾನು ಸರ್ವಾಂತರ್ಯಾಮಿ. ನಿನ್ನ ಹೃದಯದಲ್ಲಿಯೇ ನಾನು ಇರುತ್ತೇನೆ ಅದರಿಂದ ನಿನಗೆ ನನ್ನಿಂದ ಎಂದೂ ವಿರಹ ಉಂಟಾಗುವದಿಲ್ಲ ಎಂದು ಹೇಳಿ ಮಯೂರೇಶನು ತನ್ನ ವಾಹನವಾದ ನವಿಲನ್ನು ಸ್ಕಂದನಿಗೆ ಕೊಡುತ್ತ ''ಇಂದಿನಿಂದ ನೀನು ಮಯೂರಧ್ವಜ ಎಂದು ಜಗತ್ತಿನಲ್ಲಿ ಪ್ರಸಿದ್ಧನಾಗುವೆ'' ಎಂದು ಹೇಳಿ ಮಯೂರೇಶ ಪ್ರಭು ಅಲ್ಲಿಯೇ ಅಂತರ್ಧಾನ ಹೊಂದಿದನು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಇಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*

—o—

ದ್ವಾಪರಯುಗದಲ್ಲಿ ಪಾರ್ವತೀ ಪತಿಯಾದ ಮಹಾದೇವನು ಬ್ರಹ್ಮಲೋಕಕ್ಕೆ ಬಂದನು. ಆಗ ಚತುರ್ಮುಖನು ಶಯನ ಮಾಡಿದ್ದನು. ನಿದ್ದೆ ತಿಳಿದು ಎದ್ದ ಕೂಡಲೆ ಆ ಪಿತಾಮಹನು ಆಕಳಿಸಿದನು. ಆಗ ಅವನ ಮುಖದಿಂದ ಓರ್ವ ಭೀಕರಾಕಾರದ ಘೋರ ಪುರುಷನು ಉತ್ಪನ್ನನಾದನು. ಅವನ ಘನಘೋರ ಗರ್ಜನೆಯಿಂದಲೆ ಭೂಮಂಡಲವೆಲ್ಲವೂ ನಡುಗಿ ಹೋಯಿತು. ಆ ಘೋರಪುರುಷನ ದೇಹದಿಂದ ಸುಗಂಧವು ಸೂಸಿಬರುತ್ತಿತ್ತು. ಜಪಾಕುಸುಮದಂತೆ ಹೊಂಬಣ್ಣದ ಕಾಂತಿಯು ಅವನ ಕಮನೀಯ ಕಲೇವರರಿಂದ ಹೊಮ್ಮಿ ಬರುತ್ತಿತ್ತು. ಮನ್ಮಥನಂತೆ ಅತಿಸುಂದರನಾದ ಆ ಪುತ್ರನನ್ನು ಕಂಡು ಬ್ರಹ್ಮದೇವನು ಮುಗ್ಧನಾಗಿ ಹೇಳಿದನು.

**ಬ್ರಹ್ಮ** :- ಪುತ್ರ, ನೀನು ಬಂಗಾರದ ಬಣ್ಣದಿಂದ ಹೊಳೆಯುತ್ತಲಿರುವೆ. ಆದುದರಿಂದ ನಿನಗೆ ಸಿಂಧೂರ ಎಂದು ಹೆಸರನೂ ಇಟ್ಟಿದ್ದೇನೆ. ಮೂರು ಲೋಕಗಳನ್ನೆ ಸ್ವಾಧೀನ ಮಾಡಿಕೊಳ್ಳುವ ಅದ್ಭುತವಾದ ಶಕ್ತಿಯನ್ನು ನಿನಗೆ ಕೊಟ್ಟಿದ್ದೇನೆ. ನಿನಗೆ, ದೇವ ದಾನವ ಮಾನವ ಯಕ್ಷ ರಾಕ್ಷಸ ಯಾರಿಂದಲೂ ಎಂದೂ ಭಯವಿಲ್ಲ, ಸೋಲು ಇಲ್ಲ, ಸಾವು ಇಲ್ಲ. ನೀನು ಸಿಟ್ಟಿನಿಂದ ಯಾರನ್ನಾದರೂ ಮುಟ್ಟಿದ ಮಾತ್ರಕ್ಕೆ ಅವರು ಮೂರು ತುಂಡಾಗಿ ಮುರಿದು ಬೀಳುವರು. ಈ ತ್ರೈಲೋಕ್ಯದಲ್ಲಿ ನೀನು ಮನಬಂದಲ್ಲಿ ಇರು. ಮನ ಬಂದಂತೆ ನಡೆ. ನಿನಗೆ ಅಪ್ರತಿಹತವಾದ ಗತಿ, ಸ್ಥಿತಿ ಶಕ್ತಿಗಳನ್ನೂ ಪ್ರದಾನ ಮಾಡಿದ್ದೇನೆ.

ಕುಟಿಲಬುದ್ಧಿಯ ಆ ಕಪಟಿ ಸಿಂಧೂರನಿಗೆ ಬ್ರಹ್ಮದೇವನ ಮಾತಿನ ಮೇಲೆ ವಿಶ್ವಾಸವಾಗಲಿಲ್ಲ. ಆಗ ಅವನು ತನ್ನ ಎರಡೂ ತೋಳುಗಳನ್ನೂ ಎತ್ತಿ ''ಪಿತಾಮಹ, ನೀನು ನನಗೆ ಕೊಟ್ಟ ವರವನ್ನು ಪರೀಕ್ಷೆಮಾಡಬೇಕೆಂದು ಬಯಸಿದ್ದೇನೆ'' ಎಂದು ಹೇಳ ಬ್ರಹ್ಮದೇವನ ಮೇಲೆ ಸಿಂಧೂರನು ಏರಿಹೋದನು. ಆಗ ಆ ಶಾರದಾಪತಿಯು ಭಯಭ್ರಾಂತನಾಗಿ ದೂರ ಸರಿದು ನಿಂತು, ''ದುಷ್ಟನಾದ ಸಿಂಧೂರನೆ, ನಿನಗೆ ನಾನು ವರನೀಡಿದ್ದು ಹಾವಿಗೆ ಹಾಲು ಎರೆದಂತಾಯ್ತು. ನೀನು ನನ್ನಿಂದ ಹುಟ್ಟಿದ್ದರೂ ನಾನಿತ್ತ ವರದಿಂದ ಉನ್ಮತ್ತನಾಗಿ ನನ್ನನ್ನೇ ಕಬಳಿಸಬಲ್ಲೆ. ಆದರಿಂದ ನೀನು ದೈತ್ಯನಾಗು, ಪ್ರಭು ಸಿಂಧುರಪ್ರಿಯನಾದ ಸಿಂಧುರಾರುಣ ಪ್ರಭು ಗಜಾನನು ಭೂಮಿಯಲ್ಲಿ ಅವತಾರ ಮಾಡಿ ನಿನ್ನನ್ನು ಕೊಂದು ಹಾಕುತ್ತಾನೆ'' ಎಂದು ಶಾಪಕೊಟ್ಟು ಭಯವಿಹ್ವಲನಾದ ವಿಧಾತನು ಆ ದೈತ್ಯನಿಂದ ದೂರ ದೂರ ಓಡತೊಡಗಿದನು. ದೈತ್ಯರೂಪವನ್ನೂ ದೈತ್ಯಭಾವವನ್ನೂ ತಳೆದ ಸಿಂಧೂರಾಸುರನು ಬ್ರಹ್ಮನನ್ನು ಬೆನ್ನಟ್ಟಿದನು. ಮುಂದೆ ಮುಂದೆ ಸೃಷ್ಟಿಕರ್ತನಾದ ಬ್ರಹ್ಮ ಹಿಂದೆ ಹಿಂದೆ ದುಷ್ಟ ದೈತ್ಯ ಸಿಂಧೂರ. ಓಡಿ, ಓಡಿ ಚತುರ್ಮುಖನ ದೇಹವು ದಣಿದು ಹೋಯಿತು. ಬೆವರು ಹರಿಯಿತು, ಮೈನಡುಗಿತು. ಪಲಾಯನದ ಆಯಾಸದಿಂದ ತುಸು ನಿಲ್ಲಬೇಕು ಎಂದರೆ ಹಿಂದಿನಿಂದಲೆ ಅವನ ಪುತ್ರ ಸಿಂಧೂರ, ದಾವಿಸಿ ಬರುತ್ತಿದ್ದಾನೆ. ಮತ್ತೆ ಬ್ರಹ್ಮದೇವನು ವೇಗದಿಂದ ಓಡಿದ. ಓಡುತ್ತ, ಓಡುತ್ತ ವೈಕುಂಠಲೋಕಕ್ಕೆ ಬಂದ.

ಅಲ್ಲಿ ಶ್ರೀಹರಿಯು ಭಯಭ್ರಾಂತನಾದ ಬ್ರಹ್ಮನನ್ನು ಕಂಡು ಪ್ರೀತಿಯಿಂದ ಆಲಂಗಿಸಿಕೊಂಡ. ತನ್ನ ಆಸನದಲ್ಲಿ ಕೂಡಿಸಿಕೊಂಡು ''ಬ್ರಹ್ಮ ಇಷ್ಟೇಕೆ ಗಾಬರಿಯಾಗಿರುವೆ ಏಕೆ ಓಡುತ್ತಿರುವೆ ಎಂದು ಕೇಳಿದ.

**ಬ್ರಹ್ಮ :-** ಪ್ರಭು, ನಾನು ನನ್ನ ಲೋಕದಲ್ಲಿ ಮಲಗಿ ಎದ್ದು ಆಕಳಿಸಿದ ಕೂಡಲೆ ನನ್ನ ಮುಖದಿಂದ ಸುಂದರನಾದ ಸಿಂಧೂರ ಎಂಬ ಪುತ್ರನು ಜನಿಸಿದ. ಆಗ ನಾನು ಪುತ್ರಮೋಹದಿಂದ ''ನೀನು ಆಲಿಂಗನ ಮಾಡಿ ಕೊಂಡಕೂಡಲೆ ನಿನ್ನ ತೋಳತೆಕ್ಕೆಯಲ್ಲಿ ಬಂದವರು ಸತ್ತು ಹೋಗಲಿ ಎಂದು ವರವನ್ನು ಕೊಟ್ಟೆ.

ಈಗ ದುಷ್ಟನು ನನ್ನನ್ನು ಬಾಹುಪಾಶದಲ್ಲಿ ಬಿಗಿದು ಕೊಲ್ಲಬೇಕೆಂದು ಬರುತ್ತಲಿದ್ದಾನೆ. ದಯಮಾಡಿ ನನ್ನನ್ನು ಅವನಿಂದ ರಕ್ಷಿಸು, ರಕ್ಷಿಸು'' ಎಂದು ಬೇಡಿಕೊಂಡನು.

**ವಿಷ್ಣು :-** ಬ್ರಹ್ಮ, ನೀನು ಯೋಚನೆ ಮಾಡದೆ ದುಷ್ಟದಾನವರಿಗೆ ಬೇಡಿದ ವರ ನೀಡುವೆ. ಅನಂತರ ಗೋಳಾಡುವೆ. ಲೋಕಕ್ಕೂ ಅದರಿಂದ ಕಷ್ಟಾನಿಷ್ಟಗಳು ಪ್ರಾಪ್ತವಾಗುವವು.

ಹೀಗೆ ಅವರಿಬ್ಬರೂ ಮಾತನಾಡುತ್ತಿರುವಾಗಲೇ ಸಿಂಧೂರಾಸುರನು ಅಲ್ಲಿಗೆ ಬಂದನು. ಅವನು ತನ್ನ ನೀಳದೋಳುಗಳನ್ನು ಚಾಚಿ ಬ್ರಹ್ಮನನ್ನು ಬಿಗಿದಪ್ಪಬೇಕೆಂದು ಅವನ ಸಮೀಪಕ್ಕೆ ಬಂದನು. ಆಗ ಮಹಾವಿಷ್ಣು, ಭೀಕರಾಕಾರದ ಆ ದೈತ್ಯಾಧಮನನ್ನು ತಡೆದು ಮಿದು ಮಾತಿನಿಂದ ಸಂತಯಿಸುತ್ತ ಹೇಳಿದನು.

**ವಿಷ್ಣು :-** ವತ್ಸ, ನೀನು ಮಹಾಪರಾಕ್ರಮಶಾಲಿ, ಶಕ್ತಿಶಾಲಿ, ನವತರುಣ, ಹೊಸಹರೆಯ ಸಿರಿ ನಿನ್ನಲ್ಲಿ ಉಕ್ಕುತ್ತಲಿದೆ. ಈ ಬ್ರಹ್ಮ ವಯೋವೃದ್ಧ, ದುರ್ಬಲ ಬ್ರಾಹ್ಮಣ. ಈ ಸ್ಥವಿರನ ಜೊತಗೆ ಯುದ್ಧ ಮಾಡಿದರೆ ನಿನಗೇನು ಕೀರ್ತಿ ? ಇದರಿಂದ ನಿನಗೆ ಲೋಕದಲ್ಲಿ ಅಪಯಶಸ್ಸು ಬರುವದು. ಆದುದರಿಂದ ಇವನನ್ನು ಬಿಟ್ಟು ಬಿಡು.

ಆಗ ಆ ಸಿಂಧೂರಾಸುರನು ''ಹಾಗಾದರೆ ನಾನು ನಿನ್ನ ಜೊತೆಗೆ ಯುದ್ಧ ಮಾಡುತ್ತೇನೆ ನಿನ್ನನ್ನೆ ನನ್ನ ಬಾಹು ಪಾಶಗಳಿಂದ ಬಂಧಿಸಿ ಸಾಯಿಸಿ ಬ್ರಹ್ಮವರದ ಪರೀಕ್ಷೆ ಮಾಡುತ್ತೇನೆ'' ಎಂದು ಶ್ರೀ ಹರಿ ಮೇಲೆಯೆ ಎರಗಿದ.

ಚತುರಮತಿಯಾದ ಚಕ್ರಪಾಣಿಯು ಅವನಿಂದ ದೂರ ಸರಿದು ಮಧುರಮಾತಿನಿಂದ ಆ ದೈತ್ಯನಿಗೆ ಹೇಳಿದ.

**ಮಹಾವಿಷ್ಣು :-** ವತ್ಸ, ನಾನು ಸತ್ವ ಗುಣಸಂಪನ್ನನಾದ್ದರಿಂದ ಬ್ರಹ್ಮ ಸೃಷ್ಟಿಸಿದ ಜಗತ್ತಿನ ಪಾಲನೆ ಕಾರ್ಯದಲ್ಲಿ ತೊಡಗಿದ್ದೇನೆ. ನನ್ನನ್ನು ಗೆಲ್ಲುವದು ನಿನಗೆ ಬಹಳ ಸುಲಭ. ನಾನಂತೂ ಹೇಳಿಕೇಳಿ ಪುರಾಣ ಪುರುಷ. ನನ್ನನ್ನು ಸೋಲಿಸಿದರೆ ನಿನಗೆ ಕೀರ್ತಿಯೂ ಇಲ್ಲ, ಖ್ಯಾತಿಯೂ ಇಲ್ಲ, ಶೌರ್ಯದಲ್ಲಿ ಶಿವನೊಬ್ಬನೆ ಸಮರ್ಥ, ಶೂರ, ಧೀರ, ವೀರ. ಅವನೊಡನೆ ನೀನು ಯುದ್ಧ ಮಾಡು ಅದರಿಂದ ನಿನಗೆ ಸಂತೋಷ. ಕೀರ್ತಿ, ಗೌರವ ಎಲ್ಲವೂ ಬರುವವು.'' ವಿಷ್ಣುವಿನ ಈ ಸಮಯೋಚಿತ ಮಾತಿನಿಂದ ಸಿಂದೂರನು ಪ್ರಸನ್ನನಾಗಿ

ಕೈಲಾಸಪರ್ವತಕ್ಕೆ ಧಾವಿಸಿದನು. ಅಲ್ಲಿ ಪರಮೇಶ್ವರನು ಪದ್ಮಾಸನದಲ್ಲಿ ಕುಳಿತು ಧ್ಯಾನ ಯೋಗದಲ್ಲಿ ನಿಮಗ್ನನಾಗಿದ್ದನು. ಅಕ್ಕ ಪಕ್ಕದಲ್ಲಿ ನಂದಿ, ಭೃಂಗಿ ಹಾಗೂ ಶಿವಗಣಗಳು ಸಮೀಪದಲ್ಲಿಯೇ ಪಾರ್ವತಿದೇವಿಯು ಅವನ ಸೇವಾಕೈಂಕರ್ಯವನ್ನು ಮಾಡುತ್ತಲಿದ್ದಳು.

ಭಸ್ಮಾಚ್ಛಾತನಾದ ಮಹಾರುದ್ರದೇವರು ವ್ಯಾಘ್ರಾಜಿನದ ಮೇಲೆ ಮಂಡಿಸಿದ್ದರು. ತಪೋನುಷ್ಠಾನ ಗೈಯ್ಯುವ ಕರ್ಪುರದ ಧವಲ ದೇಹದ ಆ ಪರಶಿವನ ಹಣೆಯ ಮೇಲೆ ಅರ್ಧಚಂದ್ರ. ಜಡೆಯಲ್ಲಿ ದೇವಗಂಗೆ, ಹೆಗಲ ಮೇಲೆ ಗಜಚರ್ಮ, ಅವನು ಧ್ಯಾನೈಕ ತಾನ ಲೀನ ಮಾನಸ, ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಆ ಶಿವನನ್ನು ನೋಡಿ, ಆ ದುಷ್ಟದೈತ್ಯನು ತನ್ನ ಮನದಲ್ಲಿಯೇ ಅವನನ್ನು ನಿಂದಿಸುತ್ತ ನುಡಿದನು. 'ಬೂದಿ ಬಳಿದುಕೊಂಡ ಈ ಭೋಲಾನಾಥನನ್ನು ಜಯಿಸಿ, ನನಗೇನು ಆಗಬೇಕಾಗಿದೆ ? ಸುಡುಗಾಡುಗಟ್ಟಿಯಲ್ಲಿ ಇರುವ ಈ ತಪಸ್ವಿ, ದಿಗಂಬರರ ಜೊತೆಗೆ ಯುದ್ಧಮಾಡಿದರೆ ನನಗೇನು ಕೀರ್ತಿ ಬರಬೇಕಾಗಿದೆ ? ಇವನು ಇಲ್ಲಿಯೇ ಹೀಗೆಯೇ ಕಣ್ಣು ಮುಚ್ಚಿಕೊಂಡು ಕುಳಿತಿರಲಿ. ಇವನ ಸೇವೆಮಾಡುತ್ತಿರುವ ಪಾರ್ವತಿಯು ಪರಮ ಸುಂದರಿ ತ್ರೈಲೋಕ್ಯಮೋಹಿನಿ. ಇವಳನ್ನೇ ಸೆಳೆದುಕೊಂಡು ಹೋಗುವೆನು'' ಎಂದು ಯೋಚಿಸುತ್ತ ಸತಿದೇವಿಯು ಪತಿಯು ಸೇವೆಯ ಮಾಡುವಲ್ಲಿಗೆ ಧಾವಿಸಿಬಂದನು. ಆ ದುಷ್ಟನನ್ನು ನೋಡಿದ ಕೂಡಲೆ ಗಿರಿಜಾದೇವಿಯು ಗಡಗಡ ನಡುಗಿ ಮೂರ್ಛೆ ಹೊಂದಿದಳು. ಮಹಾಪಾತಕಿಯಾದ ದೈತ್ಯನು ಅವಳು ಮೂರ್ಛೆ ತಿಳಿದು ಎದ್ದಕೂಡಲೆ ಅವಳು ಕೇಶ ಪಾಶವನ್ನು ಹಿಡಿದು ಬಲಾತ್ಕಾರದಿಂದ ಎಳೆದುಕೊಂಡು ನಡೆದನು. ನಂದಿ, ಭೃಂಗಿ ಹಾಗೂ ಉಳಿದ ಗಣಾಧೀಶರಿಗೆ ಆ ದುಷ್ಟದೈತ್ಯನ ವಿರುದ್ಧವಾಗಿ ಏನೂ ಮಾಡಲಿಕ್ಕಾಗಲಿಲ್ಲ. ಅವರೆಲ್ಲರೂ ಅಸಹಾಯಕರಾಗಿ ನೋಡುತ್ತ ನಿಂತುಕೊಂಡರು ನಿರುಪಾಯಳಾದ, ಪಾರ್ವತಿಯು ಅಳುತ್ತ, ಗೋಗರೆಯುತ್ತ ಅವನ ಹಿಂದೆ ಹೊರಟಳು. ಆಗ ನಂದಿ, ಭೃಂಗಿ ಶಿವಗಣದವರೆಲ್ಲರೂ ಭಯಾಕಾಂತ್ರರಾಗಿ ಹಾಹಾಕಾರ ಮಾಡತೊಡಗಿದರು. ಅವರೆಲ್ಲರ ಚೀತ್ಕಾರ ಧ್ವನಿಯಿಂದ ತಪಸ್ಸಿಗೆ ಭಂಗವಾಗಿ ಶಿವನು ಎದ್ದು, ಗಣಾಧೀಶರನ್ನು ''ನಿಮ್ಮ ಚಿಂತಾ ಹಾಗೂ ಚೀತ್ಕಾರ ಹಾಗೂ ಹಾಹಾಕಾರಗಳ ಕಾರಣವೇನು'' ಎಂದು ಕೇಳಿದನು.

**ಗಣಾಧೀಶರು :-** ದೇವಾ, ನೀವು ಗಾಢಗೂಡ ಸಮಾಧಿಯಲ್ಲಿದ್ದಾಗ ಸಿಂಧೂರಾ ಸುರನು ಬಂದು, ದೇವಿಯನ್ನು ಸೆಳೆದ ಅವನ ಭೀಕರ ಆಕಾರವನ್ನು ನೋಡಿಯೇ ನಡುಗಿ ಹೋದ ತಾಯಿಯು ಮೂರ್ಛಿತಳಾದಳು. ಮೂರ್ಚ್ಛೆ ತಿಳಿದು ಎದ್ದ ಕೂಡಲೇ ಪೂರ್ಣ ಪ್ರಜ್ಞೆ ಬರುವಷ್ಟರಲ್ಲಿಯೇ ಆ ದುಷ್ಟ ದೈತ್ಯನು ಬಲಾತ್ಕಾರದಿಂದ ನಮ್ಮ ಜಗದಂಬೆಯನ್ನು ಸೆಳೆದು ಒಯ್ದಿದ್ದಾನೆ. ನಮ್ಮಿಂದ ಅವನಿಗೆ ಏನೂ ಮಾಡಲಿಕ್ಕಾಗಲಿಲ್ಲ'' ಎಂದು ಹೇಳಿದರು.

ಇದನ್ನು ಕೇಳಿ ಕ್ರೋಧಾವಿಷ್ಟನಾದ ತ್ರಿಪುರಾರಿಯು ತ್ರಿಶೂಲಾದಿ ಶಸ್ತ್ರಾಸ್ತ್ರಗಳನ್ನು ಹಿಡಿದುಕೊಂಡು ವೃಷಭಾರೂಢನಾಗಿ ಸಿಂಧೂರಾಸುರನನ್ನು ಬೆನ್ನಟ್ಟಿದನು. ಅವನ ಸಮೀಪಕ್ಕೆ ಬಂದು ''ದುಷ್ಟ ಭ್ರಷ್ಟನಾದ ದೈತ್ಯಾಧಮ, ನನ್ನ ಮಡದಿಯನ್ನು ಈಗಲೇ ಬಿಟ್ಟು ಬಿಡು. ಇಲ್ಲದಿದ್ದರೆ ನನ್ನ ತ್ರಿಶೂಲದಿಂದ ನೀನೇ ಮಡಿದು ಹೋಗುವೆ'' ಎಂದು ಬೆದರಿಸಿದನು.

**ಸಿಂಧೂರಾಸುರ:-** ಭೋಳಾ ಶಂಕರ, ನೀನು ಈ ಪಾರ್ವತಿಯ ಆಶೆಯನ್ನು ಬಿಟ್ಟು ಬಿಡು, ಮನೆಗೆ ಹೋಗು. ಬೇರೆ ಸುಂದರಿಯೊಂದಿಗೆ ಮದುವೆ ಮಾಡಿಕೊ. ಇಲ್ಲದಿದ್ದರೆ ನನ್ನ ಜೊತೆಗೆ ಯುದ್ಧಕ್ಕೆ ಬಾ. ನಾನು ಉಸಿರು ಬಿಟ್ಟರೆ ಮೇರು ಮಂದರಗಳೆ ನಡುಗಿ ಹೋಗುವವು. ನಿನ್ನಂತಹ ತಪಸ್ವಿಯು ನನ್ನ ಪ್ರತಾಪದ ಎದುರು ಯಾವ ಗಿಡದ ತೊಪ್ಪಲು!

ಹೀಗೆ ಹೇಳಿ ಮದೋನ್ಮತ್ತನಾದ ಸಿಂಧೂರನು ಮಹಾದೇವನ ಜೊತೆಗೆ ಬಾಹುಯುದ್ಧ ಮಾಡಬೇಕೆಂದು ಮುಂದೆ ಬಂದ. ಕ್ರುದ್ಧ ಆ ಮಹಾದೇವನಾದರೂ ಕೋಪಾಟೋಪದಿಂದ ದರ್ಪೋದ್ಧತನಾದ ಆ ದೈತ್ಯನೊಂದಿಗೆ ಯುದ್ಧಕ್ಕೆ ಅಣಿಯಾದ ಇದರಿಂದ ಪ್ರಕ್ಷುಬ್ಧಳಾದ ಪಾರ್ವತಿಯು ತನ್ನ ಮನಸ್ಸಿನಲ್ಲಿಯೇ ಮಯೂರೇಶನನ್ನು ಚಿಂತಿಸಿದಳು. ಕೂಡಲೆ ಅವಳ ಪುತ್ರನಾದ ಮಯೂರೇಶನು ಒಬ್ಬ ಬ್ರಾಹ್ಮಣವೇಷದಿಂದ ಆ ಸಿಂಧೂರ ಶಂಕರರ ನಡುವೆ ಪ್ರಕಟನಾದನು. ಆ ದಿಟ್ಟ ಬ್ರಾಹ್ಮಣನು ತನ್ನ ಕೊಡಲಿಯಿಂದ ಸಿಂಧೂರಾಸುರನನ್ನು ಹಿಂದೆ ಸರಿಸಿ ಮೃದು ಮಧುರ ಮಾತಿನಿಂದ ಹೇಳಿದನು.

**ಬ್ರಾಹ್ಮಣ :-** ದೈತ್ಯರಾಜ, ಮಾತಾ ಪಾರ್ವತೀದೇವಿಯನ್ನು ನನ್ನ ಕಡೆಗೆ ಬಿಟ್ಟು ಬಿಡು. ನೀನು ಈ ಮಹಾದೇವನ ಜತೆಗೆ ಯುದ್ಧ ಮಾಡು. ನಿಮ್ಮಿಬ್ಬರ ನಡುವೆ ಕದನ ನಡೆಯಲಿ. ಈ ಸಮರದಲ್ಲಿ ಯಾರು ವಿಜಯಶಾಲಿಯಾಗುವರೋ ಅವರಿಗೆ ಈ ಪಾರ್ವತಿಯನ್ನು ಒಪ್ಪಿಸುತ್ತೇನೆ.

ಬ್ರಾಹ್ಮಣ ವೇಷಧಾರಿಯಾದ ಮಯೂರೇಶನ ವಚನವನ್ನು ಕೇಳಿ. ಸಿಂಧೂರನಿಗೆ ಸಂತೋಷವಾಯಿತು, ಸಮಾಧಾನವೂ ಆಯಿತು. ಅವನು ಆ ಮಹಾತಾಯಿಗೆ ಮಯೂರೇಶನ ಬಳಿಗೆ ಹೋಗಲು ಹೇಳಿದ. ತಾನು ಗಂಗಾಧರನ ಜೊತೆಗೆ ಸಂಗ್ರಾಮವನ್ನು ಮಾಡಲು ಪ್ರಾರಂಭಿಸಿದ. ಸಿಂಧೂರಾಸುರನು ಪಿತಾಮಹನ ವರದಿಂದ ಮಹಾಪರಾಕ್ರಮಶಾಲಿಯಾದದ್ದೇನೋ ನಿಜ. ಆದರೆ, ಆ ವೃಷಭಧ್ವಜನು ಕೂಡ ಅಪ್ರತಿಮವೀರ, ಯುದ್ಧನಿಪುಣ. ಅವರಿಬ್ಬರ ನಡುವೆ ನಿಕರ ಹೋರಾಟ ನಡೆಯಿತು. ಬ್ರಹ್ಮದೇವನ ವರವನ್ನು ನೆನೆದುಕೊಂಡು ಆ ದೈತ್ಯನು ತನ್ನ ತೋಳತೆಕ್ಕೆಯಲ್ಲಿ ಆ ತ್ರಿಪುರಾರಿಯನ್ನು ಅಮುಕಿ ಕೊಲ್ಲಬೇಕೆಂದು ಧಾವಿಸುತ್ತಿದ್ದ. ಆಗ ಮಯೂರೇಶನು ಅದೃಶ್ಯರೂಪದಿಂದ ಆ ರಾಕ್ಷಸನ ವಕ್ಷಸ್ಥಳದಲ್ಲಿ ತನ್ನ ಕೊಡಲಿಯಿಂದ ಹೊಡೆದು ಘೋರ ಆಘಾತವನ್ನು ಮಾಡುತ್ತಿದ್ದ. ಮಯೂರೇಶನ ಘೋರತರವಾದ ಪ್ರಹಾರದಿಂದ ದೈತ್ಯ ಗಾಯಗೊಂಡು ನೆಲದಲ್ಲಿ ಉರುಳುತ್ತಿದ್ದ. ಮರುಚಣದಲ್ಲಿ ಚಟಪಟ ಜಾಡಿಸಿಕೊಂಡು ಎದ್ದು ನಿಂತು ಮತ್ತೆ ಯುದ್ಧಕ್ಕೆ ತೊಡಗುತ್ತಿದ್ದ. ಹೀಗೆ ಅನೇಕ ಸಲ ಮಯೂರೇಶನ ಪರಶು ಆಯುಧದ ಆಘಾತದಿಂದ ಸಿಂಧೂರಾಸುರನ ಶಕ್ತಿ ಕ್ಷೀಣವಾಯಿತು. ಪ್ರಾಣ ನಿತ್ರಾಣವಾಯಿತು. ಆ ಕಾಲದಲ್ಲಿ ಮಹೇಶ್ವರನು ದೈತ್ಯಾಧಮನ ಕಠೋರ ದೇಹದ ಮೇಲೆ ತನ್ನ ತ್ರಿಶೂಲಾಯುಧದಿಂದ ಭಯಂಕರವಾಗಿ ಪ್ರಹಾರ ಮಾಡಿದ. ಹರನು ಇತ್ತ ಪ್ರಹಾರದ ಆಘಾತವನ್ನು ತಾಳಲಾರದೆ ಸಿಂಧೂರಾಸುರನು ತತ್ತರಿಸಿ ಹೋದ. ನೆಲದಮೇಲೆ ಧೂಳಿಯಲ್ಲಿ ಹೊರಳಾಡಿ ಬಿದ್ದ. ಅರೆಚಣದಲ್ಲಿ ಮತ್ತೆ ಉರುಳಿ ಎದ್ದ. ಮತ್ತೆ ಮತ್ತೆ ಮಹಾದೇವನನ್ನು ಆಲಂಗಿಸಿಕೊಳ್ಳಬೇಕೆಂದು ಓಡಿ ಬರತೊಡಗಿದ. ಆಗ ಬ್ರಾಹ್ಮಣ ವೇಷಧಾರಿಯಾದ ಮಯೂರೇಶನು ಅವನಿಗೆ ಹೇಳಿದ.

**ಮಯೂರೇಶ :-** ಸಿಂಧೂರ, ಈ ಮಹಾದೇವನು ಪ್ರಳಯಾಂತಕ ದೇವ. ಸರ್ವ ಸಂಹಾರವೇ ಅವನ ಮುಖ್ಯ ಕಾರ್ಯ. ನೀನು ಅವನನ್ನು ಎಂದೂ ಗೆಲ್ಲಲಾರೆ, ಮತ್ತು ಕೊಲ್ಲಲಾರೆ. ಆದುದರಿಂದ ಅವನ ಅರ್ಧಾಂಗಿಯಾದ ಕೋಮಲಾಂಗಿಯನ್ನು ಅವನಿಗೆ ಒಪ್ಪಿಸಿ ನೀನು ಇಲ್ಲಿಂದ ಹೊರಟುಹೋಗು. ಇಲ್ಲದಿದ್ದರೆ ನಿನಗೆ ಮರಣವೆ ಶರಣು.

ಹೀಗೆ ಮಯೂರೇಶನ ಮಾತನ್ನು ಕೇಳಿ ಸಿಂಧೂರನು ಆ ಶಿವಸುಂದರಿಯ ಆಶೆಯನ್ನು ಬಿಟ್ಟು ಅಲ್ಲಿಂದ ಹೊರಟು ಹೋದನು. ಶೂಲಿಯು ಆ ದೈತ್ಯನನ್ನು ಸೋಲಿಸಿ ವಿಜಯಶಾಲಿಯಾಗಿ ಮೆರೆದನು. ಆಗ ಪಾರ್ವತಿಯು ಆ ಬ್ರಾಹ್ಮಣರೂಪಿಯಾದ ಮಯೂರೇಶನ ಕಡೆಗೆ ತಿರುಗಿ ಕೇಳಿದಳು.

**ಪಾರ್ವತಿ :-** ಬ್ರಾಹ್ಮಣೋತ್ತಮನೆ, ಈ ದುಷ್ಟ ಅಸುರನ ಕೈಯಿಂದ ನನ್ನನ್ನು ಮುಕ್ತಿಗೊಳಿಸಿದ ನೀನು ಯಾರು ? ನಾನು ನಿಮ್ಮ ಉಪಕಾರವನ್ನು ಎಂದಿಗೂ ತೀರಿಸಲಾರೆ. ನೀವು ಯಾರು ಹೇಳಿರಿ.

ಆಗ ಮಯೂರೇಶನು ತನ್ನ ನಿಜಸ್ವರೂಪವನ್ನು ಪ್ರಕಟಗೊಳಿಸಿದನು. ಮತ್ತು ಪಾರ್ವತಿಗೆ ಹೇಳಿದನು.

**ಮಯೂರೇಶ :-** ತಾಯಿ, ನಾನು ತ್ರೇತಾಯುಗದಲ್ಲಿ ನಿನಗೆ ಮತ್ತೆ ಮುಂದೆ ದರ್ಶನ ಕೊಡುತ್ತೇನೆಂದು ಹೇಳಿದ್ದೆನಷ್ಟೆ. ಈ ಮಾತಿನಂತೆ ನಾನು ಈಗ ನಿನಗೆ ದರ್ಶನ ಕೊಟ್ಟಿದ್ದೇನೆ. ನಾನು ಮುಂದೆ ನಿನ್ನ ಪುತ್ರರೂಪದಿಂದ ಪ್ರಕಟನಾಗುತ್ತೇನೆ. ಆಗ ಗಜಾನನ ಎಂಬ ಹೆಸರಿಂದ ಈ ಸಿಂಧೂರಾಸುರನನ್ನು ಕೊಂದು ಭೂಲೋಕದ ಭಾರವನ್ನು ಇಳಿಸುತ್ತೇನೆ.

ಮಯೂರೇಶ್ವರನ ಈ ವಚನದಿಂದ ಪಾರ್ವತೀ ಪರಮೇಶ್ವರರಿಬ್ಬರಿಗೂ ಪರಮಾನಂದವಾಯಿತು. ಅವರು ಪ್ರೀತಿಯಿಂದ ಆ ಮಯೂರೇಶನನ್ನು ಆಲಂಗಿಸಿಕೊಂಡು ಆನಂದ ಬಾಷ್ಪ ಉದುರಿಸಿ ಆಶೀರ್ವದಿಸಿ ಅವನ ಅನುಮತಿಯನ್ನು ಪಡೆದು ನಂದಿಯನ್ನು ಏರಿಕೊಂಡು ಕೈಲಾಸಪರ್ವತಕ್ಕೆ ತೆರಳಿದರು.

ಮಯೂರೇಶನಿಂದ ಬುದ್ಧಿವಾದ ಹೇಳಿಸಿಕೊಂಡು ಶಿವನೊಡನೆ ಯುದ್ಧದಿಂದ ನಿವೃತನಾದ ಸಿಂಧೂರನು ಭೂಲೋಕದಲ್ಲಿ ದಿಗ್ವಿಜಯಕ್ಕೆ ಹೊರಟನು. ಅವನ ಸಿಂಹ ಗರ್ಜನೆಯಿಂದಲೆ ದೇವದಾನವಮಾನವರೆಲ್ಲರೂ ಯಕ್ಷಗಂಧರ್ವರೆಲ್ಲರೂ ಭಯ ಭ್ರಾಂತರಾಗಿ ಶರಣು ಬಂದರು. ಎದುರು ಬಂದ ರಾಜರನ್ನೆಲ್ಲ ಅವನು ಮುರಿದು ಮರ್ದನ ಮಾಡಿದ. ಅನಂತರ ವನಾಂತ ಪ್ರಾಂತಗಳಿಗೆ ಹೋಗಿ ಋಷಿಮುನಿಗಳನ್ನು ತಪಸ್ವಿ ಬ್ರಾಹ್ಮಣರನ್ನು ಹೊಡೆದು ದಂಡಿಸಿ ಖಂಡಿಸಿ ತನ್ನ ಬಂದೀಖಾನೆಯಲ್ಲಿ ಕೊಳೆಹಾಕಿದ. ಅವನ ಆಕ್ರಮಣದಿಂದ ಬದುಕಿ ಉಳಿದ ರಾಜರು ಋಷಿಗಳು ಗಿರಿಕಂದರಗಳಲ್ಲಿ ಗಹನ ಗುಹಾಗರ್ಭದಲ್ಲಿ ಅಡಗಿ ಆ ಅಸುರನ ಅವಸಾನಕಾಲವನ್ನು ಪ್ರತೀಕ್ಷೆ ಮಾಡತೊಡಗಿದರು. ದೇವತೆಗಳೂ ಕೂಡ ಆ ದುರ್ದಾನವನಿಂದ ಮರ್ದಿತರೂ ಅರ್ದಿತರು ಆಗಿ ಸ್ಥಾನಭ್ರಷ್ಟರಾಗಿ ಅರಣ್ಯವಾಸಿಗಳಾದರು.

ಆಗ ದೇವಗುರು ಬೃಹಸ್ಪತಿಯು ಅವರಿಗೆ ಸಮಾಧಾನವಚನವನ್ನು ಹೇಳುತ್ತಾ ನುಡಿದನು.

**ಬೃಹಸ್ಪತಿ :-** ದೇವತೆಗಳೇ ಹಾಗೂ ಬ್ರಾಹ್ಮಣರೆ, ನೀವು ಗಾಬರಿಯಾಗಬೇಡಿರಿ. ನೀವೆಲ್ಲರೂ ಏಕಮುಖದಿಂದ ದೇವ ದೇವನಾದ ವಿನಾಯಕನ ಪ್ರಾರ್ಥನೆ ಮಾಡಿರಿ. ಆ ದಯಾಮಯನು ಗಜಾನನ ಹೆಸರಿನಿಂದ ಶಿವಪಾರ್ವತಿಯರ ಮಂದಿರದಲ್ಲಿ ಅವತಾರ ಮಾಡುವನು. ಆ ದುಷ್ಟ ಭ್ರಷ್ಟನಾದ ದೈತ್ಯನನ್ನು ನಿಶ್ಚಿತವಾಗಿಯೂ ಸಂಹಾರಮಾಡುವನು.

ಬೃಹಸ್ಪತಿಯ ಮಾತಿನಿಂದ ದೇವತೆಗಳಿಗೆ ಸಮಾಧಾನವಾಯಿತು. ಅವರು ಭಕ್ತಿಯಿಂದ ವಿನಾಯಕನ ಸ್ತೋತ್ರವನ್ನು ಮಾಡತೊಡಗಿದರು.

**ಜಗತಃ ಕಾರಣಂ ಯೋऽಸೌ ರವಿ ನಕ್ಷತ್ರ ಸಂಭವಃ ।**
**ಸಿದ್ಧ ಸಾಧ್ಯ ಗಣಾಃ ಸರ್ವೇ ಯತ ಏವ ಚ ಸಿಂಧವಃ ॥**

ಈ ಜಗತ್ತಿಗೆಲ್ಲ ಯಾವನು ಕಾರಣ ಪುರುಷನೋ ಮತ್ತು ಸೂರ್ಯ ನಕ್ಷತ್ರಗಳು ಯಾವನಿಂದಲೇ ಉತ್ಪನ್ನವಾಗಿರುವವೋ ಮತ್ತು ಯಾವನಿಂದಲೇ ಸಿದ್ಧರು ಸಾಧ್ಯರೂ ಗಣಾಧೀಶರೂ ಉತ್ಪನ್ನರಾದರೋ ಅಂಥ ವಿನಾಯಕನನ್ನು ವಂದಿಸುತ್ತೇನೆ.

**ಯತೋ ಬ್ರಹ್ಮಾದಯೋ ದೇವಾಃ ಮುನಯಶ್ಚ ಮಹರ್ಷಯಃ ।**
**ಯತೋ ಗುಣಾಸ್ತ್ರಯೋ ಜಾತಾಃ ತಂ ನಮಾಮಿ ವಿನಾಯಕಂ ॥**

ಬ್ರಹ್ಮನೇ ಮೊದಲಾದ ದೇವತೆಗಳು, ಮುನಿಗಳೂ ಮಹರ್ಷಿಗಳೂ ಸತ್ವ ರಜಸ್ಸು, ತಮಸ್ಸು ಎಂಬ ಮೂರುಗುಣಗಳು ಯಾವನಿಂದ ಹುಟ್ಟಿದೆಯೋ ಅಂಥ ವಿನಾಯಕನನ್ನು ನಮಸ್ಕರಿಸುತ್ತೇನೆ.

**ಗಂಧರ್ವಾಃ ಕಿನ್ನರಾಃ ಯಕ್ಷ ಮನುಷ್ಯೋರುಗ ರಾಕ್ಷಸಾಃ ।**
**ಯತಃ ಚರಾಚರಂ ವಿಶ್ವಂ ತಂ ನಮಾಮಿ ವಿನಾಯಕಂ ॥**

ಸಮುದ್ರಗಳು ಗಂಧರ್ವರು ಕಿನ್ನರರು, ಯಕ್ಷರು ಮನುಷ್ಯರು, ಸರ್ಪಗಳೂ, ರಾಕ್ಷಸರು ಹಾಗೂ ಉಳಿದೆಲ್ಲ ಚರಾಚರ ವಿಶ್ವವು ಯಾವನಿಂದಲೇ ಉತ್ಪನ್ನನಾಗಿದೆಯೋ ಅಂಥ ವಿನಾಯಕನನ್ನು ವಂದಿಸುತ್ತೇನೆ.

**ಯತೋ ನಾನಾವತಾರಾಶ್ಯ ಯಶ್ಚ ಸರ್ವಹೃದಿ ಸ್ಥಿತಃ ।**
**ಯಂ ಸ್ತೋತುಂ ನೈವ ಶಕ್ನೋತಿ ಶೇಷಸ್ತಂ ಗಣಪಂ ಭಜೇತ್ ॥**

ಯಾವನಿಂದ ನಾನಾ ಅವತಾರಗಳ ಪ್ರಾದುರ್ಭವವಾಗಿದೆಯೋ ಮತ್ತು ಯಾವನು ಎಲ್ಲರ ಹೃದಯಗಳಲ್ಲಿ ವಿರಾಜಮಾನನಾಗಿರುವನೋ ಹಾಗೂ ಆದಿಶೇಷನೂ ಕೂಡ ಯಾವನ ಸ್ತೋತ್ರಮಾಡಲು ಅಸಮರ್ಥ ನಾಗಿರುವನೋ ಅಂಥ ಭಗವಾನ್ ಗಣಪತಿಯ ಭಜನೆಯನ್ನು ಎಲ್ಲರೂ ಮಾಡತಕ್ಕದ್ದು.

**ಸಿಂಧೂರೋ ನಿರ್ಮಿತ ಕೇನ ವಿಶ್ವಸಂಹಾರಕಾರಕಃ ।**
**ತೇನಾರ್ತಿಂ ಪ್ರಾಪಿತಂ ವಿಶ್ವಂ ತ್ವಯಿ ಸ್ವಾಮಿನಿ ಜಾಗ್ರತಿ ॥**

ಜಗತ್ತಿನ ಸಂಹಾರವನ್ನು ಮಾಡುವ ಈ ಸಿಂಧೂರಾಸುರನನ್ನು ಬ್ರಹ್ಮನು ನಿರ್ಮಿಸಿದನು. ನಿನ್ನಂಥ ಮಹಾಪ್ರಭು, ಜಾಗರೂಕನಾಗಿದ್ದಾಗಲೂ ಆ ದುಷ್ಟನು ಈ ಪ್ರಪಂಚಕ್ಕೆ ಸಂಕಟವನ್ನು ತಂದು ಇಟ್ಟಿದ್ದಾನೆ. ಅದಕ್ಕಾಗಿ ನಾವು ನಿನಗೆ ಶರಣು ಬಂದಿದ್ದೇವೆ.

**ಅನ್ಯಂ ಕಂ ಶರಣಂ ಯಾಮಃ ಕೋऽನುಪಾಸ್ಯತಿ ನೋऽಖಿಲಾನ್ ।**
**ಜಹ್ಯೇನಂ ದುಷ್ಟ ಬುದ್ಧಿ ನಂ ತಂ ಅವತೀರ್ಣಂ ಶಿವಾಲಯೆ ॥**

ನಿನ್ನ ಹೊರತು ನಮ್ಮೆಲ್ಲರನ್ನು ಯಾವನು ತಾನೆ ಕಾಪಾಡುವನು ? ಆದುದರಿಂದ ನಾವು ನಿನಗೆ ಶರಣು ಬಂದಿದ್ದೇವೆ. ನೀನು ಪರಮೇಶ್ವರ ಮಂದಿರದಲ್ಲಿ ಅವತಾರ ಮಾಡು. ದುಷ್ಟಬುದ್ಧಿಯಾದ ಆ ಸಿಂಧೂರಾಸುರನನ್ನು ಸಂಹಾರ ಮಾಡು.

ದೇವತೆಗಳ ಈ ಸ್ತೋತ್ರವನ್ನು ಕೇಳಿ ಗಣಪತಿಯು ಪ್ರಸನ್ನನಾದನು. ದೇವತೆಗಳೆಲ್ಲರೂ ಅವನಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ಆಗ ಗಣೇಶನು ನುಡಿದನು "ದೇವತೆಗಳೆ, ನಿಮ್ಮ ಅಪೇಕ್ಷೆಯ ಮೇರೆಗೆ ನಾನು ಆ ದೈತ್ಯ ಸಿಂಧೂರನನ್ನು ಬೇಗನೆ ಸಂಹರಿಸುತ್ತೇನೆ ; ನೀವು ನಿಶ್ಚಿಂತರಾಗಿರಿ. ನೀವು ಇದೀಗ ಮಾಡಿದ ಈ ನನ್ನ ಸ್ತೋತ್ರವು ದುಃಖ ಪ್ರಶಮನ ಸ್ತೋತ್ರ ಎಂದು ಪ್ರಸಿದ್ಧವಾಗುವದು. ಈ ಸ್ತೋತ್ರವನ್ನು ಪ್ರತಿದಿನ ಎರಡು ಮೂರುಸಲ ಪಠಿಸುವವರ ತಾಪಗಳೆಲ್ಲವೂ ತಾವಾಗಿಯೇ ಶಾಂತವಾಗುತ್ತವೆ. ನಾನು ಮಹಾದೇವನ ಮನೆಯಲ್ಲಿ ಅವತಾರ ತಾಳುವೆನು. ಆಗ, ನಾನು ಗಜಾನನ ಎಂಬ ಹೆಸರಿನಿಂದ ಪೂಜಿತನೂ, ಪ್ರಸಿದ್ಧನೂ ಆಗುತ್ತೇನೆ. ಬೇಗನೆ ಆ ಸಿಂಧೂರಸನ್ನು ಸಂಹಾರ ಮಾಡಿ ಪಾರ್ವತೀದೇವಿಯ ಸಮ್ಮುಖದಲ್ಲಿಯೇ ಅನೇಕ ಲೀಲೆಗಳನ್ನು ಮಾಡುತ್ತೇನೆ" ಹೀಗೆ ಹೇಳಿ ಗಜಾನನು ಅಂತರ್ಧಾನ ಹೊಂದಿದನು.

ಮುಂದೆ ಕೆಲವು ದಿನಗಳ ಬಳಿಕ, ಪರಶಿವನ ಆತ್ಯಂತಿಕ ಪ್ರೇಮಾಸ್ಪದಳಾದ ಪಾರ್ವತೀದೇವಿಯು ಗರ್ಭಧಾರಣ ಮಾಡಿದಳು. ಪಾರ್ವತೀಯ ಅಪೇಕ್ಷೆ ಮೇರೆಗೆ ಪರಮೇಶ್ವರನು ಅವಳನ್ನು ಸುಂದರವಾದ ಹಾಗೂ ಅತ್ಯಂತ ರಮಣೀಯವಾದ ನಿರ್ಜನವನಾಂತದ ಏಕಾಂತ ಕಾಂತಾರಕ್ಕೆ ಕರೆದೊಯ್ದನು. ಅಲ್ಲಿಯ ತರುಲತಾಬಳ್ಳಿಗಳು ಹಾಗೂ ಮಂಜುಲತಾ ಕುಂಜಗಳು, ವಿವಿಧವಾದ ತಟಾಕಗಳು, ಕಲಕಲ ಧ್ವನಿಮಾಡಿ ಕುಣಿದು ನಲಿಯುವ ಹಕ್ಕಿಗಳು, ಮತ್ತು ಅಲ್ಲಿಯ ನಿಸರ್ಗ ಸೌಂದರ್ಯ, ಸ್ಥಳ ರಮಣೀಯತೆಯನ್ನು ಕಂಡು ಪಾರ್ವತಿಯು ಅಲ್ಲಿಯೇ ನೆಲೆ ನಿಂತಳು. ನವಮಾಸ ತುಂಬಿದ ಬಳಿಕ ಜಗಜ್ಜನನಿಯಾದ ಪಾರ್ವತಿಯ ಸಮ್ಮುಖದಲ್ಲಿಯೇ ಅತ್ಯಂತ ಸುಂದರವಾದ ವದನಾರವಿಂದದಿಂದ ಒಡಗೂಡಿದ ಗಣೇಶನು ಪ್ರಕಟನಾದನು. ಬಂಗಾರದಬಣ್ಣ, ನಾಲ್ಕು ಬಾಹುಗಳು. ಆ ನಾಲ್ಕು ಬಾಹುಗಳಲ್ಲಿ ಕೊಡಲಿ, ಕಮಲ ಮೋದಕ ಹಾಗೂ ಹೂವಿನ ಮಾಲೆಗಳು ಶೋಭಿಸುತ್ತಿದ್ದವು.

ವಿಸ್ಮಯಕ್ರಾಂತಳಾದ ಪಾರ್ವತಿಗೆ ಆಗಲೇ ಪ್ರಕಟನಾದ ಗಣೇಶನು ಹೇಳಿದನು.

**ಗಣೇಶ :-** ತಾಯಿ, ನೀನು ನನ್ನನ್ನು ನೋಡಿ ಗಾಬರಿ ಆಗಬೇಡ. ಜಗತ್ತಿನ ಸೃಷ್ಟಿ ಸ್ಥಿತ್ಯಾದಿಗಳಿಗೆ ಕಾರಣನಾದ ನಾನು, ತ್ರೇತಾಯುಗದಲ್ಲಿ ಶುಭ್ರವರ್ಣನಾದ ಆರು ಬಾಹುಗಳುಳ್ಳ ಮಯೂರೇಶ್ವರನ ರೂಪದಿಂದ ನಿನ್ನ ಪುತ್ರನಾಗಿ ಅವತರಿಸಿ ಸಿಂಧು ದೈತ್ಯನನ್ನು ಸಂಹರಿಸಿದ್ದೆ. ದ್ವಾಪರದಲ್ಲಿ ಮತ್ತೊಮ್ಮೆ ನಿನಗೆ ಪುತ್ರ ಸುಖವನ್ನು ಪ್ರದಾನ ಮಾಡುತ್ತೇನೆಂದು ವಚನ ಕೊಟ್ಟಿದ್ದೆ. ಅದಕ್ಕೆ ಅನುಸಾರವಾಗಿ ನಾನು ಈಗ ನಿನ್ನ ಮುಂದೆ ಪುತ್ರರೂಪದಿಂದ ಪ್ರಕಟನಾಗಿದ್ದೇನೆ. ಈ ಮೊದಲು ನಾನೇ ಬ್ರಾಹ್ಮಣವೇಷದಿಂದ ಬಂದು

ದುಷ್ಟನಾದ ಸಿಂಧೂರನ ಕಪಿಮುಷ್ಟಿಯಿಂದ ನಿನ್ನನ್ನು ಬಿಡಿಸಿ ರಕ್ಷಣೆ ಮಾಡಿದ್ದೆ. ಇನ್ನು ನಾನು ಬೇಗನೆ ಆ ಸಿಂಧೂರಾಸುರನನ್ನು ಸಂಹಾರ ಮಾಡಿ, ಮೂರುಲೋಕಗಳಿಗೂ ಸುಖಶಾಂತಿ ಸಂತಸಗಳನ್ನು ತಂದು ಕೊಡುತ್ತೇನೆ. ಭಕ್ತರ ಮನೋರಥಗಳನ್ನೆಲ್ಲ ಪೂರ್ಣಮಾಡುತ್ತೇನೆ. ಮುಂದೆ ಗಜಾನನ ಎಂದು ನನ್ನ ನಾಮವು ಪ್ರಸಿದ್ಧವಾಗುವುದು.

ಪಾರ್ವತಿಗೆ ಹೀಗೆ ಹೇಳಿ ಸಂತೋಷಪಡಿಸಿ ಗಜಾನನನು ಚತುರ್ಭುಜನಾದ ಒಂದು ಶಿಶುವಿನ ರೂಪದಿಂದ ತಾಯಿಯ ಎದುರು ಮಲಗಿಕೊಂಡನು. ಆ ಮಗುವಿಗೆ ಆನೆಯಂತೆ ದೊಡ್ಡ ತಲೆ, ಸೊಂಡೆ, ಮರದಂಥ ಕಿವಿಗಳು, ಸಣ್ಣ ಸಣ್ಣ ಕೈ ಕಾಲು, ನೋಡಲು ವಿಕಾರವಾದ ರೂಪ ಎದ್ದು ಕಾಣುತ್ತಿತ್ತು. ಅದನ್ನು ನೋಡಿ ಪಾರ್ವತಿಗೆ ಅಸಮಾಧಾನವಾಯಿತು. ''ಇಂಥ ಕುರೂಪಿ, ವಿಕಾರಮುಖದ ವಿಕಟ ಆಕಾರದ ಮಗುವನ್ನು ನೋಡಿ ದೇವತಾಸ್ತ್ರೀಯರು ಋಷಿಪತ್ನಿಯರು ಉಪಹಾಸ ಮಾಡುವರು. ಈ ಮಗುವಿನ ತಲೆ, ಕೈ ಕಾಲು, ಮೂಗು, ಕಿವಿ, ಹೊಟ್ಟೆ, ಎಲ್ಲವೂ ಅಕಟ, ವಿಕಟ. ವಿರೂಪ. ವಿಕಾರ. ನೋಡಲು ಅಸಹ್ಯ. ಮೇಲೆ ಭಯಾವಹ. ಇವನನ್ನು ಮಗನೆಂದು ಹೇಗೆ ನಾನು ಲಾಲಿಸಿ ಪಾಲಿಸಲಿ'' ಎಂದು ಮನಸ್ಸಿನಲ್ಲಿಯೇ ಚಿಂತಿಸಿ ದುಃಖಪಟ್ಟಳು. ಅವಳ ಕಣ್ಣಲ್ಲಿ ನೀರು ಬಂದಿತು.

ಆ ಸಮಯದಲ್ಲಿ ಪತಿ ಪರಮೇಶ್ವರನು ಅಲ್ಲಿಗೆ ಬಂದು ಲಕ್ಷ್ಯ ಪೂರ್ವಕವಾಗಿ ಆ ಮಗುವನ್ನು ನೋಡಿ, ಪಾರ್ವತಿಯನ್ನು ಸಂತಯಿಸಿದನು. ''ಪ್ರಿಯೆ, ಬಾಹ್ಯ ಸೌಂದರ್ಯದಿಂದ ವ್ಯಕ್ತಿಯ ಯೋಗ್ಯತೆಯನ್ನು ಅಳೆಯಲಿಕ್ಕೆ ಆಗುವದಿಲ್ಲ. ಕೇವಲ ಹೊರಮೈ ವೈರೂಪ್ಯ ಸೌರೂಪ್ಯಗಳನ್ನು ಕಂಡು ಯಾರದೆ ವ್ಯಕ್ತಿತ್ವವನ್ನು ತರ್ಕಿಸಲು ಬರುವದಿಲ್ಲ. ರಕ್ತವರ್ಣನೂ ಚತುರ್ಭುಜನೂ ಗಜಮುಖನೂ, ಲಂಬೋದರನೂ ಆದ ಈ ಶಿಶು ಅಸಾಧಾರಣವಾಗಿದೆ. ಈ ಶಿಶುವೆ ಜಗತ್ತಿನ ಸೃಷ್ಟಿಕರ್ತ, ಮಂಗಳಮೂರ್ತಿ ಇವನೇ. ಮೂರು ಲೋಕಗಳನ್ನು ಕಾಪಾಡಲಿಕ್ಕಾಗಿ ಕೃತಯುಗದಲ್ಲಿ ಹತ್ತು ಬಾಹುಗಳುಳ್ಳ ವಿನಾಯಕನ ರೂಪದಿಂದ ಅವತಾರ ತಾಳಿದ್ದನು. ತ್ರೇತಾಯುಗದಲ್ಲಿ ಶುಕ್ಲವರ್ಣನಾಗಿ, ಆರು ಬಾಹುಗಳುಳ್ಳ ಮಯೂರೇಶನ ರೂಪದಿಂದ ನಿನ್ನ ಮಗನಾಗಿ ಪ್ರಕಟನಾಗಿದ್ದ. ಸಿಂಧುದೈತ್ಯನನ್ನು ಕೊಂದು ಹಾಕಿದ. ಈಗ ಪುನಃ ದ್ವಾಪರಯುಗದಲ್ಲಿ ನಿನಗೆ ವಚನ ಕೊಟ್ಟಂತೆ ನಿನ್ನ ಪುತ್ರರೂಪದಿಂದ ಪ್ರಕಟನಾಗಿ ಸಿಂಧೂರಾಸುರನನ್ನು ಸಂಹಾರಮಾಡುವನು. ಮುಂದೆ ಕಲಿಯುಗದಲ್ಲಿ ಇದೆ ಗಜಾನನು ಚತುರ್ಭುಜ ರೂಪದಿಂದ ಅವತಾರ ಮಾಡಿ, ಕಲಿಯುಗದಲ್ಲಿ ಪಾಪಾಚಾರ, ಅನಾಚಾರಗಳನ್ನೆಲ್ಲ ನಿರ್ಮೂಲಮಾಡಿ ಧೂಮ್ರಕೇತು ಎಂಬ ಹೆಸರಿನಿಂದ ಪ್ರಸಿದ್ಧನಾಗುವನು.

ಆಗ ಅಲ್ಲಿಯೆ ಮಲಗಿದ್ದ ಗಜಾನನನು ''ಪ್ರಭು ಪರಮೇಶ್ವರನು ಹೇಳಿದಂತೆ ಸಿಂಧೂರಾಸುರನನ್ನು ಸಂಹರಿಸಿ ಭೂಭಾರವನ್ನು ಇಳಿಸಲಿಕ್ಕಾಗಿಯೇ ನಾನು ಅವತಾರ ಮಾಡಿದ್ದೇನೆ. ಜಗತ್ತಿನಲ್ಲಿ ದುಷ್ಟದೈತ್ಯರ ಉಪಟಳದಿಂದ ನಿಂತು ಹೋದ ವೈದಿಕ ಯಜ್ಞ ಯಾಗಾದಿ ಧರ್ಮ ಕಾರ್ಯಗಳು ಪುನಃ ಪ್ರವರ್ತಿತವಾಗುವಂತೆ ಮಾಡುತ್ತೇನೆ ಮತ್ತು ರಾಜ ವರೇಣ್ಯನಿಗೆ ವರವನ್ನು ಕೊಟ್ಟು ಜ್ಞಾನವನ್ನು ಉಪದೇಶಿಸುತ್ತೇನೆ. ಸದಾಚಾರ ಸಂಪನ್ನನೂ ಧರ್ಮಾತ್ಮನೂ ಆದ ವರೇಣ್ಯರಾಜನು ನನ್ನ ಭಕ್ತ. ಅವನ ಮಡದಿಯಾದ

ಪುಷ್ಟಿಕೆಯು ಪರಮಸಾಧ್ವಿ, ಅಷ್ಟೇ ಸುಂದರಿ. ಅವರಿಬ್ಬರೂ ದಂಪತಿಗಳು ನನ್ನನ್ನು ಕುರಿತು ಹನ್ನೆರಡು ವರುಷ ಉಗ್ರವಾದ ತಪಸ್ಸನ್ನು ಮಾಡಿದ್ದಾರೆ. ನಾನು ಪುತ್ರನಾಗಿ ಜನಿಸಬೇಕೆಂದು ವರವನ್ನು ಕೇಳಿದ್ದಾರೆ. ನಾನು ತಥಾಸ್ತು ಎಂದು ಹೇಳಿದ್ದೇನೆ. ಇದೀಗ ಅವಳು ಹಡೆದಿದ್ದಾಳೆ. ಆದರೂ ಹುಟ್ಟಿದ ಅವರ ಮಗುವನ್ನು ಒಬ್ಬ ರಾಕ್ಷಸಿಯು ಎತ್ತಿಕೊಂಡು ಹೋಗಿದ್ದಾಳೆ. ಅದರಿಂದ ಅವಳು ಮೂರ್ಛಿತಳಾಗಿ ಬಿದ್ದಿದ್ದಾಳೆ. ಮಗು ಇಲ್ಲದಿದ್ದರೆ ಅವಳು ಪ್ರಾಣತ್ಯಾಗ ಮಾಡುವಳು. ಆದುದರಿಂದ ನೀವು ಈಗಲೇ ನನ್ನನ್ನು ಆ ವರೇಣ್ಯರಾಜನ ಅಂತಃಪುರದ ಸೂತಿಕಾಗಾರಕ್ಕೆ ಕಳಿಸಿರಿ.

ಶಿಶುರೂಪದಿಂದ ಇದೀಗ ಪ್ರಕಟವಾದ ಗಜಾನನ ಮಾತನ್ನು ಕೇಳಿ ಪಾರ್ವತಿ ಪರಮೇಶ್ವರರು ಆಶ್ಚರ್ಯಚಕಿತರಾದರು. ಮತ್ತು ತಮ್ಮ ಅನುಚರನಾದ ನಂದಿಯನ್ನು ಕರೆದು ಈ ಶಿಶು ಗಜಾನನನ್ನು ವರೇಣ್ಯರಾಜನ ಸೂತಿಕಾಗೃಹಕ್ಕೆ ಮುಟ್ಟಿಸಿ ಬರಲು ಅಪ್ಪಣೆ ಮಾಡಿದರು.

ಪಾರ್ವತೀ ಪರಮೇಶ್ವರರ ಆಜ್ಞೆಯಂತೆ ನಂದಿಯು ತಕ್ಷಣದಲ್ಲಿ ಆ ನವಜಾತ ಗಜಾನನ ಶಿಶುವನ್ನು ಎತ್ತಿಕೊಂಡು ವರೇಣ್ಯರಾಜನ ಅರಮನೆಗೆ ಹೋಗಿ ಅಂತಃಪುರದಲ್ಲಿ ಪ್ರಸೂತಿ ಗೃಹದಲ್ಲಿ ಪುಷ್ಟಿಕಾರಾಣಿಯ ಪಕ್ಕದಲ್ಲಿ ಮೆಲ್ಲಗೆ ಮಲಗಿಸಿದನು.

ರಾತ್ರಿ ಕಳೆದು ಬೆಳಗಾದ ಬಳಿಕ ಮೂರ್ಛೆ ತಿಳಿದೆದ್ದ ಪುಷ್ಟಿಕಾರಾಣಿಯು ತನ್ನ ಪಕ್ಕದಲ್ಲಿ ಮಲಗಿದ ವಿಚಿತ್ರಾಕಾರದ ವಿದ್ರೂಪಿ ಶಿಶುವನ್ನು ಕಂಡು ಭಯ ಚಕಿತಳಾದಳು. ನಾಲ್ಕು ತೋಳುಗಳು, ಆನೆಯ ಮೋರೆ, ಉದ್ದ ಸೊಂಡೆಗಳುಳ್ಳ ವಿಚಿತ್ರ ಶಿಶುವನ್ನು ನೋಡಿ, ಭಯದಿಂದ ನಡುಗುತ್ತ ಅವಳು ಪ್ರಸೂತಿ ಗೃಹದಿಂದ ಹೊರಗೆ ಬಂದಳು. ರಾಜಪರಿವಾರದವರೆಲ್ಲರೂ ಬಂದು ಅಕಟವಿಕಟಕಾರದ ಈ ಮಗುವನ್ನು ಕಂಡು ಭಯಭ್ರಾಂತರಾದರು. ಆಗ ಶಿಶು ಜನನದ ಸಮಾಚಾರವನ್ನು ಕೇಳಿ ವರೇಣ್ಯರಾಜನು ಧಾವಿಸಿ ಒಳಗೆ ಬಂದನು. ಲೋಕವಿಲಕ್ಷಣವಾದ ಆ ಶಿಶುವನ್ನು ನೋಡಿ ಆ ರಾಜನು ಕೂಡ ವ್ಯಾಕುಲಚಿತ್ತನಾಗಿ ತನ್ನ ಆಪ್ತೇಷ್ಟರನ್ನೆಲ್ಲ ಕರೆದು ತೋರಿಸಿದನು. ಅವರೆಲ್ಲರೂ ಆ ಮಗುವನ್ನು ನೋಡಿ ಪರೀಕ್ಷಿಸಿ, 'ಮಹಾರಾಜ, ಈ ಮಗುವಿನ ಲಕ್ಷಣವನ್ನು ನೋಡಿದರೆ ಇವನಲ್ಲಿ ಬಗೆಬಗೆಯ ದುರ್ಲಕ್ಷಣಗಳು ಎದ್ದು ಕಾಣುತ್ತವೆ. ಇದೊಂದು ರಾಜಕುಲಕ್ಕೆ ಅಪಶಕುನ. ಇದು ನಿನ್ನ ವಂಶಕ್ಕೆ ವಿನಾಶಕವಾಗುತ್ತದೆ. ಈ ಮಗುವನ್ನು ಮನೆಯಲ್ಲಿ ಇಟ್ಟುಕೊಳ್ಳಬೇಡ.''

ಪ್ರತ್ಯಕ್ಷದರ್ಶಿಗಳ ಮಾತಿನಂತೆ ರಾಜನು ಭಯಭೀತನಾಗಿ ತನ್ನ ಒಬ್ಬ ದೂತನನ್ನು ಕರೆದು ''ಈ ಮಗುವನ್ನು ಒಂದು ನಿರ್ಜನವಾದ ಕಾಡಿನಲ್ಲಿ ಬಿಟ್ಟು ಬನ್ನಿರಿ'' ಎಂದು ಆಜ್ಞೆ ಇತ್ತು ಕಳಿಸಿದನು. ರಾಜದೂತನು ಆ ತೇಜಸ್ವಿಯಾದ ಮಗುವನ್ನು ಎತ್ತಿಕೊಂಡು ಒಂದು ಗಹನವಾದ ಗೊಂಡಾರಣ್ಯಕ್ಕೆ ಹೋದನು. ಆ ಕಾಡಿನ ಗೂಡಿನಲ್ಲಿ ನಿರ್ಮಾನುಷವಾದ ಒಂದು ಸರೋವರದ ದಂಡೆಯಲ್ಲಿ ಆ ಮಗುವನ್ನು ಮಲಗಿಸಿದನು. ಆ ನಿಬಿಡಕಾನನ ಪ್ರದೇಶದಲ್ಲಿ ಕ್ರೂರವಾದ ಹಿಂಸ್ರ ಪಶುಗಳ ಹೊರತು ಮನುಷ್ಯರ ಸುಳಿವು ಇರಲಿಲ್ಲ. ಹೀಗೆ ವರೇಣ್ಯರಾಜನು ಘೋರ ಅರಣ್ಯದ ಮಧ್ಯದಲ್ಲಿ ಬಿಸುಟಿಬಿಟ್ಟು ದೀರ್ಘವಾದ ನಿಟ್ಟುಸಿರುಬಿಟ್ಟನು.

ದುರ್ದೈವಿಯಾದ ನರೇಶ ದಂಪತಿಗಳು ಆ ಅಮೂಲ್ಯರತ್ನದ ಮೌಲ್ಯ ಮಹತಿಗಳನ್ನು ತಿಳಿಯದೆ ಹಿಂಸ್ರಪಶುಗಳಿಂದ ಭಯಂಕರವಾದ ವನಾಂತರಾಳದಲ್ಲಿ ಎಸೆದು ಬಿಟ್ಟಿದ್ದರು. ಗಹನ ಕಾನನದ ಸರೋವರದ ತೀರದಲ್ಲಿ ಅನಾಥವಾಗಿ ಬಿದ್ದುಕೊಂಡ ಆ ಮಗುವಿನ ಮೇಲೆ ಒಂದು ನರಿಯ ದೃಷ್ಟಿ ಬಿದ್ದಿತು. ಆ ನರಿಯು ಮಗು ಮಲಗಿದ ಸ್ಥಳದ ಬಳಿಗೆ ಬರುವಷ್ಟರಲ್ಲಿ ಅಲ್ಲಿ ಮಹರ್ಷಿ ಪರಾಶರರು ಬಂದರು. ಸರೋವರದ ತೀರದಲ್ಲಿ ಮಲಗಿದ ಆ ಮಗುವನ್ನು ಅವರು ವಿಸ್ಮಯ ವಿಸ್ಫಾರಿತವಾದ ನೇತ್ರಾಂಚಲದಿಂದ ಪರೀಕ್ಷಿಸಿ ನಿರುಕಿಸಿ ನೋಡಿದರು. ಆ ಮುನಿಯ ದಿವ್ಯದೃಷ್ಟಿಗೆ ಇವನು ಸಾಕ್ಷಾತ್ ಪರಬ್ರಹ್ಮ ಎಂದು ತಿಳಿಯಲು ತಡವಾಗಲಿಲ್ಲ. ಆ ಮಗುವಿನ ಚರಣದಲ್ಲಿ ಧ್ವಜ ಅಂಕುಶ, ಕಮಲಚಿಹ್ನೆಗಳನ್ನೂ ಮುಖದ ಮೇಲೆ ಪರಬ್ರಹ್ಮನ ಲಕ್ಷಣಗಳನ್ನೂ ದೇಹದ ತುಂಬ ವ್ಯಾಪಿಸಿ ನಿಂತ ದೈವೀ ತೇಜಸ್ಸನ್ನೂ ನೋಡಿ ಮಹರ್ಷಿಗಳು ಹರ್ಷ ಪುಲಕಿತರಾದರು. ಮಗುವಿನ ಪಾದವನ್ನು ಮುಟ್ಟಿ ಭಕ್ತಿಯಿಂದ ಸಾಷ್ಟಾಂಗ ಪ್ರಣಾಮ ಮಾಡಿದರು. ನನ್ನ ಜನ್ಮ ಧನ್ಯವಾಯಿತು. ಯಾವನೋ ದುರ್ದೈವಿಯು ಈ ಮಹಾ ಮಹಿಮನನ್ನು ಇಲ್ಲಿಯೇ ಚೆಲ್ಲಿಕೊಟ್ಟು ಹೋಗಿದ್ದಾನೆ. ಇದು ನನ್ನ ಭಾಗ್ಯ ಎಂದು ಆ ಮಗುವನ್ನು ಎತ್ತಿಕೊಂಡು ಆಶ್ರಮಕ್ಕೆ ಹೋದರು. ಮತ್ತು ತನ್ನ ಪರಮ ಪತಿವ್ರತೆ ಪತ್ನಿ ವತ್ಸಲಾದೇವಿಗೆ ಆ ಮಗುವನ್ನು ಒಪ್ಪಿಸಿದರು. ಪ್ರೇಮಮಯಿಯಾದ ವತ್ಸಲಾ ಎಂಬ ಆ ಮುನಿಮಾನಿನಿಗೆ ಆ ಮಗುವನ್ನು ಕಂಡಕೂಡಲೆ ಎರಡೂ ಸ್ತನಗಳಲ್ಲಿ ಹಾಲು ಉಕ್ಕಿದವು. ಕಣ್ಣುಗಳಲ್ಲಿ ಹರ್ಷಾಶ್ರು ಉಕ್ಕಿತು. ಹೃದಯಾಂತರಾಳದಲ್ಲಿ ಪುತ್ರ ವಾತ್ಸಲ್ಯ ಉಕ್ಕಿ ಹರಿಯಿತು. ಪ್ರೀತಿಯಿಂದ ಮಗುವನ್ನು ಬೆಳೆಸತೊಡಗಿದರು. ಪರಾಶರ ಮಹರ್ಷಿಗಳು ತಮ್ಮ ವ್ರತ ಅನುಷ್ಠಾನ ಜಪತಪ ಅಧ್ಯಯನ ಅಧ್ಯಾಪನಾದಿ ಕಾರ್ಯಗಳನ್ನು ಸಂಕೋಚಗೊಳಿಸಿ ಆ ಮಗುವಿನ ಲಾಲನೆ ಪಾಲನೆಯಲ್ಲಿ ತತ್ಪರರಾದರು. ಆ ಮಗುವಿನ ಆಗಮನದಿಂದ ಪರಾಶರರ ಆಶ್ರಮದಲ್ಲಿ ವಿಚಿತ್ರವಾದ ಪರಿವರ್ತನ ಕಂಡು ಬಂದಿತು. ಒಣಗಿ ನಿಂತ ಮೋಟ ಮರಗಳೆಲ್ಲವೂ ಚಿಗಿತು ಕುಡಿಮುಡಿ ದಾಂಗುಡಿ ಇಟ್ಟು ಪಲ್ಲವಿಸಿ ಪುಷ್ಪಿಸಿ ಫಲಭಾರದಿಂದ ಬಳಕುತ್ತ ನಿಂತವು. ಅಲ್ಲಿದ್ದ ಹಸುಗಳೆಲ್ಲವೂ ಕಾಮಧೇನುವಿನಂತೆ ಯಥೇಷ್ಟ ಹಾಲು ಕರೆದು ಆಶ್ರಮ ಜೀವನವನ್ನು ಸಂಪನ್ನವನ್ನಾಗಿ ಮಾಡಿದವು.

ಈ ಸಮಾಚಾರವು ಮಹಾರಾಜ ವರೇಣ್ಯನ ಕಿವಿಗೆ ಬಂದು ತಲುಪಿತು. ದಿವ್ಯ ದೃಷ್ಟಿಸಂಪನ್ನರಾದ ಪರಾಶರ ಮಹರ್ಷಿಗಳು ತನ್ನ ಮಗುವನ್ನು ಸಂರಕ್ಷಿಸುತ್ತಿದ್ದಾರೆ ಎಂಬ ಸಮಾಚಾರ ಕೇಳಿ ಅವನಿಗೆ ಅತ್ಯಂತ ಸಂತೋಷವಾಯಿತು. ಆಗ ಅವನು ಅತ್ಯಂತ ಸಂತೋಷದಿಂದ ಅರಮನೆಯಲ್ಲಿ ಪುತ್ರೋತ್ಸವ ಆಚರಿಸಿದನು. ಮಂಗಲವಾದ್ಯಗಳು ಮೊಳಗಿದವು. ಅತಿಥಿಗಳಿಗೂ ಆಪ್ತೇಷ್ಟರಿಗೂ ಪ್ರಜಾಪರಿವಾರದವರಿಗೂ ಯಥೇಚ್ಛ ಮೃಷ್ಟಾನ್ನ ಭೋಜನ ಮಾಡಿಸಿದನು. ಬ್ರಾಹ್ಮಣರಿಗೆ ಅತ್ಯಮೂಲ್ಯವಾದ ವಸ್ತ್ರಾಭರಣಗಳನ್ನು ಇತ್ತು ಸಂತೋಷಗೊಳಿಸಿದನು.

ಇತ್ತ, ಸಿಂಧೂರನು ಒಂದು ದಿನ ಸಭೆಯಲ್ಲಿ ತನ್ನ ಪೌರುಷವನ್ನು ಕೊಚ್ಚಿಕೊಂಡನು. ''ಸಭಿಕರೆ, ನನ್ನ ಅಪರಿಮಿತವಾದ ಶಕ್ತಿ ಸಾಮರ್ಥ್ಯಗಳೆಲ್ಲವೂ ವ್ಯರ್ಥವಾದವು. ಇಂದ್ರಾದಿ ದೇವತೆಗಳು ನನ್ನ ಜೊತೆಗೆ ಯುದ್ಧ ಮಾಡಲು ಹೆದರಿದರು. ಬ್ರಹ್ಮ, ವಿಷ್ಣು,

ಮಹೇಶ್ವರರು ಮುಖ ತಪ್ಪಿಸಿದರು. ಈ ಮೃತ್ಯುಲೋಕದಲ್ಲಿ ಇರುವ ರಾಜರಿಗಂತೂ ನನ್ನೊಡನೆ ಯುದ್ಧಮಾಡುವ ಧೈರ್ಯವೂ ಇಲ್ಲ, ಶೌರ್ಯವೂ ಇಲ್ಲ. ಹೀಗಾಗಿ ನನ್ನ ತೋಳತೀಟೆ ಎಲ್ಲಿಯೂ ತೀರದಂತಾಗಿದೆ.

ಇಷ್ಟರಲ್ಲಿ ಆಕಾಶವಾಣಿಯಾಯಿತು. ''ಮೂರ್ಖ ಸಿಂಧೂರ, ನೀನು ವ್ಯರ್ಥವಾಗಿ ಜಂಭ ಕೊಚ್ಚಿಕೊಳ್ಳುವೆ. ನಿನ್ನ ಯುದ್ಧದ ಕಾಮನೆಯನ್ನು ಪೂರ್ಣಮಾಡುವ ಸಮರ್ಥನು ಪಾರ್ವತೀ ಪರಮೇಶ್ವರರಿಂದ ಪ್ರಕಟನಾಗಿ ಬೆಳೆಯುತ್ತಿದ್ದಾನೆ.''

ಈ ಆಕಾಶವಾಣಿಯನ್ನು ಕೇಳಿ ಸಿಂಧೂರಾಸುರನು ಕ್ರುದ್ಧನೂ ಸಂತಪ್ತನೂ ಆದನು. ಅವನು ತಕ್ಷಣದಲ್ಲಿಯೆ ಪಾರ್ವತೀ ಪರಮೇಶ್ವರರಿಂದ ಹುಟ್ಟಿದ ಆ ಮಗುವನ್ನು ಬೆಳೆಯಗೊಡದೆ, ಇದ್ದಲ್ಲಿಯೆ ಕೊಲ್ಲಬೇಕೆಂದು ಕೈಲಾಸಪರ್ವತಕ್ಕೆ ಧಾವಿಸಿದನು. ಅಲ್ಲಿ ಪಾರ್ವತೀ ಪರಮೇಶ್ವರರ ಮನೆಯಲ್ಲಿ ಹೊಕ್ಕನು. ಎಲ್ಲ ಕಡೆಗೂ ಹುಡುಕಿದನು. ಅಲ್ಲಿ ಯಾರೂ ಇರಲಿಲ್ಲ. ಇದ್ದರೂ ಅವನ ಕಣ್ಣಿಗೆ ಕಾಣಲಿಲ್ಲ. ಆಗ ಸಿಂಧೂರಾಸುರನು ಪಾರ್ವತೀ ಪರಮೇಶ್ವರರನ್ನು ಹುಡುಕಲು ಪೃಥ್ವೀಮಂಡಲದ ತುಂಬ ತಿರುಗಾಡಿದನು. ಅವನು ಎಲ್ಲಕಡೆಗೂ ತಿರುತಿರುಗಿ ಹುಡುಕಾಡುತ್ತ ಒಂದು ನಿರ್ಜನ ವನಾಂತದ ಏಕಾಂತ ಸುಂದರವಾದ ವಿಶಾಲ ಮಂಟಪದಲ್ಲಿ ಗಣಾಧೀಶರನ್ನು ನೋಡಿದನು. ಅವನು ಆ ಶಿಲಾ ಮಂಟಪದ ಬಳಿಗೆ ನುಗ್ಗಿ ಪಾರ್ವತಿಯ ಪ್ರಸೂತಿ ಗೃಹದಲ್ಲಿ ಹೊಕ್ಕು ಹುಡುಕಾಡಿದನು. ಅಲ್ಲಿ ಯಾವ ಮಗುವೂ ಕಾಣಲಿಲ್ಲ. ಹಾಗಾದರೆ ಆ ಮಗು ಇನ್ನೂ ತಾಯಿಯ ಗರ್ಭದಲ್ಲಿಯೇ ಇರಬಹುದು. ತಾಯಿಯಾದ ಪಾರ್ವತಿಯನ್ನೇ ಸಂಹರಿಸಿಬಿಟ್ಟರೆ ಆ ಮಗು ಅವಳ ಗರ್ಭದಲ್ಲಿಯೇ ತಾಯಿ ಸಹಿತವಾಗಿ ಮರಣ ಹೊಂದುವದು ಎಂದು ಆ ಕ್ರೂರನು ಪಾರ್ವತೀ ದೇವಿಯನ್ನು ಹೊಡೆಯಲು ತನ್ನ ಶಸ್ತ್ರವನ್ನು ಎತ್ತಿದನು. ಆಗ ಆ ಜಗದಂಬೆಯ ತೊಡೆಯ ಮೇಲೆ ಪಾಶ, ಪರಶು ಕಮಲ, ಮಾಲೆಗಳನ್ನು ಧರಿಸಿದ ಚತುರ್ಭುಜನಾದ ಒಂದು ತೇಜಸ್ವಿ ಬಾಲಕನು ಮಲಗಿದ್ದು ಕಂಡು ಬಂದಿತು. ಕೂಡಲೆ ಆ ದೈತ್ಯನು ಅಲ್ಲಿ ಬಾಗಿ ತೊಡೆಯ ಮೇಲಿನ ಮಗುವನ್ನು ರಟ್ಟೆ ಹಿಡಿದು ಎತ್ತಿಕೊಂಡನು. ಸಮುದ್ರದಲ್ಲಿ ಒಗೆದು ಬಿಡಬೇಕು ಎಂದು ಆ ಮಗುವನ್ನು ಹೊತ್ತುಕೊಂಡು ನಡೆದನು.

ಮಾರ್ಗದಲ್ಲಿ, ಹೆಗಲಮೇಲೆಯೂ ಬಗಲಲ್ಲಿಯೂ ಹೊತ್ತುಕೊಂಡ ಆ ಮಗು ಭಾರೀ ಭಾರವಾಯಿತು. ಬೆಟ್ಟದಂತೆ ಅತ್ಯಂತ ಭಾರಭೂತವಾದ ಆ ಶಿಶುವನ್ನು ಹೊರಲು ಆಗದೆ ಆ ದೈತ್ಯನು ನಡುಗತೊಡಗಿದನು. ಮುಂದೆ ಹೆಜ್ಜೆ ಇಡುವದು ಕೂಡ ಆಗಲಿಲ್ಲ. ಆಗ ಅವನು ಸಿಟ್ಟಿಗೆದ್ದು ಆ ಮಗುವನ್ನು ನೆಲದಮೇಲೆ ಅಪ್ಪಳಿಸಿದನು.

ಆ ಮಗುವನ್ನು ಜೋರಿನಿಂದ ಅಪ್ಪಳಿಸಿದ್ದರ ಪರಿಣಾಮವಾಗಿ ಆ ಪರ್ವತವು ನಡುಗಿತು. ಪೃಥ್ವಿಯು ಕಂಪಿತವಾಯಿತು. ಸಮುದ್ರವು ಪ್ರಕ್ಷುಬ್ಧವಾಯಿತು. ಬೆಟ್ಟದ ತುದಿಗೆ ಅಪ್ಪಳಿಸಿದ ಆ ಶಿಶು ನರ್ಮದಾನದಿಯಲ್ಲಿ ಉರುಳಿ ಬಿದ್ದಿತು. ಆ ಸ್ಥಳವು ಗಣೇಶ ಕುಂಡವೆಂದು ಪ್ರಸಿದ್ಧವಾಯಿತು. ಆ ಮಗುವಿನ ಶರೀರದಿಂದ ಚಿಮ್ಮಿದ ರಕ್ತದಿಂದ ಆ ಪರ್ವತದ ಕಲ್ಲುಗಳೆಲ್ಲವೂ ಕೆಂಪಗಾದವು. ಅಲ್ಲಿ ಇರುವ ಗಣೇಶನು **ನರ್ಮದಾ ಗಣೇಶ** ಎಂದು ಪ್ರಸಿದ್ದನಾದನು.

ಶಿವಪಾರ್ವತಿಯರ ಪುಟ್ಟ ಶಿಶುವನ್ನು ಬೆಟ್ಟದ ಕಲ್ಲಿಗೆ ಅಪ್ಪಳಿಸಿ ಒಗೆದ ಬಳಿಕ ಸಿಂಧೂರಾಸುರನು ನನ್ನ ಶತ್ರುಮೃತನಾಗಿ ಹೋದ ಎಂದು ಸಂತುಷ್ಟನಾದ. ಅಷ್ಟರಲ್ಲಿ ಅದೇ ಗಣೇಶ ಕುಂಡದಿಂದ ಒಂದು ಪರ್ವತಾಕಾರದ ಭೀಕರ ಪುರುಷನು ಹೊರಬಂದನು. ಅವನು ಸಿಂಧೂರಾಸುರನನ್ನು ಕುರಿತು, ಮೂರ್ಖದೈತ್ಯ, ನಿನ್ನ ಶತ್ರು ಸಂರಕ್ಷಣೆಗಾಗಿ ಬೇರೆಡೆಗೆ ಸುರಕ್ಷಿತವಾಗಿ ಬೆಳೆಯುತ್ತಲಿದ್ದಾನೆ. ಸಮಯ ಬಂದಾಗ ನಿನ್ನನ್ನು ಅವನು ಸಂಹರಿಸುತ್ತಾನೆ'' ಎಂದು ಹೇಳಿ ಅದೃಶ್ಯನಾದನು. ಆಗ ಆ ದೈತ್ಯನು ಸಾಧುಜನ ''ಅಂಜುಬುರಕ ಭೀರು ಪುರುಷನೆ, ನೀನು ಯಾರು ? ಶೂರನಾದರೆ ನನ್ನೊಡನೆ ಯುದ್ಧ ಮಾಡಲು ಬಾ. ಅಂಜಿ ಅದೃಶ್ಯನಾಗಿ ಏಕೆ ಕುಳಿತಿರುವೆ ? ಎಂದು ಕೂಗಿದನು. ಯಾರೂ ಬರಲಿಲ್ಲ. ಆಗ ಅವನು ನಿರಾಶನಾಗಿ ತನ್ನ ಸ್ಥಳಕ್ಕೆ ಹಿಂದುರುಗಿದನು.

ಪಾರ್ವತೀ ದೇವಿಯು ತಾವು ನೆಲೆಸಿದ ಪರ್ಯಲೀ ವನದಲ್ಲಿ ದೈತ್ಯರ ಉಪದ್ರವವು ಹೆಚ್ಚಾಗಿ ಆದದ್ದನ್ನು ನೋಡಿ, ಮಹಾದೇವರಿಗೆ ಬಿನ್ನವಿಸಿಕೊಂಡು ಅವರೊಡನೆ ಕೈಲಾಸಪರ್ವತಕ್ಕೆ ತೆರಳಿದಳು.

ಒಂದು ದಿನ ಸ್ವರ್ಗದಲ್ಲಿ ದೇವೇಂದ್ರನು ತನ್ನ ಸುಧರ್ಮಸಭೆಯಲ್ಲಿ ಮಂಡಿಸಿದ್ದನು. ಆಗ ಅವನಿಗೆ ಅಲ್ಲಿ ಕ್ರೌಂಚ ಎಂಬ ಶ್ರೇಷ್ಠ ಗಂಧರ್ವನು ಯಾವುದೋ ಅವಸರದ ಕೆಲಸಕ್ಕಾಗಿ ಅಲ್ಲಿಂದ ಹೊರಟುನಿಂತನು. ಶೀಘ್ರಗತಿಯಿಂದ ಹೊರಟು ನಿಂತ ಕ್ರೌಂಚನ ಕಾಲು ಸಭೆಯಲ್ಲಿ ಕುಳಿತ ವಾಮದೇವ ಮಹರ್ಷಿಯ ಮೈಗೆ ತಾಕಿತು. ಆಗ ಅವರು ಸಿಟ್ಟಿಗೆದ್ದು ನೀನು ಇಲಿಯಾಗಿ ಹೋಗು ಎಂದು ಶಾಪಕೊಟ್ಟರು. ಆಗ ಕ್ರೌಂಚಗಂದರ್ವನು ಭಯಭೀತನಾಗಿ ಕೈ ಮುಗಿದು ಶಾಂತರಾಗಬೇಕೆಂದು ಮತ್ತು ತನ್ನ ಅಪರಾಧ ಕ್ಷಮಿಸಬೇಕೆಂದು ವಾಮದೇವ ಮುನಿಗಳನ್ನು ಕೇಳಿಕೊಂಡನು. ಆಗ ಮಹರ್ಷಿಗಳು ಪ್ರಶಾಂತರಾಗಿ ''ನೀನು ಮುಂದೆ ದೇವ ದೇವನಾದ ಗಜಾನನನ ವಾಹನವಾಗುವೆ. ಅದರಿಂದ ನಿನ್ನ ದುಃಖ ದೂರವಾಗುವದು'' ಎಂದು ಅವನಿಗೆ ಉಶ್ಶಾಪ ಕೊಟ್ಟರು. ಅದೇ ಕ್ಷಣದಲ್ಲಿ ಕ್ರೌಂಚ ಗಂಧರ್ವನು ಮೂಷಕನಾಗಿ ಇಲಿಯ ರೂಪದಿಂದ ಪರಾಶರರ ಆಶ್ರಮದಲ್ಲಿ ಬಂದು ಬಿದ್ದನು. ಆ ಇಲಿಯ ದೇಹವು ಪರ್ವತದಂತೆ ಅತ್ಯಂತ ವಿಶಾಲವೂ ಭಯಾನಕವೂ ಆಗಿದ್ದಿತು. ಅದರ ಕೂದಲು ಉಗುರು ಸೊಂಡೆ ಒಂದಕ್ಕಿಂತ ಒಂದು ತೀಕ್ಷ್ಣ, ಭೀಕರವಾಗಿದ್ದವು. ಅದರ ಧ್ವನಿಯಂತೂ ಅತ್ಯಂತ ಕರ್ಕಶವಾಗಿತ್ತು. ಈ ಬಲಿಷ್ಠವಾದ ಮೂಷಕವು ಪರಾಶರರ ಆಶ್ರಮದಲ್ಲಿಯ ಪಾತ್ರೆ ಪರಟೆಗಳನ್ನು ಮುರಿದು, ಮಾಡಿದ ಅಡಿಗೆಗಳನ್ನೆಲ್ಲ ತಿಂದು, ವಿದ್ಯಾರ್ಥಿಗಳ ಬಟ್ಟೆಗಳನ್ನೆಲ್ಲ ಹರಿದು ಭಯಂಕರವಾದ ಉಪದ್ರವವನ್ನು ಆಶ್ರಮವಾಸಿಗಳಿಗೆ ನೀಡತೊಡಗಿತು. ಭೀಕರ ಆಕಾರದ ಆ ಮೂಷಕದ ಪುಚ್ಛ ಪ್ರಹಾರದಿಂದಲೇ ಆಶ್ರಮದ ಪರಿಸರದ ಎಷ್ಟೋ ಹೆಮ್ಮರಗಳು ಮುರಿದು ಬಿದ್ದವು.

ಇದರಿಂದ ಅತ್ಯಂತ ದುಃಖಿತರಾದ ಪರಾಶರ ಮಹರ್ಷಿಗಳು ''ಮುಂದೆ ಏನು ಮಾಡಬೇಕು ; ಯಾರಿಗೆ ಶರಣು ಹೋಗಲಿ'' ಎಂದು ದೀನ ದುಃಖಿತರಾಗಿ ತಮ್ಮಲ್ಲಿಯೇ ನುಡಿದರು. ಆಗ ಅಲ್ಲಿಯೇ ಇದ್ದ ಗಜಮುಖನು ಮಹರ್ಷಿಗಳಿಗೆ ''ಪೂಜ್ಯರೆ, ನೀವು ಚಿಂತೆ ಮಾಡಬೇಡಿರಿ. ನಾನು ನಿಮ್ಮ ಪುತ್ರರೂಪನಾಗಿ ಇಲ್ಲಿ ಬಂದು ಇದ್ದ ಬಳಿಕ ನಿಮ್ಮ ಕಷ್ಟಾನಿಷ್ಟಗಳನ್ನೆಲ್ಲ ನಿವಾರಣಮಾಡುತ್ತೇನೆ. ಆ ಭಯಂಕರವಾದ ಇಲಿಯನ್ನು ಈಗಲೇ

ಮಣಿಸಿ ಮರ್ದಿಸಿ ನನ್ನ ವಾಹನವನ್ನಾಗಿ ಮಾಡಿಕೊಳ್ಳುತ್ತೇನೆ'', ಹೀಗೆ ಹೇಳಿ ಗಜಾನನನು ಆ ಇಲಿಯ ಮೇಲೆ ತನ್ನ ಪ್ರಖರವಾದ ಪಾಶವನ್ನು ಬೀಸಿದನು. ಆಗ ಆ ಪಾಶವು ಎಲ್ಲ ಕಡೆಗೂ ಸುತ್ತಾಡಿ ಹುಡುಕಾಡಿ ಪಾತಾಳದವರೆಗೆ ಓಡಿ ಹೋದ ಆ ಮೂಷಕವನ್ನು ಹಿಡಿದು ತಂದಿತು. ಭಯಂಕರವಾದ ಪಾಶದಿಂದ ಅದಕ್ಕೆ ಬಿಡಿಸಿಕೊಳ್ಳಲು ಆಗದೆ, ಕೊರಳಿಗೆ ಉರುಳು ಬಿಗಿಯಾಗಿ ಮೂಷಿಕವು ಮೂರ್ಛಿತವಾಗಿ ಬಿದ್ದಿತು. ಪಾಶದಿಂದ ಎಳೆದು ತಂದ ಬಳಿಕ ಆ ಮೂಷಕಕ್ಕೆ ಜ್ಞಾನೋದಯವಾಯಿತು. ಅದು ಬಂದು ಗಜಾನನನ ಪಾದದ ಮೇಲೆ ಬಿದ್ದು ಕ್ಷಮೆ ಕೇಳಿಕೊಂಡು ''ಪ್ರಭು, ನೀನು ಈ ಜಗತ್ತಿನ ಸ್ವಾಮಿ, ಎಲ್ಲ ಈ ಪ್ರಪಂಚದ ಅದಿಕರ್ತಾ ಹಾಗೂ ಪಾಲಕ. ನಿನ್ನ ನೋಡಿ ನಾನು ಧನ್ಯನಾದೆ. ನನ್ನ ಮೇಲೆ ದಯಮಾಡು'' ಎಂದು ಪ್ರಾರ್ಥಿಸಿತು.

ಮೂಷಕದ ಈ ಪ್ರಾರ್ಥನೆಯನ್ನು ಕೇಳಿ ಪರಾಶರಪುತ್ರನು ಪ್ರಸನ್ನನಾದನು. ಮತ್ತು ಆ ಮೂಷಕಕ್ಕೆ ''ನಿನಗೆ ಬೇಕಾದ ವರಬೇಡು'' ಎಂದು ಹೇಳಿದನು. ಆಗ ಸ್ವಭಾವದಿಂದಲೇ ದುಷ್ಟವಾದ ಆ ಇಲಿಯಲ್ಲಿ ಅಹಂಕಾರವು ಜಾಗೃತವಾಯಿತು. ಅದು ತಿರುಗಿನಿಂತು ಗಜಾನನನಿಗೆ ''ನಾನೇಕೆ ನಿನ್ನಿಂದ ವರ ಪಡೆಯಲಿ, ನೀನೇ ಬೇಕಾದರೆ ವರವನ್ನು ಕೇಳಿಕೋ ನಿಡುತ್ತೇನೆ'' ಎಂದು ಹೇಳಿತು. ಅದನ್ನು ಕೇಳಿ, ಗಣೇಶನು ''ನಿನ್ನ ಮಾತಿನಂತೆಯೇ ಆಗಲಿ, ನಾನೇ ನಿನ್ನಲ್ಲಿ ವರಕೇಳುತ್ತೇನೆ. ನಿನ್ನ ವಚನವು ಸತ್ಯವಾಗಿದ್ದರೆ ನೀನು ನನ್ನ ವಾಹನವಾಗು.'' ಎಂದು ಹೇಳಿದನು. ಮದಾಂಧವಾದ ಮೂಷಕವು ''ತಥಾಸ್ತು. ನಾನು ನಿನ್ನ ವಾಹನವಾಗುವೆನು'' ಎಂದು ನುಡಿಯಿತು. ಅದರಿಂದಲೆ ಆ ಮೂಷಕವು ತನ್ನ ಮೇಲೆ ಆ ಕ್ಷಣದಲ್ಲಿಯೇ ಬಂದು ಕುಳಿತ ಗಣೇಶನನ್ನು ಹೊತ್ತು ನಡೆಯಿತು. ಗಣೇಶನು ತನ್ನ ಅತ್ಯಲ್ಪವಾದ ಭಾರವನ್ನು ಹಾಕಿ ಕುಳಿತರೂ ಮೂಷಕವು ಅವನನ್ನು ಹೊರಲಾರದೆ ಕುಸಿದು ಬಿದ್ದಿತು. ಆಗ ಅದು ದೀನವಾಗಿ ಪ್ರಾರ್ಥಿಸಿತು.

**ಮೂಷಕ** :- ಪ್ರಭು, ನಿನ್ನ ವಿಶ್ವಂಭರ ದೇಹವನ್ನು ನಾನು ಹೊರಲಾರೆ. ನನಗೆ ಹೊರಲು ಶಕ್ಯವಾಗುವಷ್ಟು ನೀನು ಹಗುರಾಗಿ ನನ್ನ ಮೇಲೆ ಕೂಡು. ನಿನ್ನ ಹೊರುವ ಶಕ್ತಿಯನ್ನು ನನಗೆ ನೀಡು.

ಮೂಷಕದ ಪ್ರಾರ್ಥನೆಯಂತೆ ಗಣೇಶನು ಮೂಷಕಕ್ಕೆ ಹೂವಿನಷ್ಟು ಹಗುರಾಗಿ ಅದನ್ನು ಲೀಲೆಯಿಂದ ಆರೋಹಣ ಮಾಡಿದನು. ಅಂದಿನಿಂದ ಗಜಾನನನು 'ಮೂಷಕವಾಹನ'ನಾದನು.

ಗಜಾನನನು ಒಂಭತ್ತು ವರ್ಷದವನು ಆದ ಬಳಿಕ ಶಸ್ತ್ರವಿದ್ಯೆ, ಶಾಸ್ತ್ರ ವಿದ್ಯೆ ಎಲ್ಲವನ್ನು ಅಧ್ಯನಮಾಡಿ, ವೇದ ವೇದಾಂಗಗಳನ್ನೂ, ಉಪನಿಷತ್ತುಗಳನ್ನೂ ಓದಿ, ಸರ್ವವಿದ್ಯಾಪಾರಂಗತನಾದನು.

ಇತ್ತ ಲೋಕದಲ್ಲಿ ಸಿಂಧೂರನ ಅತ್ಯಾಚಾರವು ಮಿತಿ ಮೀರಿತು. ಲೋಕದಲ್ಲಿಯ ಯಜ್ಞ ಯಾಗ, ದೇವಪೂಜೆ ಅಧ್ಯಯನ ಅಧ್ಯಾಪನ ಎಲ್ಲವನ್ನು ಬಲಿಷ್ಠದೈತ್ಯನು ತನ್ನ ಬಾಹುಬಲದಿಂದ ಆಕ್ರಮಣಮಾಡಿ ಪ್ರತಿಬಂಧಿಸಿದನೂ ಅದರಿಂದ ದೇವತೆಗಳೂ, ಮುನಿಗಳೂ ಸಂತ್ರಸ್ತರಾಗಿ ತಮ್ಮ ತಮ್ಮ ಸ್ಥಾನ ಬಿಟ್ಟು ವನಾಂತರಾಳದಲ್ಲಿ ಅಡಗಿ ಕಾಲಕಳೆಯತೊಡಗಿದರು.

ಅದನ್ನು ತಿಳಿದ ಗಜಾನನು ತನ್ನ ತಾಯಿ ವತ್ಸಲಾದೇವಿ ಹಾಗೂ ತಂದೆ ಪರಾಶರರ ಅಪ್ಪಣೆ ಪಡೆದು ಸಿಂಧೂರಾಸುರನ ರಾಜಧಾನಿಯಾದ ಸಿಂಧೂರವಾಡದ ಮೇಲೆ ಸಾಗಿಹೋದನು. ಸಿಂಧೂರಾಸುರನಿಗೂ ಗಜಾನನಿಗೂ ಘನ ಘೋರವಾದ ಸಂಗ್ರಾಮವು ಮಸಗಿತು. ಆಗ ಗಜಾನನನು ವಿರಾಟ್‌ರೂಪವನ್ನು ಧರಿಸಿದನು. ಬ್ರಹ್ಮಾಂಡವ್ಯಾಪಿಯಾದ ಆ ವಿಶ್ವರೂಪವನ್ನು ಅವನು ತೆಗೆದುಕೊಂಡು ನಿಂತಾಗ ವರದ ಬಲದಿಂದ ಉನ್ಮತ್ತನಾದ ಸಿಂಧೂರಾಸುರನು ಆ ದೇವದೇವನ ಮೇಲೆ ಎರಗಿಬಿದ್ದನು. ಆಗ ಗಜಾನನನು ತನ್ನ ವಜ್ರ ಸಮಾನವಾದ ಕೈಗಳಿಂದ ಸಿಂಧೂರಾಸುರನ ಕೊರಳನ್ನು ಅಮುಕಿ, ಬಲವಾಗಿ ಹಿಸುಕಿ ಕೊಂದು ಹಾಕಿದನು. ಸಿಂಧೂರಾಸುರನ ದೇಹದಿಂದ ನೆತ್ತರ ಬಸಿದು ಗಜಾನನ ದೇಹದ ಮೇಲೆ ಬಿದ್ದಿತು.

ಅಂದಿನಿಂದ ಆ ಗಜಾನನನಿಗೆ ಸಿಂಧೂರವದನ, ಸಿಂಧೂರಪ್ರಿಯ ಎಂಬ ಹೆಸರುಗಳು ಪ್ರಾಪ್ತವಾದವು. ಆಗ ದೇವತೆಗಳು, ಪಾಶಾಂಕುಶ ಪರಶುಮಾಲೆಗಳನ್ನು ಧರಿಸಿದ ಚತುರ್ಭುಜನಾದ ಮೂಷಕವಾಹನನಾದ ಗಜಾನನನ ಮೇಲೆ ಹೂಗಳ ಮಳೆ ಗರೆದರು. ಭಕ್ತಿಯಿಂದ ಅವನ ಸ್ತೋತ್ರವನ್ನು ಮಾಡಿದರು. ಮತ್ತು ಅದೇ ಸ್ಥಳದಲ್ಲಿ ಒಂದು ಭವ್ಯಮಂದಿರವನ್ನು ನಿರ್ಮಿಸಿ ಅಲ್ಲಿ ಗಜಾನನನ ಸುಂದರ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದರು. ,

ಗಜಾನನನು ಸಿಂಧೂರಾಸುರನನ್ನು ಸಂಹಾರ ಮಾಡಿದ ಸಮಾಚಾರವು ವರೇಣ್ಯರಾಜನ ಕಿವಿಗೆ ತಲುಪಿತು. ಆಗ ಅವನು ಗಜಾನನನು ಇದ್ದಲ್ಲಿಗೆ ಬಂದು ಅವನ ಪೂಜೆಯನ್ನು ಮಾಡಿ, ಕಣ್ಣೀರನ್ನು ಉದುರಿಸುತ್ತ ಗದ್ಗದ ಕಂಠದಿಂದ ನುಡಿದನು.

**ವರೇಣ್ಯರಾಜ :-** ಪ್ರಭು, ನನ್ನನು ಕ್ಷಮಿಸು, ನೀನು ಅನಂತಕೋಟಿ ಬ್ರಹ್ಮಾಂಡ ನಾಯಕ. ನಿನ್ನ ಯೋಗ್ಯತೆಯನ್ನು ತಿಳಿಯದೆ ನಾನು ನಿನ್ನನ್ನು ಅಡವಿಯಲ್ಲಿ ಬಿಟ್ಟುಬಂದೆ. ಅದಕ್ಕಾಗಿ ನನಗೆ ಪಶ್ಚಾತ್ತಾಪವಾಗಿದೆ. ನೀನು, ನಾನು ಮಾಡಿದ ಕಾನನ ಪರಿತ್ಯಾಗವನ್ನು ಮನಸ್ಸಿನಲ್ಲಿ ಹಿಡಿಯದೆ ನನ್ನನ್ನು ಅನುಗ್ರಹಿಸು.

**ಗಜಾನನ :-** ಮಹಾರಾಜ, ಹಿಂದಿನ ಜನ್ಮದಲ್ಲಿ ನೀವಿಬ್ಬರೂ ಪತಿಪತ್ನಿಯರು. ಒಣಗಿದ ತರಗೆಲೆಗಳನ್ನು ತಿಂದು ತೀಕ್ಷ್ಣತರವಾದ ತಪಸ್ಸನ್ನು ಒಂದು ಸಾವಿರದ ವರ್ಷ ತಪ್ಪದೆ ಮಾಡಿದ್ದೀರಿ. ನಾನು ದರ್ಶನ ಕೊಟ್ಟಾಗ ನಿಮ್ಮ ಪುತ್ರನಾಗಿ ಅವತರಿಸು ಎಂದು ಕೇಳಿಕೊಂಡಿದ್ದೀರಿ. ನಿಮ್ಮ ಅಪೇಕ್ಷೆಯನ್ನು ಪೂರ್ಣಮಾಡಲು ಹಾಗೂ ಸಿಂಧೂರಾಸುರನನ್ನು ನಾಶಗೈಯಲು ಮತ್ತು ಸಾಧುಸಜ್ಜನರನ್ನು ರಕ್ಷಿಸಲು ನಾನು ಸಾಕಾರವಾದ ದೇಹವನ್ನು ಧಾರಣಮಾಡಿಕೊಂಡು ಬಂದಿದ್ದೇನೆ. ನನ್ನ ಅವತಾರ ಕಾರ್ಯ ಸಮಾಪ್ತವಾಗಿದೆ. ನಾನು ನನ್ನ ಲೋಕಕ್ಕೆ ಹೋಗುತ್ತೇನೆ.

ಹೀಗೆ ಹೇಳಿ ಗಜಾನನನು ವರೇಣ್ಯರಾಜನ ತಲೆಯ ಮೇಲೆ ತನ್ನ ವರದ ಹಸ್ತವನ್ನು ಇಟ್ಟನು ಮತ್ತು ಆ ರಾಜನಿಗೆ ವಿಸ್ತೃತವಾಗಿ ಜ್ಞಾನೋಪದೇಶವನ್ನು ಮಾಡಿದನು. ಅನಂತರ ಭಗವಾನ್ ಶ್ರೀ ಗಜಾನನನು ಅಲ್ಲಿಯೇ ಅಂತರ್ಧಾನ ಹೊಂದಿದನು.

ಮುಂದೆ ವರೇಣ್ಯನು ಮಹಾಪ್ರಭುವಿನ ಹಸ್ತಸ್ಪರ್ಶದಿಂದ ಮತ್ತು ಉಪದೇಶಗಳಿಂದ ವಿರಕ್ತನಾಗಿ ತನ್ನ ರಾಜ್ಯ ವೈಭವವನ್ನೆಲ್ಲ ಮಂತ್ರಿ ಮಹನೀಯರಿಗೆ ಒಪ್ಪಿಸಿ ಅರಣ್ಯಕ್ಕೆ

ಹೋದನು. ಅಲ್ಲಿ ನಿಂತು ತಪಶ್ಚರ್ಯವನ್ನು ಮಾಡಿ, ಉದ್ಧೃತನಾಗಿ, ತನ್ನ ಜನ್ಮವನ್ನು ಸಫಲ ಮಾಡಿಕೊಂಡನು. ಗಜಾನನನು ವರೇಣ್ಯರಾಜನಿಗೆ ನೀಡಿದ ಉಪದೇಶವು **ಗಣೇಶಗೀತಾ** ಎಂದು ಪ್ರಸಿದ್ಧವಾಗಿದೆ.

## ಧೂಮ್ರಕೇತು

ಶ್ರೀ ಗಣೇಶನು ಕಲಿಯುಗದ ಕೊನೆಯಲ್ಲಿ ಮಾಡುವ ಅವತಾರವು 'ಧೂಮ್ರಕೇತು' ಎಂದು ಪ್ರಸಿದ್ಧವಾಗುವದು. ಕಲಿಯುಗದಲ್ಲಿ ಪ್ರಾಯಃ ಎಲ್ಲರೂ ಅಚಾರ ಭ್ರಷ್ಟರೂ, ಮಿಥ್ಯಾಭಾಷಿಗಳೂ ಆಗುವರೂ ಬ್ರಾಹ್ಮಣರು ವೇದಾಧ್ಯಯನ ಸಂಧ್ಯಾವಂದನಾದಿಗಳನ್ನು ಬಿಟ್ಟು ಬಿಡುವರ ಅಧರ್ಮ, ಅತ್ಯಾಚಾರ, ಹಿಂಸಾಚಾರ, ಪಾಪಾಚಾರ, ದುರಾಚಾರಗಳ ತಾಂಡವವು ಎಲ್ಲ ಕಡೆಗೆ ಅವ್ಯಾಹಿತವಾಗಿ ನಡೆಯುವವು. ವರ್ಣ ಸಂಕರವಾಗುವದು ; ಸಾಧ್ವೀ ಸ್ತ್ರಿಯರೂ ಕೂಡ ಪಾತಿವ್ರತ್ಯಭ್ರಷ್ಟರಾಗಿ ದುರ್ಮಾರ್ಗಕ್ಕೆ ಇಳಿಯುವರು. ಪರಸ್ತ್ರೀ, ಪರದ್ರವ್ಯ, ಪರಪ್ರಾಣರಹಣ ಮಾಡುವ ಜನರೆಲ್ಲರೂ ಧರ್ಮಭ್ರಷ್ಟರಾಗಿ ಮ್ಲೆಂಛಪ್ರಾಯರಾಗುವರು. ಭೂಮಿಯೆಲ್ಲವೂ ಬೆಳೆ ಬೆಳೆಯದೆ ಬಂಜರವಾಗುವದು. ಮರಬಳ್ಳಿಗಳು ರಸಹೀನವಾಗಿ ಒಣಗಿ ನಿಲ್ಲುವವು ಐದಾರು ವರ್ಷದ ಕನ್ಯೆಯರು ಹಡೆಯುವರು. ಸ್ತ್ರೀ ಪುರುಷರ ಆಯುಷ್ಯ ಹದಿನಾರು ವರ್ಷಕ್ಕೆ ಪರಿಮಿತ. ದುಡ್ಡೇದೇವರು. ದುರಾಚಾರವೇ ಸದಾಚಾರ. ಎಲ್ಲ ಕಡೆಗೂ ಈರ್ಷ್ಯೆ, ದ್ವೇಷ, ಹಿಂಸೆ, ಕೊಲೆಗಳ ಸ್ವೈರಪ್ರಸಾರ.

ಆಗ, ಯಜ್ಞಯಾಗಗಳು ಲುಪ್ತವಾದದ್ದರಿಂದ ದೇವತೆಗಳಿಗೆಲ್ಲ ಉಪವಾಸ ಆಗುವದು. ದೇವತೆಗಳೆಲ್ಲ ಗಜಾನನಿಗೆ ಶರಣು ಹೋಗುವರು. ಅವನನ್ನು ಭಕ್ತಿಯಿಂದ ಸ್ತೋತ್ರಮಾಡಿ ನಮಸ್ಕರಿಸಿ ಪ್ರಾರ್ಥನೆ ಮಾಡುವರು. ಆಗ ಮಹಾಪ್ರಭು ಗಜಾನನು ಭೂಲೋಕದಲ್ಲಿ ಅವತಾರಮಾಡಿ ''ಶೂರ್ಪಕರ್ಣ'', ''ಧೂಮ್ರವರ್ಣ'' ಎಂಬ ಹೆಸರುಗಳಿಂದ ಪ್ರಸಿದ್ಧನಾಗುವನು. ಅನಂತರ ಧೂಮ್ರವರ್ಣನು ಅಶ್ವಾರೂಢನಾಗಿ ಕೈಯಲ್ಲಿ ಶಸ್ತ್ರ ಹಿಡಿದು ಅಧರ್ಮ ಪ್ರಸಾರಕ್ಕೆ ಮೂಲ ಕಾರಣವಾದ ಮ್ಲೆಂಛರನ್ನೆಲ್ಲ ಸಂಹಾರ ಮಾಡುವನು. ಮ್ಲೆಂಛರ ಅನುಕರಣ ಮಾಡಿ ಅಧರ್ಮ ಭೀಕರ ನಡೆಸುವ ಎಲ್ಲ ನಾಸ್ತಿಕರನ್ನು ಧೂಮ್ರಕೇತು ಸಂಹಾರ ಮಾಡುವನು.

ಅನಂತರ ಆ ಮಹಾಪ್ರಭುವು ಗಿರಿಕಂದರಗಳಲ್ಲಿ ಹೋಗಿ ಅಡಗಿಕೊಂಡು ಕುಳಿತ ಬ್ರಾಹ್ಮಣರು ಎಲ್ಲರನ್ನು ಕರೆದು ಅವರನ್ನು ಗೌರವಿಸುವನು. ಮತ್ತು ಅವರಿಗೆ ಎಂದಿನಂತೆ ವೇದೋಕ್ತ ಧರ್ಮಕರ್ಮಾನುಷ್ಠಾನ ಮಾಡಲು ಪ್ರೇರಣೆ, ಪ್ರೋತ್ಸಾಹನ ನೀಡುವನು. ಗಜಾನನನ ಕರ್ತೃತ್ವ ಶಕ್ತಿಯಿಂದ ಸತ್ಯ ಧರ್ಮ ಪ್ರಸ್ಥಾಪನೆಯಾಗಿ ಧರ್ಮಮಯವಾದ ಸತ್ಯಯುಗವು ಪ್ರಾರಂಭವಾಗುವದು.

*ಇತಿ ಗಣೇಶಪುರಾಣದ ಉತ್ತರಖಂಡದಲ್ಲಿ ಮುಗಿದುದು*

*ಗಣೇಶ ಪುರಾಣ ಸಮಾಪ್ತಿ*

*ಓಂ ಶಾಂತಿಃ ಶಾಂತಿಃ ಶಾಂತಿಃ*



